ಅರ್ಥವನ್ನು ನಿರ್ಣಯಿಸಲು ಇದೇ ಆಧಾರ. ಆದ್ದರಿಂದಲೇ ಇದು ಸೂತ್ರಪ್ರಪಂಚಕ್ಕೇ ಅಪೂರ್ವವಾದುದು.

ಇಂತಹ ಸೂತ್ರಗಳನ್ನು ಮಹಾತ್ಮರಾದ ವ್ಯಾಸರು ರಚಿಸಿ ಬ್ರಹ್ಮರುದ್ರಾದಿ ದೇವತೆಗಳಿಗೆ ತತ್ತ್ವನಿಶ್ಚಯದಲ್ಲಿ ದಾರ್ಢ್ಯವನ್ನೂ ಮನುಷ್ಯ, ಪಿತೃ, ಜರಿತಾರ್ಯಾದಿ ಪಕ್ಷಿಗಳಿಗೆ ಲುಪ್ತವಾದ ಜ್ಞಾನ ಲಾಭವನ್ನೂ ಮಾಡಿಕೊಟ್ಟು ಅವತಾರಲೀಲೆಗಳನ್ನು ತೋರುತ್ತಾರೆ.

ಹೀಗೆ ಸ್ಕಾಂದಪುರಾಣದಲ್ಲಿ ವಿವರಿಸಲಾಗಿದೆ.

**ವಿವರಣೆ : 1.** ರಾಮನೆಂದರೆ ದಶರಥಪುತ್ರನಾದ ಶ್ರೀರಾಮನೇ. ಜಮದಗ್ನಿಯ ಮಗನನ್ನು ಹೇಳಬೇಕಾದರೆ ಅವನ ಆಯುಧದ ಹೆಸರನ್ನೂ ಜೊತೆಗೂಡಿಸಿ 'ಪರಶುರಾಮ' ಎನ್ನಬೇಕು. ಇದರಂತೆ 'ಸೂತ್ರ'ವೆಂದರೆ ಬ್ರಹ್ಮಸೂತ್ರ. ಇತರ ಸೂತ್ರಗಳನ್ನು ತಿಳಿಸಬೇಕಾದರೆ ಅದರೊಂದಿಗೆ ವಿಶೇಷಣಗಳನ್ನು ಸೇರಿಸಬೇಕು. ಆದ್ದರಿಂದ ಸೂತ್ರಸಾಹಿತ್ಯದಲ್ಲಿ ಬ್ರಹ್ಮಸೂತ್ರಗಳಿಗೇ ಪ್ರಾಧಾನ್ಯ.

**2.** ಸೂತ್ರ ಲಕ್ಷಣದಲ್ಲಿ ಒಟ್ಟು ಆರು ವಿಶೇಷಣಗಳಿವೆ. ಮೊದಲನೆಯದು ''ಅಲ್ಪಾಕ್ಷರಂ''. ಭಾಷ್ಯದಲ್ಲಿದ್ದಂತೆ ವಿವರಣೆಗಳು ಸೂತ್ರದಲ್ಲಿ ಇರಬಾರದು. ''ಹೀಗಿರುವುದಿದ್ದರೆ ಉತ್ತಮ'' ಎಂಬ ರೀತಿಯ ಸಂದೇಹವನ್ನು ಉಂಟುಮಾಡುವ ಪದಗಳಿರಬಾರದು. ಸಾರವತ್= ಉತ್ತಮವಾದ ಅರ್ಥವಿರಬೇಕು. ''ಏಕಪ್ರಯೋಜನಂ ಪ್ರತಿ ಅಪೇಕ್ಷಿತಾರ್ಥಸ್ಯ ಕೃತ್ಸ್ನಸ್ಯ ಪ್ರತಿಪಾದಕಂ'' ಎಂದು ವಿಶ್ವತೋಮುಖಂ ಎಂಬ ವಿಶೇಷಣವನ್ನು ತತ್ತ್ವಪ್ರದೀಪಿಕಾದಲ್ಲಿ ವ್ಯಾಖ್ಯಾನಿಸಲಾಗಿದೆ. ನಿರ್ದಿಷ್ಟ ಉದ್ದೇಶ ಸಿದ್ಧಿಗಾಗಿ ಎಷ್ಟು ವಿಷಯಗಳು ಅಗತ್ಯವೋ ಅವೆಲ್ಲವನ್ನೂ ಸೂತ್ರಗಳು ಹೇಳಬೇಕು. ಅವುಗಳಲ್ಲಿ ಒಂದಂಶವನ್ನು ಮಾತ್ರ ಹೇಳಬಾರದು ಎಂದರ್ಥ. ಶ್ರೀ ಜಯತೀರ್ಥರು, ''ಬಹುಶಾಖಾ ನಿರ್ಣಾಯಕತ್ವಂ'' ಎಂದು ವಿವರಿಸಿದ್ದಾರೆ. ಸೂತ್ರವು ವೇದದ ಒಂದು ಶಾಖೆಯ ಅರ್ಥವನ್ನು ನಿರ್ಣಯಿಸಲು ಹೇಳಿದ ನ್ಯಾಯದಿಂದ ಇತರ ಶಾಖೆಯಲ್ಲಿರುವ ಅದೇ ರೀತಿ ಸಂದೇಹ ಬರುವ ವಾಕ್ಯಗಳ ಅರ್ಥವೂ ನಿರ್ಣಯವಾಗಬೇಕು ಎಂದು ಶ್ರೀ ಜಯತೀರ್ಥರ ಭಾವ. ಸಾಮವೇದದಲ್ಲಿ ಗಾನಪೂರಣೆಗಾಗಿ ಅರ್ಥ ವಿಶೇಷವಿಲ್ಲದ ಶಬ್ದಗಳನ್ನು ಪ್ರಯೋಗಿಸಲಾಗುತ್ತದೆ. ಇವುಗಳನ್ನು ಸ್ತೋಭಾಕ್ಷರಗಳೆನ್ನಲಾಗುತ್ತದೆ. ಅಂತಹ ಅನಾವಶ್ಯಕ ಶಬ್ದಗಳು ಸೂತ್ರದಲ್ಲಿ ಇರಬಾರದು. ಅಶುದ್ಧ ಶಬ್ದಗಳೂ ಇರಬಾರದು.

ಮೇಲೆ ಹೇಳಿದ ಎಲ್ಲ ವಿಶೇಷಣಗಳನ್ನು ಸೂತ್ರ ಲಕ್ಷಣವನ್ನಾಗಿ ಹೇಳಬೇಕಾಗಿಲ್ಲ. 'ಅಲ್ಪಾಕ್ಷರವಾಗಿದ್ದು ವಿಶ್ವತೋಮುಖವಾಗಿರಬೇಕು'' ಎಂದಿಷ್ಟೇ ಲಕ್ಷಣದಿಂದ ಆ ಎಲ್ಲ ವಿಶೇಷಣಗಳನ್ನು ಸಂಗ್ರಹಿಸಬಹುದು ಎಂದು ಶ್ರೀವಾದಿರಾಜರು ಗುರ್ವರ್ಥದೀಪಿಕೆಯಲ್ಲಿ ತಿಳಿಸಿದ್ದಾರೆ.

## ಅಥ ಮತ್ತು ಅತಃ ಶಬ್ದಗಳ ಅರ್ಥ

### ಓಂ ॥ ಅಥಾತೋ ಬ್ರಹ್ಮಜಿಜ್ಞಾಸಾ ॥ ಓಂ

**ಅಥಶಬ್ದೋ ಮಂಗಲಾರ್ಥಃ ಆನಂತರ್ಯಾರ್ಥಶ್ಚ। ಅತಃ ಶಬ್ದೋ ಹೇತ್ವರ್ಥಃ।**

ಅಥಶಬ್ದದ ಶ್ರವಣ ಅಥವಾ ಉಚ್ಚಾರಣೆಯಿಂದ ಅನಿಷ್ಟನಿವೃತ್ತಿ ಇಷ್ಟಪ್ರಾಪ್ತಿಯಾಗುತ್ತದೆ. ಅದಕ್ಕಾಗಿ ಸೂತ್ರದ ಆರಂಭದಲ್ಲಿ ಅಥಶಬ್ದದ ಪ್ರಯೋಗವನ್ನು ಮಾಡಲಾಗಿದೆ. ''ಅನಂತರ'' ಎಂದು ಅದರ ಅರ್ಥ. 'ಅತಃ' ಎಂಬ ಶಬ್ದವು ಪ್ರಯೋಜನವನ್ನು ತಿಳಿಸುತ್ತದೆ.

**ವಿವರಣೆ : 1.** ಭಾಷ್ಯದಲ್ಲಿ 'ಮಂಗಲಾರ್ಥಃ' 'ಆನಂತರ್ಯಾರ್ಥಶ್ಚ' ಎಂದು ಎರಡು ಬಾರಿ ಅರ್ಥಶಬ್ದವನ್ನು ಪ್ರಯೋಗಿಸಲಾಗಿದೆ. ಮೊದಲ ಅರ್ಥಶಬ್ದಕ್ಕೆ ಪ್ರಯೋಜನ ಎಂದು ಅರ್ಥ. ಎರಡನೆಯ ಅರ್ಥಶಬ್ದಕ್ಕೆ ''ವಾಚ್ಯ'' ಎಂದರ್ಥ. ಒಟ್ಟಿನಲ್ಲಿ ಅಥಶಬ್ದೋಚ್ಚಾರಣೆಯಿಂದಾಗುವ ಪ್ರಯೋಜನ ಮಂಗಲ. ಶಂಖನಾದದಂತೆ ಅಥಶಬ್ದವನ್ನು ಕೇಳಿದ ಮಾತ್ರದಿಂದ ಮಂಗಲವಾಗುತ್ತದೆ. ಅದರ ಅರ್ಥ 'ಅನಂತರ' ಎಂದು. ''ಶಮ, ದಮ ಮುಂತಾದ ಯೋಗ್ಯತೆ ಬಂದ ಮೇಲೆ'' ಎಂದು ಅದರ ಭಾವಾರ್ಥ.

**2.** 'ಅತಃ' ಎಂದರೆ ''ಆದ್ದರಿಂದ'' ಎಂದು ಅರ್ಥ. ''ಮೋಕ್ಷ ರೂಪವಾದ ಪ್ರಯೋಜನವಿರುವುದರಿಂದ'' ಎಂದು ಭಾವ.

ಮೊದಲ ಸೂತ್ರದ ಅರ್ಥ-ಶಮಾದಿ ಗುಣಸಂಪನ್ನನಾದವನು ಮೋಕ್ಷಸಾಧನವಾದ ಜ್ಞಾನಕ್ಕಾಗಿ ಬ್ರಹ್ಮನ ಬಗ್ಗೆ ಶ್ರವಣ, ಮನನಾದಿಗಳನ್ನು ಮಾಡಬೇಕು.

**ಉಕ್ತಂ ಚ ಸ್ಕಾಂದೇ-**

**ಅಥಾತಃ ಶಬ್ದಪೂರ್ವಾಣಿ ಸೂತ್ರಾಣಿ ನಿಖಿಲಾನ್ಯಪಿ।**
**ಪ್ರಾರಭಂತೇ ನಿಯತ್ಯೈವ ತತ್ ಕಿಮತ್ರ ನಿಯಾಮಕಮ್ ॥**

**ಕಶ್ಚಾರ್ಥಶ್ಚ ತಯೋರ್ವಿದ್ವನ್ ಕಥಮುತ್ತಮತಾ ತಯೋಃ।**
**ಏತದಾಖ್ಯಾಹಿ ಮೇ ಬ್ರಹ್ಮನ್ ಯಥಾ ಜ್ಞಾಸ್ಯಾಮಿ ತತ್ವತಃ ॥**

**ಏವಮುಕ್ತೋ ನಾರದೇನ ಬ್ರಹ್ಮಾ ಪ್ರೋವಾಚ ಸತ್ತಮಃ।**
**ಆನಂತರ್ಯೇಽಧಿಕಾರಸ್ಯ ಮಂಗಲಾರ್ಥೇ ತಥೈವ ಚ ॥**

**ಅಥಶಬ್ದಃ, ತ್ವತಃಶಬ್ದೋ ಹೇತ್ವರ್ಥೇ ಸಮುದೀರಿತಃ।**
**ಪರಸ್ಯ ಬ್ರಹ್ಮಣೋ ವಿಷ್ಣೋಃ ಪ್ರಸಾದಾದಿತಿ ವಾ ಭವೇತ್ ॥**

**ಸ ಹಿ ಸರ್ವಮನೋವೃತ್ತಿ ಪ್ರೇರಕಃ ಸಮುದಾಹೃತಃ।**
**ಸಿಸೃಕ್ಷೋಃ ಪರಮಾದ್ವಿಷ್ಣೋಃ ಪ್ರಥಮಂ ದ್ವೌ ವಿನಿಃಸೃತೌ ॥**

**ಓಂಕಾರಶ್ಚಾಥಶಬ್ದಶ್ಚ ತಸ್ಮಾತ್ ಪ್ರಾಥಮಿಕೌ ಕ್ರಮಾತ್ ।**
**ತದ್ಧೇತುತ್ವಂ ವದಂಶ್ಚಾಪಿ ತೃತೀಯೋಽತ ಉದಾಹೃತಃ ॥**
**ಅಕಾರಃ ಸರ್ವವಾಗಾತ್ಮಾ ಪರಬ್ರಹ್ಮಾಭಿಧಾಯಕಃ ।**
**ತಥೌ ಪ್ರಾಣಾತ್ಮಕೌ ಪ್ರೋಕ್ತೌ ವ್ಯಾಪ್ತಿಸ್ಥಿತಿವಿಧಾಯಕೌ ॥**
**ಅತಶ್ಚ ಪೂರ್ವಮುಚ್ಚಾರ್ಯಾಃ ಸರ್ವ ಏತೇ ಸತಾಂ ಮತಾಃ ।**
**ಅಥಾತಃ ಶಬ್ದಯೋರೇವಂ ವೀರ್ಯಮಾಜ್ಞಾಯ ತತ್ತ್ವತಃ ।**
**ಸೂತ್ರೇಷು ತು ಮಹಾಪ್ರಾಜ್ಞಾಃ ತಾವೇವಾದೌ ಪ್ರಯುಂಜತೇ ॥ ಇತಿ ॥**

''ಎಲ್ಲಾ ಸೂತ್ರಗಳ ಆರಂಭದಲ್ಲೂ 'ಅಥ, ಅತಃ' ಶಬ್ದಗಳು ಇದ್ದೇ ಇರುತ್ತವೆ. ಅದಕ್ಕೆ ಕಾರಣವೇನು? ಅವರೆಡರ ಅರ್ಥವೇನು? ಅವುಗಳ ಪ್ರಾಶಸ್ತ್ಯವೇನು? ಈ ವಿಷಯಗಳನ್ನು ತಿಳಿಸಿ ನನಗೆ ತತ್ತ್ವಜ್ಞಾನವನ್ನು ಉಂಟು ಮಾಡಬೇಕು'' ಹೀಗೆ ನಾರದರು ಬ್ರಹ್ಮದೇವರನ್ನು ಪ್ರಾರ್ಥಿಸಿದರು. ಅದಕ್ಕೆ ಬ್ರಹ್ಮದೇವರ ಉತ್ತರ-

ಅಥ ಶಬ್ದ ಮಂಗಲಸೂಚಕವಾಗಿದೆ. ''ಅಧಿಕಾರಸಿದ್ಧವಾದ ಮೇಲೆ'' ಎಂದು ಅದರ ಅರ್ಥ. 'ಅತಃ' ಎಂಬ ಶಬ್ದವು ಕಾರಣವಾಚಕ. ಅಥವಾ, 'ಅಕಾರವಾಚ್ಯನಾದ ಬ್ರಹ್ಮನಿಂದ' ಅರ್ಥಾತ್, ಅವನ ಅನುಗ್ರಹದಿಂದ ಎಂದು ಅದರ ಅರ್ಥ. ಆ ವಿಷ್ಣುವೇ ಎಲ್ಲರ ಮನೋವ್ಯಾಪಾರಕ್ಕೆ ಪ್ರೇರಕನಾದುದರಿಂದ ಶ್ರವಣ-ಮನನಾದಿ ರೂಪವಾದ ಮಾನಸಿಕ ಕ್ರಿಯೆಗಳು ಅವನ ಅನುಗ್ರಹವಿದ್ದರೆ ಮಾತ್ರ ನಡೆಯುತ್ತವೆ.

ಹೀಗೆ ಸೂತ್ರಾರಂಭದಲ್ಲಿ ಹೇಳಲೇಬೇಕಾಗಿರುವ ಅರ್ಥಗಳನ್ನು ಅಥ ಮತ್ತು ಅತಃಶಬ್ದಗಳು ತಿಳಿಸುತ್ತಿರುವುದರಿಂದ ಅವುಗಳನ್ನು ಎಲ್ಲ ಸೂತ್ರಗಳ ಆರಂಭದಲ್ಲಿ ಪ್ರಯೋಗ ಮಾಡಲಾಗುತ್ತದೆ.

ಅಷ್ಟೇ ಅಲ್ಲ, ಸೃಷ್ಟಿಗಾಗಿ ಸಂಕಲ್ಪಿಸಿದ ಪರಮಾತ್ಮನ ಬಾಯಿಯಿಂದ ಮೊದಲು 'ಓಂ' ಮತ್ತು 'ಅಥ' ಎಂಬ ಎರಡು ಶಬ್ದಗಳು ಹೊರಬಂದವು. ಹೀಗಾಗಿ ವಾಙ್ಮಯ ಪ್ರಪಂಚದಲ್ಲಿ ಇವೆರಡು ಪ್ರಧಾನವಾದುದರಿಂದ ಸೂತ್ರದ ಮೊದಲು ಓಂಕಾರ ಆಮೇಲೆ ಅಥಶಬ್ದವನ್ನು ಪ್ರಯೋಗಿಸಬೇಕು. ''ವಿಷ್ಣುವಿನಿಂದಾಗಿ'' ಎಂಬ ಅರ್ಥದ ''ಅತಃ'' ಶಬ್ದ ವಿಷ್ಣುವಿನ ಮುಖದಿಂದ ಹೊರಬಂದ ಮೂರನೆಯ ಶಬ್ದ. ಆದ್ದರಿಂದ ಓಂಕಾರ-ಅಥ ಶಬ್ದಗಳ ಅನಂತರ 'ಅತಃ' ಶಬ್ದವನ್ನು ಪ್ರಯೋಗಿಸಬೇಕು.

ಹೀಗೆ ಇತರ ಶಬ್ದಗಳಿಗಿಂತ ಈ ಮೂರು ಶಬ್ದಗಳು ವಿಶಿಷ್ಟವಾಗಿರುವುದರಿಂದ ಅವುಗಳನ್ನು ಸೂತ್ರಾರಂಭದಲ್ಲಿ ಪ್ರಯೋಗಿಸಲಾಗುತ್ತದೆ.

ಅಲ್ಲದೆ, ಅಕಾರವು ಸಕಲ ವಾಙ್ಮಯಾರ್ಥವಾದ ಗುಣಪೂರ್ಣತ್ವವಾಚಕ. ತಕಾರ

ಮತ್ತು ಥಕಾರಗಳಿಗೆ ಪ್ರಾಣನು ದೇವತೆ, ಪರಮಾತ್ಮ ಅರ್ಥ. ಅವುಗಳಲ್ಲಿ ತಕಾರ ಪರಮಾತ್ಮನ ದೇಶವ್ಯಾಪ್ತಿಯನ್ನೂ ಥಕಾರ ಸ್ಥಿತಿಕರ್ತೃತ್ವವನ್ನೂ ಹೇಳುತ್ತದೆ.

ಹೀಗೆ ಈ ಎರಡು ಶಬ್ದಗಳ ಸ್ವರೂಪ ಮತ್ತು ಅರ್ಥ ಮಹತ್ವಪೂರ್ಣವಾದುದರಿಂದ ಸೂತ್ರಗಳಲ್ಲಿ ಅವುಗಳ ಪ್ರಥಮ ಪ್ರಯೋಗ ಯುಕ್ತವಾಗಿದೆ.

ಆದ್ದರಿಂದ ''ಓಂಕಾರ, ಅಥ, ಅತಃ'' ಶಬ್ದಗಳನ್ನು ಸೂತ್ರಗಳ ಮೊದಲು ಉಚ್ಚರಿಸಬೇಕೆಂದು ಬಲ್ಲವರ ಅಭಿಪ್ರಾಯ. ಅದರಿಂದಾಗಿ ಅಥ ಮತ್ತು ಅತಃ ಶಬ್ದಗಳ ಮಹತ್ವವನ್ನು ತಿಳಿದು ಪ್ರಾಜ್ಞರಾದ ವ್ಯಾಸಾದಿಗಳು ಅವುಗಳನ್ನು ಸೂತ್ರಗಳ ಆರಂಭದಲ್ಲಿ ಪ್ರಯೋಗಿಸುತ್ತಾರೆ.

**ವಿವರಣೆ : 1.** ಎಲ್ಲ ಸೂತ್ರಗಳ ಪ್ರಾರಂಭದಲ್ಲಿ 'ಓಂ ಅಥ, ಅತಃ' ಎಂಬ ಶಬ್ದಗಳಿವೆ - ''ಓಂ ಅಥಾತೋ ಧರ್ಮಜಿಜ್ಞಾಸಾ'' ''ಓಂ ಅಥಾತೋ ದೈವೀಮೀಮಾಂಸಾ''. ಇದಕ್ಕೆ ಎರಡು ಕಾರಣಗಳು. 1) ಸೂತ್ರಾರಂಭದಲ್ಲಿ ಹೇಳಬೇಕಾಗಿರುವ ವಿಷಯಗಳನ್ನು ಈ ಶಬ್ದಗಳು ತಿಳಿಸುತ್ತಿರುವುದು. 2) ಈ ಶಬ್ದಗಳಲ್ಲಿರುವ ವೈಶಿಷ್ಟ್ಯ. ವೈಶಿಷ್ಟ್ಯವೂ ಎರಡು ಕಾರಣಗಳಿಂದಾಗಿರಬಹುದು. 1) ಉಳಿದ ಶಬ್ದಗಳಿಗಿಲ್ಲದ ಈ ಶಬ್ದಗಳ ಸ್ವರೂಪದಲ್ಲೇ ಅಡಗಿರುವ ಯೋಗ್ಯತೆ 2) ಉಳಿದ ಶಬ್ದಗಳಿಗಿಲ್ಲದ ವಿಶಿಷ್ಟವಾದ ಅರ್ಥ. ಈ ಮೂರೂ ಕಾರಣಗಳು ಈ ಶಬ್ದಗಳಲ್ಲಿವೆ. ಗ್ರಂಥವನ್ನು ರಚಿಸಬೇಕಾದರೆ ಅಧಿಕಾರಿ, ವಿಷಯ, ಪ್ರಯೋಜನ, ಸಂಬಂಧ ಈ ಅನುಬಂಧ ಚತುಷ್ಟಯಗಳನ್ನು ಪ್ರಾರಂಭದಲ್ಲಿ ಹೇಳಬೇಕು. ಅಥ ಶಬ್ದವು ಪ್ರಯೋಜನವನ್ನು ತಿಳಿಸುತ್ತದೆ. ಇದಲ್ಲದೆ, ಗ್ರಂಥಾರಂಭದಲ್ಲಿ ಮಾಡಬೇಕಾದ ಮಂಗಲಾಚರಣೆಯೂ ಅಥ ಶಬ್ದದಿಂದಲೇ ನಡೆಯುತ್ತದೆ. ಆದ್ದರಿಂದ ಈ ಎರಡು ಶಬ್ದಗಳನ್ನು ಸೂತ್ರಾರಂಭದಲ್ಲಿ ಪ್ರಯೋಗಿಸಲಾಗುತ್ತದೆ. ಇದರ ಜೊತೆಯಲ್ಲಿ, ಉಳಿದ ಶಬ್ದಗಳಿಗಿಲ್ಲದ ಹೆಚ್ಚಿನ ಸ್ವರೂಪಯೋಗ್ಯತೆ ಈ ಮೂರು ಶಬ್ದಗಳಲ್ಲಿದೆ. ಸೃಷ್ಟಿಕಾಲದಲ್ಲಿ ಮೊದಲು ಪರಬ್ರಹ್ಮ ಉಚ್ಚರಿಸಿದ ಶಬ್ದಗಳು ಇವು. ಇವುಗಳ ಅರ್ಥವೂ ವಿಶಿಷ್ಟವಾದುದು. ಈ ಶಬ್ದಗಳ ಪ್ರಾರಂಭದ ಅಕ್ಷರವಾದ ಅಕಾರ ಸಕಲ ವಾಙ್ಮಯದ ಅರ್ಥವನ್ನೂ ಹೇಳುತ್ತದೆ. ಅಕಾರಕ್ಕೆ ವಿರೋಧ, ಅಭಾವ ಎಂಬ ಎರಡು ಅರ್ಥಗಳಿವೆ. ಅದರಿಂದಾಗಿ ದೋಷ ವಿರುದ್ಧವಾದ ಗುಣಗಳೂ ದೋಷಗಳ ಅಭಾವವೂ ಪರಮಾತ್ಮನಲ್ಲಿವೆ ಎಂದು ಅಕಾರ ತಿಳಿಸುತ್ತದೆ. ಇದನ್ನೇ ಉಳಿದೆಲ್ಲ ಶಬ್ದಗಳೂ ವಿವರಿಸುತ್ತವೆ. ಅಥ ಮತ್ತು ಅತಃ ಶಬ್ದಗಳ ಕೊನೆಯಲ್ಲಿರುವ ಥಕಾರ ತಕಾರಗಳಿಗೂ ವಿಶಿಷ್ಟವಾದ ಅರ್ಥವಿದೆ. ಹೀಗೆ ಸ್ವರೂಪತಃ ಮತ್ತು ಅರ್ಥತಃ ಪ್ರಧಾನವಾದುದರಿಂದ ಈ ಶಬ್ದಗಳನ್ನೇ ಸೂತ್ರಾರಂಭದಲ್ಲಿ ಪ್ರಯೋಗ ಮಾಡಲಾಗುತ್ತದೆ.

**2.** 'ತಥೌ ಪ್ರಾಣಾತ್ಮಕೌ ಪ್ರೋಕ್ತೌ' ಎಂಬುದಕ್ಕೆ ಶ್ರೀತ್ರಿವಿಕ್ರಮ ಪಂಡಿತಾಚಾರ್ಯರು ತತ್ತ್ವಪ್ರದೀಪಿಕಾದಲ್ಲಿ 'ಪ್ರಾಣಂ- ಪ್ರಣೇತಾರಂ ವಿಷ್ಣುಂ ವಾಚಕತ್ವೇನ ಆಪ್ತೌ'' ಎಂದು

ವಿವರಿಸಿದ್ದಾರೆ. ತಕಾರ ಮತ್ತು ಥಕಾರಗಳು ಪ್ರೇರಕನಾದ ವಿಷ್ಣುವಾಚಕಗಳು ಎಂದು ಅವರ ಅಭಿಪ್ರಾಯ. ತತ್ತ್ವಪ್ರಕಾಶಿಕಾದಲ್ಲಿ ಶ್ರೀಜಯತೀರ್ಥರು, ಮುಖ್ಯಪ್ರಾಣ ಈ ಎರಡು ಶಬ್ದಗಳಿಗೆ ಅಭಿಮಾನಿ ಎಂಬ ಅರ್ಥವನ್ನು ಹೇಳಿದ್ದಾರೆ.

3. 'ಅಕಾರಃ ಸರ್ವವಾಗಾತ್ಮಾ' ಎಂದರೆ 'ಅಕಾರವು ಸರ್ವವಾಙ್ಮಯರೂಪವಾಗಿದೆ' ಎಂದು ಅರ್ಥ. ಇದರ ಅರ್ಥವನ್ನು

''ವ್ಯಾಖ್ಯಾನತ್ವಾತ್ ಸರ್ವವಾಚಾಂ ಸರ್ವವಾಗಾತ್ಮತಾ ಭವೇತ್''

ಎಂದು ಸಾಮಸಂಹಿತೆ ವಿವರಿಸಿದೆ. ಎಲ್ಲ ವಾಙ್ಮಯಗಳೂ ಅಕಾರದ ಅರ್ಥವನ್ನು ವಿವರಿಸುತ್ತವೆ. ಆದ್ದರಿಂದ 'ಅಕಾರವೇ ಸರ್ವವಾಙ್ಮಯ'.

4. ವ್ಯಾಪ್ತಿಸ್ಥಿತಿ ವಿಧಾಯಕೌ - 'ಅತಃ' ಶಬ್ದದಲ್ಲಿರುವ ತಕಾರ ವಿಸ್ತಾರ ಎಂಬ ಅರ್ಥದ 'ತನು' ಧಾತುವಿನಿಂದ ನಿಷ್ಪನ್ನವಾಗಿದೆ. ಹೀಗಾಗಿ 'ವ್ಯಾಪ್ತನಾದವನು' ಎಂದು ಅದರ ಅರ್ಥ. 'ಸ್ಥಿತಿ-ಇರುವು' ಎಂಬ ಅರ್ಥದ 'ಸ್ಥಾ' ಧಾತುವಿನಿಂದ 'ಥ' ಎಂಬ ರೂಪವಾಗಿದೆ. ಆದ್ದರಿಂದ 'ಸ್ಥಿತಿ ಹೇತು' ಎಂದು ಥಕಾರದ ಅರ್ಥ.

## ಅಧಿಕಾರ ಸ್ವರೂಪ ವಿವೇಚನೆ

**ಅಧಿಕಾರಶ್ಚೋಕ್ತೋ ಭಾಗವತತಂತ್ರೇ-**

**ಮಂದಮಧ್ಯಮೋತ್ತಮತ್ವೇನ ತ್ರಿವಿಧಾ ಹ್ಯಧಿಕಾರಿಣಃ।**
**ತತ್ರ ಮಂದಾ ಮನುಷ್ಯೇಷು ಯ ಉತ್ತಮಗಣಾ ಮತಾಃ।**
**ಮಧ್ಯಮಾ ಋಷಿಗಂಧರ್ವಾಃ ದೇವಾಸ್ತತ್ರೋತ್ತಮಾ ಮತಾಃ।**
**ಇತಿ ಜಾತಿಕೃತೋ ಭೇದಃ, ತಥಾನ್ಯೋ ಗುಣಪೂರ್ವಕಃ।**
**ಭಕ್ತಿಮಾನ್ ಪರಮೇ ವಿಷ್ಣೌ ಯಸ್ತ್ವಧ್ಯಯನವಾನ್ ನರಃ।**
**ಅಧಮಃ, ಶಮಾದಿ ಸಂಯುಕ್ತೋ ಮಧ್ಯಮಃ ಸಮುದಾಹೃತಃ।**
**ಆಬ್ರಹ್ಮ ಸ್ತಂಬಪರ್ಯಂತಂ ಅಸಾರಂ ಚಾಪ್ಯನಿತ್ಯಕಮ್ ।**
**ವಿಜ್ಞಾಯ ಜಾತವೈರಾಗ್ಯಃ ವಿಷ್ಣುಪಾದೈಕಸಂಶ್ರಯಃ।**
**ಸ ಉತ್ತಮೋऽಧಿಕಾರೀ ಸ್ಯಾತ್ ಸನ್ಯಸ್ತಾಖಿಲಕರ್ಮವಾನ್ ॥ ಇತಿ।**

ಬ್ರಹ್ಮವಿದ್ಯೆಗೆ ಯಾರು ಅಧಿಕಾರಿಗಳು? ಎಂಬ ವಿವರವನ್ನು ಭಾಗವತತಂತ್ರದಲ್ಲಿ ಹೀಗೆ ಹೇಳಲಾಗಿದೆ-

ಮಂದರು, ಮಧ್ಯಮರು, ಉತ್ತಮರು ಎಂದು ಮೂರು ವಿಧವಾದ ಅಧಿಕಾರಿಗಳಿದ್ದಾರೆ. ಮನುಷ್ಯಜಾತಿಯಲ್ಲಿ ಉತ್ತಮ ವರ್ಗದವರು ಮಂದಾಧಿಕಾರಿಗಳು. ಋಷಿಗಳು, ಗಂಧರ್ವರು, ಪಿತೃಗಳು, ಚಕ್ರವರ್ತಿಗಳು ಮಧ್ಯಮರು. ದೇವತೆಗಳು ಉತ್ತಮರು. ಇದು

ಜಾತಿಗೆ ಅನುಗುಣವಾಗಿ ಮಾಡಿದ ವಿಭಾಗ. ಗುಣಕ್ಕೆ ಅನುಗುಣವಾಗಿ ಅಧಿಕಾರಿಭೇದ ಇನ್ನೊಂದಿದೆ- ವಿಷ್ಣುಭಕ್ತಿಪೂರ್ವಕ ಶಾಸ್ತ್ರಾಧ್ಯಯನದಲ್ಲಿ ಆಸಕ್ತನಾದವನು ಅಧಮಾಧಿಕಾರಿ. ಇದರೊಂದಿಗೆ ಶಮಾದಿಗುಣಗಳಿಂದ ಸಂಪನ್ನನಾದವನು ಮಧ್ಯಮ. ಬ್ರಹ್ಮನಿಂದ ಹಿಡಿದು ಹುಲ್ಲಿನವರೆಗೆ ಎಲ್ಲವೂ ಅಸಾರ, ಅನಿತ್ಯ ಎಂದು ತಿಳಿದು ವೈರಾಗ್ಯಶಾಲಿಯಾಗಿ ಹರಿಪಾದವನ್ನೇ ಅರಸುವವನು ಉತ್ತಮಾಧಿಕಾರಿ. ಅಂತಹವನು ಸಕಲಕರ್ಮಗಳನ್ನೂ ಶ್ರೀಹರಿಪ್ರೀತ್ಯರ್ಥವಾಗಿಯೇ ಮಾಡುತ್ತಾನೆ.

**ವಿವರಣೆ :** ಶಾಸ್ತ್ರಾಧ್ಯಯನ, ಶಮಾದಿಗುಣ, ವಿಷಯವೈರಾಗ್ಯ ಈ ಮೂರು ಗುಣಗಳು ಮಂದ-ಮಧ್ಯಮ-ಉತ್ತಮ ಎಲ್ಲ ಅಧಿಕಾರಿಗಳಲ್ಲೂ ಇರಬೇಕು. ಇವುಗಳಲ್ಲಿ ಶಾಸ್ತ್ರಾಧ್ಯಯನ ಪ್ರಧಾನವಾಗಿದ್ದು ಉಳಿದೆರಡು ಗೌಣವಾಗಿದ್ದರೆ ಅಧಮ. ಶಮಾದಿಗಳು ಪ್ರಧಾನವಾಗಿದ್ದು ವಿಷಯವೈರಾಗ್ಯ ಗೌಣವಾಗಿದ್ದರೆ ಮಧ್ಯಮ. ವಿಷಯ ವೈರಾಗ್ಯಪೂರ್ವಕ ವಿಷ್ಣುಪಾದಾಸಕ್ತಿ ಅಧಿಕವಾಗಿದ್ದರೆ ಉತ್ತಮಾಧಿಕಾರಿ.

ಅಥವಾ, ಈ ಮೂರೂ ಗುಣಗಳು ಸಾಮಾನ್ಯವಾಗಿದ್ದರೆ ಅಧಮ. ಅಧಿಕ ಮಟ್ಟದಲ್ಲಿದ್ದರೆ ಮಧ್ಯಮ. ಉಚ್ಚಮಟ್ಟದಲ್ಲಿದ್ದರೆ ಉತ್ತಮ.

**''ಅಧ್ಯಯನಮಾತ್ರವತಃ' (ಬ್ರ.ಸೂ.3.4.12) 'ನಾವಿಶೇಷಾತ್' (3.4.13) ಇತಿ ಚ ಉಪರಿ । ''ಶಾಂತೋ ದಾಂತಃ ಉಪರತಃ ತಿತಿಕ್ಷುಃ ಸಮಾಹಿತೋ ಭೂತ್ವಾ ಆತ್ಮನ್ಯೇವಾತ್ಮಾನಂ ಪಶ್ಯೇತ್ (ಬೃ.ಉ. 6.4.23) । ''ಪರೀಕ್ಷ್ಯ ಲೋಕಾನ್ ಕರ್ಮಚಿತಾನ್ ಬ್ರಾಹ್ಮಣೋ ನಿರ್ವೇದಮಾಯಾತ್। ನಾಸ್ತ್ಯಕೃತಃ ಕೃತೇನ । ತದ್ವಿಜ್ಞಾನಾರ್ಥಂ ಸ ಗುರುಮೇವಾಭಿಗಚ್ಛೇತ್ ಸಮಿತ್ಪಾಣಿಃ ಶ್ರೋತ್ರಿಯಂ ಬ್ರಹ್ಮನಿಷ್ಠಂ'' (ಮುಂ.ಉ.1.2.10) ''ಯಮೇವೈಷ ವೃಣುತೇ ತೇನ ಲಭ್ಯಸ್ತಸ್ಯೈಷ ಆತ್ಮಾ ವಿವೃಣುತೇ ತನೂಂ ಸ್ವಾಮ್ ।'' (ಕಾ.ಉ. 2-23) ।**

**ಯಸ್ಯ ದೇವೇ ಪರಾ ಭಕ್ತಿಃ ಯಥಾ ದೇವೇ ತಥಾ ಗುರೌ।**
**ತಸ್ಯೈತೇ ಕಥಿತಾ ಹ್ಯರ್ಥಾಃ ಪ್ರಕಾಶಂತೇ ಮಹಾತ್ಮನಃ। (ಶ್ವೇ. ಉ. 6.23)**

**ಇತ್ಯಾದಿಶ್ರುತಿಭ್ಯಶ್ಚ ।**

**ವ್ಯೋಮಸಂಹಿತಾಯಾಂ ಚ-**

**ಅಂತ್ಯಜಾ ಅಪಿ ಯೇ ಭಕ್ತಾಃ ನಾಮಜ್ಞಾನಾಧಿಕಾರಿಣಃ।**
**ಸ್ತ್ರೀ-ಶೂದ್ರ-ಬ್ರಹ್ಮಬಂಧೂನಾಂ ತಂತ್ರಜ್ಞಾನೇಽಧಿಕಾರಿತಾ ॥**
**ಏಕದೇಶೇ ಪರೋಕ್ತೇ ತು ನ ತು ಗ್ರಂಥಪುರಸ್ಸರೇ।**
**ತ್ರೈವರ್ಣಿಕಾನಾಂ ವೇದೋಕ್ತೇ, ಸಮ್ಯಗ್ ಭಕ್ತಿಮತಾಂ ಹರೌ ॥**
**ಆಹುರಪ್ಯುತ್ತಮಸ್ತ್ರೀಣಾಂ ಅಧಿಕಾರಂ ತು ವೈದಿಕೇ।**
**ಯಥೋರ್ವಶೀ ಯಮೀ ಚೈವ ಶಚ್ಯಾದ್ಯಾಶ್ಚ ತಥಾಽಪರಾಃ॥ ಇತಿ।**

'ಯಥಾಶಕ್ತಿ ಸಕಲ ಶಾಖಾಧ್ಯಯನ ಮಾಡಿದವನಿಗೇ ಬ್ರಹ್ಮ ವಿದ್ಯೆಯಲ್ಲಿ ಅಧಿಕಾರ' 'ಇಂತಹ ಅಧಿಕಾರವು ಎಲ್ಲರಿಗೂ ಸಮಾನವಲ್ಲ, ಅದರಲ್ಲಿ ತಾರತಮ್ಯವಿದೆ' ಹೀಗೆ ಬ್ರಹ್ಮಸೂತ್ರದ ಮೂರನೆಯ ಅಧ್ಯಾಯದಲ್ಲಿ ವೇದವ್ಯಾಸರೇ ಅಧಿಕಾರದ ಬಗ್ಗೆ ಹೇಳಿದ್ದಾರೆ.

''ಪರಮಾತ್ಮ ನಿಷ್ಠನಾಗಿ, ಇಂದ್ರಿಯಗಳನ್ನು ನಿಗ್ರಹಿಸಿ, ವಿಷಯಗಳಲ್ಲಿ ಅನಾಸಕ್ತನಾಗಿ, ದ್ವಂದ್ವ ಸಹಿಷ್ಣುವಾಗಿ, ಯಥಾರ್ಥ ಜ್ಞಾನಿಯಾದವನಾಗಿ ತನ್ನ ಹೃದಯದಲ್ಲೇ ಪರಮಾತ್ಮನನ್ನು ಕಾಣಬೇಕು'' (ಇದರಿಂದ ಶಮ, ದಮಾದಿ ಗುಣಗಳು ಬ್ರಹ್ಮವಿದ್ಯೆಗೆ ಅಧಿಕಾರ ಎಂದು ತಿಳಿಯುತ್ತದೆ. ಈ ವಾಕ್ಯದಲ್ಲಿ ಹೃದಯದಲ್ಲಿ ಪರಮಾತ್ಮನನ್ನು ಕಾಣುವ ಮಧ್ಯಮಾಧಿಕಾರಿಗಳಾದ ಋಷಿಗಳನ್ನು ತಿಳಿಸಿದಂತಾಯಿತು ''ಋಷಯೋಽಂತಃಪ್ರಕಾಶಾಃ'')

''ಬ್ರಹ್ಮಜ್ಞಾನಯೋಗ್ಯನಾದವನು ಸ್ವರ್ಗಾದಿ ಲೋಕಗಳನ್ನು ಕಾಮ್ಯಕರ್ಮಗಳಿಂದ ಲಭ್ಯವಾದುದರಿಂದ ಅಶಾಶ್ವತವೆಂದು ತಿಳಿದು ಕಾಮ್ಯಕರ್ಮಗಳಲ್ಲೂ ಅವುಗಳ ಫಲವಾದ ಸ್ವರ್ಗಾದಿ ಸುಖಗಳಲ್ಲೂ ವೈರಾಗ್ಯವನ್ನು ತಾಳಬೇಕು. ಏಕೆಂದರೆ, ನಿತ್ಯವಾದ ಮೋಕ್ಷವು ಕಾಮ್ಯಕರ್ಮಗಳಿಂದ ದೊರೆಯದು. ಆದ್ದರಿಂದ ವಿರಕ್ತನಾದವನು ಬ್ರಹ್ಮಜ್ಞಾನಕ್ಕಾಗಿ ಸಮಿಧೆ ಹಿಡಿದು (ಅಥವಾ ಕೈಜೋಡಿಸಿ) ವೇದಾಧ್ಯಯನಪೂರ್ವಕ ಕರ್ಮಾನುಷ್ಠಾನ ಮಾಡುತ್ತಲಿರುವ ಬ್ರಹ್ಮನಿಷ್ಠನಾದ ಗುರುವಿನ ಬಳಿಗೇ ಹೋಗಬೇಕು.'' (ಆಥರ್ವಣೋಪನಿಷತ್ತಿನ ಈ ಮಂತ್ರದಿಂದ ಸಾರಾಸಾರವಿವೇಕವು ಬ್ರಹ್ಮವಿದ್ಯೆಯ ಅರ್ಹತೆಗಳಲ್ಲಿ ಒಂದು ಎಂದು ತಿಳಿಯುತ್ತದೆ. ಇಲ್ಲಿ ವಿಜ್ಞಾನ ಶಬ್ದವನ್ನು ಪ್ರಯೋಗಿಸುವ ಮೂಲಕ ಉತ್ತಮಾಧಿಕಾರಿಗಳಾದ ದೇವತೆಗಳನ್ನು ಉಲ್ಲೇಖಿಸಲಾಗಿದೆ. 'ದೇವಾದೀನಾಂ ತು ಯತ್ ಜ್ಞಾನಂ ವಿಜ್ಞಾನಮಿತಿ ಕಥ್ಯತೇ'॥)

''ಆ ಪರಮಾತ್ಮನು ಭಕ್ತಿಯನ್ನು ನೀಡಿ ಯಾರನ್ನು ತನ್ನವನನ್ನಾಗಿ ವರಿಸುವನೋ ಅಂತಹವನಿಂದಲೇ ಲಭ್ಯ. ಅಂತಹವನಿಗೆ ಮಾತ್ರ ತನ್ನ ಸ್ವರೂಪದ ಬಗ್ಗೆ ಶ್ರವಣಾದಿಗಳು ಆಗುವಂತೆ ಅನುಕೂಲ ಕಲ್ಪಿಸಿ ತನ್ನ ಸ್ವರೂಪವನ್ನು ಪ್ರಕಟಗೊಳಿಸುತ್ತಾನೆ''. (ಕಾಠಕೋಪನಿಷತ್ತಿನ ಈ ವಾಕ್ಯದಿಂದ ವಿಷ್ಣುಭಕ್ತಿಯ ಆವಶ್ಯಕತೆಯು ತಿಳಿಯುತ್ತದೆ.)

''ಯಾರಿಗೆ ಪರಮಾತ್ಮನಲ್ಲಿ ಉತ್ಕಟವಾದ ಭಕ್ತಿ, ಬ್ರಹ್ಮಾದಿ ದೇವತೆಗಳಲ್ಲಿ ಗುರುಗಳಲ್ಲಿಯೂ ತಾರತಮ್ಯಾನುಸಾರವಾಗಿ ಭಕ್ತಿ ಇದೆಯೋ ಅವನಿಗೆ ಗುರುಗಳು ಹೇಳಿದ ವಿಷಯಗಳು ಮನವರಿಕೆಯಾಗುತ್ತವೆ''. (ಇದರಿಂದ ದೇವತಾ-ಗುರು-ಹಿರಿಯರಲ್ಲೂ ಯಥಾಯೋಗ್ಯವಾದ ಭಕ್ತಿ ಆವಶ್ಯಕವೆಂದು ತಿಳಿಯುತ್ತದೆ.)

ಮೇಲೆ ಹೇಳಿದ ಈ ಶ್ರುತಿಗಳಿಂದ ಅಧಿಕಾರಿಗಳಿಗೆ ಇರಬೇಕಾದ ಅರ್ಹತೆಗಳು ತಿಳಿಯುತ್ತವೆ. ಶಾಸ್ತ್ರದ ಅಧ್ಯಯನವಿಲ್ಲದವರಿಗೂ ಮೋಕ್ಷೋಪಾಯವನ್ನು ವ್ಯೋಮಸಂಹಿತೆ ಹೇಳಿದೆ- ಅಂತ್ಯಜರಾದರೂ ಭಕ್ತರಾದವರಿಗೆ, ಬ್ರಹ್ಮವಿದ್ಯೆಯಲ್ಲಿ ಅಧಿಕಾರವಿಲ್ಲದಿದ್ದರೂ,

ಹರಿನಾಮ ಜ್ಞಾನದಲ್ಲಿ ಅಧಿಕಾರವಿದೆ. ಆದರಿಂದಲೇ ಅವರಿಗೆ ಮೋಕ್ಷವಾಗುತ್ತದೆ. ಸ್ತ್ರೀಯರಿಗೆ, ಶೂದ್ರರಿಗೆ, ಬ್ರಹ್ಮಜ್ಞಾನಿಗಳನ್ನು ಬಂಧುಗಳೆಂದು ಗೌರವಿಸುವವರಿಗೆ ಪಂಚರಾತ್ರಾದಿ ಆಗಮಗಳಲ್ಲಿ ಅಧಿಕಾರವಿದೆ. ವೇದಗಳಲ್ಲಿ ಅಧಿಕಾರವಿಲ್ಲ. ಆದರಲ್ಲೂ ವೇದವಾಕ್ಯಗಳ ಅರ್ಥವನ್ನು ಹೇಳುವ ಕೆಲವು ಭಾಗಗಳನ್ನು ಬಿಟ್ಟು ಉಳಿದ ಭಾಗದಲ್ಲಿ ಮಾತ್ರ ಸ್ತ್ರೀಯರಿಗೆ ಅಧಿಕಾರ. ಅದೂ ಶಾಂತಿಪಾಠ ಪುರಃಸರವಾಗಿ ತಾವೇ ಪುಸ್ತಕ ಹಿಡಿದು ಓದುವ ಅಧಿಕಾರ ಅವರಿಗಿಲ್ಲ. ಮತ್ತೊಬ್ಬರು ಹೇಳಿದ್ದನ್ನು ಕೇಳಿಸಿಕೊಳ್ಳಬೇಕು.

ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಈ ಮೂರು ವರ್ಣದವರಿಗೆ ವೇದೋಕ್ತ ಜ್ಞಾನದಲ್ಲಿ ಅಧಿಕಾರವಿದೆ. ಆದರೆ ಶ್ರೀಹರಿಯಲ್ಲಿ ನಿಶ್ಚಲವಾದ ಭಕ್ತಿ ಇರಬೇಕು. ಶಚೀದೇವಿ, ಊರ್ವಶಿ, ಯಮನ ಪತ್ನಿ ಹಾಗೂ ಉತ್ತಮ ಮನುಕುಲದ ಸ್ತ್ರೀಯರಿಗೆ ವೇದದಲ್ಲೂ ಅಧಿಕಾರವಿದೆ.

**ವಿವರಣೆ : 1.** 'ಶಾಂತಃ ದಾಂತಃ'' ಇತ್ಯಾದಿ ಬೃಹದಾರಣ್ಯಕೋಪನಿಷತ್ತಿನ ವಾಕ್ಯದ ಕೊನೆಯಲ್ಲಿ ''ಆತ್ಮಾನಂ ಪಶ್ಯತಿ'' ಎಂದು ಪಾಠ. ಆಚಾರ್ಯರು 'ಪಶ್ಯೇತ್' ಎಂದು ಅದನ್ನು ಅರ್ಥತಃ ಅನುವಾದಿಸಿದ್ದಾರೆ.

ಅಲ್ಲಿರುವ ಶಾಂತಃ ಎಂಬ ಪದವನ್ನು ತತ್ತ್ವಪ್ರದೀಪಿಕಾದಲ್ಲಿ ತ್ರಿವಿಕ್ರಮ ಪಂಡಿತಾಚಾರ್ಯರು-''ವೈಷ್ಣವ ಸಿದ್ಧಾಂತಾದಚಲನಂ ಇತ್ಯರ್ಥಃ'' ಎಂದು ಅರ್ಥೈಸಿದ್ದಾರೆ.

ಉಪರತಃ ಎಂಬ ಪದಕ್ಕೂ 'ಉಪರತಿಃ=ವಿಷ್ಣಾವೇವ ರತಿಃ' ಎಂದು ಅರ್ಥ ಹೇಳಿದ್ದಾರೆ.

**2.** ವ್ಯೋಮಸಂಹಿತೆಯಲ್ಲಿ ಸ್ತ್ರೀಯರಿಗೆ ವೇದಾಧಿಕಾರವನ್ನು ಹೇಳುತ್ತಾ ''ಶಚ್ಯಾದ್ಯಾಶ್ಚ ತಥಾಪರಾಃ'' ಎನ್ನಲಾಗಿದೆ. ಅಲ್ಲಿ ಪರಾಃ=ಬೇರೆಯವರು. ಅವರು ಯಾರೆಂದು ಆಚಾರ್ಯರು ಮಹಾಭಾರತತಾತ್ಪರ್ಯನಿರ್ಣಯದ 21ನೆಯ ಅಧ್ಯಾಯದಲ್ಲಿ ತಿಳಿಸಿದ್ದಾರೆ-

ದೇವ್ಯೋ ಮುನಿಸ್ತ್ರಿಯಶ್ಚೈವ ನರಾದಿಕುಲಜಾ ಅಪಿ।
ಉತ್ತಮಾ ಇತಿ ವಿಜ್ಞೇಯಾಃ।

## ಪ್ರಥಮ ಸೂತ್ರದ ಅರ್ಥ

**ಯತೋ ನಾರಾಯಣಪ್ರಸಾದಮೃತೇ ನ ಮೋಕ್ಷಃ, ನ ಚ ಜ್ಞಾನಂ ವಿನಾಽತ್ಯರ್ಥಪ್ರಸಾದಃ, ಅತೋ ಬ್ರಹ್ಮಜಿಜ್ಞಾಸಾ ಕರ್ತವ್ಯಾ।**

**ಯತ್ರಾನವಸರೋಽನ್ಯತ್ರ ಪದಂ ತತ್ರ ಪ್ರತಿಷ್ಠಿತಮ್।**
**ವಾಕ್ಯಂ ವೇತಿ ಸತಾಂ ನೀತಿಃ ಸಾವಕಾಶೇ ನ ತದ್ಭವೇತ್॥**

**ಇತಿ ಬೃಹತ್ ಸಂಹಿತಾಯಾಮ್।**

ನಾರಾಯಣನ ಅನುಗ್ರಹವಾಗದೆ ಮೋಕ್ಷವಿಲ್ಲ; ಅಪರೋಕ್ಷವಿಲ್ಲದೆ ಅವನ ಅನುಗ್ರಹವಾಗದು. ಆದ್ದರಿಂದ ಅವನ ಅಪರೋಕ್ಷಜ್ಞಾನಕ್ಕಾಗಿ ಬ್ರಹ್ಮವಿಚಾರವನ್ನು ಮಾಡಬೇಕು. (ಇದು ಮೊದಲ ಸೂತ್ರದ ಅರ್ಥ)

''ಯಾವ ಪದವಿಲ್ಲದೆ ವಾಕ್ಯಕ್ಕೆ ಅರ್ಥವನ್ನು ಹೇಳಲು ಬರುವುದಿಲ್ಲವೋ ಅಂತಹ ಪದವನ್ನು ಆ ವಾಕ್ಯದಲ್ಲಿ ಅಧ್ಯಾಹಾರ ಮಾಡಿಕೊಳ್ಳಬೇಕು. ಅದರಂತೆ, ಖಂಡವಾಕ್ಯವನ್ನು ಅಧ್ಯಾಹಾರ ಮಾಡಿಕೊಳ್ಳದೆ ಮಹಾವಾಕ್ಯವು ಅಪೂರ್ಣವಾಗುವುದಾದರೆ ಖಂಡವಾಕ್ಯವನ್ನು ಅಧ್ಯಾಹಾರ ಮಾಡಿಕೊಳ್ಳಬೇಕು. ಆದರೆ ಅಂತಹ ಪದ- ವಾಕ್ಯಗಳು ಇಲ್ಲದಿದ್ದರೂ ವಾಕ್ಯವು ಪೂರ್ಣವಾಗುವುದಾದಲ್ಲಿ ಪದಗಳನ್ನೋ, ವಾಕ್ಯಗಳನ್ನೋ ಅಧ್ಯಾಹಾರ ಮಾಡಿಕೊಳ್ಳ ಬಾರದು. ಇದು ಜ್ಞಾನಿಗಳ ಅಭಿಮತ''.

ಬೃಹತ್ ಸಂಹಿತೆಯಲ್ಲಿ ಹೀಗೆ ಹೇಳಿರುವುದರಿಂದ 'ಅಥಾತೋ ಬ್ರಹ್ಮ ಜಿಜ್ಞಾಸಾ' ಎಂಬ ಮೊದಲ ಸೂತ್ರದಲ್ಲಿ ''ಕರ್ತವ್ಯಾ'' ಎಂಬ ಪದವನ್ನು ಸೇರಿಸಿಕೊಂಡು ''ಬ್ರಹ್ಮಜಿಜ್ಞಾಸಾ ಕರ್ತವ್ಯಾ'' ಎಂದು ವಾಕ್ಯವನ್ನು ಪೂರ್ಣಗೊಳಿಸಬೇಕು.

## ಭಗವತ್ಪ್ರಸಾದದಿಂದಲೇ ಮೋಕ್ಷ

**ತಮೇವಂ ವಿದ್ವಾನಮೃತ ಇಹ ಭವತಿ । ನಾನ್ಯಃ ಪಂಥಾ ಅಯನಾಯ ವಿದ್ಯತೇ। (ತೈ.ಆ.3.12) ಪ್ರಿಯೋ ಹಿ ಜ್ಞಾನಿನೋಽತ್ಯರ್ಥಮಹಂ ಸ ಚ ಮಮ ಪ್ರಿಯಃ ॥ (ಭ.ಗೀ. 7.17) ಯಮೇವೈಷ ವೃಣುತೇ ತೇನ ಲಭ್ಯಃ । (ಕ.ಉ.2.23) ಆತ್ಮಾ ವಾರೇ ದ್ರಷ್ಟವ್ಯಃ ಶ್ರೋತವ್ಯೋ ಮಂತವ್ಯೋ ನಿದಿಧ್ಯಾಸಿತವ್ಯಃ ॥ (ಬೃ.ಉ.6.5.6)**

**ಇತ್ಯಾದಿ ಶ್ರುತಿಸ್ಮೃತಿಭ್ಯಃ ॥**

ಪುರುಷಸೂಕ್ತದಲ್ಲಿ ''ಪರಮಾತ್ಮನನ್ನು ತಿಳಿದ ಜ್ಞಾನಿಯು ಮೋಕ್ಷವನ್ನು ಪಡೆಯುತ್ತಾನೆ. ಮೋಕ್ಷಕ್ಕೆ ಜ್ಞಾನ ಬಿಟ್ಟು ಬೇರೆ ಸಾಧನವಿಲ್ಲ'' ಎಂದು ಹೇಳಿದೆ.

''ಜ್ಞಾನಿಗಳಿಗೆ ನಾನೆಂದರೆ ಇಷ್ಟ, ಅವರೂ ನನಗೆ ಪ್ರಿಯರು'' ''ಪರಮಾತ್ಮನು ಪ್ರಸನ್ನನಾಗಿ ಯಾರನ್ನು ವರಿಸುವನೋ ಅವನಿಗೆ ಮಾತ್ರ ಲಭ್ಯ'' ''ಆತ್ಮನನ್ನು ಕಾಣಬೇಕಾದರೆ ಗುರುಮುಖದಿಂದ ಕೇಳಿ ತಿಳಿದು, ಪಡೆದ ಜ್ಞಾನವನ್ನು ಯುಕ್ತಿಗಳಿಂದ ದೃಢಪಡಿಸಿಕೊಂಡು, ಧ್ಯಾನಮಾಡಬೇಕು'' ಇತ್ಯಾದಿ ಶ್ರುತಿ ಸ್ಮೃತಿಗಳಿಂದ ನಾವು ಹೇಳಿದ ವಿಷಯ ಸಿದ್ಧವಾಗಿದೆ.

**ವಿವರಣೆ :** ಆಚಾರ್ಯರು ಹಿಂದಿನ ವಾಕ್ಯದಲ್ಲಿ ಸೂತ್ರಾರ್ಥವನ್ನು ವಿವರಿಸುತ್ತಾ ಮೋಕ್ಷಕ್ಕೆ ಪರಮಾತ್ಮನ ಅನುಗ್ರಹ ಕಾರಣ. ಅದಕ್ಕೆ ಅವನ ಅಪರೋಕ್ಷ ಕಾರಣ. ಆ ಅಪರೋಕ್ಷಕ್ಕಾಗಿ ಜಿಜ್ಞಾಸೆಯನ್ನು ನಡೆಸಬೇಕು ಎಂದು ಹೇಳಿದ್ದಾರೆ. ತಾವು ಹೇಳಿದ ಈ ವಿಷಯಗಳಿಗೆ ಪ್ರಮಾಣವನ್ನು ಇಲ್ಲಿ ಉಲ್ಲೇಖಿಸುತ್ತಿದ್ದಾರೆ.

**1.** ಮೊದಲು ತೈತ್ತಿರೀಯ ಶ್ರುತಿಯಲ್ಲಿ ಜ್ಞಾನವಿಲ್ಲದೆ ಮೋಕ್ಷವಿಲ್ಲ, ಜ್ಞಾನದಿಂದಲೇ ಮೋಕ್ಷ ಎನ್ನಲಾಗಿದೆ. ಇದರಿಂದ ಜ್ಞಾನವು ಮೋಕ್ಷಕ್ಕೆ ಕಾರಣವೆಂದು ತಿಳಿಯುತ್ತದೆ. ಭಗವಂತನ ಪ್ರಸಾದ ಮೋಕ್ಷಸಾಧನವೆನ್ನಲು ಈ ಶ್ರುತಿ ಹೇಗೆ ಆಧಾರವಾಗುತ್ತದೆ, ಎಂದರೆ, ಮೋಕ್ಷವೆಂದರೆ ಬಂಧನಾಶ. ಅಪರಾಧಿಯು ರಾಜನನ್ನು ಕಂಡು, ಸನ್ನಡತೆಯಿಂದ ಅವನನ್ನು ಪ್ರಸನ್ನಗೊಳಿಸಿದಾಗ ಬಂಧನದಿಂದ ಬಿಡುಗಡೆಯಾಗುವುದು ಲೋಕದಲ್ಲಿ ಕಂಡಿದೆ. ಅದರಂತೆ, ಭಗವಂತನನ್ನು ಕಂಡಾಗ ಅವನಲ್ಲಿ ಭಕ್ತಿ ವೃದ್ಧಿಯಾಗುತ್ತದೆ. ಅಂತಹ ದೃಢಭಕ್ತಿಯಿಂದ ನಿಷ್ಕಾಮಕರ್ಮ ಮಾಡಿದಾಗ ಭಗವಂತ ಪ್ರಸನ್ನನಾಗಿ ಅನಾದಿಯಾದ ನಮ್ಮ ಬಂಧನವನ್ನು ಕಳಚುತ್ತಾನೆ. ಹೀಗೆ ಜ್ಞಾನವು ನೇರವಾಗಿ ಮೋಕ್ಷಕ್ಕೆ ಸಾಧನವಾಗಿರದೆ ಪ್ರಸಾದದ ಮೂಲಕ ಕಾರಣವಾಗಿರುವುದೇ ಲೋಕದಲ್ಲಿ ಕಂಡಿದೆ. ಆದ್ದರಿಂದ ಈ ಶ್ರುತಿಯಿಂದಾಗಿ ಪ್ರಸಾದವು ಮೋಕ್ಷಸಾಧನವೆಂದು ತಿಳಿಯುತ್ತದೆ. ಇದನ್ನು ಆಚಾರ್ಯರು ಅನುವ್ಯಾಖ್ಯಾನದಲ್ಲಿ ತಿಳಿಸಿದ್ದಾರೆ.

ಅತೋ ಯಥಾರ್ಥಬಂಧಸ್ಯ ವಿನಾ ವಿಷ್ಣುಪ್ರಸಾದತಃ।
ಅನಿವೃತ್ತೇಸ್ತದರ್ಥಂ ಹಿ ಜಿಜ್ಞಾಸಾತ್ರ ವಿಧೀಯತೇ॥

**2.** ಜ್ಞಾನಿಗೆ ಭಗವಂತ ಪ್ರಸನ್ನನಾಗುತ್ತಾನೆ ಎಂಬ ವಿಷಯವನ್ನು ಗೀತೆಯ ಶ್ಲೋಕ ತಿಳಿಸುತ್ತದೆ.

**3.** ಯಮೇವೈಷ ಎಂಬ ಕಠೋಪನಿಷತ್ತಿನ ವಾಕ್ಯ ಸ್ಪಷ್ಟವಾಗಿ ಪ್ರಸಾದವು ಮೋಕ್ಷಸಾಧನ ಎನ್ನುತ್ತದೆ. ಹೇಗೆಂದರೆ, ಆ ವಾಕ್ಯದಲ್ಲಿರುವ ವೃಣುತೇ ಎಂಬ ಪದಕ್ಕೆ 'ವರಿಸುತ್ತಾನೆ' ಎಂದರ್ಥ. ಪ್ರೀತಿಯಿಂದ ತನ್ನವನು ಎಂದು ಒಪ್ಪಿಕೊಳ್ಳುವುದೇ ವರಣೆ. ಇದನ್ನೇ ಪ್ರಸಾದವೆನ್ನುವುದು.

**4.** 'ಆತ್ಮಾ ವಾ' ಇತ್ಯಾದಿ ಬೃಹದಾರಣ್ಯಕಶ್ರುತಿ ಜಿಜ್ಞಾಸಾದಿಂದ ಪರಮಾತ್ಮನ ಅಪರೋಕ್ಷವನ್ನು ಹೇಳುತ್ತದೆ. ಜಿಜ್ಞಾಸಾ ಎಂದರೆ ಶ್ರವಣ, ಮನನ ಮತ್ತು ಧ್ಯಾನ. ಶ್ರವಣ ಎಂದರೆ ಕೇಳುವುದು. ಗುರುಗಳಿಂದ ಪರಮಾತ್ಮನ ಬಗ್ಗೆ ಕೇಳಿ ತಿಳಿಯುವುದು. ಅದನ್ನು ಯುಕ್ತಿಗಳಿಂದ ದೃಢಪಡಿಸಿಕೊಂಡು ಮನವರಿಕೆ ಮಾಡಿಕೊಳ್ಳುವುದು ಮನನ. ತತ್ತ್ವದಲ್ಲಿ ದೃಢತೆ ಬಂದಮೇಲೆ ಮಾಡುವ ನಿರಂತರ ಮಾನಸಚಿಂತನೆ ಧ್ಯಾನ. ಇವುಗಳಿಂದ ಪರಮಾತ್ಮನು ಪ್ರತ್ಯಕ್ಷನಾಗುತ್ತಾನೆ.

## ಕರ್ಮದಿಂದಾಗುವ ಪ್ರಸಾದ ಅಧಮ

**ಕರ್ಮಣಾ ತ್ವಧಮಃ ಪ್ರೋಕ್ತಃ, ಪ್ರಸಾದಃ ಶ್ರವಣಾದಿಭಿಃ।**
**ಮಧ್ಯಮೋ, ಜ್ಞಾನಸಂಪತ್ತ್ಯಾ ಪ್ರಸಾದಸ್ತೂತ್ತಮೋ ಮತಃ॥**
**ಪ್ರಸಾದಾತ್ ತ್ವಧಮಾದ್ ವಿಷ್ಣೋಃ ಸ್ವರ್ಗಲೋಕಃ ಪ್ರಕೀರ್ತಿತಃ।**
**ಮಧ್ಯಮಾಜ್ಜನಲೋಕಾದಿಃ ಉತ್ತಮಸ್ತ್ವೇವ ಮುಕ್ತಿದಃ॥**

**ಶ್ರವಣಂ ಮನನಂ ಚೈವ ಧ್ಯಾನಂ ಭಕ್ತಿಸ್ತಥೈವ ಚ।**

**ಸಾಧನಂ ಜ್ಞಾನಸಂಪತ್ತೌ ಪ್ರಧಾನಂ ನಾನ್ಯದಿಷ್ಯತೇ।**

**ನ ಚೈತಾನಿ ವಿನಾ ಕಶ್ಚಿತ್ ಜ್ಞಾನಮಾಪ ಕುತಶ್ಚನ ॥ ಇತಿ ನಾರದೀಯೆ॥**

ನಾರದೀಯ ಪುರಾಣದಲ್ಲಿ ಹೀಗಿದೆ- ಸತ್ಕರ್ಮಾಚರಣೆಯಿಂದ ಆಗುವ ಭಗವಂತನ ಪ್ರಸಾದ ಅಧಮ, ಶ್ರವಣಾದಿಗಳಿಂದಾಗುವ ಪ್ರಸಾದ ಮಧ್ಯಮ, ಅಪರೋಕ್ಷ ಜ್ಞಾನದಿಂದಾಗುವ ಪ್ರಸಾದ ಉತ್ತಮವಾದುದು. ಅಧಮ ಪ್ರಸಾದದಿಂದ ಸ್ವರ್ಗಲೋಕವೂ ಮಧ್ಯಮ ಪ್ರಸಾದದಿಂದ ಜನಃ, ತಪಃ, ಸತ್ಯ. ಈ ಮೂರು ಲೋಕಗಳೂ ದೊರಕುತ್ತವೆ. ಉತ್ತಮ ಪ್ರಸಾದ ಮಾತ್ರ ಮೋಕ್ಷಕ್ಕೆ ಕಾರಣ.

ಶ್ರವಣ, ಮನನ, ಧ್ಯಾನ, ಭಕ್ತಿ ಇವುಗಳೇ ಪರಮಾತ್ಮನನ್ನು ಕಾಣಲು ಪ್ರಧಾನ ಸಾಧನಗಳು. ಕರ್ಮ ಸಾಧನವಲ್ಲ. ಇವುಗಳಿಲ್ಲದೆ ಯಾರೂ ಎಂದೂ ಪರಮಾತ್ಮನನ್ನು ಕಾಣಲಿಲ್ಲ. ಹೀಗೆ ನಾರದೀಯ ಪುರಾಣದಲ್ಲಿದೆ.

**ವಿವರಣೆ : 1.** ''ತತ್ಕರ್ಮ ಹರಿತೋಷಂ ಯತ್'' ಹೀಗೆ ಕರ್ಮವೂ ಪರಮಾತ್ಮನ ತುಷ್ಟಿಗೆ ಸಾಧನವೆಂದು ತಿಳಿಯುತ್ತದೆ. ಅಂದಮೇಲೆ ಪ್ರಸಾದಕ್ಕೆ ಅಪರೋಕ್ಷವೊಂದೇ ಸಾಧನ ಎನ್ನುವುದು ಹೇಗೆ? ಎಂಬ ಪ್ರಶ್ನೆಗೆ ಉತ್ತರವಾಗಿ ಈ ಭಾಷ್ಯವಿದೆ. ಕರ್ಮದಿಂದಾಗುವ ಭಗವತ್ ಪ್ರಸಾದ ಅಧಮ. ಆದರಿಂದ ಮೋಕ್ಷ ದೊರಕುವುದಿಲ್ಲ ಎಂದು ಭಾಷ್ಯಕಾರರ ಉತ್ತರ.

**2.** ಅಪರೋಕ್ಷ ಜ್ಞಾನಿಗಳಲ್ಲದವರಿಗೆ ಜನಾದಿ ಲೋಕಪ್ರಾಪ್ತಿ ಇಲ್ಲ. ಅಂದಮೇಲೆ ಮಧ್ಯಮ ಪ್ರಸಾದದಿಂದ ಜನಾದಿಲೋಕಪ್ರಾಪ್ತಿ, ಜ್ಞಾನಜನ್ಯವಾದ ಮಹಾಪ್ರಸಾದದಿಂದ ಮೋಕ್ಷ ಎಂಬ ಈ ವ್ಯವಸ್ಥೆ ಹೇಗೆ? ಈ ಬಗ್ಗೆ ವ್ಯಾಖ್ಯಾನಕಾರರಲ್ಲಿ ವೈಮತ್ಯವಿದೆ. ಶ್ರವಣಾದಿಗಳಿಂದಾಗುವ ಮಧ್ಯಮ ಪ್ರಸಾದದಿಂದ ಜನಾದಿಲೋಕಗಳ ಪ್ರಾಪ್ತಿಯನ್ನು ಕೆಲವರು ಹೀಗೆ ಸಮರ್ಥನೆ ಮಾಡಿದ್ದಾರೆ-

ಸಾಮಾನ್ಯದರ್ಶನಾತ್ ಲೋಕಾನ್ ಮುಕ್ತಿರ್ಯೋಗ್ಯಾತ್ಮದರ್ಶನಾತ್।

'ಜನಾದಿ ಲೋಕ ಪ್ರಾಪ್ತಿಯಾಗಬೇಕಾದರೂ ಪರಮಾತ್ಮನ ಸಾಮಾನ್ಯ ಅಪರೋಕ್ಷವಾಗಲೇಬೇಕು'' ಎಂದು ಚತುರ್ಥಾಧ್ಯಾಯ ಸೂತ್ರಭಾಷ್ಯದ ಈ ಪ್ರಮಾಣದಿಂದ ತಿಳಿಯುತ್ತದೆ. ಆದ್ದರಿಂದ ಶ್ರವಣಾದಿಗಳನ್ನು ಮಾಡಿ ಭಕ್ತಿಯಿಂದ ಪರಮಾತ್ಮನ ಅವತಾರ ರೂಪಗಳನ್ನು ಕಂಡವರು ಜನಃ, ತಪಃ, ಸತ್ಯಂ ಎಂಬ ಈ ಮೂರು ಲೋಕಗಳಿಗೆ ಹೋಗುತ್ತಾರೆ. ಅಲ್ಲಿಸಾಧನಾನುಷ್ಠಾನ ಮಾಡಿ ಬಿಂಬಾಪರೋಕ್ಷ ಪಡೆದು ಉತ್ತಮ ಪ್ರಸಾದ ಗಳಿಸಿ ಮೋಕ್ಷಪ್ರಾಪ್ತಿ.

ಪ್ರಾದುರ್ಭಾವಾನ್ ಋತೇ ವಿಷ್ಣುಂ ಇಂದ್ರಿಯೈಃ ನೈವ ಪಶ್ಯತಿ ॥

ಎಂದು ಕಾಠಕ ಭಾಷ್ಯದಲ್ಲಿ ಹೇಳಿರುವಂತೆ ಅವತಾರ ರೂಪಗಳ ದರ್ಶನ ಮಾತ್ರ ಈ ಕಣ್ಣಿನಿಂದಾಗುತ್ತದೆ. ಬಿಂಬದರ್ಶನ ಸ್ವರೂಪೇಂದ್ರಿಯದಿಂದಲೇ ಆಗಬೇಕು. ಒಟ್ಟಿನಲ್ಲಿ ಕರ್ಮದಿಂದ ಭುವಃ, ಸ್ವಃ, ಮಹಃ ಎಂಬ ಲೋಕಗಳ ಪ್ರಾಪ್ತಿ-

ಈಯುಃ ತ್ರೀನ್ ಕರ್ಮಣಾ ಲೋಕಾನ್ ॥

ಜನಃ, ತಪಃ, ಸತ್ಯಂ ಈ ಮೂರುಲೋಕಗಳ ಪ್ರಾಪ್ತಿ ಅಪರೋಕ್ಷ ಜ್ಞಾನದಿಂದ ಮಾತ್ರ- ಜ್ಞಾನೇನೈವ ತದುತ್ತರಾನ್ ॥

ಈ ವಿಷಯದಲ್ಲಿ ಶ್ರೀವಾದಿರಾಜರ ಅಭಿಪ್ರಾಯ ಹೀಗಿದೆ- ಶ್ರವಣಾದಿಗಳಿಂದ ಪರಮಾತ್ಮನ ಬಿಂಬಾಪರೋಕ್ಷವಾದ ಮೇಲೆಯೇ ಜನಾದಿಲೋಕ ಪ್ರಾಪ್ತಿ. ಹೀಗೆ ಈ ಲೋಕಗಳ ಪ್ರಾಪ್ತಿಗೂ ಪರಮಾತ್ಮನ ಪ್ರಸಾದವೇ ಕಾರಣ. ಅಲ್ಲಿಂದ ಮುಂದೆ ಮೋಕ್ಷಕ್ಕೆ ಬೇಕಾಗುವ ಪ್ರಸಾದ ಉತ್ತಮ ಪ್ರಸಾದ. ಗಂಗಾಸ್ನಾನಕ್ಕೆ ಹೊರಟವನಿಗೆ ದಾರಿಯಲ್ಲಿ ನರ್ಮದಾ ನದಿಯ ಸ್ನಾನದಂತೆ ಜ್ಞಾನಿಗಳಿಗೆ ಜನಾದಿ ಲೋಕಗಳ ಪ್ರಾಪ್ತಿಗೆ ಸಾಧನವಾದುದು ಮಧ್ಯಮ ಪ್ರಸಾದ.

ಇನ್ನು ಕೆಲವರು, 'ಜನಲೋಕಾದಿಃ' ಎಂಬ ಶಬ್ದಕ್ಕೆ ಜನಲೋಕದ ಆದಿ-ಜನಲೋಕಕ್ಕಿಂತ ಮೊದಲ ಲೋಕ-ಅರ್ಥಾತ್ ಮಹರ್ಲೋಕ. ಅದು ಅಪರೋಕ್ಷವಿಲ್ಲದೆಯೇ ಪರಮಾತ್ಮನ ಮಧ್ಯಮ ಪ್ರಸಾದದಿಂದ ಲಭ್ಯ ಎಂದು ಹೇಳುತ್ತಾರೆ.

## ಬ್ರಹ್ಮಶಬ್ದಾರ್ಥ ವಿಷ್ಣು

**ಬ್ರಹ್ಮಶಬ್ದಶ್ಚ ವಿಷ್ಣಾವೇವ ।**

**ಯಮಂತಃ ಸಮುದ್ರೇ ಕವಯೋಽವಯಂತಿ**
**ತದಕ್ಷರೇ ಪರಮೇ ಪ್ರಜಾಃ ।**
**ಯತಃ ಪ್ರಸೂತಾ ಜಗತಃ ಪ್ರಸೂತೀ**
**ತೋಯೇನ ಜೀವಾನ್ ವ್ಯಸಸರ್ಜ ಭೂಮ್ಯಾಮ್ ॥**

**ಇತ್ಯುಕ್ತ್ವಾ-**

**ತದೇವರ್ತಂ ತದು ಸತ್ಯಮಾಹುಃ ತದೇವ ಬ್ರಹ್ಮ ಪರಮಂ ಕವೀನಾಮ್ ॥**

**(ಮ.ನಾ.ಉ.1.3.6)**

**ಇತಿ ಹಿ ಶ್ರುತಿಃ । 'ತನ್ನೋ ವಿಷ್ಣುಃ' ಇತಿ ವಚನಾತ್ ವಿಷ್ಣುರೇವ ಹಿ ತತ್ರೋಚ್ಯತೇ । ನ ಚ ಇತರ ಶಬ್ದಾತ್ ತತ್ಪ್ರಾಪ್ತಿಃ ।**

ನಾಮಾನಿ ವಿಶ್ವಾಭಿ ನ ಸಂತಿ ಲೋಕೇ ಯದಾವಿರಾಸೀದನೃತಸ್ಯ ಸರ್ವಮ್ ।
ನಾಮಾನಿ ಸರ್ವಾಣಿ ಯಮಾವಿಶಂತಿ ತಂ ವೈ ವಿಷ್ಣುಂ ಪರಮಮುದಾಹರಂತಿ ॥

-ಇತಿ ಭಾಲ್ಲವೇಯಶ್ರುತಿಃ।

ಯೋ ದೇವಾನಾಂ ನಾಮಧಾ ಏಕ ಏವ ತಂ ಸಂಪ್ರಶ್ನಂ ಭುವನಾಯಂತ್ಯನ್ಯಾ ॥

(ಋ.ಸಂ.10.82.3)

ಇತಿ ಏವಶಬ್ದಾತ್ ನಾನ್ಯೇಷಾಂ ಸರ್ವನಾಮತಾ।

ಅಜಸ್ಯ ನಾಭಾವಧ್ಯೇಕಮರ್ಪಿತಂ ಯಸ್ಮಿನ್ ವಿಶ್ವಾನಿ ಭುವನಾನಿ ತಸ್ಥುಃ ॥

(ಋ.ಸಂ.10.82.6)

ಇತಿ ವಿಷ್ಣೋರ್ಹಿ ಲಿಂಗಮ್ । ನಚ ಪ್ರಸಿದ್ಧಾರ್ಥಂ ವಿನಾ ಅನ್ಯೋಽರ್ಥಃ ಯುಜ್ಯತೇ ।

ಅಜಸ್ಯ ನಾಭಾವಿತಿ ಯಸ್ಯ ನಾಭೇ-
ರಭೂತ್ ಶ್ರುತೇಃ ಪುಷ್ಕರಂ ಲೋಕಸಾರಮ್।
ತಸ್ಮೈ ನಮೋ ವ್ಯಸ್ತಸಮಸ್ತವಿಶ್ವ-
ವಿಭೂತಯೇ ವಿಷ್ಣವೇ ಲೋಕಕರ್ತ್ರೇ ॥ ಇತಿ ಸ್ಕಾಂದೇ।

ಪರೋ ದಿವಾ ಪರ ಏನಾ ಪೃಥಿವ್ಯಾ ॥ (ಋ.ಸಂ.10.82-5)

ಇತಿ ಸಮಾಖ್ಯಾಶ್ರುತೌ।

ಯಂ ಕಾಮಯೇ ತಂ ತಮುಗ್ರಂ ಕೃಣೋಮಿ
ತಂ ಬ್ರಹ್ಮಾಣಂ ತಮೃಷಿಂ ತಂ ಸುಮೇಧಾಮ್ ॥ (10.125.5)

ಇತ್ಯುಕ್ತ್ವಾ-

ಮಮ ಯೋನಿರಪ್ಸ್ವಂತಃ ಸಮುದ್ರೇ ॥ (ಋ.ಸಂ.10.125-5-7)

ಇತ್ಯಾಹ। ಉಗ್ರೋ ರುದ್ರಃ। ಸಮುದ್ರೇಽಂತರ್ನಾರಾಯಣಃ।

ಪ್ರಸಿದ್ಧತ್ವಾತ್ ಸೂಚಿತತ್ವಾಚ್ಚಾಸ್ಯಾರ್ಥಸ್ಯ। ನ ಚಾವಿರೋಧೇ ಪ್ರಸಿದ್ಧಃ ಪರಿತ್ಯಜ್ಯತೇ ।
ಉಕ್ತನ್ಯಾಯೇನ ಚ ಶ್ರುತಯಃ ಏತಮೇವ ವದಂತಿ ।

ವೇದೇ ರಾಮಾಯಣೇ ಚೈವ ಪುರಾಣೇ ಭಾರತೇ ತಥಾ ।
ಆದಾವಂತೇ ಚ ಮಧ್ಯೇ ಚ ವಿಷ್ಣುಃ ಸರ್ವತ್ರ ಗೀಯತೇ ।

ಇತಿ ಹರಿವಂಶೇಷು ।

'ಬ್ರಹ್ಮ' ಎಂಬ ಹೆಸರು ವಿಷ್ಣುವಿಗೇ ಮುಖ್ಯವಾದುದು. ಮಹಾನಾರಾಯಣೋಪನಿ

ಷತ್ತಿನಲ್ಲಿ ''ಕ್ಷೀರಸಮುದ್ರದಲ್ಲಿರುವ ಯಾರನ್ನು ಜ್ಞಾನಿಗಳು ಅರಿಯುವರೋ, ಎಲ್ಲರೂ ನಾಶವಿಲ್ಲದ ಸರ್ವೋತ್ಕೃಷ್ಟನಾದ ಯಾರ ಅಧೀನರೋ, ಜಗಜ್ಜನನಿಯಾದ ಲಕ್ಷ್ಮೀ ದೇವಿಯೂ ಯಾರಿಂದ ಜನಿಸಿದಳೋ, ಯಾರು ಪಂಚಭೂತಗಳಿಂದ (ತೋಯೇನ) ಕರ್ಮಾನುಗುಣವಾಗಿ (ತೋಯೇನ) ಪೃಥಿವ್ಯಾದಿಲೋಕಗಳಲ್ಲಿ ಜೀವಿಗಳನ್ನು ಸೃಷ್ಟಿಮಾಡಿದನೋ'' ಹೀಗೆ ವಿಷ್ಣುವನ್ನು ಗುಣಗಳ ಮೂಲಕ ಪ್ರಸ್ತಾಪಿಸಿ ''ಅವನೇ ಅನಾದಿಕಾಲದಿಂದ ಏಕರೀತಿಯಾಗಿ ತಿಳಿಯಲ್ಪಡುವವನು (ತದೇವರ್ತಂ), ಅವನೇ ಸತ್ಯಸ್ವರೂಪನು, ಅವನನ್ನೇ ಜ್ಞಾನಿಗಳು ಬ್ರಹ್ಮನೆನ್ನುತ್ತಾರೆ'' ಎಂದು ಹೇಳಿದೆ. ಮುಂದೆ ಹದಿನಾರನೆಯ ಮಂತ್ರದಲ್ಲಿ-

''ನಾರಾಯಣಾಯ ವಿದ್ಮಹೇ ವಾಸುದೇವಾಯ ಧೀಮಹಿ।
ತನ್ನೋ ವಿಷ್ಣುಃ ಪ್ರಚೋದಯಾತ್''

ಎಂದು ಸ್ಪಷ್ಟವಾದ ವಿಷ್ಣುಶಬ್ದವಿರುವುದರಿಂದ ಈ ಪ್ರಕರಣದಲ್ಲಿ ಹೇಳಲ್ಪಟ್ಟವನು ವಿಷ್ಣುವೇ ಆಗಿದ್ದಾನೆ.

ಮಹಾನಾರಾಯಣೋಪನಿಷತ್ತಿನಲ್ಲಿ ವಿಷ್ಣುಶಬ್ದದಂತೆ ''ತನ್ನೋ ರುದ್ರಃ ಪ್ರಚೋದಯಾತ್'' ಎಂದು ರುದ್ರ ಶಬ್ದವೂ ಇರುವುದರಿಂದ ಈ ಪ್ರಕರಣದಲ್ಲಿ ರುದ್ರನೂ ಪ್ರಸ್ತುತನಾಗಿರಬಹುದಲ್ಲವೇ? ಎಂಬ ಸಂಶಯ ಸರಿಯಲ್ಲ. ರುದ್ರನೆಂದರೂ ವಿಷ್ಣುವೇ-ಭಾಲ್ಲವೇಯಶ್ರುತಿ ಹೀಗೆ ಹೇಳಿದೆ- ''ಸಕಲ ನಾಮಗಳೂ ಇತರರಿಗೆ ಮುಖ್ಯವಲ್ಲ. ಏಕೆಂದರೆ, ವಿಷ್ಣುಭಿನ್ನವಾದ (ಅನ್ಯತಸ್ಯ) ಈ ಜಗತ್ತಿನ ಸೃಷ್ಟ್ಯಾದಿಗಳೆಲ್ಲವೂ (ಸರ್ವಂ) ಅವನಿಂದಲೇ ಆಗುತ್ತವೆ (ಆವಿರಾಸೀತ್). ಆದ್ದರಿಂದ ಎಲ್ಲ ಹೆಸರುಗಳೂ ಯಾರಿಗೆ ಸಲ್ಲುವುದೋ ಅಂತಹ ವಿಷ್ಣುವನ್ನೇ ಸರ್ವೋತ್ತಮನೆಂದು ಜ್ಞಾನಿಗಳು ಹೇಳುತ್ತಾರೆ.''

''ಯಾರಿಗೆ ಮಾತ್ರ ಎಲ್ಲ ದೇವತೆಗಳ ನಾಮವೂ ಸಲ್ಲುವುದೋ ಅಂತಹ, ಎಲ್ಲರಿಗೂ ಪ್ರಶ್ನೆಯಾಗಿರುವವನಲ್ಲಿ ಇತರೆಲ್ಲ ಲೋಕಗಳೂ ಲಯಹೊಂದುವವು'' ಋಕ್ ಸಂಹಿತೆಯ ಈ ಮಂತ್ರದಿಂದ ಬ್ರಹ್ಮಾದಿದೇವತೆಗಳು ವಿಷ್ಣುವಿನಂತೆ ಸರ್ವಶಬ್ದ ಪ್ರತಿಪಾದ್ಯರಲ್ಲ ಎಂದು ತಿಳಿಯುತ್ತದೆ. ಈ ಮಂತ್ರದ ಮುಂದಿನ ಮಂತ್ರ ಹೀಗಿದೆ- ''ಯಾವುದರಲ್ಲಿ ಎಲ್ಲ ಲೋಕಗಳೂ ನೆಲೆಗೊಂಡವೋ ಅಂತಹುದೊಂದು ಅಜನ ನಾಭಿಯಲ್ಲಿದೆ'' ಲೋಕಾಧಾರವಾದ ಇಂತಹ ವಸ್ತು ಕಮಲವೆಂಬುದು ಸುಪ್ರಸಿದ್ಧ. ಅಂದಮೇಲೆ ಅಜನ ನಾಭಿಸ್ಥವಾದುದು ಕಮಲಬಿಟ್ಟು ಇನ್ನಾವುದೋ ಆಗಿರಬಹುದು ಎಂಬ ಸಂದೇಹಬೇಡ. ಅಷ್ಟೇ ಅಲ್ಲ, ಸ್ಕಾಂದ ಪುರಾಣದಲ್ಲಿ ಹೀಗಿದೆ- ''ಅಜಸ್ಯ ನಾಭೌ'' ಎಂಬ ಶ್ರುತಿಯಂತೆ ಯಾರ ನಾಭಿಯಿಂದ ಲೋಕಾತ್ಮಕವಾದ ಕಮಲ ಹುಟ್ಟಿತೋ ಅಂತಹ, ಯಥಾಯೋಗ್ಯವಾಗಿ ಜೀವಜಡಗಳ ಸೃಷ್ಟ್ಯಾದಿಗಳಿಗೆ ಕಾರಣನಾದ ಜಗದೊಡೆಯನಾದ ವಿಷ್ಣುವಿಗೆ ನಮಸ್ಕಾರ'' ಇದರಿಂದ 'ಅಜಸ್ಯ ನಾಭೌ'' ಎಂಬ ಋಗ್ವೇದದ ಮಂತ್ರ ವಿಷ್ಣುಪರವೆಂದು

ನಿರ್ಧರಿಸಬಹುದು. (ಹೀಗಾಗಿ ಇದರ ಹಿಂದಿರುವ ''ಯೋ ದೇವಾನಾಂ'' ಎಂಬ ಮಂತ್ರವೂ ವಿಷ್ಣುಪರವಾಗಿದೆ. ಆದ್ದರಿಂದ ವಿಷ್ಣುವಿಗೆ ಮಾತ್ರ ಸರ್ವಶಬ್ದವಾಚ್ಯತ್ವ, ಇತರರಿಗಿಲ್ಲ). ಅಷ್ಟೇ ಅಲ್ಲ, ಋಗ್ವೇದದ ಈ ಮಂತ್ರ ವಿಶ್ವಕರ್ಮ ಸೂಕ್ತದಲ್ಲಿದೆ. ಅದರ ಐದನೆಯ ಮಂತ್ರ ''ಪರೋ ದಿವಾ ಪರ ಏನಾ ಪೃಥಿವ್ಯಾಃ'' ಎಂದಿದೆ. ಇದೇ ರೀತಿಯ ಮಂತ್ರ ಋಗ್ವೇದದ ಅಂಭೃಣೀ ಸೂಕ್ತದಲ್ಲೂ ಇದೆ. ಆ ಅಂಭೃಣೀ ಸೂಕ್ತ ಮಂತ್ರಪ್ರತಿಪಾದ್ಯ ವಿಷ್ಣು. ಏಕೆಂದರೆ, ಆ ಸೂಕ್ತದ ಐದನೇ ಮಂತ್ರದಲ್ಲಿ ಲಕ್ಷ್ಮೀದೇವಿ ''ಯಾರು ರುದ್ರಪದವಿಗೇರಲಿ ಎಂದು ನಾನು ಬಯಸುವೆನೋ ಅವನು ರುದ್ರನಾಗುತ್ತಾನೆ. ನಾನು ಬಯಸಿದ ವ್ಯಕ್ತಿ ಬ್ರಹ್ಮನಾಗುತ್ತಾನೆ, ಋಷಿಯಾಗುತ್ತಾನೆ, ಪ್ರಜ್ಞಾವಂತನಾಗುತ್ತಾನೆ'' ಎಂದು ಬ್ರಹ್ಮಾದಿಗಳೂ ತನ್ನ ಅಧೀನರೆಂದು ಹೇಳಿ, ಏಳನೆಯ ಮಂತ್ರದಲ್ಲಿ ''ಇಂತಹ ನನಗೂ ಕಾರಣಪುರುಷ ಕ್ಷೀರಸಮುದ್ರದಲ್ಲಿದ್ದಾನೆ'' ಎಂದು ಹೇಳುತ್ತಾ ಆ ಪುರುಷನ ಮಹಿಮೆಯನ್ನು ''ಪರೋ ದಿವಾ'' ಎಂಬ ಕೊನೆಯ ಮಂತ್ರದಲ್ಲಿ ಹೇಳಿದ್ದಾಳೆ. ಆದ್ದರಿಂದ ಅಲ್ಲಿರುವ ಮಂತ್ರಗಳಿಂದ ಪ್ರತಿಪಾದ್ಯನಾದ ಬ್ರಹ್ಮಾದಿಗಳಿಗಿಂತಲೂ ಉತ್ತಮನಾದವನು ವಿಷ್ಣು. ಅದೇ ರೀತಿಯಿರುವ ವಿಶ್ವಕರ್ಮ ಸೂಕ್ತದ ''ಪರೋ ದಿವಾ'' ಎಂಬ ಮಂತ್ರದಿಂದ ಪ್ರತಿಪಾದ್ಯನೂ ವಿಷ್ಣು.

ಅಂಭೃಣೀ ಸೂಕ್ತದಲ್ಲಿ ಲಕ್ಷ್ಮೀದೇವಿಯ ಅಧೀನನೆಂದು ಹೇಳಲ್ಪಟ್ಟ 'ಉಗ್ರ'ನೆಂದರೆ ರುದ್ರನೇ. ಏಕೆಂದರೆ ಕೋಶಗಳಲ್ಲಿ ಉಗ್ರಶಬ್ದ ರುದ್ರಶಬ್ದದ ಪರ್ಯಾಯವಾಗಿ ಪ್ರಸಿದ್ಧವಾಗಿದೆ. ಅಲ್ಲದೆ, 'ಭಯಂಕರನಾದವನು' ಎಂಬ ರುದ್ರ ಶಬ್ದಾರ್ಥವನ್ನೇ ''ಉಗ್ರ'' ಶಬ್ದವೂ ಸೂಚಿಸುತ್ತದೆ.

ಅದರಂತೆ, ಲಕ್ಷ್ಮೀದೇವಿಗೆ ಕಾರಣನಾಗಿ ''ಸಮುದ್ರಸ್ಥನಾದವನೂ'' (ಅಂತಃ ಸಮುದ್ರೇ) ವಿಷ್ಣುವೇ. ''ಮಹೋದಧಿಶಯೋಽಂತಕಃ'' ಎಂದು ಸಹಸ್ರನಾಮದಲ್ಲಿ ವಿಷ್ಣುವಿನ ನಾಮವಾಗಿ ಅದು ಪ್ರಸಿದ್ಧವಾಗಿದೆ. ಅಲ್ಲದೆ, ನಾರ=ನೀರು, ಅದು ಯಾರಿಗೆ ಅಯನಂ=ಆಶ್ರಯವಾಗಿದೆಯೋ ಅವನು ನಾರಾಯಣ. ಈ ಅರ್ಥವನ್ನೇ ''ಅಂತಃಸಮುದ್ರೇ'' ಎಂಬ ಪದ ಸೂಚಿಸುತ್ತದೆ. ಆದ್ದರಿಂದ ಸಮುದ್ರಸ್ಥನಾಗಿ ಅಂಭೃಣೀ ಸೂಕ್ತದಲ್ಲಿ ಪ್ರತಿಪಾದ್ಯನಾದವನು ನಾರಾಯಣನೇ ಆಗಿದ್ದಾನೆ.

ಹೀಗೆ ಈ ಶಬ್ದಗಳಿಗೆ ನಿರ್ದಿಷ್ಟವಾದ ಅರ್ಥವಿಶೇಷವಿದ್ದಾಗ ಅದನ್ನು ಬಿಟ್ಟು ಬೇರೆ ಅರ್ಥವನ್ನು ಹೇಳಬಾರದು. ''ವಿಶ್ವಾಧಿಕೋ ರುದ್ರಃ'' ಎಂಬ ಶ್ರುತಿಗೆ ವಿರುದ್ಧವಾದುದರಿಂದ ''ಯಂ ಕಾಮಯೇ'' ಎಂಬ ಶ್ರುತಿಯಲ್ಲಿರುವ ಉಗ್ರಶಬ್ದಕ್ಕೆ 'ರುದ್ರ' ಎಂಬ ಅರ್ಥ ಮಾಡಬಾರದು ಎಂಬ ವಾದವೂ ಸರಿಯಲ್ಲ. ಏಕೆಂದರೆ, ''ವಿಶ್ವಾಧಿಕೋ ರುದ್ರಃ'' ಎಂಬಲ್ಲೂ ರುದ್ರನೆಂದರೆ ವಿಷ್ಣು. ಹಿಂದೆ ಹೇಳಿದಂತೆ ಸರ್ವನಾಮವೂ ಅವನಿಗೇ ಸಲ್ಲುತ್ತದೆ.

''ವೇದಗಳು ರಾಮಾಯಣ, ಪುರಾಣ, ಭಾರತ ಇವುಗಳ ಆದಿ, ಮಧ್ಯ, ಅಂತ ಹೀಗೆ ಎಲ್ಲೆಡೆಯೂ ವಿಷ್ಣುವೇ ಪ್ರತಿಪಾದ್ಯನಾಗಿದ್ದಾನೆ'' ಎಂದು ಹರಿವಂಶಪುರಾಣ ಸರ್ವನಾಮಗಳೂ ವಿಷ್ಣುಪರ ಎನ್ನುವುದನ್ನು ಸಮ್ಮತಿಸಿದೆ.

**ವಿವರಣೆ** : ಈ ಭಾಗದಲ್ಲಿ ಆಚಾರ್ಯರು ಎರಡು ವಿಷಯಗಳನ್ನು ಸಮರ್ಥಿಸಿದ್ದಾರೆ. 1. ಬ್ರಹ್ಮನೆಂದರೆ ಪ್ರಧಾನವಾಗಿ ವಿಷ್ಣುವೇ 2. ರುದ್ರ, ಇಂದ್ರ ಇತ್ಯಾದಿ ಎಲ್ಲ ನಾಮಗಳಿಂದಲೂ ವಾಚ್ಯನಾದವನು ವಿಷ್ಣುಮಾತ್ರ. ಮೊದಲ ವಿಷಯವನ್ನು ''ತದೇವ ಬ್ರಹ್ಮ ಪರಮಂ ಕವೀನಾಂ'' ಎಂಬ ಮಹಾನಾರಾಯಣೋಪನಿಷತ್ತಿನ ಆಧಾರ ಕೊಟ್ಟು ಸಮರ್ಥಿಸಿದ್ದಾರೆ. ಆದರೆ, ಅಲ್ಲಿ ''ವಿಷ್ಣು ಬ್ರಹ್ಮಶಬ್ದವಾಚ್ಯ'' ಎಂದಿಲ್ಲ. ವಿಷ್ಣು ಎಂಬ ಸ್ಪಷ್ಟ ಶಬ್ದದ ಬದಲು ಸರ್ವನಾಮವಾದ ''ತತ್'' (ಅದು) ಎಂಬ ಶಬ್ದವನ್ನು ಪ್ರಯೋಗಿಸಿ ''ಅದೇ ಬ್ರಹ್ಮ'' ಎನ್ನಲಾಗಿದೆ. ಅದರಿಂದಾಗಿ ''ಅದು ಎಂದರೆ ಯಾರು?'' ಎಂದು ಸಂದೇಹ ಬರುತ್ತದೆ. ಅದಕ್ಕಾಗಿ, ಅದೇ ಉಪನಿಷತ್ತಿನ ಮುಂದಿನ ಮಂತ್ರದಲ್ಲಿ 'ವಿಷ್ಣು' ಶಬ್ದದ ಉಲ್ಲೇಖವಿರುವುದರಿಂದ ಹಿಂದೆ ಬಂದಿರುವ 'ತತ್' ಎಂದರೆ ವಿಷ್ಣು ಎಂದು ಆಚಾರ್ಯರು ಸಮರ್ಥಿಸಿದ್ದಾರೆ. ಆಗ ಸಹಜವಾಗಿ ಬರುವ ಪ್ರಶ್ನೆ- 'ಮುಂದೆ ಹೇಗೆ ವಿಷ್ಣು ಶಬ್ದವಿದೆಯೋ ಅದರಂತೆ ರುದ್ರ ಶಬ್ದವೂ ಇದೆ. ಅಂದಮೇಲೆ 'ತತ್' ಎಂದರೆ ರುದ್ರ ಏಕಾಗಬಾರದು?' ಎಂದು. ಅದಕ್ಕೆ ಆಚಾರ್ಯರಿತ್ತ ಸಮಾಧಾನ-ರುದ್ರ, ಇಂದ್ರ ಮುಂತಾದ ಎಲ್ಲ ಶಬ್ದಗಳಿಗೂ ಮುಖ್ಯಾರ್ಥ ವಿಷ್ಣುವೇ. ಋಗ್ವೇದದ ವಿಶ್ವಕರ್ಮಸೂಕ್ತ ''ಯೋ ದೇವಾನಾಂ ನಾಮಧಾ ಏಕ ಏವ'' ಎಂದು ಸಕಲದೇವತೆಗಳ ನಾಮಧಾರಕ ಒಬ್ಬನೇ ಎಂದಿದೆ. ಆದರೆ, ಇಲ್ಲೂ ಶ್ರುತಿ ''ಏಕ ಏವ'' ಎಂದಿದೆ ಹೊರತು ಆ ''ಏಕ'' ಯಾರು? ಎಂದು ತಿಳಿಸಿಲ್ಲ. ಆ ಏಕ ಯಾರು ಎಂಬುದನ್ನು ಆಚಾರ್ಯರು ಅದೇ ವಿಶ್ವಕರ್ಮಸೂಕ್ತದ 'ಅಜಸ್ಯ ನಾಭೌ' ಎಂಬ ಮುಂದಿನ ಮಂತ್ರದ ಆಧಾರ ನೀಡಿ ಸಮರ್ಥಿಸಿದ್ದಾರೆ. ಆ ಮುಂದಿನ ಮಂತ್ರದಲ್ಲೂ ಒಂದು ಸಮಸ್ಯೆ ಇದೆ. ಅಲ್ಲಿ ವಿಷ್ಣುವಾಚಕವಾದ ಸ್ಪಷ್ಟ ಶಬ್ದವಿಲ್ಲ. ಆದರೂ ವಿಷ್ಣುವಿನಲ್ಲಿ ಮಾತ್ರವಿರಬಹುದಾದ ಒಂದು ಧರ್ಮವನ್ನು ಆ ಶ್ರುತಿ ಹೇಳಿದೆ. ಅದು ಪದ್ಮನಾಭತ್ವಲಿಂಗ-ನಾಭಿಯಲ್ಲಿ ಪದ್ಮವನ್ನು ಸೃಷ್ಟಿಸಿದವನು. ಇದನ್ನೂ ಆ ಮಂತ್ರ ಪದ್ಮ ಎಂದು ಸ್ಪಷ್ಟವಾಗಿ ಹೇಳದೆ ''ಅಜಸ್ಯ ನಾಭೌ ಅಧಿ ಏಕಂ ಅರ್ಪಿತಂ'' ''ಅಜನ ಹೊಕ್ಕುಳಲ್ಲಿ ಒಂದಿದೆ'' ಎಂದಿಷ್ಟೇ ಹೇಳಿದೆ. ಆ ಒಂದು ಯಾವುದು? ಅದನ್ನು ಸ್ಕಾಂದಪುರಾಣದ ಉಲ್ಲೇಖ ಮತ್ತು ಯುಕ್ತಿಯನ್ನು ಕೊಟ್ಟು ಪದ್ಮ ಎಂದು ಸಮರ್ಥಿಸಿದ್ದಾರೆ. ಸ್ಕಾಂದಪುರಾಣ ಈ ಮಂತ್ರವನ್ನು ಉಲ್ಲೇಖಿಸಿ ''ಅಜನ ಹೊಕ್ಕುಳಲ್ಲಿರುವುದು ಪದ್ಮ'' ಎಂದು ಸ್ಪಷ್ಟಪಡಿಸಿದೆ. ಅಲ್ಲದೆ, 'ಅಜಸ್ಯ ನಾಭೌ' ಎಂಬ ಮಂತ್ರದಲ್ಲಿ ಅಜನ ನಾಭಿಯಲ್ಲಿರುವ ವಸ್ತು ''ಯಸ್ಮಿನ್ ವಿಶ್ವಾ ಭುವನಾನಿ ತಸ್ಥುಃ - ಸಕಲ ಲೋಕಗಳಿಗೂ ಆಧಾರವಾಗಿದೆ'' ಎಂದು ಹೇಳಲಾಗಿದೆ. ಹದಿನಾಲ್ಕು ಲೋಕಗಳ ಉಗಮಕ್ಕೆ ಕಾರಣವಾದ ನಾಭಿಯಲ್ಲಿರುವ ವಸ್ತು ಎಂದರೆ ಅದು ಕಮಲವೇ ಆಗಬೇಕು. ಹೀಗೆ ಯುಕ್ತಿ

ಮತ್ತು ಶ್ರುತಿಗಳಿಂದ ನಾಭಿಸ್ಥವಾದುದು ಕಮಲ ಎಂದು ಸಮರ್ಥಿಸಿದ್ದಾರೆ. ಈ ರೀತಿಯಾಗಿ ಪದ್ಮನಾಭತ್ವಲಿಂಗದಿಂದ ಆ ಸೂಕ್ತ ಪ್ರತಿಪಾದಿಸುವ ದೇವತೆಯನ್ನು ನಿರ್ಧರಿಸಿ ಅದರಿಂದ ಸರ್ವನಾಮತ್ವ ವಿಷ್ಣುವಿಗೆ ಮಾತ್ರ ಎಂದು ಪ್ರತಿಪಾದಿಸಲಾಗಿದೆ.

ಇದಲ್ಲದೆ, ವಿಶ್ವಕರ್ಮ ಸೂಕ್ತದಲ್ಲಿ ವಿಷ್ಣುವೇ ಪ್ರತಿಪಾದ್ಯ ಎನ್ನಲು ಆಚಾರ್ಯರು ನೀಡಿದ ಆಧಾರ - ಆ ಸೂಕ್ತದ ''ಪರೋ ದಿವಾ'' ಎಂಬ ಮಂತ್ರದಲ್ಲಿ ''ಪರೋ ದೇವೇಭಿಃ ಅಸುರೈಃ ಯದಸ್ತಿ'' ಎಂದು ದೇವಾಸುರರಿಗಿಂತ ಮಿಗಿಲಾದ ತತ್ತ್ವವೊಂದನ್ನು ಉಲ್ಲೇಖಿಸಲಾಗಿದೆ. ಅದೇ ರೀತಿಯ ಶ್ರುತಿ ಅಂಭೃಣೀ ಸೂಕ್ತದಲ್ಲಿದೆ. ಅಲ್ಲಿ ಅದು ವಿಷ್ಣುಪರ. ಆದ್ದರಿಂದ ವಿಶ್ವಕರ್ಮ ಸೂಕ್ತದಲ್ಲೂ ಆ ಶ್ರುತಿ ವಿಷ್ಣುಪರ. ಅದು ವಿಷ್ಣುಪರವಾದುದರಿಂದ ಅದೇ ಸೂಕ್ತದಲ್ಲಿರುವ ''ಯೋ ದೇವಾನಾಂ ನಾಮಧಾ ಏಕ ಏವ'' ಎಂಬ ಮಂತ್ರದ ''ಏಕ'' ಶಬ್ದದಿಂದ ವಾಚ್ಯನಾದ ವ್ಯಕ್ತಿ ವಿಷ್ಣು.

ಇದರ ಮುಂದಿನ ಸಮಸ್ಯೆ ಅಂಭೃಣೀ ಸೂಕ್ತದಲ್ಲಿರುವ ''ಪರೋ ದಿವಾ'' ಎಂಬ ಮಂತ್ರ ವಿಷ್ಣುಪರ ಏಕೆ? ಎಂದು. ಅದಕ್ಕೆ ಆಚಾರ್ಯರ ಉತ್ತರ- ಅಂಭೃಣೀ ಸೂಕ್ತದಲ್ಲಿ ಲಕ್ಷ್ಮೀದೇವಿ ಉಗ್ರನೆನಿಸಿದ ರುದ್ರ, ಬ್ರಹ್ಮ ಇವರೆಲ್ಲ ನನ್ನ ಅಧೀನರು ಎಂದು ಹೇಳಿ ಅಂತಹ ತನಗೂ ಸ್ವಾಮಿಯಾದ ವ್ಯಕ್ತಿಯೊಬ್ಬ ''ಅಂತಃ ಸಮುದ್ರೇ'' ಸಮುದ್ರದಲ್ಲಿದ್ದಾನೆ ಎಂದಿದ್ದಾಳೆ. ಇದರಿಂದ ಸಮುದ್ರದಲ್ಲಿರುವ ವ್ಯಕ್ತಿ ರುದ್ರ, ಬ್ರಹ್ಮ, ಲಕ್ಷ್ಮೀದೇವಿಗಿಂತಲೂ ಉತ್ತಮ ಎಂದು ಸೂಚಿತವಾಯಿತು. ಅವನನ್ನೆ ''ಪರೋ ದಿವಾ'' ಎಂಬ ಮಂತ್ರ ಸರ್ವೋತ್ತಮನೆಂದು ಹೊಗಳುತ್ತದೆ. ಹೀಗೆ ಅಂಭೃಣೀ ಸೂಕ್ತದ ಈ ಮಂತ್ರ ವಿಷ್ಣುಪರವಾಗಿದೆ.

ಇಲ್ಲೂ ಒಂದು ಸಮಸ್ಯೆ ಇದೆ. ಲಕ್ಷ್ಮೀದೇವಿ ತನಗೆ ಕಾರಣನಾದ ವ್ಯಕ್ತಿಯ ಹೆಸರನ್ನು ಹೇಳದೆ ''ಅಂತಃ ಸಮುದ್ರೇ'' ಎಂದಿಷ್ಟೇ ಹೇಳಿದ್ದಾಳೆ. ಈ ಸಮುದ್ರಸ್ಥ ಯಾರು? ಅದು ನಾರಾಯಣನೇ. ಏಕೆಂದರೆ, ಕ್ಷೀರಸಮುದ್ರಶಾಯಿ ಅವನೇ ಅಲ್ಲವೆ? ಅಷ್ಟೇ ಅಲ್ಲ, ನಾರಾಯಣಶಬ್ದಕ್ಕೆ ಅರ್ಥವೇ ಅದು. ನಾರ ಎಂದರೆ ನೀರು- ''ಆಪೋ ನಾರಾ ಇತಿ ಪ್ರೋಕ್ತಾಃ''. ನರನಿಂದ ಸೃಷ್ಟಿಯಾದುದು ನಾರ. 'ಅಪ ಏವ ಸಸರ್ಜಾದೌ- ಪರಮಾತ್ಮ ಮೊದಲು ಮಾಡಿದ ಸೃಷ್ಟಿ ನೀರು. ಅಯನ ಅಂದರೆ ಆಶ್ರಯ. ನೀರನ್ನು ವಾಸಕ್ಕಾಗಿ ಅರಸಿದವನು ನಾರಾಯಣ. ಹೀಗೆ ಸಮುದ್ರಶಾಯಿಯಾದ ನಾರಾಯಣನೇ ಲಕ್ಷ್ಮೀದೇವಿಯ ಜನಕ. ಆದ್ದರಿಂದ ''ಪರೋ ದಿವಾ'' ಎಂಬ ಮಂತ್ರ ಪ್ರತಿಪಾದ್ಯನೂ ಅವನೇ ಆಗಿದ್ದಾನೆ.

ಹೀಗೆ ಇಲ್ಲಿ ಪ್ರಧಾನ ಪ್ರಸ್ತುತ ಪ್ರಮೇಯ- ಬ್ರಹ್ಮಶಬ್ದ ವಿಷ್ಣುವಾಚಕ ಎಂಬುದು. ಅದಕ್ಕೆ ಪೂರಕವಾಗಿ ಬಂದ ವಿಷಯ ಎಲ್ಲ ದೇವತೆಗಳ ನಾಮವೂ ವಿಷ್ಣುವಿಗೆ ಮಾತ್ರ ಇದೆ ಎನ್ನುವುದು. ಅದನ್ನು ಸಮರ್ಥಿಸಲು 'ಅಜಸ್ಯ ನಾಭೌ' ಎಂಬ ಶ್ರುತಿ. ಶ್ರುತಿ ವಿಷ್ಣು ಪರ ಎನ್ನಲು ಆಧಾರ - ಪದ್ಮನಾಭತ್ವಲಿಂಗ ಮತ್ತು ಸಮಾಖ್ಯಾ ಶ್ರುತಿ. ಆ ಸಮಾಖ್ಯಾ ಶ್ರುತಿ ವಿಷ್ಣುಪರ ಎನ್ನಲು ''ಸಮುದ್ರಶಾಯಿತ್ವ'' ಲಿಂಗ.

ಹೀಗೆ ''ಪರೋಕ್ಷಪ್ರಿಯ''ವಾದ ವೇದದ ಭಾವವನ್ನು ಶ್ರೀಮದಾಚಾರ್ಯರು ಯುಕ್ತಿಯುಕ್ತವಾಗಿ ತೆರೆದು ತೋರಿಸಿದ್ದಾರೆ.

2. ಸ್ಕಾಂದ ಪುರಾಣದಲ್ಲಿ ವಿಷ್ಣುವಿಗೆ ''ವ್ಯಸ್ತ-ಸಮಸ್ತ ವಿಶ್ವವಿಭೂತಯೇ'' ಎಂಬ ವಿಶೇಷಣವಿದೆ. ಇಲ್ಲಿ ವಿಶ್ವವಿಭೂತಿ ಎಂದರೆ ಜಗತ್ತಿನ ಸೃಷ್ಟ್ಯಾದಿ ಕ್ರಿಯೆಗಳು. ಸೃಷ್ಟಿ-ಸ್ಥಿತಿ-ಸಂಹಾರ- ನಿಯಮನ-ಜ್ಞಾನ- ಅಜ್ಞಾನ-ಬಂಧ-ಮೋಕ್ಷ. ಈ ಎಂಟು ಧರ್ಮಗಳು ವಿಶ್ವಕ್ಕೆ ಪರಮಾತ್ಮನಿಂದಲೇ ಆಗುತ್ತಿವೆ. ಅವುಗಳಲ್ಲಿ ಜಡವಸ್ತುಗಳಿಗೆ ಮೊದಲ ಮೂರು ಮಾತ್ರ. ಚೇತನಗಳಿಗೆ ಎಂಟೂ ಧರ್ಮಗಳಿವೆ. ಹೀಗೆ ಈ ಧರ್ಮಗಳು ವ್ಯಸ್ತವಾಗಿ - ಕೆಲವು ಮಾತ್ರ - ಜಡಕ್ಕಾದರೆ, ಸಮಸ್ತವಾಗಿ - ಸಮಗ್ರವಾಗಿ ಚೇತನಗಳಿಗೆ ವಿಷ್ಣುವಿನಿಂದಾಗುತ್ತವೆ.

3. ಅಂಭೃಣೀ ಸೂಕ್ತದಲ್ಲಿ ಲಕ್ಷ್ಮೀದೇವಿ ''ಉಗ್ರನ'' ಮೇಲೆ ತನ್ನ ಪ್ರಭುತ್ವವನ್ನು ಹೇಳಿದ್ದಾಳೆ. ಆ 'ಉಗ್ರ' ರುದ್ರನಾದರೆ ಆಗ ಲಕ್ಷ್ಮೀದೇವಿಗೆ ಕಾರಣನಾಗಿ 'ಸಮುದ್ರಸ್ಥ' ನಾದವನು ರುದ್ರ ಭಿನ್ನನಾದ ನಾರಾಯಣನಾಗುತ್ತಾನೆ. ಅದಕ್ಕಾಗಿ 'ಉಗ್ರ'ನೆಂದರೆ ರುದ್ರನೇ ಎಂಬುದನ್ನು ಆಚಾರ್ಯರು ಯುಕ್ತಿಯಿಂದ ಸಮರ್ಥಿಸಿ ಸಮುದ್ರಸ್ಥನಾದವನು ಅವನಿಗಿಂತ ಭಿನ್ನನಾದ ನಾರಾಯಣ ಎಂದು ಸಾಧಿಸಿದ್ದಾರೆ.

**ನ ಚ ಇತರ ಗ್ರಂಥ ವಿರೋಧಃ।**

**ಏಷ ಮೋಹಂ ಸೃಜಾಮ್ಯಾಶು ಯೋ ಜನಾನ್ ಮೋಹಯಿಷ್ಯತಿ।**
**ತ್ವಂ ಚ ರುದ್ರ ಮಹಾಬಾಹೋ ಮೋಹಶಾಸ್ತ್ರಾಣಿ ಕಾರಯ॥**
**ಅತಥ್ಯಾನಿ ವಿತಥ್ಯಾನಿ ದರ್ಶಯಸ್ವ ಮಹಾಭುಜ।**
**ಪ್ರಕಾಶಂ ಕುರು ಚಾತ್ಮಾನಂ ಅಪ್ರಕಾಶಂ ಚ ಮಾಂ ಕುರು॥ ಇತಿ ವಾರಾಹವಚನಾತ್।**

**ಶೈವೇ ಚ ಸ್ಕಾಂದೇ-**

**ಶ್ವಪಚಾದಪಿ ಕಷ್ಟತ್ವಂ ಬ್ರಹ್ಮೇಶಾನಾದಯಃ ಸುರಾಃ।**
**ತದೈವಾಚ್ಯುತ ಯಾಂತ್ಯೇವ ಯದೈವ ತ್ವಂ ಪರಾಙ್ಮುಖಃ॥ ಇತಿ।**

**ಬ್ರಾಹ್ಮೇ ಚ ಬ್ರಹ್ಮವೈವರ್ತೇ-**

**ನಾಹಂ ನ ಚ ಶಿವೋऽನ್ಯೇ ಚ ತಚ್ಛಕ್ತ್ಯೇಕಾಂಶಭಾಗಿನಃ।**
**ಬಾಲಃ ಕ್ರೀಡನಕೈರ್ಯದ್ವತ್ ಕ್ರೀಡತೇऽಸ್ಮಾಭಿರಚ್ಯುತಃ॥**
**ನ ಚ ವೈಷ್ಣವೇಷು ತಥಾ। ತಚ್ಚ 'ಏಷ ಮೋಹಂ' ಇತ್ಯುಕ್ತಮ್॥**

**॥ ಇತಿ ಜಿಜ್ಞಾಸಾಧಿಕರಣಮ್॥**

'ಯಂ ಕಾಮಯೇ' ಎಂಬ ಅಂಭೃಣೀಸೂಕ್ತದಲ್ಲಿ ಉಗ್ರಶಬ್ದಕ್ಕೆ ರುದ್ರ ಎಂಬ

ಅರ್ಥವನ್ನು ಮಾಡಿದರೆ ರುದ್ರನಿಗೆ ಸರ್ವೋತ್ತಮತ್ವವನ್ನು ಹೇಳುವ ಪಾಶುಪತ ಆಗಮದ ವಿರೋಧ ಬರುತ್ತದೆ ಎಂಬ ಆಕ್ಷೇಪ ಸರಿಯಲ್ಲ. ಏಕೆಂದರೆ, ವಾರಾಹಪುರಾಣದಲ್ಲಿ ಹೀಗಿದೆ- ರುದ್ರನೇ, ನಾನು ಜನರ ಮೋಹಕ್ಕೆ ಕಾರಣವಾಗುವ ನಟನೆ, ಮಾತುಗಳನ್ನು ಮಾಡಿ ಆಡುತ್ತೇನೆ. ನೀನು ಅನ್ಯಥಾ ಜ್ಞಾನವನ್ನು ಉಂಟುಮಾಡುವ ಶಾಸ್ತ್ರಗಳನ್ನು ರಚಿಸು. ಬೇರೆ ಋಷಿಗಳಿಂದಲೂ ಅಂತಹ ಶಾಸ್ತ್ರಗಳನ್ನು ಬರೆಸು. ಆ ಶಾಸ್ತ್ರದಲ್ಲಿ ನಡೆಯದಿರುವ ಘಟನೆಗಳನ್ನು ಹಾಗೂ ನನ್ನ ಗುಣಗಳನ್ನು ನಿನ್ನಲ್ಲಿ ಆರೋಪಿಸಿ ನಿರೂಪಿಸು. ಹೀಗೆ ನಿನ್ನನ್ನು ಪ್ರಸಿದ್ಧಿಗೊಳಿಸಿ ನನ್ನನ್ನು ಮರೆಮಾಚು, ಎಂದು.

ವ್ಯಾಸರು ರಚಿಸಿರುವ ಶಿವಪಾರಮ್ಯವನ್ನು ಸಾರುವ ಸ್ಕಾಂದಪುರಾಣದಲ್ಲೂ ಹೀಗಿದೆ- ಎಲೈ ಅಚ್ಯುತನೆ, ''ನೀನು ಅನುಗ್ರಹೋನ್ಮುಖನಾಗದಿದ್ದರೆ ಬ್ರಹ್ಮರುದ್ರಾದಿದೇವತೆಗಳು ಶ್ವಪಚರಾದ ಅತ್ಯಂತ ನೀಚರಿಗಿಂತಲೂ ಕಷ್ಟವಾದ ಪರಿಸ್ಥಿತಿಯನ್ನು ಎದುರಿಸಬೇಕಾಗು ತ್ತದೆ''.

ಚತುರ್ಮುಖ ಬ್ರಹ್ಮನ ಪಾರಮ್ಯವನ್ನು ಸಾರುವ ಬ್ರಾಹ್ಮಪುರಾಣದಲ್ಲೂ ಹೀಗಿದೆ- ''ನನಗಾಗಲೀ (ಬ್ರಹ್ಮದೇವ) ಶಿವನಿಗಾಗಲೀ, ಇತರ ದೇವತೆಗಳಿಗೇ ಆಗಲಿ ಆ ಶ್ರೀಹರಿ ಗಿರುವ ಸಾಮರ್ಥ್ಯದ ಒಂದಂಶವೂ ಇಲ್ಲ''.

ಶೈವ, ಬ್ರಾಹ್ಮ ಪುರಾಣಗಳಂತೆ ವೈಷ್ಣವ ಪುರಾಣಗಳಲ್ಲಿ ವಿಷ್ಣುವಿಗಿಂತ ಇತರರಿಗೆ ಉತ್ತಮತ್ವವನ್ನು ಹೇಳಲಾಗಿಲ್ಲ. ಕೆಲವೆಡೆ ಅಂತಹ ಪ್ರಸಂಗಗಳಿದ್ದರೂ, ಅದು ಹಿಂದೆ ಹೇಳಿದಂತೆ, ಅಯೋಗ್ಯರನ್ನು ವ್ಯಾಮೋಹಗೊಳಿಸಲು ಹೇಳಿದ ಮಾತು.

**ವಿವರಣೆ :** ಹಿಂದೆ ಅಂಭೃಣೀ ಸೂಕ್ತದಲ್ಲಿ ''ಉಗ್ರಂ ಕೃಣೋಮಿ'' ಎಂದು ಲಕ್ಷ್ಮೀದೇವಿ ಹೇಳಿದ ಮಾತಿನಲ್ಲಿ ಉಗ್ರನೆಂದರೆ ರುದ್ರ ಎಂದು ಅರ್ಥಮಾಡಲು ಬಾಧಕಗಳಿಲ್ಲ ಎನ್ನಲಾಗಿತ್ತು. ಅದಕ್ಕೆ ಅಂತಹ ಬಾಧಕವಿದೆ ಎಂಬ ಆಕ್ಷೇಪವನ್ನು ಇಲ್ಲಿ ಪರಿಹರಿಸಲಾಗಿದೆ.

ಅಲ್ಲಿ 'ಉಗ್ರ' ಪದಕ್ಕೆ ರುದ್ರ ಎಂಬ ಅರ್ಥವನ್ನು ಮಾಡಿದರೆ ಉಗ್ರ ಲಕ್ಷ್ಮೀದೇವಿಯ ಅಧೀನ ಎಂದಂತಾಗುತ್ತದೆ. ಆದರೆ ಪಾಶುಪತಾಗಮ ರುದ್ರನೇ ಸರ್ವೋತ್ತಮನೆಂದು ಹೇಳುತ್ತದೆ. ಅದಕ್ಕೆ ವಿರುದ್ಧವಾದುದರಿಂದ ಅಂಭೃಣೀ ಸೂಕ್ತದಲ್ಲಿ ಉಗ್ರನೆಂದರೆ ರುದ್ರನಲ್ಲ ಎಂದು ಆಕ್ಷೇಪ. ''ಪಾಶುಪತಾಗಮ ವಸ್ತುಸ್ಥಿತಿಯನ್ನು ಹೇಳಲು ಹೊರಟ ಗ್ರಂಥವಲ್ಲ. ವಿಷ್ಣುವಿನ ಆಜ್ಞೆಯಂತೆ ರುದ್ರದೇವರು ಅಯೋಗ್ಯರಿಗೆ ಮೋಹವನ್ನು ಉಂಟುಮಾಡಲು ರಚಿಸಿದ ಗ್ರಂಥ ಅದು. ಆದ್ದರಿಂದ ಅದರಲ್ಲಿ ಹೇಳಿದ ವಿಷಯವನ್ನು ತತ್ತ್ವವೆಂದು ಪರಿಗಣಿಸಬಾರದು.'' ಎಂದು ಆಚಾರ್ಯರು ನೀಡಿದ ಉತ್ತರ.

**2.** ವರಾಹ ಪುರಾಣದಲ್ಲಿ ಪರಮಾತ್ಮ ಮೋಹವನ್ನೂ ರುದ್ರದೇವ ಮೋಹಕ ಶಾಸ್ತ್ರವನ್ನೂ ಸೃಜಿಸಿದ್ದಾರೆ ಎಂದಿದೆ. ಪರಮಾತ್ಮ ಸೃಷ್ಟಿಮಾಡಿದ ಮೋಹವೆಂದರೆ

''ಮೋಹಕಾರಣಂ ಅನಾದಿಕರ್ಮ - ವಾಸನಾರೂಪಂ'' ಎಂದು ತತ್ತ್ವಪ್ರದೀಪದಲ್ಲಿದೆ. ವಿಪರೀತ ಜ್ಞಾನಕ್ಕೆ ಕಾರಣವಾದ ಕರ್ಮದಿಂದಾದ ಸಂಸ್ಕಾರವೇ ಪರಮಾತ್ಮ ಸೃಷ್ಟಿಮಾಡಿದ ಮೋಹ ಎಂದರ್ಥ. ಶ್ರೀಜಯತೀರ್ಥರು - ''ಮುಹ್ಯತೇ ಅನೇನ ಜನಃ ಇತಿ ಮೋಹಃ। ನಟನಂ, ವಂಚನಂ ವಾ'' ಎಂದಿದ್ದಾರೆ. ಮೋಹ ಅಂದರೆ ನಟನೆ- ಸ್ವಾಭಾವಿಕ ರೂಪವನ್ನು ಮುಚ್ಚಿ ಅನ್ಯಥಾಸ್ವರೂಪದ ಪ್ರದರ್ಶನ; ಕೃಷ್ಣ ತನ್ನ ಸರ್ವೋತ್ತಮತ್ವವನ್ನು ಮುಚ್ಚಿ ಗೋಕುಲದಲ್ಲಿ ಬಾಲಲೀಲೆಯನ್ನು ನಟಿಸಿದ್ದು ಮೋಹ. ''ಅವಿದ್ಯಮಾನಕಥನಂ ವಂಚನಂ'' ''ಇಲ್ಲದಿದ್ದುದನ್ನು ಹೇಳುವುದು ವಂಚನೆ'' ಎಂದಿದ್ದಾರೆ.

**3.** 'ಅತಥ್ಯಾನಿ' 'ವಿತಥ್ಯಾನಿ' - ನಡೆಯದ ಘಟನೆಯನ್ನು ನಿರೂಪಿಸುವುದು ಅತಥ್ಯ. ಪಾಶುಪತದ ಸೇತುಮಾಹಾತ್ಮ್ಯ ಭಾಗದಲ್ಲಿ ಹೀಗೊಂದು ಕಥೆ ಇದೆ- ಬ್ರಹ್ಮ-ವಿಷ್ಣು ಇವರಿಬ್ಬರಲ್ಲಿ 'ಯಾರು ಸೃಷ್ಟಿಕರ್ತ' ಎನ್ನುವ ಕುರಿತು ವಿವಾದ ಬೆಳೆಯಿತು. ಇಬ್ಬರೂ ರುದ್ರನ ಬಳಿ ಬಂದರು. ತನ್ನ ಆದ್ಯಂತಗಳನ್ನು ಶೋಧನೆ ಮಾಡುವಂತೆ ರುದ್ರದೇವ ಅವರಿಬ್ಬರಿಗೆ ಆದೇಶಿಸಿದ. ವಿಷ್ಣು ಕೂರ್ಮರೂಪದಿಂದ ರುದ್ರನ ಮೂಲಶೋಧನೆಗೆ ಹೊರಟ. ಬ್ರಹ್ಮ ಹಂಸರೂಪದಿಂದ ರುದ್ರನ ಅಂತಶೋಧನೆಗಾಗಿ ಹೊರಟ. ವಿಷ್ಣು ಮೂಲವನ್ನು ಶೋಧಿಸಿ ಬಂದ. ಬ್ರಹ್ಮ ತಾನು ಅಂತವನ್ನು ಶೋಧಿಸದೆಯೇ ಶೋಧಿಸಿದೆನೆಂದು ಸುಳ್ಳು ಹೇಳಿದ. ಅದಕ್ಕೆ ಕೇತಕೀ ಪುಷ್ಪ ಮತ್ತು ಹಸುಗಳು ಸಾಕ್ಷಿಯಾಗಿ ನಿಂತರು. ರುದ್ರದೇವ, ಸುಳ್ಳು ಹೇಳಿದ ಈ ಮೂವರನ್ನೂ ಶಪಿಸಿದ. ಹಸುವಿನ ಮುಂಭಾಗ ಅಪವಿತ್ರವಾಗುವಂತೆಯೂ, ಕೇತಕೀ ಪುಷ್ಪವು ತನಗೆ ಅಗ್ರಾಹ್ಯವೆಂದೂ, ಬ್ರಹ್ಮನಿಗೆ ದೇವಾಲಯದಲ್ಲಿ ಪೂಜೆ ಲಭ್ಯವಾಗದಂತೆಯೂ ರುದ್ರನ ಶಾಪ.

ರುದ್ರನ ಸಾರ್ವಭೌಮತ್ವವನ್ನು ಸ್ಥಾಪಿಸುವ ಈ ಘಟನೆ ಕಟ್ಟು ಕಥೆ. ಅದನ್ನು ವಿಷ್ಣುವಿನ ಆಜ್ಞೆಯಂತೆ ರುದ್ರದೇವರು ನಿರೂಪಿಸಿದ್ದಾರೆ.

- ವಿತಥ್ಯ - ''ತತೋ ವಿಗತತ್ತ್ವೇ ಸತಿ ತಥ್ಯಾನಿ''

ಯಾವ ಮಹಿಮೆಯನ್ನು ಯಾರಲ್ಲಿ ಹೇಳಲಾಗಿದೆಯೋ ಅದು ಅವನಲ್ಲಿ ತಥ್ಯವಲ್ಲ, ಇನ್ನೊಬ್ಬನಲ್ಲಿ ತಥ್ಯ. ಪಾಶುಪತಾಗಮ ರುದ್ರನಲ್ಲಿ ಹೇಳಿದ ಸ್ವಾತಂತ್ರ್ಯ ವಿಷ್ಣುವಿನಲ್ಲಿ ತಥ್ಯ, ರುದ್ರನಲ್ಲಿ ಮಿಥ್ಯಾ. ಶ್ರೀಹರಿಯ ಆಜ್ಞೆಯಂತೆ ರುದ್ರದೇವರು ಈ ಕಾರ್ಯಗಳನ್ನು ಮಾಡಿದ್ದಾರೆ.

**4.** ಬ್ರಹ್ಮನೇ ಸರ್ವೋತ್ತಮನೆಂದು ಹೇಳುವ ಪುರಾಣ ಬ್ರಾಹ್ಮಪುರಾಣ. ಶಿವಸರ್ವೋತ್ತಮನೆಂದು ಸಾರುವ ಪುರಾಣ ಶೈವ. ವಿಷ್ಣು ಸರ್ವೋತ್ತಮನೆನ್ನುವ ಪುರಾಣ ವೈಷ್ಣವ. ಇವುಗಳಲ್ಲಿ ಶೈವ ಮತ್ತು ಬ್ರಾಹ್ಮಪುರಾಣಗಳಲ್ಲೂ ವಿಷ್ಣುವಿಗೆ ಉತ್ತಮತ್ತ್ವವನ್ನು ಹೇಳಲಾಗಿದೆ. ಆದರೆ ವೈಷ್ಣವ ಪುರಾಣಗಳಲ್ಲಿ ಅಂತಹ ಪ್ರಸಂಗವಿಲ್ಲ. ಇದರಿಂದ ಶೈವ-ಬ್ರಾಹ್ಮಗಳಲ್ಲಿ ಹೇಳಿದ ಶಿವೋತ್ಕರ್ಷ, ಬ್ರಹ್ಮೋತ್ಕರ್ಷಗಳು ಕೇವಲ ಮೋಹಕ.

ವಿಷ್ಣೂತ್ಕರ್ಷವೇ ಅವುಗಳ ಒಳಗಿನ ಅಭಿಪ್ರಾಯ ಎಂದು ಸ್ಪಷ್ಟವಾಗುತ್ತದೆ.

**ದ್ವೈತದರ್ಶನದಲ್ಲಿ ಸೂತ್ರಾರ್ಥ** : ನಾಲ್ಕು ಅಧ್ಯಾಯಗಳಲ್ಲಿರುವ 564 ಸೂತ್ರಗಳಲ್ಲಿ ಪರಬ್ರಹ್ಮನ ವಿಚಾರವನ್ನು ಮಾಡಲಾಗಿದೆ. ಅದರ ಆವಶ್ಯಕತೆಯನ್ನು ಮೊದಲ ''ಜಿಜ್ಞಾಸಾ ಸೂತ್ರ'' ಹೇಳುತ್ತಿದೆ. ಹೀಗೆ ಈ ಸೂತ್ರ ಸಮಗ್ರ ಬ್ರಹ್ಮಸೂತ್ರಕ್ಕೆ ತಳಹದಿಯಾಗಿದೆ.

**ಪೂರ್ವಪಕ್ಷ :** ''ಅಯಮಾತ್ಮಾ ಬ್ರಹ್ಮ'' ಜೀವಾತ್ಮನೇ ಬ್ರಹ್ಮ. ಅಂತಹ ಬ್ರಹ್ಮನ ಅರ್ಥಾತ್ ನಮ್ಮ ತಿಳುವಳಿಕೆ ನಮಗೆ ಇದ್ದೇ ಇದೆ. ತಿಳಿದ ವಿಷಯವನ್ನು ಚರ್ಚಿಸುವುದು ಅನಾವಶ್ಯಕ. ಅಂದಮೇಲೆ ಈ ಬ್ರಹ್ಮಸೂತ್ರಗಳು ವ್ಯರ್ಥ. ಅಥವಾ ಬ್ರಹ್ಮರೆನಿಸಿದ ನಮ್ಮನ್ನು ನಾವು ತಿಳಿದಿದ್ದರೂ ಅದರಿಂದಾಗುವ ದೊಡ್ಡ ಲಾಭವೇನೂ ಇಲ್ಲ. ಅಂದಮೇಲೆ ಸೂತ್ರಗಳಲ್ಲಿ ಬ್ರಹ್ಮನ ಚರ್ಚೆ ವ್ಯರ್ಥ.

**ಸಿದ್ಧಾಂತ :** ಜೀವಾತ್ಮನೇ ಬ್ರಹ್ಮನಾದರೆ ಈ ಆಕ್ಷೇಪ ಸರಿ. ಆದರೆ ಗುಣಪೂರ್ಣವಾದ ಚೇತನವೇ ಬ್ರಹ್ಮಶಬ್ದದ ಅರ್ಥ. ಜೀವಾತ್ಮ ದೋಷಪೂರ್ಣನಾದುದರಿಂದ ಬ್ರಹ್ಮನಲ್ಲ. ಆದ್ದರಿಂದ ಜೀವ ಸಿದ್ಧನಾದರೂ ಅವನಿಗಿಂತ ಭಿನ್ನನಾದ ಬ್ರಹ್ಮನ ಬಗ್ಗೆ ನಮಗೇನೂ ಗೊತ್ತಿಲ್ಲವಾದುದರಿಂದ ಅವನ ಕುರಿತು ವಿಚಾರ ಮಾಡುವ ಅಗತ್ಯವಿದೆ. ಅವನನ್ನು ತಿಳಿದು ಧ್ಯಾನಿಸಿದರೆ ಅವನ ಪ್ರಸಾದದಿಂದ ಮೋಕ್ಷವೆಂಬ ಫಲವೂ ಇದೆ. ಹೀಗೆ ಬ್ರಹ್ಮವಿಚಾರವನ್ನು ನಡೆಸುವ ಆಗತ್ಯವಿದೆ. ಅದಕ್ಕಾಗಿ ಬ್ರಹ್ಮಸೂತ್ರಗಳು ಸಾರ್ಥಕವಾಗಿವೆ.

**ಸೂತ್ರಾರ್ಥ :** ಅಥ= ಅಧಿಕಾರ ಸಿದ್ಧವಾದ ಮೇಲೆ ಅತಃ= ಅಕಾರವಾಚ್ಯನಾದ ಪ್ರಸನ್ನನಾದ ಬ್ರಹ್ಮನಿಂದ ಅತಃ= ಮೋಕ್ಷರೂಪವಾದ ಪ್ರಯೋಜನವಿರುವುದರಿಂದ ಓಂ= ಗುಣಪೂರ್ಣನಾದ ಬ್ರಹ್ಮ= ಪರಮಾತ್ಮನ ಜಿಜ್ಞಾಸಾ= ಶ್ರವಣ, ಮನನ, ಧ್ಯಾನಾದಿಗಳು ಕರ್ತವ್ಯಾ= ಮಾಡಲ್ಪಡಬೇಕು.

ಸೂತ್ರದಲ್ಲಿ ಬ್ರಹ್ಮವಾಚಕವಾದ 'ಓಂ' 'ಬ್ರಹ್ಮ' ಎಂಬ ಎರಡು ಪದಗಳಿವೆ. ಎರಡು ಪದಗಳೂ ರೂಢ ಮತ್ತು ಯೌಗಿಕ. 'ಗುಣಪೂರ್ಣ' ಎಂಬ ಅರ್ಥ ಮಾಡಿದರೆ ಯೌಗಿಕ. ಪರಮಾತ್ಮನನ್ನೇ ಜ್ಞಾನಿಗಳು ಆ ಹೆಸರಿನಿಂದ ಕರೆಯುವುದರಿಂದ ರೂಢ. ಸೂತ್ರಕ್ಕೆ ಅರ್ಥವನ್ನು ಹೇಳುವಾಗ ಒಂದನ್ನು ರೂಢವೆಂದೂ ಮತ್ತೊಂದನ್ನು ಯೌಗಿಕವೆಂದೂ ಪರಿಗಣಿಸಬೇಕು. ಓಂಕಾರ ರೂಢವಾದರೆ ಬ್ರಹ್ಮ ಶಬ್ದ ಯೌಗಿಕ. ಬ್ರಹ್ಮಶಬ್ದ ರೂಢವಾದರೆ ಓಂಕಾರ ಯೌಗಿಕ. ಹೀಗೆ ಪ್ರಥಮ ಸೂತ್ರಾರ್ಥದೊಂದಿಗೆ ಓಂಕಾರದ ಅರ್ಥಕ್ಕೂ ಅನ್ವಯವಿದೆ.

ಎಲ್ಲ ಸೂತ್ರಗಳೂ ಬ್ರಹ್ಮ ವಿದ್ಯೆಯಾದುದರಿಂದ ಅವುಗಳ ಆದಿ- ಅಂತ್ಯಗಳಲ್ಲಿ ಓಂಕಾರವನ್ನು ಉಚ್ಚರಿಸಬೇಕು. ಇದಕ್ಕೆ ಪುಣ್ಯಲಾಭವೇ ಫಲ. ಆದರೆ, ಮೊದಲ ಸೂತ್ರದಲ್ಲಿ ಪುಣ್ಯಲಾಭ ಮಾತ್ರವಲ್ಲದೆ ಅದರ ಅರ್ಥಕ್ಕೆ ಸೂತ್ರಾರ್ಥದಲ್ಲಿ ಅನ್ವಯವೂ ಇದೆ. ಆದ್ದರಿಂದ ಓಂಕಾರ ದೃಷ್ಟ- ಅದೃಷ್ಟಾರ್ಥ. ಇವೆರಡೂ ಪ್ರಯೋಜನ ಆರಂಭದ ಒಂದೇ ಓಂಕಾರದಿಂದ

ಸಿಗುತ್ತದೆ ಎಂದು ಒಂದು ಮತ. ಅದಕ್ಕಾಗಿ ಪ್ರತ್ಯೇಕ ಎರಡು ಓಂಕಾರಗಳು ಬೇಕು ಎಂಬ ಇನ್ನೊಂದು ಮತ.

**ಶಾಂಕರಭಾಷ್ಯದಲ್ಲಿ ಹೇಳಿದ ಸೂತ್ರಾರ್ಥ :** ಶಾಂಕರಭಾಷ್ಯದ ಪ್ರಾರಂಭದಲ್ಲಿ ಈ ಜಗತ್ತು ಮಿಥ್ಯಾ; ಜೀವರು ಬ್ರಹ್ಮಸ್ವರೂಪರು ಎಂದು ಪ್ರತಿಪಾದಿಸಲಾಗಿದೆ. ಇದಕ್ಕೆ ಅಧ್ಯಾಸಭಾಷ್ಯವೆಂದು ಹೆಸರು. 'ಉಪನಿಷತ್ತುಗಳು ನಿರ್ಗುಣವಾದ ಆತ್ಮತತ್ತ್ವ ಮಾತ್ರ ಸತ್ಯ ಎಂದು ಹೇಳುತ್ತವೆ' ಎಂದು ಬ್ರಹ್ಮಸೂತ್ರದಲ್ಲಿ ನಿರ್ಣಯಿಸಲಾಗಿದೆ. ಆದರೆ, ಅನುಭವದಿಂದ ನಮಗೆ ಆತ್ಮನಲ್ಲಿ ಅನೇಕ ಗುಣದೋಷಗಳು ಸಿದ್ಧವಾಗಿವೆ. ನಾವೇ ಬ್ರಹ್ಮರು. ಆದ್ದರಿಂದ ಬ್ರಹ್ಮನಲ್ಲೂ ಗುಣದೋಷಗಳಿರಬೇಕು. ಹೀಗಾಗಿ ಅನುಭವಕ್ಕೆ ತೀರಾ ವಿಸಂಗತವಾದ ಪ್ರಮೇಯವನ್ನು ಉಪನಿಷತ್ತುಗಳಲ್ಲಿ ಹೇಳಿದರೆ ಅದು ಮನವರಿಕೆ ಯಾಗುವುದಿಲ್ಲ. ಅದಕ್ಕಾಗಿ ನಮ್ಮ ಪ್ರತ್ಯಕ್ಷದಿಂದ ಗ್ರಹಿಸಲ್ಪಡುವ ಈ ಜಗತ್ತು ಆತ್ಮನ ಗುಣದೋಷಗಳು ಮಿಥ್ಯಾ ಎಂದು ಆರಂಭದ ಭಾಷ್ಯದಲ್ಲಿ ಸಾಧಿಸಲಾಗಿದೆ. ಇದರಿಂದ ನಿರ್ಗುಣ ಆತ್ಮ ತತ್ತ್ವವೂ ಒಂದು ಇರಬಹುದು ಎಂಬ ಕಲ್ಪನೆ ಮೂಡುತ್ತದೆ. ಆಮೇಲೆ ಸೂತ್ರಗಳು ಯುಕ್ತಿಯಿಂದ ಅಂತಹ ತತ್ತ್ವವನ್ನು ಸಾಧಿಸಿದರೆ ಮನವರಿಕೆ ಯಾಗುತ್ತದೆ. ಹೀಗೆ, ಈ ಅಧ್ಯಾಸಭಾಷ್ಯ ಸಮಗ್ರ ಬ್ರಹ್ಮಸೂತ್ರಗಳಿಗೆ ಉಪೋದ್ಘಾತ ರೂಪವಾಗಿದೆ.

**ಪೂರ್ವಪಕ್ಷ-ಸಿದ್ಧಾಂತ :** ಜನಸಾಮಾನ್ಯರಿಗೂ ಆತ್ಮ ತತ್ತ್ವದ ಅರಿವು ಇದೆ. ಆದರೆ ಅಂತಹ ಆತ್ಮ ಯಾರು? ಅವನ ಸ್ವರೂಪವೇನು? ಕೆಲವರು ದೇಹವೇ ಆತ್ಮನೆಂದರೆ ಇನ್ನು ಕೆಲವರು ದೇಹದಲ್ಲಿರುವ ಇಂದ್ರಿಯಗಳೇ ಆತ್ಮ ಎನ್ನುತ್ತಾರೆ. ದೇಹೇಂದ್ರಿಯಗಳಿಗಿಂತ ವಿಭಿನ್ನನಾದ ಆತ್ಮನೊಬ್ಬನಿದ್ದಾನೆ ಎಂದು ಹೇಳುವವರಲ್ಲಿಯೂ ಆತ್ಮನಲ್ಲಿ ಕ್ರಿಯಾಶಕ್ತಿ, ಜ್ಞಾನಶಕ್ತಿ ಎರಡೂ ಇವೆ ಎಂದು ಕೆಲವರು ಹೇಳಿದರೆ, ಇನ್ನು ಕೆಲವರು ಕ್ರಿಯಾಶಕ್ತಿ ಇಲ್ಲ, ಜ್ಞಾನಶಕ್ತಿ ಮಾತ್ರ ಇದೆ ಎನ್ನುತ್ತಾರೆ. ಹೀಗೆ ಅನೇಕ ಮತಸಿದ್ಧಾಂತಗಳ ಗೊಂದಲವಿರುವುದರಿಂದ ಎಲ್ಲರಿಗೂ ಆತ್ಮನ ಸಾಮಾನ್ಯ ಜ್ಞಾನವಿದ್ದರೂ ಅದರ ಸರಿಯಾದ ಜ್ಞಾನ ಯಾರಿಗೂ ಇಲ್ಲ. ಹೀಗಾಗಿ ಆತ್ಮ ಸ್ವರೂಪದ ವಿಮರ್ಶೆ ಅಗತ್ಯವಾಗಿದೆ. ಆದ್ದರಿಂದ ಬ್ರಹ್ಮನ ಕುರಿತು ವಿಚಾರದ ಆವಶ್ಯಕತೆಯನ್ನು ಪ್ರತಿಪಾದಿಸಲು ಪ್ರಥಮ ಸೂತ್ರವಿದೆ.

ಅಥ=ಬ್ರಹ್ಮ ಸತ್ಯ, ಜಗತ್ತು ಮಿಥ್ಯಾ ಎಂಬ ವಿವೇಕ, ಐಹಿಕ-ಆಮುಷ್ಮಿಕ ಫಲಾನುಭವದಲ್ಲಿ ವೈರಾಗ್ಯ, ಶಮಾದಿ ಗುಣಗಳು, ಮೋಕ್ಷದಲ್ಲಿ ಇಚ್ಛೆ ಈ ಗುಣಗಳು ಬಂದ ಮೇಲೆ ಅತಃ=ಕರ್ಮಜನ್ಯವಾದ ಫಲ ಅನಿತ್ಯ, ಜ್ಞಾನಜನ್ಯವಾದ ಫಲ ನಿತ್ಯ ಎಂದು ಉಪನಿಷತ್ತು ಹೇಳುತ್ತಿರುವುದರಿಂದ ಬ್ರಹ್ಮಜಿಜ್ಞಾಸಾ=ಬ್ರಹ್ಮನ ಕುರಿತು ವಿಚಾರವನ್ನು ನಡೆಸಬೇಕು. ಇದು ಶಾಂಕರಸಿದ್ಧಾಂತದಂತೆ ಈ ಸೂತ್ರದ ಅರ್ಥ.

**ಚಂದ್ರಿಕಾ ಗ್ರಂಥದಲ್ಲಿ ವಿಮರ್ಶೆ :** ಹಗ್ಗದಲ್ಲಿ ಹಾವಿನ ಹೋಲಿಕೆ ಹಾಗೂ ಹಾವಿನಲ್ಲಿಲ್ಲದ ಜಡತ್ವಾದಿ ಅಸಾಧಾರಣ ಧರ್ಮಗಳೂ ಇವೆ. ಅಸಾಧಾರಣ ಗುಣಗಳು ತೋರದೆ ಹಾವಿನ ಹೋಲಿಕೆ ಮಾತ್ರ ಕಂಡರೆ ''ಹಾವು'' ಎಂಬ ಭ್ರಮೆ ಬರುತ್ತದೆ.

ಬೆಳಕಿನಲ್ಲಿ ನೋಡಿದಾಗ ಅದರ ಅಸಾಧಾರಣ ಧರ್ಮ ತಿಳಿದು ''ಇದು ಹಾವಲ್ಲ; ಹಗ್ಗ'' ಎಂಬ ಸರಿಯಾದ ತಿಳುವಳಿಕೆ ಉಂಟಾಗುತ್ತದೆ. ಇದರಂತೆ ಆತ್ಮ ತತ್ತ್ವವನ್ನು ತಪ್ಪಾಗಿ ಗ್ರಹಿಸಬೇಕಾದರೂ ಸರಿಯಾಗಿ ಗ್ರಹಿಸಬೇಕಾದರೂ ಅದರಲ್ಲಿ ಗುಣಗಳಿರಬೇಕು. ನಿರ್ಗುಣವಾದ ವಸ್ತುವಿನಲ್ಲಿ ಭ್ರಾಂತಿಯೂ ಬರಲಾರದು. ಪ್ರಮಾಣವೂ ಇರಲಾರದು. ಆದ್ದರಿಂದ ಅದ್ವೈತದರ್ಶನದಲ್ಲಿ ಈ ಸೂತ್ರಕ್ಕೆ ಹೇಳಿದ ಪೂರ್ವಪಕ್ಷವೂ ಸರಿಯಲ್ಲ. ಸಿದ್ಧಾಂತವೂ ಸರಿಯಲ್ಲ.

## ರಾಮಾನುಜ ಭಾಷ್ಯದಲ್ಲಿ ಹೇಳಿದ ಸೂತ್ರಾರ್ಥ

ವಿಚಾರಾತ್ ಕರ್ಮಣಾಂ ಸ್ವಲ್ಪಂ ಫಲಂ ಜ್ಞಾತ್ವಾ ಮುಮುಕ್ಷುಣಾ।
ಕರ್ತವ್ಯಾ ಬ್ರಹ್ಮಜಿಜ್ಞಾಸಾ ಫಲಸ್ಯಾನಂತ್ಯಮಿಚ್ಛತಾ॥

ಹಿರಿಯರು ಮಾಡಿದ ಶಬ್ದಪ್ರಯೋಗ, ಅದನ್ನು ಕೇಳಿ ಅದರಂತೆ ನಡೆಯುವ ಕಿರಿಯರನ್ನು ನೋಡಿ ಮಕ್ಕಳು 'ಈ ಶಬ್ದಕ್ಕೆ ಇದು ಅರ್ಥ' ಎಂದು ತಿಳಿಯುತ್ತಾರೆ. ಹಿರಿಯರ ವಾಕ್ಯ ಆಜ್ಞಾರೂಪದಲ್ಲಿರುವುದರಿಂದ ಅವರು ಹೇಳುವ ಕ್ರಿಯಾವಿಶೇಷಗಳೇ ವಾಕ್ಯದ ಉದ್ದೇಶಿತ ಅರ್ಥ. ಆದ್ದರಿಂದ ಕ್ರಿಯಾವಿಶೇಷವೇ ವಾಕ್ಯದಿಂದ ತಿಳಿಯುತ್ತದೆ. ಕ್ರಿಯೆ ಸಾಧ್ಯವಸ್ತು; ಬ್ರಹ್ಮ ಸಿದ್ಧವಸ್ತು. ಆದ್ದರಿಂದ ಬ್ರಹ್ಮ ವೇದಾಂತ ತಾತ್ಪರ್ಯ ವಿಷಯನಲ್ಲ, ವೇದಾಂತಗಳು ಬ್ರಹ್ಮನನ್ನು ತಿಳಿಸಲು ಹೊರಟಿಲ್ಲ. ಈ ಆಕ್ಷೇಪಕ್ಕೆ ಉತ್ತರವಾಗಿ ಮೊದಲ ಸೂತ್ರ ಹೊರಟಿದೆ. ಚಿಕ್ಕಮಕ್ಕಳು ಭಾಷೆಯನ್ನು ಕಲಿಯುವುದು ಹಿರಿಯರು ನಡೆಸುವ ವ್ಯವಹಾರದಿಂದಲ್ಲ. ಮುದ್ದಿನ ತಂದೆ ತಾಯಂದಿರನ್ನು ತೋರಿಸಿ ''ಇವನು ತಂದೆ, ಇವಳು ತಾಯಿ'' ಎಂದು ಹೇಳಿಸಿಕೊಂಡು ಕಲಿಯುತ್ತವೆ. ಆದ್ದರಿಂದ ವಾಕ್ಯವು ಕ್ರಿಯೆಯನ್ನೆ ತಿಳಿಸಬೇಕೆಂದಿಲ್ಲ, ಸಿದ್ಧವಾದ ಪ್ರಮೇಯಗಳನ್ನೂ ತಿಳಿಸಿಕೊಡಬಹುದು. ಹೀಗಾಗಿ ಬ್ರಹ್ಮ ಉಪನಿಷತ್ತಿನಿಂದ ಪ್ರತಿಪಾದ್ಯನೆನ್ನಲು ಭಾದಕವಿಲ್ಲ.

ಅಥ=ಪೂರ್ವಮೀಮಾಂಸಾ ಸೂತ್ರಗಳಲ್ಲಿ ಕರ್ಮವಿಚಾರ ನಡೆಸಿದ ಮೇಲೆ ಅತಃ=ಕರ್ಮದ ಸ್ವರೂಪ, ಫಲಗಳು ತಿಳಿದುದರಿಂದ ಬ್ರಹ್ಮ ಜಿಜ್ಞಾಸಾ=ಅನಂತ ಸ್ಥಿರ ಫಲಕ್ಕೆ ಕಾರಣವಾದ ಬ್ರಹ್ಮನ ವಿಚಾರವನ್ನು ಮಾಡಬೇಕು.

**ಚಂದ್ರಿಕಾದಲ್ಲಿ ವಿಮರ್ಶೆ :** 'ಪದಗಳಿಗೆ ಕಾರ್ಯದಲ್ಲೇ ಶಕ್ತಿಯಾದುದರಿಂದ ಸಿದ್ಧರೂಪನಾದ ಬ್ರಹ್ಮ ಶಾಸ್ತ್ರಗಮ್ಯನಲ್ಲ' ಎಂದು ಪೂರ್ವಪಕ್ಷದ ಯುಕ್ತಿ. ಈ ಯುಕ್ತಿಯನ್ನು ಸೂತ್ರದ ಯಾವ ಪದದಿಂದಲೂ ನಿರಾಕರಿಸದೆ 'ಕರ್ಮದ ಫಲ ಅಸ್ಥಿರ, ಬ್ರಹ್ಮಜ್ಞಾನದ ಫಲಸ್ಥಿರ' ಎಂದು ಹೇಳುವುದು ಅಸಂಗತ. ಸೂತ್ರಘಟಕವಾದ 'ಅತಃ' ಅಥವಾ ಅಥ ಶಬ್ದದಿಂದ ನಿರಾಸ ಮಾಡಲು ಯೋಗ್ಯವಾದ ಪೂರ್ವಪಕ್ಷ ಅದಕ್ಕನುಗುಣವಾದ ಸಿದ್ಧಾಂತಗಳನ್ನೇ ಮಾಡಬೇಕು.

**ಇಲ್ಲಿಗೆ ಜಿಜ್ಞಾಸಾಧಿಕರಣ ಮುಗಿಯಿತು.**

# ಜನ್ಮಾಧಿಕರಣ - 2

ಬ್ರಹ್ಮಣೋ ಲಕ್ಷಣಮಾಹ-

**ಓಂ ॥ ಜನ್ಮಾದ್ಯಸ್ಯ ಯತಃ ॥ ಓಂ**

ಸೃಷ್ಟಿ-ಸ್ಥಿತಿ-ಸಂಹಾರ-ನಿಯಮನ-ಜ್ಞಾನ-ಅಜ್ಞಾನ-ಬಂಧ-ಮೋಕ್ಷಾಃ ಯತಃ ।

ಉತ್ಪತ್ತಿ ಸ್ಥಿತಿ ಸಂಹಾರಾ ನಿಯತಿರ್ಜ್ಞಾನಮಾವೃತಿಃ ।

ಬಂಧಮೋಕ್ಷೌ ಚ ಪುರುಷಾತ್ ಯಸ್ಮಾತ್ ಸ ಹರಿರೇಕರಾಟ್ । ಇತಿ ಸ್ಕಾಂದೇ ।

'ಯತೋ ವಾ ಇಮಾನಿ ಭೂತಾನಿ ಜಾಯಂತೇ । ಯೇನ ಜಾತಾನಿ ಜೀವಂತಿ । ಯತ್ ಪ್ರಯಂತ್ಯಭಿಸಂವಿಶಂತಿ । ತದ್ವಿಜಿಜ್ಞಾಸಸ್ವ। ತದ್‌ಬ್ರಹ್ಮೇತಿ ॥'' (ತೈ.ಉ.3.1)

''ಯ ಉ ತ್ರಿಧಾತು ಪೃಥಿವೀ ಮುತ ದ್ಯಾಂ
ಏಕೋ ದಧಾರ ಭುವನಾನಿ ವಿಶ್ವಾ ॥'' (ಋ.ಸಂ.1.154-4)

''ಚತುರ್ಭಿಃ ಸಾಕಂ ನವತಿಂ ಚ ನಾಮಭಿಃ
ಚಕ್ರಂ ನ ವೃತ್ತಂ ವ್ಯತೀಂ ರವೀವಿಪತ್ ॥'' (ಋ.ಸಂ.155.6)

ಪರೋ ಮಾತ್ರಯಾ ತನ್ವಾ ವೃಧಾನ
ನ ತೇ ಮಹಿತ್ವಮನ್ವಶ್ನುವಂತಿ ।
ನ ತೇ ವಿಷ್ಣೋ ಜಾಯಮಾನೋ ನ ಜಾತೋ
ದೇವ ಮಹಿಮ್ನಃ ಪರಮಂತಮಾಪ ॥ (ಋ.ಸಂ.7.99.1)

ಯೋ ನಃ ಪಿತಾ ಜನಿತಾ ಯೋ ವಿಧಾತಾ
ಧಾಮಾನಿ ವೇದ ಭುವನಾನಿ ವಿಶ್ವಾ॥ (ಋ.ಸಂ.10.82.3)

ಇತ್ಯಾದಿ ಚ ॥2॥

**॥ ಇತಿ ಜನ್ಮಾಧಿಕರಣಂ ॥**

'ಜನ್ಮಾದ್ಯಸ್ಯ ಯತಃ' ಎಂಬ ಸೂತ್ರದಲ್ಲಿ ಸೂತ್ರಕಾರರು ಬ್ರಹ್ಮನ ಲಕ್ಷಣವನ್ನು ಹೇಳಿದ್ದಾರೆ.

ಸೃಷ್ಟಿ-ಸ್ಥಿತಿ-ಸಂಹಾರ-ಪ್ರೇರಣೆ-ಜ್ಞಾನ-ಅಜ್ಞಾನ-ಬಂಧ-ಮೋಕ್ಷ ಇವುಗಳು ಯಾರಿಂದ ನಡೆಯುವುವೋ (ಅವನೇ ಬ್ರಹ್ಮ). ಸ್ಕಾಂದಪುರಾಣದಲ್ಲಿ ಇವೆಲ್ಲವೂ ಬ್ರಹ್ಮನಿಂದಲೇ ನಡೆಯುತ್ತವೆ ಎಂದು ಹೇಳಲಾಗಿದೆ- ಯಾರಿಂದ ಈ ಜಗತ್ತಿಗೆ ಉತ್ಪತ್ತಿ ಸ್ಥಿತಿ-ಸಂಹಾರ-ನಿಯಮನ-ಜ್ಞಾನ-ಅಜ್ಞಾನ-ಬಂಧ-ಮೋಕ್ಷಗಳು ನಡೆಯುವವೋ ಅಂತಹ ಶ್ರೀಹರಿ ಸ್ವತಂತ್ರ.

ಬ್ರಹ್ಮಜಿಜ್ಞಾಸೆಯನ್ನು ವಿಧಿಸಿರುವ ತೈತ್ತಿರೀಯ ಶ್ರುತಿ ಜಿಜ್ಞಾಸ್ಯ ಬ್ರಹ್ಮನಲ್ಲಿ ಈ ಲಕ್ಷಣಗಳನ್ನು ಹೇಳಿದೆ- ಯಾರಿಂದ ಈ ಚೇತನ ವರ್ಗವು ಹುಟ್ಟುವುದೋ, ಯಾರಿಂದ ಜೀವಿಸುವುದೋ, ಪ್ರಲಯಕಾಲದಲ್ಲಿ ಯಾರನ್ನು ಪ್ರವೇಶಿಸುವುದೋ, ಮೋಕ್ಷದಲ್ಲಿ ಯಾರನ್ನು ಜೀವರು ಸ್ವೇಚ್ಛೆಯಿಂದ ಪ್ರವೇಶಿಸುವರೊ, ಅದನ್ನು ಬ್ರಹ್ಮನೆಂದು ತಿಳಿದು ಶ್ರವಣ, ಮನನ, ಧ್ಯಾನಗಳನ್ನು ಮಾಡು.

ಋಕ್ ಸಂಹಿತೆ ವಿಷ್ಣುವೇ ಸ್ಥಿತಿಕರ್ತಾ ಎಂದಿದೆ- ಯಃ=ಯಾವ ವಿಷ್ಣುವು, ಏಕ ಉ=ಒಬ್ಬನೇ, ತ್ರಿಧಾತು=ಪ್ರಕೃತಿ, ಪುರುಷ, ಕಾಲಗಳ ಧಾರಕನೋ, ಪೃಥಿವೀಂ=ಭೂಮಿಯನ್ನು, ದ್ಯಾಂ=ಲಕ್ಷ್ಮೀದೇವಿಯನ್ನೂ ಉತ=ಹಾಗೂ ವಿಶ್ವಾ=ಎಲ್ಲ, ಭುವನಾನಿ=ಲೋಕಗಳನ್ನೂ ದಾಧಾರ=ಧರಿಸಿದನು.

ಎಲ್ಲರಿಗೂ ವಿಷ್ಣುವೇ ನಿಯಾಮಕನೆಂದು ಈ ಮಂತ್ರ ಹೇಳುತ್ತದೆ- (ಸಃ=ಆ ವಿಷ್ಣುವು) ನಾಮಭಿಃ=ಕೀರ್ತಿಶಾಲಿಗಳಾದ, ಚತುರ್ಭಿಃ=ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧ ಈ ನಾಲ್ಕೂ ರೂಪಗಳಿಂದ, ನವತಿಂ=ತೊಂಭತ್ತು ವ್ಯತೀನ್=ಉತ್ತಮರಾದ ದೇವತೆಗಳನ್ನು, ವೃತ್ತಂ=ವರ್ತುಲವಾದ, ಚಕ್ರಂನ=ಚಕ್ರದಂತೆ ಅವೀವಿಪತ್=ತಿರುಗಿಸುತ್ತಾನೆ.

ವಿಷ್ಣುವಿನ ಮಹಿಮೆ ಇತರ ದೇವತೆಗಳಲ್ಲಿ ಇಲ್ಲವೆಂದೂ ಈ ಮಂತ್ರ ಹೇಳುತ್ತದೆ- ತನ್ವಾ=ದೇಹದಿಂದ, ವೃಧಾನ=ಅಪರಿಚ್ಛಿನ್ನನಾದ ವಿಷ್ಣುವೇ, ನೀನು ಮಾತ್ರಯಾ=ಪರಿಮಾಣದಿಂದ, ಪರಃ=ಅತೀತನಾಗಿದ್ದಿ (ನಿನಗೆ ಪರಿಮಿತಿ ಇಲ್ಲ) ತೇ=ನಿನ್ನ, ಮಹಿತ್ವಂ=ಜಗತ್ ಸೃಷ್ಟ್ಯಾದಿಮಹಿಮೆಯನ್ನು, ಅನು=ಮುಕ್ತರಾಗಲೀ ಅಮುಕ್ತರಾಗಲೀ ನಾಶ್ನುವಂತಿ=ಪಡೆಯುವುದಿಲ್ಲ, ಹೇ ವಿಷ್ಣೋ=ಎಲೈ ವಿಷ್ಣುವೆ, ದೇವಮಹಿಮ್ನಃ=ರಮಾ ಬ್ರಹ್ಮಾದಿ ದೇವತೆಗಳ ವೈಭವಕ್ಕೆ, ಪರಂ ಅಂತಂ=ಅಂತಿಮ ಎಲ್ಲೆ ಎನಿಸಿದ ತೇ ಮಹಿತ್ವಂ=ನಿನ್ನ ಮಹತಿಯನ್ನು ಜಾಯಮಾನಃ=ಮುಂದೆ ಹುಟ್ಟುವವನು (ನಾಪ್ನೋತಿ=ಹೊಂದಲಾರ) ಜಾತಃ=ಈ ಹಿಂದೆ ಹುಟ್ಟಿದವನು ನಾಪ=ಹೊಂದಿಲ್ಲ.

ಬ್ರಹ್ಮ ಜಗತ್ತಿಗೆ ಕಾರಣವಾಗಿರುವುದು ನೂಲು ಬಟ್ಟೆಯಾಗುವಂತೆ ಅಲ್ಲ, ಮಗನಿಗೆ ತಂದೆಯಂತೆ ಎಂದು ಈ ಮಂತ್ರ ಹೇಳುತ್ತದೆ- ''ಯಾರು ನಮಗೆಲ್ಲ ರಕ್ಷಕನೋ, ಜನಕನೋ, ವಿಶೇಷವಾಗಿ ಧಾರಕನೋ, ಅವನು ಸಕಲಲೋಕಗಳನ್ನೂ ಅವುಗಳೊಳಗಿರುವ ನಿಲಯಗಳನ್ನೂ ತಿಳಿದಿರುವನು.

ಈ ಎಲ್ಲ ಪ್ರಮಾಣಗಳು ಸೂತ್ರ ಹೇಳಿದ ವಿಷಯದಲ್ಲಿ ಆಧಾರವಾಗಿವೆ.

**ವಿವರಣೆ :** ಹಿಂದಿನ ಅಧಿಕರಣದ ಸಿದ್ಧಾಂತದ ಮೇಲೆ ಬಂದ ಆಕ್ಷೇಪಕ್ಕೆ ಪರಿಹಾರ ನೀಡುವುದರಿಂದ ಹಿಂದಿನ ಅಧಿಕರಣಕ್ಕೂ ಈ ಅಧಿಕರಣಕ್ಕೂ 'ಆಕ್ಷೇಪ' ಸಂಗತಿ. ಅಥವಾ

ಆನಂತರ್ಯಸಂಗತಿ- ಪ್ರಥಮ ಸೂತ್ರದಲ್ಲಿ ಹೇಳಿದ ಬ್ರಹ್ಮವಿಚಾರವೆಂದರೆ - ಬ್ರಹ್ಮನ ಲಕ್ಷಣ, ಬ್ರಹ್ಮನ ಬಗ್ಗೆ ಪ್ರಮಾಣ ಇವುಗಳ ವಿಚಾರ. ಅವುಗಳಲ್ಲಿ ಲಕ್ಷಣವನ್ನು ಈ ಸೂತ್ರದಲ್ಲಿ ನಿರೂಪಿಸಲಾಗುತ್ತದೆ.

'ತದ್ವಿಜಿಜ್ಞಾಸಸ್ವ' ಇತ್ಯಾದಿ ತೈತ್ತಿರೀಯೋಪನಿಷತ್ತೇ, ಹಿಂದಿನ ಅಧಿಕರಣದಂತೆ, ಈ ಅಧಿಕರಣಕ್ಕೂ ವಿಷಯವಾಕ್ಯ. ಹಿಂದೆ ಆ ವಾಕ್ಯಕ್ಕೆ ಹೇಳಿದ ಅರ್ಥದ ಮೇಲೆ ಬಂದ ಆಕ್ಷೇಪಕ್ಕೆ ಸಮಾಧಾನ ನೀಡುವುದರಿಂದ ಶ್ರುತಿ ಸಂಗತಿಯೂ ಆಕ್ಷೇಪ ರೂಪವಾದುದು. ನಿರ್ಣೇಯ ಬ್ರಹ್ಮನ ಲಕ್ಷಣದ ಬಗ್ಗೆ ವಿಚಾರವಾದುದರಿಂದ ಈ ಬ್ರಹ್ಮಮೀಮಾಂಸಾಶಾಸ್ತ್ರಕ್ಕೆ ಇದು ಸಂಗತವಾಗಿದೆ. ಹೀಗೆ ಶಾಸ್ತ್ರದಲ್ಲಿ ಅಂತರ್ಭಾವ ಸಂಗತಿ.

**2. ಪೂರ್ವಪಕ್ಷ :** 'ತದ್ವಿಜಿಜ್ಞಾಸಸ್ವ ತದ್ಬ್ರಹ್ಮೇತಿ' ಎಂಬ ತೈತ್ತಿರೀಯ ಶ್ರುತಿಯಲ್ಲಿ ಹೇಳಿದ ಬ್ರಹ್ಮ ಪರಮಾತ್ಮನಲ್ಲ, ಜೀವ. ಏಕೆಂದರೆ ಬ್ರಹ್ಮ ಶಬ್ದದ ರೂಢಾರ್ಥ ಜೀವ. ಕೋಶಗಳಲ್ಲಿ ಬ್ರಹ್ಮ ಎಂಬ ಶಬ್ದವನ್ನು ಜೀವ ಎಂಬ ಅರ್ಥದಲ್ಲೇ ಹೇಳಲಾಗಿದೆ. ಈ ಶಬ್ದವನ್ನು ಪರಮಾತ್ಮನಲ್ಲಿ ಪ್ರಯೋಗಿಸಲು ನಿಮಿತ್ತ- ಬೃಹ ಎಂಬ ಧಾತುವಿಗೆ 'ಪೂರ್ಣತೆ' ಎಂದು ಅರ್ಥ. ಅದಕ್ಕೆ ಮನಿನ್ ಪ್ರತ್ಯಯ ಬಂದು 'ಬ್ರಹ್ಮ' ಎಂಬ ರೂಪವಾಗಿದೆ. 'ಪೂರ್ಣತೆ ಉಳ್ಳವನು' ಎಂಬ ಅರ್ಥವನ್ನು ಅನುಸರಿಸಿ ಅದನ್ನು ಪರಮಾತ್ಮನಲ್ಲಿ ಪ್ರಯೋಗಿಸಲಾಗುತ್ತದೆ. ಆದರೆ ಇದು ಶಾಸ್ತ್ರಸಮ್ಮತ ಕ್ರಮವಲ್ಲ. 'ಪಂಕಜ' ಎಂದರೆ ಕಮಲ. ಆದರೆ 'ಪಂಕ+ಜ=ಕೆಸರಿನಲ್ಲಿ ಹುಟ್ಟಿದ್ದು' ಎಂಬ ಅರ್ಥದಲ್ಲಿ ಕೆಸರಿನಲ್ಲಿ ಹುಟ್ಟಿದ ಹುಳುಗಳನ್ನು 'ಪಂಕಜ' ಎಂದು ಹೆಸರಿಸಬಾರದು. ಏಕೆಂದರೆ ರೂಢಿ ಮತ್ತು ಯೋಗಗಳಲ್ಲಿ ರೂಢಿಗೇ ಪ್ರಾಶಸ್ತ್ಯ. ಆದ್ದರಿಂದ 'ತದ್ವಿಜಿಜ್ಞಾಸಸ್ವ' ಎಂಬ ಶ್ರುತಿಯಲ್ಲಿ ಬ್ರಹ್ಮ ಶಬ್ದಕ್ಕೆ ಜೀವ ಎಂದೇ ಮುಖ್ಯಾರ್ಥ. ಹೀಗಾಗಿ, ಜೀವನೇ ಜಿಜ್ಞಾಸ್ಯ. ಆದರೆ ಅವನ ವಿಚಾರದಿಂದ ಮೋಕ್ಷಫಲ ಸಿದ್ಧವಾಗುವುದಿಲ್ಲ. ಹೀಗೆ ನಿಷ್ಫಲವಾದುದರಿಂದ ಜಿಜ್ಞಾಸೆ ಸರಿಯಲ್ಲ.

ಪ್ರಥಮ ಸೂತ್ರಭಾಷ್ಯದಲ್ಲಿ ಆಚಾರ್ಯರು 'ತದೇವ ಬ್ರಹ್ಮ ಪರಮಂ ಕವೀನಾಂ' ಎಂಬ ಪ್ರಮಾಣವನ್ನು ಉದಾಹರಿಸಿ ಬ್ರಹ್ಮಶಬ್ದಕ್ಕೆ ಜ್ಞಾನಿಗಳ ರೂಢಿಯೂ ಪರಮಾತ್ಮನಲ್ಲೇ ಇದೆ ಎಂದು ತೋರಿಸಿದ್ದಾರೆ. ಆದ್ದರಿಂದ ಜೀವನೇ ರೂಢಾರ್ಥ ಎಂಬ ಪೂರ್ವಪಕ್ಷಕ್ಕೆ ಅವಕಾಶವಿಲ್ಲ. ಆದರೂ 'ತದೇವ ಬ್ರಹ್ಮ' ಎಂಬ ಪ್ರಮಾಣ ಬ್ರಹ್ಮ ಶಬ್ದಕ್ಕೆ ಪರಮಾತ್ಮನಲ್ಲಿ ರೂಢಿ ಇದೆ ಎಂದೇನೂ ಹೇಳುತ್ತಿಲ್ಲ. ಜ್ಞಾನಿದೃಷ್ಟಿಯಲ್ಲಿ ಪರಮಾತ್ಮನೇ ಬ್ರಹ್ಮ ಎಂದಿಷ್ಟೇ ಅದರ ಅರ್ಥ. ಅದಕ್ಕೆ ಯೋಗವೃತ್ತಿಯೂ ಕಾರಣವಿರಬಹುದು. ಆದ್ದರಿಂದ ರೂಢಾರ್ಥ ಜೀವ ಎನ್ನಲು ಅದೇನೂ ಬಾಧಕವಾಗುವುದಿಲ್ಲ.

ಹೀಗೆ ಚಂದ್ರಿಕಾದಲ್ಲಿ ನ್ಯಾಯವಿವರಣವನ್ನು ಮತ್ತು ತತ್ತ್ವಪ್ರಕಾಶಿಕಾವನ್ನು ಅನುಸರಿಸಿ ಯೋಗ- ರೂಢಿ ಪಕ್ಷವನ್ನು ಅವಲಂಬಿಸಿ ಪೂರ್ವಪಕ್ಷವನ್ನು ದೃಢೀಕರಿಸಲಾಗಿದೆ.

ವಾದಿರಾಜರು ಗುರ್ವರ್ಥದೀಪಿಕಾದಲ್ಲಿ ಹೀಗೆ ಪೂರ್ವಪಕ್ಷದ ಭಾವವನ್ನು

ಬಿಡಿಸಿದ್ದಾರೆ. 'ತದೇವ ಬ್ರಹ್ಮ ಪರಮಂ ಕವೀನಾಂ' ಎಂಬಂತೆ ಬ್ರಹ್ಮಶಬ್ದದ ವಿದ್ವದ್ ರೂಢಿ ಪರಮಾತ್ಮನಲ್ಲೇ ಇದೆ. ಜೀವನಲ್ಲಿ ಅಜ್ಞರೂಢಿಯಷ್ಟೇ ಇದೆ. ಆದ್ದರಿಂದ ಬ್ರಹ್ಮಶಬ್ದಕ್ಕೆ ಪರಮಾತ್ಮನೇ ಮುಖ್ಯಾರ್ಥ. ಆದರೂ, ಅಜ್ಞರೂಢಿಯನ್ನು ಅವಲಂಬಿಸಿ ಜಿಜ್ಞಾಸಾ ವಿಧಾಯಕ ವಾಕ್ಯದಲ್ಲಿ ಬ್ರಹ್ಮಶಬ್ದದಿಂದ ಅಮುಖ್ಯಾರ್ಥವಾದ ಜೀವನನ್ನು ತೆಗೆದುಕೊಳ್ಳಲು ಬರುವುದಿಲ್ಲ. ಏಕೆಂದರೆ, ಅಲ್ಲಿ ಬ್ರಹ್ಮನಿಗೆ ಜಗತ್ಕಾರಣತ್ವವನ್ನು ಹೇಳಿದ್ದಾರೆ. ಅದು ಜೀವನಲ್ಲಿ ಇಲ್ಲ. ಇದನ್ನು ತಿಳಿಸಲು ಈ ಅಧಿಕರಣ ಹೊರಟಿದೆ. ತತ್ತ್ವಪ್ರಕಾಶಿಕಾದಲ್ಲಿ ''ಬ್ರಹ್ಮಶಬ್ದಕ್ಕೆ ಜೀವನೇ ಮುಖ್ಯಾರ್ಥ' ಎಂದು ಮಾಡಿರುವ ಪೂರ್ವಪಕ್ಷ 'ಮಂದಾಶಂಕೆ - ಮಂದರ ದೃಷ್ಟಿಯಲ್ಲಿ ಮಾಡಿರುವ ಆಶಂಕೆ'. ಭಾಷ್ಯಕಾರರು-'ಬ್ರಹ್ಮಣೋ ಲಕ್ಷಣಮಾಹ' ಎಂದು ಹೇಳುವ ಮೂಲಕ ಹಿಂದಿನ ಅಧಿಕರಣದ ಮೇಲೆ ಅಭ್ಯಧಿಕಾಶಂಕೆಯ ಪರಿಹಾರಕ್ಕಾಗಿ ಈ ಅಧಿಕರಣ ಇದೆ ಎಂದು ಸ್ಪಷ್ಟಪಡಿಸಿದ್ದಾರೆ. 'ಲಕ್ಷಣಪ್ರಮಾಣಾಭ್ಯಾಂ ವಸ್ತುಸಿದ್ಧಿಃ' ಎಂದಿದೆ. ಲಕ್ಷಣವನ್ನು ಹೇಳದೇ ಇದ್ದರೆ ಬ್ರಹ್ಮಸ್ವರೂಪ ಸಿದ್ಧಿಯಾಗುವುದಿಲ್ಲ. ಅಂದಮೇಲೆ ಅದರ ಜಿಜ್ಞಾಸೆ ಹೇಗೆ? ಹೀಗೆ ಈ ಪೂರ್ವಪಕ್ಷವನ್ನು ಆಚಾರ್ಯರು ಸೂಚಿಸಿದ್ದಾರೆ.

**3. ಸಿದ್ಧಾಂತ :** ಬ್ರಹ್ಮಶಬ್ದಕ್ಕೆ ಜೀವನೇ ಮುಖ್ಯಾರ್ಥ ಎಂದಾದರೂ ಜಿಜ್ಞಾಸಾ ವಿಧಾಯಕ ವಾಕ್ಯದಲ್ಲಿ 'ಯತೋ ವಾ ಇಮಾನಿ ಭೂತಾನಿ ಜಾಯಂತೇ' ಎಂದು ಬ್ರಹ್ಮಶಬ್ದವಾಚ್ಯನಿಗೆ ಸೃಷ್ಟಿಕರ್ತೃತ್ವವನ್ನು ಹೇಳಿರುವುದರಿಂದ 'ಜೀವ' ಎಂಬ ಅರ್ಥವನ್ನು ಹೇಳಬಾರದು.

**4.** 'ಯ ಉ ತ್ರಿಧಾತು' ಎಂಬ ಶ್ರುತಿಯಲ್ಲಿರುವ 'ವ್ಯತೀನ್' ಎಂಬ ಶಬ್ದಕ್ಕೆ ದೇವತೆಗಳು ಎಂದರ್ಥ-

ವಿಶೇಷೇಣಾಧಿಕತ್ವೇನ ವ್ಯತಯೋ ದೇವತಾಃ ಸ್ಮೃತಾಃ ।।

ಆ. ನವತಿಂ ಎಂದರೆ 90 ದೇವತೆಗಳ ಒಂದು ಗುಂಪು. ವಸು, ರುದ್ರ, ಆದಿತ್ಯರೆಂದು ದೇವತೆಗಳು ಮೂರು ವಿಧರಿದ್ದಾರೆ. ಎಂಟು ವಸುಗಳು. ಹನ್ನೊಂದು ರುದ್ರರು. ವಿಷ್ಣುವನ್ನು ಬಿಟ್ಟರೆ ಹನ್ನೊಂದು ಆದಿತ್ಯರು. ಹೀಗೆ ಹನ್ನೊಂದರ ಎರಡು, ಎಂಟರ ಒಂದು ಸೇರಿ 22+8=30. ಮರುತ್ತುಗಳು ನಲವತ್ತೊಂಭತ್ತು. ಮುಖ್ಯವಾಯುವನ್ನೂ ಸೇರಿಸಿದರೆ 50. ದಶಪ್ರಜಾಪತಿಗಳು. ಒಟ್ಟು 30+50+10=90. ಈ ಕಲ್ಪವನ್ನು ತತ್ತ್ವಪ್ರದೀಪದಲ್ಲಿ ಹೇಳಿ ಇನ್ನೊಂದು ಪಕ್ಷವನ್ನು ಹೀಗೆ ಹೇಳಿದ್ದಾರೆ-

ಆದಿತ್ಯಾ ವಸವೋ ರುದ್ರಾ ಮರುತಶ್ಚಾಶ್ವಿನಾವಪಿ ।
ಬೃಹಸ್ಪತಿಶ್ಚ ಕಾಮಶ್ಚ ಮನುರ್ದಕ್ಷೋ ವಿನಾಯಕಃ ।।
ಭೃಗುಶ್ಚೈವಾನಿರುದ್ಧಶ್ಚ ಧರ್ಮೋ ನಿರ್ಋತಿರೇವ ಚ ।
ಕುಬೇರಸಹಿತಾ ದೇವಾ ನವತಿಃ ಸಂಪ್ರಕೀರ್ತಿತಾಃ ।।

ಅನಂತೋ ಗರುಡೋ ವಾಯುಃ ಚತ್ವಾರೋ ಬ್ರಹ್ಮಣಾ ಸಹ ।

ಕೊನೆಯ ನಾಲ್ಕು ದೇವತೆಗಳನ್ನು ಸೇರಿಸಿದರೆ 94 ದೇವತೆಗಳು. ಈ ಪಕ್ಷದಲ್ಲಿ ''ಚತುರ್ಭಿಃ ನಾಮಭಿಃ ಸಾಕಂ ನವತಿಂ'' ಎಂದು ಶ್ರುತಿಯಲ್ಲಿ ಅನ್ವಯ. ಪ್ರಸಿದ್ಧನಾಮರಾದ ನಾಲ್ಕು ದೇವತೆಗಳೊಂದಿಗೆ ತೊಂಭತ್ತು ಎಂದು ಅರ್ಥ.

5. 'ಪರೋ ಮಾತ್ರಯಾ ತನ್ವಾ ವೃಧಾನ
ನ ತೇ ಮಹಿತ್ವಮನ್ವಶ್ನುವಂತಿ।
ಉಭೇ ತೇ ವಿದ್ಮ ರಜಸೀ ಪೃಥಿವ್ಯಾ
ವಿಷ್ಣೋ ದೇವತ್ವಂ ಪರಮಸ್ಯ ವಿತ್ಸೇ।
ನ ತೇ ವಿಷ್ಣೋ ಜಾಯಮಾನೋ ನ ಜಾತೋ
ದೇವ ಮಹಿಮ್ನಃ ಪರಮಂತಮಾಪ।

ಇದು ಶ್ರುತಿಯ ಪೂರ್ಣ ಪಾಠ.

## ದ್ವೈತಸಿದ್ಧಾಂತದಲ್ಲಿ ಸೂತ್ರಾರ್ಥ

**ಓಂ ॥ ಜನ್ಮಾದ್ಯಸ್ಯ ಯತಃ ॥ ಓಂ**

ಅಸ್ಯ=ಪ್ರತ್ಯಕ್ಷ ಸಿದ್ಧವಾದ ಈ ಜಗತ್ತಿಗೆ, ಜನ್ಮಾದಿ= ಉತ್ಪತ್ತಿ, ಸ್ಥಿತಿ, ಸಂಹಾರ, ನಿಯಮನ, ಜ್ಞಾನ, ಅಜ್ಞಾನ, ಬಂಧ, ಮೋಕ್ಷ ಈ ಎಂಟು ಯತಃ= ಯಾರಿಂದಾಗುವವೋ, ತತ್= ಅದು ಬ್ರಹ್ಮ. (ಅಸ್ಯ=ಪ್ರಮಿತಸ್ಯ ಚಿದಚಿದಾತ್ಮಕಸ್ಯ ವಿಶ್ವಸ್ಯ, ಜನ್ಮಾದಿ ಯತಃ ಸಮಾಸ-ವ್ಯಾಸಯೋಗಾಭ್ಯಾಂ ಯಥಾಯೋಗ್ಯಂ ಭವತಿ ತತ್ ಜನ್ಮಾದಿಕಾರಣಂ ಬ್ರಹ್ಮೇತ್ಯರ್ಥಃ। ತಂ. ದೀಪಿಕಾ)

**ಶಾಂಕರಭಾಷ್ಯದಲ್ಲಿ ಹೇಳಿದ ಸೂತ್ರದ ಅರ್ಥ** : ಮೊದಲ ಸೂತ್ರದಲ್ಲಿ ಹೇಳಿದ ಬ್ರಹ್ಮನ ಲಕ್ಷಣವನ್ನು ಈ ಸೂತ್ರದಲ್ಲಿ ಹೇಳಲಾಗಿದೆ - **'ಜನ್ಮಾದ್ಯಸ್ಯ ಯತಃ'**

ಅಸ್ಯ=ಈ ಜಗತ್ತಿಗೆ ಜನ್ಮಾದಿ= ಉತ್ಪತ್ತಿ- ಸ್ಥಿತಿ- ಲಯಗಳು ಯತಃ= ಯಾರಿಂದ ಉಂಟಾಗುವುದೋ ಅದು ಬ್ರಹ್ಮ. ಹೀಗೆ ಹೇಳುವ ಮೂಲಕ ಸೂತ್ರವು ಬ್ರಹ್ಮನಿಗೆ ಈ ಲಕ್ಷಣವನ್ನು ಹೇಳುವ ''ಯತೋ ವಾ ಇಮಾನಿ ಭೂತಾನಿ ಜಾಯಂತೇ'' ಎಂಬ ತೈತ್ತಿರೀಯ ಶ್ರುತಿಯನ್ನು ನಿರ್ದೇಶಿಸಿದೆ.

**ಚಂದ್ರಿಕಾದಲ್ಲಿ ಹೇಳಿದ ವಿಮರ್ಶೆ** : ಮೊದಲ ಸೂತ್ರದಲ್ಲಿ ಪ್ರಸ್ತುತನಾದ ಬ್ರಹ್ಮ ನಿರ್ಗುಣ. ಏಕೆಂದರೆ, ಅವನ ಉಪಾಸನೆಯಿಂದಲೇ ಬ್ರಹ್ಮೈಕ್ಯ ಸಿದ್ಧಿರೂಪವಾದ ಮೋಕ್ಷಫಲ ದೊರಕುತ್ತದೆ. ಹೀಗೆ ಮೊದಲ ಸೂತ್ರದಲ್ಲಿ ಪ್ರಸ್ತುತನಾದ ಬ್ರಹ್ಮನಿಗೆ ದ್ವಿತೀಯ ಸೂತ್ರದಲ್ಲಿ ಲಕ್ಷಣವನ್ನು ಹೇಳಬೇಕು. ಆದರೆ, ದ್ವಿತೀಯ ಸೂತ್ರದಲ್ಲಿ ಹೇಳಿದ ಲಕ್ಷಣ ಅವನಲ್ಲಿಲ್ಲ;

ಏಕೆಂದರೆ, ನಿರ್ಗುಣ ಬ್ರಹ್ಮ ಜಗತ್ತಿನ ಉತ್ಪತ್ತಿಗೆ ಕಾರಣನಲ್ಲ. ಅವನು, ಹಗ್ಗವು ಹಾವಿನ ಭ್ರಮೆಗೆ ಕಾರಣವಾಗುವಂತೆ ಅಧಿಷ್ಠಾನ. ಆಗ ಸೂತ್ರದಲ್ಲಿ ಜಗತ್ತಿನ ಉತ್ಪತ್ತಿಗೆ ಬ್ರಹ್ಮ ಕಾರಣ ಎನ್ನುವ ಬದಲು ಜಗತ್ತಿನ ಭ್ರಾಂತಿಗೆ ಬ್ರಹ್ಮ ಕಾರಣ ಎಂದು ಹೇಳಬೇಕಾಗುತ್ತದೆ.

## ರಾಮಾನುಜ ಭಾಷ್ಯದಲ್ಲಿ ಹೇಳಿದ ಅರ್ಥ

ಅಸ್ಯ ಜನ್ಮಸ್ಥಿತಿಲಯಂ ಜಗತಸ್ತು ಯತೋ ಭವೇತ್ ।

ಸರ್ವಜ್ಞಾತ್ ಸತ್ಯಸಂಕಲ್ಪಾತ್ ತದ್ ಬ್ರಹ್ಮೇತಿ ಜಗೌ ಶ್ರುತಿಃ ॥

ಶಾಂಕರ ಸಿದ್ಧಾಂತದಂತೆ ಈ ಸಿದ್ಧಾಂತದಲ್ಲೂ ಜನ್ಮ- ಸ್ಥಿತಿ- ಲಯ ಕರ್ತೃತ್ವ ಈ ಮೂರೇ ಬ್ರಹ್ಮನ ಲಕ್ಷಣಗಳು. ಆದರೆ, ಸೂತ್ರಕಾರರಾದ ಶ್ರೀವೇದವ್ಯಾಸರೇ ಸ್ಕಾಂದಪುರಾಣದಲ್ಲಿ (ಆಚಾರ್ಯರು ಉದಾಹರಿಸಿದ್ದಾರೆ) ಎಂಟು ಲಕ್ಷಣಗಳನ್ನು ಹೇಳಿದ್ದಾರೆ. ಆದ್ದರಿಂದ ಅವನ್ನೂ ಸೂತ್ರದ 'ಜನ್ಮಾದಿ' ಪದದಿಂದ ತೆಗೆದುಕೊಳ್ಳಬೇಕು. ಆದ್ದರಿಂದ ಆಚಾರ್ಯರು ಹೇಳಿದಂತೆ ಜನ್ಮಾದಿ ಅಷ್ಟಕರ್ತೃತ್ವವೇ ಬ್ರಹ್ಮ ಲಕ್ಷಣ.

**ಇಲ್ಲಿಗೆ ಜನ್ಮಾಧಿಕರಣ ಮುಗಿಯಿತು.**

# ಶಾಸ್ತ್ರಯೋನಿತ್ವಾಧಿಕರಣ-3

**ಅನುಮಾನತೋ ಅನ್ಯೇ ನ ಕಲ್ಪನೀಯಾಃ ।**

**ಓಂ ॥ ಶಾಸ್ತ್ರಯೋನಿತ್ವಾತ್ ॥ ಓಂ**

**''ನಾವೇದವಿನ್ಮನುತೇ ತಂ ಬೃಹಂತಂ**
**ಸರ್ವಾನುಭುಮ್ ಆತ್ಮಾನಂ ಸಾಂಪರಾಯೇ॥'' (ತೈ.ಬ್ರಾ.3.12.9)**
**'ಔಪನಿಷದಃ ಪುರುಷಃ' ಇತ್ಯಾದಿ ಶ್ರುತಿಭ್ಯಶ್ಚ॥**

ಅನುಮಾನ ಪ್ರಮಾಣದಿಂದ ರುದ್ರಾದಿಗಳು ಈ ಜಗತ್ತಿಗೆ ಕಾರಣರು ಎಂದು ಕಲ್ಪಿಸಬಾರದು. ಏಕೆಂದರೆ, ಜಗತ್ತಿಗೆ ಕಾರಣ ಯಾರು? ಎಂದು ನಿರ್ಧರಿಸಲು ಋಗ್ವೇದಾದಿ ಶಾಸ್ತ್ರಗಳೇ ಆಧಾರ.

''ಪೂರ್ಣನಾದ ಸರ್ವಜ್ಞನಾದ ಆ ಪರಮಾತ್ಮನನ್ನು, ಮೋಕ್ಷಕ್ಕಾಗಿ ಸದಾಗಮಗಳನ್ನು ಅಧ್ಯಯನ ಮಾಡದೆ ತಿಳಿಯಲಾಗದು''. ''ಜಗತ್ ಕರ್ತನಾದ ಪರಮಾತ್ಮ ಉಪನಿಷತ್ತುಗಳಿಂದಲೇ ಗಮ್ಯ'' ಈ ಮೊದಲಾದ ಶ್ರುತಿಗಳಿಂದಲೂ ಜಗತ್‌ಕರ್ತನಾದ ಭಗವಂತ ಸದಾಗಮಗಳಿಂದಲೇ ವೇದ್ಯನೆಂದು ತಿಳಿಯುತ್ತದೆ.

**ವಿವರಣೆ :** 'ಜಿಜ್ಞಾಸ್ಯನಾದ ಬ್ರಹ್ಮ ಜಗತ್ತಿಗೆ ಕಾರಣ' ಎಂದು ಶ್ರುತಿಯಲ್ಲಿ

ಹೇಳಿರುವುದರಿಂದ ಅಂತಹ ಬ್ರಹ್ಮ ವಿಷ್ಣು ಎಂದು ಹಿಂದಿನ ಸೂತ್ರದಲ್ಲಿ ನಿರ್ಧರಿಸಲಾಯಿತು. ಜಗತ್ತಿಗೆ ಇತರರೂ ಏಕೆ ಕಾರಣರಾಗಿರಬಾರದು? ಎಂಬ ಶಂಕೆಯನ್ನು ಇಲ್ಲಿ ನಿರಾಸ ಮಾಡಲಾಗುತ್ತದೆ. ಆದ್ದರಿಂದ ಹಿಂದಿನ ಅಧಿಕರಣದೊಂದಿಗೆ ಈ ಅಧಿಕರಣಕ್ಕೆ ಆನಂತರ್ಯ ಸಂಗತಿ.

ದ್ವಿತೀಯ ಸೂತ್ರದಲ್ಲಿ ಹೇಳಿದ ಬ್ರಹ್ಮಲಕ್ಷಣಕ್ಕೆ ರುದ್ರಾದಿಗಳಲ್ಲಿ ಅತಿವ್ಯಾಪ್ತಿದೋಷವನ್ನು ಇಲ್ಲಿ ಪರಿಹರಿಸಲಾಗಿದೆ. ಅಥವಾ ''ಲಕ್ಷಣಪ್ರಮಾಣಾಭ್ಯಾಂ ವಸ್ತುಸಿದ್ಧಿಃ'', ತತ್ತ್ವವು ನಿಶ್ಚಿತವಾಗಬೇಕಾದರೆ ಲಕ್ಷಣ ಮತ್ತು ಪ್ರಮಾಣ ಎರಡನ್ನೂ ಹೇಳಬೇಕು. ಹಿಂದಿನ ಸೂತ್ರದಲ್ಲಿ ಬ್ರಹ್ಮನ ಲಕ್ಷಣವನ್ನು ಹೇಳಿ ಈ ಸೂತ್ರದಲ್ಲಿ ಪ್ರಮಾಣವನ್ನು ಹೇಳಲಾಗಿದೆ.

**2. ಪೂರ್ವಪಕ್ಷ:** ರುದ್ರನು ಸರ್ವಜ್ಞನೆಂದು ಪಾಶುಪತಾಗಮದಲ್ಲಿ ಹೇಳಲಾಗಿದೆ. ಆದ್ದರಿಂದ ಅವನೂ ಜಗತ್ತಿಗೆ ಕಾರಣನಾಗಿದ್ದಾನೆ ಎಂದು ಅನುಮಾನ ಪ್ರಮಾಣದಿಂದ ಸಾಧಿಸಬಹುದು. ''ರುದ್ರಃ ಜಗತ್ಕಾರಣಂ ಸರ್ವಜ್ಞತ್ವಾತ್, ವ್ಯತಿರೇಕೇಣ ದೇವದತ್ತವತ್'' ಎಂದು ಅನುಮಾನ.

ಆ. ಅಥವಾ ಪಾಶುಪತ ಆಗಮಗಳನ್ನು ಸರ್ವಜ್ಞರಾದ ರುದ್ರದೇವರು ರಚಿಸಿರುವುದರಿಂದ ಅದೂ ಪ್ರಮಾಣ. ಅಲ್ಲಿ ರುದ್ರನೇ ಜಗತ್ಕಾರಣನೆಂದಿದೆ. ಆದ್ದರಿಂದ ಕೆಲವು ಕಾಲದಲ್ಲಿ ವಿಷ್ಣು ಮತ್ತೆ ಕೆಲವು ಕಾಲದಲ್ಲಿ ರುದ್ರ ಜಗತ್ತಿಗೆ ಕಾರಣ ಎಂದು ಹೇಳಬೇಕಾಗುವುದು. ಹೀಗೆ ಜಗತ್ಕಾರಣತ್ವಲಕ್ಷಣ ರುದ್ರನಲ್ಲೂ ಇದೆಯಾದ್ದರಿಂದ ಅತಿವ್ಯಾಪ್ತಿ ದೋಷವಿದೆ.

**3. ಸಿದ್ಧಾಂತ :** ಜಗತ್ಕಾರಣ ಯಾರು ಎಂದು ನಿರ್ಧರಿಸಲು ಶಾಸ್ತ್ರವೇ ಆಧಾರ. ಶಾಸ್ತ್ರವೆಂದರೆ ಋಗಾದಿ ನಾಲ್ಕು ವೇದಗಳು ಮತ್ತು ಅವಕ್ಕೆ ಅವಿರುದ್ಧವಾದ ಪೌರುಷೇಯಗ್ರಂಥಗಳು. ಪಾಶುಪತಾಗಮ ವೇದವಿರುದ್ಧವಾದುದರಿಂದ ಅದು ಶಾಸ್ತ್ರವಲ್ಲ. ಅದರ ಆಧಾರದಿಂದ ಅಥವಾ ಅನುಮಾನದ ಆಧಾರದಿಂದ ರುದ್ರನು ಜಗತ್ತಿಗೆ ಕಾರಣ ಎಂದು ನಿರ್ಧರಿಸಬಾರದು. ಋಗಾದಿ ವೇದಗಳಲ್ಲಿ ವಿಷ್ಣುವೇ ಜಗತ್ಕಾರಣ ಎಂದು ಹೇಳಲಾಗಿದೆ. ಆದ್ದರಿಂದ ಜಗತ್ಕಾರಣತ್ವ ಲಕ್ಷಣಕ್ಕೆ ರುದ್ರಾದಿಗಳಲ್ಲಿ ಅತಿವ್ಯಾಪ್ತಿ ಇಲ್ಲ.

## ಅನುಮಾನ ಪ್ರಾಮಾಣ್ಯ

**ನಚಾನುಮಾನಸ್ಯ ನಿಯತಪ್ರಾಮಾಣ್ಯಮ್ ।**

**ಶ್ರುತಿಸಾಹಾಯ್ಯರಹಿತಂ ಅನುಮಾನಂ ನ ಕುತ್ರಚಿತ್ ।**
**ನಿಶ್ಚಯಾತ್ ಸಾಧಯೇದರ್ಥಂ ಪ್ರಮಾಣಾಂತರಮೇವ ಚ ।**
**ಶ್ರುತಿಸ್ಮೃತಿ ಸಹಾಯಂ ಯತ್ ಪ್ರಮಾಣಾಂತರಮುತ್ತಮಮ್ ।**
**ಪ್ರಮಾಣಪದವೀಂ ಗಚ್ಛೇತ್ ನಾತ್ರ ಕಾರ್ಯಾ ವಿಚಾರಣಾ ॥**

**ಪೂರ್ವೋತ್ತರಾವಿರೋಧೇನ ಕೋಽತ್ರಾರ್ಥೋಽಭಿಮತೋ ಭವೇತ್ ।**
**ಇತ್ಯಾದ್ಯಮೂಹನಂ ತರ್ಕಃ ಶುಷ್ಕತರ್ಕಂ ತು ವರ್ಜಯೇತ್ ॥**

**ಇತ್ಯಾದಿ ಮಹಾಕೌರ್ಮೇ ।**

**ಶಕ್ಯತ್ವಾಚ್ಚಾನುಮಾನಾನಾಂ ಸರ್ವತ್ರ ।**

**ಸರ್ವತ್ರ ಶಕ್ಯತೇ ಕರ್ತುಮಾಗಮಂ ಹಿ ವಿನಾಽನುಮಾ ।**
**ತಸ್ಮಾನ್ನ ಸಾ ಶಕ್ತಿಮತೀ ವಿನಾಗಮಮುದೀಕ್ಷಿತುಮ್ ॥ ಇತಿ ವಾರಾಹೇ ।**

ಎಲ್ಲ ಅನುಮಾನಗಳೂ ಪ್ರಮಾಣವಾಗುತ್ತವೆ ಎನ್ನುವಂತಿಲ್ಲ-

ಶ್ರುತಿಯ ಸಹಾಯವಿಲ್ಲದ ಅನುಮಾನವಾಗಲೀ ಪ್ರತ್ಯಕ್ಷವಾಗಲೀ ಎಂದೂ ಅಲೌಕಿಕ ವಿಷಯಗಳನ್ನು ನಿರ್ಧರಿಸಲಾರವು. ಶ್ರುತಿ ಅಥವಾ ಸ್ಮೃತಿಯ ಸಹಾಯವಿರುವ ಪ್ರತ್ಯಕ್ಷ ಮತ್ತು ಅನುಮಾನಗಳು ಮಾತ್ರ ನಿರ್ದುಷ್ಟವಾಗುತ್ತವೆ. ಅವುಗಳನ್ನು ಪ್ರಮಾಣಗಳೆಂದು ಸ್ವೀಕರಿಸಲು ವಿಚಾರ ಮಾಡಬೇಕಾಗಿಲ್ಲ. ''ಈ ವಾಕ್ಯಕ್ಕೆ ಪೂರ್ವಾಪರ ಸಂಗತವಾದ ಅರ್ಥ ಯಾವುದು?'' ಎಂದು ವಿಚಾರಮಾಡುವುದೇ ತರ್ಕ. ಇತರ ಶುಷ್ಕತರ್ಕಗಳನ್ನು ಉಪೇಕ್ಷೆ ಮಾಡಬೇಕು. ಹೀಗೆ ಮಹಾಕೂರ್ಮ ಪುರಾಣದಲ್ಲಿದೆ.

ಪ್ರತ್ಯಕ್ಷವಿರುದ್ಧವಾಗಿಯೂ ಅನುಮಾನವನ್ನು ಮಾಡಬಹುದು. ಆದ್ದರಿಂದ ಅನುಮಾನವನ್ನು ಅವಲಂಬಿಸಬಾರದು. ವರಾಹಪುರಾಣ ಹೀಗೆಯೇ ಹೇಳುತ್ತದೆ- ''ಆಗಮಕ್ಕೆ ವಿರುದ್ಧವಾಗಿ ಎಲ್ಲ ವಿಷಯದಲ್ಲಿಯೂ ಅನುಮಾನ ಪ್ರಯೋಗ ಮಾಡಲು ಸಾಧ್ಯವಿದೆ. ಆದ್ದರಿಂದ ಆಗಮದ ಸಹಕಾರವಿಲ್ಲದ ಅನುಮಾನ ಪ್ರಮೇಯ ಸಾಧಕವಲ್ಲ''

**ವಿವರಣೆ :** ಪರಮಾತ್ಮ ಔಪನಿಷದ - ಉಪನಿಷತ್ತುಗಳಿಂದಲೇ ವೇದ್ಯ. ಆದರೂ, ಅನುಮಾನಪ್ರಮಾಣದಿಂದ ರುದ್ರ ಜಗತ್ಕಾರಣ ಎಂದು ಏಕೆ ನಿಶ್ಚೈಸಬಾರದು? ಎಂಬ ಪ್ರಶ್ನೆಗೆ ಈ ಭಾಷ್ಯಭಾಗ ಉತ್ತರ ನೀಡಿದೆ. ಅನುಮಾನದಿಂದ ಏನು ಬೇಕಾದರೂ ಸಾಧಿಸಬಹುದಾದ್ದರಿಂದ ಅದರಿಂದ ಏನನ್ನೂ ನಿರ್ಧರಿಸಬಾರದು. ಆದ್ದರಿಂದ ಅಲೌಕಿಕ ವಿಷಯಗಳಲ್ಲಿ ವೇದಕ್ಕೇ ಶರಣುಹೊಂದಬೇಕು ಎಂದು ಸಮಾಧಾನ.

## ನಾಸ್ತಿಕ್ಯವಾದ ನಿರಾಸ

**ರೇತೋ ಧಾತುರ್ವಟಕಣಿಕಾ ಘೃತಧೂಮಾಧಿವಾಸನಮ್ ।**
**ಜಾತಿಸ್ಮೃತಿರಯಸ್ಕಾಂತಃ ಸೂರ್ಯಕಾಂತೋಽಂಬುಭಕ್ಷಣಮ್ ।**
**ಪ್ರೇತ್ಯಭೂತಾಪ್ಯಯಶ್ಚೈವ ದೇವತಾಭ್ಯುಪಯಾಚನಮ್ ।**
**ಮೃತೇ ಕರ್ಮ ನಿವೃತ್ತಿಶ್ಚ ಪ್ರಮಾಣಮಿತಿ ನಿಶ್ಚಯಃ ॥**

**ಇತಿ ಮೋಕ್ಷಧರ್ಮವಚನಾತ್ ನ ನಾಸ್ತಿಕ್ಯವಾದೋ ಯುಜ್ಯತೇ । ದರ್ಶನಾಚ್ಚ ತಪ ಆದಿಫಲಸ್ಯ ।**

''ರೇತಸ್ಸು, ವಾತಪಿತ್ತಾದಿ ಧಾತುಗಳು, ಆಲದ ಮರದ ಬೀಜ, ತುಪ್ಪ, ಹೊಗೆಯ ಮೂಲಿಕೆ, ಜನ್ಮಾಂತರ ಸ್ಮರಣೆ, ಅಯಸ್ಕಾಂತ, ಸೂರ್ಯಕಾಂತ, ಮಣಿ, ಜಲಪಾನ, ಸತ್ತಮೇಲೆ ಶರೀರ ಪಂಚಭೂತಗಳಲ್ಲಿ ಸೇರಿಕೊಳ್ಳುವುದು, ದೇವತಾಪ್ರಾರ್ಥನೆ, ಸತ್ತಮೇಲೆ ದೇಹದಲ್ಲಿ ಕ್ರಿಯಾ ನಿವೃತ್ತಿ ಇವುಗಳಿಂದ ಕಣ್ಣಿಗೆ ಕಾಣದ ಅಲೌಕಿಕ ವಿಷಯಗಳನ್ನು ಊಹಿಸಬಹುದು.'' ಹೀಗೆ ಮೋಕ್ಷಧರ್ಮ ಪರ್ವದಲ್ಲಿ ಹೇಳಲಾಗಿದೆ. ಆದ್ದರಿಂದ ನಾಸ್ತಿಕ್ಯವಾದ ಸರಿಯಲ್ಲ. ಇದಲ್ಲದೆ ತಪಸ್ಸೇ ಮೊದಲಾದ ಧರ್ಮನಿಷ್ಠರಲ್ಲಿ ವಿಚಿತ್ರ ಸಾಮರ್ಥ್ಯ, ತೇಜಸ್ಸು ಪ್ರತ್ಯಕ್ಷವಾಗಿ ಕಂಡಿದೆ. (ಆದ್ದರಿಂದ ನಾಸ್ತಿಕ್ಯವಾದ ಸರಿಯಲ್ಲ)

**ವಿವರಣೆ :** ಅತೀಂದ್ರಿಯ ವಸ್ತುಗಳೇ ಇಲ್ಲ. ಅಂದಮೇಲೆ ಶಾಸ್ತ್ರದಿಂದ ಪರಮಾತ್ಮನ ಅಸ್ತಿತ್ವ ಸಿದ್ಧವಾಗುವುದಿಲ್ಲ ಎಂಬ ಆಕ್ಷೇಪಕ್ಕೆ ಉತ್ತರವಾಗಿ ಇಲ್ಲಿ ಆಸ್ತಿಕ್ಯವಾದವನ್ನು ಸಮರ್ಥಿಸಲಾಗಿದೆ.

**ರೇತಸ್ಸು :** ಪುರುಷನ ರೇತಸ್ಸಿನಿಂದ ಹೆಣ್ಣು ಶರೀರ ಗರ್ಭ ಧರಿಸುತ್ತದೆ. ಆದರೆ ಆ ಶರೀರ ನಿರ್ಜೀವವಾದರೆ ಗರ್ಭಧಾರಣೆಯಾಗುವುದಿಲ್ಲ. ಇದರಿಂದ ಜೀವತತ್ತ್ವ ಸಿದ್ಧವಾಗುತ್ತದೆ. ಅದೂ ಎಲ್ಲ ಸ್ತ್ರೀಶರೀರದಲ್ಲೂ ಗರ್ಭಧಾರಣೆಯಾಗುವುದಿಲ್ಲ. ಕೆಲವರಲ್ಲಿ ಮಾತ್ರ ಗರ್ಭಧಾರಣೆ. ಇದರಿಂದ ಈಶ್ವರ- ಪುಣ್ಯಪಾಪಗಳು ಸಿದ್ಧವಾಗುತ್ತವೆ.

**ಧಾತು :** ವಾತ, ಪಿತ್ಥ, ಕಫಗಳು ತ್ರಿಧಾತುಗಳು. ಇವು ಅಪಥ್ಯಾಚರಣೆಯಿಂದ ಜೀವಚ್ಛರೀರದಲ್ಲಿ ಕೆರಳುತ್ತವೆ; ಮೃತಶರೀರದಲ್ಲಿ ಅವುಗಳ ಪರಿಣಾಮವಿಲ್ಲ. ಇದರಿಂದ ದೇಹಾತಿರಿಕ್ತ ಆತ್ಮ ಸಿದ್ಧನಾಗುತ್ತಾನೆ. ಜೀವಚ್ಛರೀರದಲ್ಲೂ ಕೆಲವೆಡೆ ಮಾತ್ರ ಅವುಗಳು ಕೆರಳುತ್ತವೆ. ಇದರಿಂದ ಅದೃಷ್ಟ, ಈಶ್ವರ ಸಿದ್ಧವಾಗುತ್ತವೆ.

**ವಟಕಣಿಕಾ :** ಆಲದ ಬೀಜದಿಂದ ಗಿಡ ಹುಟ್ಟುತ್ತದೆ. ಹುರಿದ ಬೀಜದಿಂದ ಹುಟ್ಟುವುದಿಲ್ಲ. ಹುರಿಯದ ಎಲ್ಲ ಬೀಜಗಳಿಂದಲೂ ಹುಟ್ಟುವುದಿಲ್ಲ.

**ಘೃತ :** ತುಪ್ಪದಿಂದ ದೇಹ ಬೆಳೆಯುತ್ತದೆ. ಮೃತಶರೀರ ಬೆಳೆಯುವುದಿಲ್ಲ. ಜೀವಚ್ಛರೀರವೂ, ಕೆಲವೊಂದು, ಎಷ್ಟು ತುಪ್ಪ ತಿಂದರೂ ಕೊಬ್ಬುವುದಿಲ್ಲ.

**ಧೂಮಾಧಿವಾಸನ :** ಕೆಲವು ಮರಗಳು ಹೂ ಬಿಡಲು ಹೊಗೆ ಹಾಕಬೇಕಾಗುತ್ತದೆ. ಒಣಗಿದ ಮರ ಅಥವಾ ಒಣಗದ ಎಲ್ಲ ಮರಗಳೂ ಇದರಿಂದ ಹೂ ಬಿಡುವುದಿಲ್ಲ.

**ಜಾತಿಸ್ಮೃತಿ :** ಕೆಲವರಿಗೆ ಪೂರ್ವಜನ್ಮದ ಸ್ಮೃತಿ ಉಂಟಾಗುತ್ತದೆ. ಎಲ್ಲರಿಗೂ ಉಂಟಾಗದೆ ಕೆಲವರಿಗೆ ಮಾತ್ರ ಹಾಗಾಗಲು ಈಶ್ವರ, ಪೂರ್ವ ಪುಣ್ಯಗಳೇ ಕಾರಣ.

**ಅಯಸ್ಕಾಂತ :** ಅಯಸ್ಕಾಂತ ಕಬ್ಬಿಣವನ್ನು ಸೆಳೆಯುತ್ತದೆ. ಅಚೇತನದಲ್ಲಿ ಇಂತಹ ವಿಚಿತ್ರ ಕ್ರಿಯೆ ಎಲ್ಲೂ ಕಂಡಿಲ್ಲ.

**ಸೂರ್ಯಕಾಂತ :** ಸೂರ್ಯಕಾಂತ ಶಿಲೆಗೆ ಸೂರ್ಯಕಿರಣಗಳು ಬಿದ್ದಾಗ ಬೆಂಕಿ ಹುಟ್ಟುತ್ತದೆ. ಇತರ ಜಡಗಳಿಗೆ ಇಲ್ಲದ ಈ ವೈಚಿತ್ರ್ಯಕ್ಕೆ ಈಶ್ವರ, ಅದೃಷ್ಟಗಳೇ ಕಾರಣ.

**ಅಂಬುಭಕ್ಷಣ** : ನೀರು ಕುಡಿದರೆ ಬಾಯಾರಿಕೆ ತಣಿಯುತ್ತದೆ. ಮೃತಶರೀರದಲ್ಲಿ ಹಾಗಾಗುವುದಿಲ್ಲ. ಬದುಕಿರುವ ಎಲ್ಲ ಶರೀರಗಳಲ್ಲೂ ಹಾಗಿಲ್ಲ.

**ಪ್ರೇತ್ಯ ಭೂತಾಪ್ಯಯ** : ಮೃತ ಶರೀರ ಮಣ್ಣಾಗುತ್ತದೆ. ಜೀವಚ್ಛರೀರ ಹಾಗಾಗುವುದಿಲ್ಲ. ನಾವು ಬಯಸಿದರೂ ಅದು ಮಣ್ಣಾಗದು.

**ದೇವತಾಭ್ಯುಪಯಾಚನಂ** : ದೇವತಾಪ್ರಾರ್ಥನೆಯಿಂದ ಕೆಲವರಿಗೆ ಮಾತ್ರ ಇಷ್ಟ ಸಿದ್ಧಿಯಾಗುತ್ತದೆ.

**ಮೃತೇ ಕರ್ಮ ನಿವೃತಿಃ** : ಮೃತ ಶರೀರದಲ್ಲಿ ಕ್ರಿಯೆ ಇಲ್ಲ. ಅದೇ ಶರೀರದಲ್ಲಿ ಮೊದಲು ಕ್ರಿಯೆ ಇತ್ತು. ಇದರಿಂದ ಶರೀರಾತಿರಿಕ್ತ ಚೇತನದ ಅಸ್ತಿತ್ವ ಸಿದ್ಧವಾಗುತ್ತದೆ.

ಮೇಲಿನ ಉದಾಹರಣೆಗಳಿಂದ ಅನುಮಾನ ಆಗಮಗಳೂ ಪ್ರಮಾಣಗಳೆಂದು ಸಿದ್ಧವಾಗುತ್ತವೆ. ರೇತಸ್ಸಿನಿಂದ ಗರ್ಭಧಾರಣೆಯಾಗುವುದರಿಂದ ಗರ್ಭಧಾರಣೆಗೂ ರೇತಸ್ಸಿಗೂ ಕಾರ್ಯಕಾರಣಭಾವ ತಿಳಿಯುತ್ತದೆ. ಕಾರ್ಯಕಾರಣಭಾವ ಅನುಮಾನಗಮ್ಯ. ಹಿಂದೆ ಹೇಳಿದಂತೆ, ಅದರಿಂದ ಈಶ್ವರ, ಅದೃಷ್ಟಗಳೂ ಸಿದ್ಧವಾಗುತ್ತವೆ. ಆದ್ದರಿಂದ ಈಶ್ವರನನ್ನು ತಿಳಿಸುವ ವೇದಾದಿಶಾಸ್ತ್ರಗಳೂ ಪ್ರಮಾಣಗಳೆಂದು ಒಪ್ಪಿಕೊಳ್ಳಬೇಕಾಗುತ್ತದೆ. ಹೀಗೆ ಪ್ರತ್ಯಕ್ಷ ಒಂದೇ ಪ್ರಮಾಣ. ಪ್ರತ್ಯಕ್ಷಕ್ಕೆ ಕಾಣುವ ವಸ್ತುಗಳು ಮಾತ್ರ ಸತ್ಯ ಎನ್ನುವ ನಾಸ್ತಿಕ್ಯವಾದದಲ್ಲಿ ಮೇಲಿನ ಘಟನೆಗಳನ್ನು ಸಮರ್ಥಿಸುವುದು ಸಾಧ್ಯವಿಲ್ಲ. ಆದ್ದರಿಂದ ಆಸ್ತಿಕ್ಯವಾದವನ್ನೇ ಒಪ್ಪಿಕೊಳ್ಳಬೇಕು ಎಂದು ತಿಳಿಯುತ್ತದೆ.

**ಶಾಸ್ತ್ರಗಳೆಂದರೆ**

**ಋಗ್ಯಜುಃ ಸಾಮಾಥರ್ವಾಶ್ಚ ಭಾರತಂ ಪಂಚರಾತ್ರಕಮ್।**
**ಮೂಲರಾಮಾಯಣಂ ಚೈವ ಶಾಸ್ತ್ರಮಿತ್ಯಭಿಧೀಯತೇ ॥**

**ಯಚ್ಚಾನುಕೂಲಮೇತಸ್ಯ ತಚ್ಚ ಶಾಸ್ತ್ರಂ ಪ್ರಕೀರ್ತಿತಮ್ ।**
**ಅತೋಽನ್ಯೋ ಗ್ರಂಥವಿಸ್ತಾರೋ ನೈವ ಶಾಸ್ತ್ರಂ ಕುವರ್ತ್ಮ ತತ್ ॥**

**ಇತಿ ಸ್ಕಾಂದೇ ।**

**ಸಾಂಖ್ಯಂ ಯೋಗಃ ಪಾಶುಪತಂ ವೇದಾರಣ್ಯಕಮೇವ ಚ ।**

**ಇತ್ಯಾರಭ್ಯ ವೇದಪಂಚರಾತ್ರಯೋರೈಕ್ಯಾಭಿಪ್ರಾಯೇಣ ಪಂಚರಾತ್ರಸ್ಯೈವ ಪ್ರಾಮಾಣ್ಯಮುಕ್ತಂ ಇತರೇಷಾಂ ಭಿನ್ನಮತತ್ವಂ ಪ್ರದರ್ಶ್ಯ ಮೋಕ್ಷಧರ್ಮೇಷ್ವಪಿ ।**

**ಶಾಸ್ತ್ರಂ ಯೋನಿಃ=ಪ್ರಮಾಣಂ ಅಸ್ಯೇತಿ-ಶಾಸ್ತ್ರಯೋನಿ ॥ 3 ॥**

**॥ ಇತಿ ಶಾಸ್ತ್ರಯೋನಿತ್ವಾಧಿಕರಣಮ್ ॥**

ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವವೇದ, ಭಾರತ, ಪಂಚರಾತ್ರಾಗಮ, ಮೂಲರಾಮಾಯಣ ಇವುಗಳು ಶಾಸ್ತ್ರಗಳು. ಇವುಗಳಲ್ಲಿ ಹೇಳಿರುವ ಪ್ರಮೇಯಕ್ಕೆ ಅವಿರುದ್ಧವಾದ ಪ್ರಮೇಯಗಳನ್ನು ಪ್ರತಿಪಾದಿಸುವ ಗ್ರಂಥಗಳೂ ಪ್ರಮಾಣಗಳು. ಇವುಗಳಿಗೆ ವಿರುದ್ಧವಾದ ಪಾಶುಪತಾದಿ ಗ್ರಂಥಗಳು ಶಾಸ್ತ್ರಗಳೇ ಅಲ್ಲ, ಅವುಗಳು ಮಿಥ್ಯಾಜ್ಞಾನ ಸಾಧನಗಳು.

ಮಹಾಭಾರತದ ಮೋಕ್ಷಧರ್ಮ ಪರ್ವದಲ್ಲೂ ''ಸಾಂಖ್ಯಂ ಯೋಗಃ'' ಎಂದು ಮುಂತಾಗಿ ಪ್ರಮಾಣ ಗ್ರಂಥಗಳನ್ನು ಉಲ್ಲೇಖಿಸಿ, ಅವುಗಳಿಗೆ ಪರಸ್ಪರ ವಿರೋಧವನ್ನು ಹೇಳಿ ವೇದ ಮತ್ತು ಪಂಚರಾತ್ರಗಳು ಒಂದೇ ಎಂದು ಪರಿಗಣಿಸಿ ಪಂಚರಾತ್ರಕ್ಕೆ ಮಾತ್ರ ಪ್ರಾಮಾಣ್ಯವನ್ನು ಹೇಳಲಾಗಿದೆ.

ಸೂತ್ರದಲ್ಲಿರುವ 'ಶಾಸ್ತ್ರಯೋನಿ' ಎಂಬ ಪದಕ್ಕೆ 'ಶಾಸ್ತ್ರಂ ಯೋನಿಃ ಯಸ್ಯ ತತ್' ಎಂದು ಬಹುವ್ರೀಹಿ ಸಮಾಸವನ್ನು ಮಾಡಬೇಕು. ಅಲ್ಲಿ ಯೋನಿಶಬ್ದಕ್ಕೆ ಪ್ರಮಾಣ ಎಂದರ್ಥ.

**ವಿವರಣೆ :** ಅನುಮಾನದಿಂದ ರುದ್ರ ಜಗತ್ತಿಗೆ ಕಾರಣ ಎಂದು ಸಾಧಿಸಲಾಗದಿದ್ದರೂ ಪಂಚರಾತ್ರಾಗಮದಿಂದ ಅವನು ಜಗತ್ಕಾರಣ ಎಂದು ಹೇಳಬಹುದು, ಎಂಬ ಆಕ್ಷೇಪಕ್ಕೆ ಈ ಭಾಷ್ಯಖಂಡ ಉತ್ತರ ನೀಡಿದೆ.

1. ಜಗತ್ತಿಗೆ ಕಾರಣ ಯಾರು ಎಂಬುದನ್ನು ಶಾಸ್ತ್ರದಿಂದಲೇ ತಿಳಿಯಬೇಕು ಎಂದು ಸೂತ್ರಕಾರರು ಹೇಳಿದ್ದಾರೆ. ಪಾಶುಪತಾಗಮ ಶಾಸ್ತ್ರದ ಗುಂಪಿನಲ್ಲಿ ಸೇರಿಲ್ಲ. ಆದ್ದರಿಂದ ಅದರ ಆಧಾರದಿಂದ ರುದ್ರನನ್ನು ಜಗತ್ಕಾರಣ ಎಂದು ಹೇಳುವುದು ಸರಿಯಲ್ಲ.

2. ಮಹಾಭಾರತದ ಮೋಕ್ಷಧರ್ಮ ಪರ್ವದಲ್ಲಿ-

ಸಾಂಖ್ಯಂ ಯೋಗಃ ಪಾಶುಪತಂ ವೇದಾರಣ್ಯಕಮೇವ ಚ ।
ಜ್ಞಾನಾನ್ಯೇತಾನಿ ಭಿನ್ನಾನಿ ಉತಾಹೋ ನೇತಿ ಚೋಚ್ಯತಾಮ್ ।

ಎಂದು ಜನಮೇಜಯನ ಪ್ರಶ್ನೆ. ಸಾಂಖ್ಯದರ್ಶನ, ಯೋಗದರ್ಶನ, ಪಾಶುಪತ ಆಗಮ, ವೇದ ಇವುಗಳು ಪರಸ್ಪರ ವಿರುದ್ಧಗಳೋ ಅಥವಾ ಅವಿರುದ್ಧಗಳೋ? ಎಂದು ಜನಮೇಜಯನ ಪ್ರಶ್ನೆಯ ಅಭಿಪ್ರಾಯ. ಅದಕ್ಕೆ ವೈಶಂಪಾಯನರು ಹೀಗೆ ಉತ್ತರ ನೀಡಿದ್ದಾರೆ-

ಸಾಂಖ್ಯಂ ಯೋಗಃ ಪಾಶುಪತಂ ವೇದಾರಣ್ಯಕಮೇವ ಚ ।
ಜ್ಞಾನಾನ್ಯೇತಾನಿ ಭಿನ್ನಾನಿ ನಾತ್ರ ಕಾರ್ಯಾ ವಿಚಾರಣಾ ॥

ಈ ಎಲ್ಲ ದರ್ಶನಗಳೂ ಪರಸ್ಪರ ವಿರುದ್ಧಗಳು. ಹೀಗೆ ಹೇಳಿ ವೈಶಂಪಾಯನರು-

ಪಂಚರಾತ್ರಸ್ಯ ಕೃತ್ಸ್ನಸ್ಯ ವಕ್ತಾ ನಾರಾಯಣಃ ಸ್ವಯಮ್ ।
ಜ್ಞಾನೇಷ್ವೇತೇಷು ರಾಜೇಂದ್ರ ಸರ್ವೇಷ್ವೇತದ್ವಿಶಿಷ್ಯತೇ ॥

ಪಂಚರಾತ್ರ ಶ್ರೇಷ್ಠವಾದ ಗ್ರಂಥ ಎಂದಿದ್ದಾರೆ. ಹೀಗೆ ಸಾಂಖ್ಯಾದಿ ದರ್ಶನಗಳಿಗೂ ಪಂಚರಾತ್ರಾಗಮಕ್ಕೂ ವಿರೋಧವನ್ನು ತಾವೇ ಹೇಳಿ ಅವುಗಳಲ್ಲಿ ಒಂದನ್ನು ಪ್ರಮಾಣವೆಂದು ಹೇಳಿರುವುದರಿಂದ ಅದಕ್ಕೆ ವಿರುದ್ಧವಾದ ಇತರ ದರ್ಶನಗಳು ಅಪ್ರಮಾಣಗಳೆಂದು ತಿಳಿಯುತ್ತದೆ. ಆದ್ದರಿಂದ ಪಾಶುಪತಾಗಮ ಪ್ರಮಾಣವಲ್ಲ.

ಇಲ್ಲಿ ಒಂದು ಆಕ್ಷೇಪವಿದೆ - ''ವೈಶಂಪಾಯನರು ಪ್ರಸ್ತಾಪಿಸಿದ ದರ್ಶನಗಳಲ್ಲಿ ''ವೇದಾರಣ್ಯಕಮೇವ ಚ'' ಎಂದು ವೇದ ಸೇರಿದೆ. ಮುಂದೆ ಪ್ರಶಂಸೆ ಮಾಡುವಾಗ ಪಂಚರಾತ್ರವನ್ನಷ್ಟೇ ಹೇಳಲಾಗಿದೆ. ಇದರಿಂದ ವೇದವೂ ಅಪ್ರಮಾಣವೆಂದಂತಾಗ ಲಿಲ್ಲವೇ?'' ಎಂದು.

ಅದಕ್ಕೆ ಹೀಗೆ ಸಮಾಧಾನ - ಸಾಂಖ್ಯಾದಿ ದರ್ಶನಗಳ ಸಾಲಿನಲ್ಲಿ ಪಂಚರಾತ್ರದ ಪ್ರಸ್ತಾವವೇ ಇಲ್ಲ. ಆದರೆ ''ಪಂಚರಾತ್ರಸ್ಯ ಕೃತ್ಸ್ನಸ್ಯ'' ಎಂದು ಪಂಚರಾತ್ರವನ್ನು ಪ್ರಶಂಸೆ ಮಾಡಲಾಗಿದೆ. ಹಿಂದೆ ಪ್ರಸ್ತುತವಾದುದರಲ್ಲಿ ಒಂದನ್ನೇ ಪ್ರಶಂಸೆ ಮಾಡಬೇಕು. ಪಂಚರಾತ್ರ ಅಪ್ರಸ್ತುತವಾದರೆ ಅದನ್ನು ಪ್ರಶಂಸೆ ಮಾಡುವುದು ಸರಿಯಲ್ಲ. ಆದ್ದರಿಂದ ''ವೇದಾರಣ್ಯಕಮೇವ ಚ'' ಎಂಬ ಪದದಿಂದ ವೇದಗಳೊಂದಿಗೆ, ಅವುಗಳಿಗೆ ಅವಿರುದ್ಧವಾದ ಪಂಚರಾತ್ರವನ್ನೂ ತೆಗೆದುಕೊಳ್ಳಬೇಕು. ಅದನ್ನು ಪ್ರಶಂಸೆ ಮಾಡಿರುವುದರಿಂದ ಅದಕ್ಕೆ ಅವಿರುದ್ಧವಾದ ವೇದವನ್ನೂ ಪ್ರಶಂಸಿಸಿದಂತಾಯಿತು. ಆದ್ದರಿಂದ ವೇದಗಳು ಪ್ರಮಾಣಗಳು.

3) ಶಾಂಕರಭಾಷ್ಯದಲ್ಲಿ ''ಶಾಸ್ತ್ರಯೋನಿ'' ಎಂಬ ಶಬ್ದಕ್ಕೆ ''ಶಾಸ್ತ್ರಸ್ಯ ಯೋನಿಃ- ವೇದಾದಿ ಶಾಸ್ತ್ರಗಳಿಗೆ ಕಾರಣ'' ಎಂಬ ಅರ್ಥವನ್ನು ನಿರೂಪಿಸಲಾಗಿದೆ. ಅದು ಸರಿಯಲ್ಲ ಎಂದು ತಿಳಿಸಲು ಆಚಾರ್ಯರು ಆ ಪದಕ್ಕೆ ಬಹುವ್ರೀಹಿ ಸಮಾಸ ಮಾಡಿ ಬೇರೆ ಅರ್ಥವನ್ನು ಹೇಳಿದ್ದಾರೆ.

'ಬ್ರಹ್ಮನು ವೇದಾದಿ ಶಾಸ್ತ್ರಗಳನ್ನು ರಚಿಸಿದವನು' ಎಂದು ಶಾಂಕರಭಾಷ್ಯದ ಅರ್ಥ. 'ಬ್ರಹ್ಮನು ವೇದಾದಿಶಾಸ್ತ್ರಗಳಿಂದ ವೇದ್ಯ' ಎಂದು ಆಚಾರ್ಯರು ಹೇಳಿದ ಅರ್ಥ.

## ದ್ವೈತದರ್ಶನದಲ್ಲಿ ಸೂತ್ರಾರ್ಥ

### ಓಂ ॥ ಶಾಸ್ತ್ರಯೋನಿತ್ವಾತ್ ॥ ಓಂ

'ತಸ್ಯ' ಎಂಬ ಪದವನ್ನು ಅಧ್ಯಾಹಾರ ಮಾಡಿಕೊಳ್ಳಬೇಕು. ತಸ್ಯ= ಜಗತ್ಕಾರಣನಾದ ಬ್ರಹ್ಮನಿಗೆ ಶಾಸ್ತ್ರಯೋನಿತ್ವಾತ್= ಶಾಸ್ತ್ರವೇ ಪ್ರಮಾಣ.

(ತಸ್ಯ ಜನ್ಮಾದಿಕಾರಣಸ್ಯೇತಿ ವರ್ತತೇ। ಶಾಸ್ತ್ರಂ ವೇದಃ ತದನುಸಾರಿ ಪೌರುಷೇಯಗ್ರಂಥಶ್ಚ ಯೋನಿಃ= ಜ್ಞಪ್ತಿಕಾರಣಂ ಇತಿ ಯಾವತ್, ಯಸ್ಯ ತತ್ ಶಾಸ್ತ್ರಯೋನಿ।

ತಸ್ಯ ಭಾವಃ ತತ್ತ್ವಂ, ತಸ್ಮಾದಿತ್ಯರ್ಥಃ । ಅನುಮಾನೇನ ಪಾಶುಪತಾದಿನಾ ವಾ ನ ಜನ್ಮಾದಿಕಾರಣಂ ಜ್ಞೇಯಮಿತಿ ನಾತಿವ್ಯಾಪ್ತಿರಿತಿ ಭಾವಃ- ತಂ. ದೀಪಿಕಾ)

**ಶಾಂಕರಭಾಷ್ಯದಲ್ಲಿ ಹೇಳಿದ ಸೂತ್ರಾರ್ಥ :** ಎರಡನೆಯ ಸೂತ್ರದಲ್ಲಿ ಬ್ರಹ್ಮ ಜಗತ್ಕಾರಣ ಎಂದು ಹೇಳಲಾಗಿದೆ. ಜಗತ್ತಿಗೆ ಕಾರಣವಾದ ಸೂಕ್ಷ್ಮವಸ್ತುಗಳನ್ನು ತಿಳಿದು ಬ್ರಹ್ಮನು ಜಗತ್ತನ್ನು ನಿರ್ಮಿಸಬೇಕಾದುದರಿಂದ ಅವನು ಸರ್ವಜ್ಞ ಎಂದೂ ಆ ಸೂತ್ರದಲ್ಲಿ ಅರ್ಥಾತ್ ತಿಳಿಯುತ್ತದೆ. ಹೀಗೆ ಆಕ್ಷಿಪ್ತವಾದ ಸರ್ವಜ್ಞತ್ವವನ್ನು ಯುಕ್ತಿಯಿಂದ ಸಮರ್ಥಿಸಲು ಶಾಸ್ತ್ರಯೋನಿತ್ವಾತ್ ಎಂಬ ಈ ಸೂತ್ರ ಹೊರಟಿದೆ. ''ಸಕಲ ವಿಷಯಗಳನ್ನೂ ಪ್ರತಿಪಾದಿಸುವ ವೇದಾದಿ ಶಾಸ್ತ್ರಗಳನ್ನು ಬ್ರಹ್ಮ ರಚಿಸಿದ್ದಾನೆ. ಆದ್ದರಿಂದ ಅವನು ಶಾಸ್ತ್ರಾರ್ಥಗಳೆಲ್ಲವನ್ನೂ ತಿಳಿದ ಸರ್ವಜ್ಞ'' ಎಂದು ಸೂತ್ರದ ಅಭಿಪ್ರಾಯ. ಹೀಗೆ ಈ ಸೂತ್ರವನ್ನು ಶಾಂಕರಭಾಷ್ಯದಲ್ಲಿ ವಿವರಿಸಲಾಗಿದೆ.

ಆದರೆ ಇದು ಅನುಪಯುಕ್ತ ಹಾಗೂ ಅಯುಕ್ತ ಎಂದು ಟೀಕೆಯಲ್ಲಿ ನಿರೂಪಿಸಲಾಗಿದೆ. 'ಜಗತ್ತಿಗೆ ಕಾರಣ' ಎಂದು ಎರಡನೆಯ ಸೂತ್ರದಲ್ಲಿ ಹೇಳಿದಾಗ ಬ್ರಹ್ಮನಿಗೆ ಸರ್ವಜ್ಞತ್ವ ಅಸ್ಫುಟವಾಗಿ ತಿಳಿದರೆ, ಜಗತ್ತಿನ ಏಕದೇಶವಾದ ಶಾಸ್ತ್ರಕ್ಕೆ ಕಾರಣ ಎಂದು ಈ ಸೂತ್ರದಲ್ಲಿ ಹೇಳಿದಾಗ ಅದು ಸ್ಫುಟವಾಗುವುದು ಹೇಗೆ? ಆದ್ದರಿಂದ ಇದು ಅನುಪಯುಕ್ತ. ವೇದಾದಿ ಶಾಸ್ತ್ರಗಳನ್ನು ಪರಮಾತ್ಮ ರಚಿಸಿದ್ದಿದ್ದರೆ ಅವನು ಸರ್ವಜ್ಞನೆನ್ನಬಹುದಿತ್ತು. ಆದರೆ ವೇದಗಳು ಅಪೌರುಷೇಯಗಳಾದುದರಿಂದ ಅವನು ಅವುಗಳನ್ನು ರಚಿಸಿಲ್ಲ. ಉಚ್ಚರಿಸುತ್ತಾನೆ, ಅಷ್ಟೆ. ಆದರಿಂದ ಅವನನ್ನು ಸರ್ವಜ್ಞ ಎಂದು ಹೇಗೆ ನಿರ್ಧರಿಸುವುದು? ಆದ್ದರಿಂದ ಇದು ಅಯುಕ್ತ.

**ಶಾಂಕರಭಾಷ್ಯದಲ್ಲಿ ಹೇಳಿದ ಇನ್ನೊಂದು ಅರ್ಥ :** ಶಾಂಕರಭಾಷ್ಯದಲ್ಲಿ ಈ ಸೂತ್ರಕ್ಕೆ ಎರಡು ಅರ್ಥಗಳನ್ನು ಹೇಳಲಾಗಿದೆ. ಬ್ರಹ್ಮನಿಗೆ ಸರ್ವಜ್ಞತ್ವ ಸಮರ್ಥನೆಗಾಗಿ ''ಶಾಸ್ತ್ರಸ್ಯಯೋನಿಃ'' ಎಂಬುದು ಮೊದಲ ಅರ್ಥ. ಅದರ ವಿವರಣೆಯನ್ನು ಈ ಹಿಂದೆಯೇ ನೀಡಲಾಗಿದೆ. ಇನ್ನೊಂದು ಅರ್ಥವನ್ನು ದ್ವೈತವಾದದಲ್ಲಿ ಹೇಳಿದಂತೆಯೇ ಮಾಡಲಾಗಿದೆ- ''ಬ್ರಹ್ಮನನ್ನು ತಿಳಿಯಲು ಶಾಸ್ತ್ರವೇ ಆಧಾರ' ಎಂದು. ಈ ಅರ್ಥ ದ್ವೈತವಾದದಲ್ಲಿ ಸಮಂಜಸವಾದರೂ ಅದ್ವೈತವಾದದಲ್ಲಿ ಸಮಂಜಸವೆನಿಸುವುದಿಲ್ಲ- ಅದ್ವೈತದರ್ಶನದಲ್ಲಿ ಪ್ರಥಮ ಸೂತ್ರದಲ್ಲಿ ಪ್ರಸ್ತುತನಾದ ಬ್ರಹ್ಮ ನಿರ್ಗುಣ. ಅವನು ಶಬ್ದವಾಚ್ಯನೇ ಅಲ್ಲವಾದುದರಿಂದ ಶಾಸ್ತ್ರಗಳು ಅಂತಹ ಬ್ರಹ್ಮನನ್ನು ತಿಳಿಸಲಾರವು. ಶಾಸ್ತ್ರಗಳು ತಿಳಿಸುವ ಬ್ರಹ್ಮ ಸಗುಣ ಬ್ರಹ್ಮ. ''ಯಃ ಸರ್ವಜ್ಞಃ'' ''ಯತೋ ವಾ ಇಮಾನಿ ಭೂತಾನಿ ಜಾಯಂತೇ'' ಮುಂತಾದ ಉಪನಿಷತ್ತುಗಳು ಗುಣವಿಶಿಷ್ಟನಾದ ಬ್ರಹ್ಮನನ್ನೇ ಪ್ರತಿಪಾದಿಸುತ್ತವೆ. ಆದರೆ, ಅಂತಹ ಬ್ರಹ್ಮ ಉಪಾಸ್ಯನೂ ಅಲ್ಲ, ಸತ್ಯನೂ ಅಲ್ಲ, ಅಂದಮೇಲೆ ಬ್ರಹ್ಮ ಶಾಸ್ತ್ರಗಮ್ಯನಾಗುವುದು ಹೇಗೆ?

ಯತ್ ಸತ್ಯಂ ನೈವ ತದ್ವೇದ್ಯಂ ಯದ್ ವೇದ್ಯಂ ತಚ್ಚ ನೈವ ಸತ್ ।
ಇತಿ ತೇ ಸಮಯಸ್ತತ್ರ ಕುತ್ರಾರ್ಥೇ ಶಾಸ್ತ್ರಮಾನತಾ ॥ (ಚಂದ್ರಿಕಾ)

## ರಾಮಾನುಜ ಭಾಷ್ಯದಲ್ಲಿ ಹೇಳಿದ ಅರ್ಥ

ಶಾಸ್ತ್ರೇಣೈವಾವಸೇಯತ್ವಾತ್ ಜಗದ್ಯೋನೇಃ ಪರಾತ್ಮನಃ ।
ಅನುಮಾತುಮಶಕ್ಯತ್ವಾತ್ ಇತಿ ಶಾಸ್ತ್ರಮಿಹಾರ್ಥವತ್ ॥

'ಈ ಪ್ರಪಂಚಕ್ಕೆ ಒಬ್ಬ ಕರ್ತನಿದ್ದಾನೆ' ಎಂಬ ಅನುಮಾನದಿಂದ ಬ್ರಹ್ಮನನ್ನು ತಿಳಿಯಬಹುದು. ಹೀಗೆ ಅನುಮಾನದಿಂದ ತಿಳಿದ ಬ್ರಹ್ಮ ತತ್ತ್ವವನ್ನೇ 'ಯತೋ ವಾ' ಇತ್ಯಾದಿ ಕಾರಣವಾಕ್ಯಗಳು ಪ್ರತಿಪಾದಿಸುತ್ತಿವೆ. ಹೀಗಾಗಿ ಕಾರಣವಾಕ್ಯಗಳು ಅನುವಾದಕಗಳಾದುದರಿಂದ ಅಪ್ರಮಾಣ ಎಂಬ ಪ್ರಶ್ನೆಗೆ ಈ ಸೂತ್ರ ಉತ್ತರಿಸುತ್ತದೆ. ಬ್ರಹ್ಮನನ್ನು ತಿಳಿಯಲು ಶಾಸ್ತ್ರವೇ ಸಾಧನ. ಇತರ ಪ್ರಮಾಣಗಳಿಂದ ಅವನನ್ನು ಜಗತ್ಕಾರಣ ಎಂದು ತಿಳಿಯಲಾಗದು.

**ಚಂದ್ರಿಕಾದಲ್ಲಿ ಮಾಡಿರುವ ವಿಮರ್ಶೆ :** ಈ ಸಿದ್ಧಾಂತದಲ್ಲೂ 'ಶಾಸ್ತ್ರಯೋನಿತ್ವಾತ್' ಎಂಬ ಪದಕ್ಕೆ ಆಚಾರ್ಯರು ಹೇಳಿದಂತೆ ಬಹುವ್ರೀಹಿ ಸಮಾಸವನ್ನೇ ಮಾಡಲಾಗಿದೆ. ಆದರೂ ಈ ಅಭಿಪ್ರಾಯ ಪೂರ್ವಾಪರ ಸಂಗತವಲ್ಲ. ಈ ರೀತಿ ಪೂರ್ವಪಕ್ಷ ಸಿದ್ಧಾಂತಗಳಿಂದ ಈ ಅಧಿಕರಣವು, ಕೇವಲ 'ಬ್ರಹ್ಮಕಾರಣ' ಎಂದು ಹೇಳುವ ವಾಕ್ಯಗಳ ವಿಚಾರಕ್ಕೆ ಹೊರಟಿದೆ ಎಂದಂತಾಗುತ್ತದೆ. ಮೊದಲ ಸೂತ್ರ 'ಸಮಸ್ತ ವೇದಾಂತಗಳ ವಿಚಾರ ನಡೆಸಬೇಕು' ಎನ್ನುತ್ತದೆ. ಈ ಅಧಿಕರಣದ ಮುಂದಿನ ನಾಲ್ಕನೆಯ ಸೂತ್ರವೂ ''ಸಕಲ ಶಾಸ್ತ್ರಗಳೂ ಬ್ರಹ್ಮನಲ್ಲೇ ಸಮನ್ವಯಗೊಳ್ಳುತ್ತವೆ'' ಎನ್ನುತ್ತದೆ. ಆದರೆ ಮಧ್ಯದ ಈ ಎರಡು ಸೂತ್ರಗಳು ಮಾತ್ರ ಉಪನಿಷತ್ತುಗಳಲ್ಲಿ ಬಂದ ಕೆಲವು ವಾಕ್ಯಗಳಿಗೆ ಮಾತ್ರ ಸೀಮಿತಗೊಂಡರೆ ಪೂರ್ವಾಪರಗಳಿಗೆ ಸಂಗತವಾಗುವುದಿಲ್ಲ.

**ಇಲ್ಲಿಗೆ ಶಾಸ್ತ್ರಯೋನಿತ್ವಾಧಿಕರಣ ಮುಗಿಯಿತು.**

# ಸಮನ್ವಯಾಧಿಕರಣ -4

**ಅಜ್ಞಾನಾಂ ಪ್ರತೀಯಮಾನಮಪಿ ನೇತರೇಷಾಂ ಶಾಸ್ತ್ರಯೋನಿತ್ವಮ್। ಕುತಃ ?**

**ಓಂ॥ ತತ್ತು ಸಮನ್ವಯಾತ್॥ ಓಂ**

**ಅನ್ವಯಃ ಉಪಪತ್ತ್ಯಾದಿ ಲಿಂಗಮ್। ಉಕ್ತಂ ಚ ಬೃಹತ್ಸಂಹಿತಾಯಾಮ್-**

**ಉಪಕ್ರಮೋಪಸಂಹಾರಾವಭ್ಯಾಸೋಽಪೂರ್ವತಾ ಫಲಮ್।**
**ಅರ್ಥವಾದೋಪಪತ್ತೀ ಚ ಲಿಂಗಂ ತಾತ್ಪರ್ಯ ನಿರ್ಣಯೇ ॥ ಇತಿ।**

**ಉಪಕ್ರಮಾದಿ ತಾತ್ಪರ್ಯಲಿಂಗೈಃ ಸಮ್ಯಕ್ ನಿರೂಪ್ಯಮಾಣೇ ತದೇವ ಶಾಸ್ತ್ರಗಮ್ಯಮ್ ।**

**ಮಾಂ ವಿಧತ್ತೇಽಭಿಧತ್ತೇ ಮಾಂ ವಿಕಲ್ಪ್ಯಾಽಪೋಹ್ಯ ಇತ್ಯಹಮ್ ।**
**ಇತ್ಯಸ್ಯಾ ಹೃದಯಂ ಸಾಕ್ಷಾತ್ ನಾನ್ಯೋ ಮದ್ವೇದ ಕಶ್ಚನ ।**
**ಇತಿ ಭಾಗವತೇ॥ (ಸ್ಕಂಧ-11.21.42)**

**॥ ಇತಿ ಸಮನ್ವಯಾಧಿಕರಣಮ್ ॥**

ಅಜ್ಞಾನಿಗಳಿಗೆ ಕಂಡರೂ, ವಿಷ್ಣುವಿಗಿಂತ ಇತರರು ಶಾಸ್ತ್ರಗಮ್ಯರಲ್ಲ. ಏಕೆಂದರೆ ಸಮನ್ವಯದಿಂದ ವಿಷ್ಣುವೇ ಶಾಸ್ತ್ರಗಮ್ಯ.

ಅನ್ವಯ ಎಂದರೆ ಉಪಪತ್ತಿ ಮೊದಲಾದ ತಾತ್ಪರ್ಯಲಿಂಗಗಳು. ಬೃಹತ್ಸಂಹಿತೆಯಲ್ಲಿ ಹೀಗಿದೆ- ''ಉಪಕ್ರಮ, ಉಪಸಂಹಾರ, ಅಭ್ಯಾಸ, ಅಪೂರ್ವತಾ, ಫಲ, ಅರ್ಥವಾದ, ಉಪಪತ್ತಿ ಇವುಗಳು ಶಾಸ್ತ್ರದ ತಾತ್ಪರ್ಯವನ್ನು ನಿರ್ಣಯಿಸುವ ಲಿಂಗಗಳು'' ಎಂದು.

ಒಟ್ಟಿನಲ್ಲಿ ಸೂತ್ರಾರ್ಥ - ಉಪಕ್ರಮಾದಿ ತಾತ್ಪರ್ಯಲಿಂಗಗಳ ಬಲಾಬಲ ವಿಮರ್ಶೆ ಮಾಡಿದಾಗ ಬ್ರಹ್ಮನೇ ಸಕಲಶಾಸ್ತ್ರಪ್ರತಿಪಾದ್ಯ.

ಭಾಗವತದಲ್ಲಿ ಹೀಗಿದೆ- ''ವೇದಗಳು ನನ್ನ ಪ್ರೀತಿಗಾಗಿ ಕರ್ಮಗಳನ್ನು ವಿಧಿಸುತ್ತವೆ. ವೇದದಲ್ಲಿರುವ ಇಂದ್ರಾದಿಶಬ್ದಗಳು ನನ್ನನ್ನೇ ಹೇಳುತ್ತವೆ. ''ಚತ್ವಾರಿವಾಕ್'' ಇತ್ಯಾದಿ ವೇದವಾಕ್ಯಗಳು ನನ್ನದೇ ಬಹುರೂಪಗಳನ್ನು ಹೇಳುತ್ತವೆ. ನಿಷೇಧವಾಕ್ಯಗಳು ನನಗೆ ಅಪ್ರಿಯವಾದುದನ್ನು ಮಾಡಬಾರದು ಎನ್ನುತ್ತವೆ. ಹೀಗೆ, ವೇದದ ಹೃದಯವನ್ನು ನನ್ನನ್ನು (ಕೃಷ್ಣನನ್ನು) ಬಿಟ್ಟು ಇತರರು ತಿಳಿಯಲಾರರು''

**ವಿವರಣೆ** : ಹಿಂದಿನ ಸೂತ್ರದಲ್ಲಿ 'ಜಗತ್ಕಾರಣನಾಗಿ ಶಾಸ್ತ್ರಗಳಿಂದ ಪ್ರತಿಪಾದ್ಯನಾದವನು ವಿಷ್ಣು ಮಾತ್ರ' ಎನ್ನಲಾಯಿತು. ವಿಷ್ಣುವಿನಂತೆ ಇತರರೂ ಶಾಸ್ತ್ರ ಪ್ರತಿಪಾದ್ಯರಾಗಿದ್ದಾರೆ ಎಂದು ಇಲ್ಲಿ ಪೂರ್ವಪಕ್ಷ ಮಾಡಿ ನಿಷೇಧ ಮಾಡುವುದರಿಂದ ಹಿಂದಿನ ಅಧಿಕರಣದೊಂದಿಗೆ ಈ ಅಧಿಕರಣ ಸಂಗತವಾಗಿದೆ.

**ಪೂರ್ವಪಕ್ಷ :** ''ವಿಶ್ವಾಧಿಕೋ ರುದ್ರಃ'' ಎಂಬ ಶ್ರುತಿ ರುದ್ರನೇ ಸರ್ವೋತ್ತಮ ಎನ್ನುತ್ತದೆ. ''ಹಿರಣ್ಯಗರ್ಭಃ ಸಮವರ್ತತಾಗ್ರೇ'' ಎಂಬ ಶ್ರುತಿ ಚತುರ್ಮುಖಬ್ರಹ್ಮನೇ ಸೃಷ್ಟಿಯ ಆರಂಭದಲ್ಲಿ ಇದ್ದ ಎನ್ನುತ್ತದೆ. ಹೀಗೆ ರುದ್ರಾದಿಗಳೂ ಜಗತ್ಕಾರಣರು ಎಂದು ಶಾಸ್ತ್ರಗಳಲ್ಲಿ ಹೇಳಲಾಗಿದೆ. ಆದ್ದರಿಂದ ಬ್ರಹ್ಮನ ಲಕ್ಷಣಕ್ಕೆ ಅತಿವ್ಯಾಪ್ತಿ ಇದ್ದೇ ಇದೆ.

**ಸಿದ್ಧಾಂತ :** ವೇದದ ಅರ್ಥ ನಿರ್ಣಯಕ್ಕೆ ಏಳು ಯುಕ್ತಿಗಳನ್ನು ಹೇಳಲಾಗಿದೆ. ಈ ಯುಕ್ತಿಗಳನ್ನು ಸರಿಯಾಗಿ ಪರಿಶೀಲಿಸಿದಾಗ ರುದ್ರಾದಿಪರವಾಗಿ ಕಾಣುವ ವಾಕ್ಯಗಳೂ ಬ್ರಹ್ಮನನ್ನೇ ಪ್ರತಿಪಾದಿಸುತ್ತವೆ ಎಂದು ತಿಳಿಯುತ್ತದೆ. ಆದ್ದರಿಂದ ಸಮಗ್ರಶಾಸ್ತ್ರಗಳಲ್ಲಿ ಜಗತ್ಕಾರಣನಾಗಿ ಪ್ರತಿಪಾದ್ಯನಾದವನು ವಿಷ್ಣುಮಾತ್ರ.

**3.** ಇಲ್ಲಿ ಉಪಕ್ರಮಾದಿಗಳ ಜೊತೆಗೆ,

ಶ್ರುತಿರ್ಲಿಂಗಂ ಸಮಾಖ್ಯಾ ಚ ವಾಕ್ಯಂ ಪ್ರಕರಣಂ ತಥಾ।

ಪೂರ್ವಂ ಪೂರ್ವಂ ಬಲೀಯಃ ಸ್ಯಾತ್ ಏವಮಾಗಮನಿರ್ಣಯೇ।

ಎಂಬ ಸ್ಕಂದ ಪುರಾಣದಲ್ಲಿ ಹೇಳಲಾದ ಶ್ರುತ್ಯಾದಿಗಳನ್ನು ತೆಗೆದುಕೊಳ್ಳಬೇಕು. ಉಪಕ್ರಮಾದಿಗಳು ತಾತ್ಪರ್ಯನಿರ್ಣಾಯಕಗಳು. ಶ್ರುತ್ಯಾದಿಗಳು ಶಬ್ದಶಕ್ತಿ ನಿರ್ಣಾಯಕಗಳು.

**ಅ. ಉಪಕ್ರಮ :** ಪ್ರಕರಣದ ಆರಂಭದ ವಾಕ್ಯ ಉಪಕ್ರಮ. ಅದಕ್ಕೆ ಅನುಗುಣವಾಗಿ ಆ ಪ್ರಕರಣದಲ್ಲಿ ಬಂದಿರುವ ಇತರ ವಾಕ್ಯಗಳಿಗೆ ಅರ್ಥವನ್ನು ನಿರ್ಣಯಿಸಬೇಕು. ತೈತ್ತಿರೀಯ ಉಪನಿಷತ್ತಿನ ಬ್ರಹ್ಮವಲ್ಲಿ 'ಬ್ರಹ್ಮವಿದಾಪ್ನೋತಿ ಪರಂ' ಎಂದು ಆರಂಭಗೊಂಡಿದೆ. ಬ್ರಹ್ಮನ ಪ್ರಸ್ತಾಪ ಆರಂಭದಲ್ಲಿ ಇರುವುದರಿಂದ ಮುಂದಿನ ವಾಕ್ಯಗಳನ್ನು ಬ್ರಹ್ಮ ಪರವಾಗಿ ಅರ್ಥೈಸಿಕೊಳ್ಳಬೇಕು. ಆದ್ದರಿಂದ ಅನ್ನಮಯಾದಿ ಪ್ರಕರಣಗಳೆಲ್ಲವೂ ಬ್ರಹ್ಮಪರ, ಜೀವಪ್ರತಿಪಾದಕಗಳಲ್ಲ.

**ಆ. ಉಪಸಂಹಾರ :** ಪ್ರಕರಣದ ಅಂತಿಮ ವಾಕ್ಯ ಉಪಸಂಹಾರ. ಅದಕ್ಕೆ ಅನುಗುಣವಾಗಿ ಹಿಂದಿನ ವಾಕ್ಯಗಳಿಗೆ ಅರ್ಥವನ್ನು ಮಾಡಬೇಕು. ಛಾಂದೋಗ್ಯೋಪನಿಷತ್ತಿನ ಒಂದೊಂದು ಪ್ರಕರಣದ ಕೊನೆಯಲ್ಲೂ 'ಅತತ್ತ್ವಮಸಿ' ಎಂದು ಜೀವಬ್ರಹ್ಮಭೇದವನ್ನು ಹೇಳಿರುವುದರಿಂದ ಆ ಪ್ರಕರಣದಲ್ಲಿ ಬರುವ ಎಲ್ಲಾ ವಾಕ್ಯಗಳನ್ನೂ ಭೇದಪರವಾಗಿಯೇ ಅರ್ಥೈಸಬೇಕು.

**ಇ. ಅಭ್ಯಾಸ :** ಒಂದೇ ಶಬ್ದವನ್ನು ಅಥವಾ ವಿಷಯವನ್ನು ಅನೇಕ ಬಾರಿ ಹೇಳುವುದು ಅಭ್ಯಾಸ. ತೈತ್ತಿರೀಯ ಶ್ರುತಿಯ ಆನಂದಮಯ ಪ್ರಕರಣದಲ್ಲಿ ''ಬ್ರಹ್ಮಪುಚ್ಛಂ ಪ್ರತಿಷ್ಠಾ'' 'ಅಸತ್ ಬ್ರಹ್ಮೇತಿ ವೇದ ಚೇತ್' ಹೀಗೆ ಅನೇಕ ಬಾರಿ (ಅಭ್ಯಾಸ) ಬ್ರಹ್ಮ ಶಬ್ದವನ್ನು ಆನಂದಮಯನಲ್ಲಿ ಪ್ರಯೋಗ ಮಾಡಿರುವುದರಿಂದ ಆನಂದಮಯ ಬ್ರಹ್ಮ ಎಂದು ನಿರ್ಣಯಿಸಲಾಗಿದೆ.

**ಈ. ಅಪೂರ್ವತಾ :** ನಾವು ತಿಳಿದಿರುವ ವಿಷಯವನ್ನು ಹೇಳುವ ಉಪನಿಷದ್ವಾಕ್ಯಗಳಿಗೆ ತಿಳಿಯದ ಅರ್ಥವನ್ನು ಹೇಳಲು ಬರುವುದಾದರೆ ಅದೇ ಅರ್ಥವನ್ನು ಹೇಳಬೇಕು. ಆಗ ವೇದವಾಕ್ಯಗಳಿಗೆ ಅಪೂರ್ವಾರ್ಥ ಪ್ರತಿಪಾದಕತ್ವ ಬಂದಂತಾಗುತ್ತದೆ.

ಜೀವಾತ್ ಭವಂತಿ ಭೂತಾನಿ ಜೀವೇ ತಿಷ್ಠಂತಿ ಅಚಂಚಲಾಃ।

ಜೀವೇ ತು ಲಯಮಿಚ್ಛಂತಿ॥

ಈ ವಾಕ್ಯದಲ್ಲಿ ಜೀವಶಬ್ದಕ್ಕೆ ಪ್ರಸಿದ್ಧವಾದ ಅರ್ಥವನ್ನು ಹೇಳುವುದಕ್ಕಿಂತಲೂ 'ಪರಮಾತ್ಮ' ಎಂಬ ಅಪೂರ್ವ ಅರ್ಥವನ್ನು ಹೇಳುವುದು ಉಚಿತ.

**ಉ. ಫಲಂ :** ನಿಷ್ಫಲವಾದ ಪ್ರಮೇಯವನ್ನು ಪ್ರತಿಪಾದಿಸುವುದಕ್ಕಿಂತಲೂ ಸಫಲವಾದ ಪ್ರಮೇಯವನ್ನು ಪ್ರತಿಪಾದಿಸಿದಾಗ 'ಫಲ' ಎಂಬ ತಾತ್ಪರ್ಯ ಲಿಂಗವನ್ನು ಅನುಸರಿಸಿ ದಂತಾಗುತ್ತದೆ. 'ಅಸತಃ ಸದಜಾಯತ' ಎಂಬ ಶ್ರುತಿ ಅಸತ್ತಿನಿಂದ ಸತ್ ಎಂಬ ಬ್ರಹ್ಮನ ಉತ್ಪತ್ತಿಯನ್ನು ಹೇಳುವಂತಿದೆ. ಆದರೆ ಹೀಗೆ ಬ್ರಹ್ಮನ ಉತ್ಪತ್ತಿಯನ್ನು ತಿಳಿಯುವುದರಿಂದ ಯಾವ ಫಲವೂ ಇಲ್ಲ. 'ಸದೇವ ಸೋಮ್ಯ ಇದಮಗ್ರ ಆಸೀತ್' ಎಂಬ ವಾಕ್ಯದಲ್ಲಿ ಸತ್ ಪದಕ್ಕೆ ಬ್ರಹ್ಮ ಎಂದು ಅರ್ಥವನ್ನು ಹೇಳಿ ಬ್ರಹ್ಮನಿಂದ ಈ ಜಗತ್ತು ಹುಟ್ಟಿದೆ ಎಂದು ತಿಳಿದಾಗ ಮೋಕ್ಷರೂಪ ಫಲ ಲಾಭವಾಗುತ್ತದೆ. ಆದ್ದರಿಂದ 'ಅಸತಃ ಸದಜಾಯತ' ಎಂಬಲ್ಲೂ 'ಅಸತ್' ಎಂದರೆ ಬ್ರಹ್ಮ ಎಂದೇ ಅರ್ಥ. ಆಗ ಸಫಲವಾದ ಅರ್ಥ ಲಾಭವಾಗುತ್ತದೆ.

**ಊ. ಅರ್ಥವಾದ : 1.** ಸ್ತುತಿ, ನಿಂದಾ, ಪರಕೃತಿ, ಪುರಾಕಲ್ಪ ಎಂದು ಅರ್ಥವಾದ ನಾಲ್ಕು ವಿಧವಾಗಿದೆ. ಶ್ರುತಿ, ತಾನು ಒಂದು ಪ್ರಮೇಯವನ್ನು ಹೇಳಿ ಅದನ್ನು ಪ್ರಶಂಸೆ ಮಾಡಿದರೆ ಅದರ ಬಗ್ಗೆ ಶ್ರುತಿಗೆ ತಾತ್ಪರ್ಯವಿದೆ ಎಂದರ್ಥ.

ವಾಯುದೇವತಾಕ ಯಾಗವನ್ನು ಹೇಳಿ ಶ್ರುತಿಯು ''ವಾಯುರ್ವೈ ಕ್ಷೇಪಿಷ್ಠಾ ದೇವತಾ'' ಎಂದು ವಾಯು ಶೀಘ್ರಫಲವನ್ನು ನೀಡುತ್ತಾನೆ (ಸ್ತುತಿ) ಎಂದಿದೆ. ಇದರಿಂದ ಆ ಯಾಗವನ್ನು ಮಾಡಲೇಬೇಕು ಎಂದು ಶ್ರುತಿಯ ಇಂಗಿತ.

**2.** 'ಅಸ್ತಿ ಬ್ರಹ್ಮೇತಿ ಚೇತ್ ವೇದ'' ಎಂದು ಶ್ರುತಿಯು ಬ್ರಹ್ಮನ ಅಸ್ತಿತ್ವವನ್ನು ತಿಳಿಯಬೇಕೆಂದು ಹೇಳಿ 'ಅಸನ್ನೇವ ಸ ಭವತಿ। ಅಸದ್ ಬ್ರಹ್ಮೇತಿ ವೇದ ಚೇತ್' ಎಂದು 'ಬ್ರಹ್ಮ ಅಸತ್ - ಇಲ್ಲ' ಎಂದು ತಿಳಿದರೆ ಅನರ್ಥವನ್ನು (ನಿಂದಾ)ಹೇಳುತ್ತದೆ. ಇದರಿಂದ ಬ್ರಹ್ಮಾಸ್ತಿತ್ವ ಜ್ಞಾನದಲ್ಲಿ ಶ್ರುತಿಗೆ ತಾತ್ಪರ್ಯವಿದೆ ಎಂದು ತಿಳಿಯಬಹುದು.

**3.** 'ಪರಕೃತಿ' ಎಂದರೆ ಇತರರ ನಡವಳಿಕೆ. ಶ್ರುತಿ ತಾನು ಹೇಳಿದ ವಿಷಯಕ್ಕೆ ಆಧಾರವಾಗಿ ಇತರರ ಆಚರಣೆಯನ್ನು ಉದಾಹರಿಸುತ್ತದೆ. ''ಅಥಾತ ಐಂದ್ರೋ ಮಹಾಭಿಷೇಕಃ'' ಎಂದು ಮಹಾಭಿಷೇಕವನ್ನು ಹೇಳಿ ''ಕಾವಷೇಯೋ ಜನಮೇಜಯಂ ಪಾರೀಕ್ಷಿತಂ ಅಭಿಷಿಷೇಚ'' ಎಂಬ ಇತಿಹಾಸವನ್ನು ವೇದ ಉದಾಹರಿಸಿದೆ. ಇದರಿಂದ ರಾಜ್ಯಾಭಿಷೇಕ ಪ್ರಶಸ್ತವೆಂದು ತಿಳಿಯುತ್ತದೆ.

**4.** ಪುರಾಕಲ್ಪ - ಪುರಾತನರ ಜ್ಞಾನ. ಶ್ರುತಿ ತಾನು ಹೇಳಿದ ವಿಷಯವನ್ನು 'ಪ್ರಾಚೀನರೂ ಹೀಗೆ ತಿಳಿದಿದ್ದರು' ಎನ್ನುತ್ತದೆ. ಇದು ಪುರಾಕಲ್ಪ. ''ವಾಯುರ್ಹ್ಯೇವ ಪ್ರಜಾಪತಿಃ'' ಎಂದು ವಾಯು ಪ್ರಜಾಪತಿಗಳಿಗೆ ಅಭೇದವನ್ನು ಹೇಳಿ 'ತದಪ್ಯೇತದ್ ಋಷಿಣೋಕ್ತಂ - ಪವಮಾನಃ ಪ್ರಜಾಪತಿಃ' ಎಂದು ಋಷಿಯ ಸಮ್ಮತಿಯನ್ನು ಹೇಳಿದೆ. ಇದು ಪುರಾಕಲ್ಪ.

ಹೀಗೆ ಉಪಕ್ರಮಾದಿಗಳಿಂದ ಶ್ರುತಿಯ ತಾತ್ಪರ್ಯವನ್ನು ತಿಳಿಯಬೇಕು. ಇವುಗಳಲ್ಲೇ ಪರಸ್ಪರ ವಿರೋಧ ಬಂದರೆ ಮುಂದಿನವುಗಳು ಪ್ರಬಲ ಎಂದು ಪರಿಗಣಿಸಿ

ಮುಂದಿನ ಪ್ರಮಾಣಗಳು ಹೇಳಿದ್ದನ್ನು ಒಪ್ಪಿಕೊಳ್ಳಬೇಕು. ಉದಾಹರಣೆಗೆ - ಉಪಕ್ರಮ ಮತ್ತು ಉಪಸಂಹಾರಗಳಿಗೆ ವಿರೋಧ ಬಂದಾಗ ಉಪಸಂಹಾರ ಹೇಳಿದ್ದನ್ನು ದೃಢೀಕರಿಸಿ ಉಪಕ್ರಮವನ್ನು ಅದಕ್ಕೆ ಅನುಗುಣವಾಗಿ ಹೊಂದಿಸಬೇಕು. ಆದರೆ ಉಪಕ್ರಮ ನಿರವಕಾಶವಾಗಿದ್ದಲ್ಲಿ ಸಾವಕಾಶವಾದ ಉಪಸಂಹಾರಕ್ಕಿಂತ ಅದೇ ಪ್ರಬಲವಾಗುವುದು. ಇದರಂತೆ ಶ್ರುತಿ, ಲಿಂಗ, ಸಮಾಖ್ಯಾ, ವಾಕ್ಯ, ಸ್ಥಾನ ಪ್ರಕರಣಗಳೂ ಅರ್ಥ ನಿಶ್ಚಾಯಕಗಳು.

**ಅ. ಶ್ರುತಿ :** ಶ್ರುತಿ ಎಂದರೆ ರೂಢ ಶಬ್ದ. 'ಆತ್ಮ' ಎಂಬ ಶಬ್ದ ಪರಮಾತ್ಮನದೇ ಮುಖ್ಯನಾಮ. ಆ ನಾಮದಿಂದ ಭೂಲೋಕವೇ ಮೊದಲಾದ ಲೋಕಗಳಿಗೆ ಧಾರಕನಾದವನು ಪರಮಾತ್ಮ ಎಂದು ಸೂತ್ರಕಾರರು ''ದ್ಯುಭ್ವಾದ್ಯಾಯತನಂ ಸ್ವಶಬ್ದಾತ್'' (1-3-1) ಎಂಬ ಸೂತ್ರದಲ್ಲಿ ನಿರ್ಧರಿಸಿದ್ದಾರೆ.

**ಆ. ಲಿಂಗ :** ಅಸಾಧಾರಣ ಧರ್ಮವೇ ಲಿಂಗ. ವಿಷ್ಣುವಿಗೆ ಸಲ್ಲುವ ಗುಣಗಳನ್ನು ಹೇಳಿದ್ದರೆ ಅದರ ಜೊತೆಯಲ್ಲಿರುವ ಶಬ್ದ ವಿಷ್ಣುವಾಚಕ ಎಂದು ನಿರ್ಧರಿಸಲಾಗುತ್ತದೆ. ಉದಾಹರಣೆಗೆ - 'ಆಕಾಶಃ ತಲ್ಲಿಂಗಾತ್'. 'ಅಸ್ಯ ಲೋಕಸ್ಯ ಕಾ ಗತಿಃ? ಆಕಾಶ ಇತಿ ಹೋವಾಚ'' ಎಂಬ ಛಾಂದೋಗ್ಯವಾಕ್ಯದಲ್ಲಿ 'ಆಕಾಶ ಶಬ್ದವಾಚ್ಯ ಯಾರು?' ಎಂದು ಸಂಶಯ ಬಂದಾಗ ''ಸ ಏಷ ಪರೋವರೀಯಾನ್'' ಎಂಬ ಸರ್ವೋತ್ತಮತ್ವಲಿಂಗದಿಂದ ಆಕಾಶಶಬ್ದದಿಂದ ವಿಷ್ಣುವೇ ವಾಚ್ಯನೆಂದು ನಿರ್ಧರಿಸಲಾಗಿದೆ.

**ಇ. ಸಮಾಖ್ಯಾ :** ಸಮಾನವಾದ ಆಖ್ಯಾ=ಕಥನ ಸಮಾಖ್ಯಾ. ಮಾಧ್ಯಂದಿನ ಶಾಖೆಯಲ್ಲಿ 'ಯಃ ಆತ್ಮನಿ ತಿಷ್ಠನ್ ಆತ್ಮನೋ ಅಂತರಃ' ಎಂದಿದೆ. ಕಾಣ್ವ ಶಾಖೆಯಲ್ಲಿ ''ಯಃ ವಿಜ್ಞಾನೇ ತಿಷ್ಠನ್'' ಎಂದಿದೆ. ಎರಡೂ ಕಡೆ ಒಂದೇ ವಾಕ್ಯವಿದೆ. ಆದರೆ ಇಲ್ಲಿರುವ ವಿಜ್ಞಾನಶಬ್ದದ ಬದಲು ಮಾಧ್ಯಂದಿನಶಾಖೆಯಲ್ಲಿ ಆತ್ಮಶಬ್ದವನ್ನು ಪ್ರಯೋಗಿಸಿರುವುದರಿಂದ ವಿಜ್ಞಾನಶಬ್ದಕ್ಕೆ ಜೀವಾತ್ಮ ಎಂದೇ ಅರ್ಥ.

**ಈ. ವಾಕ್ಯ :** ನಿರಾಕಾಂಕ್ಷವಾದ ಪದಗಳ ಸಮೂಹವೇ ವಾಕ್ಯ. ಬೃಹದಾರಣ್ಯಕ ಉಪನಿಷತ್ತಿನಲ್ಲಿ 'ಪ್ರಾಣೇಷು ಹೃದ್ಯಂತಃ ಜ್ಯೋತಿಃ' ಎಂಬ ವಾಕ್ಯದಲ್ಲಿ ಹೇಳಲ್ಪಟ್ಟ ಜ್ಯೋತಿ ಪರಮಾತ್ಮ. ಏಕೆಂದರೆ 'ಕತಮಃ ಆತ್ಮಾ' ಎಂದು 'ಹೃದಯದೊಳಗಿನ ಆತ್ಮ ಹೇಗಿದ್ದಾನೆ' ಎಂಬ ಪ್ರಶ್ನವಾಕ್ಯ, ಅದಕ್ಕೆ ಉತ್ತರರೂಪವಾದ 'ಯೋಽಯಂ ವಿಜ್ಞಾನಮಯಃ ಪ್ರಾಣೇಷು ಹೃದ್ಯಂತಃ' ಎಂಬ ವಾಕ್ಯಗಳಿಂದ ಜ್ಯೋತಿ ಪರಮಾತ್ಮ ಎಂದು ನಿರ್ಣಯಿಸಲಾಗಿದೆ.

**ಉ. ಪ್ರಕರಣ :** ಏಕಾರ್ಥವನ್ನು ತಿಳಿಸುವ ಅನೇಕ ವಾಕ್ಯಗಳ ಗುಂಪು ಒಂದು ಪ್ರಕರಣ. ''ಸ ಯದ್ಯದೇವಾಸೃಜತ ತತ್ತದತ್ತುಂ ಅಧ್ರಿಯತ' ಎಂಬ ಬೃಹದಾರಣ್ಯಕ ವಾಕ್ಯದಲ್ಲಿ ಹೇಳಲ್ಪಟ್ಟ ಅದಿತಿ- ಲೋಕಸಂಹಾರಕ ವಿಷ್ಣು ಎನ್ನುವುದನ್ನು ಲೋಕಸೃಷ್ಟಿಯನ್ನು ಹೇಳುವ ಪ್ರಕರಣದಲ್ಲಿ ಬಂದಿರುವ ಕಾರಣ ನೀಡಿ ಸಮರ್ಥಿಸಿದ್ದಾರೆ.

ಹೀಗೆ ಶ್ರುತ್ಯಾದಿಗಳು ಶಬ್ದಕ್ಕೆ ಯಾವ ಅರ್ಥದಲ್ಲಿ ತಾತ್ಪರ್ಯವಿದೆ ಎನ್ನುವುದನ್ನು ನಿರ್ಧರಿಸುತ್ತವೆ.

**ಶ್ರುತ್ಯರ್ಥ :** ವಿಕಲ್ಪಃ ಎಂದರೆ ಬಹುರೂಪನಾಗಿ ಶ್ರುತಿಗಳಲ್ಲಿ ಹೇಳಲ್ಪಟ್ಟವನು ಎಂದರ್ಥ.

ಚತ್ವಾರಿ ವಾಕ್ ಪರಿಮಿತಾ ಪದಾನಿ

ತಾನಿ ವಿದುರ್ಬ್ರಾಹ್ಮಣಾ ಯೇ ಮನೀಷಿಣಃ।

ಗುಹಾ ತ್ರೀಣಿ ನಿಹಿತಾ ನೇಂಗಯಂತಿ

ತುರೀಯಂ ವಾಚೋ ಮನುಷ್ಯಾ ವದಂತಿ॥

ಈ ಶ್ರುತಿಯಲ್ಲಿ 'ಚತ್ವಾರಿ ಪದಾನಿ' ಎಂದು ನಾಲ್ಕುರೂಪಗಳ ಪ್ರಸ್ತಾವ ಇದೆ. ಆ ರೂಪಗಳು ಪರಮಾತ್ಮನವೇ ಆದ ವಾಸುದೇವಾದಿ ರೂಪಗಳು.

ಇಲ್ಲಿ 'ವಿಕಲ್ಪ್ಯ ಅಪೋಹ್ಯಃ' ಎಂದು ತತ್ತ್ವಪ್ರದೀಪದ ಪಾಠ. 'ದ್ವೇ ವಾವ ಬ್ರಹ್ಮಣೋ ರೂಪೇ' ಎಂದು ನಾನಾರೂಪಗಳನ್ನು ಕಲ್ಪಿಸಿ 'ತತ್ರ ಯಃ ಸ ಆತ್ಮಾ' ಎಂದು ಸದೋಷನನ್ನು ಬಿಟ್ಟು ನಿರ್ದೋಷನಾಗಿ ಹೇಳಲ್ಪಟ್ಟವನು ನಾನೇ ಎಂಬರ್ಥವನ್ನು ಅಲ್ಲಿ ಮಾಡಲಾಗಿದೆ.

ಈ ಭಾಗವತವಾಕ್ಯದ ಅರ್ಥವನ್ನು ಆಚಾರ್ಯರು ತಾತ್ಪರ್ಯದಲ್ಲಿ ಹೀಗೆ ವಿವರಿಸಿದ್ದಾರೆ.

ವಿಧಿಭಾಗೇ ಹರೇಃ ಪೂಜ್ಯೈವಾಭಿಧಾನೇ ಚ ತದ್ಗುಣಾಃ।

ವಿಕಲ್ಪೇ ತದ್ಬಹುತ್ವಂ ಚಾಪ್ಯಪೋಹೇ ತು ತದಪ್ರಿಯಮ್।

ಉಚ್ಯತೇ ಸರ್ವವೇದೇಷು ತಚ್ಚ ವೇದ ಸ ಏವ ಹಿ॥

**ದ್ವೈತಸಿದ್ಧಾಂತದಲ್ಲಿ ಸೂತ್ರಾರ್ಥ :** ಪ್ರಥಮಸೂತ್ರದ ಬ್ರಹ್ಮಶಬ್ದದಿಂದ 'ಗುಣಪೂರ್ಣತ್ವವು ಬ್ರಹ್ಮನ ಲಕ್ಷಣ' ಎಂದು ಹೇಳಿ ಎರಡನೆಯ ಸೂತ್ರದಲ್ಲಿ ಜನ್ಮಾದಿಕಾರಣತ್ವವನ್ನು ಹೇಳುವ ಮೂಲಕ ಅದನ್ನು ಸಮರ್ಥಿಸಲಾಯಿತು. ಆದರೆ ಶಾಸ್ತ್ರದಲ್ಲಿರುವ ಸಕಲ ಶಬ್ದಗಳನ್ನು ಪರಮಾತ್ಮನಲ್ಲಿ ಸಮನ್ವಯ ಮಾಡಿದರೆ ಮಾತ್ರ ಅನಂತ ಶಬ್ದಗಳ ಅರ್ಥವಾದ ಅನಂತಗುಣಗಳು ಪರಮಾತ್ಮನಲ್ಲಿ ಸಿದ್ಧವಾಗುತ್ತವೆ. ಅದಕ್ಕಾಗಿ ಈ ಸೂತ್ರದಿಂದ ಪರಮಾತ್ಮ ಶಾಸ್ತ್ರಪ್ರತಿಪಾದ್ಯನೆಂದು ಸಮರ್ಥಿಸಲಾಗುತ್ತಿದೆ.

## ಓಂ॥ ತತ್ತು ಸಮನ್ವಯಾತ್॥ ಓಂ

ಶಾಸ್ತ್ರಯೋನಿ ಎಂಬ ಪದವನ್ನು ಅಧ್ಯಾಹಾರ ಮಾಡಬೇಕು. ಸಮ್ ಎಂಬ ಉಪಸರ್ಗವನ್ನು ಅದರೊಂದಿಗೂ ಸೇರಿಸಿಕೊಳ್ಳಬೇಕು.

ತತ್ತು=ಆ ಬ್ರಹ್ಮನೇ, ಸಮನ್ವಯಾತ್=ಬಲಾಬಲವಿಮರ್ಶೆಗೆ ಒಳಗಾದ ಉಪಕ್ರಮಾದಿಗಳಿಂದ, ಸಮ್ ಶಾಸ್ತ್ರಯೋನಿ=ಸಕಲ ಶಾಸ್ತ್ರಗಳಿಂದ ಮುಖ್ಯಪ್ರತಿಪಾದ್ಯ.

**ಶಾಂಕರಭಾಷ್ಯದಲ್ಲಿ ಹೇಳಿದ ಸೂತ್ರಾರ್ಥ :** ವೇದಗಳೆಲ್ಲವೂ ಯಜ್ಞಯಾಗಾದಿ ಕಾರ್ಯಪರ. ಬ್ರಹ್ಮ ಸಿದ್ಧರೂಪನಾದುದರಿಂದ ಕಾರ್ಯನಲ್ಲ. ಆದ್ದರಿಂದ ವೇದಾಂತಗಳಿಗೆ

ಬ್ರಹ್ಮಸ್ವರೂಪದಲ್ಲಿ ತಾತ್ಪರ್ಯವಿಲ್ಲ. ಹೀಗೆ, ಹಿಂದಿನ ಸೂತ್ರದ ಮೇಲೆ ಮೀಮಾಂಸಕರು ಮಾಡಬಹುದಾದ ಆಕ್ಷೇಪಕ್ಕೆ ಈ ಸೂತ್ರದಲ್ಲಿ ಉತ್ತರ ನೀಡಲಾಗಿದೆ.

**ತತ್ತು ಸಮನ್ವಯಾತ್ ॥** 'ತು' ಶಬ್ದವು ಈ ಆಕ್ಷೇಪ ಸರಿಯಲ್ಲ ಎನ್ನುತ್ತದೆ. ಸಮನ್ವಯಾತ್= ಉಪಕ್ರಮಾದಿ ಲಿಂಗಗಳಿಂದ ಶ್ರುತಿ ತಾತ್ಪರ್ಯ ವಿಷಯನಾದುದರಿಂದ ತತ್= ಆ ಬ್ರಹ್ಮ (ಶಾಸ್ತ್ರಯೋನಿ= ಶಾಸ್ತ್ರಪ್ರತಿಪಾದ್ಯ)

ಛಾಂದೋಗ್ಯೋಪನಿಷತ್ತಿನಲ್ಲಿ 'ಸದೇವ ಸೋಮ್ಯ ಇದಮಗ್ರ ಆಸೀತ್' ಎಂಬ ಉಪಕ್ರಮ ವಾಕ್ಯ, ''ಐತದಾತ್ಮ್ಯಮಿದಂ ಸರ್ವಂ'' ಎಂಬ ಉಪಸಂಹಾರವಾಕ್ಯ, 'ತತ್ತ್ವಮಸಿ' ಎಂಬ ಅಭ್ಯಾಸ, ಹೀಗೆ ಉಪಕ್ರಮಾದಿಗಳಿಂದ ಪರಬ್ರಹ್ಮನೇ ಆ ಪ್ರಕರಣದಿಂದ ಪ್ರತಿಪಾದ್ಯನೆಂದು ತಿಳಿಯುತ್ತದೆ. ಆದ್ದರಿಂದ ವೇದಾಂತಗಳಿಗೆ ಬ್ರಹ್ಮನಲ್ಲೇ ತಾತ್ಪರ್ಯವೆಂದು ಹೇಳಬೇಕು.

## ಚಂದ್ರಿಕಾದಲ್ಲಿ ಮಾಡಿರುವ ವಿಮರ್ಶೆ

ಸ್ವಪ್ರಭತ್ವಾದಸಂದಿಗ್ಧೇಽವಾಚ್ಯತ್ವಾತ್ ಶ್ರುತ್ಯಗೋಚರೇ।
ನಿರ್ವಿಶೇಷೇ ಚ ಚಿನ್ಮಾತ್ರೇ ಕಥಂ ಶ್ರುತಿಸಮನ್ವಯಃ॥

ಜೀವನೇ ಬ್ರಹ್ಮ. ಅದು ಸ್ವಪ್ರಕಾಶವಾದುದರಿಂದ ಸರ್ವವೇದ್ಯ. ಅದರ ಬಗ್ಗೆ ಶಾಸ್ತ್ರಹೇಳುವುದೇನಿದೆ? ಏಕೆಂದರೆ ನಮಗೆ ತಿಳಿಯದ, ಶಾಸ್ತ್ರದಿಂದಲೇ ತಿಳಿಯಬಹುದಾದ ಯಾವ ಅಂಶವೂ ಬ್ರಹ್ಮನಲ್ಲಿಲ್ಲ. ಅವನು ನಿರ್ವಿಶೇಷ ಚೇತನ. ಅಲ್ಲದೆ, ಅವನು ಶಬ್ದವಾಚ್ಯನಲ್ಲ ಎನ್ನುತ್ತದೆ ಅದ್ವೈತವಾದ. ಅಂದಮೇಲೆ ಶಾಸ್ತ್ರಗಳು ಅವನನ್ನು ಹೇಗೆ ಪ್ರತಿಪಾದಿಸಬೇಕು?

## ರಾಮಾನುಜ ಭಾಷ್ಯದಲ್ಲಿ ಹೇಳಿದ ಸೂತ್ರಾರ್ಥ

ಶಾಸ್ತ್ರೈಕಕಾರಣತ್ವಂ ತು ಬ್ರಹ್ಮಣಃ ಸೂಪಪದ್ಯತೇ।
ಪುರುಷಾರ್ಥತಯಾ ತಸ್ಮಿನ್ ಬೋಧಕತ್ವೇನ ಚಾನ್ವಯಾತ್ ॥

'ಯಾಗ ಸ್ವರ್ಗಸಾಧನ' ಎಂದು ವೇದದಿಂದ ತಿಳಿದರೆ ಅದನ್ನು ಮಾಡಲು ಯತ್ನಿಸುತ್ತೇವೆ. 'ಹಿಂಸೆ ಪಾಪಸಾಧನ' ಎಂದಾಗ ಹಿಂಸೆ ಮಾಡುವುದನ್ನು ನಿಲ್ಲಿಸುತ್ತೇವೆ. ಆದರೆ 'ಬ್ರಹ್ಮ ಸರ್ವಜ್ಞ, ಜಗತ್ಕಾರಣ' ಎಂದು ಹೇಳಿದರೆ ಪ್ರವೃತ್ತಿ ಅಥವಾ ನಿವೃತ್ತಿಗಳೆರಡೂ ಆಗುವುದಿಲ್ಲ. ಆದ್ದರಿಂದ ಬ್ರಹ್ಮ ಶಾಸ್ತ್ರಪ್ರತಿಪಾದ್ಯನಲ್ಲ ಎಂದು ಪೂರ್ವಪಕ್ಷ. ಅದಕ್ಕೆ ಉತ್ತರ-

**ತತ್ತು ಸಮನ್ವಯಾತ್ ।** ತತ್= ಬ್ರಹ್ಮನನ್ನು ತಿಳಿಯಲು ಶಾಸ್ತ್ರವೇ ಆಧಾರ ಎಂದು ಹಿಂದೆ ಹೇಳಿದ್ದು ಸರಿಯಾಗಿದೆ. ಏಕೆಂದರೆ, ಸಮನ್ವಯಾತ್= ಸ್ವತಃ ಪುರುಷಾರ್ಥರೂಪನಾದ ಬ್ರಹ್ಮನನ್ನೆ ಶಾಸ್ತ್ರಗಳು ತಿಳಿಸುತ್ತಿವೆ. (ಅನ್ವಯಃ= ಪ್ರತಿಪಾದ್ಯತ್ವೇನ ಸಂಬಂಧಃ)

ಶಾಸ್ತ್ರಗಳು 'ಮಾಡು' 'ಬಿಡು' ಎಂದೇ ಹೇಳಬೇಕಿಲ್ಲ. ಯಾರ ಜ್ಞಾನದಿಂದ ಪರಮಾನಂದವಾಗುವುದೋ ಅಂತಹ ತತ್ತ್ವವನ್ನು ಹೇಳಿದರೂ ಶಾಸ್ತ್ರಸಾರ್ಥಕವಾಗುತ್ತದೆ. ಬ್ರಹ್ಮನ ಜ್ಞಾನವೇ ಆನಂದಕರ. ಆದ್ದರಿಂದ ಶಾಸ್ತ್ರಗಳು ಬ್ರಹ್ಮನನ್ನು ತಿಳಿಸುತ್ತವೆ.

**ಚಂದ್ರಿಕಾದಲ್ಲಿ ಮಾಡಿರುವ ವಿಮರ್ಶೆ :** ಪ್ರಥಮಾಧ್ಯಾಯ ಸಮನ್ವಯಾಧ್ಯಾಯ. ತಾತ್ಪರ್ಯಲಿಂಗಗಳನ್ನು ತೋರಿಸಿ ಶಬ್ದಗಳ ಸಮನ್ವಯವನ್ನು ಈ ಅಧ್ಯಾಯದಲ್ಲಿ ಮಾಡಲಾಗುತ್ತದೆ. ಆದ್ದರಿಂದ ಅದನ್ನೆ ಈ ಸೂತ್ರದಲ್ಲಿ ಹೇಳಬೇಕು. ಆಗ ಇಲ್ಲಿ ಹೇಳಿದ ವಿಷಯವನ್ನೇ ಮುಂದಿನ ಸೂತ್ರದಲ್ಲಿ ವಿವರಿಸುವುದು ಉಚಿತವಾಗುತ್ತದೆ. ಆದ್ದರಿಂದ ಹೀಗೆ ಸೂತ್ರಾರ್ಥವನ್ನು ಹೇಳುವುದರಲ್ಲಿ ಔಚಿತ್ಯವಿಲ್ಲ.

**ಇಲ್ಲಿಗೆ ಸಮನ್ವಯಾಧಿಕರಣ ಮುಗಿಯಿತು.**

## ಈಕ್ಷತ್ಯಧಿಕರಣ-5

**ನನು, ''ಯತೋ ವಾಚೋ ನಿವರ್ತಂತೇ**

**ಅಪ್ರಾಪ್ಯ ಮನಸಾ ಸಹ'' (ತೈ.ಉ.2.4.1)**

**ಅಶಬ್ದಮಸ್ಪರ್ಶಮರೂಪಮವ್ಯಯಂ**

**ತಥಾರಸಂ ನಿತ್ಯಮಗಂಧವಚ್ಚ ಯತ್। (ಕಠ-3.15)**

**'ಅವಚನೇನೈವ ಪ್ರೋವಾಚ' (ಬಾಷ್ಕಲಶ್ರುತಿ) 'ಯದ್ವಾಚಾऽನಭ್ಯುದಿತಂ ಯೇನ ವಾಗಭ್ಯುದ್ಯತೇ...ಯಚ್ಛ್ರೋತ್ರೇಣ ನ ಶೃಣೋತಿ ಯೇನ ಶ್ರೋತ್ರಮಿದಂ ಶ್ರುತಮ್ (ಕೇನ-1)**

**ಇತ್ಯಾದಿಭಿಃ ಶ್ರುತಿಭಿಃ ನ ತತ್ ಶಬ್ದಗೋಚರಮ್। ನೇತ್ಯಾಹ-**

**ಓಂ ॥ ಈಕ್ಷತೇರ್ನಾಶಬ್ದಮ್ ॥ ಓಂ**

**'ಸ ಏತಸ್ಮಾಜ್ಜೀವಘನಾತ್ ಪರಾತ್‌ಪರಂ ಪುರಿಶಯಂ ಪುರುಷಮೀಕ್ಷತೇ' (ಪ್ರ.ಉ5.5) 'ಆತ್ಮನ್ಯೇವಾತ್ಮಾನಂ ಪಶ್ಯೇತ್' (ಬೃ6-4-23) 'ವಿಜ್ಞಾಯ ಪ್ರಜ್ಞಾಂ ಕುರ್ವೀತ' (ಬೃ6.4.21) ಇತ್ಯಾದಿವಚನೈಃ ಈಕ್ಷಣೀಯತ್ವಾತ್ ವಾಚ್ಯಮೇವ । ಔಪನಿಷದತ್ವಾತ್ ನಾವಚನೇನ ಈಕ್ಷಣಂ।**

**'ಸರ್ವೇ ವೇದಾ ಯತ್ ಪದಮಾಮನಂತಿ**

**ತಪಾಂಸಿ ಸರ್ವಾಣಿ ಚ ಯದ್ವದಂತಿ। (ಕಠ 2.15)**

**ವೇದೈಶ್ಚ ಸರ್ವೈರಹಮೇವ ವೇದ್ಯಃ**
**ವೇದಾಂತಕೃದ್ ವೇದವಿದೇವ ಚಾಹಮ್॥ (ಭ.15.15)**

**ಇತ್ಯಾದಿ ಶ್ರುತಿಸ್ಮೃತಿಭ್ಯಶ್ಚ ।**

'ಮನಸ್ಸಿನೊಂದಿಗೆ ಮಾತಿಗೂ ಬ್ರಹ್ಮ ಸಿಗಲಾರ' 'ಬ್ರಹ್ಮ ಶಬ್ದಗಮ್ಯನಲ್ಲ ಶಬ್ದರೂಪವಾದ ಗುಣವೂ ಅವನಲ್ಲಿಲ್ಲ, ಸ್ಪರ್ಶವಿಲ್ಲ, ಆದ್ದರಿಂದ ತ್ವಗಿಂದ್ರಿಯಗಮ್ಯನಲ್ಲ, ರೂಪವಿಲ್ಲ ಆದ್ದರಿಂದ ಪ್ರತ್ಯಕ್ಷಗಮ್ಯನಲ್ಲ, ಅವನಿಗೆ ನಾಶವಿಲ್ಲ, ಅವನಲ್ಲಿ ರಸವಿಲ್ಲ, ಆದ್ದರಿಂದ ನಾಲಿಗೆಯಿಂದ ಗಮ್ಯನಲ್ಲ, ಅವನಲ್ಲಿ ಗಂಧವಿಲ್ಲವಾದ್ದರಿಂದ ಮೂಗಿನಿಂದಲೂ ಅಗಮ್ಯ' 'ಗುರು ಶಿಷ್ಯನಿಗೆ ಆ ಬ್ರಹ್ಮ ತತ್ವವನ್ನು ಮೌನವಾಗಿದ್ದೇ ಉಪದೇಶಿಸಿದ' 'ಆ ಬ್ರಹ್ಮ ಮಾತಿಗೆ ನಿಲುಕದವ. ಆದರೆ ಅವನಿಂದಾಗಿಯೇ ನಮ್ಮ ನಾಲಿಗೆ ಮಾತನಾಡುತ್ತದೆ... ಕಿವಿಯಿಂದ ಅವನನ್ನು ಕೇಳಲಾಗದು. ಆದರೆ, ಕಿವಿ ಅವನಿಂದಾಗಿಯೇ ಕೇಳುತ್ತದೆ.' ಈ ಎಲ್ಲ ಉಪನಿಷದ್ವಾಕ್ಯಗಳು 'ಬ್ರಹ್ಮನನ್ನು ವೇದಾಂತವಾಕ್ಯಗಳಿಂದ ತಿಳಿಯಲಾಗದು' ಎನ್ನುತ್ತವೆ ಎಂಬ ಈ ಆಶಂಕೆ ಸರಿಯಲ್ಲ. 'ಈಕ್ಷತೇಃ' ಎಂದು ಉಪನಿಷತ್ತುಗಳಲ್ಲಿ ಹೇಳಿರುವುದರಿಂದ ಅವನು ಶಬ್ದಾಗಮ್ಯನಲ್ಲ.

''ಪ್ರಣವೋಪಾಸನೆ ಮಾಡಿ ಸತ್ಯಲೋಕ ಸೇರಿದ ಜ್ಞಾನಿಯು ಜೀವೋತ್ತಮನಾದ ಚತುರ್ಮುಖನಿಗಿಂತಲೂ ಉತ್ತಮೋತ್ತಮನಾದ, ಸಕಲದೇಹಗತನಾದ, ಪೂರ್ಣನಾದ ವಾಸುದೇವನನ್ನು ಬ್ರಹ್ಮನ ಉಪದೇಶದಿಂದ ಸ್ಫುಟವಾಗಿ ತಿಳಿಯುತ್ತಾನೆ.'' 'ಹೃದಯದಲ್ಲಿರುವ ಪರಮಾತ್ಮನನ್ನು ಕಾಣಬೇಕು' 'ಪರಮಾತ್ಮನನ್ನು ಗುರುಗಳಿಂದ ತಿಳಿದು ಅಪರೋಕ್ಷೀಕರಿಸಿಕೊಳ್ಳಬೇಕು' ಈ ಮೊದಲಾದ ವಾಕ್ಯಗಳಿಂದ ಬ್ರಹ್ಮನು ಜ್ಞಾನಗಮ್ಯನೆಂದು ತಿಳಿಯುತ್ತಿರುವುದರಿಂದ, ಶಬ್ದವಾಚ್ಯನಾಗಿದ್ದಾನೆ. ಅವನನ್ನು ಉಪನಿಷತ್ತುಗಳೇ ತಿಳಿಸಿಕೊಡಬೇಕಾದುದರಿಂದ ಪ್ರತ್ಯಕ್ಷಾದಿ ಪ್ರಮಾಣಗಳಿಂದ ಅವನನ್ನು ತಿಳಿಯಲಾಗದು. (ಆದ್ದರಿಂದ ಬ್ರಹ್ಮನು ವಾಚ್ಯನಾಗಲೇಬೇಕು)

'ಎಲ್ಲ ವೇದಗಳೂ ಪರಮಾತ್ಮನ ಸ್ವರೂಪವನ್ನು ಹೇಳುತ್ತವೆ. ಬ್ರಹ್ಮ ಪ್ರಾಪ್ತಿಗಾಗಿಯೇ ವೇದಗಳು ಎಲ್ಲ ಕರ್ಮಗಳನ್ನೂ ವಿಧಿಸುತ್ತವೆ' 'ವೇದಾಂತಗಳನ್ನು ರಚಿಸಿದ, ವೇದವನ್ನು ತಿಳಿದ ನಾನು ಸಕಲವೇದಗಳಿಂದಲೂ ವೇದ್ಯನಾಗಿದ್ದೇನೆ' ಹೀಗೆ ಶ್ರುತಿ ಸ್ಮೃತಿಗಳು ಸಾರುತ್ತಿರುವುದರಿಂದ ಬ್ರಹ್ಮ ಅವಾಚ್ಯನಲ್ಲ.

**ವಿವರಣೆ : 1.** ಹಿಂದಿನ ಸೂತ್ರವು ಬ್ರಹ್ಮ ಸಕಲ ಶಾಸ್ತ್ರಪ್ರತಿಪಾದ್ಯ ಎಂದು ಹೇಳಿದೆ. ಆದರೆ, ಯಾವ ಶಬ್ದಗಳೂ ಬ್ರಹ್ಮನನ್ನು ತಿಳಿಸಲಾರವು, ಎಂದು ವೇದಗಳು ಹೇಳುತ್ತವೆ. ಅಂದಮೇಲೆ ಅವನನ್ನು ಶಾಸ್ತ್ರಗಳು ಪ್ರತಿಪಾದಿಸುವುದು ಹೇಗೆ? ಎಂದು ಪೂರ್ವಪಕ್ಷ.

ಪ್ರಶ್ನೋಪನಿಷತ್ತಿನಲ್ಲಿ ಪರಮಾತ್ಮನನ್ನು ತಿಳಿಯಬಹುದು ಎನ್ನಲಾಗಿದೆ. ಅವನನ್ನು ತಿಳಿಯುವ ಸಾಧನ ಉಪನಿಷತ್ತುಗಳು ಮಾತ್ರ. ಅವನು ಶಬ್ದಗಮ್ಯನಲ್ಲವಾದರೆ ಅವನನ್ನು

ತಿಳಿಯುವುದು ಹೇಗೆ? ಅವನನ್ನು ತಿಳಿಯಲಾಗದಿದ್ದರೆ ''ಈಕ್ಷತೇ - ತಿಳಿಯುತ್ತಾನೆ'' ಎಂದು ಉಪನಿಷತ್ತು ಹೇಗೆ ಹೇಳುತ್ತದೆ? ಹೀಗೆ ಯುಕ್ತಿಯಿಂದ ಅವನು ಅವಾಚ್ಯನಲ್ಲ ಎಂದು ತಿಳಿಯಬಹುದು, ಎಂದು ಸಿದ್ಧಾಂತ.

**2.** ಸೂತ್ರದ ''ಈಕ್ಷತೇಃ'' ಎಂಬ ಶಬ್ದ ಕ್ತಿನ್ ಪ್ರತ್ಯಯಾಂತವಲ್ಲ, ಶ್ತಿಪ್ ಪ್ರತ್ಯಯಾಂತ. 'ಈಕ್ಷತೇ ಎಂಬ ಧಾತುವು ಉಪನಿಷತ್ತಿನಲ್ಲಿ ಇರುವುದರಿಂದ' ಎಂದು ಅರ್ಥ. ಇದರಿಂದ ಹೇತ್ವಸಿದ್ಧಿಯ ಸಂಶಯವನ್ನು ನಿರಾಸ ಮಾಡಿದಂತಾಗುತ್ತದೆ- 'ಅವನು ಜ್ಞಾನಗಮ್ಯನಾದುದರಿಂದ' ಎಂದು ಕಾರಣ (ಹೇತು) ಹೇಳಿದರೆ 'ಜ್ಞಾನಗಮ್ಯ ಎಂದು ಹೇಗೆ ತಿಳಿಯುತ್ತದೆ' ಎಂಬ ಪ್ರಶ್ನೆ ಬರುತ್ತದೆ. 'ಅವನನ್ನು ಜ್ಞಾನಿಯು ಈಕ್ಷತೇ= ತಿಳಿಯುತ್ತಾನೆ ಎಂದು ಉಪನಿಷತ್ತು ಹೇಳುತ್ತದೆ' ಹೀಗೆ ಹೇಳಿದಾಗ ಈ ಪ್ರಶ್ನೆಗೆ ಉತ್ತರ ಸಿಗುತ್ತದೆ.

'ಈಕ್ಷತೇ' ಎಂದರೆ ತಿಳಿಯುತ್ತಾನೆ ಎಂದರ್ಥ. ಅವನನ್ನು ತಿಳಿಯುವುದು ಹೇಗೆ? ಏಕೆಂದರೆ, ಹಿಂದೆ ಹೇಳಿದಂತೆ ಪಂಚೇಂದ್ರಿಯಗಳಿಂದ ಅವನನ್ನು ತಿಳಿಯಲಾಗದು. ಹೀಗಾಗಿ ಅವನನ್ನು ತಿಳಿಯಲು ಇರುವ ಒಂದೇ ಸಾಧನ ಶಬ್ದ- ಉಪನಿಷತ್ತು. ಅವನು ಶಬ್ದದ ಅರ್ಥವಲ್ಲವಾದರೆ ಉಪನಿಷತ್ತುಗಳಾದರೂ ಹೇಗೆ ಅವನನ್ನು ತಿಳಿಸಿಯಾವು? ಆದ್ದರಿಂದ ಬ್ರಹ್ಮಶಬ್ದ ವಾಚ್ಯ= ಶಬ್ದಾರ್ಥ ಎಂದು ಹೇಳಲೇಬೇಕಾಗುತ್ತದೆ ಎಂದು ಸೂತ್ರಕಾರರು ಹೇಳಿದ ಯುಕ್ತಿ.

'ಈಕ್ಷತೇ' ಎಂದರೆ ನೋಡುತ್ತಾನೆ ಎಂದರ್ಥ. ಪರಮಾತ್ಮನನ್ನು ನೋಡಬೇಕಾದರೆ ಗುರುಮುಖದಿಂದ ಶ್ರವಣ, ಯುಕ್ತಿಗಳಿಂದ ಮನನ, ಮನಸ್ಸಿನಿಂದ ಧ್ಯಾನ ಮಾಡಬೇಕು. ಗುರುಗಳಿಂದ ಶ್ರವಣ ಮಾಡುವುದೆಂದರೆ ಗುರುಗಳು ಹೇಳಿದ ಮಾತುಗಳಿಂದ ಬ್ರಹ್ಮನನ್ನು ತಿಳಿಯುವುದು. ಹೀಗೆ ತಿಳಿಯಬೇಕಾದರೆ ಬ್ರಹ್ಮ ಶಬ್ದವಾಚ್ಯವಾಗಲೇಬೇಕು. ಈ ರೀತಿಯಾಗಿ ಸೂತ್ರ ಹೇಳಿದ ಹೇತು ಪರಿಶೇಷತಃ ವಾಚ್ಯತ್ವವನ್ನು ಸಾಧಿಸುತ್ತವೆ. ಹೀಗೆ ವಾದಿರಾಜರು ವ್ಯಾಖ್ಯಾನಿಸಿದ್ದಾರೆ.

ರಾಯರು, 'ಪುರುಷಂ ಈಕ್ಷತೇ' ಎಂಬ ಶ್ರುತಿಯಲ್ಲಿ ಜೀವಘನಾತ್ ಎಂಬ ಶಬ್ದವನ್ನು ಆವೃತ್ತಿ ಮಾಡಿಕೊಂಡು 'ಜೀವಘನಾತ್ ಪುರುಷಂ ಈಕ್ಷತೇ' ಎಂದು ಅನ್ವಯಮಾಡಿ 'ಜ್ಞಾನಿಯು ಚತುರ್ಮುಖನಿಂದ ಬ್ರಹ್ಮನನ್ನು ಕೇಳಿ ತಿಳಿಯುತ್ತಾನೆ' ಎಂದು ಅರ್ಥ ಮಾಡಿದ್ದಾರೆ. ಇದರಿಂದ ಬ್ರಹ್ಮನಿಗೆ ವಾಚ್ಯತ್ವ ನೇರವಾಗಿ ಹೇಳಿದಂತಾಗುತ್ತದೆ.

**3.** ಭಾಷ್ಯದಲ್ಲಿ ಸೂತ್ರಹೇಳಿದ ಯುಕ್ತಿಯಿಂದ ಬ್ರಹ್ಮನಿಗೆ ವಾಚ್ಯತ್ವವನ್ನು ಸಾಧಿಸಿ 'ಸರ್ವೇ ವೇದಾಃ' ಎಂಬ ವೇದವಾಕ್ಯಗಳಿಂದಲೂ ವಾಚ್ಯತ್ವವನ್ನು ಸಾಧಿಸಲಾಗಿದೆ.

**4.** ಈ ಸೂತ್ರ ಬ್ರಹ್ಮನಿಗೆ ಶಬ್ದವಾಚ್ಯತ್ವವನ್ನು ಸಾಧಿಸುತ್ತದೆ. ಶಬ್ದವು ಅರ್ಥವನ್ನು ಎರಡು ರೀತಿಯಿಂದ ತಿಳಿಸುತ್ತದೆ. ಸಹಜ ಶಕ್ತಿ ಮತ್ತು ಲಕ್ಷಣಾವೃತ್ತಿಯಿಂದ. ನದಿ ಎಂಬ ಶಬ್ದ ಕೇಳಿದ ಕೂಡಲೇ ಪ್ರವಾಹದ ಜ್ಞಾಪಕ ಬರುತ್ತದೆ. ಆದ್ದರಿಂದ ಆ ಶಬ್ದದ ಸಹಜಶಕ್ತಿ

ಪ್ರವಾಹದಲ್ಲಿದೆ. ಕೆಲವೊಮ್ಮೆ ನದೀ ಶಬ್ದಕ್ಕೆ ನದಿಯ ದಂಡೆ ಎಂದು ಅರ್ಥ ಮಾಡಬೇಕಾಗಿ ಬರುತ್ತದೆ. ಅದು ಲಕ್ಷಣಾವೃತ್ತಿ. ವೈದಿಕಶಬ್ದಗಳು ತಮ್ಮ ಸಹಜಶಕ್ತಿಯಿಂದಲೇ ಪರಮಾತ್ಮನನ್ನು ತಿಳಿಸಿಕೊಡುತ್ತವೆ. ಇದನ್ನೆ ಶಬ್ದವಾಚ್ಯ ಎನ್ನಲಾಗುತ್ತದೆ.

## ಬ್ರಹ್ಮ ಅವಾಚ್ಯನೆಂಬುದರ ಅರ್ಥ

**ಅವಾಚ್ಯತ್ವಾದಿಕಂ ತು ಅಪ್ರಸಿದ್ಧತ್ವಾತ್ ।**

**ನ ತದೀದೃಗಿತಿ ಜ್ಞೇಯಂ ನ ವಾಚ್ಯಂ ನ ಚ ತರ್ಕ್ಯತೇ ।**
**ಪಶ್ಯಂತೋಽಪಿ ನ ಪಶ್ಯಂತಿ ಮೇರೋಃ ರೂಪಂ ವಿಪಶ್ಚಿತಃ ॥ ಇತಿವತ್ ।**
**ಅಪ್ರಸಿದ್ಧೇರವಾಚ್ಯಂ ತತ್ ವಾಚ್ಯಂ ಸರ್ವಾಗಮೋಕ್ತಿತಃ ।**
**ಅತರ್ಕ್ಯಂ ತರ್ಕ್ಯಮಜ್ಞೇಯಂ ಜ್ಞೇಯಮೇವಂ ಪರಂ ಸ್ಮೃತಮ್ ॥**

**ಇತಿ ಗಾರುಡೇ ।**

**ನಚಾಶಬ್ದತ್ವಂ ಇತರಸಿದ್ಧಮ್ ॥ 5 ॥**

ಬ್ರಹ್ಮ ಅವಾಚ್ಯ, ಅಜ್ಞೇಯ ಎಂದೆಲ್ಲ ಉಪನಿಷತ್ತುಗಳು ಹೇಳುವುದು ಅವನು ಪ್ರಸಿದ್ಧನಲ್ಲವಾದುದರಿಂದ.

'ಮೇರುಪರ್ವತವನ್ನು ಹೀಗೆಯೇ ಇದೆ ಎಂದು ನಿಖರವಾಗಿ ತಿಳಿಯಲಾಗದು, ಹೇಳಲಾಗದು, ಊಹಿಸಲೂ ಆಗದು. ಹೀಗಾಗಿ ಜ್ಞಾನಿಗಳೂ ಮೇರುವಿನ ಸ್ವರೂಪವನ್ನು ತಿಳಿದರೂ ತಿಳಿಯದಂತೆ. ಇದರಂತೆ, ಬ್ರಹ್ಮನೂ ವಾಚ್ಯನಾದರೂ ಅವಾಚ್ಯ.

ಗಾರುಡದಲ್ಲಿ ಸ್ಪಷ್ಟವಾಗಿದೆ- ''ಬ್ರಹ್ಮ ಅಪೂರ್ವನಾದುದರಿಂದ ಅವನನ್ನು ಹೇಳಲಾಗದು. ಆದರೂ ಸಕಲಾಗಮಗಳೂ ಅವನನ್ನು ತಿಳಿಸುತ್ತಿರುವುದರಿಂದ ಅವನು ಶಬ್ದಗಮ್ಯನೂ ಹೌದು. ಅವನು ಅಪೂರ್ವನಾದುದರಿಂದಲೇ ಊಹ್ಯನಾದರೂ ಅನೂಹ್ಯ, ಜ್ಞೇಯನಾದರೂ ಅಜ್ಞೇಯ.''

ಶಾಂಕರಭಾಷ್ಯದಲ್ಲಿ ಈ ಸೂತ್ರದ 'ಅಶಬ್ದಂ' ಎಂಬ ಶಬ್ದಕ್ಕೆ 'ಶಬ್ದಾತೀತವಾದ ಪ್ರಕೃತಿ' ಎಂಬ ಅರ್ಥವನ್ನು ಹೇಳಿರುವುದು ಸರಿಯಲ್ಲ. ಏಕೆಂದರೆ, ಪ್ರಕೃತಿಯು 'ಅಶಬ್ದ' ಎಂದು ಸಾಂಖ್ಯರು ಒಪ್ಪಿಲ್ಲ.

**ವಿವರಣೆ : 1.** 'ಯತೋ ವಾಚೋ ನಿವರ್ತಂತೇ' ಇತ್ಯಾದಿ ಶ್ರುತಿಗಳು ಬ್ರಹ್ಮ ಶಬ್ದವೇದ್ಯನಲ್ಲ ಎನ್ನುತ್ತವೆ. ಆದರೂ ಬ್ರಹ್ಮನನ್ನು ಶಬ್ದಗಳಿಂದ ಸರ್ವಥಾ ಹೇಳಲಾಗದು ಎಂದು ಅದರ ಅರ್ಥವಲ್ಲ. ಅವನನ್ನು ಹೇಳಲು ಶಬ್ದ ಸಾಲದು ಎಂದಿಷ್ಟೇ ಭಾವ.

**2.** ಶಾಂಕರಭಾಷ್ಯದಲ್ಲಿ ಈ ಸೂತ್ರಕ್ಕೆ ಸಾಂಖ್ಯಸಿದ್ಧಾಂತ ಖಂಡನೆ ಮಾಡುವಂತೆ ವಿವರಣೆ ನೀಡಲಾಗಿದೆ- 'ಸದೇವ ಸೋಮ್ಯ ಇದಮಗ್ರ ಆಸೀತ್' ಎಂಬ ಛಾಂದೋಗ್ಯ

ಶ್ರುತಿಯಲ್ಲಿ ಜಗತ್ತಿಗೆ ಕಾರಣವಾಗಿ ಹೇಳಲ್ಪಟ್ಟ ತತ್ತ್ವವು ಪ್ರಧಾನ-ಪ್ರಕೃತಿ ಎಂದು ಸಾಂಖ್ಯರು ಹೇಳಿದರೆ ಅದು ಪ್ರಕೃತಿಯಲ್ಲ. ಏಕೆಂದರೆ 'ತದೈಕ್ಷತ' ಎಂದು ಜ್ಞಾನಪೂರ್ವಕವಾಗಿ ಅದು ಸೃಷ್ಟಿಮಾಡುತ್ತದೆ ಎಂದು ಉಪನಿಷತ್ತು ಹೇಳುತ್ತದೆ. ಪ್ರಕೃತಿ ಜಡ. ಅದಕ್ಕೆ ಜ್ಞಾನವಿಲ್ಲ. ಆದ್ದರಿಂದ ಜಗತ್ತಿಗೆ ಕಾರಣವಾದ ವಸ್ತು ಪ್ರಕೃತಿಯಲ್ಲ, ಪರಮಾತ್ಮ ಎಂದು. ಈ ಅರ್ಥ ಹೇಳಬೇಕಾದರೆ ಸೂತ್ರದಲ್ಲಿ ಅದಕ್ಕೆ ಬೇಕಾದ ಪ್ರಕೃತಿ ಎಂಬ ಶಬ್ದವಿಲ್ಲ. ಅದಕ್ಕಾಗಿ 'ಅಶಬ್ದಂ' ಎಂಬ ಪದಕ್ಕೆ ಪ್ರಕೃತಿ ಎಂದು ಅರ್ಥವನ್ನು ಶಾಂಕರಭಾಷ್ಯದಲ್ಲಿ ಮಾಡಲಾಗಿದೆ. ಅಷ್ಟೇ ಅಲ್ಲ ''ಸದೇವ ಸೋಮ್ಯ'' ಎಂಬ ಉಪನಿಷತ್ತಿನಲ್ಲಿ ಸತ್ ಎಂದರೆ ಪ್ರಕೃತಿಯಲ್ಲ, ಏಕೆಂದರೆ ಅದು ಅಶಬ್ದ (ಅಶಬ್ದಂ ಹಿ ತತ್) ಹೀಗೆ ಅಶಬ್ದ ಎಂಬ ಶಬ್ದವನ್ನು ಹೇತುವಾಚಕವನ್ನಾಗಿಯೂ ಅರ್ಥೈಸಲಾಗಿದೆ. ಹೇತು ಉಭಯಮತಸಿದ್ಧವಾಗಿರಬೇಕು. ಆದರೆ ಸಾಂಖ್ಯರು ಪ್ರಕೃತಿಯನ್ನು ಅಶಬ್ದ-ಶಬ್ದಾವೇದ್ಯ ಎಂದೇನೂ ಹೇಳುವುದಿಲ್ಲ. ಆದ್ದರಿಂದ ಅದನ್ನು ಹೇತುವನ್ನಾಗಿ ಮಾಡಿ ಪ್ರಕೃತಿಯನ್ನು ನಿರಾಕರಿಸುವುದು ಸರಿಯಲ್ಲ ಎಂದು ಆಚಾರ್ಯರು ಪರೋಕ್ತ ಸೂತ್ರಾರ್ಥವನ್ನು ನಿರಾಕರಿಸಿದ್ದಾರೆ. ॥ 5 ॥

### ಓಂ ॥ ಗೌಣಶ್ಚೇನ್ನಾತ್ಮಶಬ್ದಾತ್ ॥ ಓಂ

**ನ ಚ ಗೌಣಃ ಆತ್ಮಾ ದೃಶ್ಯೋ ವಾಚ್ಯಶ್ಚ, ನ ನಿರ್ಗುಣಃ ಇತಿ ಯುಕ್ತಮ್ । ಆತ್ಮಶಬ್ದಾತ್ ।**

**ಯೋ ಗುಣೈಃ ಸರ್ವತೋ ಹೀನಃ ಯಶ್ಚ ದೋಷವಿವರ್ಜಿತಃ ।**
**ಹೇಯೋಪಾದೇಯರಹಿತಃ ಸ ಆತ್ಮೇತ್ಯಭಿಧೀಯತೇ ॥**
**ಏತದನ್ಯಸ್ವಭಾವೋ ಯಃ ಸೋಽನಾತ್ಮೇತಿ ಸತಾಂ ಮತಮ್ ।**
**ಅನಾತ್ಮನ್ಯಾತ್ಮಶಬ್ದಸ್ತು ಸೋಪಚಾರಃ ಪ್ರಯುಜ್ಯತೇ ॥** **ಇತಿ ವಾಮನೇ ।**
**ದ್ವೇ ವಾವ ಬ್ರಹ್ಮಣೋ ರೂಪೇ ಆತ್ಮಾ ಚೈವಾನಾತ್ಮಾ ಚ ।**
**ತತ್ರ ಯಃ ಸ ಆತ್ಮಾ ಸ ನಿತ್ಯಃ ಶುದ್ಧಃ ಕೇವಲೋ ನಿರ್ಗುಣಶ್ಚ ।**
**ಅಥ ಹ ಯೋಽನೀದೃಶಃ ಸೋಽನಾತ್ಮಾ''**

**ಇತಿ ತಲವಕಾರಬ್ರಾಹ್ಮಣಮ್ ।**

**ನಚ ಮುಖ್ಯೇ ಸತಿ ಅಮುಖ್ಯಂ ಯುಜ್ಯತೇ ॥ 6 ॥**

ಸಗುಣನಾದ ಆತ್ಮನೇ (ಜೀವ) ದೃಶ್ಯ ಹಾಗೂ ವಾಚ್ಯ ಹೊರತು ನಿರ್ಗುಣನಲ್ಲ (ವಿಷ್ಣು) ಎನ್ನುವುದು ಸರಿಯಲ್ಲ. ಏಕೆಂದರೆ ಶ್ರುತಿಯಲ್ಲಿ ಆತ್ಮಶಬ್ದವಿದೆ. ಆತ್ಮಶಬ್ದ ವಿಷ್ಣುವಾಚಕ ಎಂದು ವಾಮನಪುರಾಣದಲ್ಲಿದೆ.

ಯಾವ ವಿಧದಿಂದಲೂ ಸತ್ವಾದಿ ಪ್ರಾಕೃತಗುಣ ರಹಿತನಾದವನು, ದೋಷರಹಿತ ನಾದವನು ಹಾಗೂ ಯಾರಿಗೆ ಹೇಯ ಅಥವಾ ಗ್ರಾಹ್ಯವಾದ ವಿಷಯ ವಸ್ತುಗಳಿಲ್ಲವೋ

ಅವನೇ ಆತ್ಮನೆನಿಸುತ್ತಾನೆ. ಇದಕ್ಕೆ ವಿರುದ್ಧ ಸ್ವಭಾವದವನು ಅನಾತ್ಮ-ಆತ್ಮನಲ್ಲ. ಅವನಲ್ಲಿ (ಜೀವನಲ್ಲಿ) ಆತ್ಮ ಶಬ್ದದ ಪ್ರಯೋಗ ಗೌಣ.

ತಲವಕಾರಬ್ರಾಹ್ಮಣದಲ್ಲೂ ಹೀಗಿದೆ - ಪರಮಾತ್ಮನಿಗೆ ಎರಡು ರೂಪಗಳಿವೆ. ಒಂದು ಆತ್ಮ ಮತ್ತೊಂದು ಅನಾತ್ಮ. ಇವುಗಳಲ್ಲಿ ಆತ್ಮರೂಪ ನಿತ್ಯ, ಕರ್ಮಲೇಪವಿಲ್ಲದುದು, ಜಡದಿಂದ ಅಮಿಶ್ರಿತ, ಸತ್ವಾದಿಗುಣ ರಹಿತ. ಹೀಗಲ್ಲದ ರೂಪ ಅನಾತ್ಮ. (ಅದು ಅವನ ಪ್ರತಿಮಾರೂಪ)

ಆತ್ಮಶಬ್ದದ ಮುಖ್ಯಾರ್ಥವನ್ನೇ ತೆಗೆದುಕೊಳ್ಳಲು ಬರುವಾಗ ಈಕ್ಷತಿ ಶ್ರುತಿಯಲ್ಲಿ ಅಮುಖ್ಯಾರ್ಥವನ್ನು ತೆಗೆದುಕೊಳ್ಳಬಾರದು.

**ವಿವರಣೆ : 1.** 'ದ್ವೇ ವಾ ವ ಬ್ರಹ್ಮಣೋ ರೂಪೇ' ಎಂಬ ತಲವಕಾರ ಬ್ರಾಹ್ಮಣ ವಾಕ್ಯದಲ್ಲಿ ರೂಪೇ ಎಂಬ ಶಬ್ದಕ್ಕೆ 'ರೂಪಂ ಚ ರೂಪಂ ಚ=ರೂಪೇ' ಎಂದು ದ್ವಂದ್ವ ಸಮಾಸ ಮಾಡಬೇಕು. ಮೊದಲ ರೂಪಶಬ್ದಕ್ಕೆ ಸ್ವರೂಪ ಎಂದರ್ಥ. ಎರಡನೆಯ ರೂಪಶಬ್ದಕ್ಕೆ 'ರೂಪ್ಯತೇ=ಜ್ಞಾಯತೇ ಬ್ರಹ್ಮ ಅನೇನ' ಎಂದು ವ್ಯುತ್ಪತ್ತಿ ಮಾಡಿ ಪ್ರತಿಮಾರೂಪ ಎಂದರ್ಥ. ಒಟ್ಟಿನಲ್ಲಿ ದೋಷರಹಿತವಾದ ಆತ್ಮ ಬ್ರಹ್ಮನ ಸ್ವರೂಪಭೂತವಾದ ರೂಪ. ಜೀವ ಮತ್ತು ಜಡ ವಸ್ತುಗಳು ಅವನ ಪ್ರತಿಮಾರೂಪಗಳು ಎಂದರ್ಥ.

**2.** ದೃಶ್ಯತ್ವ ಹೇಳುವ ಬೃಹದಾರಣ್ಯಕ ವಾಕ್ಯದಲ್ಲಿ 'ಆತ್ಮನ್ಯೇವಾತ್ಮಾನಂ ಪಶ್ಯೇತ್' ಎಂದು ಆತ್ಮಶಬ್ದವಿದೆ. ಆತ್ಮಶಬ್ದದ ಮುಖ್ಯಾರ್ಥ ಪರಮಾತ್ಮ. ಜೀವ ಅಮುಖ್ಯಾರ್ಥ. ಮುಖ್ಯಾರ್ಥವನ್ನು ಹೇಳಲು ಬರುವಾಗ ಅಮುಖ್ಯಾರ್ಥವನ್ನು ಹೇಳಬಾರದು. ಆದ್ದರಿಂದ ಆ ವಾಕ್ಯ ಪರಮಾತ್ಮನಿಗೇ ದೃಶ್ಯತ್ವ, ತನ್ನಿಮಿತ್ತವಾಗಿ ವಾಚ್ಯತ್ವಗಳನ್ನು ಹೇಳುತ್ತದೆ. ಇದು 'ನ ಚ ಮುಖ್ಯೇ ಸತಿ ಅಮುಖ್ಯಂ ಯುಜ್ಯತೇ' ಎಂಬ ಭಾಷ್ಯವಾಕ್ಯದ ಅರ್ಥ. ಇಲ್ಲಿ ಗೌಣ ಆತ್ಮನೆಂದರೆ ತ್ರಿಗುಣಬದ್ಧ ಆತ್ಮ ಅಂದರೆ ಜೀವ. ಅದಕ್ಕೆ ವಿರುದ್ಧ ಪದ 'ನಿರ್ಗುಣ' ಎಂದು. 'ಪ್ರಾಕೃತಗುಣ ರಹಿತ' ಎಂದರ್ಥ. ಸುಧಾದಲ್ಲಿ ಗೌಣ ಆತ್ಮನೆಂದರೆ ಅದ್ವೈತವಾದ ಹೇಳುವ ಸಗುಣ ಬ್ರಹ್ಮ ಎಂದೂ ಅರ್ಥ ಹೇಳಲಾಗಿದೆ. **॥ ಸೂತ್ರ 6 ॥**

## ಓಂ ॥ ತನ್ನಿಷ್ಠಸ್ಯ ಮೋಕ್ಷೋಪದೇಶಾತ್ ॥ ಓಂ

**ನ ಹಿ ಗೌಣಾತ್ಮನಿಷ್ಠಸ್ಯ ಮೋಕ್ಷಃ।**

**ಯಸ್ಯಾನುವಿತ್ತಃ ಪ್ರತಿಬುದ್ಧ ಆತ್ಮಾ ಅಸ್ಮಿನ್ ಸಂದೋಹೇ ಗಹನೇ ಪ್ರವಿಷ್ಟಃ ।**
**ಸ ವಿಶ್ವಕೃತ್ ಸ ಹಿ ಸರ್ವಸ್ಯ ಕರ್ತಾ ತಸ್ಯಲೋಕಃ ಸ ಉ ಲೋಕ ಏವ ॥**

**(ಬೃ.ಉ.6.4.13)**

ಇತಿ ಆತ್ಮನಿಷ್ಠಸ್ಯ ಮೋಕ್ಷಃ ಉಪದಿಷ್ಯತೇ ।

ಅಯಮಾತ್ಮಾ ಬ್ರಹ್ಮ (ಮಾಂ.ಉ.1.2.ಬೃಉ.4.5.19)

''ಬ್ರಹ್ಮೇತಿ ಪರಮಾತ್ಮೇತಿ ಭಗವಾನಿತಿ ಶಬ್ದ್ಯತೇ ।''

''ದತ್ತಂ ದುರ್ವಾಸಸಂ ಸೋಮಂ ಆತ್ಮೇಶ ಬ್ರಹ್ಮಸಂಭವಾನ್ ॥''

''ಚೇತನಸ್ತು ದ್ವಿಧಾ ಪ್ರೋಕ್ತೋ ಜೀವ ಆತ್ಮೇತಿ ಚ ಪ್ರಭೋ ।
ಜೀವಾ ಬ್ರಹ್ಮಾದಯಃ ಪ್ರೋಕ್ತಾ ಆತ್ಮೈಕಸ್ತು ಜನಾರ್ದನಃ ॥

ಇತರೇಷ್ವಾತ್ಮಶಬ್ದಸ್ತು ಸೋಪಚಾರಃ ಪ್ರಯುಜ್ಯತೇ ।
ತಸ್ಯಾತ್ಮನೋ ನಿರ್ಗುಣಸ್ಯ ಜ್ಞಾನಾನ್ಮೋಕ್ಷ ಉದಾಹೃತಃ ॥

ಸಗುಣಾಸ್ತ್ವಪರೇ ಪ್ರೋಕ್ತಾಃ ತಜ್ಞಾನಾನ್ನೈವ ಮುಚ್ಯತೇ ।
ಪರೋ ಹಿ ಪುರುಷೋ ವಿಷ್ಣುಃ ತಸ್ಮಾನ್ಮೋಕ್ಷಸ್ತತಃ ಸ್ಮೃತಃ ॥ ಇತಿ ಪಾದ್ಮೇ ॥ 7 ॥

ಆ ಆತ್ಮನನ್ನು ತಿಳಿದವನಿಗೆ ಮೋಕ್ಷವಾಗುತ್ತದೆ ಎಂದು ಹೇಳಿರುವುದರಿಂದಲೂ ಆತ್ಮ ಶಬ್ದವಾಚ್ಯನಾದವನು ಗೌಣಾತ್ಮನಲ್ಲ. ಏಕೆಂದರೆ, ಗೌಣಾತ್ಮ ಜ್ಞಾನಿಗೆ ಮೋಕ್ಷವಾಗುವುದಿಲ್ಲ.

''ಸರ್ವಪ್ರಪಂಚಕ್ಕೂ ಸೃಷ್ಟಿಕಾರಕನಾದುದರಿಂದ ವಾಯುದೇವನಿಗೂ ಜನಕನಾದ, ಸರ್ವಜ್ಞನಾದ, 'ಸಂದೋಹ' ಎಂಬ ಹೆಸರಿನ ಮಧ್ಯದೇಹದಲ್ಲಿರುವ ಗೂಢವಾದ ಆಕಾಶದಲ್ಲಿರುವ ಪರಮಾತ್ಮನನ್ನು ಯಾರು ತಿಳಿಯುವರೋ ಅವರೂ ಅವನ ಲೋಕವನ್ನೇ ಸೇರುತ್ತಾರೆ'' ಹೀಗೆ ಈ ವಾಕ್ಯವು ಆತ್ಮಜ್ಞಾನಿಗೆ ಮೋಕ್ಷವನ್ನು ಹೇಳುತ್ತದೆ.

'ರಮಾಬ್ರಹ್ಮಾದಿಗಳೊಳಗೆ ಶುಭವನ್ನು ಸ್ವೀಕರಿಸುತ್ತಿರುವ ಆತ್ಮನೇ ಬ್ರಹ್ಮಾ' (ಸರ್ವೋತ್ತಮನಾದ, ಜ್ಞಾನಸ್ವರೂಪನಾದ ಪರಮತತ್ತ್ವವನ್ನು ಜ್ಞಾನಿಗಳು) ಬ್ರಹ್ಮ, ಪರಮಾತ್ಮ, ಭಗವಾನ್ ಎಂದೆಲ್ಲ ಹೇಳುತ್ತಾರೆ. ''ಅನಸೂಯೆಯು ಆತ್ಮ (ವಿಷ್ಣು) ಈಶ, ಬ್ರಹ್ಮರಿಂದ ದತ್ತ, ದುರ್ವಾಸ, ಸೋಮರನ್ನು ಮಕ್ಕಳನ್ನಾಗಿ ಪಡೆದಳು'' ಪಾದ್ಮ ಪುರಾಣದಲ್ಲಿ ಹೀಗಿದೆ - ಜೀವ ಮತ್ತು ಆತ್ಮ ಎಂದು ಚೇತನರು ಎರಡು ವಿಧ. ಬ್ರಹ್ಮಾದಿಗಳು ಜೀವರು. ಜನಾರ್ದನನೊಬ್ಬನೇ ಆತ್ಮ. ಇತರರಲ್ಲಿ ಆತ್ಮಶಬ್ದದ ಪ್ರಯೋಗ ಅಮುಖ್ಯ. ಪ್ರಾಕೃತ ಗುಣರಹಿತನಾದ ಆ ಆತ್ಮನ ಜ್ಞಾನದಿಂದಲೇ ಮೋಕ್ಷ ಎಂದು ಶ್ರುತಿಗಳಲ್ಲಿ ಹೇಳಲಾಗಿದೆ. ಇತರರು ಪ್ರಾಕೃತಗುಣ ಬದ್ಧರು. ಅವರ ಜ್ಞಾನದಿಂದ ಮೋಕ್ಷವಿಲ್ಲ. ವಿಷ್ಣು ಸರ್ವೋತ್ತಮ, ಪೂರ್ಣ. ಆದ್ದರಿಂದ ಅವನಿಂದಲೇ ಮೋಕ್ಷ.''

**ವಿವರಣೆ :** ಭಾಷ್ಯದಲ್ಲಿ ಉದಾಹೃತವಾದ ಬೃಹದಾರಣ್ಯಕೋಪನಿಷತ್ತಿನಲ್ಲಿ ವಿಶ್ವಕೃತ್ ಎಂದರೆ ವಾಯುದೇವರ ಸೃಷ್ಟಿಕರ್ತ ಎಂದರ್ಥ. ವಿಶ್ವ ಎಂದರೆ ವಾಯುದೇವರು. ಈ ವಾಕ್ಯದಲ್ಲಿ 'ಅನುವಿತ್ತಃ' ಎಂಬ ಶಬ್ದದಿಂದ ಜ್ಞೇಯತ್ವವನ್ನು ಆತ್ಮ ಶಬ್ದವಾಚ್ಯನಿಗೆ ಹೇಳಲಾಗಿದೆ. ಅಂತಹ ಆತ್ಮನ ಜ್ಞಾನದಿಂದ ಮೋಕ್ಷವಾಗುತ್ತದೆ ಎಂದೂ ಹೇಳಿದೆ. ಹೀಗೆ ಈ

ಶ್ರುತಿಯಲ್ಲಿ ಪರಬ್ರಹ್ಮನಿಗೆ ಜ್ಞೇಯತ್ವವನ್ನು ಹೇಳಿರುವುದರಿಂದ ಅವನೇ ವಾಚ್ಯನೆಂದು ಹೇಳಬೇಕು.

**2.** 'ಅಯಮಾತ್ಮಾ ಬ್ರಹ್ಮ' ಎಂಬ ಉಪನಿಷತ್ ವಾಕ್ಯ ಆತ್ಮಶಬ್ದ ಪರಬ್ರಹ್ಮ ವಾಚಕ ಎಂದು ಸ್ಪಷ್ಟವಾಗಿಯೇ ಹೇಳುತ್ತದೆ.

**3.** 'ಬ್ರಹ್ಮೇತಿ ಪರಮಾತ್ಮೇತಿ' ಹಾಗೂ 'ದತ್ತಂ ದುರ್ವಾಸಸಂ' ಎಂಬ ವಾಕ್ಯಗಳು ಭಾಗವತ ಚತುರ್ಥ ಸ್ಕಂಧದಲ್ಲಿ ಪ್ರತ್ಯೇಕ ಭಾಗಗಳಲ್ಲಿ ಬರುವ ಎರಡು ಶ್ಲೋಕಗಳು. ಮೊದಲ ಶ್ಲೋಕದ ಪೂರ್ವಾರ್ಧ.

ವದಂತಿ ತತ್ ತತ್ತ್ವವಿದಃ ತತ್ತ್ವಂ ಯಜ್ಞಾನಮದ್ವಯಮ್॥

ಎರಡನೆಯ ವಾಕ್ಯದ ಪೂರ್ವಾರ್ಧ-

ಅನಸೂಯಾ ತಥೈವಾತ್ರೇಃ ಜಜ್ಞೇ ಪುತ್ರಾನಕಲ್ಮಷಾನ್॥

ಆಚಾರ್ಯರು ಅನುವ್ಯಾಖ್ಯಾನದಲ್ಲಿ ಮೇಲಿನ ಪಾಠವನ್ನು ತೋರಿಸಿದ್ದಾರೆ. ಆದರೆ, ಪ್ರಚಲಿತ ಪುಸ್ತಕಗಳಲ್ಲಿ-

ಅತ್ರೇಃ ಪತ್ನೀ- ಅನಸೂಯಾ ತ್ರೀನ್ ಜಜ್ಞೇಽತಿಯಶಸಃ ಸುತಾನ್॥

ಎಂದಿದೆ. ಅನುವ್ಯಾಖ್ಯಾನದಲ್ಲಿ ತೋರಿಸಿದ ಪಾಠ ಕಲ್ಪಾಂತರದ್ದು ಎಂದು ಭಾಷ್ಯದೀಪಿಕಾದಲ್ಲಿ ಹೇಳಲಾಗಿದೆ.

ದತ್ತನ ಅವತಾರವನ್ನು ಹೇಳುವ ಭಾಗವತ ಶ್ಲೋಕದಲ್ಲಿ ಬ್ರಹ್ಮರುದ್ರರನ್ನು ಅವರ ಹೆಸರುಗಳಿಂದ ಹೇಳಿ ವಿಷ್ಣುವನ್ನು 'ಆತ್ಮಾ' ಎಂಬ ನಾಮದಿಂದ ಉಲ್ಲೇಖಿಸಿರುವುದರಿಂದ ಆ ನಾಮ ವಿಷ್ಣುವಿಗೇ ಹೊರತು ಇತರರಿಗಿಲ್ಲ ಎಂದು ತಿಳಿಯುತ್ತದೆ.

ಪಾದ್ಮ ಪುರಾಣವಂತೂ ಸ್ಫುಟವಾಗಿ ಆತ್ಮಶಬ್ದ ಪರಮಾತ್ಮನಲ್ಲೇ ಮುಖ್ಯವೆಂದು ಹೇಳುತ್ತಿದೆ. **॥ ಸೂತ್ರ 7 ॥**

## ಓಂ ॥ ಹೇಯತ್ವಾವಚನಾಚ್ಚ ॥ ಓಂ

**'ತಮೇವೈಕಂ ಜಾನಥ ಆತ್ಮಾನಮನ್ಯಾ ವಾಚೋ ವಿಮುಂಚಥ।**
**ಅಮೃತಸ್ಯೈಷ ಸೇತುಃ' (ಮುಂ.ಉ.2.2.5)**

**ಇತಿ ಅನ್ಯೇಷಾಂ ಹೇಯತ್ವವಚನಾತ್ ಅಸ್ಯ ಅಹೇಯತ್ವವಚನಾತ್ ನ ಗೌಣಃ ಆತ್ಮಾ ॥ 8 ॥**

ಮುಂಡಕೋಪನಿಷತ್ತಿನಲ್ಲಿ ''ಆತ್ಮನೆನಿಸಿದ ಆ ವಿಷ್ಣುವನ್ನೇ ಪ್ರಧಾನವಾಗಿ ತಿಳಿಯಿರಿ, ಇತರ ವಿಷಯಗಳನ್ನು ಬಿಟ್ಟುಬಿಡಿ. ಈ ಆತ್ಮನು ಮುಕ್ತರಿಗೆ ಮುಖ್ಯಾಶ್ರಯ'' ಹೀಗೆ ಇತರವೆಲ್ಲವೂ ಹೇಯ, ವಿಷ್ಣು ಒಬ್ಬನೇ ಅಹೇಯ ಎಂದು ಹೇಳಿರುವುದರಿಂದ ಗೌಣಾತ್ಮ ಆತ್ಮಶಬ್ದವಾಚ್ಯನಲ್ಲ.

**ವಿವರಣೆ : 1.** ಮೋಕ್ಷ ಕಾರಣವಾದ ಜ್ಞಾನಕ್ಕೆ ವಿಷಯನಾದವನು ಅಹೇಯ. ಇತರವೆಲ್ಲವೂ ಹೇಯ.

ಒಂದುವೇಳೆ ಆತ್ಮಶಬ್ದವು ಗೌಣಾತ್ಮವಾಚಕವಾದರೆ ''ತಮೇವೈಕಂ ಜಾನಥ ಆತ್ಮಾನಂ'' ಎಂಬಲ್ಲೂ ಆತ್ಮಶಬ್ದದಿಂದ ಅವನೇ ವಾಚ್ಯನಾದಾನು. ಆಗ ಅವನು ಅಹೇಯನಾದಾನು. ಆದರೆ ಅವನು ಹೇಯ, ಮುಮುಕ್ಷು ಜ್ಞೇಯನಲ್ಲ. ಆದ್ದರಿಂದ ಆತ್ಮನೆಂದರೆ ವಿಷ್ಣು.

**2.** ''ಆತ್ಮಾ ಗೌಣಃ ನ, ಹೇಯತ್ವ ಅವಚನಾತ್'' ಎಂದು ಸೂತ್ರಾನ್ವಯ 'ತಮೇವ ಜಾನಥ' ಎಂದು ಆತ್ಮಪದಾರ್ಥವನ್ನು ಹೇಯವೆಂದು ಹೇಳದೆ ಅಹೇಯವೆಂದು ಹೇಳಿರುವುದರಿಂದ ಇತರ ವಸ್ತುಗಳೇ ಹೇಯವೆಂದು 'ಅನ್ಯಾ ವಾಚೋ ವಿಮುಂಚಥ' ಎಂದು ಹೇಳಿರುವುದರಿಂದ ಆತ್ಮನೆಂದರೆ ಪರಮಾತ್ಮ. ಹೀಗೆ ಸೂತ್ರದ ಅರ್ಥ. ॥ ಸೂತ್ರ 8 ॥

## ಓಂ ॥ ಸ್ವಾಪ್ಯಯಾತ್ ॥ ಓಂ

**ಪೂರ್ಣಮದಃ ಪೂರ್ಣಮಿದಂ ಪೂರ್ಣಾತ್ ಪೂರ್ಣಮುದಚ್ಯತೇ ।**
**ಪೂರ್ಣಸ್ಯ ಪೂರ್ಣಮಾದಾಯ ಪೂರ್ಣಮೇವಾವಶಿಷ್ಯತೇ ॥**

**(ಬೃ.ಉ.7.1.1)**

**'ಸ ಆತ್ಮನ ಆತ್ಮಾನಮುದ್ಧೃತ್ಯಾತ್ಮನ್ಯೇವ ವಿಲಾಪಯತ್ಯಥಾತ್ಮೈವ ಭವತಿ ॥'**
**ಸ ದೇವೋ ಬಹುಧಾ ಭೂತ್ವಾ ನಿರ್ಗುಣಃ ಪುರುಷೋತ್ತಮಃ ।**
**ಏಕೀಭೂಯ ಪುನಃಶೇತೇ ನಿರ್ದೋಷೋ ಹರಿರಾದಿಕೃತ್ ॥**

**ಇತಿ ಸ್ವಸ್ಯೈವ ಸ್ವಸ್ಮಿನ್ನಪ್ಯಯವಚನಾತ್। ನ ಹಿ ಗೌಣಾತ್ಮನಿ ನಿರ್ದೋಷಸ್ಯ ಲಯಃ ॥**

'ಆತ್ಮನ್ಯೇವಾತ್ಮಾನಂ ವಿಲಾಪಯತಿ' ಎಂಬ ಶ್ರುತಿಯಲ್ಲಿ ತನಗೆ ತನ್ನಲ್ಲೇ ಲಯವನ್ನು ಹೇಳಿರುವುದರಿಂದ ಈ ಶ್ರುತಿಯಿಂದ ವಾಚ್ಯನಾದ ಆತ್ಮ ಅವಾಚ್ಯನಲ್ಲ.

(ಅದಃ) ಮೂಲರೂಪವು ಪೂರ್ಣ. (ಇದಂ) ಅವತಾರ ರೂಪವೂ ಪೂರ್ಣ. (ಸೃಷ್ಟಿಕಾಲದಲ್ಲಿ) ಪೂರ್ಣವಾದ ಮೂಲರೂಪದಿಂದ ಅವತಾರರೂಪವು ಹೊರಬರುತ್ತದೆ. (ಪ್ರಲಯಕಾಲದಲ್ಲಿ) ಪೂರ್ಣವಾದ ಮೂಲರೂಪಕ್ಕೆ ಸಂಬಂಧಿಸಿದ ಅವತಾರರೂಪವು ಮೂಲರೂಪದಲ್ಲಿ ಲೀನಗೊಂಡು ಮೂಲರೂಪವಷ್ಟೇ ಉಳಿಯುತ್ತದೆ.

''ವಿಷ್ಣುವು ತನ್ನ ಮೂಲರೂಪದಿಂದ ಅವತಾರರೂಪಗಳನ್ನು ವ್ಯಕ್ತಗೊಳಿಸಿ ತನ್ನಲ್ಲೇ ಲೀನಗೊಳಿಸುತ್ತಾನೆ''

''ಆ ನಿರ್ಗುಣನಾದ, ಸೃಷ್ಟಿಕರ್ತ ಪುರುಷ ಶ್ರೇಷ್ಠನು. ಅನೇಕನಾಗಿ ತೋರಿಸಿಕೊಂಡು ಮತ್ತೆ ಅದ್ವಿತೀಯನಾಗಿ ಶೇಷನಲ್ಲಿ ಪವಡಿಸುತ್ತಾನೆ.''

ಈ ಎಲ್ಲ ಪ್ರಮಾಣಗಳು ವಿಷ್ಣುವಿಗೆ ವಿಷ್ಣುವಿನಲ್ಲೇ ಲಯವನ್ನು ಹೇಳುತ್ತವೆ. ಆದರೆ ಗೌಣಾತ್ಮನಲ್ಲಿ ನಿರ್ಗುಣನಿಗೆ ಲಯವಿಲ್ಲ. (ಆದ್ದರಿಂದ ಈ ವಾಕ್ಯಗಳಿಂದ ಪ್ರತಿಪಾದ್ಯ ನಿರ್ಗುಣನಾದ ಆತ್ಮನೇ ಆಗಿದ್ದಾನೆ.)

**ವಿವರಣೆ : 1.** ಇದುವರೆಗಿನ ಮೂರು ಸೂತ್ರಗಳಿಂದ 'ಈಕ್ಷತೇ' ಎಂಬ ಶ್ರುತಿಯಲ್ಲಿ ಹೇಳಲ್ಪಟ್ಟ ಆತ್ಮ ಗೌಣನಲ್ಲ, ನಿರ್ಗುಣ ಎನ್ನಲಾಯಿತು. ಈ ಸೂತ್ರ ನೇರವಾಗಿ ನಿರ್ಗುಣ ಆತ್ಮನೇ ಶ್ರುತಿವೇದ್ಯ ಎಂದು ಹೇಳುತ್ತದೆ. ಈ ಅಧಿಕರಣದ ಕೊನೆಯ ಸೂತ್ರ 'ಶ್ರುತತ್ವಾಚ್ಚ' ಎನ್ನುವುದೂ ಇದನ್ನೇ ಹೇಳುತ್ತದೆ. ಆದರೆ ಆ ಸೂತ್ರ ನಿರ್ಗುಣ ಪದಘಟಿತವಾದ ''ಕೇವಲೋ ನಿರ್ಗುಣಶ್ಚ'' ಎಂಬ ಶ್ರುತಿಯಿಂದ ನಿರ್ಗುಣ ಆತ್ಮ ಪ್ರತಿಪಾದ್ಯ ಎನ್ನುತ್ತದೆ. ಈ ಸೂತ್ರ 'ಪೂರ್ಣಮದಃ' ಇತ್ಯಾದಿ ಶ್ರುತಿಯಲ್ಲಿ ಸ್ವಾಪ್ಯಯವನ್ನು ಹೇಳಿರುವ ಕಾರಣದಿಂದ ನಿರ್ಗುಣನು ಆ ಶ್ರುತಿಯಿಂದ ಪ್ರತಿಪಾದ್ಯ ಎನ್ನುತ್ತದೆ. ಹೀಗೆ ಇವೆರಡಕ್ಕೆ ವ್ಯತ್ಯಾಸವನ್ನು ತಿಳಿಯಬೇಕು.

**2.** ಸ್ವಸ್ಮಿನ್ ಅಪ್ಯಯಃ=ಸ್ವಾಪ್ಯಯಃ। ಸೃಷ್ಟಿಕಾಲದಲ್ಲಿ ಮೂಲರೂಪದಿಂದ ಹೊರಬಂದ ಅವತಾರರೂಪಗಳು ಪ್ರಲಯಕಾಲದಲ್ಲಿ ಮತ್ತೆ ಮೂಲರೂಪವನ್ನು ಸೇರಿಕೊಳ್ಳುತ್ತವೆ. ಪ್ರಲಯಕಾಲದಲ್ಲಿರುವ ರೂಪ ನಿರ್ಗುಣ ಆತ್ಮ. ಹೀಗಾಗಿ ಅವತಾರ ರೂಪಗಳ ಲಯವನ್ನು ಹೇಳುವ ಶ್ರುತಿವಾಕ್ಯಗಳು ನಿರ್ಗುಣ ಆತ್ಮ ಪ್ರತಿಪಾದಕವೆಂದು ಹೇಳುವುದು ಅನಿವಾರ್ಯ. ಹೀಗೆ ಇಂತಹ ವಾಕ್ಯಗಳಿಂದ ಮುಖ್ಯ ಆತ್ಮ ಪ್ರತಿಪಾದ್ಯನಾದುದರಿಂದ ಅವನು ಅಶಬ್ದ-ಅವಾಚ್ಯವೆನ್ನಬಾರದು ಎಂದು ಸೂತ್ರ ಹೇಳುತ್ತದೆ. **॥ ಸೂತ್ರ 9 ॥**

**ನ ಚ ಕಾಸುಚಿತ್ ಶಾಖಾಸು ಅನ್ಯಥಾ ಉಚ್ಯತೇ ।**

## ಓಂ ॥ ಗತಿಸಾಮಾನ್ಯಾತ್ ॥ ಓಂ

**ಸರ್ವೇ ವೇದಾ ಯುಕ್ತಯಃ ಸುಪ್ರಮಾಣಾ**
**ಬ್ರಾಹ್ಮಂ ಜ್ಞಾನಂ ಪರಮಂ ತ್ವೇಕಮೇವ ।**
**ಪ್ರಕಾಶಯಂತೇ ನ ವಿರೋಧಃ ಕುತಶ್ಚಿತ್**
**ವೇದೇಷು ಸರ್ವೇಷು ತಥೇತಿಹಾಸೇ ॥**

**ಇತಿ ಪೈಂಗಿಶ್ರುತೇಃ ಗತೇಃ=ಜ್ಞಾನಸ್ಯ ಸಾಮ್ಯಮೇವ ॥ 10 ॥**

ಅಪ್ರಸಿದ್ಧವಾದ ವೇದದ ಕೆಲವು ಶಾಖೆಗಳಲ್ಲಿ ರುದ್ರಾದಿಗಳೂ ಜಗತ್ತಿಗೆ ಕಾರಣ ಎಂದು ಹೇಳಿರಬಹುದು ಎಂಬ ಸಂಶಯಬೇಡ. ವೈದಿಕ ಗತಿ ಒಂದೇ ವಿಧವಾದುದು.

''ಎಲ್ಲ ವೇದಗಳು, ಪ್ರಮಾಣಾಧಾರಿತ ಯುಕ್ತಿಗಳು ಬ್ರಹ್ಮನ ಒಂದೇ ವಿಧವಾದ ಜ್ಞಾನವನ್ನು ಹುಟ್ಟಿಸುತ್ತವೆ. ಎಂದೂ ವೇದಗಳಲ್ಲಾಗಲೀ ಇತಿಹಾಸ ಗ್ರಂಥದಲ್ಲಾಗಲೀ ಪರಸ್ಪರ

ವಿರೋಧ ಸ್ವಲ್ಪವೂ ಇಲ್ಲ'' ಹೀಗೆ ಪೈಂಗಿಶ್ರುತಿಯು ಹೇಳುತ್ತಿರುವುದರಿಂದ ವೇದದಿಂದ ಬರುವ ಗತಿ ಅಂದರೆ ಜ್ಞಾನವು ಒಂದೇ ವಿಧವಾದುದು.

**ವಿವರಣೆ :** ನಮಗಿಂದು ಉಪಲಬ್ಧವಾದ ಶಾಖೆಗಳಲ್ಲಿ ವಿಷ್ಣುವೇ ಜಗತ್ಕಾರಣ ಎಂದಿದೆ. ಆದರೆ ಲುಪ್ತವಾದ ಅನೇಕ ಶಾಖೆಗಳಿವೆ. ಅಲ್ಲಿ ಇತರರೂ ಜಗತ್ಕಾರಣ ಎಂದೇಕೆ ಹೇಳಿರಬಾರದು? ಈ ಸಂದೇಹವನ್ನು ಸೂತ್ರದಲ್ಲಿ ಪರಿಹರಿಸಲಾಗಿದೆ. ವೈದಿಕ ಸಿದ್ಧಾಂತದಲ್ಲಿ ಪರಸ್ಪರ ವಿರೋಧವಿಲ್ಲ. ಇಲ್ಲಿ ಒಂದು ವಿಧವಾಗಿ ಹೇಳುವುದು, ಮತ್ತೊಂದೆಡೆ ಅದಕ್ಕೆ ವಿರುದ್ಧವಾಗಿ ಹೇಳುವುದು ಈ ಕೆಲಸವನ್ನು ವೇದ ಎಂದೂ ಮಾಡುವುದಿಲ್ಲ. ಆದ್ದರಿಂದ ಪ್ರಸಿದ್ಧ ಶಾಖೆಗಳಿಂದ ವಿಷ್ಣು ಜಗತ್ಕಾರಣ ಎಂದು ನಿರ್ಣಯವಾದರೆ ಸಮಗ್ರ ವೇದವೂ ಅದನ್ನೇ ಹೇಳುತ್ತದೆ ಎಂದು ನಿರ್ಧರಿಸಬಹುದು. **॥ 10 ॥**

## ಓಂ ॥ ಶ್ರುತತ್ವಾಚ್ಚ ॥ ಓಂ

**ಏಕೋ ದೇವಃ ಸರ್ವಭೂತೇಷು ಗೂಢಃ ಸರ್ವವ್ಯಾಪೀ ಸರ್ವಭೂತಾಂತರಾತ್ಮಾ।**
**ಕರ್ಮಾಧ್ಯಕ್ಷಃ ಸರ್ವಭೂತಾಧಿವಾಸಃ ಸಾಕ್ಷೀ ಚೇತಾ ಕೇವಲೋ ನಿರ್ಗುಣಶ್ಚ ॥**
**(ಶ್ವೇ.ಉ.6-11)**

**ನಹ್ಯಶಬ್ದಃ ಶ್ರೂಯತೇ ।**

**ನ ಚಾಪ್ರಸಿದ್ಧಂ ಕಲ್ಪ್ಯಮ್। ಸರ್ವಶಬ್ದಾವಾಚ್ಯಸ್ಯ ಲಕ್ಷಣಾಯುಕ್ತೇಃ ।**

## ॥ ಇತಿ ಈಕ್ಷತ್ಯಧಿಕರಣಂ ಸಮಾಪ್ತಂ ॥

ಪ್ರಧಾನನಾದವನು, ಪ್ರಕಾಶಮಾನನಾದವನು, ಸಕಲ ಪ್ರಾಣಿಗಳಲ್ಲೂ ಅವಿತಿರುವವನು, ವ್ಯಾಪ್ತನಾದವನು, ಸಕಲಚೇತನವರ್ಗಕ್ಕೂ ನಿಯಾಮಕನಾದವನು, ನಮ್ಮ ಕರ್ಮಗಳಿಗೆಲ್ಲ ಅಧಿಪತಿಯಾದವನು, ಸರ್ವಚೇತನರಿಗೂ ಆಶ್ರಯನಾದವನು, ಎಲ್ಲವನ್ನೂ ನೋಡುತ್ತಿರುವವನು, ಜ್ಞಾನರೂಪನಾದವನು, ಜಡಾಮಿಶ್ರಿತನಾದವನು, ಸತ್ವಾದಿ ಗುಣರಹಿತನಾದವನು (ಪರಮಾತ್ಮ). ಈ ವಾಕ್ಯದಿಂದ ನಿರ್ಗುಣಾತ್ಮ ಪ್ರತಿಪಾದ್ಯನಾಗಿದ್ದಾನೆ, ಅವಾಚ್ಯನಾದರೆ ವಾಕ್ಯ ಪ್ರತಿಪಾದ್ಯನಾಗಲಾರ. ಸಕಲ ಶಬ್ದಗಳಿಂದ ಅವಾಚ್ಯವಾದುದು ಲಕ್ಷ್ಯವಾಗಿರುವುದು ಅಪ್ರಸಿದ್ಧವಾದುದರಿಂದ ಅವಾಚ್ಯನಾದರೂ ಬ್ರಹ್ಮ ಲಕ್ಷ್ಯ ಎಂದು ಹೇಳುವಂತಿಲ್ಲ.

**ವಿವರಣೆ : 1.** ಹಿಂದಿನ ಸೂತ್ರಗಳಿಂದ ಗೌಣನಾದ ಆತ್ಮನೇ ಈಕ್ಷಣೀಯ ಹಾಗೂ ವಾಚ್ಯ ಎಂಬ ಆಕ್ಷೇಪಕ್ಕೆ ಉತ್ತರ ನೀಡಿ ಆ ಮೂಲಕ ಮುಖ್ಯಾತ್ಮನಿಗೆ ವಾಚ್ಯತ್ವವನ್ನು ಹೇಳುತ್ತದೆ.

'ನಾಶಬ್ದಂ' ಎಂಬ ಮೊದಲ ಸೂತ್ರದ ಅಂಶವನ್ನು ಇಲ್ಲಿ ಅನುವೃತ್ತಿ ಮಾಡಿಕೊಳ್ಳಬೇಕು. ''ಶ್ರುತತ್ವಾಚ್ಚ ಬ್ರಹ್ಮ ಅಶಬ್ದಂ ನ'' ಎಂದು ಒಟ್ಟುಸೂತ್ರಾರ್ಥ. 'ಏಕೋದೇವಃ' ಎಂಬ

ಶ್ವೇತಾಶ್ವತರ ಉಪನಿಷತ್ತಿನಲ್ಲಿ ''ನಿರ್ಗುಣಃ'' ಎಂಬ ಪದವಿರುವುದರಿಂದ ನಿರ್ಗುಣಾತ್ಮನೇ ಆ ವಾಕ್ಯದಿಂದ ಪ್ರತಿಪಾದ್ಯ. ಹೀಗೆ ನಿರ್ಗುಣ ಪದದಿಂದ ಪ್ರತಿಪಾದ್ಯನಾದುದರಿಂದ ನಿರ್ಗುಣ ಆತ್ಮನೂ ವಾಚ್ಯನಾಗಿದ್ದಾನೆ ಎಂದು ಸೂತ್ರಕಾರರ ಭಾವ.

**2.** ವಸ್ತುತಃ ಪದಪ್ರತಿಪಾದ್ಯವಾದುದೆಲ್ಲ ಪದವಾಚ್ಯವಾಗಬೇಕಿಲ್ಲ. ನದೀ ಪದದಿಂದ ಕೆಲವೊಮ್ಮೆ ಲಕ್ಷಣಾವೃತ್ತಿಯಿಂದ 'ನದೀತೀರ'ವೂ ಪ್ರತಿಪಾದ್ಯವಾಗುತ್ತದೆ. ಆದರೆ ತೀರ ನದೀಪದದಿಂದ ವಾಚ್ಯವಲ್ಲ, ಲಕ್ಷ್ಯ. ಅದರಂತೆ, ಬ್ರಹ್ಮ ನಿರ್ಗುಣಪದದಿಂದ ಅವಾಚ್ಯನಾದರೂ ಆ ಪದದಿಂದ ಲಕ್ಷ್ಯನಾದುದರಿಂದ, ಪ್ರತಿಪಾದ್ಯನಾಗಬಹುದು. ಈ ಆಕ್ಷೇಪಕ್ಕೆ 'ನ ಚಾಪ್ರಸಿದ್ಧಂ ಕಲ್ಪ್ಯಂ' ಎಂದು ಆಚಾರ್ಯರು ನೀಡಿದ ಉತ್ತರ.

ತೀರವು ನದೀಪದದಿಂದ ಅವಾಚ್ಯವಾದರೂ 'ತೀರ' ಎಂಬ ಪದದಿಂದ ವಾಚ್ಯವಾಗಿದೆ. ಆದರೆ ಅದ್ವೈತವಾದದ ನಿರ್ಗುಣಬ್ರಹ್ಮ ಯಾವ ಪದದಿಂದಲೂ ವಾಚ್ಯನಲ್ಲ. ಆದ್ದರಿಂದ ಅದು ಲಕ್ಷ್ಯವೂ ಅಲ್ಲ.

ಸರ್ವಪದದಿಂದಲೂ ಅವಾಚ್ಯವಾದ ಬ್ರಹ್ಮ ಏಕೆ ಲಕ್ಷ್ಯ ಆಗಬಾರದು? ಎಂದರೆ ಲಕ್ಷ್ಯ ಎಂದರೆ ಲಕ್ಷಣಾವೃತ್ತಿಯಿಂದ ಪ್ರತಿಪಾದ್ಯ ಎಂದರ್ಥ. ಲಕ್ಷಣಾ ಎಂದರೆ ಶಕ್ಯಸಂಬಂಧ. ಸಂಬಂಧಜ್ಞಾನಕ್ಕೆ ಸಂಬಂಧಿಜ್ಞಾನ ಕಾರಣ. ಪ್ರಕೃತದಲ್ಲಿ ಸಂಬಂಧಿಯಾದುದು ಬ್ರಹ್ಮ. ಅವನು ಔಪನಿಷದ- ಉಪನಿಷತ್ತಿನಿಂದಲೇ ಅವನನ್ನು ತಿಳಿಯಬೇಕು. ''ಸತ್ಯಂ, ಜ್ಞಾನಂ, ಅನಂತಂ ಬ್ರಹ್ಮ'' ಎಂಬ ಉಪನಿಷತ್ತು ಬ್ರಹ್ಮನನ್ನು ತಿಳಿಸುತ್ತದೆ. ಇಲ್ಲಿ ಸತ್ಯಪದದಿಂದ ಲಕ್ಷ್ಯ ಯಾವುದು? ಎಂದು ಕೇಳಿದಾಗ 'ಜ್ಞಾನ' ಎಂಬ ಪದವನ್ನು ಉತ್ತರವನ್ನಾಗಿ ಹೇಳಬೇಕು. ಜ್ಞಾನ ಎಂಬ ಪದವೂ ಲಾಕ್ಷಣಿಕ. ಅಲ್ಲೂ ಮತ್ತೆ ಹಿಂದಿನದೇ ಪ್ರಶ್ನೆ. ಹೀಗೆ ಅನವಸ್ಥಾದೋಷ. ಬ್ರಹ್ಮನಿಗೆ ವಾಚಕವಾದ ಪದವೊಂದಿದ್ದಿದ್ದರೆ ಆಗ ಸತ್ಯಪದದಿಂದ ಲಕ್ಷ್ಯವಾದುದು ಯಾವುದು ಎಂಬ ಪ್ರಶ್ನೆಗೆ ವಾಚಕವಾದ ಆ ಪದವನ್ನು ಉತ್ತರವನ್ನಾಗಿ ಕೊಡಬಹುದಿತ್ತು. ಅಥವಾ ಬ್ರಹ್ಮ ಇಂದ್ರಿಯ ಗೋಚರವಾದ ವಸ್ತುವಾಗಿದ್ದಿದ್ದರೆ ಅದನ್ನು ತೋರಿಸಿ ''ಇದು ಲಕ್ಷ್ಯ'' ಎನ್ನಬಹುದಿತ್ತು. ಆದರೆ ಬ್ರಹ್ಮ ಯಾವ ಪದದಿಂದಲೂ ವಾಚ್ಯನೂ ಅಲ್ಲ, ಯಾವ ಇಂದ್ರಿಯಕ್ಕೂ ಗೋಚರನೂ ಅಲ್ಲ. ಆದ್ದರಿಂದ ಅದ್ವೈತದರ್ಶನದಲ್ಲಿ ಅನವಸ್ಥಾದೋಷ ಅಪರಿಹಾರ್ಯ.

'ಬ್ರಹ್ಮ ಪದಗಳಿಂದ ವಾಚ್ಯ' ಎಂಬ ಪಕ್ಷದಲ್ಲಿ ಈ ದೋಷವಿಲ್ಲ. 'ಆಕಾಶ' ಎಂಬ ಪದದಿಂದ ವಾಚ್ಯ ಯಾವುದು? ಎಂದು ಕೇಳಿದಾಗ 'ಬ್ರಹ್ಮ' ಎಂದು ಉತ್ತರಿಸಬಹುದು. 'ಬ್ರಹ್ಮ' ಶಬ್ದಕ್ಕೆ 'ವಿಷ್ಣು' ಎಂಬ ಅರ್ಥ ಪ್ರಸಿದ್ಧವಾಗಿದೆ. ಹೀಗೆ ತಿಳಿಯದ ಪದದಿಂದ ವಾಚ್ಯ ಯಾವುದು? ಎಂಬ ಪ್ರಶ್ನೆಗೆ ತಿಳಿದ ಅಂದರೆ ರೂಢವಾದ ಒಂದು ಪದವನ್ನು ಉತ್ತರಿಸಬಹುದು. ಅಥವಾ, ಬ್ರಹ್ಮಪದದಿಂದ ವಾಚ್ಯ ಯಾವುದು ಎಂದೇ ಕೇಳಿದರೂ 'ಗುಣಪೂರ್ಣವಾದ, ಜಗತ್ತಿಗೆ ಸೃಷ್ಟಿಯನ್ನು ಮಾಡುವ ಒಬ್ಬ ಚೇತನ'' ಎಂದು

ಉತ್ತರಿಸಬಹುದು. ಇದೊಂದು ವಾಕ್ಯ. ಇಲ್ಲಿ ಪ್ರತ್ಯೇಕವಾಗಿ ಯಾವ ಒಂದು ಪದವೂ ಬ್ರಹ್ಮವಾಚಕವಲ್ಲ. ಅವುಗಳು ಬ್ರಹ್ಮ ಭಿನ್ನವಾದ ವಸ್ತುಗಳನ್ನು ಹೇಳುವ ಪದಗಳು. ಅಂತಹ ಪದಗಳು ಒಟ್ಟು ಸೇರಿ ತಿಳಿಯದ ಒಂದು ತತ್ತ್ವವನ್ನು ಪರಿಚಯಿಸುತ್ತವೆ. ಅಂತಹ ವಾಕ್ಯವನ್ನು ಹೇಳಿ ಬ್ರಹ್ಮಶಬ್ದದಿಂದ ವಾಚ್ಯವಾದುದು ಇಂತಹುದು ಎಂದು ಸಮಾಧಾನಿಸಬಹುದು. ಹೀಗೆ ವಾಚ್ಯತ್ವ ಪಕ್ಷದಲ್ಲಿ ಅನವಸ್ಥಾ ದೋಷವಿಲ್ಲ.

**3.** ಈಕ್ಷತ್ಯಧಿಕರಣದಲ್ಲಿ ಒಟ್ಟು ಏಳು ಸೂತ್ರಗಳಿವೆ. ಇವುಗಳಲ್ಲಿ ಆರು ಸೂತ್ರಗಳು ಬ್ರಹ್ಮನಿಗೆ ವಾಚ್ಯತ್ವವನ್ನು ಸಾಧಿಸುತ್ತವೆ. ಅವುಗಳಲ್ಲೂ 'ಈಕ್ಷತೇಃ ನಾಶಬ್ದಂ' 'ಸ್ವಾಪ್ಯಯಾತ್' 'ಶ್ರುತತ್ವಾಚ್ಚ' ಈ ಮೂರು ಸೂತ್ರಗಳು ನೇರವಾಗಿ ಬ್ರಹ್ಮನಿಗೆ ವಾಚ್ಯತ್ವವನ್ನು ಸಮರ್ಥಿಸುತ್ತವೆ. ''ಗೌಣಶ್ಚೇನ್ನಾತ್ಮಶಬ್ದಾತ್' 'ತನ್ನಿಷ್ಠಸ್ಯ ಮೋಕ್ಷೋಪದೇಶಾತ್' 'ಹೇಯತ್ವಾವಚನಾಚ್ಚ' ಎಂಬ ಮೂರು ಸೂತ್ರಗಳು ಈಕ್ಷಣೀಯನಾದ ಆತ್ಮನಿಗೆ ಗೌಣತ್ವವನ್ನು ನಿರಾಕರಿಸುತ್ತವೆ. 'ಗತಿಸಾಮಾನ್ಯಾತ್' ಎಂಬ ಒಂದು ಸೂತ್ರಮಾತ್ರ ''ಅನಂತವೇದಗಳು ತಿಳಿಸುವ ಸಿದ್ಧಾಂತದಲ್ಲಿ ವಿರೋಧವಿಲ್ಲ. ಅವೆಲ್ಲವೂ ಒಂದೇ ಸಿದ್ಧಾಂತವನ್ನು ತಿಳಿಸುತ್ತವೆ ಎಂದು ಹೇಳುತ್ತದೆ. ಹೀಗೆ ಈ ಅಧಿಕರಣದಲ್ಲಿ ವಿಭಿನ್ನವಾದ, ಸ್ವತಂತ್ರವಾದ ಎರಡು ವಿಷಯಗಳನ್ನು ನಿರೂಪಿಸಲಾಗಿದೆ. ಆದರೂ ಹಿಂದಿನ ಸೂತ್ರದಲ್ಲಿರುವ 'ಸಮ್' ಎಂಬ ಶಬ್ದದ ಅರ್ಥವನ್ನು ಈ ಎರಡೂ ವಿಷಯಗಳು ಸಮರ್ಥಿಸುತ್ತಿವೆ. ತತ್ತು ಸಮನ್ವಯಾತ್ ಎಂಬ ಸೂತ್ರದ ಸಮ್ ಶಬ್ದವನ್ನು ಶಾಸ್ತ್ರಯೋನಿತ್ವಾತ್ ಎಂಬ ಶಬ್ದದೊಂದಿಗೆ ಸೇರಿಸಿದಾಗ 'ಬ್ರಹ್ಮನು ಸಮಗ್ರ ಶಾಸ್ತ್ರದಿಂದ ಮುಖ್ಯ ಪ್ರತಿಪಾದ್ಯ' ಎಂದು ಅರ್ಥವಾಗುತ್ತದೆ. ಹೀಗೆ 'ಸಮಗ್ರ' 'ಮುಖ್ಯ' ಎಂಬ ಎರಡು ಅರ್ಥಗಳು 'ಸಮ್' ಶಬ್ದಕ್ಕಿದೆ. ಅದರಲ್ಲಿ 'ಮುಖ್ಯ' ಎಂಬ ಅಂಶವನ್ನು ಆರು ಸೂತ್ರಗಳು ಹೇಳಿದರೆ, ಸಮಗ್ರ ಎಂಬ ಅರ್ಥವನ್ನು 'ಗತಿಸಾಮಾನ್ಯಾತ್' ಎಂಬ ಸೂತ್ರ ಸಮರ್ಥಿಸುತ್ತದೆ. ಹೀಗೆ ಈ ಅಧಿಕರಣದಲ್ಲಿ ಅರ್ಥಭೇದವಿದ್ದರೂ ಅವರೆಡೂ ಒಂದೇ ಶಬ್ದದ ಅರ್ಥವನ್ನು ಸಮರ್ಥಿಸುತ್ತಿರುವುದರಿಂದ ಅಧಿಕರಣ ಭೇದವಿಲ್ಲ. ಆದ್ದರಿಂದಲೇ 'ಗತಿ ಸಾಮಾನ್ಯಾತ್' ಎಂಬ ಸೂತ್ರವನ್ನು ಅಧಿಕರಣದ ಕೊನೆಯಲ್ಲಿ ಹೇಳದೆ, ವಾಚ್ಯತ್ವವನ್ನು ಸಮರ್ಥಿಸುವ ಎರಡು ಸೂತ್ರಗಳ ಮಧ್ಯದಲ್ಲಿ ಸೇರಿಸಲಾಗಿದೆ. ಇದರಿಂದ ಸೂತ್ರಕಾರರಿಗೂ ಅದೊಂದೇ ಸೂತ್ರವನ್ನು ಪ್ರತ್ಯೇಕ ಅಧಿಕರಣವನ್ನಾಗಿ ಪರಿಗಣಿಸುವ ಉದ್ದೇಶವಿಲ್ಲ ಎಂದು ತಿಳಿಯುತ್ತದೆ.

**4.** ಮೊದಲನೆಯ ಸೂತ್ರದ ವಿಷಯವಾಕ್ಯ 'ಪರಾತ್ ಪರಂ ಪುರಿಷಯಂ ಪುರುಷಮೀಕ್ಷತೇ' ಎಂದು. ಇಲ್ಲಿ ಈಕ್ಷಣೀಯನಾಗಿ ಹೇಳಲ್ಪಟ್ಟ ಬ್ರಹ್ಮ ಸಗುಣ, ನಿರ್ಗುಣನಲ್ಲ ಎಂಬ ಪ್ರಶ್ನೆಗೆ ''ಗೌಣಶ್ಚೇತ್ ನಾತ್ಮಶಬ್ದಾತ್'' ಎಂಬ ಸೂತ್ರ ಉತ್ತರ ನೀಡಿದೆ. ಆದರೆ, ಆ ಸೂತ್ರ ನೀಡಿದ 'ಆತ್ಮಶಬ್ದಾತ್' ಎಂಬ ಕಾರಣ ಮೊದಲ ಸೂತ್ರದಲ್ಲಿ ವಿವಕ್ಷಿತವಾದ ವಿಷಯವಾಕ್ಯದಲ್ಲಿ ಇಲ್ಲ, ಅಲ್ಲಿರುವುದು ಪುರುಷಶಬ್ದ. ಅದಕ್ಕಾಗಿ, ಎರಡನೆಯ ಸೂತ್ರದಲ್ಲಿ 'ಆತ್ಮನ್ಯೇವಾತ್ಮಾನಂ ಪಶ್ಯೇತ್' ಎಂಬ ವಿಷಯವಾಕ್ಯವನ್ನು ತೆಗೆದುಕೊಳ್ಳಬೇಕು. ಅಲ್ಲಿ

ಆತ್ಮಶಬ್ದವೇನೋ ಇದೆ. ಆದರೆ ಮುಂದಿನ ಸೂತ್ರದಲ್ಲಿ ಹೇಳುವ 'ತನ್ನಿಷ್ಠಸ್ಯ ಮೋಕ್ಷೋಪದೇಶಾತ್' ಎಂಬ ಸೂತ್ರ ಹೇಳುವ ಕಾರಣ ಇಲ್ಲ. ಅದಕ್ಕಾಗಿ 'ಯಸ್ಯಾನುವಿತ್ತಃ' ಇತ್ಯಾದಿ ಬೃಹದಾರಣ್ಯಕ ವಾಕ್ಯವನ್ನು ಉದ್ಧರಿಸಲಾಯಿತು. ಅಲ್ಲಿ ಈಕ್ಷಣ, (ಅನುವಿತ್ತಃ) ಆತ್ಮಶಬ್ದ, ಮೋಕ್ಷೋಪದೇಶ ಈ ಮೂರೂ ಇದೆ. ಆದರೆ ಮುಂದಿನ ಸೂತ್ರದಲ್ಲಿ ಹೇಳುವ 'ಹೇಯತ್ವ ಅವಚನ' ಇಲ್ಲ. ಈ ನಾಲ್ಕೂ ಇರುವುದು ಕೊನೆಗೆ ಉದಾಹರಿಸಿದ 'ತಮೇವೈಕಂ ಜಾನಥ' ಎಂಬ ಮುಂಡಕೋಪನಿಷತ್ತಿನ ವಾಕ್ಯದಲ್ಲಿ ಮಾತ್ರ. ಅದನ್ನೇ ಆರಂಭದ ಸೂತ್ರದಲ್ಲಿ ಉದಾಹರಿಸಬಹುದಿತ್ತು. ಆದರೆ, ಅದರಲ್ಲಿ 'ಜಾನಥ' ಎಂಬ ಶಬ್ದವಿದೆ. 'ಈಕ್ಷತೇ' ಎಂಬ ಶಬ್ದವಿಲ್ಲ. ಹೀಗಾಗಿ 'ಈಕ್ಷತೇಃನಾಶಬ್ದಮ್' ಎಂಬ ಸೂತ್ರಕ್ಕೆ ಅದು ಅನುಗುಣವಾಗಿಲ್ಲ. ಆದ್ದರಿಂದ ಈ ಎಲ್ಲ ಸೂತ್ರಗಳಿಗೆ ಹೊಂದಿಕೆಯಾಗುವ ಒಂದು ವಿಷಯ ವಾಕ್ಯವಿಲ್ಲ. ಅದಕ್ಕಾಗಿ ಆಚಾರ್ಯರು ಅನೇಕ ವಿಷಯ ವಾಕ್ಯಗಳನ್ನು ಉಲ್ಲೇಖಿಸಿದ್ದಾರೆ. ಸೂತ್ರಗಳು ಉಪನಿಷತ್ತಿನ ಒಂದು ವಾಕ್ಯದ ಅರ್ಥ ನಿರ್ಣಯಕಷ್ಟೇ ಹೊರಟಿಲ್ಲ. ಒಂದು ಅಧಿಕರಣದಿಂದ ಅನೇಕ ಉಪನಿಷದ್ವಾಕ್ಯಗಳ ಸಮನ್ವಯ ನಡೆಯಬೇಕು. ಸೂತ್ರದಲ್ಲಿ 'ಈಕ್ಷತೇಃ' ಎಂಬ ಶಬ್ದವನ್ನು ಧಾತು ನಿರ್ದೇಶ ಎಂದು ಪರಿಗಣಿಸಿದರೂ ಅದರ ಅರ್ಥವೇ ವಿವಕ್ಷಿತಾರ್ಥ ಸಾಧಕವಾದುದರಿಂದ 'ಬ್ರಹ್ಮನಿಗೆ ಶ್ರುತಿಗಳು ಜ್ಞೇಯತ್ವವನ್ನು ಹೇಳುತ್ತಿರುವುದರಿಂದ ಅವನು ವಾಚ್ಯ' ಎನ್ನುವುದೇ ಪ್ರಥಮಸೂತ್ರದ ಅರ್ಥ. 'ಈಕ್ಷತೇ' ಎಂಬ ಶಬ್ದದಂತೆ 'ಜಾನಥ' 'ಅನುವಿತ್ತಃ' ಇತ್ಯಾದಿ ಶಬ್ದಗಳೂ ಜ್ಞೇಯತ್ವವನ್ನು ಹೇಳುತ್ತವೆ. ಅಂತಹ ಶಬ್ದಘಟಿತವಾದ ಉಪನಿಷದ್ವಾಕ್ಯಗಳೂ ಈ ಅಧಿಕರಣದ ವಿಷಯವಾಕ್ಯಗಳು. ಆ ವಾಕ್ಯಗಳಲ್ಲಿ ಆತ್ಮಶಬ್ದವಲ್ಲದೆ 'ಪುರುಷ' ಶಬ್ದವೂ ಇದೆ. ಆದ್ದರಿಂದಲೇ 'ಗೌಣಶ್ಚೇತ್ ನಾತ್ಮಶಬ್ದಾತ್' ಎಂಬ ಸೂತ್ರದಲ್ಲಿ ಆತ್ಮಶಬ್ದದೊಂದಿಗೆ ಪುರುಷಶಬ್ದವನ್ನು ಸೇರಿಸಿಕೊಳ್ಳಬೇಕು. ಆತ್ಮನಿಗೆ ಈಕ್ಷಣೀಯತ್ವವನ್ನು ಒಂದೇ ವಾಕ್ಯ ಹೇಳುತ್ತಿಲ್ಲ. ಅನೇಕ ವಾಕ್ಯಗಳು ಹೇಳುತ್ತಿವೆ. ಹೀಗಾಗಿ, ಅದನ್ನು ಅಪಲಾಪ ಮಾಡುವಂತಿಲ್ಲ. ಹೀಗೆ ಅನೇಕ ವಿಷಯಗಳನ್ನು ತಿಳಿಸುವ ಉದ್ದೇಶದಿಂದ ಸೂತ್ರಕಾರರೂ ಒಂದೇ ವಿಷಯವಾಕ್ಯವನ್ನು ಉದ್ದೇಶಿಸದೆ ಅನೇಕ ವಾಕ್ಯಗಳನ್ನು ನಿರ್ದೇಶಿಸಿದ್ದಾರೆ. ಇದರಿಂದ ಬ್ರಹ್ಮನಲ್ಲಿ ವಾಚ್ಯತ್ವವನ್ನು ಸಮರ್ಥನೆ ಮಾಡುವ ಮೂಲಕ ಅನೇಕವಾಕ್ಯಗಳನ್ನು ಸಮನ್ವಯ ಮಾಡಿದಂತಾಗುತ್ತದೆ.

**॥ ಸೂತ್ರ 11 ॥**

## ದ್ವೈತದರ್ಶನದಲ್ಲಿ ಸೂತ್ರಗಳ ಅರ್ಥ

**1. ಓಂ ॥ ಈಕ್ಷತೇರ್ನಾಶಬ್ದಮ್ ॥** ಓಂ - ತತ್= ಬ್ರಹ್ಮ ಈಕ್ಷತೇಃ- ಜ್ಞಾನ ವಿಷಯ ನಾದುದರಿಂದ ಅಶಬ್ದಂ ನ= ಅವಾಚ್ಯನಲ್ಲ. ವಾಚ್ಯನೇ ಆಗಿದ್ದಾನೆ.

(ಈಕ್ಷತೇಃ- ಈಕ್ಷಣೀಯತ್ವಾತ್ ತತ್= ಬ್ರಹ್ಮ , ಅಶಬ್ದಂ ನ, ಕಿಂತು ವಾಚ್ಯಮೇವ)

**2. ಓಂ ॥ ಗೌಣಶ್ಚೇತ್ ನಾತ್ಮಶಬ್ದಾತ್ ॥ ಓಂ** - ಜ್ಞಾನವಿಷಯನಾದವನು ಗೌಣ= ತ್ರಿಗುಣಬದ್ಧನಾದ ಜೀವ, ನ= ಅಲ್ಲ. ಆತ್ಮಶಬ್ದಾತ್= 'ಆತ್ಮಾನಂ ಪಶ್ಯೇತ್' ಎಂದು ಶ್ರುತಿಯಲ್ಲಿ ಆತ್ಮಶಬ್ದವಿದೆಯಾದ್ದರಿಂದ.

(ಪುರುಷಮೀಕ್ಷತೇ ಇತ್ಯಾದೌ ಈಕ್ಷಣೀಯಃ ತ್ರಿಗುಣಬದ್ಧೋ ಜೀವಃ ನ ವಿಷ್ಣುಃ। ಅತ ಈಕ್ಷಣೀಯತ್ವಂ ತತ್ರಾಸಿದ್ಧಮಿತಿ ನ। ಆತ್ಮಾನಂ ಪಶ್ಯೇದಿತ್ಯಾದೌ ಈಕ್ಷಣೀಯೇ ಆತ್ಮಪದಶ್ರವಣಾತ್॥)

**3. ಓಂ ॥ ತನ್ನಿಷ್ಠಸ್ಯ ಮೋಕ್ಷೋಪದೇಶಾತ್ ॥ ಓಂ** - ತನ್ನಿಷ್ಠಸ್ಯ= ಆತ್ಮೋಪಾಸಕನಿಗೆ ಮೋಕ್ಷೋಪದೇಶಾತ್= ಮೋಕ್ಷವನ್ನು ಹೇಳಿರುವುದರಿಂದ ಆತ್ಮಶಬ್ದವಾಚ್ಯ ಜೀವನಲ್ಲ. (ಆದ್ದರಿಂದ ಈಕ್ಷಣೀಯನೂ ಜೀವನಲ್ಲ)

(ತನ್ನಿಷ್ಠಸ್ಯ= ಆತ್ಮನಿಷ್ಠಸ್ಯ ''ಯಸ್ಯಾನುವಿತ್ತಃ ಪ್ರತಿಬುದ್ಧ ಆತ್ಮಾ... ತಸ್ಯಲೋಕಃ ಸ ಉ ಲೋಕ ಏವ'' ಇತಿ ಮೋಕ್ಷೋಪದೇಶಾತ್ ನ ಗೌಣಃ ಆತ್ಮಶಬ್ದೇನ ಉಕ್ತಃ ಇತ್ಯರ್ಥಃ।)

**4. ಓಂ ॥ ಹೇಯತ್ವಾವಚನಾಚ್ಚ ॥ ಓಂ**–'ತಮೇವೈಕಂ ಜಾನಥ ಆತ್ಮಾನಂ' ಎಂಬ ಶ್ರುತಿಯಲ್ಲಿ ಆತ್ಮನಿಗೆ ಹೇಯತ್ವ- ಅವಚನಾತ್ ಚ= ಹೇಯತ್ವವನ್ನು ಹೇಳಿಲ್ಲ, ಅಹೇಯತ್ವವನ್ನೇ ಹೇಳಿದೆಯಾದ್ದರಿಂದಲೂ ಆತ್ಮ ಗೌಣನಲ್ಲ.

('ತಮೇವೈಕಂ ಜಾನಥ ಆತ್ಮಾನಂ ಅನ್ಯಾ ವಾಚೋ ವಿಮುಂಚಥ' ಇತಿ ಆತ್ಮಶಬ್ದಾರ್ಥಸ್ಯ ಹೇಯತ್ವಾವಚನಾತ್ ಪ್ರತ್ಯುತ ಅಹೇಯತ್ವವಚನಾತ್, ಅನ್ಯಸ್ಯ ಹೇಯತ್ವ ವಚನಾಚ್ಚ ಇತ್ಯರ್ಥಃ.)

**5. ಓಂ ॥ ಸ್ವಾಪ್ಯಯಾತ್ ಓಂ ॥** ತನಗೆ ತನ್ನಲ್ಲೇ ಲಯವನ್ನು ಹೇಳಿರುವುದರಿಂದ 'ಆತ್ಮನ್ಯೇವಾತ್ಮಾನಂ ವಿಲಾಪಯತಿ' ಎಂಬ ಶ್ರುತಿಯಿಂದ ಪ್ರತಿಪಾದ್ಯ ನಿರ್ಗುಣ (ಸತ್ವಾದಿಗುಣರಹಿತ) ಆತ್ಮನೇ ಆಗಿದ್ದಾನೆ. ಆದ್ದರಿಂದ ನಿರ್ಗುಣನು ಅಶಬ್ದಂ ನ= ಅವಾಚ್ಯನಲ್ಲ.

(ಅಶಬ್ದಂ ಇತಿ ವರ್ತತೇ। ನಿರ್ಗುಣಂ ಇತಿ ಚ ಪ್ರಕೃತಂ। ಆತ್ಮನ್ಯೇವಾತ್ಮಾನಂ ಪಶ್ಯೇತ್ ಇತಿ ಶ್ರುತ್ಯುಕ್ತತ್ವಾಚ್ಚ ನಿರ್ಗುಣಂ ಬ್ರಹ್ಮ ನಾಶಬ್ದಮ್= ಕಿಂತು ವಾಚ್ಯಮೇವ ಇತಿ ಬಹಿರೇವ ಯೋಜ್ಯಮ್। ಕುತೋಽಯಂ ನಿರ್ಗುಣ ಇತಿ ಚೇತ್- ಸ್ವಸ್ಯ ಸ್ವಸ್ಮಿನ್ ಅಪ್ಯಯವಚನಾತ್)

**6. ಓಂ ॥ ಗತಿಸಾಮಾನ್ಯಾತ್ ॥ ಓಂ** - ಗತೇಃ= ಸರ್ವಶಾಖೆಗಳಿಂದಲೂ ಉಂಟಾಗುವ ಜ್ಞಾನವು ಸಾಮಾನ್ಯಾತ್= ಏಕರೂಪವಾದುದು ಎಂದು ''ಸರ್ವೇ ವೇದಾಃ ಯುಕ್ತಯಃ ಸಪ್ರಮಾಣಾಃ ಬ್ರಾಹ್ಮಂ ಜ್ಞಾನಂ ಪರಮಂ ತ್ವೇಕಮೇವ'' ಎಂಬ ಶ್ರುತಿಯಲ್ಲಿ ಹೇಳಿರುವುದರಿಂದ ಬ್ರಹ್ಮನೇ ಜಗತ್ಕಾರಣತ್ವೇನ ಸಕಲಶಾಸ್ತ್ರಪ್ರತಿಪಾದ್ಯ.

(ತತ್ತು ಶಾಸ್ತ್ರಯೋನೀತಿ ವರ್ತತೇ। ಗತೇಃ=ಸರ್ವಶಾಖೋತ್ಪದ್ಯಮಾನಜ್ಞಾನಸ್ಯ ಸಾಮಾನ್ಯಾತ್=ಸಮಾನತ್ವಾತ್, ಏಕರೂಪತ್ವಶ್ರವಣಾತ್, 'ಸರ್ವೇ ವೇದಾ ಯುಕ್ತಯಃ' ಇತ್ಯಾದೌ, ತದೇವ ವಿಷ್ಣ್ವಾಖ್ಯಂ ಬ್ರಹ್ಮೈವ ಕಾರಣತ್ವೇನ ಸರ್ವಶಾಸ್ತ್ರಯೋನಿ, ನತು ಅನ್ಯತ್ರ ಅನ್ಯಥಾ ಉಚ್ಯತೇ ಇತ್ಯರ್ಥಃ।)

**7. ಓಂ ॥ ಶ್ರುತತ್ವಾಚ್ಚ ॥ ಓಂ** 'ಕೇವಲೋ ನಿರ್ಗುಣಶ್ಚ' ಎಂಬ ಶ್ರುತಿಯಲ್ಲಿ ಸತ್ವಾದಿ ಗುಣರಹಿತನೇ ಶ್ರುತನಾಗಿರುವುದರಿಂದ ಅವನು ಅವಾಚ್ಯನಲ್ಲ.

(ತತ್ ನಾಶಬ್ದಂ ಇತಿ ವರ್ತತೇ। ನಿರ್ಗುಣಸ್ಯೇತಿ ಪ್ರಕೃತಂ। ''ಕೇವಲೋ ನಿರ್ಗುಣಶ್ಚ' ಇತಿ ಸತ್ವಾದಿಗುಣಹೀನಸ್ಯ ಶ್ರುತತ್ವಾತ್ ತತ್ ನಾಶಬ್ದಮಿತ್ಯರ್ಥಃ।)

**ಶಾಂಕರಭಾಷ್ಯದಲ್ಲಿ ಹೇಳಿದ ಸೂತ್ರಾರ್ಥ : 1. 'ಈಕ್ಷತೇಃ ನಾಶಬ್ದಂ'**–'ಸದೇವ ಸೋಮ್ಯ ಇದಮಗ್ರ ಆಸೀತ್' ಎಂಬ ಶ್ರುತಿಯಲ್ಲಿ ಹೇಳಲ್ಪಟ್ಟ ಜಗತ್‌ಕಾರಣವಾದ ತತ್ತ್ವ ಅಶಬ್ದಂ=ಪ್ರಕೃತಿಯು ನ=ಅಲ್ಲ. ಏಕೆಂದರೆ, ಸಾಂಖ್ಯದರ್ಶನದಂತೆ ಪ್ರಕೃತಿಯು ಅಶಬ್ದಂ=ಶಬ್ದಪ್ರತಿಪಾದ್ಯವಲ್ಲ, ಅನುಮಾನಗಮ್ಯ. ಪ್ರಕೃತಿ ಶಬ್ದಪ್ರತಿಪಾದ್ಯ ಯಾಕಲ್ಲ? ಈಕ್ಷತೇಃ='ತದೈಕ್ಷತ' ಎಂದು 'ಜಗತ್ಕಾರಣವಾದ ತತ್ತ್ವಕ್ಕೆ ಜ್ಞಾನವಿದೆ' ಎಂದು ಉಪನಿಷತ್ತು ಹೇಳುತ್ತದೆ. ಪ್ರಕೃತಿ ಜಡ. ಅದಕ್ಕೆ ಜ್ಞಾನವಿಲ್ಲ, ಆದ್ದರಿಂದ ಅದು ಅಶಬ್ದ. ಅಶಬ್ದವಾದುದರಿಂದ ಜಗತ್ತಿಗೆ ಕಾರಣವಾಗಿ ಶ್ರುತಿಪ್ರತಿಪಾದ್ಯವಲ್ಲ.

**2. 'ಗೌಣಶ್ಚೇತ್ ನಾತ್ಮಶಬ್ದಾತ್'**–'ತದೈಕ್ಷತ' ಎಂಬ ಶ್ರುತಿಯಲ್ಲಿ ಹೇಳಲಾದ ಈಕ್ಷಣ-ಜ್ಞಾನ ಗೌಣ. ಏಕೆಂದರೆ ಆ ಪ್ರಕರಣದಲ್ಲಿ ''ತತ್ತೇಜ ಐಕ್ಷತ' 'ತಾ ಆಪ ಐಕ್ಷಂತ' ಎಂದು ಮುಂತಾಗಿ ಜಡವಾದ ಬೆಂಕಿ, ನೀರುಗಳೂ ಐಕ್ಷತ–ತಿಳಿದವು' ಎನ್ನಲಾಗಿದೆ. ಜಡವಾದ ಅವುಗಳಲ್ಲಿ ಈಕ್ಷಣ ಮುಖ್ಯವಾಗಿರಲು ಸಾಧ್ಯವಿಲ್ಲ. ಆದ್ದರಿಂದ 'ಜಗತ್‌ಕಾರಣವಾದ ಸದ್ವಸ್ತುವಿನಲ್ಲೂ ಈಕ್ಷಣ ಗೌಣ ಎಂದೇಕೆ ಹೇಳಬಾರದು? ಗೌಣಶ್ಚೇತ್=ಈಕ್ಷಣವು ಗೌಣವೆಂದರೆ ನ=ಅಲ್ಲ. ಆತ್ಮ ಶಬ್ದಾತ್='ಅನೇನ ಜೀವೇನ ಆತ್ಮನಾ ಅನುಪ್ರವಿಶ್ಯ' ಎಂದು ಉಪನಿಷತ್ತಿನಲ್ಲಿ ಆತ್ಮಶಬ್ದವಿದೆ. ಆತ್ಮನೆಂದರೆ ಸ್ವರೂಪ. ಸತ್ ಪದದಿಂದ ಪ್ರಕೃತಿ ವಾಚ್ಯವಾದರೆ, ಮುಂದೆ ಬರುವ 'ಸೇಯಂ ದೇವತಾ ಐಕ್ಷತ' ಎಂಬಲ್ಲಿ 'ಸಾ' ಎಂದರೆ ಪ್ರಕೃತಿ ಎಂದೇ ಅರ್ಥ ಮಾಡಬೇಕು. ಆಗ ''ಆ ಪ್ರಕೃತಿಯು ತಾನೂ ಜೀವರೂಪವನ್ನು ತಾಳಿ ಜಡವಾದ ತೇಜೋ ಅಪ್ ಅನ್ನಗಳನ್ನು ಪ್ರವೇಶಿಸಿ ನಾಮರೂಪ ಪ್ರಪಂಚವನ್ನು ಸೃಷ್ಟಿ ಮಾಡುತ್ತೇನೆ, ಎಂದು ಯೋಚಿಸಿತು'' ಎಂದು ಆ ಮುಂದಿನ ವಾಕ್ಯದ ಅರ್ಥವಾಗುತ್ತದೆ. ಆದರೆ ಜಡವಾದ ಪ್ರಕೃತಿಯು ಚೇತನವಾದ ಜೀವರೂಪವಾಗಲು ಸಾಧ್ಯವಿಲ್ಲ, ಆದ್ದರಿಂದ ಈಕ್ಷಣವನ್ನು ಗೌಣವನ್ನಾಗಿ ಮಾಡಿ 'ಸತ್' ಪದದಿಂದ ಪ್ರಕೃತಿ ವಾಚ್ಯವೆಂದು ಹೇಳಬಾರದು.

**3. ''ತನ್ನಿಷ್ಠಸ್ಯ ಮೋಕ್ಷೋಪದೇಶಾತ್''**–ಜಡವಾದ ಪ್ರಕೃತಿಯನ್ನೂ 'ಆತ್ಮ' ಎಂದು

ಹೇಳಬಹುದು. ತನ್ನೆಲ್ಲ ಕೆಲಸಗಳನ್ನು ಶ್ರದ್ಧೆಯಿಂದ ಮಾಡುವ ಸೇವಕನನ್ನು ರಾಜನು 'ಮಮ ಆತ್ಮಾ ಅಯಂ' ಎಂದು ಹೇಳುತ್ತಾನೆ. ಅದರಂತೆ ನಿಷ್ಕ್ರಿಯನಾದ ಪುರುಷನ ಮೋಕ್ಷಕ್ಕಾಗಿ ಬೇಕಾದುದನ್ನೆಲ್ಲ ಮಾಡುವುದು ಪ್ರಕೃತಿ. ಆದ್ದರಿಂದ ಅದನ್ನೂ ಆತ್ಮ ಎನ್ನಬಹುದು. ಹೀಗೆ ಆತ್ಮಶಬ್ದವನ್ನು ಗೌಣವಾಗಿ ಪ್ರಕೃತಿಯಲ್ಲಿ ಪ್ರಯೋಗಿಸಬಹುದು ಎಂಬ ಪ್ರಶ್ನೆಗೆ ಮೂರನೆಯ ಸೂತ್ರ ಉತ್ತರ ನೀಡುತ್ತದೆ.

ತನ್ನಿಷ್ಠಸ್ಯ=ಆತ್ಮನಿಂದ ತಾನು ಅಭಿನ್ನವೆಂದು ಉಪಾಸನೆ ಮಾಡುವ ಜೀವನಿಗೆ ಮೋಕ್ಷೋಪದೇಶಾತ್='ಅಥ ಸಂಪತ್ಸ್ಯತೇ' ಎಂದು ಮೋಕ್ಷವನ್ನು ಹೇಳಲಾಗಿದೆ. ಆದ್ದರಿಂದ ಆತ್ಮಶಬ್ದವನ್ನು ಗೌಣ ಎನ್ನಬಾರದು.

ದುಃಖಪ್ರಪಂಚದಲ್ಲಿ ಸಿಲುಕಿದ ಜೀವನಿಗೆ ಬಿಡುಗಡೆಗಾಗಿ ಛಾಂದೋಗ್ಯೋಪನಿಷತ್ತು ''ಸ ಆತ್ಮಾ ತತ್ತ್ವಮಸಿ'' ಎಂದು ಆತ್ಮನ ಅಭೇದವನ್ನು ಹೇಳುತ್ತದೆ. ಆತ್ಮಶಬ್ದವು ಗೌಣವಾಗಿ ಜಡವಾದ ಪ್ರಕೃತಿಗೆ ವಾಚಕವಾದರೆ ಜೀವನಿಗೆ ಜಡದ ಅಭೇದ ಹೇಳಿದಂತಾಗುತ್ತದೆ. ಚೇತನನಿಗೆ ಜಡದ ಅಭೇದ ಅಪ್ರಾಮಾಣಿಕ. ದುಃಖದಿಂದ ಬಿಡುಗಡೆಗೊಳಿಸುವ ಸದುದ್ದೇಶದಿಂದ ಹೊರಟ ಉಪನಿಷತ್ತು ಅಪ್ರಾಮಾಣಿಕವಾದುದನ್ನು ಹೇಳಲಾರದು. ಆದ್ದರಿಂದ ಆತ್ಮಶಬ್ದಕ್ಕೆ 'ಚೇತನ' ಎಂಬ ಮುಖ್ಯಾರ್ಥವನ್ನೇ ಹೇಳಬೇಕು.

**4. 'ಹೇಯತ್ವಾವಚನಾಚ್ಚ'**– 'ಸ ಆತ್ಮಾ ತತ್ತ್ವಮಸಿ' ಎಂಬಲ್ಲಿ ಆತ್ಮಶಬ್ದದಿಂದ ಪ್ರಧಾನವು ವಾಚ್ಯವಾಗಿದ್ದು ಅದರ ಅಭೇದವನ್ನು ಜೀವನಿಗೆ ಹೇಳಿದ್ದರೂ ಅದು ಅಪ್ರಾಮಾಣಿಕವಾದುದರಿಂದ ಅದನ್ನು ನಿರಾಕರಿಸಿ, ಜೀವನಿಗೇ ಬ್ರಹ್ಮಾಭೇದವನ್ನು ಹೇಳಬೇಕಾಗಿತ್ತು. ಸೂಕ್ಷ್ಮವಾದ ಅರುಂಧತೀ ನಕ್ಷತ್ರವನ್ನು ತೋರಿಸುವುದಕ್ಕಾಗಿ ಅದರ ಪಕ್ಕದಲ್ಲಿರುವ ದೊಡ್ಡ ನಕ್ಷತ್ರವನ್ನೇ ಮೊದಲು ಅರುಂಧತಿ ಎಂದು ಪರಿಚಯಿಸಿ ಅನಂತರ ''ಇದಲ್ಲ ಅರುಂಧತಿ, ಅದರ ಪಕ್ಕದಲ್ಲಿರುವ ಚಿಕ್ಕ ನಕ್ಷತ್ರವೇ ಅರುಂಧತಿ'' ಎಂದು ಪರಿಚಯಿಸಲಾಗುತ್ತದೆ. ಅದರಂತೆ, ಅಜ್ಞೇಯನಾದ ಬ್ರಹ್ಮನನ್ನು ತಿಳಿಸಲು ಮೊದಲು ಜೀವನಿಗೆ ಪ್ರಕೃತಿಯ ಅಭೇದವನ್ನು ಹೇಳಿ, ಅದನ್ನು ನಿರಾಕರಿಸಿ, ಬ್ರಹ್ಮನ ಅಭೇದವನ್ನು ಹೇಳಬೇಕು. ಆದರೆ ಪ್ರಕೃತ ಪ್ರಕರಣದಲ್ಲಿ ಹೇಳಿದ ಅಭೇದವನ್ನು ನಿರಾಕರಿಸಿಲ್ಲ. ಆದ್ದರಿಂದ 'ಸದೇವ ಸೋಮ್ಯ' ಎಂಬಲ್ಲಿ ಸತ್ ಶಬ್ದದಿಂದ ವಾಚ್ಯವಾದುದು ಪ್ರಕೃತಿಯಲ್ಲ. ಹೇಯತ್ವ-ಅವಚನಾತ್='ಜೀವನು ಜಡವಾದ ಪ್ರಕೃತಿಯಲ್ಲ' ಹೀಗೆ 'ಜಡಾಭೇದ ಹೇಯ' ಎಂದು ಹೇಳಲಾಗಿಲ್ಲ. ಆದ್ದರಿಂದ ಸತ್ ಶಬ್ದವಾಚ್ಯ ಪ್ರಕೃತಿಯಲ್ಲ.

**5. 'ಸ್ವಾಪ್ಯಯಾತ್'** – 'ಸದೇವ ಸೋಮ್ಯ' ಎಂಬಲ್ಲಿ ಸತ್ ಶಬ್ದವಾಚ್ಯನಾದ ಆತ್ಮನನ್ನು ''ಸತಾ ಸೋಮ್ಯ ತದಾ ಸಂಪನ್ನೋಭವತಿ'' ಎಂದು ಅನುವಾದಿಸಿ 'ಸ್ವಂ ಹಿ ಅಪೀತೋ ಭವತಿ' ನಿದ್ರಾಕಾಲದಲ್ಲಿ ಜೀವನಿಗೆ ಅವನಲ್ಲಿ ಲಯವನ್ನು ಹೇಳಲಾಗಿದೆ. ಜಡದಲ್ಲಿ ಚೇತನನಿಗೆ ಲಯವಾಗಲಾರದು. ಆದ್ದರಿಂದ 'ಸತ್' ಎಂದರೆ ಪ್ರಕೃತಿಯಲ್ಲ, ಆತ್ಮ.

ಸ್ವಸ್ಮಿನ್=ಸತ್ ಶಬ್ದವಾಚ್ಯನಾದ ತತ್ತ್ವದಲ್ಲಿ ಅಪ್ಯಯಾತ್=ಜೀವನಿಗೆ ಲಯವು ಹೇಳಲ್ಪಟ್ಟಿರುವುದರಿಂದ ಸತ್ ಶಬ್ದವಾಚ್ಯ ಪ್ರಕೃತಿಯಲ್ಲ.

**6. 'ಗತಿಸಾಮಾನ್ಯಾತ್'**-ವೇದಾಂತದಿಂದ ಬರುವ ಜ್ಞಾನ ಒಂದೇ ರೀತಿಯಾದುದು. ಆದ್ದರಿಂದ 'ಆತ್ಮತ ಏವೇದಂ ಸರ್ವಂ' ಎಂಬ ಛಾಂದೋಗ್ಯ ವಾಕ್ಯದಲ್ಲಿ ಆತ್ಮನು ಜಗತ್ಕಾರಣ ಎಂದಿರುವುದರಿಂದ 'ಸದೇವ ಸೋಮ್ಯ' ಎಂಬಲ್ಲಿ ಜಡಪ್ರಕೃತಿಯು ಕಾರಣ ಎಂದು ಉಪನಿಷತ್ತು ಹೇಳಲಾರದು. ಏಕೆಂದರೆ, ವೇದಾಂತದಿಂದ ಬರುವ ಜ್ಞಾನ ಒಂದೇ ವಿಧವಾದುದು. ಆದ್ದರಿಂದ ಇಲ್ಲೂ ಸತ್ ಶಬ್ದದಿಂದ ಆತ್ಮನನ್ನೇ ತೆಗೆದುಕೊಳ್ಳಬೇಕು.

**7. 'ಶ್ರುತತ್ವಾಚ್ಚ'** -ಶ್ವೇತಾಶ್ವತರ ಉಪನಿಷತ್ತಿನಲ್ಲಿ 'ಜ್ಞಃ ಕಾಲಕಾಲೋ ಗುಣೀ ಸರ್ವವಿತ್ ಯಃ' ಎಂದು ಸರ್ವಜ್ಞನಾದ ಬ್ರಹ್ಮನನ್ನು ಉಲ್ಲೇಖಿಸಿ 'ಸ ಕಾರಣಂ ಕಾರಣಾಧಿಪಾಧಿಪಃ' ಎಂದು ಅವನಿಗೇ ಜಗತ್ಕಾರಣತ್ವವು ಶ್ರುತವಾಗಿದೆ. ಆದ್ದರಿಂದ ಪ್ರಧಾನ ಕಾರಣ ಎನ್ನುವುದು ಸರಿಯಲ್ಲ.

**ಚಂದ್ರಿಕಾದಲ್ಲಿ ಮಾಡಿದ ವಿಮರ್ಶೆ :** ಅದ್ವೈತಭಾಷ್ಯದಂತೆ ಇದಕ್ಕಿಂತ ಮೊದಲಿನ ನಾಲ್ಕು ಸೂತ್ರಗಳು ಮಾತ್ರ ಸಮಗ್ರ ಬ್ರಹ್ಮಸೂತ್ರಕ್ಕೆ ಸಂಬಂಧಪಟ್ಟವು. ಈಕ್ಷತ್ಯಧಿಕರಣ ಸಮನ್ವಯಾಧ್ಯಾಯಕ್ಕೆ ಮಾತ್ರ ಸಂಬಂಧಿಸಿದ ಸೂತ್ರ. ಇಲ್ಲಿ ಸಾಂಖ್ಯರು ಹೇಳುವ ಪ್ರಕೃತಿಯು ಜಗತ್ಕಾರಣವಲ್ಲ ಎಂದು ಹೇಳಲಾಗುತ್ತದೆ ಎಂದು ಅದ್ವೈತಭಾಷ್ಯದ ಭಾವ. ಆದರೆ ಈ ಅಧಿಕರಣದ ಉದ್ದೇಶವೇನು? 'ಸದೇವ ಸೋಮ್ಯ' ಎಂಬ ಶ್ರುತಿವಾಕ್ಯದಲ್ಲಿರುವ 'ಸತ್' ಶಬ್ದದ ಸಮನ್ವಯ ಮಾಡುವುದು ಎಂದಾದರೆ 'ಸದೀಕ್ಷತೇಃ' ಎಂದು ಸೂತ್ರದ ವಿನ್ಯಾಸ ಉಚಿತ. ಮುಂದಿನ ಆನಂದಮಯಾಧಿಕರಣದಲ್ಲಿ ಹೀಗೆಯೇ ಸೂತ್ರವಿದೆ. 'ಆನಂದಮಯಃ ಅಭ್ಯಾಸಾತ್' ಎಂದು. ಆದ್ದರಿಂದ ಸೂತ್ರವಿನ್ಯಾಸಕ್ಕೆ ಅನನುಗುಣವಾದುದರಿಂದ 'ಸತ್' ಶಬ್ದದ ಸಮನ್ವಯ ಈ ಅಧಿಕರಣದ ಉದ್ದೇಶವಲ್ಲ.

ಶಾಂಕರಭಾಷ್ಯದಲ್ಲಿ, ಪ್ರಥಮಾಧ್ಯಾಯದ ಕೆಲವು ಸೂತ್ರಗಳಲ್ಲಿ ಸಮನ್ವಯವೂ ಮತ್ತೆ ಕೆಲವು ಸೂತ್ರಗಳಲ್ಲಿ ಪ್ರಧಾನಕ್ಕೆ ಶಾಬ್ದತ್ವ ನಿರಾಕರಣೆಯೂ ಉದ್ದೇಶ ಎಂದು ಹೇಳಲಾಗಿದೆ. ಆದ್ದರಿಂದ ಪ್ರಧಾನಕ್ಕೆ ಶಾಬ್ದತ್ವ ನಿರಾಸವು ಈ ಅಧಿಕರಣದ ಉದ್ದೇಶವಾದರೆ ಆಗ ಈ ಅಧಿಕರಣ ಚತುರ್ಥಪಾದದಲ್ಲಿರಬೇಕಾದೀತು. ಏಕೆಂದರೆ, ಚತುರ್ಥಪಾದ ಿವಕ್ಕಾಗಿ ಇದೆ ಎಂದು ಶಾಂಕರಭಾಷ್ಯ ಹೇಳುತ್ತದೆ. ಹೀಗೆ ಎರಡೂ ಉದ್ದೇಶಗಳು ಸೂತ್ರಕಾರರಿಗೆ ಅಭಿಪ್ರೇತವಲ್ಲ.

2. ಶಾಂಕರಭಾಷ್ಯ ಹೇಳಿದ ಸೂತ್ರಾರ್ಥದಲ್ಲಿ ಸ್ವಾರಸ್ಯವೂ ಇಲ್ಲ- ದ್ವೈತಭಾಷ್ಯದಂತೆ ''ತತ್ ಅಶಬ್ದಂ ನ ಈಕ್ಷತೇಃ'' ಎಂದು ಸೂತ್ರದ ಶಬ್ದಗಳಿಗೆ ಅನ್ವಯ. ಶಾಂಕರಭಾಷ್ಯದಂತೆ ''ಅಶಬ್ದಂ (ಪ್ರಧಾನಂ) ಕಾರಣಂ ನ। ಕಾರಣಸ್ಯ ಈಕ್ಷತೇಃ'' ಎಂದು ಅನ್ವಯ. ಇಲ್ಲಿ ಅನೇಕ ಶಬ್ದಗಳನ್ನು ಅಧ್ಯಾಹಾರ ಮಾಡಬೇಕು. 'ಈಕ್ಷತೇಃ ನಾಶಬ್ದಂ' ಎಂಬ ಸೂತ್ರದಲ್ಲಿ 'ಅಶಬ್ದಂ' ಎಂಬುದು ಸಾಧ್ಯವಾಚಕಪದವೆಂದು ಸ್ವರಸವಾಗಿ ತಿಳಿಯುತ್ತದೆ. ಅದನ್ನು ಬಿಟ್ಟು

ಸಾಧ್ಯವಾಚಕಪದವನ್ನು ಪ್ರತ್ಯೇಕವಾಗಿ ಕಲ್ಪಿಸಿಕೊಂಡು 'ಅಶಬ್ದಂ' ಎಂಬುದನ್ನು ಪಕ್ಷವಾಚಕ ಪದವನ್ನಾಗಿಯೂ 'ಅಶಬ್ದಂ ಹಿ ತತ್' ಎಂದು ಶಾಂಕರಭಾಷ್ಯದ ವಿವರಣೆಯಂತೆ ಹೇತುವಾಚಕವನ್ನಾಗಿಯೂ ಕಲ್ಪಿಸಿಕೊಳ್ಳುವುದು ಅನುಚಿತ.

'ಜಗತ್ಕಾರಣದಲ್ಲಿ ಶ್ರುತವಾದ ಈಕ್ಷಣವು ಗೌಣ' ಎಂಬ ಆಕ್ಷೇಪಕ್ಕೆ ಉತ್ತರವಾಗಿ ಎರಡನೆಯ ಸೂತ್ರ ಹೊರಟಿದೆ. ಆಗ 'ಈಕ್ಷಣಂ' ಎಂಬ ಶಬ್ದಕ್ಕೆ ಅನುಗುಣವಾಗಿ 'ಗೌಣಂ ಚೇತ್' ಎಂದು ಸೂತ್ರವಿರಬೇಕು. 'ಗೌಣಶ್ಚೇತ್' ಎಂಬ ಪುಂಲಿಂಗ ಪ್ರಯೋಗ ಅನುಚಿತ. ದ್ವೈತಭಾಷ್ಯದಂತೆ 'ಆತ್ಮಾ' ಶಬ್ದಕ್ಕೆ ವಿಶೇಷಣವಾದುದರಿಂದ ''ಗೌಣಃ ಆತ್ಮಾ ಈಕ್ಷಣೀಯಃ'' ಎಂದು ಪುಂಲಿಂಗ ಉಚಿತವಾಗುತ್ತದೆ.

ಹೀಗೆ ಅದ್ವೈತಭಾಷ್ಯದ ಅರ್ಥ ಸೂತ್ರಕ್ಕೆ ಅನುಗುಣವಾಗಿಲ್ಲ.

**ವಿಶಿಷ್ಟಾದ್ವೈತಭಾಷ್ಯದಲ್ಲಿ ಹೇಳಿದ ಅರ್ಥ :** ಪ್ರಥಮಸೂತ್ರದಲ್ಲಿ ಲಕ್ಷ್ಯ ನಿರ್ದೇಶ, ದ್ವಿತೀಯಸೂತ್ರದಲ್ಲಿ ಲಕ್ಷಣ, ತೃತೀಯಸೂತ್ರದಲ್ಲಿ ಲಕ್ಷ್ಯವು ಅನುಮಾನಸಿದ್ಧ ಎಂಬ ಶಂಕಾನಿರಾಸ, ಚತುರ್ಥದಲ್ಲಿ ಸಿದ್ಧರೂಪಿಪನಾದ ಬ್ರಹ್ಮ ಶಾಸ್ತ್ರದಿಂದ ಅವೇದ್ಯ ಎಂಬ ಆಕ್ಷೇಪ ಪರಿಹಾರ. ಇವುಗಳನ್ನು ಹಿಂದಿನ ನಾಲ್ಕು ಸೂತ್ರಗಳಿಂದ ಮಾಡಿ ಪಂಚಮ ಸೂತ್ರದಿಂದ ಬ್ರಹ್ಮನು ಚಿದಚಿದ್ವಿಲಕ್ಷಣವೋ ಅಲ್ಲವೋ? ಎಂದು ವಿಚಾರ ಮಾಡಲಾಗುತ್ತದೆ.

**1. ಈಕ್ಷತೇಃ ನಾಶಬ್ದಮ್**- 'ಸದೇವ ಸೋಮ್ಯ' ಎಂಬ ವಾಕ್ಯಗತ 'ಸತ್' ಶಬ್ದವಾಚ್ಯವಾದುದು ಅಶಬ್ದಂ ನ=ಶಬ್ದೈಕ ಗಮ್ಯವಲ್ಲದ ಪ್ರಧಾನ ಅಲ್ಲ. ಈಕ್ಷತೇಃ='ತದೈಕ್ಷತ' ಎಂದು ಸಂಕಲ್ಪರೂಪವಾದ ಈಕ್ಷಣವು ಹೇಳಲ್ಪಟ್ಟಿದೆಯಾದ್ದರಿಂದ.

ಸದೇವೇತ್ಯಾದಿಕೈಃ ಶಬ್ದೈಃ ನ ಪ್ರಧಾನಮಿಹೋಚ್ಯತೇ।
ಈಕ್ಷತೇರನ್ವಯಾತ್ತಸ್ಮಿನ್ ಬ್ರಹ್ಮ ಸಚ್ಛಬ್ದಗೋಚರಮ್ ॥

'ಸದೇವ ಸೋಮ್ಯ ಇದಮಗ್ರ ಆಸೀತ್' ಎಂಬ ಉಪನಿಷತ್ತು ಇದಂ=ಈ ಜಗತ್ತು ಸದೇವ ಆಸೀತ್=ಸದ್ರೂಪವಾಗಿತ್ತು ಎನ್ನುತ್ತದೆ. ಈ ಜಗತ್ತು ತ್ರಿಗುಣಾತ್ಮಕವಾದುದರಿಂದ ಸೃಷ್ಟಿಯ ಪ್ರಾರಂಭದಲ್ಲಿ ಇದು ತ್ರಿಗುಣಾತ್ಮಕವಾದ ಸೂಕ್ಷ್ಮರೂಪದ ಪ್ರಕೃತಿ ರೂಪವಾಗಿತ್ತು ಎಂದರ್ಥ. ಆದ್ದರಿಂದ ಈ ವಾಕ್ಯದಲ್ಲಿ ಸತ್ ಎಂದರೆ ಪ್ರಕೃತಿ ಎಂದು ಪೂರ್ವಪಕ್ಷ. 'ತದೈಕ್ಷತ' ಎಂದು ಕಾರಣವಸ್ತುವಿನಲ್ಲಿ ಈಕ್ಷಣವು ತಿಳಿಯುವುದರಿಂದ, ಅಚೇತನವಾದ ಪ್ರಕೃತಿಯಲ್ಲಿ ಈಕ್ಷಣ=ಸಂಕಲ್ಪ ಇರಲು ಸಾಧ್ಯವಿಲ್ಲವಾದುದರಿಂದ 'ಸತ್' ಶಬ್ದವಾಚ್ಯವಾದುದು ಚೇತನನಾದ ಬ್ರಹ್ಮನೇ ಎಂದು ಸಿದ್ಧಾಂತ.

**2. ಗೌಣಶ್ಚೇತ್‌ನಾತ್ಮಶಬ್ದಾತ್**- 'ತತ್ತೇಜೋ ಐಕ್ಷತ' ಎಂದು ಇದೇ ಪ್ರಕರಣದಲ್ಲಿ ಜಡವಾದ ತೇಜಸ್ಸಿಗೆ ಹೇಳಿದಂತೆ ಸತ್ ಪದಾರ್ಥದಲ್ಲೂ ಈಕ್ಷಣವು ಗೌಣ ಎನ್ನಬಾರದು. 'ಐತದಾತ್ಮ್ಯಂ ಇದಂ ಸರ್ವಂ' ''ಸ ಆತ್ಮಾ'' ಎಂದೆಲ್ಲ 'ಈ ಚರಾಚರ ಪ್ರಪಂಚಕ್ಕೆ ಸತ್

ಪದಾರ್ಥ ಆತ್ಮ' ಎನ್ನಲಾಗಿದೆ. ಪ್ರಕೃತಿಯು ಆತ್ಮವಲ್ಲ, ಆದ್ದರಿಂದ 'ಸತ್' ಎಂದರೆ ಬ್ರಹ್ಮನೇ ಆಗಬೇಕು.

ಸಂಕಲ್ಪಸ್ತ್ವಥ ಗೌಣಃ ಸ್ಯಾತ್ ಸದ್ಘವೇದಾನುಮಾನಿಕಂ।

ಇತಿ ಚೆನ್ನಾತ್ಮಶಬ್ದೇನ ಸಚ್ಛಬ್ದೋ ಹಿ ವಿಶಿಷ್ಯತೇ॥

**3. ತನ್ನಿಷ್ಠಸ್ಯ ಮೋಕ್ಷೋಪದೇಶಾತ್** - ತನ್ನಿಷ್ಠಸ್ಯ=ಸತ್ ಶಬ್ದವಾಚ್ಯನಾದ ಪರಮಾತ್ಮನ ಉಪಾಸಕನಿಗೆ, ಮೋಕ್ಷೋಪದೇಶಾತ್='ಅಥ ಸಂಪತ್ಸ್ಯತೇ' ಎಂದು ಮೋಕ್ಷವನ್ನು ಹೇಳಲಾಗಿದೆ. ಜಡವಾದ ಪ್ರಧಾನವನ್ನು 'ತತ್ತ್ವಮಸಿ' ಎಂದು ಉಪಾಸನೆ ಮಾಡುವುದಾಗಲೀ, ಅದರಿಂದ ಮೋಕ್ಷವಾಗಲೀ ಸಾಧ್ಯವಿಲ್ಲ, ಆದ್ದರಿಂದ ಸತ್ ಪ್ರಧಾನವಲ್ಲ.

ಸದರ್ಥೋಪಾಸಕಸ್ಯಾತ್ರ ಮೋಕ್ಷೋಕ್ತೇಃ ಬ್ರಹ್ಮ ಸದ್ ಭವೇತ್ ।

ಪ್ರಧಾನ ಪ್ರಾಪ್ತಿರಿತಿ ಚೇತ್ ಮುಕ್ತಿಃ ನಾನಂದತಾಂ ಭಜೇತ್ ॥

**4. ಹೇಯತ್ವಾವಚನಾಚ್ಚ** - ಸಚ್ಛಬ್ದದಿಂದ ಪ್ರಧಾನವು ವಾಚ್ಯವಾದರೆ ಶ್ವೇತಕೇತುವಿಗೆ ಸದಾತ್ಮಕತ್ವವನ್ನು 'ಅತತ್ತ್ವಮಸಿ' ಎಂದು ನಿಷೇಧಿಸಬೇಕಿತ್ತು, ಆದರೆ ನಿಷೇಧಿಸದೆ 'ತತ್ತ್ವಮಸಿ' ಎಂದು ಸದಾತ್ಮಕತ್ವೋಪಾಸನೆ ಮಾಡಬೇಕೆಂದೇ ಹೇಳಿರುವುದರಿಂದ 'ಸತ್' ಪ್ರಧಾನವಲ್ಲ.

ಸಚ್ಛಬ್ದವಾಚ್ಯಂ ನ ಧ್ಯೇಯಂ ಹೇಯತ್ವಾದಿತ್ಯನುಕ್ತಿತಃ ।
ಧ್ಯೇಯತ್ವೇನೈವ ಚೋಕ್ತತ್ವಾತ್ ಬ್ರಹ್ಮಾನಂದಃ ಸದುಚ್ಯತೇ ॥

**5. ಪ್ರತಿಜ್ಞಾವಿರೋಧಾತ್** - ಈ ಪ್ರಕರಣದ ಆರಂಭದಲ್ಲಿರುವ ''ಉತ ತಂ ಆದೇಶಂ ಅಪ್ರಾಕ್ಷಃ ಯೇನಾಶ್ರುತಂ ಶ್ರುತಂ ಭವತಿ ಅವಿಜ್ಞಾತಂ ವಿಜ್ಞಾತಂ'' ಎಂದು ಪ್ರತಿಜ್ಞಾವಾಕ್ಯದಲ್ಲಿ ಏಕಜ್ಞಾನದಿಂದ ಸರ್ವಜ್ಞಾನವನ್ನು ಪ್ರತಿಜ್ಞೆ ಮಾಡಲಾಗಿದೆ. ಅದರ ಸಮರ್ಥನೆಗಾಗಿ ಸೃಷ್ಟಿಯ ನಿರೂಪಣೆ ಇದೆ. ಒಂದುವೇಳೆ ಸೃಷ್ಟಿಯನ್ನು ಹೇಳುವ ಈ ವಾಕ್ಯದಲ್ಲಿ ಸತ್‌ಪದದಿಂದ ಪ್ರಕೃತಿಯನ್ನು ತೆಗೆದುಕೊಂಡರೆ ಅದು ಜಡವಸ್ತುಗಳಿಗೆ ಮಾತ್ರ ಉಪಾದಾನವಾದುದರಿಂದ ಅದರ ಜ್ಞಾನದಿಂದ ಅದರಿಂದ ಸೃಷ್ಟಿಯಾದ ಇತರ ಜಡಗಳ ಜ್ಞಾನಬರಬಹುದು ಹೊರತು ಚೇತನಗಳ ಜ್ಞಾನ ಬರಲಾರದು. ಆಗ ''ಸರ್ವಂ ವಿಜ್ಞಾತಂ ಭವತಿ'' ಎಂಬ ಪ್ರತಿಜ್ಞಾವಿರೋಧ ಬರುತ್ತದೆ. ಆದ್ದರಿಂದ ಸತ್‌ಪದದಿಂದ ಬ್ರಹ್ಮನೇ ವಾಚ್ಯ.

ಕಾರಣಸ್ಯ ತು ವಿಜ್ಞಾನಾತ್ ಕಾರ್ಯಜ್ಞಾನಂ ಭವೇದಿತಿ ।
ಪ್ರತಿಜ್ಞಾಯಾ ವಿರೋಧಾಚ್ಚ ಪ್ರಧಾನಂ ತು ನ ಕಾರಣಮ್ ॥
(ಈ ಸೂತ್ರ ರಾಮಾನುಜಭಾಷ್ಯದಲ್ಲಿ ಮಾತ್ರವಿದೆ)

**6. ಸ್ವಾಪ್ಯಯಾತ್** - ''ಸತಾ ಸೋಮ್ಯ ತದಾ ಸಂಪನ್ನೋ ಭವತಿ। ಸ್ವಮಪೀತೋ ಭವತಿ'' ಎಂದು ಸತ್ ಪದಾರ್ಥದಲ್ಲಿ ಜೀವನಿಗೆ ಸುಷುಪ್ತಿಕಾಲದಲ್ಲಿ ಲಯವನ್ನು

ಹೇಳಲಾಗಿದೆ. ಕಾರ್ಯವು ಕಾರಣದಲ್ಲಿ ಲಯ ಹೊಂದುತ್ತದೆ. ಜಡವಾದ ಪ್ರಧಾನ ಚೇತನನಾದ ಜೀವನಿಗೆ ಕಾರಣವಲ್ಲ. ಆದ್ದರಿಂದ 'ಸತ್' ಎಂದರೆ ಬ್ರಹ್ಮ.

ಕಾರಣೇ ಲಯವಾಕ್ಯಾಚ್ಚ ಸ್ವಾತ್ಮನೋ ಲಯಕಾರಣಮ್।
ಬ್ರಹ್ಮೈವೇತಿ ಪ್ರಧಾನಂ ತು ಸಚ್ಛಬ್ದೇನ ನ ಕಥ್ಯತೇ ॥

7. **ಗತಿಸಾಮಾನ್ಯಾತ್** - ''ಆತ್ಮಾ ವಾ ಇದಮಗ್ರ ಆಸೀತ್'' ಎಂಬ ಐತರೇಯೋಪನಿಷತ್ತು ''ಆತ್ಮನ ಆಕಾಶಃ ಸಂಭೂತಃ'' ಎಂಬ ತೈತ್ತಿರೀಯೋಪನಿಷತ್ತು ಈ ಮೊದಲಾದ ವಾಕ್ಯಗಳಂತೆ ''ಸದೇವ ಸೋಮ್ಯ'' ಎಂಬ ವಾಕ್ಯದ ಪ್ರವೃತ್ತಿ (ಗತಿ) ಇದೆಯಾದ್ದರಿಂದ ಆ ವಾಕ್ಯಗಳಲ್ಲಿ ಬ್ರಹ್ಮಪ್ರತಿಪಾದ್ಯನಾದುದರಿಂದ ಈ ವಾಕ್ಯದ ಸತ್‌ಶಬ್ದಕ್ಕೂ ಬ್ರಹ್ಮನೇ ಅರ್ಥ.

ಕಾರಣಾಖ್ಯಾಯಿವಾಕ್ಯಾನಾಂ ಯಾ ಪ್ರವೃತ್ತಿಃ ಪ್ರದೃಶ್ಯತೇ।
ಸದ್ವಾಕ್ಯಸ್ಯಾಪಿ ತತ್ ಸಾಮ್ಯಾತ್ ಸಚ್ಛಬ್ದಾರ್ಥಃ ಪರಃ ಪುಮಾನ್ ।

**ಚಂದ್ರಿಕಾದಲ್ಲಿ ಮಾಡಿದ ವಿಮರ್ಶೆ** : ವಿಶಿಷ್ಟಾದ್ವೈತದರ್ಶನದಲ್ಲಿ ಬ್ರಹ್ಮಕಾರಣವೆಂದು ಒಪ್ಪಲಾಗಿದ್ದರೂ ಪ್ರಧಾನವು ಕಾರಣವೇ ಅಲ್ಲ ಎಂದು ನಿರಾಕರಿಸಲಾಗಿಲ್ಲ. ಪರಮಾತ್ಮನ ಶರೀರ ರೂಪವಾಗಿ ಪ್ರಧಾನವೂ ಕಾರಣ ಎಂದೇ ವಿಶಿಷ್ಟಾದ್ವೈತ ಸಿದ್ಧಾಂತ. ಅಂದಮೇಲೆ ಈ ಅಧಿಕರಣದಲ್ಲಿ ಪ್ರಧಾನವು ಕಾರಣವೇ ಅಲ್ಲ ಎಂದು ನಿರಾಸ ಮಾಡುವಂತಿಲ್ಲ. ಇನ್ನು ಪ್ರಧಾನ ಬ್ರಹ್ಮನಂತೆ ನಿಮಿತ್ತಕಾರಣವಲ್ಲ ಎಂದು ನಿರಾಕರಿಸಬೇಕು. ಆದರೆ ಪ್ರಧಾನವು ನಿಮಿತ್ತ ಕಾರಣ ಎಂದು ಸಾಂಖ್ಯರೂ ಹೇಳುವುದಿಲ್ಲ. ಸಾಂಖ್ಯಮತ ನಿರಾಸಕ್ಕಾಗಿ ಈ ಅಧಿಕರಣವಿದೆ. ಅವರು ಹೇಳದ ಪ್ರಮೇಯವನ್ನು ನಿರಾಕರಿಸುವುದು ಸರಿಯಲ್ಲ. ಪ್ರಧಾನವು ಈಶ್ವರಾಧೀನವಾಗಿಯೇ ಕಾರಣ ಸ್ವತಂತ್ರವಾಗಿ ಅಲ್ಲಎಂದೇನೂ ಈ ಅಧಿಕರಣ ಹೇಳುತ್ತಿಲ್ಲ. ಹೀಗೆ ಈ ಅಧಿಕರಣದ ಉದ್ದೇಶವೇ ಅಸ್ಪಷ್ಟ

**ಇಲ್ಲಿಗೆ ಈಕ್ಷತ್ಯಧಿಕರಣ ಮುಗಿಯಿತು.**

# ಆನಂದಮಯಾಧಿಕರಣ-6

## ಸಂಗತಿಭಾಷ್ಯ

**ತಮೇವ ಸಮನ್ವಯಂ ಪ್ರಕಟಯತಿ 'ಆನಂದಮಯೋಽಭ್ಯಾಸಾತ್' ಇತ್ಯಾದಿನಾ ಸಮಸ್ತೇನ ಅಧ್ಯಾಯೇನ ಪ್ರಾಯೇಣ ॥**

**ಪ್ರಾಯೇಣ ಅನ್ಯತ್ರ ಪ್ರಸಿದ್ಧಾನಾಂ ಶಬ್ದಾನಾಂ ಪರಮಾತ್ಮನಿ ಸಮನ್ವಯಃ ಪ್ರದರ್ಶ್ಯತೇ ಅಸ್ಮಿನ್ ಪಾದೇ। ನಾನ್ಯಥಾ, ತದದೃಷ್ಟೇಃ ॥**

''ತತ್ತು ಸಮನ್ವಯಾತ್'' ಎಂಬ ಸೂತ್ರದಲ್ಲಿ ಹೇಳಲಾದ ಶಬ್ದಸಮನ್ವಯವನ್ನು ''ಆನಂದಮಯೋऽಭ್ಯಾಸಾತ್'' ಎಂಬ ಈ ಸೂತ್ರದಿಂದ ಆರಂಭಿಸಿ ಪ್ರಾಯಃ, ಸಂಪೂರ್ಣ ಪ್ರಥಮಾಧ್ಯಾಯದಲ್ಲಿಸೂತ್ರಕಾರರು ಸ್ಪಷ್ಟಗೊಳಿಸುತ್ತಾರೆ.

ಈ ಪಾದದಲ್ಲಿ ಅನ್ಯತ್ರ ಪ್ರಸಿದ್ಧ ಶಬ್ದಗಳನ್ನು ಪರಮಾತ್ಮನಲ್ಲಿ ಸಮನ್ವಯ ಗೊಳಿಸಲಾಗಿದೆ. ಪ್ರಾಯಃ ಈ ರೀತಿಯ ಶಬ್ದಗಳ ಸಮನ್ವಯವೇ ಪ್ರಥಮಪಾದದಲ್ಲಿದೆ.

ಇತರ ಭಾಷ್ಯಕಾರರು ಹೇಳಿದ ಕ್ರಮದಲ್ಲಿ ಪಾದಗಳ ವ್ಯವಸ್ಥೆ ಇಲ್ಲ. ಏಕೆಂದರೆ, ಅವರು ಹೇಳಿದ ಕ್ರಮ ಪಾದಗಳಲ್ಲಿ ಕಾಣುತ್ತಿಲ್ಲ.

**ವಿವರಣೆ : 1.** 'ತತ್ತು ಸಮನ್ವಯಾತ್' ಎಂಬ ಸೂತ್ರದಲ್ಲಿ 'ಉಪಕ್ರಮಾದಿ ತಾತ್ಪರ್ಯಲಿಂಗಗಳನ್ನು ಪರಿಶೀಲಿಸಿದಾಗ ಬ್ರಹ್ಮನೇ ಸಕಲ ಶಾಸ್ತ್ರಪ್ರತಿಪಾದ್ಯ' ಎಂದು ಪ್ರತಿಜ್ಞೆ ಮಾಡಲಾಗಿದೆ. ಅದನ್ನು ಈ ಅಧಿಕರಣವನ್ನಾರಂಭಿಸಿ ಮುಂದಿನ ಸೂತ್ರಗಳಲ್ಲಿ ವೇದೋಪನಿಷತ್ತುಗಳ, ಸಂದಿಗ್ಧವಾದ ಒಂದೊಂದು ವಾಕ್ಯಗಳನ್ನು ಪರಿಶೀಲಿಸಿ ಸಮರ್ಥಿಸಲಾಗುತ್ತದೆ.

ಈ ಅಧ್ಯಾಯದ ನಾಲ್ಕನೆಯ ಪಾದದಲ್ಲಿ ''ಈಕ್ಷತೇರ್ನಾಶಬ್ದಮ್'' ಎಂಬ ಹಿಂದಿನ ಸೂತ್ರದಲ್ಲಿ ಹೇಳಿದ - ಪ್ರಕೃತಿತತ್ತ್ವಕ್ಕೆ ಅಶಾಬ್ದತ್ವವನ್ನು ಸಮರ್ಥಿಸಲಾಗುತ್ತಿದೆ ಎಂದು ಶಾಂಕರಭಾಷ್ಯದ ವಿವರಣೆ. ಆದರೆ, 'ಅದು ಸರಿಯಲ್ಲ, ಆ ಪಾದದಲ್ಲೂ ಶಬ್ದಸಮನ್ವಯವನ್ನೇ ಹೇಳಲಾಗುತ್ತಿದೆ' ಎನ್ನುವುದನ್ನು 'ಸಮಸ್ತೇನ ಅಧ್ಯಾಯೇನ' ಎಂದು ಆಚಾರ್ಯರು ಸೂಚಿಸಿದ್ದಾರೆ.

ಮೂರನೆಯ ಪಾದದ ದೇವತಾಧಿಕರಣ, ಅಪಶೂದ್ರಾಧಿಕರಣಗಳಲ್ಲಿ ಶಬ್ದಸಮನ್ವಯವನ್ನು ಮಾಡಲಾಗಿಲ್ಲ. ಸಮನ್ವಯಕ್ಕೆ ಸಂಬಂಧಿಸಿದ ವಿಷಯಗಳನ್ನಷ್ಟೇ ಆ ಅಧಿಕರಣದಲ್ಲಿ ನಿರೂಪಿಸಲಾಗಿದೆ. ಇದನ್ನು ಆಚಾರ್ಯರು ''ಪ್ರಾಯೇಣ'' ಎಂಬ ಪದದಿಂದ ಸೂಚಿಸಿದ್ದಾರೆ.

### ಶಬ್ದಗಳ ವೈವಿಧ್ಯ - ಪಾದವ್ಯವಸ್ಥೆ:

ಪರಮಾತ್ಮನನ್ನು ದೃಷ್ಟಿಯಲ್ಲಿ ಇಟ್ಟುಕೊಂಡು ಶಬ್ದಗಳನ್ನು ನಾಲ್ಕು ವಿಧವಾಗಿ ವಿಂಗಡಿಸಬಹುದು. ಅ) ಅನ್ಯತ್ರೈವ ಪ್ರಸಿದ್ಧ ಆ) ಉಭಯತ್ರ ಪ್ರಸಿದ್ಧ ಇ) ಅನ್ಯತ್ರ ಪ್ರಸಿದ್ಧ ಈ) ತತ್ರ ಪ್ರಸಿದ್ಧ.

**ಅ. ಅನ್ಯತ್ರೈವ ಪ್ರಸಿದ್ಧ :** ಕೆಲವು ಶಬ್ದಗಳು ಪರಮಾತ್ಮನಿಗಿಂತ ಇತರವಾದ ವಸ್ತುಗಳಲ್ಲೇ ಪ್ರಸಿದ್ಧವಾಗಿವೆ. ಅವುಗಳನ್ನು ಪರಮಾತ್ಮನಲ್ಲಿ ಪ್ರಯೋಗಿಸುವುದು ಅಸಂಭವವೆನಿಸುತ್ತದೆ. ಉದಾಹರಣೆಗೆ- ದುಃಖೀ, ಬದ್ಧ ಮೊದಲಾದ ಶಬ್ದಗಳು. ದುಃಖ ಹೊಂದಿದವನು ದುಃಖೀ, ಬಂಧನಕ್ಕೊಳಗಾದವನು ಬದ್ಧ. ಆದರೆ ಪರಮಾತ್ಮನಲ್ಲಿ ಈ ದೋಷಗಳು ಇರಲಾರವು. ಆದ್ದರಿಂದ ಇಂತಹ ಶಬ್ದಗಳಿಂದ ಪರಮಾತ್ಮನನ್ನು ಹೆಸರಿಸುವುದು ಅಸಂಭವವೆನಿಸುತ್ತದೆ. ಈ ರೀತಿಯ ಶಬ್ದಗಳು ಅನ್ಯತ್ರೈವ ಪ್ರಸಿದ್ಧ ಶಬ್ದಗಳು.

**ಆ. ಉಭಯತ್ರ ಪ್ರಸಿದ್ಧ :** ಶಾಸ್ತ್ರಗಳಲ್ಲಿ ಪರಮಾತ್ಮ ಮತ್ತು ಇತರ ದೇವತೆಗಳಲ್ಲಿ ಪ್ರಯೋಗಿಸಲಾಗುವ ಶಬ್ದಗಳು ಉಭಯತ್ರ ಪ್ರಸಿದ್ಧಗಳು. ಉದಾಹರಣೆಗೆ - ಅಕ್ಷರ ಶಬ್ದ. ಇದನ್ನು ಪರಮಾತ್ಮನಂತೆ ಲಕ್ಷ್ಮೀದೇವಿಯಲ್ಲೂ ಪ್ರಯೋಗಿಸಲಾಗುತ್ತದೆ. ಇಂತಹ ಶಬ್ದಗಳು ಉಭಯತ್ರಪ್ರಸಿದ್ಧಗಳು.

**ಇ. ಅನ್ಯತ್ರ ಪ್ರಸಿದ್ಧ :** ಲೌಕಿಕ ವ್ಯವಹಾರಗಳಲ್ಲಿ ಪರಮಾತ್ಮನಿಗಿಂತ ಇತರವಾದ ವಸ್ತುಗಳಲ್ಲಿ ಪ್ರಯೋಗಿಸಲ್ಪಡುವ ಪದಗಳು ಅನ್ಯತ್ರ ಪ್ರಸಿದ್ಧಗಳು. ಉದಾಹರಣೆಗೆ - ಅನ್ನಮಯ ಎಂಬ ಶಬ್ದ. ಈ ಶಬ್ದದ ಬಳಕೆ ಭೌತಿಕ ದೇಹದಲ್ಲಿದೆ. ಪರಮಾತ್ಮನಲ್ಲಿಲ್ಲ. ಇಂತಹ ಶಬ್ದಗಳು ಅನ್ಯತ್ರ ಪ್ರಸಿದ್ಧಗಳು.

**ಈ. ತತ್ರೈವ ಪ್ರಸಿದ್ಧ :** ಪರಮಾತ್ಮನಲ್ಲೇ ಪ್ರಯೋಗಿಸಲ್ಪಡುವ ಶಬ್ದಗಳು ತತ್ರೈವ ಪ್ರಸಿದ್ಧಗಳು. ನಾರಾಯಣ, ವಾಸುದೇವ ಮೊದಲಾದ ಶಬ್ದಗಳನ್ನು ಕೇಳಿದಾಗ ಪರಮಾತ್ಮನ ಸ್ಮರಣೆ ಉಂಟಾಗುತ್ತದೆ. ಇಂತಹವುಗಳು ತತ್ರೈವ ಪ್ರಸಿದ್ಧ ಶಬ್ದಗಳು.

ಈ ನಾಲ್ಕೂ ಶಬ್ದಗಳು ನಾಮಾತ್ಮಕ - ಲಿಂಗಾತ್ಮಕವೆಂದು ಎರಡು ವಿಧವಾಗಿವೆ. ರೂಢ ಶಬ್ದಗಳು ನಾಮಾತ್ಮಕಗಳು - ವಿಷ್ಣು, ನಾರಾಯಣ ಮುಂತಾದವು. ಯೌಗಿಕ ಶಬ್ದಗಳು - ಅರ್ಥಾತ್ ಗುಣವಾಚಕವಾಗಿ ಆ ಮೂಲಕ ಬ್ರಹ್ಮನನ್ನು ತಿಳಿಸುವ ಶಬ್ದಗಳು ಲಿಂಗಾತ್ಮಕಗಳು. ಉದಾಹರಣೆಗೆ - 'ಲಕ್ಷ್ಮೀಪತಿ' ಶಬ್ದ. ಹೀಗೆ ಹಿಂದೆ ಹೇಳಿದ ಒಂದೊಂದು ಪ್ರಭೇದಗಳಲ್ಲಿ ಈ ಎರಡು ವೈವಿಧ್ಯವನ್ನು ಕಲ್ಪಿಸಿಕೊಂಡಾಗ ಒಟ್ಟು ಎಂಟು ವಿಧದ ಶಬ್ದಗಳು ದೊರೆಯುತ್ತವೆ. ಅವುಗಳಲ್ಲಿ ಕೇವಲ ಭಗವದ್ವಾಚಕ ಶಬ್ದಗಳ ಸಮನ್ವಯದ ಅಗತ್ಯವಿಲ್ಲ, ಉಳಿದ ಆರು ವಿಧದ ಶಬ್ದಗಳನ್ನು ನಾಲ್ಕು ಪಾದಗಳಲ್ಲಿ ಸಮನ್ವಯ ಮಾಡಲಾಗಿದೆ.

ಮೊದಲ ಪಾದದಲ್ಲಿ ಅನ್ಯತ್ರ ಪ್ರಸಿದ್ಧನಾಮಾತ್ಮಕ ಶಬ್ದಗಳ ಸಮನ್ವಯ.

ಎರಡನೆಯ ಪಾದದಲ್ಲಿ ಅನ್ಯತ್ರ ಪ್ರಸಿದ್ಧ ಲಿಂಗಾತ್ಮಕ ಶಬ್ದಗಳ ಸಮನ್ವಯ.

ಮೂರನೆಯ ಪಾದದಲ್ಲಿ ಉಭಯತ್ರ ಪ್ರಸಿದ್ಧ ನಾಮಲಿಂಗಾತ್ಮಕ ಶಬ್ದಗಳ ಸಮನ್ವಯ.

ನಾಲ್ಕನೆಯ ಪಾದದಲ್ಲಿ ಅನ್ಯತ್ರೈವ ಪ್ರಸಿದ್ಧವಾದ ಉಭಯಾತ್ಮಕ ಶಬ್ದಗಳ ಸಮನ್ವಯ.

ತತ್ರೈವ ಪ್ರಸಿದ್ಧ ಶಬ್ದಗಳ ಬಗ್ಗೆ ವಿವಾದವೇ ಇಲ್ಲವಾದುದರಿಂದ ಅವುಗಳ ಸಮನ್ವಯವನ್ನು ಮಾಡಬೇಕಾದ ಅಗತ್ಯವಿಲ್ಲ.

**3.** ಶಾಂಕರಭಾಷ್ಯದಲ್ಲಿ ಪ್ರಥಮಾಧ್ಯಾಯದ ಪಾದವ್ಯವಸ್ಥೆಯನ್ನು ಹೀಗೆ ಮಾಡಲಾಗಿದೆ - ಕೆಲವು ಧರ್ಮಗಳು ಜೀವಾತ್ಮನಲ್ಲಿ ಅಸಂಭಾವಿತವಾಗಿದ್ದು ಪರಮಾತ್ಮನಲ್ಲಿ ಮಾತ್ರ ಇರಬಹುದಾದವು. ಉದಾಹರಣೆಗೆ - ಅಂತಃಸ್ಥತ್ವ=ಚರಾಚರಾತ್ಮಕ ಪ್ರಪಂಚ ದೊಳಗೆ ನಿಯಾಮಕನಾಗಿರುವುದು. ಈ ಮಹತ್ವ ಜೀವಾತ್ಮರಲ್ಲಿ ಇಲ್ಲ. ಆದ್ದರಿಂದ ಇಂತಹ

ಧರ್ಮಗಳು ಸ್ಪಷ್ಟ ಬ್ರಹ್ಮಲಿಂಗಗಳು. ಇವುಗಳನ್ನು ಪ್ರಥಮಪಾದದಲ್ಲಿ ಸಮನ್ವಯ ಮಾಡಲಾಗಿದೆ.

ಇನ್ನು ಕೆಲವು ಧರ್ಮಗಳು, ಬ್ರಹ್ಮನಿಗೇ ಸಂಬಂಧಿಸಿವೆ ಎನ್ನುವುದು ಸ್ಪಷ್ಟವಾಗಿರುವುದಿಲ್ಲ. 'ಮನೋಮಯಃ ಪ್ರಾಣಶರೀರಃ' ಇತ್ಯಾದಿ ಧರ್ಮಗಳು ಜೀವನಲ್ಲೆ ಇರುವವುಗಳು. ಇಂತಹ ಧರ್ಮಗಳನ್ನು ಉಲ್ಲೇಖಿಸಿ ಉಪಾಸನೆ, ಜ್ಞಾನಗಳನ್ನು ವಿಧಾನ ಮಾಡಿದಾಗ ಅಲ್ಲಿ ಜೀವನೇ ಉಪಾಸ್ಯನಾಗಿ, ಜ್ಞೇಯನಾಗಿ ಪ್ರತಿಪಾದ್ಯ ಎಂಬ ಸಂಶಯ ಬರುತ್ತದೆ. ಈ ರೀತಿಯ ವಾಕ್ಯಗಳ ಸಮನ್ವಯವನ್ನು ಎರಡು ಮತ್ತು ಮೂರನೆಯ ಪಾದಗಳಲ್ಲಿ ಮಾಡಲಾಗಿದೆ. ಅದರಲ್ಲೂ ಎರಡನೆಯ ಪಾದದಲ್ಲಿ ಉಪಾಸನಾಪರ ವಾಕ್ಯಗಳ ಸಮನ್ವಯ. ಮೂರನೇ ಪಾದದಲ್ಲಿ ಜ್ಞಾನವಿಧಾಯಕ ವಾಕ್ಯಗಳ ಸಮನ್ವಯ. ನಾಲ್ಕನೆಯ ಪಾದದಲ್ಲಿ 'ಪ್ರಧಾನತತ್ತ್ವ=ಪ್ರಕೃತಿಯು ಕಾರಣವಾಕ್ಯಗಳಿಂದ ಪ್ರತಿಪಾದ್ಯವಲ್ಲ' ಎಂದು ಸಮರ್ಥಿಸಲಾಗಿದೆ . ಇದು ಶಾಂಕರಭಾಷ್ಯದ ವಿವರಣೆ.

ಆದರೆ ಈ ರೀತಿಯ ವ್ಯವಸ್ಥೆ ಸರಿಯಲ್ಲ - ಸ್ಪಷ್ಟ ಬ್ರಹ್ಮಲಿಂಗಗಳಿರುವ ವಾಕ್ಯಗಳಲ್ಲೂ ಅಸ್ಪಷ್ಟ ಬ್ರಹ್ಮಲಿಂಗಗಳೂ ಇರಲೇಬೇಕು. ಇಲ್ಲವಾದರೆ, ''ಈ ವಾಕ್ಯದಿಂದ ಪ್ರತಿಪಾದ್ಯ ಬ್ರಹ್ಮನಲ್ಲ'' ಎಂದು ಪೂರ್ವಪಕ್ಷವನ್ನು ಮಾಡುವುದಾದರೂ ಹೇಗೆ? ಅದರಂತೆ, ಅಸ್ಪಷ್ಟ ಬ್ರಹ್ಮಲಿಂಗಗಳಿರುವ ವಾಕ್ಯಗಳಲ್ಲೂ ಸ್ಪಷ್ಟ ಬ್ರಹ್ಮಲಿಂಗಗಳೂ ಇರಬೇಕು. ಇಲ್ಲದಿದ್ದರೆ ಅವುಗಳನ್ನು ಬ್ರಹ್ಮನಲ್ಲಿ ಸಮನ್ವಯ ಮಾಡುವುದಾದರೂ ಹೇಗೆ? ಆದ್ದರಿಂದ ಈ ರೀತಿಯಲ್ಲಿ ಉಪನಿಷದ್ವಾಕ್ಯಗಳನ್ನು ವಿಭಾಗ ಮಾಡಿ ಪಾದವ್ಯವಸ್ಥೆಯನ್ನು ಮಾಡುವುದು ಸರಿಯಲ್ಲ.

### ಪೂರ್ವಸಂಗತಿ

**ಬ್ರಹ್ಮಜಿಜ್ಞಾಸಾ ಕರ್ತವ್ಯೇತ್ಯುಕ್ತಮ್। ತಚ್ಚ ಬ್ರಹ್ಮ ''ಬ್ರಹ್ಮ ಪುಚ್ಛಂ ಪ್ರತಿಷ್ಠಾ'' (ತೈ.ಉ.2-5-2) ಇತಿ ಆನಂದಮಯಾವಯವರೂಪಂ ಪ್ರತೀಯತೇ । ನ ಹಿ ಅವಯವಿನಂ ವಿನಾ ಅವಯವಮಾತ್ರಸ್ಯ ಜ್ಞೇಯತಾ ಇತ್ಯತ ಆಹ-**

## ಓಂ ॥ ಆನಂದಮಯೋಽಭ್ಯಾಸಾತ್ ॥ ಓಂ

ಪ್ರಥಮ ಸೂತ್ರದಲ್ಲಿ ಬ್ರಹ್ಮವಿಚಾರವನ್ನು ಮಾಡಬೇಕು ಎಂದು ಹೇಳಲಾಯಿತು. ಆದರೆ ಆ ಬ್ರಹ್ಮನನ್ನು 'ಬ್ರಹ್ಮ ಪುಚ್ಛಂ ಪ್ರತಿಷ್ಠಾ' ಎಂಬ ತೈತ್ತಿರೀಯ ಉಪನಿಷತ್ತಿನಲ್ಲಿ ಆನಂದಮಯನ ಅವಯವ ಎಂದು ಬಣ್ಣಿಸಲಾಗಿದೆ. ಅವಯವಿಯಾದ ಆನಂದಮಯನನ್ನು ಬಿಟ್ಟು ಅವನ ಅವಯವವಾದ ಬ್ರಹ್ಮನನ್ನು ಮಾತ್ರ ತಿಳಿದುಕೊಳ್ಳಲು ಸಾಧ್ಯವಿಲ್ಲ. ಈ ಸಮಸ್ಯೆಯ ಪರಿಹಾರಕ್ಕಾಗಿ ಆನಂದಮಯಾಧಿಕರಣ ಹೊರಟಿದೆ.

**ವಿವರಣೆ :** ಸೂತ್ರಗಳು ಚುಟುಕಾಗಿದ್ದು ಅವುಗಳಿಗೆ ಯಾವ ಅರ್ಥವನ್ನು

ಬೇಕಾದರೂ ಮಾಡುವ ಅವಕಾಶಗಳಿರುತ್ತವೆ. ಆದರೆ ಹಾಗೆ ಹೇಳಿದ ಅರ್ಥವು ಸೂತ್ರಕಾರರಿಗೆ ಅಭಿಪ್ರೇತವೋ, ಅಲ್ಲವೊ? ಎಂಬುದನ್ನು ನಿರ್ಧರಿಸಲು ಪಂಚವಿಧ ಸಂಗತಿಗಳನ್ನು ನಿರೂಪಿಸಲಾಗಿದೆ. ಈ ಐದೂ ಸಂಗತಿಗಳು ಹೊಂದಿಕೆಯಾದರೆ ನಾವು ಹೇಳಿದ ಅರ್ಥವು ಸೂತ್ರಕಾರರಿಗೆ ಅಭಿಪ್ರೇತವೆಂದು ನಿರ್ಧರಿಸಬಹುದು. ಆ ಐದು ಸಂಗತಿಗಳು-

ಶಾಸ್ತ್ರೇऽಧ್ಯಾಯೇ ತಥಾ ಪಾದೇ ಶ್ರುತ್ಯಾಧಿಕರಣೇನ ಚ ।
ಸಂಗತಿಃ ಪಂಚಧಾ ಪ್ರೋಕ್ತಾ ಸರ್ವಾಧಿಕರಣೇಷ್ವಪಿ ॥

ಅ) ಶಾಸ್ತ್ರಸಂಗತಿ, ಆ) ಅಧ್ಯಾಯ ಸಂಗತಿ, ಇ) ಪಾದ ಸಂಗತಿ, ಈ) ಶ್ರುತಿ ಸಂಗತಿ, ಉ) ಅಧಿಕರಣ ಸಂಗತಿ

ಅ. ''ಸರ್ವೇ ವೇದಾ ಯತ್ಪದಮಾಮನಂತಿ'' ಇತ್ಯಾದಿ ಕಾಠಕಶ್ರುತಿ ವೇದೋಪನಿಷತ್ತುಗಳ ಎಲ್ಲ ಪದಗಳೂ ಬ್ರಹ್ಮನ ನಾಮಗಳು ಎಂದು ಹೇಳಿದೆ. ಅದನ್ನು ಸಮರ್ಥಿಸುತ್ತಿರುವುದರಿಂದ ಪ್ರಥಮಾಧ್ಯಾಯದ ಎಲ್ಲ ಸೂತ್ರಗಳೂ ಈ ಬ್ರಹ್ಮಮೀಮಾಂಸಾಶಾಸ್ತ್ರಕ್ಕೆ ಸಂಗತವಾಗಿವೆ.

ಆ. ಈ ಅಧಿಕರಣದಲ್ಲಿ ಆನಂದಮಯಾದಿ ಶಬ್ದಗಳನ್ನು ಪರಮಾತ್ಮನಲ್ಲಿ ಸಮನ್ವಯಗೊಳಿಸುವುದರಿಂದ ಸಮನ್ವಯಾಧ್ಯಾಯದಲ್ಲಿ ಇದು ಸಂಗತವಾಗಿದೆ.

ಇ. ಅನ್ನಮಯಾದಿ ಐದು ಶಬ್ದಗಳನ್ನು ಜಡವಾದ ಕೋಶಗಳಲ್ಲೂ ನಾರಾಯಣೋಪನಿಷತ್ತಿನಲ್ಲಿ ಪ್ರಯೋಗಿಸಲಾಗಿದೆ. ಹೀಗಾಗಿ ಈ ನಾಮವು ಅನ್ಯತ್ರ ಪ್ರಸಿದ್ಧವಾಗಿದೆ. ಆದ್ದರಿಂದ ಅನ್ಯತ್ರ ಪ್ರಸಿದ್ಧ ನಾಮಶಬ್ದಗಳ ಸಮನ್ವಯವನ್ನು ಮಾಡುತ್ತಿರುವುದರಿಂದ ಪಾದಸಂಗತಿಯೂ ಇದೆ.

ಈ. ತೈತ್ತಿರೀಯೋಪನಿಷತ್ತಿನ ಭೃಗುವಲ್ಲಿಯಲ್ಲಿ ''ತಪಸಾ ಬ್ರಹ್ಮ ವಿಜಿಜ್ಞಾಸಸ್ವ'' ಎಂದು ಬ್ರಹ್ಮಜಿಜ್ಞಾಸೆಯನ್ನು ವಿಧಿಸಲಾಗಿದೆ. ಆ ಬ್ರಹ್ಮನನ್ನು ಅದೇ ಉಪನಿಷತ್ತಿನ ಬ್ರಹ್ಮವಲ್ಲಿಯಲ್ಲಿ ಆನಂದಮಯನ ಅವಯವವನ್ನಾಗಿ ಹೇಳಲಾಗಿದೆ. ಆದ್ದರಿಂದ ಈ ಜಿಜ್ಞಾಸೆ ಸರಿಯಲ್ಲ ಎಂದು ಆಕ್ಷೇಪಿಸಿ ಉತ್ತರಿಸುತ್ತಿರುವುದರಿಂದ ಈ ಅಧಿಕರಣಕ್ಕೆ ಶ್ರುತಿ ಸಂಗತಿ ಇದೆ.

ಉ. ಪ್ರಾರಂಭದ ಸೂತ್ರದಲ್ಲಿ ಬ್ರಹ್ಮವಿಚಾರ ಮಾಡಬೇಕು ಎಂದು ವಿಧಿಸಲಾಗಿದೆ. ಅದರ ಮೇಲೆ ಆಕ್ಷೇಪವೆತ್ತಿ ಸಮಾಧಾನಿಸುತ್ತಿರುವುದರಿಂದ ಆ ಸೂತ್ರದೊಂದಿಗೆ ಸಂಗತಿಯೂ ಇದೆ.

**ಅಧಿಕರಣ ಸಂಗತಿಯ ವಿವರಣೆ :** ಪ್ರಥಮ ಸೂತ್ರದಲ್ಲಿ ಬ್ರಹ್ಮನ ಕುರಿತು ವಿಚಾರ ನಡೆಸಬೇಕು ಎಂದು ಹೇಳಲಾಗಿದೆ. ಆದರೆ ಆ ಬ್ರಹ್ಮನನ್ನು ತೈತ್ತಿರೀಯ ಶ್ರುತಿ ಆನಂದಮಯನ ಪುಚ್ಛ-ಪಾದ ಎಂದು ಹೇಳುತ್ತಿದೆ. ಆನಂದಮಯ ಬ್ರಹ್ಮನಲ್ಲವಾದರೆ ಅವನ ಅವಯವವಾದ ಬ್ರಹ್ಮನೂ ಜಿಜ್ಞಾಸ್ಯನಲ್ಲವೆನ್ನಬೇಕಾಗುತ್ತದೆ. ಏಕೆಂದರೆ,

ಅವಯವಿಯನ್ನು ಬಿಟ್ಟು ಅವಯವವನ್ನು ಮಾತ್ರ ಜಿಜ್ಞಾಸೆ ಮಾಡುವುದು ಹೇಗೆ ಸಾಧ್ಯ? ಆನಂದಮಯ ಬ್ರಹ್ಮನಲ್ಲ. ಆದ್ದರಿಂದ ಅವನನ್ನು ಮೋಕ್ಷಕ್ಕಾಗಿ ಜಿಜ್ಞಾಸೆ ಮಾಡುವಂತಿಲ್ಲ. ಅಂದಮೇಲೆ ಅವನ ಒಂದು ಭಾಗವಾದ ಬ್ರಹ್ಮನನ್ನು ಜಿಜ್ಞಾಸೆ ಮಾಡಿದರೂ ಮೋಕ್ಷ ದೊರಕುವುದು ಹೇಗೆ?

ಹೀಗೆ ಪ್ರಥಮ ಸೂತ್ರದ ಮೇಲೆ ಬಂದ ಆಕ್ಷೇಪವನ್ನು ನಿರಾಸ ಮಾಡುವುದಕ್ಕಾಗಿ ಈ ಅಧಿಕರಣ ಹೊರಟಿದೆ.

## ಪೂರ್ವಪಕ್ಷ

**ಆನಂದಮಯೋ ಬ್ರಹ್ಮಾದಿಃ ಪ್ರಕೃತಿಃ ವಿಷ್ಣುರ್ವಾ । ಬ್ರಹ್ಮಶಬ್ದಾತ್ ಹಿರಣ್ಯಗರ್ಭಸ್ಯ ಪ್ರಾಪ್ತಿಃ ಶತಾನಂದನಾಮ್ನಾ ಚ । ಅಷ್ಟಮೂರ್ತಿತ್ವಾತ್ ಸೂರ್ಯೇ ಪ್ರೋಕ್ತತ್ವಾಚ್ಚ ರುದ್ರಸ್ಯ । ಏವಮನ್ಯೇಷಾಮಪಿ । 'ಮಮ ಯೋನಿರ್ಮಹದ್ ಬ್ರಹ್ಮ' (ಭ.ಗೀ. 14.3) ಇತಿ ಬ್ರಹ್ಮಶಬ್ದಾತ್ ಬಹುಭಾವಾಚ್ಚ ಪ್ರಕೃತೇಃ। ''ಬೃಹ ಜಾತಿ-ಜೀವ-ಕಮಲಾಸನ-ಶಬ್ದರಾಶಿಷು'' ಇತಿ ಬ್ರಹ್ಮಶಬ್ದಾದೇವ ಸರ್ವಜೀವಾನಾಂ। ಅನ್ನಮಯತ್ವಾದೇಶ್ಚ ॥**

ಬ್ರಹ್ಮಾದಿಗಳು, ಜಡಪ್ರಕೃತಿ, ಲಕ್ಷ್ಮೀದೇವಿ ಇವರು ಆನಂದಮಯ ಶಬ್ದವಾಚ್ಯರೋ? ಅಥವಾ ವಿಷ್ಣುವೋ ಎಂದು ಇಲ್ಲಿ ಸಂಶಯ.

ಚತುರ್ಮುಖಬ್ರಹ್ಮನೇ ಆನಂದಮಯ. ಏಕೆಂದರೆ, ಈ ಆನಂದಮಯ ಪ್ರಕರಣದಲ್ಲಿ ಆನಂದಮಯನನ್ನು ''ಅಸ್ತಿ ಬ್ರಹ್ಮೇತಿ ಚೇದ್ವೇದ'' ಎಂದು ಬ್ರಹ್ಮನೆಂದು ಹೆಸರಿಸಲಾಗಿದೆ. ಅಲ್ಲದೆ, ಆನಂದಮಯ ಶಬ್ದದ ಅರ್ಥವನ್ನೇ ಕೊಡುವ 'ಶತಾನಂದ' ಎಂಬ ಹೆಸರು ಚತುರ್ಮುಖನಿಗಿದೆ. ಹೀಗೆ ಈ ಎರಡು ಕಾರಣಗಳಿಂದ ಚತುರ್ಮುಖನೇ ಆನಂದಮಯ.

ಅಥವಾ, ರುದ್ರನನ್ನು ಆನಂದಮಯನೆಂದಿರಬಹುದು. ಈ ಪ್ರಕರಣದಲ್ಲಿ ''ಸ ಯಶ್ಚಾಯಂ ಪುರುಷೇ, ಯಶ್ಚಾಸಾ ಆದಿತ್ಯೇ'' ಎಂದು ಸೂರ್ಯಮಂಡಲದಲ್ಲಿ ಆನಂದಮಯನಿದ್ದಾನೆಂದು ಹೇಳಲಾಗಿದೆ. ರುದ್ರನ ಅಷ್ಟಮೂರ್ತಿಗಳಲ್ಲಿ ಸೂರ್ಯಮಂಡಲವು ಒಂದು. ಆದ್ದರಿಂದ ರುದ್ರನೇ ಆನಂದಮಯ.

ಇಂದ್ರ, ಬೃಹಸ್ಪತ್ಯಾದಿಗಳೂ ಆನಂದಮಯರೆನಿಸಬಹುದು. ಏಕೆಂದರೆ ಅವರೂ ಸೂರ್ಯನಿಗಿಂತ ಉತ್ತಮರಾಗಿ, ಸೂರ್ಯನಿಯಾಮಕರಾಗಿ ಸೂರ್ಯನಲ್ಲಿದ್ದಾರೆ.

ಅಥವಾ ಭಗವದ್ಗೀತೆಯಲ್ಲಿ ಶ್ರೀಕೃಷ್ಣನು ''ಮಮ ಯೋನಿಃ ಮಹದ್ ಬ್ರಹ್ಮ - ನನ್ನ ಪತ್ನಿಯಾದ ರಮೆಯು ಬ್ರಹ್ಮಶಬ್ದವಾಚ್ಯಳಾಗಿದ್ದಾಳೆ'' ಎಂದು ಹೇಳಿದ್ದಾನೆ. ಹೀಗೆ ಬ್ರಹ್ಮ ಶಬ್ದವು ಲಕ್ಷ್ಮೀದೇವಿಯ ನಾಮವಾದ್ದರಿಂದ ಬ್ರಹ್ಮಶಬ್ದವಾಚ್ಯವಾದ ಆನಂದಮಯಳು

ಲಕ್ಷ್ಮೀದೇವಿ. ಅಷ್ಟೇ ಅಲ್ಲದೆ, ಈ ಪ್ರಕರಣದಲ್ಲಿ ''ಸೋಽಕಾಮಯತ ಬಹುಸ್ಯಾಂ ಪ್ರಜಾಯೇಯೇತಿ'' ಎಂದು ಮುಂತಾಗಿ ''ಆನಂದಮಯ ಜಗತ್ತಿನ ನಾನಾಪದಾರ್ಥಗಳಾಗಿ ರೂಪುಗೊಂಡಿತು'' ಎನ್ನಲಾಗಿದೆ. ಈ ಜಗತ್ತಿಗೆ ಮೂಲಕಾರಣವಾದ ಜಡಪ್ರಕೃತಿ ಸ್ಥೂಲರೂಪದಿಂದ ಜಗತ್ತಾಗಿ ಪರಿಣಾಮಗೊಳ್ಳುವುದರಿಂದ ಅಂತಹ ಪ್ರಕೃತಿಗೆ ನಿಯಾಮಕಳಾದ ಲಕ್ಷ್ಮೀದೇವಿಯೂ ಬಹುರೂಪವನ್ನು ತಾಳುತ್ತಾಳೆ. ಈ ಕಾರಣದಿಂದ ಲಕ್ಷ್ಮೀದೇವಿಯೂ ಆನಂದಮಯ ಶಬ್ದಾರ್ಥವಾಗುತ್ತಾಳೆ. ಅಥವಾ ಜಡಪ್ರಕೃತಿಯನ್ನೇ ಆನಂದಮಯ ಎಂದು ಹೆಸರಿಸಬಹುದು.

ಅಥವಾ, ಬ್ರಹ್ಮಶಬ್ದ 'ಬೃಹ' ಎಂಬ ಧಾತುವಿನಿಂದ ನಿಷ್ಪನ್ನವಾಗಿದೆ. ಬೃಹಧಾತುವಿಗೆ ಜೀವ ಎಂಬ ಅರ್ಥವಿದೆ. ಅಲ್ಲದೆ, ಇಲ್ಲಿ ಹೇಳಿದ ಅನ್ನಮಯ ಶಬ್ದ ಅನ್ನವಿಕಾರವಾದ ದೇಹವನ್ನು ಪಡೆದ ಜೀವನಿಗೆ ಸರಿಯಾಗಿ ಅನ್ವಯಿಸುತ್ತದೆ. ಆದ್ದರಿಂದ ಜೀವನೇ ಆನಂದಮಯ.

**ವಿವರಣೆ :** ರುದ್ರನ ಅಷ್ಟಮೂರ್ತಿಗಳು ವಾಯುಪುರಾಣ ಹೇಳುವಂತೆ-

ಸೂರ್ಯೋ ಜಲಂ ಮಹೀ ವಹ್ನಿಃ ವಾಯುರಾಕಾಶಮೇವ ಚ ।
ದೀಕ್ಷಿತೋ ಬ್ರಾಹ್ಮಣಃ ಸೋಮಃ ಇತ್ಯೇತಾಃ ತನವಃ ಕ್ರಮಾತ್ ॥
(ದೀಕ್ಷಿತ ಬ್ರಾಹ್ಮಣ= ಯಜ್ಞದೀಕ್ಷೆಯನ್ನು ತೊಟ್ಟ ಬ್ರಾಹ್ಮಣ)

ಇಲ್ಲಿ ಪೂರ್ವಪಕ್ಷ ಯುಕ್ತಿ ಬ್ರಹ್ಮಶಬ್ದದ ಪ್ರಯೋಗ. ಆದರೆ, ಬ್ರಹ್ಮಶಬ್ದ ಪರಮಾತ್ಮನಲ್ಲೂ ಇದೆ. ಹೀಗಾಗಿ ಬ್ರಹ್ಮಶಬ್ದಪ್ರಯೋಗದಿಂದ ಆನಂದಮಯ ಚತುರ್ಮುಖಾದಿಗಳೇ ಹೊರತು ಪರಮಾತ್ಮನಲ್ಲ ಎಂದು ನಿರ್ಧಾರಮಾಡಲು ಬರುವುದಿಲ್ಲ. ಆದ್ದರಿಂದ ಆಚಾರ್ಯರು ಎಲ್ಲ ಕಡೆಯಲ್ಲೂ ಬ್ರಹ್ಮಶಬ್ದದೊಂದಿಗೆ ಇತರ ಕಾರಣಗಳನ್ನೂ ನೀಡಿದ್ದಾರೆ.

## ಸಿದ್ಧಾಂತ

**ತಥಾಪಿ ನ ತೇ ಆನಂದಮಯ ಶಬ್ದೇನ ಉಚ್ಯಂತೇ । ಕಿಂತು ವಿಷ್ಣುರೇವ 'ತದೇವ ಬ್ರಹ್ಮ ಪರಮಂ ಕವೀನಾಂ ॥ (ಮ.ನಾ.ಉ.1-6) ''ಏತಮೇವ ಬ್ರಹ್ಮೇತ್ಯಾಚಕ್ಷತೇ'' (ಐ.ಆ.3.2-3-12)**

**''ಬ್ರಹ್ಮಶಬ್ದಃ ಪರೇ ವಿಷ್ಣೌ ನಾನ್ಯತ್ರ ಕ್ವಚಿದಿಷ್ಯತೇ ।**
**ಅಸಂಪೂರ್ಣಾಃ ಪರೇ ಯಸ್ಮಾದ್ ಉಪಚಾರೇಣ ವಾ ಭವೇತ್ ॥''**
**''ಬ್ರಹ್ಮೇತಿ ಪರಮಾತ್ಮೇತಿ ಭಗವಾನಿತಿ ಶಬ್ದ್ಯತೇ ॥'' (ಭಾಗ.)**
**''ವಾಸುದೇವಾತ್ಮಕಂ ಬ್ರಹ್ಮ ಮೂಲಮಂತ್ರೇಣ ವಾ ಯತಿಃ ।'' (ವ್ಯಾಸಸ್ಮೃ.)**

**ಇತ್ಯಾದಿಷು ತಸ್ಮಿನ್ನೇವ ಪ್ರಸಿದ್ಧಬ್ರಹ್ಮಶಬ್ದಾಭ್ಯಾಸಾತ್ ॥ 2 ॥**

ಇತರರು ಆನಂದಮಯ ಶಬ್ದವಾಚ್ಯರು ಎನ್ನಲು ಆಸ್ಪದವಿದ್ದರೂ ಅವರು ಆ ಶಬ್ದದಿಂದ ವಾಚ್ಯರಾಗಲಾರರು. ವಿಷ್ಣುವೇ ಆನಂದಮಯ ಶಬ್ದವಾಚ್ಯ. ಏಕೆಂದರೆ, ಈ ಪ್ರಕರಣದಲ್ಲಿ ಬ್ರಹ್ಮಶಬ್ದವನ್ನು ಅನೇಕ ಸಲ ಪ್ರಯೋಗಿಸಲಾಗಿದೆ. ಬ್ರಹ್ಮಶಬ್ದ ವಿಷ್ಣುವಿನಲ್ಲೇ ಪ್ರಸಿದ್ಧವಾದ ನಾಮ-

''ಉಳಿದವರು ಅಪೂರ್ಣರಾದುದರಿಂದ ಅವರಿಗೆ ಬ್ರಹ್ಮ ಎಂಬ ನಾಮ ಸಲ್ಲದು. ಇತರರಲ್ಲಿ ಆ ಶಬ್ದದ ಪ್ರಯೋಗ ಗೌಣ. ಆದ್ದರಿಂದ ಬ್ರಹ್ಮ ಎಂಬ ಹೆಸರು ವಿಷ್ಣುವಿಗೆ ಹೊರತು ಇತರರಿಗಿಲ್ಲ''.

'ಮಹಾವಿಷ್ಣು ಬ್ರಹ್ಮ, ಪರಮಾತ್ಮಾ, ಭಗವಾನ್ ಎಂದೆಲ್ಲ ಕರೆಸಿಕೊಳ್ಳುತ್ತಾನೆ'

'ಯತಿಗಳು, ವಾಸುದೇವಾತ್ಮಕನಾದ ಬ್ರಹ್ಮನನ್ನು ಪ್ರಣವದಿಂದಾಗಲೀ, ನಾರಾಯಣಾಷ್ಟಾಕ್ಷರ ಮಂತ್ರದಿಂದಾಗಲೀ ಆರಾಧಿಸಬೇಕು'

ಮಹಾನಾರಾಯಣೋಪನಿಷತ್ತಿನಲ್ಲಿ 'ಜ್ಞಾನಿಗಳಿಗೆ ಸರ್ವೋತ್ತಮನಾದ ವಿಷ್ಣುವೇ ಬ್ರಹ್ಮ' ಎಂದಿದೆ. ಐತರೇಯ ಆರಣ್ಯಕದಲ್ಲೂ ''ವಿಷ್ಣುವನ್ನೇ ಬ್ರಹ್ಮನೆಂದು ಕರೆಯುತ್ತಾರೆ'' ಎನ್ನಲಾಗಿದೆ.

ಹೀಗೆ ಶ್ರುತಿಸ್ಮೃತಿಗಳಿಂದ ಬ್ರಹ್ಮ ಎಂಬ ನಾಮ ವಿಷ್ಣುವಿಗೆ ವಿನಹ ಇತರರಿಗಿಲ್ಲ ಎಂದು ತಿಳಿಯುತ್ತದೆ.

**ವಿವರಣೆ :** 'ತದೇವ ಬ್ರಹ್ಮ'' ಇತ್ಯಾದಿ ಮಹಾನಾರಾಯಣೋಪನಿಷತ್ತಿನ ಅರ್ಥವನ್ನು ಜಿಜ್ಞಾಸಾಧಿಕರಣದಲ್ಲಿ ಹೇಳಲಾಗಿದೆ-

ಬುದ್ಧ್ಯಾऽವಿಹಿಂಸನ್ ಪುಷ್ಟೈರ್ವಾ ಪ್ರಣವೇನ ಸಮರ್ಚಯೇತ್।
ವಾಸುದೇವಾತ್ಮಕಂ ಬ್ರಹ್ಮ ಮೂಲಮಂತ್ರೇಣ ವಾ ಯತಿಃ ॥

ಇದು ವ್ಯಾಸಸ್ಮೃತಿಯ ಪೂರ್ಣಪಾಠ. **॥ ಸೂತ್ರ 12 ॥**

## ಓಂ ॥ ವಿಕಾರಶಬ್ದಾನ್ನೇತಿ ಚೇನ್ನ ಪ್ರಾಚುರ್ಯಾತ್ ॥ ಓಂ

**ವಿಕಾರಾತ್ಮಕತ್ವಾತ್ ತದಭಿಮಾನಿತ್ವಾಚ್ಚ ಯುಜ್ಯತೇ ಪ್ರಕೃತ್ಯಾದೀನಾಂ ಮಯಟ್ ಶಬ್ದಃ, ನತು ಪರಮಾತ್ಮನಃ ಇತಿ ಮಾ ಭೂತ್ । ಪ್ರಚುರಾನಂದತ್ವಾದ್ಧಿ ಆನಂದಮಯಃ । ನ ತು ತದ್ವಿಕಾರತ್ವಾತ್ । ಅನ್ನಾದೀನಾಂ ಚ ಪ್ರಾಚುರ್ಯಮೇವ । 'ಅದ್ಯತೇऽತ್ತಿ ಚ' ಇತಿ ವ್ಯಾಖ್ಯಾನಾತ್ ಪ್ರಾಚುರ್ಯಂ ಚ ಯುಜ್ಯತೇ । ಉಪಜೀವ್ಯತ್ವಮೇವ ಅದ್ಯತ್ವಮ್ ।**

ಪ್ರಕೃತಿಯು ಜಗತ್ತಾಗಿ ವಿಕಾರ ಹೊಂದುತ್ತದೆ. ಲಕ್ಷ್ಮೀದೇವಿ ಇಂತಹ ಪ್ರಕೃತಿಗೆ ಅಭಿಮಾನಿನಿಯಾಗಿದ್ದಾಳೆ. ಆದ್ದರಿಂದ ಇವರಿಬ್ಬರಿಗೆ 'ಆನಂದಮಯ' ಎಂಬ

ನಾಮದಲ್ಲಿರುವ ವಿಕಾರಾರ್ಥಕ ಮಯಟ್ ಪ್ರತ್ಯಯ ಹೊಂದುತ್ತದೆ. ನಿರ್ವಿಕಾರನಾದ ಪರಮಾತ್ಮನಿಗೆ ಆ ಪ್ರತ್ಯಯ ಹೊಂದುವುದಿಲ್ಲ. ಆದ್ದರಿಂದ ಪರಮಾತ್ಮ ಆನಂದಮಯ ಶಬ್ದವಾಚ್ಯನಲ್ಲ. ಹೀಗೆ ಆಕ್ಷೇಪಿಸುವುದು ಸರಿಯಲ್ಲ. ಏಕೆಂದರೆ, ವಿಷ್ಣುವು ಆನಂದಪೂರ್ಣನಾದುದರಿಂದ ಆನಂದಮಯನೆನಿಸಿದ್ದಾನೆ ಹೊರತು, ಆನಂದವಿಕಾರ ನಾದುದರಿಂದ ಅಲ್ಲ.

'ಅನ್ನಮಯ' ಎಂದರೂ ಪೂರ್ಣವಾದ ಅನ್ನಉಳ್ಳವನು ಎಂದೇ ಅರ್ಥ. ಈ ಉಪನಿಷತ್ತಿನಲ್ಲೇ 'ಅದ್ಯತೇ ಅತ್ತಿ ಚ' ಎಂದು ಅನ್ನಶಬ್ದದ ಅರ್ಥವನ್ನು ವಿವರಿಸಿರುವುದರಿಂದ ಇಂತಹ ''ಅನ್ನಪೂರ್ಣತ್ವವು'' ವಿಷ್ಣುವಿನಲ್ಲಿ ಇದೆ. ಉಪನಿಷತ್ತಿನಲ್ಲಿ ಹೇಳಿದ ಅನ್ನಶಬ್ದಾರ್ಥವಾದ 'ಅದ್ಯತ್ವ' ಎಂದರೆ ಅವಲಂಬಿಸಿರುವುದು.

**ವಿವರಣೆ :** 'ಆನಂದಮಯ' ಶಬ್ದದಲ್ಲಿ'ಮಯಟ್' ಪ್ರತ್ಯಯವಿದೆ. ಅದಕ್ಕೆ 'ವಿಕಾರ' ಎಂದು ಅರ್ಥ. 'ಸ್ವರ್ಣಮಯವಾದ ಬಳೆ' ಎಂದರೆ 'ಬಂಗಾರದಿಂದ ತಯಾರಿಸಿದ-ಅರ್ಥಾತ್ ಬಂಗಾರದ ತುಂಡನ್ನೇ ಬಳೆಯನ್ನಾಗಿ ಪರಿವರ್ತಿಸಲಾಗಿದೆ' ಎಂದರ್ಥ. ಅದರಂತೆ 'ಆನಂದಮಯ'ನೆಂದರೆ 'ಆನಂದದ ರೂಪಾಂತರವಾದ ವಸ್ತು' ಎಂದರ್ಥ. ಇಂತಹ ಶಬ್ದ ನಿರ್ವಿಕಾರನಾದ ಪರಮಾತ್ಮನಿಗೆ ಅನ್ವಯಿಸುವುದು ಹೇಗೆ? ಎಂದು ಪ್ರಶ್ನೆ. ಅದಕ್ಕೆ ಉತ್ತರ ಮಯಟ್ ಪ್ರತ್ಯಯಕ್ಕೆ ಪೂರ್ಣ ಎಂಬ ಇನ್ನೊಂದು ಅರ್ಥವೂ ಇದೆ. 'ಪ್ರಕಾಶಮಯ' ಎಂದರೆ 'ಪ್ರಕಾಶದಿಂದ ತುಂಬಿರುವ' ಎಂದರ್ಥ. ಪ್ರಕೃತ, ಪರಮಾತ್ಮನೂ ಆನಂದಪೂರ್ಣನಾದುದರಿಂದ ಆನಂದಮಯನೆನಿಸುತ್ತಾನೆ.

ಆನಂದಮಯ ಶಬ್ದದ ಜೊತೆಯಲ್ಲಿ, ಅದಕ್ಕಿಂತ ಹಿಂದೆ ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ ಶಬ್ದಗಳೂ ಇವೆ. ಬ್ರಹ್ಮಶಬ್ದ ಪ್ರಯೋಗದ ಕಾರಣಕ್ಕಾಗಿ 'ಆನಂದಮಯ' ಶಬ್ದ ವಿಷ್ಣುವಾಚಕವಾಗುವುದಾದರೆ ಅನ್ನಮಯದಲ್ಲಿ 'ಯೇಽನ್ನಂ ಬ್ರಹ್ಮೋಪಾಸತೇ' ಎಂದು ಬ್ರಹ್ಮಶಬ್ದವನ್ನು ಪ್ರಯೋಗಿಸಿರುವುದರಿಂದ ಅನ್ನಮಯಾದಿಗಳೂ ವಿಷ್ಣುವೇ ಆಗಬೇಕು. ಆದರೆ ಅಲ್ಲಿ ಮಯಟ್ ಪ್ರತ್ಯಯಕ್ಕೆ 'ಪೂರ್ಣ' ಎಂಬ ಅರ್ಥ ಸರಿಯಲ್ಲ. ಏಕೆಂದರೆ ಪರಮಾತ್ಮನು ನಾವು ಉಣ್ಣುವ ಅನ್ನರೂಪನಲ್ಲವಾದ ಕಾರಣ ಅವನು 'ಅನ್ನಪೂರ್ಣ' ಎನಿಸುವುದು ಹೇಗೆ?

ಅದಕ್ಕೆ ಹೀಗೆ ಸಮಾಧಾನ - ಇಲ್ಲಿ ಅನ್ನವೆಂದರೆ ನಾವು ಉಣ್ಣುವ ಅನ್ನವಲ್ಲ. ಜೀವಜಾತವನ್ನು ಪೋಷಿಸುವ ಗುಣ. ಅಥವಾ ಜೀವರನ್ನು ಸಂಹರಿಸುವ ಸಾಮರ್ಥ್ಯ. ಅದು ಪರಮಾತ್ಮನಲ್ಲೇ ಪೂರ್ಣವಾಗಿದೆ. ಹೀಗಾಗಿ ಅವನು ಅನ್ನಮಯ ಎನಿಸುತ್ತಾನೆ.

ಅನ್ನ ಶಬ್ದಕ್ಕೆ ಈ ಅರ್ಥವನ್ನು ಅನ್ನಮಯ ಪ್ರಕರಣದಲ್ಲೇ ಹೇಳಲಾಗಿದೆ. ''ಅದ್ಯತೇ ಅತ್ತಿ ಚ ಭೂತಾನಿ। ತಸ್ಮಾದನ್ನಂ ತದುಚ್ಯತ ಇತಿ'' ನಾವು ತಿನ್ನುವ ಅನ್ನವನ್ನು ''ಅದ್ಯತೇ=ತಿನ್ನಲ್ಪಡುತ್ತದೆ'' ಎನ್ನಬಹುದು. ಆದರೆ 'ಅತ್ತಿ=ತಿನ್ನುತ್ತದೆ' ಎನ್ನಲಾಗದು.

ಏಕೆಂದರೆ, ಅನ್ನವೇ ನಮ್ಮನ್ನು ತಿನ್ನಲಾರದು. ಆದ್ದರಿಂದ ಅನ್ನ ಎಂದರೆ ಪರಮಾತ್ಮನೇ ಹೊರತು ಪ್ರಸಿದ್ಧಾನ್ನವಲ್ಲ.

ಪ್ರಸಿದ್ಧವಾದ ನಾವು ತಿನ್ನುವ ಅನ್ನದಲ್ಲಿ 'ಅತ್ತಿ' ಎನ್ನುವ ಅಂಶ ಇಲ್ಲ. ಹೀಗಾಗಿ ಅದು ಅನ್ನ ಶಬ್ದವಲ್ಲ. ಅದರಂತೆ, ಪರಮಾತ್ಮನಲ್ಲಿ ''ಅದ್ಯತೇ'' ಎನ್ನುವ ಅಂಶವಿಲ್ಲ. ಅದ್ಯತೇ= ಅಂದರೆ 'ತಿನ್ನುವ ವಸ್ತು'. ಪರಮಾತ್ಮನು ನಮಗೆ ಭೋಜ್ಯ ವಸ್ತುವಲ್ಲ. ಹೀಗೆ ನಾವು ಉಣ್ಣುವ ಅನ್ನದಲ್ಲಿ 'ಅದ್ಯತೆ' ಎಂಬ ಅರ್ಥ ಸರಿಯಾದರೂ 'ಅತ್ತಿ' ಎನ್ನುವ ಅರ್ಥ ಅನ್ವಯಿಸುವುದಿಲ್ಲ. ಪರಮಾತ್ಮನಲ್ಲಿ ''ಅತ್ತಿ=ನಮ್ಮನ್ನು ಸಂಹರಿಸುತ್ತಾನೆ'' ಎಂಬ ಅರ್ಥ ಹೊಂದಿಕೆಯಾದರೂ 'ಅದ್ಯತೇ' ಎಂಬ ಅರ್ಥ ಸರಿಹೊಂದುವುದಿಲ್ಲ. ಅಂದಮೇಲೆ ಉಪನಿಷತ್ತಿನಲ್ಲಿ ಹೇಳಿದ ಅನ್ನಶಬ್ದಾರ್ಥ ಯಾರಿಗೆ ಅನ್ವಯಿಸುತ್ತದೆ? ಇದಕ್ಕೆ ಆಚಾರ್ಯರು ಹೀಗೆ ಉತ್ತರಿಸಿದ್ದಾರೆ-

ನಾವು ಅನ್ನವನ್ನು ಉಣ್ಣುತ್ತೇವೆ. ಆದರಿಂದಾಗಿ ಜೀವಿಸಿದ್ದೇವೆ. ಹೀಗೆ ನಮ್ಮ ಜೀವನಾಧಾರವಾದುದರಿಂದ ಈ ಅನ್ನ 'ಅದ್ಯತೇ' ಎನಿಸಿದೆ. ಇದರಂತೆ ಪರಮಾತ್ಮನೂ ನಮ್ಮ ಜೀವನಕ್ಕೆ ಆಧಾರನಾಗಿದ್ದಾನೆ. ಅವನಿಲ್ಲದೆ ನಾವಿಲ್ಲ. ಆದ್ದರಿಂದ ಅವನನ್ನೂ 'ಅದ್ಯತೇ' ಎಂದು ಹೇಳಬಹುದು. ಹೀಗೆ ಉಪನಿಷತ್ತು ಹೇಳಿದ ಎರಡೂ ಅರ್ಥಗಳು ಪರಮಾತ್ಮನಲ್ಲಿ ಅನ್ವರ್ಥವಾಗಿವೆ. ಆದ್ದರಿಂದ 'ಅನ್ನಮಯ'ನೆಂದರೆ ಪರಮಾತ್ಮ.

**''ಸವಾ ಏಷ'' (ತೈ.ಉ.2-3) ಇತ್ಯನ್ಯಪ್ರಾರಂಭಾತ್। ''ಯೇಽನ್ನಂ ಬ್ರಹ್ಮೋಪಾಸತೇ ।'' (ತೈ.ಉ.2-2) ಇತ್ಯಾದಿ ಬ್ರಹ್ಮಶಬ್ದಾತ್ ಬಹುರೂಪತ್ವಾಚ್ಚ ನ ವಿಕಾರಿತ್ವಂ, ಅವಿರೋಧಶ್ಚ। ನ ಚ ಪೃಥಕ್ಕಲ್ಪನಾ ಯುಕ್ತಾ । ಸ್ವರೂಪೇ ಚ ಯುಜ್ಯತೇ ಪ್ರಚುರಪ್ರಕಾಶೋ ರವಿರಿತಿವತ್ ॥ 13 ॥**

ತೈತ್ತಿರೀಯ ಉಪನಿಷತ್ತಿನಲ್ಲಿ ''ಸ ವಾ ಏಷ ಪುರುಷೋಽನ್ನರಸಮಯಃ' ಎಂಬಲ್ಲಿಂದ, ಹಿಂದೆ ಪ್ರಸ್ತುತನಾದ ಆತ್ಮನಿಗೆ ಅನ್ನಮಯಾದಿ ಪಂಚರೂಪಗಳನ್ನು ಹೇಳಲು, ಹೊಸ ಪ್ರಕರಣವೇ ಆರಂಭಗೊಂಡಿದೆ. ಆದ್ದರಿಂದ ''ಸಃ'' ಎಂದರೆ ಪೂರ್ವದಲ್ಲಿ ಪ್ರಸ್ತುತನಾದ 'ಪುರುಷ' ಎಂದು ಅರ್ಥವಲ್ಲ.

ಅನ್ನಮಯಾದಿಗಳಲ್ಲೂ ''ಯೇ ಅನ್ನಂ ಬ್ರಹ್ಮೋಪಾಸತೇ'' ಇತ್ಯಾದಿಯಾಗಿ ಬ್ರಹ್ಮಶಬ್ದದ ಪ್ರಯೋಗ ಮಾಡಿರುವುದರಿಂದ ಅಲ್ಲಿರುವ ಮಯಟ್ ಪ್ರತ್ಯಯಕ್ಕೂ 'ವಿಕಾರ' ಎಂದು ಅರ್ಥ ಹೇಳಬಾರದು. ವಿಷ್ಣುವು ಒಬ್ಬನೇ ಆದರೂ ಅವನಿಗೆ ಅನೇಕ ರೂಪಗಳಿರುವುದರಿಂದ ''ಅನ್ನಮಯಾದಿ'' ಐದು ರೂಪಗಳನ್ನೂ ಅವನಿಗೇ ಅನ್ವಯಿಸುವುದರಲ್ಲಿ ವಿರೋಧವೇನೂ ಇಲ್ಲ.

'ಅನ್ನಮಯಾದಿ' ಐದು ಪ್ರಕರಣಗಳಲ್ಲೂ ಬ್ರಹ್ಮಶಬ್ದ ಸಮಾನವಾಗಿರುವಾಗ 'ಆನಂದಮಯ' ಮಾತ್ರ ಬ್ರಹ್ಮನ ರೂಪ ಎಂದು ಕಲ್ಪನೆ ಮಾಡುವುದು ಸರಿಯಲ್ಲ.

ಬ್ರಹ್ಮನು ಆನಂದಸ್ವರೂಪನೇ ಆದರೂ ''ಆನಂದಪೂರ್ಣ'' ಎನ್ನಬಹುದು. 'ಸೂರ್ಯ ಪ್ರಕಾಶಮಯ' ಎಂದಂತೆ.

**ವಿವರಣೆ :** ಮಾಧ್ವಭಾಷ್ಯದಂತೆ ಕೇವಲ ಆನಂದಮಯನಷ್ಟೇ ಬ್ರಹ್ಮನಲ್ಲ. ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ, ಆನಂದಮಯ ಈ ಐದೂ ಪರಮಾತ್ಮನ ರೂಪವಿಶೇಷಗಳು. ಏಕೆಂದರೆ ಆನಂದಮಯ ಬ್ರಹ್ಮ ಎಂದು ಸಾಧಿಸಲು ಸೂತ್ರಕಾರರು ನೀಡಿದ ಸಮರ್ಥನೆ ಬ್ರಹ್ಮಶಬ್ದದ ಪ್ರಯೋಗ. ಈ ಸಮರ್ಥನೆ ಉಳಿದ ರೂಪಗಳಿಗೂ ಸಮಾನ. ''ಯೇ ಅನ್ನಂ ಬ್ರಹ್ಮೋಪಾಸತೇ'' ''ಯೇ ಪ್ರಾಣಂ ಬ್ರಹ್ಮೋಪಾಸತೇ'' ''ವಿಜ್ಞಾನಂ ಬ್ರಹ್ಮ ಚೇದ್ವೇದ'' ಹೀಗೆ ಅನ್ನಮಯಾದಿಗಳಲ್ಲೂ ಬ್ರಹ್ಮ ಶಬ್ದದ ಪ್ರಯೋಗವಿದೆ. ಆದ್ದರಿಂದ ಈ ಐದೂ ಬ್ರಹ್ಮನ ರೂಪಗಳೇ.

ಇದರ ಮೇಲೆ ಎರಡು ಆಕ್ಷೇಪಗಳು ಬರುತ್ತವೆ-

ಅ. ತೈತ್ತಿರೀಯ ಉಪನಿಷತ್ತಿನಲ್ಲಿ ''ಆತ್ಮನಃ ಆಕಾಶಃ ಸಂಭೂತಃ'' ಎಂದು ಮುಂತಾಗಿ ಪರಮಾತ್ಮನಿಂದ ಜಗತ್ತಿನ ಸೃಷ್ಟಿಯ ಕ್ರಮವನ್ನು ಹೇಳುತ್ತಾ ಕೊನೆಯಲ್ಲಿ ''ಅನ್ನಾತ್ ಪುರುಷಃ'' ಅನ್ನದಿಂದ ಪುರುಷ - ಜೀವನ ದೇಹ ಹುಟ್ಟುತ್ತದೆ ಎನ್ನಲಾಗಿದೆ. ಇದಾದ ಕೂಡಲೇ ''ಸ ವಾ ಏಷ ಪುರುಷೋ ಅನ್ನರಸಮಯಃ'' ಎಂದಿದೆ. ಇದರ ಅರ್ಥ- 'ಹಿಂದೆ ಹೇಳಿದ ಪುರುಷನು ಅನ್ನರಸಮಯ' ಎಂದು. ಹೀಗೆ ಇಲ್ಲಿ ಹಿಂದೆ ಪ್ರಸ್ತುತನಾದ ಜೀವನ ದೇಹಕ್ಕೇ 'ಅನ್ನರಸಮಯ' ಶಬ್ದ ಅನ್ವಯಿಸುತ್ತದೆ. ಆದ್ದರಿಂದ 'ಅನ್ನಮಯ' ಪರಮಾತ್ಮನ ರೂಪ ಎನ್ನುವುದು ಹೇಗೆ?

ಆ. ಪರಮಾತ್ಮ ಅದ್ವಿತೀಯ. ಅವನು ಒಬ್ಬನೇ. ಅಂದಮೇಲೆ ಅನ್ನಮಯಾದಿ ಪಂಚವೂ ಪರಮಾತ್ಮ ಎನ್ನುವುದು ಹೇಗೆ?

ಇವುಗಳಲ್ಲಿ ಮೊದಲ ಆಕ್ಷೇಪಕ್ಕೆ ಉತ್ತರ ಹೀಗೆ - ಈ ಉಪನಿಷತ್ತು ''ಬ್ರಹ್ಮವಿದಾಪ್ನೋತಿ ಪರಂ'' ಎಂದು ಬ್ರಹ್ಮನ ಪ್ರಸ್ತಾವನೆಯಿಂದ ಆರಂಭಗೊಂಡಿದೆ. 'ಬ್ರಹ್ಮನ ಜ್ಞಾನದಿಂದ ಬ್ರಹ್ಮನ ಬಳಿ ಸೇರುತ್ತಾನೆ' ಎಂದು ಅದರ ಅರ್ಥ. ಮುಂದೆ ಬ್ರಹ್ಮನ ಸ್ವರೂಪವನ್ನು ತಿಳಿಸುತ್ತಾ ಉಪನಿಷತ್ತು ''ಆತ್ಮನಃ ಆಕಾಶಃ ಸಂಭೂತ'' ಎಂದು ಮುಂತಾಗಿ ಬ್ರಹ್ಮನು ಈ ಜಗತ್ತಿನ ಸೃಷ್ಟಿಕರ್ತಾ ಎಂದು ತಿಳಿಸುತ್ತದೆ. ಮತ್ತೆ ಅದೇ ಬ್ರಹ್ಮನಿಗೆ ಅನ್ನಮಯಾದಿ ರೂಪಪಂಚಕಗಳನ್ನು ತಿಳಿಸಲು ''ಸ ವಾ ಏಷ ಪುರುಷಃ'' ಎಂದು ಪ್ರಾರಂಭಿಸಿದೆ. ಇಲ್ಲಿ ''ಸಃ'' ಅಂದರೆ ಹಿಂದೆ ಪ್ರಸ್ತುತವಾದ ದೇಹವಲ್ಲ. ಅದು ಅಪ್ರಧಾನವಾಗಿ ಪ್ರಸ್ತುತ. ಅವೆಲ್ಲಕ್ಕೆ ಕಾರಣವಾಗಿ ಪ್ರಧಾನಪ್ರಸ್ತುತ 'ಆತ್ಮ'. ಆದ್ದರಿಂದ ''ಸಃ'' ಎಂದರೆ ''ಯಾವ ಆತ್ಮನಿಂದ ಆಕಾಶಾದಿಗಳು ಉತ್ಪನ್ನವಾದವೋ ಅಂತಹ ಆತ್ಮ'' ಎಂದರ್ಥ. ಹೀಗೆ ಆತ್ಮನಿಗೇ ಅನ್ನಮಯಾದಿ ಪಂಚರೂಪಗಳನ್ನು ಹೇಳುತ್ತಿರುವುದರಿಂದ ಮೊದಲ ಆಕ್ಷೇಪಕ್ಕೆ ಅವಕಾಶವಿಲ್ಲ.

ಆ. ಆತ್ಮನು ಒಬ್ಬನೇ ಆದರೂ ಅವನಿಗೆ ರಾಮ-ಕೃಷ್ಣಾದಿ ಅನೇಕ ರೂಪಗಳಿರುವಂತೆ ಅನ್ನಮಯಾದಿ ಐದು ರೂಪಗಳಿರುವುದು ವಿರುದ್ಧವೇನಲ್ಲ. ಆದ್ದರಿಂದ ಎರಡನೆಯ ಆಕ್ಷೇಪವೂ ಸರಿಯಲ್ಲ.

'ಆನಂದಮಯ' ಎಂಬಲ್ಲಿ ಮಯಟ್ ಪ್ರತ್ಯಯಕ್ಕೆ ''ಪ್ರಚುರ-ಪೂರ್ಣ'' ಎಂದು ಅರ್ಥಮಾಡಿದರೂ, ಒಂದು ಪ್ರಶ್ನೆ ಬರುತ್ತದೆ- ''ನೀರು ಎಣ್ಣೆಮಯ'' ಎಂದಾಗ ನೀರಿನಲ್ಲಿ ಎಣ್ಣೆ ಸೇರಿದೆ, ನೀರು ಬೇರೆ ಎಣ್ಣೆ ಬೇರೆ ಎಂದರ್ಥ. ಅದರಂತೆ ಪರಮಾತ್ಮ ಆನಂದಮಯನೆಂದಾಗಲೂ ಪರಮಾತ್ಮನಿಗೂ ಆನಂದಕ್ಕೂ ಭೇದ ತಿಳಿಯುತ್ತದೆ. ಆದರೆ ಅದು ಶಾಸ್ತ್ರಸಮ್ಮತವಲ್ಲ'' ಎಂದು. ಇದಕ್ಕೆ ಹೀಗೆ ಉತ್ತರ - ಎರಡು ವಸ್ತುಗಳು ವಿಭಿನ್ನವಾದಾಗ ಮಯಟ್ ಪ್ರತ್ಯಯದ ಪ್ರಯೋಗವಿದ್ದಂತೆ ಎರಡೂ ಒಂದೇ ಆಗಿದ್ದಾಗಲೂ 'ಮಯಟ್' ಪ್ರತ್ಯಯದ ಪ್ರಯೋಗವಿದೆ. ಸೂರ್ಯ ಮತ್ತು ಅವನ ಪ್ರಕಾಶ ಬೇರೆ ಬೇರೆಯಲ್ಲ. ಆದರೂ ''ಸೂರ್ಯ ಪ್ರಕಾಶಮಯ'' ಎನ್ನುವುದಿಲ್ಲವೇ? ಅದರಂತೆ ಆನಂದ ಸ್ವರೂಪನಾದ ಬ್ರಹ್ಮನೂ ಆನಂದಮಯನಾಗುತ್ತಾನೆ. ।।13।।

## ಓಂ ।। ತದ್ಧೇತು ವ್ಯಪದೇಶಾಚ್ಚ ।। ಓಂ

**''ಕೋ ಹ್ಯೇವಾನ್ಯಾತ್ ಕಃ ಪ್ರಾಣ್ಯಾದ್ ಯದೇಷ ಆಕಾಶ ಆನಂದೋ ನ ಸ್ಯಾತ್ ''**

**ಇತಿ (ತೈ.ಉ. 2-7) ।। 14 ।।**

ತೈತ್ತಿರೀಯೋಪನಿಷತ್ತಿನಲ್ಲಿ ಬ್ರಹ್ಮನು ಆನಂದಮಯನೆನ್ನಲು 'ಕೋ ಹ್ಯೇವಾನ್ಯಾತ್'' ಇತ್ಯಾದಿಯಾದ ಕಾರಣವನ್ನು ಹೇಳಲಾಗಿದೆ. ಆದ್ದರಿಂದ ಬ್ರಹ್ಮನೇ ಆನಂದಮಯ.

**ವಿವರಣೆ :** ''ಕೋ ಹ್ಯೇವಾನ್ಯಾತ್'' ಇತ್ಯಾದಿ ತೈತ್ತಿರೀಯ ಶ್ರುತಿಗೆ ಹೀಗೆ ಅರ್ಥ. ಯದ್=ಯದಿ=ಒಂದುವೇಳೆ, ಏಷಃ ಆಕಾಶಃ=ಪ್ರಕಾಶರೂಪನಾದುದರಿಂದ ಆಕಾಶ ಶಬ್ದವಾಚ್ಯನಾದ ವಿಷ್ಣುವು, ಆನಂದಃ ನ ಸ್ಯಾತ್=ಆನಂದಪೂರ್ಣನಾಗಿರದಿದ್ದರೆ, ಕೋ ಹಿ ಏವ=ಯಾರು ತಾನೇ, ಅನ್ಯಾತ್=ನಮ್ಮನ್ನು ಸತ್ಕರ್ಮಗಳಲ್ಲಿ ಪ್ರೇರೇಪಿಸಿಯಾನು? ಕೋ ಹಿ ಏವ=ಯಾರು ತಾನೇ, ಪ್ರಾಣ್ಯಾತ್=ನಮ್ಮನ್ನು ಕ್ರಿಯಾಶೀಲರನ್ನಾಗಿ ಮಾಡಿಯಾನು?

ನಾವು ಯಾವುದೇ ಕೆಲಸ ಮಾಡಬೇಕಾದರೆ ಎರಡು ಕಾರಣಗಳಿರುತ್ತವೆ. ಒಂದು ಸ್ವಾರ್ಥಸಾಧನೆ, ಇಲ್ಲವೇ ಸುಖದುಃಖಗಳ ಅತಿರೇಕ. ಮಿತಿಮೀರಿದ ಸುಖದುಃಖಗಳಾದಾಗ ನಗುವುದು, ಕುಣಿಯುವುದು, ಅಳುವುದು ಮುಂತಾದ ಕ್ರಿಯೆಗಳನ್ನು ಮಾಡುತ್ತೇವೆ. ಇಲ್ಲಿ ಸ್ವಾರ್ಥದ ದೃಷ್ಟಿಯಿಲ್ಲ. ಪರಮಾತ್ಮ ಪೂರ್ಣಕಾಮನಾದುದರಿಂದ ಅವನು ಮಾಡುವ ಸೃಷ್ಟ್ಯಾದಿ ಕ್ರಿಯೆಗಳಿಂದ ಸ್ವಂತದ ಲಾಭವಿಲ್ಲ. ಆದ್ದರಿಂದ ಸುಖಾತಿಶಯದಿಂದಾಗಿ ಈ ಕ್ರಿಯೆಗಳನ್ನು ಮಾಡುತ್ತಾನೆ. ಹೀಗೆ ಅವನು ಆನಂದಪೂರ್ಣನಾಗಿರದಿದ್ದರೆ ಈ ಲೋಕದ ಸೃಷ್ಟ್ಯಾದಿ ಕ್ರಿಯೆಗಳನ್ನು ಮಾಡುವವನಾರು? ಆದ್ದರಿಂದ ಅವನು ಆನಂದಮಯ.

ಹೀಗೆ ಉಪನಿಷತ್ತು ಸೃಷ್ಟ್ಯಾದಿಕರ್ತೃತ್ವವನ್ನು ಕಾರಣವನ್ನಾಗಿ ನೀಡಿ ಆನಂದಮಯತ್ವವನ್ನು ಸಮರ್ಥಿಸಿದೆ. ಸೃಷ್ಟ್ಯಾದಿ ಕ್ರಿಯೆಗಳು ವಿಷ್ಣುವಿನಲ್ಲಿವೆ. ಅವು ಮತ್ತಾರಿಗೂ ಸಾಧ್ಯವಿಲ್ಲವಾದ್ದರಿಂದ ವಿಷ್ಣುವೇ ಆನಂದಮಯ.

## ಓಂ॥ ಮಾಂತ್ರವರ್ಣಿಕಮೇವ ಚ ಗೀಯತೇ ॥ ಓಂ॥

**''ಬ್ರಹ್ಮವಿದಾಪ್ನೋತಿ ಪರಂ'' ಇತಿ ಸೂಚಯಿತ್ವಾ ''ಸತ್ಯಂ ಜ್ಞಾನಮನಂತಂ ಬ್ರಹ್ಮ'' (ತೈ.ಉ. 2-1) ಇತಿ ಮಂತ್ರವರ್ಣಲಕ್ಷಿತಂ ಪರಮೇವ ಬ್ರಹ್ಮ ಶಬ್ದಾನುಸಂಧಾನಾತ್ ಗೀಯತೇ ॥ 15 ॥**

ತೈತ್ತಿರೀಯೋಪನಿಷತ್ತಿನ ಪ್ರಾರಂಭದಲ್ಲಿ ''ಬ್ರಹ್ಮವಿದಾಪ್ನೋತಿ ಪರಂ'' ಎಂದು ಬ್ರಹ್ಮನ ಪ್ರಸ್ತಾವ ಮಾಡಿ ''ಸತ್ಯಂ ಜ್ಞಾನಮನಂತಂ ಬ್ರಹ್ಮ'' ಎಂದು ಅವನಿಗೆ ಲಕ್ಷಣವನ್ನು ಹೇಳಲಾಗಿದೆ. ಈ ಲಕ್ಷಣಗಳನ್ನೇ ಅನ್ನಮಯಾದಿ ಐದು ಪ್ರಕರಣಗಳಲ್ಲಿ ವಿವರಿಸಲಾಗಿದೆ. ಇದು ಸತ್ಯಾದಿ ಶಬ್ದಗಳಿಗೂ ಅನ್ನಮಯಾದಿ ಶಬ್ದಗಳಿಗೂ ಅರ್ಥವನ್ನು ತಿಳಿದಾಗ ಸ್ಪಷ್ಟವಾಗುವುದು.

**ವಿವರಣೆ :** ತೈತ್ತಿರಿಯೋಪನಿಷತ್ತಿನ ಪ್ರಾರಂಭದಲ್ಲಿ 'ಬ್ರಹ್ಮಜ್ಞಾನಿಯು ಬ್ರಹ್ಮನ ಬಳಿ ಸೇರುತ್ತಾನೆ' ಎನ್ನಲಾಗಿದೆ. ಅದರ ಮೇಲೆ ಮೂರು ಪ್ರಶ್ನೆಗಳು ಬರುತ್ತದೆ. 1. ಬ್ರಹ್ಮನೆಂದರೆ ಯಾರು? 2. ಅವನನ್ನು ತಿಳಿಯುವುದೆಂದರೆ ಹೇಗೆ? 3. ತಿಳಿದರೆ ಪ್ರಾಪ್ತಿ ಎಂದರೇನು? ಮೊದಲ ಪ್ರಶ್ನೆಗೆ - 'ಸತ್ಯಂ ಜ್ಞಾನಂ ಅನಂತಂ ಬ್ರಹ್ಮ' ಎಂದು ಉತ್ತರ. ಎರಡನೆಯ ಪ್ರಶ್ನೆಗೆ ''ಯೋ ವೇದ ನಿಹಿತಂ ಗುಹಾಯಾಂ'' ಎಂದು ಉತ್ತರ. ನಮ್ಮ ಹೃದಯಾಕಾಶದಲ್ಲಿ ಬ್ರಹ್ಮನನ್ನು ಧ್ಯಾನಿಸಬೇಕು ಎಂದು. ಮೂರನೆಯ ಪ್ರಶ್ನೆಗೆ- 'ಸೋಽಶ್ನುತೇ ಸರ್ವಾನ್ ಕಾಮಾನ್ ಸಹ ಬ್ರಹ್ಮಣಾ ವಿಪಶ್ಚಿತಾ'' ಎಂದು ಉತ್ತರ- ಬ್ರಹ್ಮನೊಂದಿಗೆ ಸಕಲಾಭೀಷ್ಟಗಳನ್ನು ಅನುಭವಿಸುವುದೇ ಬ್ರಹ್ಮಜ್ಞಾನದ ಫಲ ಎಂದು ಅರ್ಥ. ಇಷ್ಟು ಹೇಳಿ ಮುಂದೆ 'ಸತ್ಯ ಜ್ಞಾನ ಅನಂತ' ಎಂಬ ಮೂರು ಪದಗಳಿಂದ ಹೇಳಿದ ಬ್ರಹ್ಮನ ಲಕ್ಷಣವನ್ನು ಉಪನಿಷತ್ತು ವಿವರಿಸುತ್ತದೆ. ಅವುಗಳಲ್ಲಿ ಸತ್ಯಪದಕ್ಕೆ ನಾಲ್ಕು ಅರ್ಥ. ಜ್ಞಾನಪದಕ್ಕೆ ಎರಡು ಅರ್ಥ. ಅನಂತಪದಕ್ಕೆ ಒಂದರ್ಥ. ಹೀಗೆ ಒಟ್ಟು ಏಳು ಲಕ್ಷಣಗಳನ್ನು ಬ್ರಹ್ಮನಿಗೆ ಹೇಳಿದಂತಾಗುತ್ತದೆ. ಅವುಗಳಲ್ಲಿ ಸತ್ಯಪದದ ಅರ್ಥವಾದ ಸೃಷ್ಟಿಕರ್ತೃತ್ವವನ್ನು ''ಆತ್ಮನಃ ಆಕಾಶಃ ಸಂಭೂತಃ'' ಎಂಬ ಪ್ರಕರಣ ವಿವರಿಸುತ್ತದೆ. ಸತ್ಯಪದದ ಮತ್ತೆರಡು ಅರ್ಥಗಳಾದ ನಾಶಕರ್ತೃತ್ವ ಮತ್ತು ಸ್ಥಿತಿಕರ್ತೃತ್ವವನ್ನು 'ಅನ್ನಮಯ' ಪ್ರಕರಣ ವಿವರಿಸುತ್ತದೆ. ಸತ್ಯ ಶಬ್ದದ 'ಜೀವನ ಪ್ರದತ್ವ' ಎಂಬ ಅರ್ಥವನ್ನು ಪ್ರಾಣಮಯ ಪ್ರಕರಣದಲ್ಲಿ ವಿವರಿಸಲಾಗಿದೆ. ಜ್ಞಾನಶಬ್ದಕ್ಕೆ ಎರಡು ಅರ್ಥವಿದೆ. ಬ್ರಹ್ಮ ಸರ್ವವನ್ನೂ ಸಾಮಾನ್ಯವಾಗಿ ತಿಳಿದಿದ್ದಾನೆ ಹಾಗೂ ಅವುಗಳನ್ನು ವಿಶೇಷವಾಗಿಯೂ ಅರಿತಿದ್ದಾನೆ ಎಂದು. ಮೊದಲ ಅರ್ಥವನ್ನು ಮನೋಮಯ ಪ್ರಕರಣ

ವಿವರಿಸಿದರೆ ಎರಡನೆಯ ಅರ್ಥವನ್ನು ವಿಜ್ಞಾನಮಯ ಪ್ರಕರಣ ವಿವರಿಸುತ್ತದೆ. ಕೊನೆಯ ಲಕ್ಷಣ ಅನಂತತ್ವ. ಅಂದರೆ, ಬ್ರಹ್ಮನಿಗೆ ದೇಶ-ಕಾಲ-ಗುಣಗಳ ಪರಿಮಿತಿ ಇಲ್ಲ ಎಂದು. ಇದಕ್ಕೆ ಕಾರಣವನ್ನು ಆನಂದಮಯ ಪ್ರಕರಣ ನೀಡುತ್ತದೆ. ''ಗುಣಗಳಲ್ಲಿ ಶ್ರೇಷ್ಠವಾದ ಆನಂದದಿಂದ ಬ್ರಹ್ಮ ಪೂರ್ಣನಾದುದರಿಂದ ಅನಂತನಾಗಿದ್ದಾನೆ'' ಎಂದು ಆ ಪ್ರಕರಣದ ಭಾವ. ಹೀಗೆ ಅರ್ಥೈಸಿಕೊಂಡಾಗ ಮಾತ್ರ ಸಮಗ್ರ ಉಪನಿಷತ್ತಿಗೆ ಏಕವಾಕ್ಯತ್ವ ಉಪಪನ್ನವಾಗುತ್ತದೆ. ಆದ್ದರಿಂದ ಅನ್ನಮಯಾದಿಗಳು ಪರಬ್ರಹ್ಮನದೇ ರೂಪಗಳು.

**ಸತ್ಯಶಬ್ದದ ಅರ್ಥ :** 'ಸದ್ ಭಾವೇ ಸಾಧುಭಾವೇ ಚ ಸದಿತ್ಯೇತತ್ ಪ್ರಯುಜ್ಯತೇ॥

1. ಹೀಗೆ ಭಗವದ್ಗೀತೆಯಲ್ಲಿ ಸತ್ ಎಂಬ ಶಬ್ದಕ್ಕೆ ಸದ್ಭಾವ ಎಂಬ ಅರ್ಥವನ್ನು ಹೇಳಲಾಗಿದೆ. ಸದ್ಭಾವ ಎಂದರೆ ಉತ್ಪತ್ತಿ. ಅಂತಹ ಸದ್ಭಾವವನ್ನು ಯಾಪಯತಿ=ಕೊಡುತ್ತಾನೆ, ಆದ್ದರಿಂದ ಬ್ರಹ್ಮ ಸತ್ಯ. ಹೀಗೆ ಸತ್ಯ ಎಂದರೆ ಜಗತ್ತಿನ ಉತ್ಪತ್ತಿಗೆ ಕಾರಣ ಎಂದರ್ಥ. ಇದನ್ನು 'ಆತ್ಮನಃ ಆಕಾಶಃ' ಎಂಬ ಪ್ರಕರಣ ವಿವರಿಸುತ್ತದೆ.

2. ಅಸ್ ಧಾತುವಿಗೆ 'ಇರುವು' ಎಂದರ್ಥ. ಇರುವು=ಜೀವನ. ಅದನ್ನು ಕೊಡುವುದರಿಂದ ಬ್ರಹ್ಮ ಸತ್ಯ. ನಮಗೆ ಜೀವನವನ್ನು ಕೊಡುವವ ಎಂದರ್ಥ. (ಅಸ್ ಧಾತುವಿನ ಶತೃ ಪ್ರತ್ಯಯಾಂತರೂಪ-ಸತ್)

3. 'ಸದ್' ಎಂಬ ಧಾತುವಿಗೆ 'ವಿಶರಣ-ನಾಶ' ಎಂಬ ಅರ್ಥವಿದೆ. ಹೀಗಾಗಿ ಸತ್ಯ ಎಂದರೆ ನಾಶಕ-ಸಂಹಾರಕರ್ತಾ ಎಂದರ್ಥ.

ಈ ಎರಡು ಅರ್ಥಗಳನ್ನು ಅನ್ನಮಯ ಶಬ್ದ ಹೇಳುತ್ತದೆ. ಅನ್ನ ಶಬ್ದಕ್ಕೆ 'ಅದ್ಯತೇ ಅತ್ತಿ ಚ ಭೂತಾನಿ। ತಸ್ಮಾದನ್ನಂ ತದುಚ್ಯತ ಇತಿ'' ಎಂದು ಉಪನಿಷತ್ತು ವಿವರಣೆ ನೀಡಿದೆ. 'ಪರಮಾತ್ಮನನ್ನು ನಾವು ತಿನ್ನುತ್ತೇವೆ, ಅಂದರೆ ಆವನಿಂದಾಗಿ ನಾವಿದ್ದೇವೆ. ಹೀಗಾಗಿ ಅವನು ಅನ್ನ. ಅಥವಾ ಪರಮಾತ್ಮನು ನಮ್ಮನ್ನು ತಿನ್ನುತ್ತಾನೆ, ಅಂದರೆ ಪ್ರಲಯಕಾಲದಲ್ಲಿ ಸಂಹರಿಸುತ್ತಾನೆ. ಹೀಗಾಗಿ ಅವನು ಅನ್ನ.

ಹೀಗೆ ಅನ್ನಮಯಶಬ್ದ ಅನ್ನಮಯಕೋಶದಲ್ಲಿರುವ ಅನಿರುದ್ಧರೂಪಿಯಾದ ಪರಮಾತ್ಮ ನಮಗೆ ಜೀವನಪ್ರದ ಹಾಗೂ ಸಂಹಾರಕ ಎಂಬ ಎರಡು ಅರ್ಥಗಳನ್ನು ವಿವರಿಸುತ್ತದೆ.

4. ಸದ್ ಧಾತುವಿಗೆ ಗತಿ ಎಂಬ ಅರ್ಥವಿದೆ. ಗತಿ ಎಂದರೆ ಗಮನ-ಚೇಷ್ಟಾ-ಕ್ರಿಯಾಶಕ್ತಿ. ಅದನ್ನು ಕೊಡುವವ ಸತ್ಯ. ಹೀಗೆ ಸತ್ಯ ಶಬ್ದ 'ನಮಗೆ ಕ್ರಿಯಾಶಕ್ತಿ ನೀಡುವವನು' ಎಂಬ ಅರ್ಥವನ್ನು ಕೊಡುತ್ತದೆ. ಅದನ್ನು ಪ್ರಾಣಮಯ ಪ್ರಕರಣ ವಿವರಿಸುತ್ತದೆ. ಅಲ್ಲಿ ''ಪ್ರಾಣಂ ದೇವಾ ಅನು ಪ್ರಾಣಂತಿ । ಮನುಷ್ಯಾಃ ಪಶವಶ್ಚ ಯೇ ।

ಪ್ರಾಣೋ ಹಿ ಭೂತಾನಾಮಾಯುಃ ॥'' ಎಂದು ನಮ್ಮ ಬದುಕಿಗೆ ಪ್ರಾಣನಾಮಕ ಪ್ರದ್ಯುಮ್ನನೇ ಕಾರಣ ಎಂದು ಹೇಳಲಾಗಿದೆ. ಇದರಿಂದ ಹಿಂದೆ ಹೇಳಿದ ಜೀವನಪ್ರದತ್ವವನ್ನು ವಿವರಿಸಿದಂತಾಯಿತು. ಹೀಗೆ ಪ್ರಾಣಮಯಕೋಶದಲ್ಲಿರುವ ಪ್ರದ್ಯುಮ್ನ ಸತ್ಯಶಬ್ದಾರ್ಥವಾದ ಜೀವನ ಮತ್ತು ಕ್ರಿಯಾಶಕ್ತಿಯನ್ನು ನೀಡುತ್ತಾನೆ.

5. ಜ್ಞಾನ ಶಬ್ದಕ್ಕೆ ಸಕಲವಸ್ತುಗಳ ಸಾಮಾನ್ಯ ಜ್ಞಾನರೂಪ ಎಂದರ್ಥ. 'ಮನಃ' ಎಂಬ ಪದ 'ಮನು ಅವಬೋಧನೇ' ಎಂಬ ಧಾತುವಿನಿಂದಾಗಿದೆ. ಆದ್ದರಿಂದ ಅದಕ್ಕೆ ಜ್ಞಾನರೂಪ ಎಂದೇ ಅರ್ಥ. ಹೀಗೆ ಜ್ಞಾನ ಪದದ ವಿವರಣೆ ಮನೋಮಯ ಪ್ರಕರಣದಲ್ಲಿ ಬಂದಿದೆ. ಮನೋಮಯ ಕೋಶದಲ್ಲಿರುವ ಸಂಕರ್ಷಣ ಮನೋಮಯ ಪದವಾಚ್ಯನಾಗಿದ್ದಾನೆ.

6. ಜ್ಞಾನ ಶಬ್ದದ ಇನ್ನೊಂದು ಅರ್ಥ ಸಕಲವಸ್ತುಗಳ ವಿಶೇಷ ಜ್ಞಾನರೂಪ ಎಂದು. ಅದನ್ನು ವಿಜ್ಞಾನಮಯಪ್ರಕರಣ ವಿವರಿಸುತ್ತಿದೆ. ವಿಜ್ಞಾನಮಯ ಕೋಶದಲ್ಲಿರುವ ವಾಸುದೇವ ವಿಶೇಷ ಜ್ಞಾನರೂಪ ಎಂದು ಆ ಪ್ರಕರಣದ ಭಾವ.

7. 'ಅನಂತ' ಎಂಬ ಪದ ಹೇಳಿದ ದೇಶ-ಕಾಲ-ಗುಣಗಳ ಅಪರಿಮಿತಿಯನ್ನು ಆನಂದಮಯ ಪ್ರಕರಣ ಸಮರ್ಥಿಸುತ್ತದೆ. ಆನಂದಮಯನಾದ ಜೀವಾತ್ಮನಲ್ಲಿರುವ ನಾರಾಯಣ ಆನಂದಪೂರ್ಣನಾದುದರಿಂದ ಅನಂತ ಎಂದು ಆ ಪ್ರಕರಣದ ಭಾವ.

ಹೀಗೆ ಒಟ್ಟು ಆರು ಪ್ರಕರಣಗಳಲ್ಲಿ ಬ್ರಹ್ಮನ ಏಳು ಲಕ್ಷಣಗಳನ್ನು ಸಮನ್ವಯ ಮಾಡಲಾಗಿದೆ.

**ನಚಾವಯತ್ವವಿರೋಧಃ। ''ಸ ಶಿರಃ, ಸ ದಕ್ಷಿಣಃ ಪಕ್ಷಃ, ಸ ಉತ್ತರಃ ಪಕ್ಷಃ, ಸ ಆತ್ಮಾ, ಸ ಪುಚ್ಛಂ'' ಇತಿ ತಸ್ಯೈವ ಅವಯವತ್ವೋಕ್ತೇಃ ಚತುರ್ವೇದ ಶಿಖಾಯಾಂ।**

**ಶಿರೋ ನಾರಾಯಣಃ ಪಕ್ಷೋ ದಕ್ಷಿಣಃ ಸವ್ಯ ಏವ ಚ।**
**ಪ್ರದ್ಯುಮ್ನಶ್ಚಾನಿರುದ್ಧಶ್ಚ ಸಂದೋಹೋ ವಾಸುದೇವಕಃ ॥**
**ನಾರಾಯಣೋಽಥ ಸಂದೋಹೋ ವಾಸುದೇವಃ ಶಿರೋಽಪಿ ವಾ।**
**ಪುಚ್ಛಂ ಸಂಕರ್ಷಣಃ ಪ್ರೋಕ್ತ ಏಕ ಏವ ತು ಪಂಚಧಾ ॥**
**ಅಂಗಾಂಗಿತ್ವೇನ ಭಗವಾನ್ ಕ್ರೀಡತೇ ಪುರುಷೋತ್ತಮಃ।**
**ಐಶ್ವರ್ಯಾತ್ ನ ವಿರೋಧಶ್ಚ ಚಿಂತ್ಯಸ್ತಸ್ಮಿನ್ ಜನಾರ್ದನೇ।**
**ಅತರ್ಕ್ಯೇ ಹಿ ಕುತಸ್ತರ್ಕಸ್ತ್ವಪ್ರಮೇಯೇ ಕುತಃ ಪ್ರಮಾ ॥**

**ಇತಿ ಬೃಹತ್ಸಂಹಿತಾಯಾಂ।**

ಬ್ರಹ್ಮನು ಆನಂದಮಯನ ಅವಯವವೆಂದು ಹೇಳಿರುವುದು 'ಆನಂದಮಯ ಬ್ರಹ್ಮ' ಎನ್ನಲು ಬಾಧಕವಲ್ಲ. ಏಕೆಂದರೆ ಚತುರ್ವೇದ ಶಿಖಾ ಎಂಬ ಗ್ರಂಥದಲ್ಲಿ 'ಪರಮಾತ್ಮ ತಾನೇ ತನ್ನ ತಲೆ, ಬಲಭಾಗ, ಎಡಭಾಗ, ಮಧ್ಯದೇಹ, ಪಾದ' ಹೀಗೆ ಪರಮಾತ್ಮನೇ

ಪರಮಾತ್ಮನ ಅವಯವರೂಪ ಎಂದು ಹೇಳಲಾಗಿದೆ. ಬೃಹತ್ಸಂಹಿತೆಯೂ ಹೀಗೆ ಹೇಳಿದೆ- 'ನಾರಾಯಣನೇ ತಲೆ, ಎಡಬಲ ತೋಳು ಪ್ರದ್ಯುಮ್ನ ಮತ್ತು ಅನಿರುದ್ಧ. ವಾಸುದೇವ ದೇಹದ ಮಧ್ಯಭಾಗ. ಅಥವಾ, ನಾರಾಯಣ ಮಧ್ಯಭಾಗ, ವಾಸುದೇವ ತಲೆ. ಸಂಕರ್ಷಣ ಪಾದ. ಹೀಗೆ ಪರಮಾತ್ಮ ಒಬ್ಬನೇ ಆದರೂ ಪಂಚರೂಪವನ್ನು ತಾಳಿ ಕ್ರೀಡಿಸುತ್ತಾನೆ. ಅವನಲ್ಲಿ ಅಚಿಂತ್ಯ ಅದ್ಭುತ ಶಕ್ತಿ ಇರುವುದರಿಂದ ವಿರೋಧದ ಸಂಶಯವನ್ನೇ ಪಡಬಾರದು. ಅವನು ತರ್ಕಕ್ಕೆ ದೂರ. ಜ್ಞಾನಕ್ಕೆ ಅವಿಷಯ. ಅಂದಮೇಲೆ ತರ್ಕದ, ಅನುಭವದ ವಿರೋಧವನ್ನು ಹೇಗೆ ಹೇಳಲಾದೀತು?''

**ವಿವರಣೆ :** ಆನಂದಮಯ ವಿಷ್ಣು ಎನ್ನಲು ಬರಬಹುದಾದ ತೊಂದರೆಯನ್ನು ಇಲ್ಲಿ ನಿರಾಕರಿಸಲಾಗಿದೆ. ಆನಂದಮಯನ ವಿವಿಧ ಅವಯವಗಳನ್ನು ನಿರೂಪಿಸುತ್ತಾ ಉಪನಿಷತ್ತು ''ಬ್ರಹ್ಮ ಪುಚ್ಛಂ ಪ್ರತಿಷ್ಠಾ'' ಎಂದು ಆನಂದಮಯನ ಪಾದ ಬ್ರಹ್ಮ ಎಂದಿದೆ. ಪಾದವು ಬ್ರಹ್ಮನಾದ ಮೇಲೆ ಆನಂದಮಯ ಬ್ರಹ್ಮನಾಗುವುದು ಹೇಗೆ? ಎಂದು ಪ್ರಶ್ನೆ. ಭಗವಂತ ನಾನಾರೂಪಗಳನ್ನು ತಾಳಿ ತಾನೇ ತನ್ನ ವಿವಿಧ ಅಂಗಾಂಗಗಳಾಗಿ ಕಾಣಿಸಿಕೊಳ್ಳುತ್ತಾನೆ. ಆದ್ದರಿಂದ ಆನಂದಮಯನೂ ಬ್ರಹ್ಮ. ಅವನ ಪಾದವೂ ಬ್ರಹ್ಮ ಎಂದು ಉತ್ತರ.

**ರಸಶಬ್ದೇನ ವಿಶೇಷಣಾತ್ ತತ್ತತ್ಸಾರಭೂತಂ ಚಿನ್ಮಾತ್ರಮೇವ ಉಚ್ಯತೇ । ಇದಮಿತಿ ಚ ದೃಶ್ಯಮಾನ ಸನ್ನಿಹಿತತ್ವಾತ್ ।**

**ಅನನ್ಯೋಽಪ್ಯನ್ಯಶಬ್ದೇನ ತಥೈಕೋ ಬಹುರೂಪವಾನ್ ।**
**ಪ್ರೋಚ್ಯತೇ ಭಗವಾನ್ ವಿಷ್ಣುರೈಶ್ವರ್ಯಾತ್ ಪುರುಷೋತ್ತಮಃ ।**

**ಇತಿ ಬ್ರಹ್ಮಾಂಡ ಪುರಾಣೇ ॥ 15 ॥**

'ಸ ವಾ ಏಷ ಪುರುಷೋಽನ್ನರಸಮಯಃ' ಎಂಬಲ್ಲಿ 'ರಸ' ಎಂಬ ವಿಶೇಷಣವನ್ನು ನೀಡಿರುವುದರಿಂದ ಹಿಂದೆ ಆಕಾಶಾದಿಶಬ್ದಗಳ ಅರ್ಥಗಳಲ್ಲಿ ಸಾರವಾದ ಶುದ್ಧಚೇತನರೂಪನಾದ ಪರಮಾತ್ಮನನ್ನೇ ''ಸಃ'' ಎಂಬ ಪದದಿಂದ ಪರಾಮರ್ಶ ಮಾಡಿಕೊಳ್ಳಬೇಕು.

ಅನಿರುದ್ಧರೂಪೀ ಪರಮಾತ್ಮನ ತಲೆ ಮೊದಲಾದ ಅವಯವಗಳು ಪ್ರತ್ಯಕ್ಷವಾಗಿ ಕಾಣದಿದ್ದರೂ, ಪ್ರತ್ಯಕ್ಷವಾಗಿ ಕಾಣುವ ನಮ್ಮ ಈ ಅವಯವಗಳಲ್ಲಿ ಅವನ ಅವಯವಗಳೂ ಸನ್ನಿಹಿತವಾಗಿರುವುದರಿಂದ ''ತಸ್ಯೇದಮೇವ ಶಿರಃ'' ಇತ್ಯಾದಿಯಾಗಿ 'ಇದಂ' ಎಂಬ ನಿರ್ದೇಶ ಉಪಪನ್ನವಾಗುತ್ತದೆ. ಅಂತೆಯೇ ''ಪರಮಾತ್ಮನು ಅನೇಕ ರೂಪಗಳಲ್ಲಿ ಅಭಿನ್ನನಾದರೂ ಭೇದವಾಚಕವಾದ ಅನ್ಯಶಬ್ದದಿಂದ ಹೇಳಲ್ಪಡುತ್ತಾನೆ. ಅದರಂತೆ, ಒಬ್ಬನೇ ಆದರೂ 'ಅನೇಕ' ಎಂದೂ ಅವನನ್ನು ಹೇಳಲಾಗುತ್ತದೆ. ಇದೆಲ್ಲ ಅವನ ಅದ್ಭುತ ಸಾಮರ್ಥ್ಯದಿಂದ ಕೂಡುತ್ತದೆ'' ಹೀಗೆ ಬ್ರಹ್ಮಾಂಡಪುರಾಣ ಹೇಳುತ್ತಿರುವುದರಿಂದ ಅನ್ನ ಮಯಾದಿರೂಪಗಳಲ್ಲಿ ''ಅನ್ಯೋಽಂತರ ಆತ್ಮಾ'' ಇತ್ಯಾದಿ ಪ್ರಯೋಗಗಳು ಬಾಧಕಗಳಲ್ಲ.

**ವಿವರಣೆ :** ಅನ್ನಮಯ ಪ್ರಕರಣ ಪ್ರಾರಂಭದ ''ಸ ವಾ ಏಷ ಪುರುಷಃ'' ಎಂಬ ವಾಕ್ಯದಲ್ಲಿ 'ಸಃ' ಎಂದರೆ ಆಕಾಶಾದಿಗಳಿಗೆ ಕಾರಣನಾದ ಆತ್ಮ ಎಂದು ಹೇಳಲಾಗಿದೆ. ಆದರೆ, ಇದು ಸರಿಯಲ್ಲ. ಈ ವಾಕ್ಯದ ಅವ್ಯವಹಿತಪೂರ್ವದಲ್ಲಿ ಪ್ರಸ್ತುತನಾದವನು ಪುರುಷ. ಆತ್ಮ ಅದಕ್ಕೂ ಹಿಂದೆ ಪ್ರಸ್ತುತನಾಗಿದ್ದಾನೆ. ಇವೆರಡರಲ್ಲಿ ಪುರುಷನನ್ನೇ ''ಸಃ'' ಎಂಬ ಪದದಿಂದ ಪರಾಮರ್ಶೆ ಮಾಡಿಕೊಳ್ಳಬೇಕು. ಆಗ ಈ ದೇಹವೇ ಅನ್ನಮಯ ಎಂದಂತಾಗುತ್ತದೆ. ಹೊರತು, ಪರಮಾತ್ಮನಲ್ಲ. ಆದ್ದರಿಂದ ಅನ್ನಮಯ ಆತ್ಮನಾಗುವುದು ಹೇಗೆ? ಈ ಆಕ್ಷೇಪಕ್ಕೆ ಆಚಾರ್ಯರು ನೀಡಿದ ಉತ್ತರ- ವಸ್ತುತಃ 'ಆತ್ಮನಃ ಆಕಾಶಃ ಸಂಭೂತಃ' ಎಂದು ಆತ್ಮ ಪ್ರಾರಂಭದಲ್ಲಿ ಪ್ರಸ್ತುತನಾಗಿದ್ದಾನೆ. ಇಲ್ಲಿ ಆತ್ಮನಿಂದ ಆಕಾಶದ ಸೃಷ್ಟಿ ಎಂದರೆ ಕೇವಲ ಜಡವಾದ ಭೂತವಸ್ತುವಿನ ಸೃಷ್ಟಿ ಮಾತ್ರವಲ್ಲ. ಜಡವಾದ ಆಕಾಶದ ಜೊತೆಯಲ್ಲಿ, ಅದಕ್ಕೆ ಅಭಿಮಾನಿದೇವತೆ, ಅವನ ದೇಹ, ಆ ದೇವತೆಯೊಳಗೆ ನಿಯಾಮಕನಾಗಿ ಭಗವಂತ, ಈ ಮೂರರ ಸೃಷ್ಟಿಯನ್ನೂ ತಿಳಿದುಕೊಳ್ಳಬೇಕು. ಹೀಗೆ ಆತ್ಮನಿಂದ ಪಂಚಭೂತಗಳು, ಗಿಡಮರಗಳು, ಅನ್ನ- ಅದರಿಂದ ಪುರುಷ ಈ ಎಲ್ಲ ಸೃಷ್ಟಿಯಲ್ಲೂ ಆತ್ಮನ ರೂಪದ ಸೃಷ್ಟಿಯೂ ಹೇಳಲ್ಪಟ್ಟಿದೆ. ಆದ್ದರಿಂದ ಕೊನೆಯದಾದ 'ಅನ್ನಾತ್ ಪುರುಷಃ' ಎಂದರೆ ಅನ್ನದಿಂದ ಮನುಷ್ಯದೇಹ, ಅದರೊಳಗೆ ಜೀವ, ಇದರ ಅಭಿಮಾನಿ ಬ್ರಹ್ಮದೇವ, ಅವನೊಳಗೆ ನಿಯಾಮಕ ಪರಮಾತ್ಮ ಇವಿಷ್ಟೂ ಸೃಷ್ಟಿಗೊಂಡಿವೆ. ಹೀಗೆ ಅನ್ನಮಯಪ್ರಕರಣದ ಅವ್ಯವಹಿತ ಪೂರ್ವದಲ್ಲಿ ಪುರುಷಪದದಿಂದ ಈ ನಾಲ್ಕೂ ಪ್ರಸ್ತುತವಾಗಿವೆ. ಅವುಗಳಲ್ಲಿ ಒಂದನ್ನು ಮಾತ್ರ, ಅಂದರೆ ಆತ್ಮನನ್ನು ''ಸಃ'' ಎಂದು ಪರಾಮರ್ಶ ಮಾಡಿಕೊಳ್ಳಲಾಗಿದೆ. ಏಕೆಂದರೆ, 'ಸ ವಾ ಏಷ ಪುರುಷೋಽನ್ನರಸಮಯಃ'' ಎಂಬಲ್ಲಿ 'ರಸ' ಶಬ್ದವಿದೆ. ರಸಶಬ್ದಕ್ಕೆ ಸಾರಭೂತನಾದವನು ಎಂದರ್ಥ. ಹಿಂದೆ ಪುರುಷಶಬ್ದದಲ್ಲಿ ಪ್ರಸ್ತುತವಾದ ನಾಲ್ಕು ಅರ್ಥಗಳಲ್ಲಿ ಸಾರಭೂತವಾದುದು ಆತ್ಮತತ್ತ್ವ. ಆದ್ದರಿಂದ ಅದನ್ನೇ 'ಸಃ' ಎಂಬ ಶಬ್ದದಿಂದ ಪರಾಮರ್ಶ ಮಾಡಿಕೊಳ್ಳಬೇಕು.

2. ಅನ್ನಮಯ ಪರಮಾತ್ಮ ಎನ್ನಲು ಇನ್ನೊಂದು ತೊಡಕಿದೆ. ಅನ್ನಮಯನ ಅವಯವಗಳನ್ನು ಪರಿಚಯಿಸುತ್ತಾ ಉಪನಿಷತ್ತು- 'ತಸ್ಯೇದಮೇವ ಶಿರಃ' ಎಂದಿದೆ. ಇಲ್ಲಿ ಇದಂ ಎಂದರೆ 'ಇದು - ಅರ್ಥಾತ್ ಕಣ್ಣಿಗೆ ಕಾಣುವ' ಎಂದರ್ಥ. ನಮ್ಮ ಈ ಸ್ಥೂಲದೇಹವೇ ಅನ್ನಮಯವಾದರೆ ಅದರ ಶಿರೋಭಾಗವೇ ಮೊದಲಾದ ಅವಯವಗಳು ಕಣ್ಣಿಗೆ ಕಾಣುತ್ತಿರುವುದರಿಂದ ಅದನ್ನು 'ಇದು' ಎಂದು ನಿರ್ದೇಶಮಾಡಬಹುದು. ಅನ್ನಮಯ ಈ ದೇಹದೊಳಗಿರುವ ಅನಿರುದ್ಧರೂಪಿಯಾದ ಆತ್ಮನಾದರೆ ಅವನು ಕಾಣದಿರುವುದರಿಂದ 'ಇದಂ' ಎಂಬ ನಿರ್ದೇಶ ಹೇಗೆ?

ಇದಕ್ಕೆ ಆಚಾರ್ಯರಿತ್ತ ಸಮಾಧಾನ ಹೀಗೆ - ನಮ್ಮ ಕಾಲು ಬಟ್ಟೆಯ ಒಳಗಿದ್ದರೂ ಕಾಲಿಗೆ ಮುಚ್ಚಿರುವ ಬಟ್ಟೆಯನ್ನೇ ತೋರಿಸಿ ''ಇದು ನನ್ನ ಕಾಲು'' ಎನ್ನುತ್ತೇವೆ. ಅದರಂತೆ

ಕಾಣುವ ಈ ದೇಹದ ಅವಯವಗಳೊಳಗೆ ಅನಿರುದ್ಧರೂಪಿಯಾದ ಪರಮಾತ್ಮನ ಅವಯವಗಳಿರುವುದರಿಂದ ಅವನ ಅವಯವಗಳನ್ನು ''ಇದಂ'' ಎಂದು ಹೇಳಬಹುದು.

3. ಇನ್ನು ಅನ್ನಮಯಾದಿ ಪಂಚ ಪ್ರಕರಣಗಳಲ್ಲಿ ಒಂದಕ್ಕೆ ಮತ್ತೊಂದು ಆತ್ಮ, ಅಂದರೆ ಅನ್ನಮಯ ಶರೀರ. ಅದರ ಆತ್ಮದಂತೆ ಪ್ರಾಣಮಯ. ಪ್ರಾಣಮಯ ಶರೀರವಾದರೆ ಮನೋಮಯ ಆತ್ಮ. ಹೀಗೆ ಮೊದಲನೆಯದು ಮುಂದಿನದ್ದಕ್ಕೆ ಶರೀರ, ಮುಂದಿನದು ಆತ್ಮ ಎನ್ನಲಾಗಿದೆ. ಅನ್ನಮಯಾದಿಗಳು ಕೋಶವಾದರೆ ಈ ಶರೀರ–ಶರೀರಿ ಸಂಬಂಧವನ್ನು ಹೇಳಬಹುದು. ಪರಮಾತ್ಮನಾದರೆ ಅದ್ವಿತೀಯನಾದ ಅವನಲ್ಲಿ ಈ ಶರೀರಾತ್ಮಭಾವ, ಭೇದಗಳನ್ನು ಹೊಂದಿಸುವುದು ಹೇಗೆ? ಎಂಬ ಪ್ರಶ್ನೆಗೆ ಆಚಾರ್ಯರು ಪ್ರಮಾಣಪುರಸ್ಸರ ವಾಗಿ ಪರಮಾತ್ಮನಲ್ಲಿ ರೂಪಭೇದದಿಂದ ಅವೆಲ್ಲವನ್ನು ಹೊಂದಿಸಿಕೊಳ್ಳಬೇಕು ಎಂದಿದ್ದಾರೆ. ||15||

**ನ ಚೋಕ್ತಪ್ರಾಪ್ತ್ಯಾ ವಿರಿಂಚಾದಿರುಚ್ಯತೇ ।**

### ಓಂ || ನೇತರೋಽನುಪಪತ್ತೇಃ ||ಓಂ

**ನ ಹ್ಯನ್ಯಜ್ಞಾನಾತ್ ಮೋಕ್ಷಃ ಉಪಪದ್ಯತೇ। ''ತಮೇವಂ ವಿದ್ವಾನಮೃತ ಇಹ ಭವತಿ ನಾನ್ಯಃ ಪಂಥಾ ಅಯನಾಯ ವಿದ್ಯತೇ'' (ತೈ.ಆ.3-12-7) ಇತಿ ಹ್ಯುಕ್ತಮ್ || 16 ||**

ಹಿಂದೆ ಹೇಳಿದ ಯುಕ್ತಿಗಳಿಂದ, ಚತುರ್ಮುಖಾದಿಗಳೇ ಅನ್ನಮಯಾದಿ ಶಬ್ದಗಳಿಂದ ಪ್ರತಿಪಾದ್ಯರು ಎನ್ನುವುದು ಸಮಂಜಸವಲ್ಲ. ಏಕೆಂದರೆ ಈ ಪ್ರಕರಣದ ಪ್ರಾರಂಭದಲ್ಲಿ 'ಬ್ರಹ್ಮವಿದಾಪ್ನೋತಿ ಪರಂ' ಎಂದು ಬ್ರಹ್ಮಜ್ಞಾನದಿಂದ ಮೋಕ್ಷವನ್ನು ಹೇಳಲಾಗಿದೆ. ಬ್ರಹ್ಮೇತರರಾದ ಚತುರ್ಮುಖಾದಿಗಳನ್ನು ನಿರೂಪಿಸಿದರೆ ಅವರ ಜ್ಞಾನವೂ ಮೋಕ್ಷ ಕಾರಣವೆಂದಂತಾದೀತು. ಆದರೆ ತೈತ್ತಿರೀಯ ಆರಣ್ಯಕದಲ್ಲಿ ''ಪರಮಾತ್ಮ ಜ್ಞಾನದಿಂದಲೇ ಮೋಕ್ಷ; ಇತರ ಜ್ಞಾನದಿಂದ ಮೋಕ್ಷವಿಲ್ಲ'' ಎಂದು ನಿಷೇಧಿಸಲಾಗಿದೆ. ಆದ್ದರಿಂದ ಅನ್ನಮಯಾದಿಗಳು ಚತುರ್ಮುಖಾದಿಗಳಲ್ಲ. || 16 ||

### ಓಂ || ಭೇದವ್ಯಪದೇಶಾಚ್ಚ || ಓಂ

**'ತೇ ಯೇ ಶತಂ ಪ್ರಜಾಪತೇರಾನಂದಾಃ (ತೈ. 2.8) 'ಅದೃಶ್ಯೇಽ-ನಾತ್ಮ್ಯೇಽನಿರುಕ್ತೇಽನಿಲಯನೇಽಭಯಂ ಪ್ರತಿಷ್ಠಾಂ ವಿಂದತೇ । ಅಥ ಸೋಽಭಯಂ ಗತೋ ಭವತಿ' (ತೈ. 2.7) 'ಸ ಯಶ್ಚಾಯಂ ಪುರುಷೇ' ಇತ್ಯಾದಿ ಭೇದವ್ಯಪದೇಶಾತ್।**

ಆನಂದಮಯ ಪ್ರಕರಣದಲ್ಲಿ ಚತುರ್ಮುಖನಿಗೆ ರುದ್ರನ ಆನಂದಕ್ಕಿಂತ

ನೂರುಪಟ್ಟು ಹೆಚ್ಚು ಆನಂದ ಎಂದು ಹೇಳಿ ಬ್ರಹ್ಮನ ಆನಂದ ಅಪರಿಮಿತವಾದುದು ಎನ್ನಲಾಗಿದೆ. ಹೀಗೆ ಚತುರ್ಮುಖಾದಿಗಳಿಗೆ ಆನಂದದ ಪರಿಮಿತಿ ಇರುವುದರಿಂದ ಅವರಾರೂ ಆನಂದಮಯರಲ್ಲ.

ಆನಂದಮಯನನ್ನು ತಿಳಿದವನು ''ಅದೃಶ್ಯನಾದ, ಸ್ವತಂತ್ರನಾದ, ಶಬ್ದಾಗೋಚರನಾದ, ಪರಾಶ್ರಿತನಲ್ಲದ ಪರಮಾತ್ಮನ ಧ್ಯಾನದ ಏಕಾಗ್ರತೆಯನ್ನು ನಿರ್ಭೀತನಾಗಿ ಪಡೆಯುತ್ತಾನೆ. ಅನಂತರ ಅಭಯರೂಪನಾದ ಪರಮಾತ್ಮನ ಬಳಿಗೆ ಹೋಗುತ್ತಾನೆ'' ಎನ್ನಲಾಗಿದೆ. ಇಂತಹ ಗುಣಗಳು ಪ್ರಕೃತ್ಯಾದಿಗಳಲ್ಲಿ ಅಸಂಭಾವಿತವಾದುದರಿಂದ ಅವಾವುದೂ ಆನಂದಮಯಗಳಲ್ಲ.

ಅಲ್ಲದೆ, 'ಸ ಯಶ್ಚಾಯಂ ಪುರುಷೇ' ಇತ್ಯಾದಿಯಾಗಿ 'ಆನಂದಮಯ ಉತ್ಕೃಷ್ಟ-ಅಪಕೃಷ್ಟ ಸಕಲಚೇತನಗಳಲ್ಲೂ ನೆಲೆಸಿದ್ದಾನೆ' ಎನ್ನಲಾಗಿದೆ. ಇದು ವಿರಿಂಚಾದಿಗಳಲ್ಲಿ ಇರಲು ಸಾಧ್ಯವಿಲ್ಲ.

ಮೇಲೆ ಹೇಳಿದ ಈ ಮೂರು ಕಾರಣಗಳಿಂದ ಆನಂದಮಯಾದಿ ಶಬ್ದಗಳು ಇತರರಿಗೆ ಸಲ್ಲುವುದಿಲ್ಲ.

**ವಿವರಣೆ :** ಆನಂದಮಯ ಪ್ರಕರಣದಲ್ಲಿ ಮನುಷ್ಯೋತ್ತಮರಿಂದ ಪ್ರಾರಂಭಿಸಿ ದೇವತೋತ್ತಮನಾದ ಚತುರ್ಮುಖ ಬ್ರಹ್ಮನವರೆಗೆ ಆನಂದದ ತಾರತಮ್ಯವನ್ನು ಹೇಳಿ ಕೊನೆಯಲ್ಲಿ 'ಯತೋ ವಾಚೋ ನಿವರ್ತಂತೇ ಅಪ್ರಾಪ್ಯ ಮನಸಾ ಸಹ । ಆನಂದಂ ಬ್ರಹ್ಮಣೋ ವಿದ್ವಾನ್' ಎಂದು ಬ್ರಹ್ಮನ ಆನಂದ ಅಪರಿಮಿತವಾದುದು ಎನ್ನಲಾಗಿದೆ. ಇದರಿಂದ ಉಳಿದ ಯಾವ ದೇವತೆಗಳೂ ಆನಂದಮಯರಲ್ಲ ಎಂದು ತಿಳಿಯಬಹುದು. ಇದಲ್ಲದೆ ಬ್ರಹ್ಮನಲ್ಲೇ ಇರುವ ಅನೇಕ ಗುಣಗಳನ್ನು ಆನಂದಮಯನಲ್ಲಿ ಹೇಳಲಾಗಿದೆ.

ಸೂತ್ರದಲ್ಲಿ ಭೇದವೆಂದರೆ ಭೇದಕ್ಕೆ ಕಾರಣವಾದ ಅಸಾಧಾರಣ ಧರ್ಮ. ಅದನ್ನು ಹೇಳಿರುವುದರಿಂದಲೂ ಆನಂದಮಯ ಬ್ರಹ್ಮನೆಂದು ಅರ್ಥ.

**ನ ಚ 'ತತ್ತ್ವಮಸಿ (ಛಾಂ.ಉ. 6-8) 'ಅಹಂ ಬ್ರಹ್ಮಾಸ್ಮಿ' (ಬೃ.ಉ.3.4.10) ಇತ್ಯಾದಿ ಶ್ರುತಿವಿರೋಧಃ । ''ನಾಮಾನಿ ಸರ್ವಾಣಿ ಯಮಾವಿಶಂತಿ' (ಭಾಲ್ಲವೇಯಶ್ರುತಿ) ಇತಿ ತತ್ತಚ್ಛಬ್ದವಾಚ್ಯತ್ವೋಕ್ತೇಃ।**

**ಇದಂ ಹಿ ವಿಶ್ವಂ ಭಗವಾನಿವೇತರೋ ಯತೋ ಜಗತ್‌ಸ್ಥಾನ ನಿರೋಧಸಂಭವಃ। (ಭಾಗ.) 'ಅಸರ್ವಃ ಸರ್ವ ಇತ್ಯಪಿ' (ತುರಶ್ರುತಿ) 'ವಿದ್ಯಾತ್ಮನಿ ಭಿದಾ ಬೋಧಃ' (ಭಾಗ) 'ಭೇದದೃಷ್ಟ್ಯಾಭಿಮಾನೇನ ನಿಃಸಂಗೇನಾಪಿ ಕರ್ಮಣಾ' । (ಭಾಗ) ''ಜುಷ್ಟಂ ಯದಾ ಪಶ್ಯತ್ಯನ್ಯಮೀಶಮಸ್ಯ ಮಹಿಮಾನಮಿತಿ ವೀತಶೋಕಃ ॥ (ಮುಂ.ಉ.3-1-2) 'ಅಸರ್ವಃ ಸರ್ವ**

ಇವಾತ್ಮೈವ ಸನ್ನನಾತ್ಮೇವ ಪ್ರತ್ಯಙ್‌ಪರಾಙಿವೈಕ ಈಯತೇ ಬಹುಧೇಯತೇ। 'ಸ ಪುರುಷಃ, ಸ ಈಶ್ವರಃ ಸ ಬ್ರಹ್ಮ'।

''ಸರ್ವಾಂತರ್ಯಾಮಿಕೋ ವಿಷ್ಣುಃ ಸರ್ವನಾಮ್ನಾಽಭಿಧೀಯತೇ।

ಏಷೋಽಹಂ ತ್ವಮಸೌ ಚೇತಿ ನ ತು ಸರ್ವಸ್ವರೂಪತಃ''

'ನೈತದಿಚ್ಛಂತಿ ಪುರುಷಂ ಏಕಂ ಕುರುಕುಲೋದ್ವಹ'' (ಮೋಕ್ಷಧರ್ಮ)

ಇತ್ಯಾದೇಶ್ಚ। ಉಕ್ತಾ ಚ ಪ್ರಾಪ್ತಿಃ। 'ಬ್ರಹ್ಮೈವ ಸನ್' (ಬೃ6.4) ಇತ್ಯಪಿ ಜೀವ ಏವ ಬ್ರಹ್ಮಶಬ್ದಃ। ಉಪಪದ್ಯತೇ ಚ ವಿರೋಧೇ। ಪ್ರಮಾದಾತ್ಮಕತ್ವಾದ್ ಬಂಧಸ್ಯ ವಿಮುಕ್ತತ್ವಂ ಚ ಯುಜ್ಯತೇ।

'ಮುಕ್ತಿರ್ಹಿತ್ವಾಽನ್ಯಥಾರೂಪಂ ಸ್ವರೂಪೇಣ ವ್ಯವಸ್ಥಿತಿಃ'।

ಇತಿ ಹಿ ಭಾಗವತೇ ॥ 17 ॥

ಆನಂದಮಯ ಬ್ರಹ್ಮ; ರುದ್ರಾದಿಗಳು ಅಲ್ಲ ಎನ್ನುವುದು ಶ್ರುತಿವಿರುದ್ಧ. 'ತತ್ತ್ವಮಸಿ' 'ಅಹಂ ಬ್ರಹ್ಮಾಸ್ಮಿ' ಮೊದಲಾದ ಶ್ರುತಿಗಳು ಎಲ್ಲ ಚೇತನರೂ ಒಂದೇ ಅರ್ಥಾತ್ ಬ್ರಹ್ಮ ಸ್ವರೂಪರು ಎನ್ನುತ್ತಿವೆ. ಅಂದಮೇಲೆ ಆನಂದಮಯ ರುದ್ರನಲ್ಲ ಎಂದು ನಿರಾಕರಿಸುವುದು ಹೇಗೆ? ಈ ಆಕ್ಷೇಪ ಸರಿಯಲ್ಲ. 'ವೇದದ ಸಕಲ ಶಬ್ದಗಳೂ ವಿಷ್ಣುವಾಚಕ' ಎಂಬ ಪ್ರಮಾಣ ವಾಕ್ಯದಿಂದ 'ತತ್ತ್ವಮಸಿ' ಮೊದಲಾದ ಶ್ರುತಿಗಳಲ್ಲಿರುವ ಎಲ್ಲ ಶಬ್ದಗಳೂ ವಿಷ್ಣುನಾಮಗಳು; ಆ ವಾಕ್ಯ ಅಭೇದವನ್ನು ಹೇಳುತ್ತಿಲ್ಲ.

ಅಥವಾ, ಐಕ್ಯಶ್ರುತಿಗಳು, ಬ್ರಹ್ಮನು ಎಲ್ಲದಕ್ಕೂ ಸ್ವಾಮಿಯಾದುದರಿಂದ 'ಎಲ್ಲವೂ ಅವನೇ' ಎನ್ನುತ್ತವೆ; ಹೊರತು ವಾಸ್ತವಾಭೇದನಿಮಿತ್ತದಿಂದಲ್ಲ.

ಪರಮಾತ್ಮನು ಈ ಜಗತ್ತಿಗಿಂತ ಭಿನ್ನನಾದರೂ ಅದರ ಸ್ಥಿತಿ-ಲಯ-ಉತ್ಪತ್ತಿಗಳಿಗೆ ಕಾರಣನಾದುದರಿಂದ ಈ ಜಗತ್ತೇ ಪರಮಾತ್ಮನೆಂದು ಹೇಳಲಾಗುತ್ತದೆ.

ಅಥವಾ, ಪರಮಾತ್ಮನು ಸರ್ವಾಂತರ್ಯಾಮಿಯಾದುದರಿಂದ ಸರ್ವಾತ್ಮನೆನಿಸ ಬಹುದು. ತುರಶ್ರುತಿಯಲ್ಲಿ ಹಾಗೆ ಹೇಳಿದೆ- ಪರಮಾತ್ಮನು ಸರ್ವಾತ್ಮಕನಲ್ಲದಿದ್ದರೂ (ಅಂತರ್ಯಾಮಿತ್ವ ಪ್ರಯುಕ್ತ) ಸರ್ವಾತ್ಮಕ.

''ಆತ್ಮನಲ್ಲಿ ಜೀವಭೇದಜ್ಞಾನವೇ ವಿದ್ಯೆ'' ಎಂದು ಭಾಗವತದ ಏಕಾದಶಸ್ಕಂಧದಲ್ಲಿ ''ವಿದ್ಯೆ ಯಾವುದು?'' ಎಂಬ ಉದ್ಧವನ ಪ್ರಶ್ನೆಗೆ ಉತ್ತರ ನೀಡಲಾಗಿದೆ. ಆದ್ದರಿಂದ 'ಭೇದಜ್ಞಾನ ಅನ್ಯಥಾಜ್ಞಾನ' ಎಂದು ತಿಳಿಯಬಾರದು.

''ಬ್ರಹ್ಮದೇವರು ಜೀವಪರಮಾತ್ಮನ ಭೇದಜ್ಞಾನದಿಂದ, ಪರಮಾತ್ಮನಲ್ಲಿ ಭಕ್ತ್ಯತಿಶಯದಿಂದ (ಅಭಿಮಾನೇನ-ಅಭಿತಃ ಹರೇಃ ಮಾನೇನ) ನಿಷ್ಕಾಮಕರ್ಮದಿಂದ ಸನಕಾದಿಗಳೊಂದಿಗೆ ಪರಮಾತ್ಮನನ್ನು ಹೊಂದುತ್ತಾರೆ'' (ಭಾಗವತ-ತೃ-ಸ್ಕಂಧ) ಇಲ್ಲಿ

ಭೇದಜ್ಞಾನ ಮೋಕ್ಷಕಾರಣವೆಂದು ಹೇಳಿರುವುದರಿಂದ ಅದು ಮಿಥ್ಯಾಜ್ಞಾನವಲ್ಲ.

''ಸರ್ವಸೇವ್ಯನಾದ ಪರಮಾತ್ಮನನ್ನು ಜೀವಭಿನ್ನನನ್ನಾಗಿ ತಿಳಿದು ಹಿಂದೆ ಹೇಳಿದಂತೆ ಅವನ ಮಹಿಮೆಯನ್ನೂ ಅರಿತುಕೊಂಡರೆ ಮುಕ್ತನಾಗುತ್ತಾನೆ''

''ಪರಮಾತ್ಮ ಸರ್ವಾತ್ಮಕನಲ್ಲದಿದ್ದರೂ ಸರ್ವಾತ್ಮಕನಾಗಿ, ಅಂತರ್ಯಾಮಿಯಾದರೂ ಅಂತರ್ಯಾಮಿಯಲ್ಲದವನಾಗಿ ದೇಹದೊಳಗಿದ್ದೂ ಹೊರಗಿರುವವನಾಗಿ ಹೇಗೆ ತಿಳಿಯಲ್ಪಡುವನೋ ಅದರಂತೆ ಒಬ್ಬನಾದರೂ ಅನೇಕನಾಗಿ ತಿಳಿಯಲ್ಪಡುತ್ತಾನೆ. ಅವನು ದೇಹವೆಂಬ ಪುರದಲ್ಲಿ ವಾಸಮಾಡುವುದರಿಂದ ಪುರುಷನಾಮಕನಾಗಿದ್ದಾನೆ. ಅವನು ಸರ್ವಸಮರ್ಥ. ಅವನೇ ಬ್ರಹ್ಮ''.

'ವಿಷ್ಣು ಸರ್ವಾಂತರ್ಯಾಮಿಯಾದುದರಿಂದ ''ಏಷಃ ಅಹಂ, ತ್ವಂ, ಅಸೌ'' ಇತ್ಯಾದಿ ಸರ್ವನಾಮಗಳಿಂದಲೂ ಅಭಿಧೇಯನಾಗಿದ್ದಾನೆ. ಹೊರತು, ಇದಕ್ಕೆ ಅವನು ಸರ್ವರಿಂದಲೂ ಅಭಿನ್ನನಾಗಿರುವುದು ಕಾರಣವಲ್ಲ.'

''ಕುರುಕುಲ ಸಂಭೂತನಾದ ಜನಮೇಜಯನೆ, ಆತ್ಮ ಒಬ್ಬನೇ ಎಂದು ಬಲ್ಲವರು ತಿಳಿಯುವುದಿಲ್ಲ.''

ಹೀಗೆ ಅನೇಕ ಪ್ರಮಾಣಗಳಿಂದ ಚೇತನಭೇದವೇ ಸಿದ್ಧವಾಗುತ್ತದೆ.

'ತತ್ತ್ವಮಸಿ' ಇತ್ಯಾದಿ ಶ್ರುತಿಗಳನ್ನು ಸರಿಯಾಗಿ ವಿಮರ್ಶೆ ಮಾಡದಿದ್ದಾಗ ಅಭೇದವು ಪ್ರಾಪ್ತವಾಗುತ್ತದೆ ಎಂದು ಹಿಂದೆಯೇ ಹೇಳಿದ್ದೇವೆ. ಆದ್ದರಿಂದ ಅಭೇದವನ್ನು ಶ್ರುತಿಗಳು ನಿಷೇಧಿಸುವುದು ಅಸಂಗತವಲ್ಲ.

'ಬ್ರಹ್ಮೈವ ಸನ್ ಬ್ರಹ್ಮಾಪ್ಯೇತಿ' ಎಂಬಲ್ಲಿ ಮೊದಲ ಬ್ರಹ್ಮಶಬ್ದಕ್ಕೆ ಜೀವ ಎಂದೇ ಅರ್ಥ. ಬ್ರಹ್ಮಶಬ್ದಕ್ಕೆ ಪರಬ್ರಹ್ಮ ಎಂಬ ಅರ್ಥವೇ ಮುಖ್ಯವಾದರೂ ವಿರೋಧವಿದ್ದಾಗ 'ಜೀವ' ಎಂಬ ಅಮುಖ್ಯಾರ್ಥವನ್ನು ಮಾಡಬಹುದು.

ಜೀವನಿಗಿರುವ ಸಂಸಾರಬಂಧ ಅಜ್ಞಾನ ನಿಮಿತ್ತಕವಾಗಿದ್ದು ಅಸ್ವಾಭಾವಿಕವಾದುದರಿಂದ ''ವಿಮುಕ್ತಶ್ಚ ವಿಮುಚ್ಯತೇ'' ಎಂದು ಹೇಳಿದಂತೆ ಸಂಸಾರದ ಅವಸ್ಥೆಯಲ್ಲೇ ಅವನಿಗೆ 'ವಿಮುಕ್ತತ್ವ'ವೂ ಕೂಡುತ್ತದೆ.

''ಅಸ್ವಾಭಾವಿಕ ರೂಪವನ್ನು ಕಳೆದುಕೊಂಡು ಸ್ವಾಭಾವಿಕ ರೂಪದಿಂದ ಇರುವುದೇ ಮುಕ್ತಿ'' ಹೀಗೆ ಭಾಗವತದಲ್ಲಿ ಇರುವುದರಿಂದ ಬಂಧವು ಜೀವಾತ್ಮರಿಗೆ ಅಸ್ವಾಭಾವಿಕವಾದುದು ಎಂದು ತಿಳಿಯುತ್ತದೆ.

**ವಿವರಣೆ : 1.** 'ಅಸರ್ವಃ ಸರ್ವ ಇವ' ಈ ಶ್ರುತಿಯಲ್ಲಿ 'ಸ ಪುರುಷಃ' ಎಂದು ಉಲ್ಲೇಖಿಸಿ 'ಪುರುಷ ಏವೇದಂ ಸರ್ವಂ' ಎಂದು ಪರಮಾತ್ಮನಿಗೆ ಸರ್ವಾತ್ಮಕತ್ವವನ್ನು ಹೇಳುವ ಪುರುಷಸೂಕ್ತವಾಕ್ಯವನ್ನು ಸೂಚಿಸಲಾಗಿದೆ. ಬ್ರಹ್ಮ ಶಬ್ದದಿಂದ 'ಸರ್ವಂ ಖಲ್ವಿದಂ

ಬ್ರಹ್ಮ'' ಎಂಬ ಛಾಂದೋಗ್ಯದ ವಾಕ್ಯವನ್ನು ಸೂಚಿಸಲಾಗಿದೆ. ಈ ವಾಕ್ಯಗಳಲ್ಲಿ ಬ್ರಹ್ಮ ಅಸರ್ವನಾದರೂ ಸರ್ವಾತ್ಮಕ ಎನ್ನಲಾಗಿದೆ ಎಂದು ಶ್ರುತಿಯ ಭಾವ.

**2.** 'ನೈತದಿಚ್ಛಂತಿ ಪುರುಷಂ' ಎಂಬುದು ಮಹಾಭಾರತದ ಮೋಕ್ಷ ಧರ್ಮಪರ್ವದಲ್ಲಿ ಬರುವ ಶ್ಲೋಕ. ಜನಮೇಜಯ-

ಬಹವಃ ಪುರುಷಾ ಬ್ರಹ್ಮನ್ ಉತಾಹೋ ಏಕ ಏವ ತು ||

ಎಂದು ಪುರುಷ ಬಹುತ್ವದ ಕುರಿತು ಪ್ರಶ್ನಿಸಿದಾಗ ಅದಕ್ಕೆ ಉತ್ತರವಾಗಿ ವೈಶಂಪಾಯನರು ಜ್ಞಾನಿಗಳು ಏಕಪುರುಷವಾದವನ್ನು ಒಪ್ಪುವುದಿಲ್ಲ ಎಂಬ ಉತ್ತರವನ್ನು ನೀಡಿದ್ದಾರೆ. ಈ ಸಂವಾದದಿಂದ ಚೇತನಬಹುತ್ವ ಸಿದ್ಧವಾಗುತ್ತದೆ.

**3.** ''ಶ್ರುತಿಯು ಅದ್ವೈತವನ್ನು ಪ್ರತಿಪಾದಿಸುವುದಿಲ್ಲವೆಂದಾದರೆ ಕೆಲವು ಶ್ರುತಿಗಳಲ್ಲಿ ಪುರಾಣಗಳಲ್ಲಿ ಅದನ್ನು ನಿಷೇಧ ಮಾಡಿರುವುದು ಹೇಗೆ? ನಿಷೇಧ ಮಾಡಬೇಕಾದರೆ ಅದು ತಿಳಿದಿರಬೇಕು ತಾನೆ?'' ಈ ಪ್ರಶ್ನೆಗೆ ಆಚಾರ್ಯರು ''ಉಕ್ತಾ ಚ ಪ್ರಾಪ್ತಿಃ'' ಎಂದು ಹೇಳಿದ್ದಾರೆ. ''ತತ್ತ್ವಮಸಿ'' ಎಂಬ ಶ್ರುತಿಯ ಪೂರ್ವಾಪರ ವಿಮರ್ಶೆ ಇಲ್ಲದಿದ್ದಾಗ ಆ ಶ್ರುತಿಯಿಂದ ಚೇತನಾಭೇದ ತಿಳಿಯುತ್ತದೆ. ಹೀಗೆ ಉಂಟಾದ ಅನ್ಯಥಾ ಜ್ಞಾನವನ್ನು ಭೇದ ಶ್ರುತಿ ನಿರಾಕರಿಸುತ್ತದೆ. ಆದ್ದರಿಂದ ಅಪ್ರಸಕ್ತನಿಷೇಧ ಪ್ರಸಂಗವಿಲ್ಲ.

**4.** ಬೃಹದಾರಣ್ಯಕ ಶ್ರುತಿಯಲ್ಲಿ ''ಬ್ರಹ್ಮೈವ ಸನ್ ಬ್ರಹ್ಮಾಪ್ಯೇತಿ'' ಎಂದಿದೆ. 'ಮೊದಲೇ ಬ್ರಹ್ಮರೂಪನಾದ ಜೀವ ಮೋಕ್ಷದಶಾದಲ್ಲಿ ಬ್ರಹ್ಮನಾಗುತ್ತಾನೆ' ಎಂದು ಅದರ ಅರ್ಥ. ಜೀವ ಬ್ರಹ್ಮರು ಭಿನ್ನರಾದರೆ ಜೀವ ಮೊದಲೇ ಬ್ರಹ್ಮನಾಗಿರುವುದು ಹೇಗೆ?

ಆ ಶ್ರುತಿಯಲ್ಲಿ 'ಬ್ರಹ್ಮೈವ' ಎಂದರೆ 'ಜೀವನಾಗಿದ್ದೇ' ಎಂದು ಅರ್ಥ. ಜೀವನಾಗಿರುವವನು ಬ್ರಹ್ಮತ್ವವನ್ನು ಪಡೆದಾಗ ತನ್ನ ಮೊದಲಿದ್ದ ಜೀವತ್ವವನ್ನು ಕಳೆದುಕೊಳ್ಳುವುದಿಲ್ಲ. ಜೀವಭಾವವನ್ನು ಉಳಿಸಿಕೊಂಡೇ ಅವನು ಬ್ರಹ್ಮತ್ವವನ್ನು - ಪೂರ್ಣತ್ವವನ್ನು ಪಡೆಯುತ್ತಾನೆ ಎಂದರ್ಥ.

ಬ್ರಹ್ಮಶಬ್ದಕ್ಕೆ ''ಬ್ರಹ್ಮಾಣಿ ಜೀವಾಃ ಸರ್ವೇಽಪಿ'' ಎಂದು ಜೀವ ಎಂಬ ಅರ್ಥವೂ ಇದೆ. ಇದಕ್ಕೆ ಪರಮಾತ್ಮ ಎಂಬ ಅರ್ಥವು ಮುಖ್ಯವಾದರೂ 'ಅಪ್ಯೇತಿ-ಹೊಂದುತ್ತಾನೆ' ಎಂಬ ಈ ಶ್ರುತಿಯಲ್ಲಿರುವ ಶಬ್ದದ ವಿರೋಧ ಬರುತ್ತದೆಯಾದ್ದರಿಂದ ಅಮುಖ್ಯವಾದ ಜೀವ ಎಂಬ ಅರ್ಥವನ್ನು ಮಾಡಬೇಕು. ಜೀವನು 'ಬ್ರಹ್ಮೈವ ಸನ್-ಮೊದಲೇ ಬ್ರಹ್ಮನಾಗಿದ್ದಾನೆ' ಎಂದು ಅರ್ಥ ಮಾಡಿದರೆ 'ಬ್ರಹ್ಮ ಅಪ್ಯೇತಿ' ಎನ್ನುವುದು ಹೇಗೆ? ಮೊದಲು ಇಲ್ಲದಿರುವುದನ್ನು ಪಡೆಯುವುದೇ 'ಹೊಂದುವುದು'. ಜೀವನಿಗೆ ಬ್ರಹ್ಮ ಭಾವ ಮೊದಲೇ ಇದ್ದಿದ್ದರೆ 'ಬ್ರಹ್ಮ ಅಪ್ಯೇತಿ' ಎನ್ನುವುದು ಸರಿಯಾಗುವುದೇ? ಆದ್ದರಿಂದ ಮೊದಲ ಬ್ರಹ್ಮ ಶಬ್ದಕ್ಕೆ 'ಜೀವ' ಎಂಬ ಅರ್ಥವನ್ನು ಮಾಡಬೇಕಾಗುತ್ತದೆ.

5. ಕಾಠಕಶ್ರುತಿಯಲ್ಲಿ(2-5-1) ''ವಿಮುಕ್ತಶ್ಚ ವಿಮುಚ್ಯತೇ'' ಎಂದಿದೆ. 'ಮೊದಲೇ ಮುಕ್ತನಾದ ಜೀವ ಬ್ರಹ್ಮಜ್ಞಾನ ಪಡೆದ ಮೇಲೆ ಮುಕ್ತನಾಗುತ್ತಾನೆ' ಎಂದು ಅದರ ಅರ್ಥ. ಮುಕ್ತಿ ಎಂದರೆ ಬ್ರಹ್ಮರೂಪನಾಗುವುದು. ಇದು ಮೊದಲೇ ಜೀವನಿಗೆ ಇದೆ (ವಿಮುಕ್ತಶ್ಚ) ಎನ್ನುತ್ತದೆ ಶ್ರುತಿ. ಇದರಿಂದ –ಜೀವ ಬ್ರಹ್ಮಾಭೇದ ತಿಳಿಯುತ್ತದೆ ಎಂದು ಪೂರ್ವಪಕ್ಷ.

ಆ ಶ್ರುತಿಯ ಅಭಿಪ್ರಾಯ ಹೀಗೆ - ''ಮುಕ್ತಿಃ ಹಿತ್ವಾ ಅನ್ಯಥಾ ರೂಪಂ ಸ್ವರೂಪೇಣ ವ್ಯವಸ್ಥಿತಿಃ- ಅಸ್ವಾಭಾವಿಕರೂಪವನ್ನು ಕಳೆದುಕೊಂಡು ಸ್ವಾಭಾವಿಕರೂಪವನ್ನು ಪಡೆಯುವುದೇ ಮೋಕ್ಷ. (ಭಾಗವತ) ಜೀವನಿಗೆ ದುಃಖಾದಿ ಸಂಸಾರದ ಬಂಧ ಅಸ್ವಾಭಾವಿಕ ಅಂದರೆ, ಮಿಥ್ಯಾ ಎಂದರ್ಥವಲ್ಲ. ಅದು ಅವನ ಸ್ವರೂಪಭೂತವಾದ ಧರ್ಮವಲ್ಲ. ಅವನ ಸ್ವರೂಪ ಸುಖಮಯವಾದುದು. ಆದರೆ, ಅದನ್ನು ತಿಳಿಯದೆ ಬಾಹ್ಯಪ್ರಪಂಚದಲ್ಲಿ ಅಭಿಮಾನ ತಾಳಿದ್ದಾನೆ. ದೇಹ, ಅಂತಃಕರಣಾದಿಗಳಲ್ಲಿ ಈಶ್ವರದತ್ತವಾದ ಸ್ವಾಮಿತ್ವ ಇದ್ದರೂ ಅದನ್ನು ತಿಳಿಯದೇ 'ತನ್ನದೇ ಇವು' ಎಂಬ ಸ್ವಾತಂತ್ರ್ಯಭ್ರಮೆ ಅವನಿಗಿದೆ. ಇದರಿಂದಾಗಿ ಅವನಿಗೆ ದುಃಖಾದಿಗಳು ಉಂಟಾಗುತ್ತವೆ. ಹೀಗೆ ಅಸ್ವಾಭಾವಿಕವಾದುದರಿಂದ ಅದು ಇದ್ದರೂ ಇಲ್ಲದಿರುವಂತೆಯೆ. ಆದ್ದರಿಂದ ಅವನನ್ನು ''ವಿಮುಕ್ತ'' ಎನ್ನಲಾಗಿದೆ. ಇದು ''ಪ್ರಮಾದಾತ್ಮಕತ್ವಾಚ್ಚ ಬಂಧಸ್ಯ'' ಎಂಬ ಆಚಾರ್ಯರ ಭಾಷ್ಯದ ಭಾವ. ಪ್ರಮಾದವೆಂದರೆ 'ಅಜ್ಞಾನ' 'ವಿಪರೀತ ಜ್ಞಾನ'. ಅದರಿಂದಾದುದು ಬಂಧ ಎಂದು ಅದರ ಅರ್ಥ. ॥ 17 ॥

**ನ ಚ ತತ್ತದನುಮಾನವಿರೋಧಃ।**

**ಓಂ ॥ ಕಾಮಾಚ್ಚ ನಾನುಮಾನಾಪೇಕ್ಷಾ ॥ ಓಂ**

**ಯಥಾಕಾಮಂ ಹಿ ಅನುಮಾತುಂ ಶಕ್ಯತೇ । ಅತೋ ನ ತತ್ತ್ವೇ ಪೃಥಗನುಮಾನ-ಮಪೇಕ್ಷ್ಯತೇ । ಉಕ್ತಂ ಚ ಸ್ಕಾಂದೇ-**

**ಯಥಾಕಾಮಾನುಮಾ ಯಸ್ಮಾತ್ ತಸ್ಮಾತ್ ಸಾನಪಗಾ ಶ್ರುತೇಃ ।**
**ಪೂರ್ವಾಪರಾವಿರೋಧಾಯ ಚೇಷ್ಯತೇ ನಾನ್ಯಥಾ ಕ್ವಚಿತ್ ॥ ಇತಿ ।**

**'ನೈಷಾ ತರ್ಕೇಣ ಮತಿರಾಪನೇಯಾ' (ಕಠ 2.9) ಇತಿ ಚ ॥ 18 ॥**

ಚೇತನ ಭೇದವು ಅಭೇದಸಾಧಕವಾದ, ಭೇದಮಿಥ್ಯಾತ್ವಸಾಧಕವಾದ ಅನುಮಾನಕ್ಕೆ ವಿರುದ್ಧ ಎನ್ನಬಾರದು. ಅನುಮಾನವನ್ನು ನಮ್ಮ ಬುದ್ಧಿಶಕ್ತಿಗೆ ಅನುಸಾರವಾಗಿ ಬೇಕಾದಂತೆ ಮಾಡಲು ಬರುತ್ತದೆ. ಆದ್ದರಿಂದ ತತ್ತ್ವಗಳು ಸಿದ್ಧವಾಗಬೇಕಾದರೆ ಅನುಮಾನದ ಅಪೇಕ್ಷೆಯೇ ಇಲ್ಲ. ಸ್ಕಾಂದಪುರಾಣದಲ್ಲಿ ಹೀಗೆಯೇ ಹೇಳಿದೆ-

''ಮನಬಂದಂತೆ ಅನುಮಾನ ಪ್ರಯೋಗಮಾಡಬಹುದಾದ್ದರಿಂದ ಅಂತಹ ಅನುಮಾನ ಶ್ರುತಿಗೆ ಅನುಕೂಲವಾದಾಗ ಮಾತ್ರ, ಕೆಲವೊಮ್ಮೆ ಶ್ರುತಿಗಳ ಪೂರ್ವಾಪರ

ವಿರೋಧಪರಿಹಾರಕ್ಕೆ ಉಪಯುಕ್ತವಾಗುತ್ತದೆ. ಶ್ರುತಿವಿರುದ್ಧವಾದರೆ ಅದು ಪ್ರಮಾಣವೆನಿಸುವುದಿಲ್ಲ.''

ಕಠೋಪನಿಷತ್ತೂ ಹೀಗೆ ಹೇಳಿದೆ-

ಪರಬ್ರಹ್ಮನ ಜ್ಞಾನವನ್ನು ಅನುಮಾನದಿಂದ ಪಡೆಯಲೂ ಸಾಧ್ಯವಿಲ್ಲ; ನಿರಾಕರಿಸಲೂ ಸಾಧ್ಯವಿಲ್ಲ. (ಅದನ್ನು ಇನ್ನೊಬ್ಬರ ಉಪದೇಶದಿಂದಲೇ ಪಡೆಯಬೇಕು.)

**ವಿವರಣೆ :** ಶ್ರುತಿಯು ಜೀವೇಶ್ವರಭೇದವನ್ನು ತಿಳಿಸುತ್ತಿದ್ದರೂ ಅದು ಅನುಮಾನ ವಿರುದ್ಧವಾಗಿದೆ. ಆದ್ದರಿಂದ ಅಪ್ರಮಾಣ, ಎಂಬ ಆಕ್ಷೇಪಕ್ಕೆ ಈ ಸೂತ್ರದಲ್ಲಿ ಸಮಾಧಾನ ನೀಡಲಾಗಿದೆ. ''ಕಣ್ಣಿಗೆ ಬೆಟ್ಟು ಒತ್ತಿದಾಗ ಒಂದು ಎರಡಾಗಿ ಕಾಣುತ್ತದೆ. ಅಲ್ಲಿ ಎರಡು ವಸ್ತುಗಳು ಹೇಗೆ ಇಲ್ಲವೋ ಅದರಂತೆ, ಜೀವರಲ್ಲಿ ಕಾಣುವ ಭೇದವೂ ಮಿಥ್ಯಾ; ಅವರೆಲ್ಲ ಒಂದೇ''. ಇದು ಅದ್ವೈತವಾದ ಹೇಳುವ ಜೀವಾಭೇದಸಾಧಕವಾದ ಅನುಮಾನ.

ಆದರೆ ಭೇದವನ್ನು ಶ್ರುತಿ ಹೇಳುತ್ತಿದೆ. ಶ್ರುತಿಗಿಂತ ಅನುಮಾನ ದುರ್ಬಲ. ಏಕೆಂದರೆ, ಅನುಮಾನ ನಮ್ಮ ಬುದ್ಧಿ ಸಾಮರ್ಥ್ಯವನ್ನು ಅವಲಂಬಿಸಿದೆ. ಅದರಿಂದ ಏನು ಬೇಕಾದರೂ ಸಾಧಿಸಬಹುದಾದ್ದರಿಂದ ಏನನ್ನೂ ನಿರ್ಣಯಿಸಲಾಗದು. ಆದ್ದರಿಂದ ಶ್ರುತಿ ಹೇಳಿದ ಭೇದವನ್ನು ಅನುಮಾನದ ಆಧಾರದಿಂದ ನಿರಾಕರಿಸಲಾಗದು. **॥ 18 ॥**

## ಓಂ॥ ಅಸ್ಮಿನ್ನಸ್ಯ ಚ ತದ್ಯೋಗಂ ಶಾಸ್ತಿ॥ ಓಂ

**ಅಸ್ಯ ಜೀವಸ್ಯ। ಯುಕ್ತಿಸಮುಚ್ಚಯೇ ಚ ಶಬ್ದಃ।**

**''ಸೋಽಶ್ನುತೇ ಸರ್ವಾನ್ ಕಾಮಾನ್ ಸಹ ಬ್ರಹ್ಮಣಾ ವಿಪಶ್ಚಿತಾ''**

**(ತೈ.ಉ.2-1)**

**''ಅನಿಲಯನೇಽಭಯಂ ಪ್ರತಿಷ್ಠಾಂ ವಿಂದತೇ'' (ತೈ.ಉ. 2-7)**

**ಏತಮಾನಂದಮಯಮಾತ್ಮಾನಮುಪಸಂಕ್ರಾಮತಿ (ತೈ.ಉ.2-8)**

**ಇತ್ಯಾದಿ ॥ 19 ॥**

## ॥ ಇತಿ ಆನಂದಮಯಾಧಿಕರಣಮ್ ॥

ಸೂತ್ರದಲ್ಲಿ 'ಅಸ್ಯ' ಎಂದರೆ ಜೀವನಿಗೆ ಎಂದು ಅರ್ಥ. ಚ ಶಬ್ದವು 'ಈ ವಿಷಯದಲ್ಲಿ ಯುಕ್ತಿಯೂ ಇದೆ' ಎಂದು ಸೂಚಿಸುತ್ತದೆ. ತೈತ್ತಿರೀಯ ಉಪನಿಷತ್ತಿನಲ್ಲಿ ''ಬ್ರಹ್ಮಜ್ಞಾನಿಯು ಜ್ಞಾನಿಯಾದ ಚತುರ್ಮುಖನೊಂದಿಗೆ ಮೋಕ್ಷದಲ್ಲಿ ಸಕಲಾಭೀಷ್ಟಗಳನ್ನು ಅನುಭವಿಸುತ್ತಾನೆ'' ''ಬ್ರಹ್ಮಜ್ಞಾನಿಯು ನಿರ್ಭೀತನಾಗಿ ಅನನ್ಯಾಶ್ರಿತನಾದ ಬ್ರಹ್ಮನ ಧ್ಯಾನದಲ್ಲಿ ಮುಳುಗುತ್ತಾನೆ (ಅನಂತರ ಬ್ರಹ್ಮನನ್ನೇ ಹೊಂದುತ್ತಾನೆ)'' ''ಉಪಾಸಕನು ಈ ಆನಂದಮಯ ಪರಮಾತ್ಮನೆಡೆಗೆ ಹೋಗುತ್ತಾನೆ'' ಹೀಗೆ ಮೋಕ್ಷದಲ್ಲೂ ಜೀವಾತ್ಮನಿಗೆ ಬ್ರಹ್ಮನೊಂದಿಗೆ ಸಂಬಂಧವನ್ನೇ ಹೇಳಲಾಗಿದೆ; ಹೊರತು ಐಕ್ಯವನ್ನಲ್ಲ.

**ವಿವರಣೆ :** ಶ್ರುತಿಯಲ್ಲಿ ಜೀವಬ್ರಹ್ಮ ಭೇದವನ್ನು ಹೇಳಿದ್ದರೂ ಅದು ಸಂಸಾರಾವಸ್ಥೆಯಲ್ಲಿ ಮಾತ್ರ, ಮೋಕ್ಷಾವಸ್ಥೆಯಲ್ಲಿ ಅವರಿಬ್ಬರಿಗೆ ಅಭೇದ ಬರುತ್ತದೆ ಎಂಬ ಶಂಕೆಗೆ ಈ ಸೂತ್ರದಲ್ಲಿ ಸಮಾಧಾನ ನೀಡಲಾಗಿದೆ. ಶ್ರುತಿಯು ಮೋಕ್ಷದಲ್ಲೂ ಭೇದವನ್ನೇ ಹೇಳುತ್ತದೆ, ಐಕ್ಯವನ್ನಲ್ಲ ಎಂದುತ್ತರ.

## ಶಾಂಕರಭಾಷ್ಯದಲ್ಲಿ ಹೇಳಿದ ಸೂತ್ರಾರ್ಥ

**ಸಂದರ್ಭ :** ಉಪನಿಷತ್ತುಗಳಲ್ಲಿ ಬ್ರಹ್ಮತತ್ತ್ವವನ್ನು ತಿಳಿಸುವ ಎರಡು ವಿಧದ ವಾಕ್ಯಗಳಿವೆ. ಕೆಲವು ವಾಕ್ಯಗಳು ಜಡವಾದ ಉಪಾಧಿಗಳಿಂದ ವಿಶಿಷ್ಟನಾದ ಬ್ರಹ್ಮನನ್ನು ಪ್ರತಿಪಾದಿಸುತ್ತವೆ. ಆದರೂ, ಆ ವಾಕ್ಯಗಳ ತಾತ್ಪರ್ಯ - ಆ ಉಪಾಧಿಯ ಮೂಲಕ ಬ್ರಹ್ಮನನ್ನು ತಿಳಿಯಬೇಕು - ಎನ್ನುವುದು. ಉದಾಹರಣೆಗೆ - ತೈತ್ತಿರೀಯೋಪನಿಷತ್ತಿನ ಬ್ರಹ್ಮವಲ್ಲಿ ಅನ್ನಮಯಾದಿ ಉಪಾಧಿವಿಶಿಷ್ಟನಾದ ಬ್ರಹ್ಮನನ್ನು ಪ್ರತಿಪಾದಿಸುತ್ತದೆ. ಅವುಗಳ ತಾತ್ಪರ್ಯ - ಆ ಉಪಾಧಿಯ ಮೂಲಕ ಬ್ರಹ್ಮತತ್ತ್ವವನ್ನು ತಿಳಿಯಬೇಕು - ಎನ್ನುವುದು.

ಇನ್ನು ಕೆಲವು ವಾಕ್ಯಗಳು, ಉಪಾಧಿವಿಶಿಷ್ಟ ಬ್ರಹ್ಮನನ್ನು ತಿಳಿಸಿ - ಆ ರೂಪದಿಂದ ಅವನ ಧ್ಯಾನಮಾಡಬೇಕು ಎಂಬ ಅಭಿಪ್ರಾಯದಿಂದ ಹೊರಟಿವೆ. ಅಂತಹ ಧ್ಯಾನದ ಪ್ರಯೋಜನ ಮೂರು-

1) ಕ್ರಮೇಣ ಮುಕ್ತಿಯ ಲಾಭ

2) ಕರ್ಮ ಸಮೃದ್ಧಿ

3) ಅಭ್ಯುದಯ ಸಿದ್ಧಿ(ಅಭೀಷ್ಟಸಿದ್ಧಿ)

ಹೃದಯಾಕಾಶದಲ್ಲಿ ಸಗುಣ ಬ್ರಹ್ಮನ ಧ್ಯಾನದಿಂದ ನಿರ್ಗುಣಧ್ಯಾನ ಸಿದ್ಧಿಸಿ ಆ ಮೂಲಕ ಮುಕ್ತಿ ದೊರಕುತ್ತದೆ. ಹೀಗೆ, ಇಂತಹ ಉಪಾಸನೆ ಕ್ರಮೇಣ ಮುಕ್ತಿಗೆ ಸಾಧನವಾಗುತ್ತದೆ. ಛಾಂದೋಗ್ಯೋಪನಿಷತ್ತಿನಲ್ಲಿ ಹೇಳಿದ ಉದ್ಗೀಥೋಪಾಸನೆ ಮಾಡುತ್ತಾ ಕರ್ಮಗಳನ್ನು ಆಚರಿಸಿದರೆ ಕರ್ಮದ ಫಲ ವಿಶೇಷವಾಗಿ ಸಿದ್ಧಿಸುತ್ತದೆ. ಪ್ರತಿಮೆಯಲ್ಲಿ ಬ್ರಹ್ಮನನ್ನು ಆರಾಧಿಸಿದರೆ ಅಭೀಷ್ಟ ಸಿದ್ಧಿಸುತ್ತದೆ.

ಹೀಗೆ ಉಪನಿಷತ್ತಿನ ಮಂತ್ರಗಳಿಗೆ ಕೆಲವಕ್ಕೆ ಬ್ರಹ್ಮಧ್ಯಾನದಲ್ಲಿ ತಾತ್ಪರ್ಯವಾದರೆ ಮತ್ತೆ ಕೆಲವಕ್ಕೆ ಬ್ರಹ್ಮಜ್ಞಾನದಲ್ಲಿ ತಾತ್ಪರ್ಯವಿದೆ. ಯಾವ ವಾಕ್ಯಗಳಿಗೆ ಏನು ತಾತ್ಪರ್ಯ ಎಂದು ನಿರ್ಧರಿಸಲು ಮುಂದಿನ ಸೂತ್ರಗಳು ಹೊರಟಿವೆ.

ಇದರ ಜೊತೆಯಲ್ಲಿ ''ಗತಿಸಾಮಾನ್ಯಾತ್'' ಎಂಬ ಹಿಂದಿನ ಸೂತ್ರದಲ್ಲಿ ಹೇಳಿದ ಪ್ರಮೇಯದ ಸಮರ್ಥನೆಯನ್ನೂ ಮುಂದಿನ ಕೆಲವು ಸೂತ್ರಗಳು ಮಾಡುತ್ತವೆ. ''ಗತಿಸಾಮಾನ್ಯಾತ್'' ಎಂಬ ಹಿಂದಿನ ಸೂತ್ರ-ಸೃಷ್ಟಿಯನ್ನು ಹೇಳುವ ವೇದಾಂತ ವಾಕ್ಯಗಳೆಲ್ಲ ಬ್ರಹ್ಮನೇ ಸೃಷ್ಟಿಕರ್ತೃ ಎಂದು ತಿಳಿಸುತ್ತವೆ; ಪ್ರಕೃತಿಯು ಕಾರಣವೆಂದು ಅವುಗಳ

ತಾತ್ಪರ್ಯವಲ್ಲ- ಎಂದು ಹೇಳುತ್ತದೆ. ಈ ಪ್ರಮೇಯವನ್ನು ಪ್ರಥಮಾಧ್ಯಾಯದ ನಾಲ್ಕನೇ ಪಾದದ ಪ್ರಕೃತ್ಯಧಿಕರಣ ಸಮರ್ಥನೆ ಮಾಡುತ್ತದೆ.

ಒಟ್ಟಿನಲ್ಲಿ, ಮುಂದಿನ ಕೆಲವು ಸೂತ್ರಗಳು ಉಪನಿಷದ್ ವಾಕ್ಯಗಳು ಕೆಲವು ಬ್ರಹ್ಮಧ್ಯಾನಪರಗಳು ಎಂದು ಸಮರ್ಥಿಸುತ್ತವೆ. ಮತ್ತೆ ಕೆಲವು ಸೂತ್ರಗಳು ''ಈ ಉಪನಿಷತ್ತಿನ ತಾತ್ಪರ್ಯ ಬ್ರಹ್ಮಜ್ಞಾನ'' ಎಂದು ತಿಳಿಸುತ್ತವೆ. ಇನ್ನು ಕೆಲವು ಸೂತ್ರಗಳು ''ಉಪನಿಷತ್ತಿನ ಈ ವಾಕ್ಯ ಪ್ರಕೃತ್ಯಾದಿಗಳಿಗೆ ಜಗತ್ಕಾರಣತ್ವವನ್ನು ಹೇಳುತ್ತಿಲ್ಲ; ಬ್ರಹ್ಮನಿಗೇ ಜಗತ್ಕಾರಣತ್ವವನ್ನು ಪ್ರತಿಪಾದಿಸುತ್ತವೆ'' ಎಂದು ನಿರ್ಣಯಿಸುತ್ತವೆ.

1. **॥ ಆನಂದಮಯೋಽಭ್ಯಾಸಾತ್ ॥** ಅನ್ನಮಯಾದಿ ಪಂಚಕೋಶಗಳ ಕೊನೆಯಲ್ಲಿ ಹೇಳಿದ ಆನಂದಮಯ ಬ್ರಹ್ಮತತ್ತ್ವ. ಅಭ್ಯಾಸಾತ್= ಉಪನಿಷತ್ತಿನ ಈ ಪ್ರಕರಣದಲ್ಲಿ ಆನಂದ ಶಬ್ದವನ್ನು ಬ್ರಹ್ಮಪರವಾಗಿ ಅನೇಕ ಬಾರಿ ಪ್ರಯೋಗಿಸಲಾಗಿದೆ.

''ರಸೋ ವೈ ಸಃ ರಸಂ ಹ್ಯೇವಾಯಂ ಲಬ್ಧ್ವಾ ಆನಂದೀ ಭವತಿ''

''ಯದೇಷ ಆಕಾಶ ಆನಂದೋ ನ ಸ್ಯಾತ್''

''ಆನಂದಂ ಬ್ರಹ್ಮಣೋ ವಿದ್ವಾನ್'' ಹೀಗೆ.

ಏನೂ ತಿಳಿಯದೆ, ಬಾಹ್ಯದೇಹವನ್ನಷ್ಟೇ ನೋಡುತ್ತಿರುವ ಅಜ್ಞಾನಿಗೆ ಅನ್ನಮಯವಾದ ಈ ಶರೀರವನ್ನೇ ಬ್ರಹ್ಮನೆಂದು ಮೊದಲು ತಿಳಿಸಿ ಅನಂತರ ಅದರೊಳಗಿನ ಪ್ರಾಣಮಯಕೋಶವನ್ನು ಬ್ರಹ್ಮನೆಂದು ತಿಳಿಸಿ ಕೊನೆಗೆ ''ಆನಂದಮಯ ಬ್ರಹ್ಮ'' ಎಂದು ಹೇಳುವ ಉದ್ದೇಶ ಉಪನಿಷತ್ತಿಗಿದೆ. ಈ ಐದರಲ್ಲಿ ವಸ್ತುತಃ ಆನಂದಮಯನೇ ಬ್ರಹ್ಮನಾದರೂ ಮೊದಲೇ ಅದನ್ನು ತಿಳಿಸಿದರೆ ಅಜ್ಞರಿಗೆ ಅರ್ಥವೇ ಆಗುವುದಿಲ್ಲ. ಅದಕ್ಕಾಗಿ ಕ್ರಮೇಣ ಬ್ರಹ್ಮನ ನಿಜರೂಪವನ್ನು ಉಪನಿಷತ್ತಿನಲ್ಲಿ ತಿಳಿಸಲಾಗಿದೆ.

2. **॥ ವಿಕಾರಶಬ್ದಾತ್ ನೇತಿ ಚೇನ್ನ ಪ್ರಾಚುರ್ಯಾತ್ ॥** ''ಆನಂದಮಯ'' ಎಂಬ ಹೆಸರಿನಲ್ಲಿ 'ಮಯಟ್' ಪ್ರತ್ಯಯವಿದೆ. ಅದಕ್ಕೆ 'ವಿಕಾರ' ಎಂದು ಅರ್ಥ. ಬ್ರಹ್ಮನು ನಿರ್ವಿಕಾರನಾದುದರಿಂದ ಅವನಿಗೆ 'ಆನಂದಮಯ' ಎಂಬ ಹೆಸರು ಹೇಗೆ ಹೊಂದುತ್ತದೆ?

ಈ ಪ್ರಶ್ನೆ ಸರಿಯಲ್ಲ. ಮಯಟ್ ಪ್ರತ್ಯಯಕ್ಕೆ ಎರಡು ಅರ್ಥವಿದೆ- ವಿಕಾರ ಮತ್ತು ಪ್ರಾಚುರ್ಯ. ಪ್ರಾಚುರ್ಯ ಎಂಬ ಅರ್ಥವನ್ನು ಮಾಡಿದಾಗ ''ಆನಂದಮಯ'' ಎಂಬ ಹೆಸರು ಬ್ರಹ್ಮನಿಗೂ ಅನ್ವರ್ಥವಾಗುತ್ತದೆ. ಅವನು ಆನಂದಪೂರ್ಣ ಎಂದರ್ಥ.

3. **॥ ತದ್ಧೇತು ವ್ಯಪದೇಶಾಚ್ಚ ॥** ಇಲ್ಲಿರುವ ಮಯಟ್ ಪ್ರತ್ಯಯಕ್ಕೆ 'ಪ್ರಾಚುರ್ಯವೇ' ಅರ್ಥ ಎಂದು ನಿರ್ಧರಿಸಲು ಈ ಪ್ರಕರಣದಲ್ಲಿ ಕಾರಣವನ್ನು ಕೊಡಲಾಗಿದೆ. ''ಏಷ ಹ್ಯೇವಾನಂದಯತಿ- ಈ ಆನಂದಮಯನೇ ಇತರರಿಗೆ ಆನಂದವನ್ನು ಉಂಟು ಮಾಡುತ್ತಾನೆ'' ಎಂದು. ಮತ್ತೊಬ್ಬರನ್ನು ಶ್ರೀಮಂತರನ್ನಾಗಿ ಮಾಡಬೇಕಾದರೆ

ನಮ್ಮಲ್ಲಿ ಬೇಕಾದಷ್ಟು ಸಿರಿವಂತಿಗೆ ಇರಬೇಕು. ಅದರಂತೆ ಆನಂದಮಯನು ಇತರರನ್ನು ಆನಂದಪಡಿಸಬೇಕಾದರೆ ಅವನು ತಾನು ಆನಂದಪ್ರಚುರ - ತುಂಬಿದ ಆನಂದವುಳ್ಳವನಾಗಿರಬೇಕು. ಆದ್ದರಿಂದ ಮಯಟ್ ಪ್ರತ್ಯಯಕ್ಕೆ 'ಪ್ರಾಚುರ್ಯ' ಎಂದೇ ಅರ್ಥ.

**4. ॥ ಮಾಂತ್ರವರ್ಣಿಕಮೇವ ಚ ಗೀಯತೇ ॥** ಈ ಉಪನಿಷತ್ತಿನ ಪ್ರಾರಂಭದ ಮಂತ್ರ (ತದೇಷಾಭ್ಯುಕ್ತಾ) ''ಸತ್ಯಂ ಜ್ಞಾನಂ ಅನಂತಂ ಬ್ರಹ್ಮ'' ಎಂದು. ಹೀಗೆ ಪ್ರಾರಂಭದ ಮಂತ್ರದಲ್ಲಿ ಪ್ರಸ್ತುತನಾದ ಬ್ರಹ್ಮನನ್ನೇ, ಅನ್ನಮಯಾದಿಗಳನ್ನು ಹೇಳಿ, ಕೊನೆಯಲ್ಲಿ ''ಅನ್ಯೋಽಂತರ ಆತ್ಮಾಽನಂದಮಯಃ'' ಎಂಬ ಬ್ರಾಹ್ಮಣವಾಕ್ಯ ಹೇಳುತ್ತದೆ. ಕೊನೆಯಲ್ಲಿ ಹೇಳಿದ ಆನಂದಮಯ ಬ್ರಹ್ಮನಾದರೆ ಮಾತ್ರ ಪ್ರಾರಂಭದ ಮಂತ್ರಕ್ಕೂ ಈ ಬ್ರಾಹ್ಮಣ ವಾಕ್ಯಕ್ಕೂ ಏಕವಾಕ್ಯತೆ ಹೊಂದುತ್ತದೆ. ಆದ್ದರಿಂದ ಆನಂದಮಯ ಬ್ರಹ್ಮ.

**5. ॥ ನೇತರೋಽನುಪಪತ್ತೇಃ ॥** ಈ ಆನಂದಮಯ ಜೀವಾತ್ಮನಾಗಲು ಸಾಧ್ಯವಿಲ್ಲ. ಏಕೆಂದರೆ, ಇಲ್ಲಿ ''ಸೋಽಕಾಮಯತ। ಬಹುಸ್ಯಾಂ ಪ್ರಜಾಯೇಯೇತಿ'' ಎಂದು ಮುಂತಾಗಿ ಜಗತ್ಸೃಷ್ಟಿಕರ್ತೃತ್ವವನ್ನು ಆನಂದಮಯ ಆತ್ಮನಿಗೆ ಹೇಳಲಾಗಿದೆ. ಈ ಸೃಷ್ಟಿಕರ್ತೃತ್ವ ಜೀವನಿಗೆ ಇಲ್ಲ.

**6. ॥ ಭೇದವ್ಯಪದೇಶಾಚ್ಚ ॥** ಈ ಆನಂದಮಯ ಪ್ರಕರಣದಲ್ಲಿ 'ರಸಂ ಹ್ಯೇವಾಯಂ ಲಬ್ಧ್ವಾ ಆನಂದೀಭವತಿ' ಎಂದು ಜೀವನಿಗೂ, ಆನಂದಮಯನಿಗೂ ಭೇದವನ್ನು ಹೇಳಲಾಗಿದೆ. ಜೀವನು ಆನಂದವನ್ನು ಪಡೆಯುವವನು, 'ಆನಂದ' ಜೀವನಿಂದ ಹೊಂದಲ್ಪಡುವುದು. ಹೀಗಾಗಿ ಇವೆರಡು ಒಂದೇ ಆಗಲು ಸಾಧ್ಯವಿಲ್ಲ. ಆದ್ದರಿಂದ ಆನಂದಮಯ ಜೀವಾತ್ಮನಲ್ಲ.

**7. ॥ ಕಾಮಾಚ್ಚ ನಾನುಮಾನಾಪೇಕ್ಷಾ ॥** ಈ ಪ್ರಕರಣದಲ್ಲಿ 'ಸೋಽಕಾಮಯತ' ಎಂದು ಇಚ್ಛಾಪೂರ್ವಕವಾಗಿ ಜಗತ್ ಸೃಷ್ಟಿಕರ್ತೃತ್ವವನ್ನು ಹೇಳಿರುವುದರಿಂದ ಜಡವಾದ ಪ್ರಕೃತಿ ತತ್ತ್ವವನ್ನು 'ಆನಂದಮಯ' ಎಂದು ಹೇಳುವುದು ಸರಿಯಲ್ಲ.

**8. ॥ ಅಸ್ಮಿನ್ನಸ್ಯ ಚ ತದ್ಯೋಗಂ ಶಾಸ್ತಿ ॥** 'ಯದಾ ಹ್ಯೇವೈಷ ಅದೃಶ್ಯೇಽನಾತ್ಮ್ಯೇಽನಿರುಕ್ತೇಽ ನಿಲಯನೇಽಭಯಂ ಪ್ರತಿಷ್ಠಾಂ ವಿಂದತೇ। ಅಥ ಸೋಽಭಯಂ ಗತೋ ಭವತಿ।

ಎಂದು ಮುಂತಾಗಿ 'ಆನಂದಮಯನೊಂದಿಗೆ ಭೇದವನ್ನು ತಿಳಿದರೆ ಸಂಸಾರ, ಅಭೇದವನ್ನು ತಿಳಿದರೆ ಮೋಕ್ಷ' ಎನ್ನಲಾಗಿದೆ. ಆನಂದಮಯ ಜೀವಾತ್ಮನೋ, ಪ್ರಕೃತಿಯೋ ಆದರೆ ಇದು ಸಮಂಜಸವಾಗಲಾರದು. ಆದ್ದರಿಂದ ಆನಂದಮಯ ಬ್ರಹ್ಮ.

ಹೀಗೆ, ಈ ಎಂಟು ಸೂತ್ರಗಳ ಅರ್ಥವನ್ನು ಶಂಕರಾಚಾರ್ಯರಿಗಿಂತಲೂ ಪ್ರಾಚೀನನಾದ 'ವೃತ್ತಿಕಾರ'(?) ಹೇಳಿದ್ದಾನೆ. ಇದನ್ನು ಶಾಂಕರ ಭಾಷ್ಯದಲ್ಲಿ ಅನುವಾದಿಸಿ, ಕೊನೆಗೆ ಶಂಕರಾಚಾರ್ಯರು ತಮ್ಮ ಅಭಿಪ್ರಾಯವನ್ನು ಹೀಗೆ ಹೇಳಿದ್ದಾರೆ. ಈ ಪ್ರಕರಣದಲ್ಲಿ

ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ, ಆನಂದಮಯ ಎಂದು ಐದು ಶಬ್ದಗಳಿವೆ. ಇವುಗಳಲ್ಲಿ ಕೊನೆಯದಾದ 'ಆನಂದಮಯ' ಶಬ್ದದಲ್ಲಿರುವ 'ಮಯಟ್' ಪ್ರತ್ಯಯಕ್ಕೆ ಮಾತ್ರ ''ಪ್ರಾಚುರ್ಯ' ಎಂದು ಅರ್ಥವನ್ನು ಹೇಳಿ ಆ ಶಬ್ದ ಬ್ರಹ್ಮವಾಚಕ ಎಂದು ಹೇಳುವುದು ಸರಿಯಲ್ಲ. ಏಕೆಂದರೆ 'ಅನ್ನಮಯ' ಎಂಬ ಶಬ್ದದಲ್ಲಿರುವ ಮಯಟ್ ಪ್ರತ್ಯಯಕ್ಕೆ 'ವಿಕಾರ' ಎಂದು ಅರ್ಥ. ಅನ್ನಮಯವೆಂದರೆ 'ಅನ್ನದ ವಿಕಾರವಾದ ಈ ದೇಹ'. ಹೀಗೆ ಉಳಿದ ಮೂರು ಶಬ್ದಗಳಲ್ಲಿರುವ 'ಮಯಟ್' ಪ್ರತ್ಯಯಕ್ಕೂ ವಿಕಾರಾರ್ಥವನ್ನು ಹೇಳಿ ಅವುಗಳು ಜಡವಸ್ತುವಿನ ಹೆಸರು ಎಂದು ಪರಿಗಣಿಸಲಾಗುತ್ತದೆ. ಅಂದಮೇಲೆ ಅದರ ಜೊತೆಯಲ್ಲಿಯೇ ಹೇಳಿದ ''ಆನಂದಮಯ'' ಶಬ್ದ ಜಡಕ್ಕಿಂತ ಬೇರೆಯಾದ ಆತ್ಮ ತತ್ತ್ವವನ್ನು ಹೇಳುವುದು ಅನುಚಿತವೆನಿಸುತ್ತದೆ. ಒಂದು ಪ್ರಕರಣದಲ್ಲಿ ಬಂದಿರುವ ಏಕವಿಧವಾದ ಶಬ್ದಕ್ಕೆ ಒಂದೇ ರೀತಿಯಾದ ಅರ್ಥವನ್ನು ಮಾಡಬೇಕು. ಆದ್ದರಿಂದ ಆನಂದಮಯ ಶಬ್ದವೂ ಬ್ರಹ್ಮವಾಚಕವಲ್ಲ. ಅದೂ ಕೋಶವಾಚಕವಾದ (ಜೀವ) ಶಬ್ದ. ಅದರ ಆಧಾರವಾಗಿ ''ಬ್ರಹ್ಮ ಪುಚ್ಛಂ ಪ್ರತಿಷ್ಠಾ'' ಎಂದು ಹೇಳಿದ ತತ್ತ್ವವೇ ಬ್ರಹ್ಮ. ಇಲ್ಲಿ ಬ್ರಹ್ಮತತ್ತ್ವವು ಆನಂದಮಯನ-ಪುಚ್ಛ-ಅವಯವ ಎಂದು ಹೇಳಿದ್ದರೂ ಪುಚ್ಛ ಶಬ್ದಕ್ಕೆ ಆಧಾರ ಎಂದು ಅರ್ಥ ಮಾಡಬೇಕು. ನಮ್ಮ ಪ್ರಿಯ, ಮೋದ ಮೊದಲಾದ ಆನಂದ ವಿಶೇಷಗಳಿಗೆ ಬ್ರಹ್ಮನೇ ಆಧಾರ. 'ಏತಸ್ಯೈವ ಆನಂದಸ್ಯ ಅನ್ಯಾನಿ ಭೂತಾನಿ ಮಾತ್ರಾಂ ಉಪಜೀವಂತಿ'' (ಬೃ.ಉ.3.32) ಎಂದು ಬೃಹದಾರಣ್ಯಕೋಪನಿಷತ್ತಿನಲ್ಲಿ ನಾವು ಅನುಭವಿಸುವ ಆನಂದ ಬ್ರಹ್ಮನದೇ ಆಗಿದೆ, ಎಂದು ಹೇಳಲಾಗಿದೆ. ಆದ್ದರಿಂದ ಆನಂದಕ್ಕೆ ಮೂಲಭೂತವಾದ ತತ್ತ್ವವೇ ಬ್ರಹ್ಮ. ಆನಂದಮಯ ಬ್ರಹ್ಮನಲ್ಲ.

**ಚಂದ್ರಿಕಾದಲ್ಲಿ ಹೇಳಿದ ವಿಮರ್ಶೆ :** ಸೂತ್ರದಲ್ಲಿ 'ಆನಂದಮಯ ಬ್ರಹ್ಮ ಎಂದಿರುವಾಗ 'ಆನಂದಮಯನ ಪುಚ್ಛ ಬ್ರಹ್ಮ' ಎಂದು ಸಿದ್ಧಾಂತ ಮಾಡುವುದು ಸರಿಯಲ್ಲ.

ಭೃಗುವಲ್ಲಿಯಲ್ಲಿ ತಂದೆಯಾದ ವರುಣನಿಂದ ಉಪದೇಶ ಪಡೆದ ಭೃಗು 'ಅನ್ನಂ ಬ್ರಹ್ಮೇತಿ ವ್ಯಜಾನಾತ್' ಎಂದು ಸ್ಪಷ್ಟವಾಗಿ ಅನ್ನಮಯಾದಿ ಐದು ರೂಪಗಳನ್ನು ಬ್ರಹ್ಮನೆಂದು ತಿಳಿದು ಸಾಕ್ಷಾತ್ಕಾರ ಪಡೆದ ಎಂದಿದೆ. ಆದ್ದರಿಂದ ಅನ್ನಮಯಾದಿಗಳು ಐದೂ ಬ್ರಹ್ಮರೂಪಗಳಲ್ಲ ಎನ್ನವುದು ಉಚಿತವಲ್ಲ.

**ರಾಮಾನುಜಭಾಷ್ಯದಲ್ಲಿ ಹೇಳಿದ ಸೂತ್ರಾರ್ಥ :** ಮೊದಲ ನಾಲ್ಕು ಸೂತ್ರಗಳಿಂದ ಈ ಜಗತ್ತಿಗೆ ಕಾರಣನಾದ ಬ್ರಹ್ಮನ ವಿಚಾರ ಆವಶ್ಯಕ ಎಂದು ತಿಳಿಯಿತು. ಜಗತ್ತಿಗೆ ಕಾರಣ ಬ್ರಹ್ಮನೇ ಏಕೆ ಆಗಬೇಕು? ಜಡವಾದ ಪ್ರಕೃತಿಯೇ ಜಗತ್ಕಾರಣವಾಗಿರಬಹುದು, ಎಂಬ ಸಂಶಯವನ್ನು ಈಕ್ಷತ್ಯಧಿಕರಣದಲ್ಲಿ ನಿರಾಕರಿಸಲಾಯಿತು. ಈ ಅಧಿಕರಣದಲ್ಲಿ ಬ್ರಹ್ಮಾತಿರಿಕ್ತ ಚೇತನವು ಜಗತ್ತಿಗೆ ಕಾರಣ ಎಂಬ ಆಕ್ಷೇಪವನ್ನು ನಿರಾಕರಿಸಲಾಗುತ್ತಿದೆ.

**ಪೂರ್ವಪಕ್ಷ :** ತೈತ್ತಿರೀಯ ಉಪನಿಷತ್ತಿನಲ್ಲಿ ವಿಜ್ಞಾನಮಯನ ಒಳಗಡೆ ಇರುವ ಆತ್ಮ ಆನಂದಮಯ ಎನ್ನುವುದನ್ನು ''ತಸ್ಯೈಷ ಏವ ಶಾರೀರ ಆತ್ಮಾ ಯಃ ಪೂರ್ವಸ್ಯ'' ಎಂದು ನಿರೂಪಿಸಲಾಗಿದೆ. ''ಶರೀರೇ ಭವಃ - ಶಾರೀರಃ'' ಶರೀರದಲ್ಲಿರುವವನು ಶಾರೀರ. ಈ ಶಾರೀರ ಶಬ್ದ ಜೀವಾತ್ಮನಿಗೆ ಅನ್ವಯಿಸುತ್ತದೆ. ಆದ್ದರಿಂದ ಆನಂದಮಯ ಶಬ್ದದ ಅರ್ಥ ಜೀವಾತ್ಮನೇ ಹೊರತು ಬ್ರಹ್ಮನಲ್ಲ.

ವಸ್ತುತಃ, ಈ ಬ್ರಹ್ಮವಲ್ಲೀ ''ಬ್ರಹ್ಮವಿದಾಪ್ನೋತಿ ಪರಂ'' ಎಂದು ಬ್ರಹ್ಮನ ಪ್ರಸ್ತಾವದಿಂದ ಆರಂಭವಾಗಿದೆ. ಆದ್ದರಿಂದ ಅನ್ನಮಯಾದಿ ಶಬ್ದಗಳಿಂದ ಆರಂಭ ಮಾಡಿ ಈ ನಾಲ್ಕು ಕೋಶಗಳ ಕೊನೆಯಲ್ಲಿ ಬರುವ ಆನಂದಮಯಶಬ್ದವನ್ನು ಅವನಿಗೇ ಅನ್ವಯಿಸುವುದು ಉಚಿತ. ಆದರೆ ಮುಖ್ಯವಾಗಿ ಜೀವನಿಗೆ ಅನ್ವಯಿಸುವ ಆನಂದಮಯಶಬ್ದ ಜೀವನೇ ಬ್ರಹ್ಮನಾದ ಪ್ರಯುಕ್ತ ಬ್ರಹ್ಮನಿಗೂ ಅನ್ವಯಿಸುತ್ತದೆ. ಆದ್ದರಿಂದ ಆನಂದಮಯ ಜೀವಾತ್ಮ.

**ಸಿದ್ಧಾಂತ :** ಆನಂದಮಯ ಪ್ರಕರಣ ಮುಗಿದ ಮೇಲೆ ''ಸೈಷಾನಂದಸ್ಯ ಮೀಮಾಂಸಾ ಭವತಿ'' ಎಂದು ನಿರತಿಶಯ ಹಂತದವರೆಗೆ ಆನಂದದ ನಿರೂಪಣೆಯನ್ನು ಉಪನಿಷತ್ತು ಮಾಡಿದೆ. ಅಲ್ಲಿ ಮನುಷ್ಯೋತ್ತಮರಿಂದ ಆರಂಭಿಸಿ ಚತುರ್ಮುಖನವರೆಗೆ ಆನಂದದ ತಾರತಮ್ಯವನ್ನು ಹೇಳಿ ಬ್ರಹ್ಮನ ಆನಂದ ಸೀಮಾತೀತವಾದುದು ಎಂದು - ಯತೋ ವಾಚೋ ನಿವರ್ತಂತೇ- ಎಂಬ ಮಂತ್ರದಲ್ಲಿ ಹೇಳಲಾಗಿದೆ. ಆದ್ದರಿಂದ ಇಂತಹ ಆನಂದರೂಪನಾದ ಬ್ರಹ್ಮನೇ ''ಆನಂದಮಯ'' ಶಬ್ದ ವಾಚ್ಯ.

ಆನಂದಮಯ ಪರಮಾತ್ಮ. ಕಾರಣ, ಅಭ್ಯಾಸಾತ್=ನಿರತಿಶಯಾನಂದ ಪರ್ಯಂತವಾಗಿ ಬ್ರಹ್ಮನ ಆನಂದವು ಅಭ್ಯಸ್ಯಮಾನವಾಗಿದೆ. ಬ್ರಹ್ಮನ ಆನಂದವನ್ನು ಹೆಚ್ಚಿಸುತ್ತಾ ಅದು ನಿರತಿಶಯ ರೂಪವಾಗಿ ಕೊನೆಗೊಂಡಿದೆ.

ಆನಂದಮಯಶಬ್ದೇನ ಪರಮಾತ್ಮಾ ಹಿ ಕಥ್ಯತೇ।
ತೇ ಯೇ ಶತಮಿತಿ ಶ್ರುತ್ಯಾ ತ್ವಭ್ಯಸ್ತಾನಂದವತ್ತ್ವತಃ॥

## 2 ವಿಕಾರ ಶಬ್ದಾನ್ನೇತಿ ಚೇನ್ನ ಪ್ರಾಚುರ್ಯಾತ್॥

**ಪೂರ್ವಪಕ್ಷ :** 'ಅನ್ನಮಯ' ಎಂಬಲ್ಲಿ ಮಯಟ್ ಪ್ರತ್ಯಯಕ್ಕೆ ವಿಕಾರ ಎಂದು ಅರ್ಥವಿದೆ. ಅದರ ಜೊತೆಯಲ್ಲಿರುವ ''ಆನಂದಮಯ'' ಶಬ್ದದಲ್ಲಿರುವ 'ಮಯಟ್' ಪ್ರತ್ಯಯಕ್ಕೂ ವಿಕಾರ ಎಂದೇ ಅರ್ಥ. ಪರಮಾತ್ಮ ನಿರ್ವಿಕಾರನಾದ ಕಾರಣ ಈ ಪ್ರತ್ಯಯವಾಚ್ಯನಲ್ಲ. ಆದರೆ, ಜೀವಾತ್ಮ ಆನಂದಸ್ವರೂಪನಾದರೂ ಅಜ್ಞಾನವಶಾತ್ ದುಃಖರೂಪವಾದ ವಿಕೃತಿಯನ್ನೂ ಹೊಂದಿರುವುದರಿಂದ ವಿಕಾರಾರ್ಥಕ ಮಯಟ್ ಪ್ರತ್ಯಯ ಅವನಲ್ಲಿ ಹೊಂದುತ್ತದೆ.

ಅಥವಾ, ಮಯಟ್ ಪ್ರತ್ಯಯಕ್ಕೆ ''ಪ್ರಾಚುರ್ಯ'' ಎಂಬ ಅರ್ಥವನ್ನು ಹೇಳಿದರೂ ''ಆನಂದವು ಬಹಳ ಇದೆ'' ಎಂದು ಆನಂದಮಯ ಶಬ್ದಕ್ಕೆ ಅರ್ಥವಾಗುತ್ತದೆ. ''ಹಾಲಿನಲ್ಲಿ ನೀರೇ ಬಹಳ'' ಎಂದರೆ 'ಹಾಲು ಅಲ್ಪ' ಎಂದು ಅರ್ಥಬರುವಂತೆ ''ಬಹಳ ಆನಂದ'' ಎಂದು ಹೇಳಿದಾಗ 'ದುಃಖ ಅಲ್ಪ' ಎಂದೂ ಅರ್ಥವಾಗುತ್ತದೆ. ಹೀಗೆ ಈ ಶಬ್ದ ದುಃಖ ಸಂಬಂಧವಿರುವ ಜೀವನಿಗೆ ಅನ್ವರ್ಥವಾಗುತ್ತದೆ ಹೊರತು ಪರಮಾತ್ಮನಿಗಲ್ಲ.

**ಸಿದ್ಧಾಂತ :** ವಿಕಾರಾರ್ಥೇ ಮಯಟ್ ಶಬ್ದಾತ್ ನ ಬ್ರಾಹ್ಮಾತ್ರೇತಿ ಚೇನ್ನ ಹಿ ।
ಪ್ರಾಚುರ್ಯಾರ್ಥಕ ಏವೇತಿ ಮಯಟ್ ಶಬ್ದಃ ಪರೋ ಹಿ ಸಃ ॥

ಮೇಲಿನ ವಾದ ಸರಿಯಲ್ಲ. 'ಅನ್ನಮಯ' ಎಂಬಲ್ಲಿ ಮಯಟ್ ಪ್ರತ್ಯಯಕ್ಕೆ ವಿಕಾರ ಎಂಬ ಅರ್ಥವಿದ್ದರೂ ''ಪ್ರಾಣಮಯ'' ಶಬ್ದದಲ್ಲಿರುವ ಮಯಟ್ ಪ್ರತ್ಯಯಕ್ಕೆ ''ಪ್ರಾಚುರ್ಯ'' ಎಂದೇ ಅರ್ಥ. ಈ ದೇಹದಲ್ಲಿರುವ ಪ್ರಾಣಾಪಾನಾದಿ ವಾಯುಗಳು ಮುಖ್ಯಪ್ರಾಣನ ವೃತ್ತಿಗಳು. ಅವು ಪ್ರಾಣನ ವಿಕಾರಗಳಲ್ಲ. ಆದ್ದರಿಂದ 'ಪ್ರಾಣಮಯ' ಎಂದರೆ 'ಪ್ರಾಣಪ್ರಚುರ' ಎಂದರ್ಥ. ಅದರಂತೆ 'ಆನಂದಮಯ' ಎಂದರೂ ಆನಂದ ಪ್ರಚುರ ಎಂದೇ ಅರ್ಥ.

ಆನಂದಮಯ ಶಬ್ದವು ಆನಂದವಿದೆ ಎಂದಷ್ಟೇ ತಿಳಿಸುತ್ತದೆ. 'ದುಃಖವೂ ಇದೆ' ಎಂದು ಅದರ ಅರ್ಥವಲ್ಲ. ದುಃಖವು ಇತರ ಪ್ರಮಾಣಗಳಿಂದ ಸಿದ್ಧವಾದರೆ ಅದು ಆನಂದದ ಜೊತೆ ಇರಬಹುದು ಎಂದಿಷ್ಟೇ ಆ ಶಬ್ದ ತಿಳಿಸುತ್ತದೆ ಹೊರತಾಗಿ, ಆ ಶಬ್ದದಿಂದ, ದುಃಖವೂ ಇದೆ ಎಂದು ತಿಳಿಯುವುದಿಲ್ಲ.

ಆದ್ದರಿಂದ ಆನಂದಮಯ ಬ್ರಹ್ಮನೆನ್ನಲು ಮಯಟ್ ಪ್ರತ್ಯಯವು ಬಾಧಕವಾಗುವುದಿಲ್ಲ.

## 3. ತದ್ಧೇತು ವ್ಯಪದೇಶಾಚ್ಚ ॥

ಏಷ ಹ್ಯೇವಾನಂದಯಾತಿ ಇತ್ಯಾತ್ಮಾನಂದಸ್ಯ ವಾಕ್ಯತಃ ।
ಹೇತುತ್ವ ವ್ಯಪದೇಶಾಚ್ಚ ಬ್ರಹ್ಮಾನಂದಮಯೋ ಭವೇತ್ ॥

ಈ ಆನಂದಮಯ ಪ್ರಕರಣದಲ್ಲಿ ''ಏಷ ಹ್ಯೇವಾನಂದಯಾತಿ'' ಈ ಆನಂದಮಯನೇ ಜೀವಾತ್ಮನ ಆನಂದಕ್ಕೆ ಕಾರಣ ಎನ್ನಲಾಗಿದೆ. ಹೀಗೆ ಜೀವಾತ್ಮನ ಆನಂದಕ್ಕೆ ಕಾರಣನಾದ ಆನಂದಮಯ ಜೀವಾತ್ಮನಾಗಿರಲು ಸಾಧ್ಯವಿಲ್ಲ.

## 4 . ಮಾಂತ್ರವರ್ಣಿಕಮೇವ ಚ ಗೀಯತೇ ॥

ಸತ್ಯಂ ಜ್ಞಾನಮನಂತಂ ಇತ್ಯುದಿತಂ ಮಂತ್ರವರ್ಣತಃ ।
ಆನಂದಮಯ ಶಬ್ದೇನ ಗೀಯತೇ ತತ್ಪರಂ ತಥಾ ॥

ಈ ಉಪನಿಷತ್ತಿನ ಆರಂಭದ ಮಂತ್ರದಲ್ಲಿ ''ಸತ್ಯಂ ಜ್ಞಾನಂ ಅನಂತಂ ಬ್ರಹ್ಮ'' ಎಂದು ಪ್ರಸ್ತುತನಾದ ಬ್ರಹ್ಮನನ್ನೇ ಈ ಆನಂದಮಯ ಪ್ರಕರಣದಲ್ಲಿ ಹೇಳಲಾಗಿದೆ. ಮಂತ್ರದಲ್ಲಿ ಹೇಳಿದ ಬ್ರಹ್ಮ ಜೀವಾತ್ಮನಲ್ಲ, ಅವನು ಜೀವಾತ್ಮನಿಂದ ಪ್ರಾಪ್ಯನಾದವನು. ಆದ್ದರಿಂದ ಆನಂದಮಯ ಪ್ರಕರಣದಲ್ಲಿ ಹೇಳಲಾದ ಆತ್ಮವೂ ಬ್ರಹ್ಮನೆ ಹೊರತು, ಜೀವಾತ್ಮನಲ್ಲ.

## 5. ನೇತರೋಽನುಪಪತ್ತೇಃ ॥

ಬ್ರಹ್ಮೇತರೋ ಮಂತ್ರವರ್ಣೇ ಸೋದಿತಸ್ತ್ವಲ್ಪಧೀರಯಂ।
ಬಹು ಸ್ಯಾಮಿತಿ ಸಂಕಲ್ಪಾನುಪಪತ್ತೇರ್ವಿಶೇಷತಃ॥

ಪ್ರಾರಂಭದ ಮಂತ್ರವರ್ಣದಲ್ಲಿ ಹೇಳಿದ ಬ್ರಹ್ಮತತ್ತ್ವವೂ ಜೀವಾತ್ಮನಲ್ಲ. ಏಕೆಂದರೆ, ಅಲ್ಲಿ ''ಸೋಽಶ್ನುತೇ ಸರ್ವಾನ್ ಕಾಮಾನ್ ಸಹ ಬ್ರಹ್ಮಣಾ ವಿಪಶ್ಚಿತೇತಿ'' ಎಂದು ಜೀವಾತ್ಮನಿಂದ ಪ್ರಾಪ್ಯನಾದ ಬ್ರಹ್ಮನಿಗೆ ''ವಿಪಶ್ಚಿತಾ'' ಎಂಬ ವಿಶೇಷಣವನ್ನು ಕೊಡಲಾಗಿದೆ. ''ವಿವಿಧಂ+ಪಶ್ಯತ್+ಚಿತ್=ವಿಪಶ್ಚಿತ್. ಸಕಲವನ್ನೂ ತಿಳಿದು ಸೃಷ್ಟಿಮಾಡುವವನು ವಿಪಶ್ಚಿತ್- ಇದು ಬ್ರಹ್ಮನ ಅಸಾಧಾರಣ ಗುಣ. ಆದ್ದರಿಂದ ಜೀವನಿಗೆ ಈ ವಿಶೇಷಣ ಹೊಂದುವುದಿಲ್ಲ.

## 6. ಭೇದವ್ಯಪದೇಶಾಚ್ಚ॥

ಜೀವಾಚ್ಚ ವಿಜ್ಞಾನಮಯಾತ್ ಭೇದೇನಾಸ್ಯ ವಿಮರ್ಶನಾತ್ ।
ಆನಂದಮಯ ಇತ್ಯತ್ರ ಬ್ರಹ್ಮೈವ ಪ್ರತಿಪಾದ್ಯತೇ॥

ಈ ಪ್ರಕರಣದಲ್ಲಿ ಅನ್ನಮಯ, ಪ್ರಾಣಮಯ, ಮನೋಮಯಕೋಶಗಳ ತರುವಾಯ ವಿಜ್ಞಾನಮಯನ ನಿರೂಪಣೆ ಇದೆ. ಈ ವಿಜ್ಞಾನಮಯ ಜೀವಾತ್ಮ. ಅಂತಹ ವಿಜ್ಞಾನಮಯಆತ್ಮನಿಗಿಂತ ಆನಂದಮಯ ಭಿನ್ನನಾಗಿದ್ದಾನೆ ಎಂದು ಉಪನಿಷತ್ತೇ ಹೇಳುತ್ತದೆ- ''ತಸ್ಮಾದೇತಸ್ಮಾದ್ವಿಜ್ಞಾನಮಯಾತ್। ಅನ್ಯೋಽಂತರ ಆತ್ಮಾಽನಂದಮಯಃ॥'' ಆದ್ದರಿಂದ ಆನಂದಮಯ ಜೀವಾತ್ಮನಲ್ಲ.

## 7. ಕಾಮಾಚ್ಚನಾನುಮಾನಾಪೇಕ್ಷಾ॥

ಇಚ್ಛಯೈವ ಜಗತ್ಸೃಷ್ಟೇಃ ಅಚಿತ್ ಸಂಸರ್ಗತೋ ವಿನಾ।
ಬಹುಸ್ಯಾಮಿತಿ ವಾಕ್ಯಾತ್ತು ನ ಜೀವೋಽಸ್ಯ ಹಿ ಕಾರಣಮ್॥

'ಸೋಽಕಾಮಯತ। ಬಹುಸ್ಯಾಂ ಪ್ರಜಾಯೇಯೇತಿ'' ಹೀಗೆ ''ಆನಂದಮಯ ಆತ್ಮವು ಯಾವ ಅಪೇಕ್ಷೆಯೂ ಇಲ್ಲದೆ, ಸ್ವತಃ ತಾನು ಇಚ್ಛಾಮಾತ್ರದಿಂದ ಜಗತ್ತನ್ನು ಸೃಷ್ಟಿಸಿತು'' ಎನ್ನಲಾಗಿದೆ. ಚತುರ್ಮುಖಾದಿ ಜೀವಾತ್ಮರು ಜಡವಾದ ಪ್ರಕೃತಿ ತತ್ತ್ವವನ್ನು ಅವಲಂಬಿಸಿ ಸೃಷ್ಟಿಮಾಡುತ್ತಾರೆ. ಆದ್ದರಿಂದ ಆನಂದಮಯನು ಜೀವಾತ್ಮನಲ್ಲ. (ಅನುಮಾ=ಪ್ರಕೃತಿತತ್ತ್ವ)

## 8 ಅಸ್ಮಿನ್ನಸ್ಯ ಚ ತದ್ಯೋಗಂ ಶಾಸ್ತಿ

ಜೀವಸ್ಯಾಸ್ಮಿನ್ನಿಹಾನಂದೇ ಬ್ರಹ್ಮಾನಂದಾವಾಪ್ತಿರುಚ್ಯತೇ।
ಲಬ್ಧ್ವಾನಂದೀತಿ ಶಾಸ್ತ್ರೇಣ ಬ್ರಹ್ಮಾನಂದಮಯಸ್ತತಃ॥

ಈ ಪ್ರಕರಣದಲ್ಲಿ ಆನಂದಮಯನಲ್ಲಿ - ಅಂದರೆ ಆನಂದಮಯನ ಸಂಬಂಧದಿಂದಾಗಿ - ಜೀವಾತ್ಮನಿಗೆ ಆನಂದಪ್ರಾಪ್ತಿಯನ್ನು ಹೇಳಲಾಗಿದೆ- 'ರಸೋ ವೈ ಸಃ। ರಸಂ ಹ್ಯೇವಾಯಂ ಲಬ್ಧ್ವಾऽನಂದೀ ಭವತಿ ॥' ಎಂದು. ಆದ್ದರಿಂದ ಆನಂದಮಯ ಜೀವಾತ್ಮನಲ್ಲ.

**ಚಂದ್ರಿಕಾದಲ್ಲಿ ಮಾಡಿದ ವಿಮರ್ಶೆ :** 1. ''ಆನಂದಮಯ ಬ್ರಹ್ಮನಲ್ಲ'' ಎಂದು ಪೂರ್ವಪಕ್ಷ ಮಾಡಲು ಹೇಳಿದ ಯುಕ್ತಿ ಆನಂದಮಯನನ್ನು ವಿಜ್ಞಾನಮಯನ ಶಾರೀರ ಆತ್ಮಾ ಎಂದು ಹೇಳಲಾಗಿದೆ ಎನ್ನುವುದು. ಈ ಯುಕ್ತಿ ಸರಿಯಲ್ಲ, ಪ್ರಾಣಮಯನನ್ನು ಅನ್ನಮಯನ ಶಾರೀರ ಆತ್ಮಾ ಎಂದು ಹೇಳಲಾಗಿದೆ. ಆದರೆ ಪ್ರಾಣಮಯ ಜೀವನಲ್ಲ. ಅಂದಮೇಲೆ, ಶಾರೀರ ಆತ್ಮಾ ಎಂದು ಹೇಳಿದ ಮಾತ್ರದಿಂದ ಆನಂದಮಯ ಜೀವ ಎಂದು ಪೂರ್ವಪಕ್ಷ ಮಾಡುವುದು ಹೇಗೆ? ಆದ್ದರಿಂದ ಪೂರ್ವಪಕ್ಷಯುಕ್ತಿ ಸರಿಯಲ್ಲ.

**2.** ಸಿದ್ಧಾಂತವೂ ಸರಿಯಲ್ಲ- ಆನಂದಮಯನು ಬ್ರಹ್ಮನಾದರೆ ''ತಸ್ಯ ಪುಚ್ಛಂ ಪ್ರತಿಷ್ಠಾ'' ಎಂದು ಆನಂದಮಯನ ಅವಯವ ಬ್ರಹ್ಮ ಎಂದು ಹೇಳಿದುದು ಹೇಗೆ?

## ದ್ವೈತಸಿದ್ಧಾಂತದಲ್ಲಿ ಸೂತ್ರಾರ್ಥ

**1. ಓಂ ॥ ಆನಂದಮಯೋऽಭ್ಯಾಸಾತ್ ॥ ಓಂ** - ಆನಂದಮಯನಲ್ಲಿ ''ಅಸದ್ ಬ್ರಹ್ಮೇತಿ ವೇದ ಚೇತ್। ಅಸ್ತಿ ಬ್ರಹ್ಮೇತಿ ಚೇದ್ವೇದ॥'' ಎಂದು ಬ್ರಹ್ಮ ಶಬ್ದವನ್ನು ಪುನಃ ಪುನಃ ಹೇಳಿರುವುದರಿಂದಾಗಿ ಆನಂದಮಯ ಬ್ರಹ್ಮನೇ ಹೊರತು ಜೀವಾತ್ಮನಲ್ಲ.

**2. ಓಂ ॥ ವಿಕಾರಶಬ್ದಾನ್ನೇತಿ ಚೇನ್ನ ಪ್ರಾಚುರ್ಯಾತ್ ॥ ಓಂ** - ಆನಂದಮಯ ಶಬ್ದದಲ್ಲಿ ''ವಿಕಾರ'' ಎಂದು ಅರ್ಥಬರುವ 'ಮಯಟ್' ಪ್ರತ್ಯಯವಿರುವುದರಿಂದ ನಿರ್ವಿಕಾರನಾದ ಬ್ರಹ್ಮನಿಗೆ ಅದು ವಾಚಕವಲ್ಲ ಎನ್ನಬಾರದು. ಏಕೆಂದರೆ ಆ ಮಯಟ್ ಪ್ರತ್ಯಯಕ್ಕೆ ''ಪ್ರಾಚುರ್ಯ-ಪೂರ್ಣ'' ಎಂದು ಅರ್ಥ.

**3. ಓಂ ॥ ತದ್ಧೇತು ವ್ಯಪದೇಶಾಚ್ಚ ॥ ಓಂ** - ಈ ಪ್ರಕರಣದಲ್ಲಿ ಬ್ರಹ್ಮನು ಆನಂದಮಯ ಎಂದು ಸಾಧಿಸಲು ಜಗನ್ನಿಯಾಮಕತ್ವರೂಪ ಹೇತುವನ್ನು ಹೇಳಲಾಗಿದೆ. ಈ ಹೇತು- ಕಾರಣ ಬ್ರಹ್ಮನಲ್ಲೇ ಇರುವುದರಿಂದ ಅವನೇ ಆನಂದಮಯ.

**4. ಓಂ ॥ ಮಾಂತ್ರವರ್ಣಿಕಮೇವ ಚ ಗೀಯತೇ ॥ ಓಂ** – ಈ ಉಪನಿಷತ್ತಿನ ಪ್ರಾರಂಭದಲ್ಲಿರುವ ''ಸತ್ಯಂ ಜ್ಞಾನಂ ಅನಂತಂ ಬ್ರಹ್ಮ'' ಎಂಬ ಮಂತ್ರದಲ್ಲಿ ಹೇಳಿರುವ ಬ್ರಹ್ಮನ ಗುಣಗಳನ್ನೇ ಅನ್ನಮಯಾದಿ ಐದು ಪ್ರಕರಣಗಳಲ್ಲಿ ವಿವರಿಸಲಾಗಿದೆ. ಆದ್ದರಿಂದ ಅನ್ನಮಯಾದಿ ಐದು ನಾಮಗಳೂ ಬ್ರಹ್ಮನವೇ ಆಗಿವೆ.

**5. ಓಂ ॥ ನೇತರೋಽನುಪಪತ್ತೇಃ ॥ ಓಂ** – ಈ ಉಪನಿಷತ್ತಿನ ಪ್ರಾರಂಭದಲ್ಲಿ ''ಬ್ರಹ್ಮವಿದಾಪ್ನೋತಿ ಪರಂ'' ಎಂದು ಬ್ರಹ್ಮಜ್ಞಾನದಿಂದ ಮೋಕ್ಷಪ್ರಾಪ್ತಿಯನ್ನು ತಿಳಿಸಲಾಗಿದೆ. ಅನ್ನಮಯಾದಿಗಳು ಬ್ರಹ್ಮನ ನಾಮಗಳಲ್ಲವಾದರೆ ''ಯೇಽನ್ನಂ ಬ್ರಹ್ಮೋಪಾಸತೇ'' ಎಂಬಲ್ಲಿ ಹೇಳಿದಂತೆ ಬ್ರಹ್ಮನಲ್ಲದ ಅನ್ನಮಯದ ಉಪಾಸನೆಯಿಂದ ಮೋಕ್ಷವನ್ನು ಹೇಳಿದಂತಾಗುತ್ತದೆ. (ಆದರೆ ಅಬ್ರಹ್ಮಜ್ಞಾನದಿಂದ ಮೋಕ್ಷವಿಲ್ಲ) ಆದ್ದರಿಂದ ಅನ್ನಮಯಾದಿಗಳು ಬ್ರಹ್ಮನಲ್ಲ ಎನ್ನಬಾರದು.

**6. ಓಂ ॥ ಭೇದವ್ಯಪದೇಶಾಚ್ಚ ॥ ಓಂ** – ಬ್ರಹ್ಮವಲ್ಲಿಯಲ್ಲಿ ಚತುರ್ಮುಖಾದಿಗಳಿಗೆ ಮತ್ತು ಆನಂದಮಯನಿಗೆ ಭೇದವನ್ನು ಸಾಧಿಸುವ ಧರ್ಮಗಳನ್ನು ಹೇಳಲಾಗಿದೆ. ಚತುರ್ಮುಖನ ಆನಂದ ರುದ್ರನ ಆನಂದಕ್ಕಿಂತ ನೂರುಪಟ್ಟು ಹೆಚ್ಚು. ಆದರೆ ಪರಮಾತ್ಮನ ಆನಂದ ವರ್ಣನಾತೀತ. ಹೀಗೆ ಭೇದಕಧರ್ಮಗಳನ್ನು ಹೇಳಿರುವುದರಿಂದ ಆನಂದಮಯ ಬ್ರಹ್ಮಾದಿಗಳಲ್ಲ.

**7. ಓಂ ॥ ಕಾಮಾಚ್ಚ ನಾನುಮಾನಾಪೇಕ್ಷಾ ॥ ಓಂ** – ನಮ್ಮ ಬುದ್ಧಿಕೌಶಲದಿಂದ ಹೇಗೆ ಬೇಕಾದರೂ ಅನುಮಾನ ಮಾಡಬಹುದಾದ್ದರಿಂದ ಅತೀಂದ್ರಿಯ ತತ್ತ್ವಸಾಧನೆಗೆ ಅನುಮಾನದ ಅಪೇಕ್ಷೆ ಇಲ್ಲ. ಆದ್ದರಿಂದ ಜೀವೇಶ್ವರಾಭೇದಸಾಧಕ ಅನುಮಾನದ ವಿರೋಧ ಭೇದಸಾಧಕ ಶ್ರುತಿಗೆ ಬಂದರೂ ಶ್ರುತಿ ಅಪ್ರಮಾಣವಾಗುವುದಿಲ್ಲ.

ಈ ಸೂತ್ರವನ್ನು ಭಾಷ್ಯದೀಪಿಕಾದಲ್ಲಿ- ''ಕಾಮಾಚ್ಚನಾನುಮಾ ನಾಪೇಕ್ಷಾ'' ಎಂದು ವಿಭಾಗಿಸಲಾಗಿದೆ. ಅನುಮಾನವು ಇಚ್ಛಾನುಸಾರಿಯಾದುದರಿಂದ ಅದ್ವೈತವಾದಿಗಳು ಅಭೇದವನ್ನು ಸಾಧಿಸಲು ಹೇಳುವ ಅನುಮಾನವು ಪ್ರತ್ಯಕ್ಷ ವಿರುದ್ಧವಾದುದರಿಂದ, ನಾನುಮಾ= ಅನುಮಾನವೇ ಅಲ್ಲ. ಆದ್ದರಿಂದ, ಆ ಅನುಮಾನವು, ನಾಪೇಕ್ಷಾ= ತತ್ತ್ವಜ್ಞಾನಕ್ಕೆ ಕಾರಣವಲ್ಲ.

**8. ಓಂ ॥ ಅಸ್ಮಿನ್ನಸ್ಯ ಚ ತದ್ಯೋಗಂ ಶಾಸ್ತಿ ॥ ಓಂ** – ಅಸ್ಮಿನ್ ಈ ಪ್ರಕರಣದಲ್ಲಿ ಅಸ್ಯ= ಜೀವನಿಗೆ ತದ್ಯೋಗಂ (ತಸ್ಮಿನ್ ಯೋಗಂ)= ಆನಂದಮಯನಲ್ಲಿ ಸಂಬಂಧವನ್ನು ಶಾಸ್ತಿ= (ಉಪನಿಷತ್ತು) ಹೇಳುತ್ತದೆ. ಆದ್ದರಿಂದ ಆನಂದಮಯ ಜೀವಾತ್ಮನಲ್ಲ.

**॥ ಆನಂದಮಯಾಧಿಕರಣ ಮುಗಿಯಿತು ॥**

# ಅಂತಸ್ಥತ್ವಾಧಿಕರಣ – 7

'ಅದೃಶ್ಯೇಽನಾತ್ಮ್ಯೇ' ಇತ್ಯುಕ್ತಮ್। ತಚ್ಚಾದೃಶ್ಯತ್ವಂ

ಅಂತಃಪ್ರವಿಷ್ಟಂ ಕರ್ತಾರಮೇತಂ ಅಂತಶ್ಚಂದ್ರಮಸಿ ಮನಸಾ ಚರಂತಮ್ ।

ಸಹೈವ ಸಂತಂ ನ ವಿಜಾನಂತಿ ದೇವಾಃ। (ತೈ.ಆ.3-11)

ಇತಿ ಅಂತಃಸ್ಥಸ್ಯ ಕಸ್ಯಚಿದುಚ್ಯತೇ । ಸ ಚ 'ಇಂದ್ರೋ ರಾಜಾ' (ತೈ.ಆ. 3.11.6) 'ಸಪ್ತ ಯುಂಜಂತಿ' (ತೈ.ಆ.3.11.8) ಇತ್ಯಾದಿಭಿಃ ಅನ್ಯಃ ಪ್ರತೀಯತೇ । ತಸ್ಮಾತ್ ಸ ಏವ ಆನಂದಮಯಃ ಇತಿ ನ ಮಂತವ್ಯಮ್ ।

## ಓಂ ॥ ಅಂತಸ್ತದ್ಧರ್ಮೋಪದೇಶಾತ್ ॥ ಓಂ

'ಅಂತಃ ಶ್ರೂಯಮಾಣೋ ವಿಷ್ಣುರೇವ।

'ಅಂತಃ ಸಮುದ್ರೇ ಮನಸಾ ಚರಂತಮ್ ಬ್ರಹ್ಮಾನ್ವವಿಂದದ್ದಶಹೋತಾ-ರಮರ್ಣೇ' । (ತೈ.ಆ.3.11.1) 'ಸಮುದ್ರೇಽಂತಃ ಕವಯೋ ವಿಚಕ್ಷತೇ ಮರೀಚೀನಾಂ ಪದಮಿಚ್ಛಂತಿ ವೇಧಸಃ ॥' (ತೈ.ಆ.3.11.4) 'ಯಸ್ಯಾಂಡಕೋಶಂ ಶುಷ್ಮಮಾಹುಃ' (3.11.4)

ಇತ್ಯಾದಿ ತದ್ಧರ್ಮೋಪದೇಶಾತ್ । ಸ ಹಿ ಕ್ಷೀರಸಮುದ್ರಶಾಯೀ । ತಸ್ಯ ಚ ವೀರ್ಯಮಂಡಕೋಶಃ।

ಸೋಽಭಿಧ್ಯಾಯ ಶರೀರಾತ್ ಸ್ವಾತ್ ಸಿಸೃಕ್ಷುರ್ವಿವಿಧಾಃ ಪ್ರಜಾಃ।
ಅಪ ಏವ ಸಸರ್ಜಾದೌ ತಾಸು ವೀರ್ಯಮವಾಸೃಜತ್ ॥
ತದಂಡಮಭವದ್ಧೈಮಂ ಸಹಸ್ರಾಂಶು ಸಮಪ್ರಭಮ್ ।
ಯಸ್ಮಿನ್ ಜಜ್ಞೇ ಸ್ವಯಂ ಬ್ರಹ್ಮಾ ಸರ್ವಲೋಕಪಿತಾಮಹಃ ॥
ಆಪೋ ನಾರಾ ಇತಿ ಪ್ರೋಕ್ತಾ ಆಪೋ ವೈ ನರಸೂನವಃ।
ಅಯನಂ ತಸ್ಯ ತಾಃ ಪೂರ್ವಂ ತೇನ ನಾರಾಯಣಃ ಸ್ಮೃತಃ ॥

ಇತಿ ವ್ಯಾಸಸ್ಮೃತೇಃ।

''ಅಹಂ ತತ್ತೇಜೋ ರಶ್ಮೀನ್ನಾರಾಯಣಂ ಪುರುಷಂ ಜಾತಮಗ್ರತಃ।
ಪುರುಷಾತ್ ಪ್ರಕೃತಿರ್ಜಗದಂಡಂ....॥''

ಇತಿ ಚತುರ್ವೇದ ಶಿಖಾಯಾಮ್ ॥ 20 ॥

ಹಿಂದಿನ ಅಧಿಕರಣದಲ್ಲಿ ಆನಂದಮಯನ ಕುರಿತು ''ಅದೃಶ್ಯೇಽನಾತ್ಮ್ಯೇ'' ಎಂಬ

ಉಪನಿಷದ್ವಾಕ್ಯವನ್ನು ಉದಾಹರಿಸಲಾಯಿತು. ಅಲ್ಲಿ ಹೇಳಲಾದ ಅದೃಶ್ಯತ್ವಗುಣವು ತೈತ್ತಿರೀಯ ಶ್ರುತಿಯಲ್ಲಿ ಶರೀರಾಂತಸ್ಥನಾದವನಿಗೆ ಹೇಳಲ್ಪಟ್ಟಿದೆ - ''ಹೃದಯಗುಹೆಯೊಳಗಿರುವ, ಜಗತ್ಕರ್ತನಾದ, ಚಂದ್ರನೊಳಗೂ ಸ್ವೇಚ್ಛೆಯಿಂದ ಸಂಚರಿಸುವ, ಆ ದೇವನನ್ನು, ತಮ್ಮ ಜೊತೆಯಲ್ಲೇ ಇದ್ದರೂ, ದೇವತೆಗಳೂ ತಿಳಿಯಲಾರರು'' ಹೀಗೆ ನಿರೂಪಿಸಲ್ಪಟ್ಟ ಹೃದಯಾಂತಃಸ್ಥನು ಇದೇ ಪ್ರಕರಣದಲ್ಲಿ ''ಇಂದ್ರೋ ರಾಜಾ'' ಎಂದು ಇಂದ್ರಶಬ್ದದಿಂದ ಪ್ರಸ್ತುತನಾದ ಇಂದ್ರನೆಂದೋ, 'ಸಪ್ತ ಯುಂಜಂತಿ ರಥಮೇಕಚಕ್ರಂ' ಎಂದು ಸೂರ್ಯರಥದ ಪ್ರಸ್ತಾಪ ಇರುವುದರಿಂದ ಸೂರ್ಯನೆಂದೋ ತಿಳಿಯುತ್ತದೆ. ಆದ್ದರಿಂದ ಹಿಂದಿನ ಸೂತ್ರದಲ್ಲಿ ಹೇಳಿದ ಆನಂದಮಯನೂ ಇಂದ್ರ ಅಥವಾ ಸೂರ್ಯ. ಆದರೆ ಹೀಗೆ ತಿಳಿಯಬಾರದು - ತೈತ್ತಿರೀಯದಲ್ಲಿ ಹೇಳಲ್ಪಟ್ಟ ಹೃದಯಾಂತಃಸ್ಥನಾದವನು ಬ್ರಹ್ಮನೇ. ಏಕೆಂದರೆ, ಆ ಪ್ರಕರಣದಲ್ಲಿ ಬ್ರಹ್ಮನ ಅಸಾಧಾರಣ ಗುಣಗಳ ಪ್ರಸ್ತಾಪ ಇದೆ-

''ಪ್ರಳಯ ಕ್ಷೀರ ಸಮುದ್ರದ ನೀರು ಹಾಗೂ ಹಾಲಿನಲ್ಲಿ ಸ್ವೇಚ್ಛಾವಿಹಾರಿಯಾದ, ನಮ್ಮ ದಶೇಂದ್ರಿಯಗಳಿಗೆ ವಿಷಯವಸ್ತುಗಳನ್ನು ಒದಗಿಸುವವನನ್ನು ಚತುರ್ಮುಖ ಬ್ರಹ್ಮನು ತಿಳಿದನು'' ''ಪ್ರಳಯ-ಕ್ಷೀರಸಾಗರದಲ್ಲಿರುವ ಜೀವರಿಗೆ ಆಶ್ರಯನಾದವನನ್ನು ಜ್ಞಾನಿಗಳಾದ ಭೂತ-ಭವಿಷ್ಯತ್-ವರ್ತಮಾನ ಬ್ರಹ್ಮರು ಪ್ರಾರ್ಥಿಸುತ್ತಾರೆ''. ''ಬ್ರಹ್ಮಾಂಡವನ್ನು ಬ್ರಹ್ಮನ ವೀರ್ಯವನ್ನಾಗಿ ಹೇಳುತ್ತಾರೆ''.

ಕ್ಷೀರ ಸಮುದ್ರಶಾಯಿ ಅವನೇ ತಾನೆ? ಈ ಬ್ರಹ್ಮಾಂಡವೂ ಅವನದೇ ವೀರ್ಯ - ''ವಾಸುದೇವನಿಂದ ಅಭಿವ್ಯಕ್ತನಾದ ವಿಷ್ಣುವು ತನ್ನ ಶರೀರದಿಂದ ನಾನಾವಿಧ ಜೀವಿಗಳನ್ನು ಸೃಷ್ಟಿಮಾಡಲು ಬಯಸಿ, ಯೋಚಿಸಿ ಮೊದಲು ನೀರನ್ನು ಸೃಷ್ಟಿಮಾಡಿದ. ಅದರಲ್ಲಿ ತನ್ನ ವೀರ್ಯವನ್ನು ಹಾಕಿದ. ಅದು ಸೂರ್ಯನಂತೆ ಕಾಂತಿಯುಳ್ಳ ಬಂಗಾರದ ಬ್ರಹ್ಮಾಂಡವಾಯಿತು. ಅದರಲ್ಲಿ, ಎಲ್ಲರಿಗೂ ತಾತನೆನಿಸಿದ ಚತುರ್ಮುಖನು ಪರಮಾತ್ಮನಿಂದ (ಸ್ವಯಂ) ಹುಟ್ಟಿದ. ಹೀಗೆ, ನರನೆನಿಸಿದ ವಿಷ್ಣುವಿನಿಂದ ಹುಟ್ಟಿರುವುದರಿಂದ ನೀರು 'ನಾರ' ಎನಿಸಿದೆ. ಪ್ರಲಯಕಾಲದಲ್ಲಿ ಅಂತಹ ನೀರೇ ಆಶ್ರಯವಾದುದರಿಂದ ವಿಷ್ಣು 'ನಾರಾಯಣ' ಎನಿಸಿದ್ದಾನೆ'' ಹೀಗೆ ವ್ಯಾಸಸ್ಮೃತಿಯಲ್ಲಿದೆ.

''ಅಹೇಯವಾದ, ಜೀವಪ್ರೇರಕವಾದ, ಪೂರ್ಣಷಡ್ಗುಣಾತ್ಮಕವಾದ ನಾರಾಯಣಾಖ್ಯ ತೇಜಸ್ಸು ಪ್ರಲಯಕಾಲದಲ್ಲಿತ್ತು. ಅದರಿಂದ ಮೊದಲು ಚಿತ್ಪ್ರಕೃತಿ ಹುಟ್ಟಿತು. ಆಮೇಲೆ ಜೀವ ಸಮುದಾಯ, ಅನಂತರ ಬ್ರಹ್ಮಾಂಡ ಹುಟ್ಟಿತು'' ಹೀಗೆ ಚತುರ್ವೇದ ಶಿಖಾ ಎಂಬ ಗ್ರಂಥದಲ್ಲಿದೆ. ಇಲ್ಲೂ ಪ್ರಲಯಸ್ಥತ್ವ, ಬ್ರಹ್ಮಾಂಡವೀರ್ಯತ್ವಗಳು ವಿಷ್ಣುಧರ್ಮಗಳೆಂದು ತಿಳಿಯುತ್ತದೆ.

**ವಿವರಣೆ :** ಈ ಅಧಿಕರಣದಲ್ಲಿ ''ಅಂತಃಸ್ಥತ್ವ'' ಎಂಬ ಧರ್ಮವನ್ನು ಸಮನ್ವಯ ಮಾಡಲಾಗುತ್ತಿದ್ದರೂ ಅದರಿಂದ ಇಂದ್ರಾದಿ ಅನೇಕ ಆಧಿದೈವಿಕ ನಾಮಪದಗಳನ್ನು

ಸಮನ್ವಯ ಮಾಡಿದಂತಾಗಿದೆ. ಇಂದ್ರಾದಿನಾಮಗಳು ಅನ್ಯತ್ರ ಪ್ರಸಿದ್ಧಗಳು. ಏಕೆಂದರೆ, ಇಂದ್ರ ಶಬ್ದವನ್ನು ಕೇಳಿದ ಕೂಡಲೇ ದೇವೇಂದ್ರನೇ ಸ್ಮರಣೆಗೆ ಬರುತ್ತಾನೆ. ಹೀಗೆ, ಅನ್ಯತ್ರ ಪ್ರಸಿದ್ಧನಾಮಾತ್ಮಕ ಶಬ್ದವನ್ನು ಸಮನ್ವಯ ಮಾಡುವುದರಿಂದ ಈ ಅಧಿಕರಣ ಶಾಸ್ತ್ರ ಅಧ್ಯಾಯ, ಪಾದಗಳಿಗೆ ಸಂಗತವಾಗಿದೆ. ಹಿಂದಿನ ಆನಂದಮಯಾಧಿಕರಣದ ಸಿದ್ಧಾಂತದ ಮೇಲೆ ಬರುವ ಆಕ್ಷೇಪಕ್ಕೆ ಸಮಾಧಾನ ನೀಡುವುದರಿಂದ ಪೂರ್ವಾಧಿಕರಣ ಸಂಗತಿಯೂ ಇದೆ.

**1. ಪೂರ್ವಪಕ್ಷ** – ಹಿಂದಿನ ಅಧಿಕರಣದ ಕೊನೆಯ ಸೂತ್ರದಲ್ಲಿ ''ಅದೃಶ್ಯೇ ಅನಾತ್ಮ್ಯೇ ಅನಿಲಯನೇಽಭಯಂ ಪ್ರತಿಷ್ಠಾಂ ವಿಂದತೇ'' ಎಂಬ ಶ್ರುತಿ ಜೀವಾತ್ಮನಿಗೆ ಮೋಕ್ಷದಲ್ಲಿ ಆನಂದಮಯನ ಪ್ರಾಪ್ತಿಯನ್ನು ಹೇಳುತ್ತಿರುವುದರಿಂದ ಆನಂದಮಯ ಬ್ರಹ್ಮ ಎಂದು ಸಿದ್ಧಾಂತ ಮಾಡಲಾಗಿದೆ. ಆ ಶ್ರುತಿಯಲ್ಲಿ ಆನಂದಮಯ ಅದೃಶ್ಯ-ಅವನನ್ನು ಪೂರ್ಣವಾಗಿ ತಿಳಿಯಲಾಗದು ಎನ್ನಲಾಗಿದೆ. ಈ ಅದೃಶ್ಯತ್ವ ಗುಣವನ್ನು ತೈತ್ತಿರೀಯ ಆರಣ್ಯಕದಲ್ಲಿ ಹೃದಯಾಂತಸ್ಥನಾದವನಿಗೆ ಹೇಳಲಾಗಿದೆ. ಆ ಹೃದಯಾಂತಸ್ಥ ಯಾರೆಂದು ಸ್ಪಷ್ಟವಾಗಿಲ್ಲ. ಅದರ ಸಮೀಪದಲ್ಲಿ ಇಂದ್ರನಾಮವಿದೆ. ಸೂರ್ಯನಿಗೆ ಸಂಬಂಧಪಟ್ಟ ಸಪ್ತಾಶ್ವಉಳ್ಳ ರಥದ ಪ್ರಸ್ತಾಪ ಇದೆ. ಆದ್ದರಿಂದ ಸೂರ್ಯ-ಇಂದ್ರಾದಿಗಳೇ ಹೃದಯಾಂತಸ್ಥರು. ಅದೃಶ್ಯತ್ವಗುಣವೂ ಅವರದೇ. ಆದ್ದರಿಂದ ಆನಂದಮಯರೂ ಅವರೇ, ಬ್ರಹ್ಮನಲ್ಲ.

**2. ಸಿದ್ಧಾಂತ** – ತೈತ್ತಿರೀಯ ಆರಣ್ಯಕದಲ್ಲಿ ಪ್ರಲಯ ಸಮುದ್ರದಲ್ಲಿ ವಿಹರಿಸುವ, ಬ್ರಹ್ಮಾಂಡವನ್ನೇ ವೀರ್ಯವನ್ನಾಗಿ ಪಡೆದಿರುವ ಉಲ್ಲೇಖವಿದೆ. ಇವೆರಡೂ ವಿಷ್ಣುವಿಗೇ ಸಲ್ಲುವ ಗುಣಗಳು. ಇಂದ್ರ, ಸೂರ್ಯ ಹೆಸರುಗಳನ್ನಾದರೂ ಬ್ರಹ್ಮನಲ್ಲಿ ಹೊಂದಿಸಬಹುದು. ಆದರೆ ಈ ಎರಡು ಗುಣಗಳನ್ನು ಇಂದ್ರಾದಿಗಳಲ್ಲಿ ಹೇಳಲು ಸಾಧ್ಯವಿಲ್ಲ. ಹೀಗೆ ಶ್ರುತಿಗಿಂತಲೂ ನಿರವಕಾಶವಾದ ಲಿಂಗಗಳು ಇರುವುದರಿಂದ ಹೃದಯಾಂತಃಸ್ಥನಾದವನು ವಿಷ್ಣು ಎಂದೇ ನಿರ್ಧರಿಸಬಹುದು.

**3.** ಈ ಪ್ರಕರಣದಲ್ಲಿ 'ತ್ವಷ್ಟಾರಂ ರೂಪಾಣಿ' ಎಂದು ತ್ವಷ್ಟೃ ಶಬ್ದವಿದೆ.

'ಬ್ರಹ್ಮೇಂದ್ರ-ಅಗ್ನಿಂ ಜಗತಃ ಪ್ರತಿಷ್ಠಾಂ ದಿವ ಆತ್ಮಾನಂ ಸವಿತಾರಂ ಬೃಹಸ್ಪತಿಮ್ ॥'

ಎಂದು ಬ್ರಹ್ಮಾದಿ ಶಬ್ದಗಳು ಪ್ರಸ್ತುತವಾಗಿವೆ. 'ಅಂತಸ್ಥತ್ವ' ಎಂಬ ಒಂದು ಧರ್ಮವನ್ನು ವಿಷ್ಣುವಿನಲ್ಲಿ ಸಮನ್ವಯ ಮಾಡುವುದರಿಂದ ಈ ಎಲ್ಲ ನಾಮಗಳೂ ವಿಷ್ಣುವಿನಲ್ಲೇ ಸಮನ್ವಯಗೊಳ್ಳುತ್ತವೆ.

**ಶ್ರುತ್ಯರ್ಥ :** ಇಂದ್ರೋ ರಾಜಾ ಜಗತೋ ಯ ಈಶೇ

ಸಪ್ತಹೋತಾ ಸಪ್ತಧಾ ವಿಕ್ಲೃಪ್ತಃ ॥ ಇದು ಇಂದ್ರ ಶಬ್ದ ಘಟಿತ ಶ್ರುತಿ.

ಅ. ಸಪ್ತಯುಂಜಂತಿ ರಥಮೇಕಚಕ್ರಂ- ಎಂದು ಸೂರ್ಯರಥಕ್ಕೆ ಏಳು ಕುದುರೆಗಳು ಎನ್ನಲಾಗಿದೆ. ಗಾಯತ್ರ್ಯಾದಿ ಏಳು ಛಂದಸ್ಸುಗಳಿಗೆ ಅಭಿಮಾನಿದೇವತೆಗಳೇ ಏಳು ಕುದುರೆಗಳು. ಆದರೆ ''ಏಕೋಽಶ್ವೋ ವಹತಿ ಸಪ್ತನಾಮಾ'' ಎಂದು ಸೂರ್ಯರಥಕ್ಕೆ ಒಂದೇ ಅಶ್ವ. ಅದರ ಹೆಸರು ಸಪ್ತ ಎನ್ನಲಾಗಿದೆ. ಇದಕ್ಕೆ ತತ್ತ್ವಪ್ರದೀಪದಲ್ಲಿ ಹೀಗೆ ಉತ್ತರಿಸಲಾಗಿದೆ- 'ಸಪ್ತಛಂದ' ಎಂಬ ಹೆಸರಿನ ವೇದಾಭಿಮಾನಿದೇವತೆ ಏಳು ಕುದುರೆಗಳಲ್ಲಿ ಒಂದು. ಅದು ಛಂದೋಭಿಮಾನಿದೇವತೆಯಲ್ಲ. ಅದರ ಅಭಿಪ್ರಾಯದಿಂದ ''ಏಕೋಽಶ್ವಃ'' ಎನ್ನಲಾಗಿದೆ. ''ಸಪ್ತಛಂದೋಭಿಮಾನಿನಾ ಪೃಥಕ್ ವೇದಾಭಿಮಾನೀ ಸಪ್ತಛಂದೋ ನಾಮಾ ಸಪ್ತಸು ಏಕೋಽಸ್ತಿ ॥''

ಆ. ದಶಹೋತಾರಮರ್ಣೇ - ದಶ=ಹತ್ತು ಇಂದ್ರಿಯಗಳಿಗೆ ಹೋತಾರಂ= ಭೋಗ್ಯವಸ್ತುಗಳನ್ನು ನೀಡುವ, ಅರ್ಣೇ=ನೀರಿನಲ್ಲಿ.

ಇ) ಮರೀಚೀನಾಂ ಪದಂ - ಮರೀಚಿ=ಜೀವರು. ''ಮರೀಚಿಃ ಮಿತರುಕ್ತ್ವತಃ'' ಎಂದು ಛಾಂದೋಗ್ಯಭಾಷ್ಯದಲ್ಲಿ ಆಚಾರ್ಯರು ಹೇಳಿದ್ದಾರೆ. ವೇಧಸಃ=ಭೂತ-ಭಾವಿ ಬ್ರಹರು ಮರೀಚೀನಾಂ=ಜೀವರಿಗೆ ಪದಂ=ಆಶ್ರಯನಾದ ವಿಷ್ಣುವನ್ನು ಇಚ್ಛಂತಿ= ಪ್ರಾರ್ಥಿಸುತ್ತಾರೆ.

ಈ) ರಶ್ಮೀತ್ - ರತಿಃ ಶಂ ಚ ಮಿತಂ ಅಸ್ಯೇತಿ ರಶ್ಮಿಃ ಜೀವಃ-ಪರಿಮಿತಾನಂದನಾದ ಜೀವ ರಶ್ಮಿ. ಅವನನ್ನು ಇಂದಯತಿ-ಪ್ರೇರಿಸುತ್ತಾನೆ. ಹೀಗೆ ಜೀವ ಪ್ರೇರಕ ವಿಷ್ಣು ರಶ್ಮೀತ್ ಎನಿಸಿದ್ದಾನೆ.

ಅಹಂ-ಅಹೇಯತ್ವಾತ್ ಅಹಂ। ಬಿಟ್ಟಿರಲಾಗದ ಪರಮಾತ್ಮ ॥ಸೂತ್ರ 20॥

## ಓಂ ॥ ಭೇದವ್ಯಪದೇಶಾಚ್ಚಾನ್ಯಃ ॥ ಓಂ

**'ಇಂದ್ರಸ್ಯಾತ್ಮಾ ನಿಹಿತಃ ಪಂಚಹೋತಾ...' 'ವಾಯೋರಾತ್ಮಾನಂ ಕವಯೋ ನಿಚಿಕ್ಯುಃ...' 'ಅಂತರಾದಿತ್ಯೇ ಮನಸಾ ಚರಂತಂ ದೇವಾನಾಂ ಹೃದಯಂ ಬ್ರಹ್ಮಾನ್ವವಿಂದತ್'' (ತೈ.ಆ. 3.11 ಇತ್ಯಾದಿ ಭೇದವ್ಯಪದೇಶಾತ್॥**

## ॥ ಇತಿ ಅಂತಸ್ಥತ್ವಾಧಿಕರಣಮ್ ॥

''ಇಂದ್ರನ ಅಂತರ್ಯಾಮಿಯಾದ ವಿಷ್ಣು ಪಂಚೇಂದ್ರಿಯಗಳಿಗೆ ವಿಷಯ ಸಮರ್ಪಕನಾಗಿ ಎಲ್ಲರ ಹೃದಯದಲ್ಲೂ ಇದ್ದಾನೆ'' ''ಜ್ಞಾನಿಗಳು ವಾಯುದೇವನ ಅಂತರ್ಯಾಮಿಯಾದವನನ್ನು ಕಂಡರು'' ''ಸೂರ್ಯನೊಳಗೆ ಸ್ವೇಚ್ಛೆಯಾಗಿ ಚಲಿಸುವ, ದೇವತೆಗಳ ಹೃದಯದಲ್ಲೂ ಚಲಿಸುವ (ಹೃದಿ ಅಯನಾತ್=ಹೃದಯಂ) ವಿಷ್ಣುವನ್ನು ಬ್ರಹ್ಮದೇವರು ತಿಳಿದರು''. ಹೀಗೆ ಈ ಪ್ರಕರಣದಲ್ಲಿ ಇಂದ್ರಾದಿ ದೇವತೆಗಳಿಗೂ, ವಿಷ್ಣುವಿಗೂ ಭೇದವನ್ನು ಹೇಳಿರುವುದರಿಂದ ವಿಷ್ಣು ಇಂದ್ರಾದಿಗಳಿಂದ ಅಭಿನ್ನನಲ್ಲ.

**ವಿವರಣೆ** : ''ಪೂರ್ವಪಕ್ಷದಲ್ಲಿ ಹೇಳಿದಂತೆ ಹೃದಯದೊಳಗಿರುವವರು ಇಂದ್ರಾದಿಗಳು ಎಂದು ಹೇಳಲೂ ಆಧಾರವಿದೆ. ಸಿದ್ಧಾಂತದಲ್ಲಿ ಹೇಳಿದಂತೆ ವಿಷ್ಣು ಎನ್ನಲೂ ಆಧಾರವಿದೆ. ಪೂರ್ವಪಕ್ಷ ನೀಡಿದ ಆಧಾರ ಇಂದ್ರಶಬ್ದ, ವಾಯುಶಬ್ದ. ಅದು ಶ್ರುತಿಯಾದ್ದರಿಂದ ಪ್ರಬಲ. ಸಿದ್ಧಾಂತಿಗಳು ಹೇಳಿದ ಆಧಾರ-ಲಿಂಗ-ಧರ್ಮ. ಅದು ವಿಷ್ಣುವಿನಲ್ಲೇ ಇರುವುದರಿಂದ ನಿರವಕಾಶ. ಇವೆರಡರಲ್ಲಿ ಯಾವುದನ್ನೂ ದುರ್ಬಲ ಎಂದು ಉಪೇಕ್ಷೆ ಮಾಡುವಂತಿಲ್ಲ. ಆದ್ದರಿಂದ ಇಂದ್ರಾದಿಗಳಿಂದ ವಿಷ್ಣುವಿಗೆ ಅಭೇದವನ್ನು ಹೇಳಿದರೆ ಎರಡನ್ನೂ ಒಪ್ಪಿದಂತಾಗುತ್ತದೆ.'' ಇದು ಈ ಸೂತ್ರದ ಪೂರ್ವಪಕ್ಷ. ಆದರೆ, ಈ ಪ್ರಕರಣದಲ್ಲಿ ವಿಷ್ಣು ಇಂದ್ರಾದಿಗಳ ಅಂತರ್ಯಾಮಿ ಎಂದು ಹೇಳಿರುವುದರಿಂದ ಅವರಿಬ್ಬರಿಗೆ ಅಭೇದವನ್ನು ಹೇಳಲಾಗದು. ಸಿದ್ಧಾಂತದಲ್ಲಿ ಹೇಳಲಾದ ಲಿಂಗ ನಿರವಕಾಶ. ಆದರೆ, 'ಇಂದ್ರ' ಶ್ರುತಿಯನ್ನು ಪರಮಾತ್ಮನಲ್ಲೂ ವಿದ್ವದ್‌ರೂಢಿ, ಮಹಾಯೋಗಗಳಿಂದ ಕೂಡಿಸಬಹುದಾದ್ದರಿಂದ ಸಾವಕಾಶ. ಆದ್ದರಿಂದ ವಿಷ್ಣುವೇ ಅಂತಸ್ಥ. ಇಂದ್ರಾದಿನಾಮಗಳೂ ಅವನಿಗೇ ಸಲ್ಲುತ್ತವೆ, ಎಂದು ಸಿದ್ಧಾಂತ. **॥ 21 ॥**

## ದ್ವೈತದರ್ಶನದಲ್ಲಿ ಸೂತ್ರಗಳ ಅರ್ಥ-

### 1. ಓಂ ॥ ಅಂತಸ್ತದ್ಧರ್ಮೋಪದೇಶಾತ್ ॥ ಓಂ

ಸಮನ್ವಯಸೂತ್ರದಿಂದ ತತ್ತು ಎಂಬ ಪದವನ್ನು ಅನುವೃತ್ತಿ ಮಾಡಿಕೊಳ್ಳಬೇಕು. ಅಂತಃ='ಅಂತಃ ಪ್ರವಿಷ್ಟಂ ಕರ್ತಾರಮೀಶಂ' ಎಂಬ ತೈತ್ತಿರೀಯ ಶ್ರುತಿಯಲ್ಲಿ ಅಂತಸ್ಥನಾಗಿ ಹೇಳಲ್ಪಟ್ಟವನು, ತತ್ತು=ಬ್ರಹ್ಮನೇ. ತದ್ಧರ್ಮೋಪದೇಶಾತ್-ತತ್=ಆ ಬ್ರಹ್ಮನ ಧರ್ಮ=ಸಮುದ್ರಸ್ಥತ್ವಾದಿ ಅಸಾಧಾರಣ ಗುಣಗಳನ್ನು ಉಪದೇಶಾತ್='ಅಂತಃ ಸಮುದ್ರೇ' 'ಯಸ್ಯಾಂಡಕೋಶಂ' ಇತ್ಯಾದಿಯಾಗಿ ತೈತ್ತಿರೀಯ ಶ್ರುತಿಯಲ್ಲಿ ಹೇಳಿರುವುದರಿಂದ.

(ತತ್ತು ಇತಿ ವರ್ತತೇ । ಶ್ರುತಮಿತಿ ಶೇಷಃ । ತೈತ್ತಿರೀಯೇ ಅಂತಃ ಶ್ರುತಂ ಬ್ರಹ್ಮೈವ ನ ತು ಇಂದ್ರಾದಿಃ । ತಸ್ಯ=ಬ್ರಹ್ಮಣಃ ಧರ್ಮಾಣಾಂ=ಸಮುದ್ರಸ್ಥತ್ವ-ಬ್ರಹ್ಮಾಂಡವೀರ್ಯತ್ವಾದಿರೂಪಾಣಾಂ ತತ್ರ ಅಂತಃ ಶ್ರುತೌ ಉಪದೇಶಾತ್ ।)

### 2. ಓಂ ॥ ಭೇದವ್ಯಪದೇಶಾಚ್ಚಾನ್ಯಃ ॥ ಓಂ

ತತ್ ಎಂಬುದನ್ನು ಈ ಸೂತ್ರದಲ್ಲೂ ಅನುವೃತ್ತಿ ಮಾಡಿಕೊಳ್ಳಬೇಕು. ಚ ಶಬ್ದ ಸಮುಚ್ಚಯಾರ್ಥಕ. ವಿಷ್ಣು ಅಂತಸ್ಥನಾದವನಷ್ಟೇ ಅಲ್ಲ; ಭೇದವ್ಯಪದೇಶಾತ್= 'ಇಂದ್ರಸ್ಯಾತ್ಮಾನಂ' ಎಂದು ಇಂದ್ರಾದಿಗಳ ಅಂತರ್ಯಾಮಿ ಎಂದು ಭೇದಕ ಧರ್ಮವನ್ನು ಹೇಳಿರುವುದರಿಂದ ಸಃ=ಆ ವಿಷ್ಣುವು ಅನ್ಯಃ=ಇಂದ್ರಾದಿಗಳಿಗಿಂತ ಭಿನ್ನನೂ ಆಗಿದ್ದಾನೆ.

(ಚ ಶಬ್ದಃ ಸಮುಚ್ಚಯೇ । ತದಿತಿ ವರ್ತತೇ । ಇಂದ್ರಾದಿಭ್ಯಃ ಇತಿ ಯೋಗ್ಯತಯಾ ಲಭ್ಯತೇ । ನ ಕೇವಲಂ ತಚ್ಚಾಘೋರ್ಣ ವಿಷ್ಣುಃ ಅಂತಃಶ್ರುತಃ । ಕಿಂತು ಇಂದ್ರಾದಿಭ್ಯೋ ಅನ್ಯಶ್ಚ । ಇಂದ್ರಾದ್ಯಂತರ್ಯಾಮಿತ್ವೋಕ್ತ್ಯಾ ಭೇದವ್ಯಪದೇಶಾತ್ ।)

## ಶಾಂಕರಭಾಷ್ಯದಲ್ಲಿ ಸೂತ್ರಗಳ ಅರ್ಥ

**1. ಅಂತಸ್ತದ್ಧರ್ಮೋಪದೇಶಾತ್ ॥ ಪೂರ್ವಪಕ್ಷ-** ಛಾಂದೋಗ್ಯೋಪನಿಷತ್ತಿನಲ್ಲಿ ''ಯ ಏಷೋ ಅಂತರಾದಿತ್ಯೇ ಹಿರಣ್ಮಯಃ ಪುರುಷೋ ದೃಶ್ಯತೇ॥ (1-6-6, 7, 8) ಎಂದು ಸೂರ್ಯನೊಳಗೆ ಇರುವವನೆಂದು ಹೇಳಲ್ಪಟ್ಟವನು, ''ಅಥ ಯ ಏಷೋಽಂತರಕ್ಷಿಣಿ ಪುರುಷೋ ದೃಶ್ಯತೇ'' (1-7, 1, 5) ಎಂದು ಕಣ್ಣಿನೊಳಗೆ ಇರುವವನಾಗಿ ಹೇಳಲ್ಪಟ್ಟವನು, ಜ್ಞಾನ-ಕರ್ಮಗಳಿಂದ ಉತ್ಕರ್ಷವನ್ನು ಗಳಿಸಿದ ಸಾಧಕ. ಏಕೆಂದರೆ, ಅವನಿಗೆ 'ಹಿರಣ್ಯಶ್ಮಶ್ರುಃ ಹಿರಣ್ಯಕೇಶಃ'' ಎಂದು ಮುಂತಾಗಿ ಆಕೃತಿಯನ್ನು ಹೇಳಲಾಗಿದೆ. ಬ್ರಹ್ಮ ನಿರಾಕಾರ. ಆದ್ದರಿಂದ ಆದಿತ್ಯ ಮತ್ತು ಕಣ್ಣುಗಳ ಒಳಗಿರುವವನು ಬ್ರಹ್ಮನಲ್ಲ.

**ಸಿದ್ಧಾಂತ-** ಆದಿತ್ಯ ಮತ್ತು ಕಣ್ಣುಗಳ ಒಳಗಿರುವವನು ಬ್ರಹ್ಮನೇ ಆಗಿದ್ದಾನೆ. ''ಸ ಏಷ ಸರ್ವೇಭ್ಯಃ ಪಾಪ್ಮಭ್ಯಃ ಉದಿತಃ'' ಎಂದು ಸರ್ವಪಾಪರಾಹಿತ್ಯವನ್ನೂ ''ಸೈವ ಋಕ್ ಸಾಮ'' ಎಂದು ಸರ್ವಾತ್ಮಕತ್ವವನ್ನೂ ಹೇಳಲಾಗಿದೆ. ಇದು ಬ್ರಹ್ಮನ ಧರ್ಮಗಳು. ಆದ್ದರಿಂದ ಬ್ರಹ್ಮನೇ ಅವರೆಡರ ಅಂತಸ್ಥ. ಭಕ್ತರ ಉಪಾಸನೆಗಾಗಿ, ಇಚ್ಛಾವಶಾತ್ ಮಾಯಾಮಯವಾದ ಆಕೃತಿ ಬ್ರಹ್ಮನಿಗೂ ಇದೆ. ಆದ್ದರಿಂದ ಆಕಾರವಿರುವುದು ವಿರೋಧಿಯಲ್ಲ.

**2. ಭೇದವ್ಯಪದೇಶಾಚ್ಚಾನ್ಯಃ-** ಬೃಹದಾರಣ್ಯಕೋಪನಿಷತ್ತಿನಲ್ಲಿ ''ಯ ಆದಿತ್ಯೇ ತಿಷ್ಠನ್ ಆದಿತ್ಯಾದಂತರೋ ಯಮಾದಿತ್ಯೋ ನ ವೇದ'' ಎಂದು ಆದಿತ್ಯಸ್ಥನಾದ ವಿಜ್ಞಾನಮಯ ಪುರುಷನಲ್ಲಿ ಅಂತರ್ಯಾಮಿಯಾದ ಬ್ರಹ್ಮನ ರೂಪ ಭಿನ್ನವಾದುದು ಎಂದು ಹೇಳಿದೆ. ಅದೇ ಬ್ರಹ್ಮನು ಈ ಛಾಂದೋಗ್ಯೋಪನಿಷತ್ತಿನಲ್ಲೂ ಆದಿತ್ಯಸ್ಥನಾಗಿ ಹೇಳಲ್ಪಟ್ಟಿದ್ದಾನೆ. ಆದ್ದರಿಂದ ಆದಿತ್ಯ ಬೇರೆ ಆದಿತ್ಯಸ್ಥ ಪುರುಷ ಬೇರೆ. ಅವನೇ ಬ್ರಹ್ಮ.

## ಚಂದ್ರಿಕಾದಲ್ಲಿ ಮಾಡಿದ ವಿಮರ್ಶೆ

1. ಮೊದಲ ಸೂತ್ರ ಛಾಂದೋಗ್ಯೋಪನಿಷತ್ತಿನ ವಾಕ್ಯದ ಅರ್ಥವನ್ನು ವಿಮರ್ಶೆ ಮಾಡುತ್ತಿದೆ. ಆದರೆ ಆ ಉಪನಿಷತ್ತಿನಲ್ಲಿ ಭೇದ ಹೇಳುವ ವಾಕ್ಯವಿಲ್ಲ. ಅದಕ್ಕಾಗಿ ಬೃಹದಾರಣ್ಯಕೋಪನಿಷತ್ತಿನಲ್ಲಿರುವ ವಾಕ್ಯವನ್ನು ಉದಾಹರಿಸಿ ಅಲ್ಲಿ ಭೇದ ಹೇಳಿರುವುದರಿಂದ ಛಾಂದೋಗ್ಯವಾಕ್ಯದಲ್ಲಿ ಹೇಳಲಾದ ಆದಿತ್ಯಸ್ಥ ರೂಪ ಬ್ರಹ್ಮನದು ಎಂದು ಸಿದ್ಧಾಂತ ಮಾಡುವುದು ಅನುಚಿತ.

2. 'ಬ್ರಹ್ಮನಲ್ಲಿ ರೂಪವಿಲ್ಲದಿದ್ದರೂ ಭಕ್ತರ ಉಪಾಸನೆಗಾಗಿ ರೂಪವನ್ನು ಆರೋಪಿಸಿಕೊಳ್ಳಬಹುದು' ಎಂಬ ಉತ್ತರವೂ ಸರಿಯಲ್ಲ. ಆರೋಪಿತ ಆಕೃತಿಯ ಉಪಾಸನೆ ಶಾಸ್ತ್ರವಿಹಿತವಲ್ಲ.

ರಾಮಾನುಜ ಭಾಷ್ಯದಲ್ಲೂ ಈ ಅಧಿಕರಣಕ್ಕೆ ಇದೇ ರೀತಿಯ ಪೂರ್ವಪಕ್ಷವನ್ನು ಮಾಡಿ ಸಿದ್ಧಾಂತ ಮಾಡಲಾಗಿದೆ. ಆದರೆ ಸಿದ್ಧಾಂತ ಯುಕ್ತಿ 'ತಸ್ಯ ಯಥಾ ಕಪ್ಯಾಸಂ ಪುಂಡರೀಕಂ' ಎಂದು ಹೇಳಿದ ಪುಂಡರೀಕಾಕ್ಷತ್ವ. ಇದನ್ನು ಬಿಟ್ಟರೆ ಬೇರೆ ಅಲ್ಲಿ ವಿಶೇಷಗಳಿಲ್ಲ. ಆದ್ದರಿಂದ ಅದ್ವೈತ ದರ್ಶನಕ್ಕೆ ಹೇಳಿದ ದೋಷ-ವಿಷಯವಾಕ್ಯದ ಅನೌಚಿತ್ಯ-ಈ ದರ್ಶನದಲ್ಲೂ ಸಮಾನ. ॥ 21 ॥

**॥ ಇಲ್ಲಿಗೆ ಅಂತಸ್ಥತ್ವಾಧಿಕರಣ ಮುಗಿಯಿತು ॥**

# ಆಕಾಶಾಧಿಕರಣ - 8

'ಕೋ ಹ್ಯೇವಾನ್ಯಾತ್ ಕಃ ಪ್ರಾಣ್ಯಾತ್ ಯದೇಷ ಆಕಾಶ ಆನಂದೋ ನ ಸ್ಯಾತ್'

ಇತಿ ಆಕಾಶಸ್ಯ ಆನಂದಮಯತ್ವೇ ಹೇತುರುಕ್ತಃ, ನತು ವಿಷ್ಣೋಃ । ಇತಿ ನ ಮಂತವ್ಯಮ್ । ಯತಃ-

**ಓಂ ॥ ಆಕಾಶಸ್ತಲ್ಲಿಂಗಾತ್ ॥ ಓಂ**

'ಅಸ್ಯ ಲೋಕಸ್ಯ ಕಾ ಗತಿರಿತ್ಯಾಕಾಶ ಇತಿ ಹೋವಾಚ' (ಛಾಂ. 1-9) ಇತ್ಯತ್ರ ಭೂತಾಕಾಶಸ್ಯ ಪ್ರಾಪ್ತಿಃ । ನ ಚಾಸೌ ಯುಜ್ಯತೇ ಕಿಂತು, ವಿಷ್ಣುರೇವ ।

'ಸ ಏಷ ಪರೋವರೀಯಾನುದ್ಗೀಥಃ ಸ ಏಷೋಽನಂತಃ' (ಛಾಂ. 1-9) ಇತ್ಯಾಕಾಶಲಿಂಗಾತ್।

'ವಿಷ್ಣೋರ್ನು ಕಂ ವೀರ್ಯಾಣಿ ಪ್ರವೋಚಂ ಯಃ ಪಾರ್ಥಿವಾನಿ ವಿಮಮೇ ರಜಾಂಸಿ।' (ಋ.1-154-1) 'ಪರೋ ಮಾತ್ರಯಾ, ತನ್ವಾ ವೃಧಾನ' (ಋ.7-99-1) ಇತ್ಯಾದಿನಾ ತಸ್ಯೈವ ಹಿ ತಲ್ಲಿಂಗಮ್।

ಅನಂತೋ ಭಗವಾನ್ ಬ್ರಹ್ಮಾ ಆನಂದೇತ್ಯಾದಿಭಿಃ ಪದೈಃ।

ಪ್ರೋಚ್ಯತೇ ವಿಷ್ಣುರೇವೈಕಃ ಪರೇಷಾಮುಪಚಾರತಃ। ಇತಿ ಬ್ರಾಹ್ಮೇ ।

'ನಾಮಾನಿ ಸರ್ವಾಣಿ ಯಮಾವಿಶಂತಿ' (ಭಾಲ್ಲವೇಯ) ಇತಿ ಚೋಕ್ತಮ್ ।

**॥ ಇತ್ಯಾಕಾಶಾಧಿಕರಣಮ್ ॥**

'ಆಕಾಶವು ಪೂರ್ಣಾನಂದರೂಪವಲ್ಲದಿದ್ದರೆ ಈ ಜಗತ್ತನ್ನು ಯಾರು ಪ್ರೇರಿಸಿಯಾನು, ಯಾರು ಬದುಕಿಸಿಯಾನು?' ಹೀಗೆ ಆಕಾಶವು ಆನಂದಮಯ ಎನ್ನಲು ಕಾರಣವನ್ನು ತೈತ್ತಿರೀಯದಲ್ಲಿ ಹೇಳಲಾಗಿದೆ. ಹೊರತು, ವಿಷ್ಣು ಆನಂದಮಯ ಎನ್ನಲು ಅಲ್ಲ. ಆದ್ದರಿಂದ ವಿಷ್ಣು ಆನಂದಮಯನಲ್ಲ. ಹೀಗೆ ತಿಳಿಯಬಾರದು; ಏಕೆಂದರೆ ವಿಷ್ಣುವಿನ ಅಸಾಧಾರಣ ಧರ್ಮಗಳನ್ನೇ ಅಲ್ಲಿ ಹೇಳಲಾಗಿದೆಯಾದ್ದರಿಂದ ಆಕಾಶಪದದಿಂದ ವಾಚ್ಯನಾದವನು ವಿಷ್ಣುವೆ.

ಛಾಂದೋಗ್ಯೋಪನಿಷತ್ತಿನಲ್ಲಿ ''ಪ್ರತ್ಯಕ್ಷ ಸಿದ್ಧವಾದ ಪೃಥಿವೀಲೋಕಕ್ಕೆ ಯಾರು ಆಶ್ರಯ?'' ಎಂದು ಶಲಕನ ಪ್ರಶ್ನೆಗೆ 'ಆಕಾಶವೇ ಆಶ್ರಯ' ಎಂದು ರಾಜಾ ಪ್ರವಾಹಣನು ಉತ್ತರಿಸಿದ್ದಾನೆ. ಇಲ್ಲಿ, ಆಕಾಶ ಶಬ್ದವು ಪಂಚಭೂತಗಳಲ್ಲಿ ಒಂದಾದ ಭೂತಾಕಾಶದಲ್ಲಿ ಪ್ರಸಿದ್ಧವಾದುದರಿಂದ ಅದೇ ವಿವಕ್ಷಿತ. ಆದ್ದರಿಂದ ಭೂತಾಕಾಶವೇ ಆನಂದಮಯ. ಆದರೆ, ಹೀಗೆ ಹೇಳುವುದು ಯುಕ್ತವಲ್ಲ-ವಿಷ್ಣುವೇ ಆಕಾಶ. ಏಕೆಂದರೆ 'ಇವನು ಸರ್ವೋತ್ತಮ, ಉದ್ಗೀಥ, ಇವನು ಅನಂತ' ಎಂದೆಲ್ಲಾ ವಿಷ್ಣುವಿನ ಅಸಾಧಾರಣ ಧರ್ಮಗಳನ್ನೇ ಅಲ್ಲಿ ಹೇಳಲಾಗಿದೆ. 'ಭೂಮಿಯ ಧೂಳಿನ ಕಣಗಳನ್ನಾದರೂ ಲೆಕ್ಕ ಮಾಡಬಹುದು; ಆದರೆ ವಿಷ್ಣುವಿನ ಮಹಿಮೆಯನ್ನು ಯಾರು ತಾನೇ ಹೇಳಿಯಾನು?' 'ಪರಮಾತ್ಮನೆ, ನೀನು ದೇಶಕಾಲಗಳ ಮಿತಿ ಮೀರಿದವ, ದೇಹತಃ ವ್ಯಾಪ್ತ. ನಿನ್ನ ಎತ್ತರಕ್ಕೆ ಇನ್ನಾರೂ ಏರಲಾರರು' ಈ ಪ್ರಮಾಣಗಳಿಂದ ಛಾಂದೋಗ್ಯದಲ್ಲಿ ಹೇಳಿರುವ ಅನಂತತ್ವ, ಸರ್ವೋತ್ತಮತ್ವ ಇವು ವಿಷ್ಣುವಿನದೇ ಗುಣಗಳೆಂದು ತಿಳಿಯುತ್ತದೆ.

ಬ್ರಾಹ್ಮಪುರಾಣ ಅನಂತ ಎಂಬ ಹೆಸರು ವಿಷ್ಣುವಿನದೇ ಎಂದಿದೆ - 'ಅನಂತ, ಭಗವಾನ್, ಬ್ರಹ್ಮ, ಆನಂದ ಇತ್ಯಾದಿ ಪದಗಳಿಂದ ವಿಷ್ಣು ಒಬ್ಬನೇ ವಾಚ್ಯ. ಇತರರಿಗೆ ಆ ಹೆಸರು ಗೌಣವಾಗಿ ಸಲ್ಲುತ್ತದೆ'. ಭಾಲ್ಲವೇಯ ಶಾಖೆಯಲ್ಲಿ ಹೀಗಿದೆ- 'ಎಲ್ಲ ಹೆಸರುಗಳೂ ವಿಷ್ಣುವಿಗಿದೆ'. (ಆದ್ದರಿಂದ ವಿಷ್ಣುವೇ ಆಕಾಶಪದ ವಾಚ್ಯ.)

**ವಿವರಣೆ :** ಈ ಅಧಿಕರಣದಲ್ಲಿ ಭೂತಾಕಾಶದಲ್ಲಿ ಪ್ರಸಿದ್ಧವಾದ ಆಕಾಶ ಶಬ್ದವನ್ನು ಪ್ರಧಾನವಾಗಿ ಸಮನ್ವಯ ಮಾಡಲಾಗಿದೆ. ಇದರಿಂದ ಆಧಿಭೌತಿಕ ಶಬ್ದಗಳೆಲ್ಲ ವಿಷ್ಣುವಾಚಕಗಳೆಂದು ತಿಳಿಯಬೇಕು. ಆನಂದಮಯಾಧಿಕರಣದೊಂದಿಗೆ ಈ ಅಧಿಕರಣಕ್ಕೆ ಆಕ್ಷೇಪಕ ಸಂಗತಿ. ತೈತ್ತಿರೀಯದಲ್ಲಿ ಆಕಾಶವು ಆನಂದಮಯವಾಗಿದೆ ಎನ್ನಲು ಕಾರಣವನ್ನು ಹೇಳಲಾಗಿದೆ. ಆ ಆಕಾಶಪದದಿಂದ ವಿಷ್ಣುವಾಚ್ಯನಾದರೆ ಆಗ ಅವನೇ ಆನಂದಮಯನಾಗುತ್ತಾನೆ. ಅದಕ್ಕಾಗಿ ಆಕಾಶಪದವಾಚ್ಯ ಯಾರು? ಎನ್ನುವುದನ್ನು ವಿಚಾರಮಾಡುವ ಆವಶ್ಯಕತೆ ಇದೆ.

**ಪೂರ್ವಪಕ್ಷ :** ಆಕಾಶಶಬ್ದವು ಲೌಕಿಕಪ್ರಯೋಗದಿಂದ ಭೂತಾಕಾಶದಲ್ಲಿ ರೂಢವಾಗಿದೆ. ರೂಢಾರ್ಥ ಮುಖ್ಯಾರ್ಥ. ಅಲ್ಲದೆ, ''ಸರ್ವಾಣಿ ಹ ವಾ ಭೂತಾನಿ ಆಕಾಶಾದೇವ ಸಮುತ್ಪದ್ಯಂತೆ'' ಎಂದು ಛಂದೋಗ ಶ್ರುತಿಯಲ್ಲಿ ಇತರ ಭೂತ ವಸ್ತುಗಳು ಆಕಾಶದಿಂದಲೇ ಹುಟ್ಟುತ್ತವೆ ಎನ್ನಲಾಗಿದೆ. ''ಆಕಾಶಾತ್ ವಾಯುಃ, ವಾಯೋರಗ್ನಿಃ' ಇತ್ಯಾದಿಯಾಗಿ ತೈತ್ತಿರೀಯೋಪನಿಷತ್ತಿನಲ್ಲಿ ಭೂತಾಕಾಶವೇ ಇತರ ಭೂತವಸ್ತುಗಳಿಗೆ ಕಾರಣವೆಂದು ಹೇಳಲಾಗಿದೆ. ಇದರಿಂದ ಛಾಂದೋಗ್ಯದಲ್ಲಿ ಹೇಳಿದ ಭೂತಕಾರಣತ್ವ ಭೂತಾಕಾಶಕ್ಕೆ ಅನ್ವಯಿಸುತ್ತದೆ. ಆದ್ದರಿಂದ ಛಾಂದೋಗ್ಯದಲ್ಲಿ ಉಲ್ಲೇಖಿಸಲ್ಪಟ್ಟ ಆಕಾಶ ಭೂತಾಕಾಶ. ಅದೇ ಆಕಾಶವನ್ನು ತೈತ್ತಿರೀಯದಲ್ಲಿ ಸಕಾರಣವಾಗಿ ಆನಂದಮಯ ಎನ್ನಲಾಗಿದೆ. ಜಡವಾದ ಆಕಾಶದಲ್ಲಿ ಆನಂದಮಯತ್ವ ಅಸಾಧ್ಯವಾದರೂ ಆಕಾಶಾಭಿಮಾನಿದೇವತೆಯಲ್ಲಿ ಆನಂದಮಯತ್ವವನ್ನು ಹೇಳಬಹುದು. ಹೀಗೆ ಆನಂದಮಯನೂ ವಿಷ್ಣುವಲ್ಲ.

**ಸಿದ್ಧಾಂತ :** ಛಾಂದೋಗ್ಯದಲ್ಲಿ ಉಲ್ಲೇಖಿಸಲ್ಪಟ್ಟ ಆಕಾಶಕ್ಕೆ ಅನಂತತ್ವ, ಸರ್ವೋತ್ತಮತ್ವ, ಪರೋವರೀಯತ್ವಾದಿ ಗುಣಗಳನ್ನು ಹೇಳಲಾಗಿದೆ. ಈ ಗುಣಗಳು ವಿಷ್ಣುವಿಗಲ್ಲದೆ ಇತರರಿಗೆ ಇಲ್ಲ. ಆದ್ದರಿಂದ ಲೌಕಿಕವಾದ ರೂಢಾರ್ಥವನ್ನು ಬಿಟ್ಟು 'ಆ ಸಮಂತಾತ್ ಕಾಶತೇ=ಸರ್ವತಃ ಪ್ರಕಾಶಮಯ' ಎಂಬ ಅರ್ಥದಲ್ಲಿ ವಿಷ್ಣುವೇ ಆಕಾಶಪದ ವಾಚ್ಯ ಎಂದು ಹೇಳಬೇಕು.

ಪೂರ್ವಪಕ್ಷಕ್ಕೆ ಆಧಾರ 'ಆಕಾಶ' ಶ್ರುತಿ (ಶಬ್ದ). ಸಿದ್ಧಾಂತಕ್ಕೆ ಉದ್ಗೀಥತ್ವಾದಿಲಿಂಗ. ಇವೆರಡರಲ್ಲಿ ಶ್ರುತಿಯೇ ಪ್ರಬಲ. ಆದರೂ ಶ್ರುತಿಯನ್ನು ವಿಷ್ಣುವಿನಲ್ಲೂ ಸಮನ್ವಯ ಮಾಡಬಹುದು- ''ನಾಮಾನಿ ಸರ್ವಾಣಿ ಯಮಾವಿಶಂತಿ'' ಎಂಬ ಪ್ರಮಾಣದಂತೆ ಸರ್ವನಾಮಗಳೂ ವಿಷ್ಣುವಾಚಕಗಳು. ಆದರೆ ಲಿಂಗವನ್ನು ಭೂತಾಕಾಶದಲ್ಲಿ ಸಮನ್ವಯ ಮಾಡಲು ಬರುವುದಿಲ್ಲ. ಅದು ನಿರವಕಾಶ. ಸಾವಕಾಶ ಶ್ರುತಿಗಿಂತ ನಿರವಕಾಶ ಲಿಂಗ ಪ್ರಬಲ. ಆದ್ದರಿಂದ ಲಿಂಗಾನುಗುಣವಾಗಿ ಆಕಾಶಪದವಾಚ್ಯ ವಿಷ್ಣುವೇ ಎಂದು ಸಿದ್ಧಾಂತ. ಅಲ್ಲದೆ, ಆಕಾಶ ಶಬ್ದದ ವಿದ್ವದ್‌ರೂಢಿ, ಮಹಾಯೋಗಗಳು ವಿಷ್ಣುವಿನಲ್ಲೇ ಇವೆ. ಭೂತಾಕಾಶ ಜಡವಾದರೂ ಅದು ವಿಷ್ಣುವಿನ ಅಧೀನವಾದುದರಿಂದ ತದ್ವಾಚಕಶಬ್ದವೂ ವಿಷ್ಣುವಿಗೆ ಸಲ್ಲುತ್ತದೆ.

**ಶ್ರುತ್ಯರ್ಥ :** ಅ. ಪರೋವರೀಯಾನ್ - ಪರೇಭ್ಯಃ = ಬ್ರಹ್ಮರುದ್ರಾದಿಭ್ಯಃ, ವರೀಯಾನ್= ಅತಿಶಯೇನ ಉತ್ತಮಃ । ಬ್ರಹ್ಮರುದ್ರರಿಗಿಂತಲೂ ಉತ್ತಮನಾದವ.

ಆ. ಉದ್ಗೀಥಃ- ಉಚ್ಚಃ ಅಸೌ ಗೀಯತೇ ಚೇತಿ । ಅವನು ಉತ್ತಮ ಹಾಗೂ ವೇದಗಳಿಂದ ಸ್ತುತ್ಯ. 'ಗೀತ' ಎಂಬಲ್ಲಿ ತಕಾರಕ್ಕೆ ಥಕಾರ ಬಂದಿದೆ.

ಇ. ವಿಷ್ಣೋರ್ನುಕಂ- ಎಂಬಲ್ಲಿ ಕಂ ಎಂದರೆ ಯಾರು ಎಂದರ್ಥ. ಪ್ರಾವೋಚಂ=ಪ್ರತಿವಕ್ತಿ, ಹೇಳುತ್ತಾನೆ. ವಿಮಮೇ=ಗಣಯತಿ=ಲೆಕ್ಕ ಮಾಡುತ್ತಾನೆ.

## ದ್ವೈತ ದರ್ಶನದಲ್ಲಿ ಸೂತ್ರಾರ್ಥ

ಓಂ ॥ ಆಕಾಶಸ್ತಲ್ಲಿಂಗಾತ್ ॥ ಓಂ - ಸಮನ್ವಯ ಸೂತ್ರದಿಂದ ತತ್ತು ಎಂಬ ಶಬ್ದ ಅನುವೃತ್ತವಾಗಿದೆ. ''ಆಕಾಶ ಇತಿ ಹೋವಾಚ'' ಈ ಛಂದೋಗ ಶ್ರುತಿಯಲ್ಲಿ ಉಲ್ಲೇಖಿಸಲ್ಪಟ್ಟ ಆಕಾಶಃ=ಆಕಾಶ ಶಬ್ದವಾಚ್ಯನು ತತ್ತು=ವಿಷ್ಣುವೇ. ತಲ್ಲಿಂಗಾತ್='ಸ ಏಷಃ ಪರೋವರೀ-ಯಾನ್' ಇತ್ಯಾದಿ ವಿಷ್ಣುವಿನ ಅಸಾಧಾರಣ ಧರ್ಮಗಳನ್ನು ಅಲ್ಲಿ ಹೇಳಿರುವುದರಿಂದ.

**(ತದಿತಿ ವರ್ತತೇ । ಛಾಂದೋಗ್ಯಸ್ಥ ಆಕಾಶೋ ಹರಿರೇವ । ಪರೋವರೀಯಸ್ತ್ವಾದೇಃ ತತ್ರ=ಆಕಾಶೇ । ತಸ್ಯ=ವಿಷ್ಣೋಃ ಲಿಂಗಾತ್ ।)**

## ಶಾಂಕರಭಾಷ್ಯದಲ್ಲಿ ಹೇಳಿದ ಸೂತ್ರಾರ್ಥ

**ಪೂರ್ವಪಕ್ಷ** - ''ಆಕಾಶ ಇತಿ ಹೋವಾಚ'' ಎಂಬ ಛಂದೋಗಶ್ರುತಿಯಲ್ಲಿ ಪ್ರತಿ ಪಾದ್ಯ ಭೂತಾಕಾಶ. ಆಕಾಶ ಶಬ್ದದ ಮುಖ್ಯಾರ್ಥವೇ ಅದು. 'ಯದೇಶ ಆಕಾಶಃ ಆನಂದೋ ನ ಸ್ಯಾತ್'' ಎಂಬಲ್ಲಿ ಚೇತನ ಯೋಗ್ಯವಾದ ಆನಂದ ಪದವಿರುವುದರಿಂದ ಅನಿವಾರ್ಯ ವಾಗಿ 'ಬ್ರಹ್ಮ' ಎಂಬ ಅರ್ಥವನ್ನು ತೈತ್ತಿರೀಯ ಶ್ರುತಿಯಲ್ಲಿ ಮಾಡಲಾಗಿದೆ. ಆ ಅರ್ಥ ಗೌಣ. ಆದ್ದರಿಂದ ಮುಖ್ಯಾರ್ಥವಾದ ಭೂತಾಕಾಶವೇ ಛಂದೋಗ ಶ್ರುತಿಪ್ರತಿಪಾದ್ಯ.

**ಸಿದ್ಧಾಂತ** : ಛಂದೋಗಶ್ರುತಿಯಲ್ಲಿ 'ಸರ್ವಾಣಿ ಹ ವಾ ಭೂತಾನಿ ಆಕಾಶಾದೇವ ಸಮುತ್ಪದ್ಯಂತೇ, ಆಕಾಶಂ ಪ್ರತಿ ಅಸ್ತಂ ಯಂತಿ' ಎನ್ನಲಾಗಿದೆ. ಆಕಾಶವು ಎಲ್ಲ ಭೂತಗಳಿಗೂ ಕಾರಣ, ಅದರಲ್ಲೇ ಎಲ್ಲ ಭೂತಗಳೂ ಲಯವಾಗುತ್ತವೆ ಎಂದು ಅದರ ಅರ್ಥ. ಭೂತಾಕಾಶವು ವಾಯು ಮೊದಲಾದ ನಾಲ್ಕು ಭೂತ ವಸ್ತುಗಳಿಗೆ ಕಾರಣವಾಗಬಹುದು. ಆದರೆ, ಎಲ್ಲದಕ್ಕೂ ಕಾರಣ ಬ್ರಹ್ಮ - 'ಆತ್ಮನಃ ಆಕಾಶಃ ಸಂಭೂತಃ' ಎನ್ನುತ್ತದೆ ತೈತ್ತಿರೀಯ ಶ್ರುತಿ. ಅಲ್ಲದೆ ''ಆಕಾಶೋ ಹ್ಯೇವೈತೇಭ್ಯಃ ಜ್ಯಾಯಾನ್ ಆಕಾಶಃ ಪರಾಯಣಂ'' ಎಂದು ಆಕಾಶಕ್ಕೆ ಶ್ರೇಷ್ಠತ್ವ, ಆಶ್ರಯತ್ವಗಳನ್ನು ಹೇಳಲಾಗಿದೆ. ಅವು ಬ್ರಹ್ಮಧರ್ಮಗಳು. ''ಜ್ಯಾಯಾನ್ ಪೃಥಿವ್ಯಾಃ ಜ್ಯಾಯಾನ್ ಅಂತರಿಕ್ಷಾತ್ (ಛಾಂ). ''ರಾತಿಃ ದಾತಿಃ ಪರಾಯಣಂ'' (ಬೃ) ಹೀಗೆ ಶ್ರುತಿಯಲ್ಲಿ ಇವೆಲ್ಲ ಬ್ರಹ್ಮಗುಣಗಳೆಂದು ವರ್ಣಿಸಲಾಗಿದೆ. ಆದ್ದರಿಂದ ಆಕಾಶನೆಂದರೆ ಛಾಂದೋಗ್ಯ ಶ್ರುತಿಯಲ್ಲಿ ಬ್ರಹ್ಮನೇ.

## ಚಂದ್ರಿಕಾದಲ್ಲಿ ಮಾಡಿರುವ ವಿಮರ್ಶೆ

ಅದ್ವೈತದರ್ಶನದಲ್ಲಿ ಆಕಾಶಶಬ್ದದ ಮುಖ್ಯಾರ್ಥ ಭೂತಾಕಾಶ. ಇದು ಸಿದ್ಧಾಂತಿಗೂ ಸಮ್ಮತ. ಆದರೂ ಪ್ರಕೃತ ಶ್ರುತಿಯಲ್ಲಿ ಈ ಮುಖ್ಯಾರ್ಥಕ್ಕೆ ಅನೇಕ ಬಾಧಕವಿದೆ.

ಬ್ರಹ್ಮನಲ್ಲಿರುವ ಅನೇಕ ಧರ್ಮಗಳನ್ನು ಆಕಾಶಕ್ಕೆ ಹೇಳಲಾಗಿದೆ. ''ತ್ಯಜೇದೇಕಂ ಕುಲಸ್ಯಾರ್ಥೇ'' ಒಂದು ತ್ಯಾಗದಿಂದ ಕುಲವೇ ಉಳಿಯುವುದಾದರೆ ಆ ಒಂದನ್ನು ಬಿಡಬೇಕು. ಇದು ಲೋಕ ನ್ಯಾಯ. ಪ್ರಕೃತ, 'ಆಕಾಶ' ಎಂಬ ಒಂದು ಶಬ್ದಕ್ಕೆ ಮುಖ್ಯಾರ್ಥವನ್ನು ಬಿಡುವುದರಿಂದ ಅನೇಕ ಲಿಂಗಗಳನ್ನು ಉಳಿಸಿದಂತಾಗುತ್ತದೆ. ಆದ್ದರಿಂದ ಆಕಾಶ ಶಬ್ದಕ್ಕೆ ಬ್ರಹ್ಮ ಎಂಬ ಗೌಣಾರ್ಥವನ್ನು ಮಾಡಬೇಕು. ಇದು ಅದ್ವೈತಭಾಷ್ಯದ ತರ್ಕ. ಆದರೆ ''ಆತ್ಮಾರ್ಥೇ ಪೃಥಿವೀಂ ತ್ಯಜೇತ್'' ಎಂದು ಲೋಕನ್ಯಾಯವಿದೆ. ತನ್ನ ಉಳಿವಿಗಾಗಿ ಇಡೀ ಭೂಮಿಯನ್ನು ತೊರೆದರೂ ಚಿಂತಿಲ್ಲ. ಹಾಗೆ ಪ್ರಕೃತ ಪ್ರಾರಂಭದಲ್ಲಿ ಶ್ರುತವಾದ ಆಕಾಶಶಬ್ದ ತನ್ನ ಮುಖ್ಯಾರ್ಥದ ಉಳಿವಿಗಾಗಿ ನಂತರ ಬಂದ ಎಲ್ಲ ಲಿಂಗಗಳನ್ನು ಗೌಣವನ್ನಾಗಿ ಏಕೆ ಮಾಡಬಾರದು? ಆದ್ದರಿಂದ ಆಕಾಶ ಶಬ್ದದ ಮುಖ್ಯಾರ್ಥವನ್ನೇ ಇಟ್ಟುಕೊಂಡು ಅದು ಇತರ ಭೂತಗಳಿಗೆ ಕಾರಣ ಎಂದೇ ಏಕೆ ಅರ್ಥ ಹೇಳಬಾರದು?

ರಾಮಾನುಜ ಭಾಷ್ಯದಲ್ಲೂ ಈ ಸೂತ್ರಕ್ಕೆ ಶಾಂಕರಭಾಷ್ಯದಂತೆಯೇ ವ್ಯಾಖ್ಯಾನ ಮಾಡಲಾಗಿದೆ. ಹೀಗಾಗಿ ಶಾಂಕರಭಾಷ್ಯಕ್ಕೆ ಹೇಳಿದ ಅನುಪಪತ್ತಿ ರಾಮಾನುಜ ಭಾಷ್ಯಕ್ಕೂ ಸಮಾನ. ದ್ವೈತ-ಅದ್ವೈತ-ವಿಶಿಷ್ಟಾದ್ವೈತ ಈ ಮೂರೂ ಭಾಷ್ಯಗಳಲ್ಲೂ ಈ ಅಧಿಕರಣಕ್ಕೆ ಒಂದೇ ವಿಷಯ ವಾಕ್ಯವನ್ನು ತೆಗೆದುಕೊಂಡಿರುವುದು ವಿಶೇಷ. ॥ ಸೂತ್ರ 22 ॥

**ಇಲ್ಲಿಗೆ ಆಕಾಶಾಧಿಕರಣ ಮುಗಿಯಿತು.**

# ಪ್ರಾಣಾಧಿಕರಣ - 9

## ಓಂ ॥ ಅತ ಏವ ಪ್ರಾಣಃ ॥ ಓಂ

**ತದ್ವೈ ತ್ವಂ ಪ್ರಾಣೋ ಅಭವಃ ಮಹಾನ್ ಭೋಗಃ ಪ್ರಜಾಪತೇಃ।**
**ಭುಜಃ ಕರಿಷ್ಯಮಾಣಃ ಯದ್ದೇವಾನ್ ಪ್ರಾಣಯೋ ನವ ॥ ತೈ.ಆ.3-14)**

**ಇತಿ ಮಹಾಭೋಗಶಬ್ದೇನ ಪರಮಾನಂದತ್ವಂ ಪ್ರಾಣಸ್ಯೋಕ್ತಮ್ । ಸ ಚ ಪ್ರಾಣಃ ಪ್ರಸಿದ್ಧೋ ವಾಯುಃ ಇತ್ಯಾಪತತಿ । ನ ಚೈವಂ । ಯತೋ ವಿಷ್ಣುರೇವ ಪ್ರಾಣಃ । ಅತ ಏವ, 'ಶ್ರೀಶ್ಚ ತೇ ಲಕ್ಷ್ಮೀಶ್ಚ ಪತ್ನ್ಯೌ । ಅಹೋ ರಾತ್ರೇ ಪಾರ್ಶ್ವೇ ॥ (ತೈ.ಆ.3-13) ಇತ್ಯಾದಿ ತಲ್ಲಿಂಗಾದೇವ ।**

**॥ ಇತಿ ಪ್ರಾಣಾಧಿಕರಣಮ್ ॥**

ತೈತ್ತಿರೀಯ ಆರಣ್ಯಕದಲ್ಲಿ ಹೀಗೊಂದು ವಾಕ್ಯವಿದೆ. ''ಎಲೈ ಪ್ರಾಣನೆ, ನೀನು ಬ್ರಹ್ಮನೇ ಮೊದಲಾದ ಜೀವರಿಗೆ ಆನಂದವನ್ನು ಉಂಟುಮಾಡುವುದರಿಂದ

ಮಹಾನಂದರೂಪನಾಗಿರುವಿ. ನಮ್ಮ ಒಂಭತ್ತು ಇಂದ್ರಿಯಗಳನ್ನು ಪ್ರೇರಿಸುವುದರಿಂದ ನೀನೇ ಪ್ರಾಣ''. ಈ ಶ್ರುತಿಯಲ್ಲಿ ಪ್ರಾಣನೇ ಆನಂದಮಯ ಎಂದಿದೆ. 'ಪ್ರಾಣ' ಎಂದು ಪ್ರಸಿದ್ಧಿ ವಾಯುದೇವನಿಗಿದೆ. ಆದ್ದರಿಂದ ಅವನೇ ಆನಂದಮಯ ಎಂದಂತಾಗುತ್ತದೆ. ಆದರೆ, ಇದು ಸರಿಯಲ್ಲ ವಿಷ್ಣುವೇ ಪ್ರಾಣ. ಅತ ಏವ-ತೈತ್ತಿರೀಯ ಶ್ರುತಿಯಲ್ಲಿ ''ಅಹೋರಾತ್ರಿಗಳಲ್ಲಿ ಶ್ರೀ ಮತ್ತು ಲಕ್ಷ್ಮೀದೇವಿ ನಿನ್ನ ಪತ್ನಿಯರಾಗಿ ಬಳಿಯಲ್ಲೇ ಇರುತ್ತಾರೆ'' ಎಂದು ವಿಷ್ಣುವಿನ ಅಸಾಧಾರಣ ಧರ್ಮವನ್ನು ಪ್ರಾಣನಿಗೆ ಹೇಳಲಾಗಿದೆ, ಆದ್ದರಿಂದ.

**ವಿವರಣೆ :** ಪ್ರಥಮಾಧ್ಯಾಯದ ಪ್ರಥಮ ಪಾದದಲ್ಲಿ ಎರಡು ಪ್ರಾಣಾಧಿಕರಣಗಳಿವೆ. ಇದು ಮೊದಲ ಪ್ರಾಣಾಧಿಕರಣ. ಇನ್ನೊಂದು ಪ್ರಾಣಾಧಿಕರಣ ಈ ಪಾದದ ಕೊನೆಯಲ್ಲಿ ಬರುವುದರಿಂದ ಅದನ್ನು ಅಂತಿಮ ಪ್ರಾಣಾಧಿಕರಣ ಎಂದು ಹೆಸರಿಸಲಾಗುವುದು.

ಈ ಅಧಿಕರಣದಲ್ಲಿ ಅನ್ಯತ್ರ ಪ್ರಸಿದ್ಧವಾದ ''ಪ್ರಾಣ'' ಎಂಬ ಶಬ್ದವನ್ನು ಸಮನ್ವಯ ಮಾಡುವ ಮೂಲಕ ಎಲ್ಲ ಆಧ್ಯಾತ್ಮಿಕ ಶಬ್ದಗಳನ್ನು ಸಮನ್ವಯ ಮಾಡಲಾಗಿದೆ. ಮೊದಲು ಸೂತ್ರ ಹೇಳಿ ಆಮೇಲೆ ಸಂಗತ್ಯಾದಿಗಳನ್ನು ಹೇಳಬೇಕು ಎನ್ನುವುದನ್ನು ಸೂಚನೆ ಮಾಡಲು ಈ ಅಧಿಕರಣದ ಭಾಷ್ಯದಲ್ಲಿ ಸೂತ್ರವನ್ನೇ ಮೊದಲು ಹೇಳಲಾಗಿದೆ.

**ಪೂರ್ವಪಕ್ಷ :** ಪ್ರಾಣ ಶಬ್ದ ಮುಖ್ಯಪ್ರಾಣನಲ್ಲಿ ಪ್ರಸಿದ್ಧವಾಗಿದೆ. ವಿಷ್ಣುವಿನಲ್ಲಿ 'ಪ್ರಾಣಯತೀತಿ ಪ್ರಾಣಃ' ಎಂದು ಯೋಗವೃತ್ತಿಯಿಂದಲೂ ಆ ಶಬ್ದವನ್ನು ಸಮನ್ವಯ ಮಾಡಲಾಗದು.

''ಯತ್ ಪ್ರಾಪ್ತಿಃ ಯತ್ ಪರಿತ್ಯಾಗಃ ಉತ್ಪತ್ತಿಃ ಮರಣಂ ತಥಾ''

ಎಂದು ಪ್ರಾಣವಾಯು ಸಂಚಾರವಾದರೆ ಜೀವನ. ಇಲ್ಲದಿದ್ದರೆ ಮರಣ. ಹೀಗೆ ಜೀವನ ಕಾರಣನಾದವನು ಮುಖ್ಯಪ್ರಾಣನೇ. ಆದುದರಿಂದ ಯೌಗಿಕಾರ್ಥವೂ ಅವನಲ್ಲೇ ಇದೆ. ವಿಷ್ಣುವಿನಲ್ಲಿ ಇಲ್ಲ. ಆದ್ದರಿಂದ ಪ್ರಾಣನೆಂದರೆ ವಾಯುದೇವ. ಅವನಿಗೇ 'ಮಹಾಭೋಗಃ' ಎಂದು ಪೂರ್ಣಾನಂದತ್ವವನ್ನು ಹೇಳಿರುವುದರಿಂದ ಅವನೇ ಆನಂದಮಯ.

**ಸಿದ್ಧಾಂತ :** ತೈತ್ತಿರೀಯ ಶ್ರುತಿಯಲ್ಲಿ ಲಕ್ಷ್ಮೀಪತಿತ್ವವನ್ನು ಪ್ರಾಣನಿಗೆ ಹೇಳಲಾಗಿದೆ. ಅದು ವಿಷ್ಣುವಿಗಲ್ಲದೆ ಇತರರಿಗೆ ಅನ್ವಯಿಸುವುದಿಲ್ಲ. ಅಲ್ಲದೆ, ಪ್ರಾಣಶಬ್ದದಿಂದ ವಿಷ್ಣುವು ವಾಚ್ಯನಾಗಿದ್ದಾನೆ. ''ಈಶಾನಃ ಪ್ರಾಣದಃ ಪ್ರಾಣಃ'' ಎಂದು ವಿಷ್ಣುವಿನ ಸಹಸ್ರನಾಮಗಳಲ್ಲಿ ಪ್ರಾಣಶಬ್ದವೂ ಸೇರಿದೆ. ನಮ್ಮ ಬದುಕಿಗೆ ಕಾರಣ ಪ್ರಾಣವಾಯುವಾದರೂ ಆ ಪ್ರಾಣನ ಬದುಕಿಗೂ ಕಾರಣನಾದ ವಿಷ್ಣುವೇ ಮುಖ್ಯವಾಗಿ ನಮ್ಮ ಬದುಕಿಗೆ ಕಾರಣ. ಕಾಠಕ ಶ್ರುತಿ ಹೀಗೆಯೇ ಹೇಳಿದೆ-

ನ ಪ್ರಾಣೇನ ನಾಪಾನೇನ ಮರ್ತ್ಯೋ ಜೀವತಿ ಕಶ್ಚನ ।
ಇತರೇಣ ತು ಜೀವಂತಿ ಯಸ್ಮಿನ್ನೇತೌ ಉಪಾಶ್ರಿತೌ ॥

ಹೀಗೆ ಪ್ರಾಣಶಬ್ದದ ರೂಢಿ, ಯೋಗ ಎರಡೂ ವಿಷ್ಣುವಿನಲ್ಲಿದೆ. ಆದರೆ ಲಕ್ಷ್ಮೀಪತಿತ್ವಲಿಂಗ ವಾಯುವಿನಲ್ಲಿ ಇಲ್ಲ. ಆದ್ದರಿಂದ ಇಲ್ಲಿ ಪ್ರಾಣ ಶಬ್ದವಾಚ್ಯ ವಿಷ್ಣುವೇ ಆಗಿದ್ದಾನೆ.

2. ಲಕ್ಷ್ಮೀಪತಿತ್ವವನ್ನು ಹೇಳುವ ''ಶ್ರೀಶ್ಚ ತೇ ಲಕ್ಷ್ಮೀಶ್ಚ'' ಎಂಬ ವಾಕ್ಯ ತೈತ್ತಿರೀಯ ಶ್ರುತಿಯ 13ನೆಯ ಅನುವಾಕದಲ್ಲಿದೆ. ಪ್ರಕೃತ ಅಧಿಕರಣದ ವಿಷಯವಾಕ್ಯವಾದ ಪ್ರಾಣಶ್ರುತಿ 14ನೆಯ ಅನುವಾಕದಲ್ಲಿದೆ. ಅಂದಮೇಲೆ ಲಕ್ಷ್ಮೀಪತಿತ್ವವನ್ನು ಪ್ರಾಣನಿಗೇ ಹೇಳಲಾಗಿದೆ ಎಂದು ನಿರ್ಧರಿಸುವುದು ಹೇಗೆ? ಆದರೂ, ಲಕ್ಷ್ಮೀಪತಿತ್ವವನ್ನು ಹೇಳುವ ಹಿಂದಿನ ವಾಕ್ಯದಲ್ಲಿ 'ತೇ' ಎಂಬ ಶಬ್ದವಿದೆ. ಪ್ರಾಣಶ್ರುತಿಯಲ್ಲಿ 'ತ್ವಂ' ಎಂದಿದೆ. ಇವೆರಡೂ ಯುಷ್ಮದ್ ಶಬ್ದದ ರೂಪಗಳು. ಎರಡೂ ಒಂದೇ ಶಬ್ದದ ರೂಪಗಳಾದ್ದರಿಂದ 'ನಿನ್ನ' 'ನೀನು' ಎಂದರೆ ಒಬ್ಬನೇ- ಅವನೇ ಪ್ರಾಣ, ಎಂದು ಊಹಿಸಿಕೊಳ್ಳಬೇಕು.

3. ಭಾಷ್ಯದಲ್ಲಿರುವ ''ಇತ್ಯಾದಿ ತಲ್ಲಿಂಗಾತ್'' ಎಂಬ ಆದಿಪದದಿಂದ ತತ್ತ್ವಪ್ರದೀಪದಲ್ಲಿ—

ಹರಿಂ ಹರಂತಮನು ಯಂತಿ ದೇವಾಃ ।
ವಿಶ್ವಸ್ಯೇಶಾನಂ ವೃಷಭಂ ಮತೀನಾಮ್ ॥

ಎಂಬ ಹದಿನೈದನೆಯ ಅನುವಾಕ್ಯದಲ್ಲಿರುವ ಮಂತ್ರವನ್ನು ತೆಗೆದುಕೊಳ್ಳಲಾಗಿದೆ. ಅಲ್ಲಿ 'ಸರ್ವಬುದ್ಧಿ ನಿಯಂತ್ರಕ, ಸರ್ವಸಂಹರ್ತಾ'' ಎಂದು ವಿಷ್ಣುವಿನ ಅಸಾಧಾರಣ ಗುಣಗಳನ್ನು ಹೇಳಲಾಗಿದೆ. ಚಂದ್ರಿಕಾದಲ್ಲಿ—

'ತಮೇವ ಮೃತ್ಯುಮಮೃತಂ ತಮಾಹುಃ
ತಂ ಭರ್ತಾರಂ ತಮು ಗೋಪ್ತಾರಮಾಹುಃ ॥

ಎಂಬ ಹದಿನಾಲ್ಕನೆಯ ಅನುವಾಕದಲ್ಲೇ ಇರುವ ಮಂತ್ರವನ್ನು ಉದಾಹರಿಸಲಾಗಿದೆ. 'ಸಂಹಾರ ಮತ್ತು ಮೋಕ್ಷಕಾರಣತ್ವ'ವನ್ನು ಇಲ್ಲಿ ಹೇಳಲಾಗಿದೆ.

**ಶ್ರುತ್ಯರ್ಥ :** ಅ. 'ಭುಜಃ ಕರಿಷ್ಯಮಾಣಃ' ಎಂದರೆ ಭೋಗಗಳನ್ನು - ಆನಂದಾನುಭವಗಳನ್ನು ಮಾಡುವವನು ಎಂದರ್ಥ. ಪ್ರಾಣನು ಸ್ವತಃ ಆನಂದಪೂರ್ಣನಾಗದಿದ್ದರೆ ಅವನು ಇತರರಿಗೆ ಆನಂದವನ್ನು ಉಂಟುಮಾಡಲಾರ. ಆದ್ದರಿಂದ ಅವನೂ 'ಮಹಾನ್ ಭೋಗಃ' ಪೂರ್ಣಾನಂದ. 'ಪ್ರಾಣಯೋ ನವ' ಎಂದರೆ 'ಒಂಭತ್ತು ಇಂದ್ರಿಯಗಳನ್ನು ಕ್ರಿಯಾಶೀಲಗಳನ್ನಾಗಿ ಮಾಡುವವನು' ಎಂದರ್ಥ. ವಸ್ತುತಃ ಜ್ಞಾನೇಂದ್ರಿಯ- ಕರ್ಮೇಂದ್ರಿಯಗಳು ಸೇರಿ ಹತ್ತು ಇಂದ್ರಿಯಗಳಾಗಬೇಕು. ಆದರೂ ಪಾಯು- ಉಪಸ್ಥಗಳನ್ನು ಒಂದೇ ಗುಂಪಿನಲ್ಲಿ ಪರಿಗಣಿಸಿ ಒಂಭತ್ತು ಎನ್ನಲಾಗಿದೆ.

ಆ) ತೈತ್ತಿರೀಯ ಶ್ರುತಿಯಲ್ಲಿ 'ಹ್ರೀಶ್ಚ ತೇ ಲಕ್ಷ್ಮೀಶ್ಚ ಪತ್ನ್ಯೌ' ಎಂದು ಪಾಠ. ವಾಜಸನೇಯ ಶಾಖೆಯಲ್ಲಿ 'ಶ್ರೀಶ್ಚ ತೇ' ಎಂದೇ ಪಾಠವಿದೆ. ಅದನ್ನು ಆಚಾರ್ಯರು ಉದ್ಧರಿಸಿದ್ದಾರೆ.

'ಅಹೋರಾತ್ರೇ ಪಾರ್ಶ್ವೇ' ಎಂಬಲ್ಲಿ ಅಹೋರಾತ್ರೇ ಅಂದರೆ ಹಗಲು ಮತ್ತು ರಾತ್ರಿಗಳಿಗೆ ಅಭಿಮಾನಿಗಳಾದ ಸೂರ್ಯ-ಚಂದ್ರರು ಎಂದೂ ಅರ್ಥ ಮಾಡಬಹುದು.

ಲಕ್ಷ್ಮೀದೇವಿ ಮತ್ತು ಶ್ರೀದೇವಿಯರಿಗೆ ಪರಮಾತ್ಮನ ದೇಹದಲ್ಲಿ ಸ್ಥಾನಕಲ್ಪನೆಯನ್ನು ತತ್ತ್ವಪ್ರದೀಪದಲ್ಲಿ ತ್ರಿವಿಕ್ರಮ ಪಂಡಿತಾಚಾರ್ಯರು ಹೀಗೆ ಮಾಡಿದ್ದಾರೆ. 'ಅಂಕಸ್ಥಿತಾ ಶ್ರೀಃ। ವಕ್ಷಸಿ ಲಕ್ಷ್ಮಭೂತಾ ಲಕ್ಷ್ಮೀಃ।' ಪರಮಾತ್ಮನ ತೊಡೆಯಲ್ಲಿ ಶ್ರೀದೇವಿ. ಎದೆಯಲ್ಲಿ ಶ್ರೀವತ್ಸಾಂಕಳಾಗಿರುವವಳು ಲಕ್ಷ್ಮೀದೇವಿ. ಆದರೆ ತತ್ತ್ವಪ್ರಕಾಶಿಕಾದಲ್ಲಿ- ''ವಕ್ಷಸ್ಥಲಾಶ್ರಿತಾ ಶ್ರೀರಿತಿ ಸಂಪ್ರದಾಯವಿದಃ'' ವಕ್ಷಸ್ಥಳದಲ್ಲಿ ಶ್ರೀದೇವಿ ಎನ್ನಲಾಗಿದೆ. ಭಾಗವತದ ಅಷ್ಟಮಸ್ಕಂಧದಲ್ಲಿ-

ತಸ್ಯಾಃ ಶ್ರಿಯಃ ಸಜಗತೋ ಜನಕೋ ಜನನ್ಯಾ
ವಕ್ಷೋಧಿವಾಸಮಕರೋತ್ ಪರಮಂ ವಿಭೂತೇಃ।

ಎಂದು ಶ್ರೀದೇವಿ ಎದೆಯಲ್ಲಿ ವಾಸ ಮಾಡುತ್ತಾಳೆ ಎಂದೇ ಇದೆ.

ಆಚಾರ್ಯರು ತಾತ್ಪರ್ಯ ವಿನಿರ್ಣಯದಲ್ಲಿ (15-95)
ಕೋ ನಾಮ ವಿಷ್ಣುನುಪಜೀವಕ ಆಸ ಯಸ್ಯ
ನಿತ್ಯಾಶ್ರಯಾನಭಿಹಿತಾಪಿ ಸಾ ಸದಾ ಶ್ರೀಃ ॥

''ಲಕ್ಷ್ಮೀದೇವಿ ಪರಮಾತ್ಮನ ಎದೆಯಲ್ಲಿ ನಿತ್ಯವಾಸ ಮಾಡುವುದರಿಂದ ಶ್ರೀ (ಶ್ರಯತೇ ಇತಿ ಶ್ರೀಃ) ಎನಿಸಿದ್ದಾಳೆ'' ಎಂದಿದ್ದಾರೆ. ಆದರೆ ಮತ್ತೊಂದೆಡೆ ''ನ ಕೇವಲಂ ಅಂಕಗತಾಯಾಃ ಶ್ರಿಯಃ ಅಹಂ'' ಎಂದು ತೊಡೆಯೇರಿ ಕುಳಿತವಳು ಶ್ರೀ ಎಂದೂ ಹೇಳಿದ್ದಾರೆ. ಹೀಗೆ ಯಾವ ರೂಪ ಎಲ್ಲಿ ಎಂಬ ಬಗ್ಗೆ ಸಂಪ್ರದಾಯವೇ ಪ್ರಮಾಣ ಎಂದು ಸೂಚಿಸಲು ಟೀಕೆಯಲ್ಲಿ ''ಇತಿ ಸಂಪ್ರದಾಯವಿದಃ'' ಎನ್ನಲಾಗಿದೆ. ಶ್ರೀವಾದಿರಾಜರೂ ''ಕಥಮನ್ಯಥಾ ಶ್ರೀವತ್ಸ ಇತ್ಯೇವ ಭಗವಲ್ಲಿಂಗಸ್ಯ ನಾಮ ನ ತು ಲಕ್ಷ್ಮೀವತ್ಸ ಇತಿ ಭಾವಃ'' ಎಂದಿದ್ದಾರೆ. ಟೀಕಾಕೃತ್ಪಾದರು ಉಲ್ಲೇಖಿಸಿದ ಸಂಪ್ರದಾಯವಿದರೆಂದರೆ ಆಚಾರ್ಯರೇ ಎಂದೂ ಹೇಳಿದ್ದಾರೆ - ''ಇತಿ ಸಂಪ್ರದಾಯಪ್ರವರ್ತಕಶ್ರೀಮದಾಚಾರ್ಯೈರೇವ ಕಥಿತತ್ವಾತ್ ಸಂಪ್ರದಾಯವಿದ ಇತ್ಯುಕ್ತಮ್'' ಆದ್ದರಿಂದ ಪಂಡಿತಾಚಾರ್ಯರ ವಾಕ್ಯ ಎರಡೂ ರೂಪಗಳಿಗೆ ಅಭೇದಾಭಿಪ್ರಾಯ ನಿಮಿತ್ತ ಎಂದು ಕೂಡಿಸಬೇಕು.

## ದ್ವೈತದರ್ಶನದಲ್ಲಿ ಸೂತ್ರಾರ್ಥ

**ಓಂ ॥ ಅತ ಏವ ಪ್ರಾಣಃ ॥ ಓಂ** - ಪ್ರಾಣಃ='ತದ್ವೈತ್ವಂ ಪ್ರಾಣಃ' ಎಂಬ

ತೈತ್ತಿರೀಯ ಶ್ರುತಿ ಹೇಳಿದ ಪ್ರಾಣನು ತತ್ತು=ವಿಷ್ಣುವೇ, ಮುಖ್ಯ ಪ್ರಾಣನಲ್ಲ. ಅತ ಏವ='ಶ್ರೀಶ್ಚ ತೇ ಲಕ್ಷ್ಮೀಶ್ಚ ಪತ್ನ್ಯೌ' ಎಂಬ ನಿರವಕಾಶವಾದ ಶ್ರೀಪತಿತ್ವ ಲಿಂಗವಿರುವುದರಿಂದ.

('ತದ್ವೈತ್ವಂ ಪ್ರಾಣ' ಇತ್ಯುಕ್ತಃ ಪ್ರಾಣಃ ಬ್ರಹ್ಮೈವ, ಕುತಃ ಅತಏವ=ಶ್ರೀಲಕ್ಷ್ಮೀಪತಿತ್ವ ಲಿಂಗಾದೇವ)

## ಶಾಂಕರ ಭಾಷ್ಯದಲ್ಲಿ ಹೇಳಿದ ಅರ್ಥ

ಛಾಂದೋಗ್ಯೋಪನಿಷತ್ತಿನಲ್ಲಿ - 'ಕತಮಾ ಸಾ ದೇವತೇತಿ ಪ್ರಾಣ ಇತಿ ಹೋವಾಚ। ಸರ್ವಾಣಿ ಹ ವಾ ಭೂತಾನಿ ಪ್ರಾಣಮೇವಾಭಿ ಸಂವಿಶಂತಿ।। (1-11-45) ಎಂದಿದೆ. ಇಲ್ಲಿ ಪ್ರಾಣನೆಂದರೆ ಯಾರು? ಎಂದು ಜಿಜ್ಞಾಸೆ. ''ಪ್ರಾಣಸ್ಯ ಪ್ರಾಣಃ'' (ಬೃ.4.4.18) ಎಂದು ಬ್ರಹ್ಮನಿಗೂ ಪ್ರಾಣನಾಮವಿದೆ, ಪ್ರಾಣವಾಯುವಿಗೂ ಪ್ರಾಣನಾಮ ಪ್ರಸಿದ್ಧವಾಗಿದೆ. ಹೀಗಾಗಿ ಛಾಂದೋಗ್ಯದಲ್ಲಿ ವಿವಕ್ಷಿತ ಪ್ರಾಣ ಯಾರು?

**ಪೂರ್ವಪಕ್ಷ :** ಪ್ರಾಣಶಬ್ದಕ್ಕೆ ಮುಖ್ಯಾರ್ಥ ಮುಖ್ಯವಾಯು. ಬ್ರಹ್ಮನಲ್ಲಿ ಆ ಶಬ್ದ ಗೌಣ. ಆದ್ದರಿಂದ ಛಾಂದೋಗ್ಯ ಶ್ರುತಿಯಲ್ಲಿ ಉಲ್ಲೇಖಿಸಲ್ಪಟ್ಟ ಪ್ರಾಣ ಮುಖ್ಯವಾಯು. ಅಲ್ಲಿ 'ಸರ್ವಾಣಿ ಹ ಭೂತಾನಿ' ಎಂದು ಪ್ರಾಣನು ಭೂತವಸ್ತುಗಳ ಉತ್ಪತ್ತಿ-ಲಯಗಳಿಗೆ ಕಾರಣ ಎನ್ನಲಾಗಿದೆ. ಅದನ್ನು ಮುಖ್ಯವಾಯುವಿನಲ್ಲೂ ಹೊಂದಿಸಬಹುದು. ಸುಪ್ತಿಕಾಲದಲ್ಲಿ ಪಂಚೇಂದ್ರಿಯಗಳ ವ್ಯಾಪಾರ ಇರುವುದಿಲ್ಲ, ಪ್ರಾಣವಾಯು ಮಾತ್ರವಿರುತ್ತದೆ. ಅವನಲ್ಲಿ ಪಂಚೇಂದ್ರಿಯ ವೃತ್ತಿಗಳು ಲಯ ಹೊಂದುತ್ತವೆ. ಎಚ್ಚರವಾದಾಗ ಮತ್ತೆ ಹುಟ್ಟಿಕೊಳ್ಳುತ್ತವೆ. ಪಂಚೇಂದ್ರಿಯಗಳು ಪಂಚಭೂತಕ್ಕೆ ಸಂಬಂಧಿಸಿವೆ. ಹೀಗಾಗಿ ಭೂತಗಳ ಉತ್ಪತ್ತಿ ಲಯಗಳಿಗೆ ಪ್ರಾಣ ಕಾರಣ ಎನ್ನಬಹುದು. ಆದ್ದರಿಂದ ಪ್ರಾಣವಾಯುವೇ ಇಲ್ಲಿ ಹೇಳಲ್ಪಟ್ಟ ಪ್ರಾಣ.

**ಸಿದ್ಧಾಂತ :** ಛಾಂದೋಗ್ಯ ಶ್ರುತಿಯಲ್ಲಿ 'ಸರ್ವಾಣಿ ಹ ಭೂತಾನಿ' ಎಂದು ಇಂದ್ರಿಯ, ಶರೀರ ಸಹಿತವಾದ ಸಕಲ ಪ್ರಾಣಿಗಳ ಉತ್ಪತ್ತಿ, ಲಯಕಾರಣತ್ವ ಶ್ರುತವಾಗಿದೆ. ಅದನ್ನು ಇಂದ್ರಿಯಗಳಿಗೆ ಮಾತ್ರ ಸೀಮಿತಗೊಳಿಸಿ ಪ್ರಾಣನೆಂದರೆ ಮುಖ್ಯವಾಯು ಎಂದು ಹೇಳುವುದು ಉಚಿತವಲ್ಲ. ಆದ್ದರಿಂದ ಪ್ರಪಂಚಕಾರಣನಾದ ಬ್ರಹ್ಮನೇ ಇಲ್ಲಿ ಪ್ರಾಣ ಶಬ್ದವಾಚ್ಯ.

## ಚಂದ್ರಿಕಾದಲ್ಲಿ ಮಾಡಿರುವ ವಿಮರ್ಶೆ

ನ ಹಿ ಸ್ವಾಪೇ ಪೃಥಿವ್ಯಾದೇಃ ಅಕ್ಷಾಣಾಂ ವಾ ವಿನಾಶಧೀಃ।

ಪ್ರತ್ಯಕ್ಷಾದನುಮಾನಾದ್ವಾ ದೇವತಾಯಾಂ ಜಡೇऽಥವಾ ।।

ಪೂರ್ವಪಕ್ಷದಲ್ಲಿ ಪಂಚೇಂದ್ರಿಯಗಳು ನಿದ್ರಾಕಾಲದಲ್ಲಿ ಪ್ರಾಣನಲ್ಲಿ ಲಯ

ವಾಗುತ್ತವೆ ಎಂದಿರುವುದು ಸರಿಯಲ್ಲ. ನಿದ್ರಾಕಾಲದಲ್ಲಿ ಇಂದ್ರಿಯಗಳೆಂದೂ ನಾಶ ಹೊಂದುವುದಿಲ್ಲ. ಅದಕ್ಕೆ ಪ್ರಮಾಣವಿಲ್ಲ. ಇಂದ್ರಿಯಗಳಿಂದಾಗುವ ವೃತ್ತಿಗಳು- ಜ್ಞಾನಗಳು ಇಂದ್ರಿಯಗಳ ಪರಿಣಾಮಗಳಲ್ಲ. ಅವು ಅಂತಃಕರಣ ಪರಿಣಾಮಗಳು. ಅವುಗಳೂ ಅಂತಃಕರಣದಲ್ಲಿ ಲೀನವಾಗಬಹುದು ಹೊರತು, ಪ್ರಾಣನಲ್ಲಿ ಅಲ್ಲ. 'ನಿದ್ರಾಕಾಲದಲ್ಲಿ ಇಂದ್ರಿಯ ವೃತ್ತಿಗಳಿಲ್ಲ; ಪ್ರಾಣ ಒಬ್ಬನೇ ಇದ್ದಾನೆ' ಎನ್ನುವ ಇಷ್ಟೇ ಕಾರಣದಿಂದ ಇಂದ್ರಿಯ ವೃತ್ತಿಗಳಿಗೆ ಪ್ರಾಣನಲ್ಲಿ ಲಯವನ್ನು ಹೇಳುವುದು ಅನುಚಿತ. ಹೀಗೆ ಪೂರ್ವಪಕ್ಷಕ್ಕೆ ಅವಕಾಶವೇ ಇಲ್ಲದ ಮೇಲೆ ಸೂತ್ರ ಅನಾವಶ್ಯಕ.

## ರಾಮಾನುಜ ಭಾಷ್ಯದಲ್ಲಿ ಸೂತ್ರಾರ್ಥ

ಅದ್ವೈತಭಾಷ್ಯದ ವಿಷಯ ವಾಕ್ಯವನ್ನೇ ತೆಗೆದುಕೊಂಡು ಪೂರ್ವಪಕ್ಷ ಸಿದ್ಧಾಂತಗಳನ್ನು ಇಲ್ಲಿ ಮಾಡಲಾಗಿದೆ. ಆಕಾಶಾಧಿಕರಣಕ್ಕಿಂತ ಈ ಅಧಿಕರಣದ ಪೂರ್ವಪಕ್ಷದಲ್ಲಿ ವೈಶಿಷ್ಟ್ಯವನ್ನು ತೋರಿಸಿರುವುದು ರಾಮಾನುಜ ಭಾಷ್ಯದಲ್ಲಿ ವಿಶೇಷ - ''ಸರ್ವಭೂತಗಳೂ ಪ್ರಾಣನಿಂದಾಗಿವೆ; ಎಂದು ವಿಷಯ ವಾಕ್ಯದಲ್ಲಿ ಹೇಳಲಾಗಿದೆ. ಇದು ಪ್ರತ್ಯಕ್ಷಸಿದ್ಧವಾದ ವಿಷಯ. ಏಕೆಂದರೆ, ಯಾರೂ ಗಾಳಿ ಇಲ್ಲದೆ ಬದುಕಿರಲಾರರು. ಆದ್ದರಿಂದ ಪ್ರಾಣನೆಂದರೆ ಪ್ರಾಣವಾಯು'' ಎಂದು. ಸಿದ್ಧಾಂತದಲ್ಲಿ ಇದನ್ನು ಹೀಗೆ ನಿರಾಕರಿಸಲಾಗಿದೆ- ಚೇತನನ ಶರೀರಗಳು ಮಾತ್ರ ವಾಯುವಿನಿಂದ ಬದುಕಿವೆ ಎನ್ನಬಹುದು. ಅಚೇತನವಾದ ಕಲ್ಲು, ಕಟ್ಟಿಗೆ ಇವುಗಳಿಗೆ ಪ್ರಾಣನ ಅಗತ್ಯವಿಲ್ಲ. ಅಥವಾ ಚೇತನಸ್ವರೂಪವೂ ಉಳಿಯಬೇಕಾದರೆ ವಾಯುವಿನ ಅಗತ್ಯವಿಲ್ಲ. ಆದರೆ, ಶ್ರುತಿಯಲ್ಲಿ ''ಸರ್ವಾಣಿ ಹ ವಾ ಭೂತಾನಿ'' ಎನ್ನಲಾಗಿದೆ. ಪ್ರಾಣವಾಯು ಪಕ್ಷದಲ್ಲಿ ಸರ್ವಪದವನ್ನು ಸಂಕೋಚ ಮಾಡಬೇಕು. ಆದರೆ, ಪರಮಾತ್ಮನ ಪಕ್ಷದಲ್ಲಿ ಸಂಕೋಚಗೊಳಿಸಬೇಕಿಲ್ಲ. ಏಕೆಂದರೆ ಭೂತಗಳೆಲ್ಲವೂ ಪರಮಾತ್ಮನಿಂದಲೇ ಹುಟ್ಟಿವೆ, ಅವನಲ್ಲೇ ಲಯವಾಗುತ್ತವೆ. ಆದ್ದರಿಂದ ಪ್ರಾಣನೆಂದರೆ ಪರಬ್ರಹ್ಮ.

## ಚಂದ್ರಿಕಾದಲ್ಲಿ ಮಾಡಿರುವ ವಿಮರ್ಶೆ

ಪೂರ್ವಪಕ್ಷಿಯು ತನ್ನ ಮುಂದೆ ಪ್ರಾಣನಿಂದಾಗಿ ಕ್ರಿಯಾಶೀಲವಾದ ಶರೀರಗಳನ್ನೂ, ಪ್ರಾಣದ ಅಪೇಕ್ಷೆಯೇ ಇಲ್ಲದೆ ಇರುವ ಜಡವಸ್ತುಗಳನ್ನೂ ನೋಡುತ್ತಾನೆ. ಅಂದಮೇಲೆ 'ಸಕಲ ಜಗತ್ತು ಪ್ರಾಣವಾಯುವಿನಿಂದಾಗಿ ಜೀವಿಸುತ್ತವೆ' ಎಂದು ಉಪನಿಷತ್ತು ಹೇಳಿದ್ದನ್ನೂ ವಿಚಾರ ಮಾಡದೆ ಒಪ್ಪಿ ಪ್ರಾಣಶಬ್ದ ವಾಯುವಾಚಕ ಎಂದು ಪೂರ್ವಪಕ್ಷ ಮಾಡುವುದು ಹೇಗೆ ಸಾಧ್ಯ? ॥ 23 ॥

**ಇಲ್ಲಿಗೆ ಪ್ರಾಣಾಧಿಕರಣ ಮುಗಿಯಿತು.**

## ಜ್ಯೋತಿರಧಿಕರಣ - 10

'ಯೋ ವೇದ ನಿಹಿತಂ ಗುಹಾಯಾಮ್' (ತೈ.ಉ. 2-1)

ಇತ್ಯುಕ್ತಮ್, ತಚ್ಚ ಗುಹಾನಿಹಿತಂ-

'ವಿ ಮೇ ಕರ್ಣಾ ಪತಯತೋ ವಿಚಕ್ಷುರ್ವೀದಂ ಜ್ಯೋತಿರ್ಹೃದಯ ಆಹಿತಂ ಯತ್। ವಿ ಮೇ ಮನಶ್ಚರತಿ ದೂರ ಆಧೀಃ ಕಿಂ ಸ್ವಿದ್ವಕ್ಷ್ಯಾಮಿ ಕಿಮು ನು ಮನಿಷ್ಯೇ' (ಋ.6-9-6)

ಇತಿ ಜ್ಯೋತಿರುಕ್ತಮ್। ತಚ್ಚ ಜ್ಯೋತಿರಗ್ನಿಸೂಕ್ತತ್ವಾತ್, ಪ್ರಸಿದ್ಧೇಶ್ಚ ಅಗ್ನಿರೇವೇತಿ ಪ್ರಾಪ್ತಮ್ । ಅತ ಆಹ-

### ಓಂ ॥ ಜ್ಯೋತಿಶ್ಚರಣಾಭಿಧಾನಾತ್ ॥ ಓಂ

ವಿಷ್ಣುರೇವ ಜ್ಯೋತಿಃ। ಕರ್ಣಾದೀನಾಂ ವಿಚರಣಾಭಿಧಾನಾತ್। ಸ ಹಿ-

'ಪರೋ ಮಾತ್ರಯಾ ತನ್ವಾವೃಧಾನ' (ಋ.7.99.1)

ಇತ್ಯಾದಿನಾ ಕರ್ಣಾದಿವಿದೂರಃ ॥ 24 ॥

### ॥ ಇತಿ ಜ್ಯೋತಿರಧಿಕರಣಮ್ ॥

ತೈತ್ತಿರೀಯ ಶ್ರುತಿಯಲ್ಲಿ ಆನಂದಮಯನು 'ಯೋ ವೇದ ನಿಹಿತಂ ಗುಹಾಯಾಮ್' ಎಂದು ಹೃದಯಗುಹೆಯಲ್ಲಿದ್ದಾನೆಂದು ಹೇಳಲಾಗಿದೆ. ಹೃದಯಾಕಾಶದಲ್ಲಿ ಇರುವುದು ಜ್ಯೋತಿ ಎಂದಿದೆ ಅಗ್ನಿಸೂಕ್ತ-

''ನನ್ನ ಹೃದಯದಲ್ಲೇ ಅಡಗಿರುವ ಜ್ಯೋತಿಗೆ ವಿಮುಖವಾಗಿ ನನ್ನ ಕಿವಿ-ಕಣ್ಣುಗಳು ಹರಿಯುತ್ತಿವೆ. ಮನಸ್ಸೂ ದೂರ ಓಡುತ್ತಿದೆ. ಹೀಗಾಗಿ, ಜ್ಞಾನಿಯಾದರೂ (ಆಧೀಃ) ನಾನು ಅದರ ಬಗ್ಗೆ ಏನು ಹೇಳಲಿ, ಏನು ಮನನ ಮಾಡಲಿ?'' ಎಂದು. ಇದು ಅಗ್ನಿಸೂಕ್ತವಾದುದರಿಂದ ಈ ಜ್ಯೋತಿ ಜಠರಾಗ್ನಿಯೇ ಆಗಿರಬೇಕು. ಹೀಗೆ ಆಕ್ಷೇಪ ಬಂದಾಗ ಸೂತ್ರಕಾರರು 'ಜ್ಯೋತಿಶ್ಚರಣಾಭಿಧಾನಾತ್' ಎಂದು ಹೇಳಿದ್ದಾರೆ. ಈ ಜ್ಯೋತಿ ವಿಷ್ಣುವೇ. ಏಕೆಂದರೆ, ಇಲ್ಲಿ ಕಿವಿ ಮೊದಲಾದ ಇಂದ್ರಿಯಗಳಿಗೆ ಅತೀತವಾದುದೆಂದು ಜ್ಯೋತಿಯನ್ನು ಹೇಳಲಾಗಿದೆ. ಅಂತಹವನು ವಿಷ್ಣುವೇ- 'ಪರೋ ಮಾತ್ರಯಾ' ಇತ್ಯಾದಿ ಸೂಕ್ತ ವಿಷ್ಣು ಇಂದ್ರಿಯಗಳಿಗೆ ಬಹುದೂರ ಎನ್ನುತ್ತದೆ. ॥ 24 ॥

**ವಿವರಣೆ :** ಈ ಅಧಿಕರಣದಲ್ಲಿ 'ಜ್ಯೋತಿಃ' ಶಬ್ದವನ್ನು ಸಮನ್ವಯ ಮಾಡಲಾಗಿದೆ. ತೈತ್ತಿರೀಯ ಉಪನಿಷತ್ತಿನ ಆರಂಭದ ಮಂತ್ರದಲ್ಲಿ ''ಯೋ ವೇದ ನಿಹಿತಂ ಗುಹಾಯಾಂ''

ಎಂದು ಬ್ರಹ್ಮನು ನಮ್ಮ ಹೃದಯಾಕಾಶದಲ್ಲಿದ್ದಾನೆ ಎನ್ನಲಾಗಿದೆ. 'ಆರಂಭದ ಮಂತ್ರದಲ್ಲಿ ಹೇಳಿದ್ದನ್ನೆ ಅನ್ನಮಯಾದಿ ಪ್ರಕರಣಗಳಲ್ಲಿ ವಿವರಿಸಲಾಗಿದೆ' ಎಂದು ಆನಂದಮಯಾಧಿಕರಣದ 'ಮಾಂತ್ರವರ್ಣಿಕಮೇವ ಚ ಗೀಯತೇ' ಎಂಬ ಸೂತ್ರದಲ್ಲಿ ಹೇಳಿದೆ. ಅಂದಮೇಲೆ ಆನಂದಮಯನೂ ಹೃದಯಾಕಾಶದಲ್ಲಿದ್ದಾನೆ ಎಂದಂತಾಯಿತು. ಆದರೆ ಅಗ್ನಿಸೂಕ್ತದಲ್ಲಿ ಹೃದಯಾಕಾಶದಲ್ಲಿರುವುದು ಜ್ಯೋತಿ ಎನ್ನಲಾಗಿದೆ. ಈ ಜ್ಯೋತಿ ಬ್ರಹ್ಮನೇ ಆದರೆ ಬಾಧಕವಿಲ್ಲ. ಬ್ರಹ್ಮನಲ್ಲವಾದರೆ ಆನಂದಮಯನೂ ಅಬ್ರಹ್ಮನೆನ್ನಬೇಕಾಗುತ್ತದೆ. ಆದ್ದರಿಂದ ಈ ಜ್ಯೋತಿ ಯಾರೆಂದು ವಿಮರ್ಶೆಮಾಡುವ ಆವಶ್ಯಕತೆ ಇದೆ.

**ಪೂರ್ವಪಕ್ಷ :** ಈ ಜ್ಯೋತಿ ಅಗ್ನಿ. 'ಜ್ಯೋತಿಃ' ಶಬ್ದ ಅಗ್ನಿಯ ರೂಢನಾಮ. ಅಲ್ಲದೆ, ಇದು ಅಗ್ನಿಸೂಕ್ತ. ಅಂದಮೇಲೆ ಈ ಪ್ರಕರಣದಲ್ಲಿ ಅಗ್ನಿಯನ್ನೇ ಹೇಳಬೇಕು. ವಿಷ್ಣುವನ್ನು ಹೇಳಿದರೆ ಅಗ್ನಿಸೂಕ್ತ ಹೇಗಾಗುತ್ತದೆ? ಜ್ಯೋತಿ ಅಗ್ನಿಯಾದರೂ ಹೃದಾಯಾಕಾಶ ಸ್ಥಿತಿಗೇನೂ ಬಾಧಕವಿಲ್ಲ. ಜಠರಾಗ್ನಿ ಹೃದಯದೊಳಗಿದೆ ಎಂದು ಎಲ್ಲರಿಗೂ ತಿಳಿದ ವಿಷಯ. ಹೀಗೆ ಅಗ್ನಿ ಎನ್ನಲು ಶ್ರುತಿ, ಪ್ರಕರಣಗಳ ಆಧಾರವಿದೆ. ವಿಷ್ಣು ಎನ್ನಲು ಇರುವ ಆಧಾರ 'ಗುಹಾನಿಹಿತತ್ವ' ಲಿಂಗ ಮಾತ್ರ. ಅದು ಅಗ್ನಿಗೂ ಸಲ್ಲುತ್ತದೆ. ಆದ್ದರಿಂದ ಸಾವಕಾಶ. ಆದ್ದರಿಂದ ಅಗ್ನಿಯೇ ಹೃದಯಾಕಾಶಸ್ಥ, ಅವನೇ ಆನಂದಮಯ.

**ಸಿದ್ಧಾಂತ :** ಈ ಸೂಕ್ತದಲ್ಲಿ ಜ್ಯೋತಿಯು ಇಂದ್ರಿಯಾತೀತ ಎಂದು ಹೇಳಲಾಗಿದೆ. ಆದರೆ ಅಗ್ನಿ ಇಂದ್ರಿಯಾತೀತನಲ್ಲ. ಬ್ರಹ್ಮನಾದರೋ ಇಂದ್ರಿಯಗಳಿಗೆ ನಿಲುಕಲಾರ. 'ಪರೋ ಮಾತ್ರಯಾ' ಎಂಬ ಮಂತ್ರ ವಿಷ್ಣುವನ್ನು ಸಂಬೋಧಿಸಿ ''ಹೇ ವಿಷ್ಣೋ ನೀನು ಜ್ಞಾನಸಾಧನಗಳಾದ ಇಂದ್ರಿಯಾದಿಗಳಿಗೆ (ಮೀಯಂತೇ ಏಭಿರಿತಿ ಮಾತ್ರಾಣಿ-ಇಂದ್ರಿಯಾಣಿ, ತಯಾ) ಅಗೋಚರನಾಗಿರುವಿ'' ಎನ್ನುತ್ತದೆ. ಈ ಸ್ವಭಾವ ವಿಷ್ಣುವಿಗೆ ಅನ್ವಯಿಸಿದಂತೆ ಅಗ್ನಿಗೆ ಅನ್ವಯಿಸಲಾರದು. ಈ ಸೂಕ್ತ ಅಗ್ನಿಸೂಕ್ತವಾದರೂ ಅಗ್ನಿ ಎಂಬ ಹೆಸರಿನ ವಿಷ್ಣುಸೂಕ್ತವೆ. ಹೀಗೆ ಪ್ರಕರಣ ಸಾವಕಾಶವಾದುದರಿಂದ ಬಾಧಕವಲ್ಲ. ಆದ್ದರಿಂದ ನಿರವಕಾಶವಾದ ಲಿಂಗದಿಂದ ವಿಷ್ಣುವೇ ಜ್ಯೋತಿ. ಅವನೇ ಹೃದಯನಿಹಿತ. ಅವನೇ ಆನಂದಮಯ.

**2.** ಸೂತ್ರದಲ್ಲಿ 'ಚರಣಾಭಿಧಾನಾತ್' ಎಂದರೆ ವಿರುದ್ಧ ದಿಕ್ಕಿಗೆ ಹರಿಯುವುದರಿಂದ ಎಂದರ್ಥ. ವಿರುದ್ಧ ಎಂಬ ಅರ್ಥವನ್ನು ಸೂಚಿಸಲು 'ವಿ' ಎಂಬ ಉಪಸರ್ಗ ಸೇರಿಸಿ 'ವಿಚರಣಾಭಿಧಾನಾತ್' ಎಂದೇ ಹೇಳಬೇಕು. ಆದರೆ, ಉಪಸರ್ಗಗಳು ಅರ್ಥವಾಚಕಗಳಲ್ಲ, ಧಾತುವಿಗೆ ಇರುವ ಅರ್ಥ ವಿಶೇಷದ ದ್ಯೋತಕಗಳು. ಆದ್ದರಿಂದ 'ಚರಣಾಭಿಧಾನಾತ್' ಎಂದರೂ 'ವಿರುದ್ಧ ದಿಕ್ಕಿಗೆ ಚಲಿಸುವುದರಿಂದ' ಎಂದೇ ಅರ್ಥ. ಇದರಿಂದ ಶ್ರುತ್ಯಾನುಗುಣ್ಯವನ್ನೂ ಸೂತ್ರಕ್ಕೆ ಹೇಳಿದಂತಾಗುತ್ತದೆ. ಶ್ರುತಿಯಲ್ಲಿ 'ವಿ ಮೇ

ಕರ್ಣಾ ಪತಯತಃ' ಎಂದು ವಿ ಉಪಸರ್ಗವನ್ನು ಬಿಟ್ಟು 'ಪತಯತಃ' ಎಂದಿಷ್ಟನ್ನೇ ಪ್ರತ್ಯೇಕವಾಗಿ ಹೇಳಲಾಗಿದೆ. ಅದಕ್ಕನುಗುಣವಾಗಿ ಸೂತ್ರದಲ್ಲೂ ಉಪಸರ್ಗವನ್ನು ಬಿಡಲಾಗಿದೆ.

**ಸೂತ್ರಾರ್ಥ :** ಜ್ಯೋತಿಃ=ಅಗ್ನಿಸೂಕ್ತದ ಜ್ಯೋತಿಃ ಶಬ್ದದಿಂದ ವಾಚ್ಯವಾದುದು ತತ್=ಬ್ರಹ್ಮನೇ. ಚರಣಾಭಿಧಾನಾತ್=ಕರ್ಣಾದಿ ಇಂದ್ರಿಯಗಳಿಗೆ ಅಗೋಚರತ್ವವನ್ನು ಹೇಳಿರುವುದರಿಂದ.

ಈ ಅಧಿಕರಣದ ಬಗ್ಗೆ ದ್ವೈತಸಿದ್ಧಾಂತದಲ್ಲಿ ಮೂರು ವಿಭಿನ್ನ ಅಭಿಪ್ರಾಯಗಳಿವೆ-

**ಅ.** ಈ ಸೂತ್ರ ಪ್ರತ್ಯೇಕ ಅಧಿಕರಣವೇ ಅಲ್ಲ. ಇದನ್ನೊಳಗೊಂಡ ಮುಂದಿನ ಮೂರು ಸೂತ್ರಗಳೂ ಸೇರಿ ಒಟ್ಟು ನಾಲ್ಕು ಸೂತ್ರಗಳು ಒಂದು ಅಧಿಕರಣ. ಈ ಅಧಿಕರಣದ ವಿಷಯವಾಕ್ಯ ಋಗ್ವೇದದ ಅಗ್ನಿಸೂಕ್ತ. ಇದು ತತ್ವಪ್ರದೀಪಿಕಾದಲ್ಲಿ ತ್ರಿವಿಕ್ರಮ ಪಂಡಿತಾಚಾರ್ಯರು ಹೇಳಿದ ರೀತಿ (ಏಕಂ ಚೇದಂ ಅಧಿಕರಣಂ। ಉತ್ತರಾನುಬದ್ಧತ್ವಾತ್ ಪ್ರಥಮ ವಿಚಾರಸ್ಯ ಏತನ್ನಾಂತರೀಯಕತ್ವಾತ್ ತಸ್ಯ -ತ.ಪ್ರ.)

**ಆ.** ಇದು ನಾಲ್ಕು ಸೂತ್ರಗಳ ಒಂದೇ ಅಧಿಕರಣವಾದರೂ ಇಲ್ಲಿ 'ಅಥ ಯದತಃ ಪರೋ ದಿವೋ ಜ್ಯೋತಿಃ' ಎಂಬ ಛಾಂದೋಗ್ಯೋಪನಿಷತ್ತಿನ ವಾಕ್ಯದಲ್ಲಿರುವ 'ಜ್ಯೋತಿಃ' ಶಬ್ದಾರ್ಥವನ್ನು ವಿಚಾರ ಮಾಡಲಾಗಿದೆ. ಆದ್ದರಿಂದ ಈ ಅಧಿಕರಣಕ್ಕೆ ಛಾಂದೋಗ್ಯೋಪನಿಷತ್ತಿನ ಮಂತ್ರವೇ ವಿಷಯವಾಕ್ಯ, ಅಗ್ನಿಸೂಕ್ತದ ಮಂತ್ರವಲ್ಲ. ಇದು ಸನ್ನ್ಯಾಯರತ್ನಾವಲಿಯಲ್ಲಿ ಶ್ರೀ ಪದ್ಮನಾಭತೀರ್ಥರು ಹೇಳುವ ಪಕ್ಷ.

**ಇ.** ಮೊದಲ ಒಂದು ಸೂತ್ರ ಜ್ಯೋತಿರಧಿಕರಣ. ಆಮೇಲೆ ಮೂರು ಸೂತ್ರಗಳು ಗಾಯತ್ರ್ಯಧಿಕರಣ. ಹೀಗೆ ಎರಡು ಪ್ರತ್ಯೇಕ ಅಧಿಕರಣಗಳು. ಮೊದಲ ಅಧಿಕರಣ ಅಗ್ನಿಸೂಕ್ತದಲ್ಲಿರುವ ಮಂತ್ರದ ಕುರಿತು ವಿಚಾರ ಮಾಡುತ್ತದೆ. ಎರಡನೆಯ ಅಧಿಕರಣ ಛಾಂದ್ಯೋಗ್ಯಮಂತ್ರದ ವಿಮರ್ಶೆ ನಡೆಸುತ್ತದೆ. ಇದು ಶ್ರೀಜಯತೀರ್ಥರು ತತ್ತ್ವಪ್ರಕಾಶಿಕಾದಲ್ಲಿ ಹೇಳಿದ ಕ್ರಮ.

**ಈ.** ಈ ಅಧಿಕರಣದಲ್ಲಿ ಜ್ಯೋತಿಃ ಶಬ್ದದ ಸಮನ್ವಯ. ಮುಂದಿನ ಅಧಿಕರಣದಲ್ಲಿ ಗಾಯತ್ರೀಶಬ್ದದ ಸಮನ್ವಯ. ''ಶಬ್ದಾದೇವ ಪ್ರಮಿತಃ'' (1-3-24) ''ಕಂಪನಾತ್'' (1.3.39) ಎಂಬ ಸೂತ್ರಗಳಲ್ಲಿ ಸಮನ್ವಯ ಮಾಡಬೇಕಾಗಿರುವ ಶಬ್ದಗಳ ಉಲ್ಲೇಖವಿಲ್ಲ. ಆದರೂ ಮೊದಲನೆಯ ಸೂತ್ರದಲ್ಲಿ ವಾಮನ ಶಬ್ದವನ್ನು ಎರಡನೆಯ ಸೂತ್ರದಲ್ಲಿ ''ವಜ್ರ'' ಶಬ್ದವನ್ನೂ ಸಮನ್ವಯ ಮಾಡಲಾಗಿದೆ. ಹೀಗಾಗಿ ಅವರೆಡು ಪ್ರತ್ಯೇಕ ಅಧಿಕರಣಗಳು. ಅದರಂತೆ ಪ್ರಕೃತದಲ್ಲೂ ಸಮನ್ವಯಮಾಡುವ ಶಬ್ದಗಳು ಬೇರೆಯಾದ್ದರಿಂದ ಅಧಿಕರಣ ಭೇದ. ಇದು ಅಧಿಕರಣ ಭೇದಕ್ಕೆ ಯುಕ್ತಿ.

ಈ ಎರಡು ಅಧಿಕರಣಗಳು ಪ್ರತ್ಯೇಕವಲ್ಲ ಎನ್ನಲೂ ಒಂದು ಯುಕ್ತಿ ಇದೆ. ಮೊದಲ ಸೂತ್ರದಲ್ಲಿ ಜ್ಯೋತಿಃ ಶಬ್ದ ವಿಷ್ಣುವಾಚಕ ಎಂದು ಸಿದ್ಧಾಂತ ಮಾಡಿದಾಗ ಛಾಂದೋಗ್ಯದಲ್ಲಿ ಆ ಜ್ಯೋತಿಯನ್ನು ಗಾಯತ್ರೀ ಎಂದು ಹೇಳಿರುವುದರಿಂದ ಅದು ವಿಷ್ಣುವಾಗುವುದು ಹೇಗೆ? ಎಂಬ ಅಧಿಕಾಶಂಕೆಗೆ ಮುಂದಿನ ಸೂತ್ರ ಸಮಾಧಾನ ನೀಡುವುದರಿಂದ ಎರಡೂ ಅಧಿ ಕರಣಗಳ ತಾತ್ಪರ್ಯ ಜ್ಯೋತಿಃಶಬ್ದದ ಸಮನ್ವಯವೇ ಆಗಿದೆ. ಆನುಷಂಗಿಕವಾಗಿ ಗಾಯತ್ರೀ ಶಬ್ದದ ಸಮನ್ವಯ. ಈ ಅಭಿಪ್ರಾಯದಿಂದ ಒಂದೇ ಅಧಿಕರಣ ಎನ್ನುವುದರಲ್ಲಿ ಅನೌಚಿತ್ಯವಿಲ್ಲ.

ಶಾಂಕರ, ರಾಮಾನುಜ ಭಾಷ್ಯಗಳಲ್ಲಿ ನಾಲ್ಕು ಸೂತ್ರಗಳೂ ಸೇರಿ ಒಂದು ಅಧಿಕರಣ ಎಂದು ಪರಿಗಣಿಸಿರುವುದರಿಂದ ಮುಂದಿನ ಅಧಿಕರಣದಲ್ಲೇ ಅವೆರಡು ಭಾಷ್ಯಗಳ ಅಭಿಪ್ರಾಯವನ್ನು ತಿಳಿಸಲಾಗುವುದು. ॥ 24 ॥

**॥ ಇಲ್ಲಿಗೆ ಜ್ಯೋತಿರಧಿಕರಣ ಮುಗಿಯಿತು ॥**

# ಗಾಯತ್ರ್ಯಧಿಕರಣ-11

## (ಛಂದೋಭಿಧಾನಾಧಿಕರಣ)

**ಓಂ ॥ ಛಂದೋಽಭಿಧಾನಾನ್ನೇತಿ ಚೇನ್ನ**
**ತಥಾ ಚೇತೋಽರ್ಪಣನಿಗದಾತ್ ತಥಾಹಿ ದರ್ಶನಮ್ ॥ ಓಂ**

**'ಅಥ ಯದತಃ ಪರೋ ದಿವೋ ಜ್ಯೋತಿರ್ದೀಪ್ಯತೇ' (ಛಾಂ 3.13-7)**

**ಇತ್ಯುಕ್ತಸ್ಯ ಜ್ಯೋತಿಷಃ, 'ಗಾಯತ್ರೀ ವಾ ಇದಂ ಸರ್ವಂ' (ಛಾಂ.3.12-1) ಇತಿ ಗಾಯತ್ರ್ಯಾ ಸಮಾರಂಭಃ ಕೃತಃ । ತಸ್ಮಾತ್ ನ ವಿಷ್ಣುರಿತಿ ಚೇತ್, ತಥಾ ಚೇತೋರ್ಪಣಾರ್ಥಂ ಹಿ ನಿಗದ್ಯತೇ। ತಥಾ ಹಿ ದರ್ಶನಂ-**

**'ಗಾಯತಿ ತ್ರಾಯತಿ ಚ' (ಛಾಂ.3.12.1) ಇತ್ಯಾದಿ।**

**ಸರ್ವಛಂದೋಽಭಿದೋ ಹ್ಯೇಷಃ ಸರ್ವದೇವಾಭಿದೋ ಹ್ಯಸೌ ।**

**ಸರ್ವಲೋಕಾಭಿದೋ ಹ್ಯೇಷಃ ತೇಷಾಂ ತದುಪಚಾರತಃ ॥**

**ಇತಿ ವಾಮನೇ ॥ 25 ॥**

ಛಾಂದೋಗ್ಯೋಪನಿಷತ್ತಿನಲ್ಲಿ 'ಸ್ವರ್ಗಲೋಕಕ್ಕಿಂತಲೂ ಎತ್ತರದಲ್ಲಿ ಬೆಳಗುವ

ಜ್ಯೋತಿ' ಎಂಬ ಅರ್ಥದ ಮಂತ್ರ 'ಇವೆಲ್ಲವೂ ಗಾಯತ್ರೀ' ಎಂದು ಅರ್ಥಬರುವ ಮಂತ್ರದಿಂದ ಆರಂಭವಾಗಿದೆ. ಹೀಗೆ ಗಾಯತ್ರಿಯ ಅಭೇದವನ್ನು ಜ್ಯೋತಿಗೆ ಹೇಳಿರುವುದರಿಂದ ಜ್ಯೋತಿಃ ಶಬ್ದವಾಚ್ಯ ವಿಷ್ಣುವಲ್ಲ. ಹೀಗೆ ಹೇಳುವುದು ಸರಿಯಲ್ಲ. ಪರಮಾತ್ಮನನ್ನು ಆ ರೀತಿಯಾಗಿ ಉಪಾಸನೆ ಮಾಡಬೇಕೆಂಬ ಉದ್ದೇಶದಿಂದ ಉಪನಿಷತ್ತಿನಲ್ಲಿ ಹಾಗೆ ಹೇಳಲಾಗಿದೆ. 'ವಿಷ್ಣುವಿನಲ್ಲಿ ಅಗ್ನಿ, ಗಾಯತ್ರೀ ಮೊದಲಾದ ಶಬ್ದಗಳಿಂದ ಹೇಳಲ್ಪಡುವ ಗುಣಗಳಿವೆ ಎಂದು ಉಪಾಸನೆ ಮಾಡಬೇಕು' ಎಂಬ ಉದ್ದೇಶದಿಂದ ಉಪನಿಷತ್ತುಗಳು ಬೇರೆ ಬೇರೆ ಶಬ್ದಗಳಿಂದ ವಿಷ್ಣುವನ್ನು ಉಲ್ಲೇಖಿಸುತ್ತವೆ.

ವಿಷ್ಣುವೇ ಗಾಯತ್ರೀ ಶಬ್ದದ ಅರ್ಥ ಎನ್ನುವ ಶ್ರುತಿ ಇದೆ. 'ಗಾಯತಿ ತ್ರಾಯತಿ ಚ' ಎಂದು. ವಾಮನ ಪುರಾಣದಲ್ಲಿ ಹೀಗಿದೆ. 'ಎಲ್ಲ ಛಂದಸ್ಸುಗಳ ಹೆಸರುಗಳೂ ಎಲ್ಲ ದೇವತೆಗಳ ಹೆಸರುಗಳೂ, ಎಲ್ಲ ಲೋಕಗಳ ಹೆಸರುಗಳೂ ಪರಮಾತ್ಮನಿಗಿವೆ. ಅವುಗಳಿಗೆ ಆಯಾಯ ಹೆಸರುಗಳು ಗೌಣವಾದುದು'.

**ವಿವರಣೆ : 1.** ಈ ಅಧಿಕರಣದಲ್ಲಿ ಲೋಕತಃ ಅನ್ಯತ್ರಪ್ರಸಿದ್ಧವಾದ ಗಾಯತ್ರೀ ಶಬ್ದದ ಸಮನ್ವಯವನ್ನು ಮಾಡಲಾಗಿದೆ. ಹಿಂದಿನ ಅಧಿಕರಣದಲ್ಲಿ ಹೃದಯದಲ್ಲಿರುವ ಜ್ಯೋತಿ ವಿಷ್ಣು ಎನ್ನಲಾಗಿದೆ. ಆದರೆ ಛಾಂದೋಗ್ಯ ಶ್ರುತಿಯಲ್ಲಿ 'ಅಥ ಯದತಃ ಪರೋ ದಿವೋ ಜ್ಯೋತಿಃ... ಅಸ್ಮಿನ್ ಪುರುಷೇ ಜ್ಯೋತಿಃ' ಎಂದು ಹೃದಯ ನಿಹಿತ ಜ್ಯೋತಿಯ ಪ್ರಸ್ತಾಪಕ್ಕಿಂತ ಮೊದಲು ''ಗಾಯತ್ರೀ ವಾ ಇದಂ ಸರ್ವಂ'' ಎಂದು ಪ್ರಕರಣವನ್ನು ಆರಂಭಿಸಲಾಗಿದೆ. ಅಷ್ಟೇ ಅಲ್ಲದೆ, 'ತೇಜೋ ವೈ ಬ್ರಹ್ಮವರ್ಚಸಂ ಗಾಯತ್ರೀ' ಎಂದು ಗಾಯತ್ರಿಯನ್ನು 'ತೇಜಃ' ಎಂಬ ನಾಮದಿಂದಲೇ ಕರೆಯಲಾಗಿದೆ. ಜ್ಯೋತಿಃ ಶಬ್ದಕ್ಕೂ ತೇಜಃ ಶಬ್ದಕ್ಕೂ ಅರ್ಥ ಒಂದೆ. ಇದರಿಂದ ಛಾಂದೋಗ್ಯದಲ್ಲಿ ಹೇಳಲ್ಪಟ್ಟ ಜ್ಯೋತಿ ಗಾಯತ್ರೀ ಎನ್ನುವುದು ಸ್ಪಷ್ಟ. ಗಾಯತ್ರೀ ಎಂದರೆ 24 ಅಕ್ಷರಗಳುಳ್ಳ ವೇದದ ಛಂದಸ್ಸು. ಆದ್ದರಿಂದ, ಅದೇ ಜ್ಯೋತಿ. ಹೀಗೆ ಹಿಂದಿನ ಅಧಿಕರಣದ ಸಿದ್ಧಾಂತದ ಮೇಲೆ ಆಕ್ಷೇಪ.

**2. ಸಿದ್ಧಾಂತ :** ಛಾಂದೋಗ್ಯೋಪನಿಷತ್ತಿನಲ್ಲಿ ''ಗಾಯತಿ ತ್ರಾಯತಿ ಚ'' ಎಂದು ಪರಮಾತ್ಮನೇ ಗಾಯತ್ರೀ ಶಬ್ದವಾಚ್ಯ ಎನ್ನಲಾಗಿದೆ. ''ಅವನು ಭಕ್ತರನ್ನು ಕುರಿತು ಸಾಮಗಾನ ಮಾಡುತ್ತಾನೆ, ಅವರಿಗೆ ಮುಕ್ತಿ ನೀಡಿ ರಕ್ಷಿಸುತ್ತಾನೆ. ಆದ್ದರಿಂದ ಅವನೇ ಗಾಯತ್ರಿ' ಎಂದು ಗಾಯತ್ರೀ ಶಬ್ದದ ಅರ್ಥವನ್ನು ಪರಮಾತ್ಮನಲ್ಲೇ ಸಮನ್ವಯಗೊಳಿಸಲಾಗಿದೆ. ಆದ್ದರಿಂದ ಛಾಂದೋಗ್ಯೋಪನಿಷತ್ತಿನ ಅಭಿಪ್ರಾಯ ವಿಷ್ಣುವೇ ಗಾಯತ್ರೀಪದದಿಂದ ವಾಚ್ಯ ಎಂಬುದು ಸ್ಪಷ್ಟವಾಗಿ ತಿಳಿಯುತ್ತದೆ. ಅವನು ಗಾಯತ್ರಿಯಾದುದರಿಂದಲೇ ಜ್ಯೋತಿಃ ಶಬ್ದದಿಂದ ಪ್ರತಿಪಾದ್ಯನೂ ಅವನೇ, ಆನಂದಮಯನೂ ಅವನೆ.

**3.** ಪರಮಾತ್ಮನಿಗೆ ಅವನದೇ ಆದ ಅನೇಕ ನಾಮಗಳಿರುವಾಗ ಇಂತಹ ಸಂದಿಗ್ಧ ಹೆಸರುಗಳಿಂದ ಅವನನ್ನು ಉಪನಿಷತ್ತುಗಳು ಏಕೆ ಕರೆಯಬೇಕು? ಎಂಬ ಪ್ರಶ್ನೆಗೆ ''ತಥಾ

ಚೇತೋರ್ಪಣನಿಗದಾತ್'' ಎಂದು ಸೂತ್ರಕಾರರು ಉತ್ತರಿಸಿದ್ದಾರೆ. ಇದು ಹಿಂದು ಮುಂದಿನ ಎಲ್ಲ ಸಮನ್ವಯ ಸೂತ್ರಗಳಿಗೂ ಸಂಬಂಧಿಸಿದೆ. ಪರಮಾತ್ಮ ಸರ್ವಶಬ್ದವಾಚ್ಯ ಎಂಬ ಜ್ಞಾನ, ಜೊತೆಯಲ್ಲಿ ಎಲ್ಲ ಶಬ್ದಗಳ ಅರ್ಥವಾದ ಗುಣಗಳೂ ಅವನಲ್ಲಿವೆ ಎಂದು ಧ್ಯಾನಿಸಬೇಕಾದುದು ಸಾಧಕನ ಧರ್ಮ.

ಜ್ಞಾನಾರ್ಥಂ ಅಧ್ಯಯನಾರ್ಥಂ ಚ ಗುಣಾನಾಂ ಸಮುದೀರಣಾ ।

ಇದಕ್ಕಾಗಿ ಉಪನಿಷತ್ತುಗಳು ವಿಭಿನ್ನ ಶಬ್ದಗಳಿಂದ ವಿಷ್ಣುವನ್ನು ಉಲ್ಲೇಖಿಸುತ್ತವೆ.

ಗಾಯತ್ರೀ ಶಬ್ದದ ಅರ್ಥವನ್ನು ಹಿಂದೆ ಗುರ್ವರ್ಥದೀಪಿಕಾದಲ್ಲಿ ಹೇಳಿದಂತೆ ನಿರೂಪಿಸಲಾಗಿದೆ. ಸ್ಮೃತಿಯಲ್ಲಿ ಹೀಗೂ ಅದರ ಅರ್ಥವನ್ನು ತಿಳಿಸಲಾಗಿದೆ-

ತನ್ನಿಃ ಸೃತತ್ವಾದ್ ವೇದಾನಾಂ ಗಾಯಕಃ ತ್ರಾತಿ ಚಾಖಿಲಮ್ ।

ಅತೋ ಗಾಯತ್ರಿನಾಮಾಸೌ ವಾಸುದೇವಃ ಪರಃ ಪುಮಾನ್ ॥

ಅವನು ಎಲ್ಲ ವೇದಗಳ ಪ್ರಥಮ ಗಾಯಕ. ಎಲ್ಲದರ ರಕ್ಷಕ. ಆದ್ದರಿಂದ ಗಾಯತ್ರೀಪದವಾಚ್ಯ.

ಹೀಗೆ, ಗಾಯತ್ರೀ ಶಬ್ದದ ಅರ್ಥ ವಿಷ್ಣುವಿನಲ್ಲೇ ಸಂಗತ. ಆದ್ದರಿಂದ ಅವನು ಗಾಯತ್ರೀ. ಅಷ್ಟೇ ಅಲ್ಲದೆ ಈ ಉಪನಿಷತ್ತಿನಲ್ಲಿ 'ಯಾ ವೈ ಸಾ ಗಾಯತ್ರೀಯಂ ವಾವ ಸೇಯಂ ಪೃಥಿವೀ' ಗಾಯತ್ರಿಯೇ ಪೃಥಿವೀ ಎಂದು ಹೇಳಿ ''ಅಸ್ಯಾಂ ಹೀದಂ ಸರ್ವಂ ಪ್ರತಿಷ್ಠಿತಮ್'' ಎಂದು ಪೃಥಿಯಲ್ಲೇ ಎಲ್ಲವೂ ಆಶ್ರಿತವಾಗಿದೆ ಎನ್ನಲಾಗಿದೆ. ಇದರಿಂದ ಸರ್ವಾಶ್ರಯನಾದ ಪರಮಾತ್ಮನೇ ಪೃಥಿವೀ-ಗಾಯತ್ರೀ ಪದಗಳಿಂದ ವಾಚ್ಯನೆಂದು ತಿಳಿಯುತ್ತದೆ.

ಈ ಒಂದು ಶಬ್ದವನ್ನು ವಿಷ್ಣುವಿನಲ್ಲಿ ಸಮನ್ವಯ ಮಾಡಿರುವುದರಿಂದ 'ಉಷ್ಣಿಕ್ ಅನುಷ್ಟುಪ್, ಬೃಹತೀ' ಮೊದಲಾದ ಎಲ್ಲ ಛಾಂದೋನಾಮಗಳೂ ವಿಷ್ಣುವಾಚಕ ಎಂದಂತಾಗುತ್ತದೆ. ॥ 25 ॥

## ಓಂ ॥ ಭೂತಾದಿಪಾದವ್ಯಪದೇಶೋಪಪತ್ತೇಶ್ಚೈವಮ್ ॥ ಓಂ

**ತಾವಾನಸ್ಯ ಮಹಿಮಾ ತತೋ ಜ್ಯಾಯಾಂಶ್ಚ ಪುರುಷಃ ।**

**ಪಾದೋಸ್ಯ ಸರ್ವಾ ಭೂತಾನಿ ತ್ರಿಪಾದಸ್ಯಾಮೃತಂ ದಿವಿ ॥ (ಛಾಂ. 3-12-6) ಇತಿ ।**

**ಸುವರ್ಣಂ ಕೋಶಂ ರಜಸಾ ಪರಿವೃತಮ್**

**ದೇವಾನಾಂ ವಸುಧಾನೀಂ ವಿರಾಜಮ್ ।**

**ಅಮೃತಸ್ಯ ಪೂರ್ಣಾಂ ತಾಮು ಕಲಾಂ ವಿಚಕ್ಷತೇ**

**ಪಾದಂ ಷಡ್ಢೋತುರ್ನ ಕಿಲಾ ವಿವಿತ್ಸೇ ॥ (ತೈ. ಆ. 3.11)**

**ಇತಿ ಶ್ರುತೇಃ ।**

**ಪಾದ ಇತಿ ಏಕದೇಶಪರಿಮಿತಂ "ಚತುರ್ಭಾಗ ಬಲಃ" ಇತಿವದ್ಭಿನ್ನಂ ಚ । ಸ ಹಿ ಪುರುಷಸೂಕ್ತಾಭಿಧೇಯಃ-ಯಜ್ಞೇನ ಯಜ್ಞಮಯಜಂತ (ತೈ. ಆ. 3-12) ಇತಿ ಯಜ್ಞ ಶಬ್ದಾತ್ ।**

**"ಯಜ್ಞೋ ವಿಷ್ಣುರ್ದೇವತಾ" ಇತಿ ಹಿ ಶ್ರುತಿಃ ।**

**ತಸ್ಮಿನ್ ಕಾಲೇ ಮಹಾರಾಜ ರಾಮ ಏವಾಭಿಧೀಯತೇ ।**

**ಯಥಾ ಹಿ ಪೌರುಷೇ ಸೂಕ್ತೇ ವಿಷ್ಣುರೇವಾಭಿಧೀಯತೇ ।**

**ಇತಿ ಚ ಸ್ಕಾಂದೇ ॥ 26 ॥**

ಛಾಂದೋಗ್ಯೋಪನಿಷತ್ತಿನಲ್ಲಿ ಗಾಯತ್ರಿಗೆ "ಸೈಷಾ ಚತುಷ್ಪದಾ, ಷಡ್ವಿಧಾ ಗಾಯತ್ರೀ' ಎಂದು ನಾಲ್ಕು ಪಾದಗಳನ್ನು ಹೇಳಿ 'ತದೇತದ್ ಋಚಾಭ್ಯನೂಕ್ತಂ' ಎಂದು ನಾಲ್ಕು ಪಾದಗಳನ್ನು ಹೇಳುವ ಮಂತ್ರವನ್ನು ಹೀಗೆ ಉದ್ಧರಿಸಲಾಗಿದೆ- 'ಆ ಪುರುಷನ ಮಹಿಮೆ ಇಷ್ಟೆ ಅಲ್ಲ, ಇದಕ್ಕಿಂತಲೂ ಹೆಚ್ಚಿನದು. ವಿಶ್ವದ ಎಲ್ಲ ಪ್ರಾಣಿಗಳೂ ಅವನ ಒಂದಂಶ. ಇದಲ್ಲದೆ, ಅವನ ಇನ್ನೂ ಮೂರು ಅಂಶಗಳು ದ್ಯುಲೋಕದಲ್ಲಿವೆ.' ತೈತ್ತಿರೀಯೋಪನಿಷತ್ತು ಋಕ್ ಮಂತ್ರದಲ್ಲಿ ಹೇಳಿದ ಪಾದಶಬ್ದದ ಅರ್ಥವನ್ನು ಹೀಗೆ ವಿವರಿಸಿದೆ- "ಸ್ವರ್ಣಮಯವಾದ ಈ ಬ್ರಹ್ಮಾಂಡವು ಸತ್ವಾದಿ ತ್ರಿಗುಣಗಳಿಂದ ಆವರಿಸಲ್ಪಟ್ಟಿದೆ. ದೇವತೆಗಳ ಐಶ್ವರ್ಯ ನಿಕ್ಷೇಪದ ಖಜಾನೆ ಇದು. ವಿಶೇಷ ಪ್ರಕಾಶವುಳ್ಳದ್ದು ಮುಕ್ತರಿಂದ ತುಂಬಿದೆ. ಇದು ಷಡಿಂದ್ರಿಯಗಳಿಗೆ ವಿಷಯ ಸಮರ್ಪಕನಾದ ಪರಮಾತ್ಮನ ಒಂದಂಶಕ್ಕೂ ಸಮಾನವಲ್ಲ".

ಮಂತ್ರದಲ್ಲಿರುವ ಪಾದಶಬ್ದಕ್ಕೆ ಒಂದು ಭಾಗ ಎಂದರ್ಥವಲ್ಲ. 'ರಾಮನ ನಾಲ್ಕನೆಯ ಒಂದಂಶ ಬಲ ಕೃಷ್ಣನಿಗಿದೆ' ಎಂದಂತೆ ಭಿನ್ನವಾದ ಅಂಶ ಎಂದರ್ಥ. ಆ ಶಬ್ದಕ್ಕೆ ನಾಲ್ಕನೆಯ ಒಂದು ಭಾಗ ಎಂದೂ ಅರ್ಥವಲ್ಲ. ಪರಮಾತ್ಮನ ಒಂದಂಶಕ್ಕೆ ಸಮ ಎಂದಿಷ್ಟೇ ಅರ್ಥ.

ಪುರುಷಸೂಕ್ತದಲ್ಲಂತೂ ಪರಮಾತ್ಮನೇ ವಾಚ್ಯನೆಂದು ಪ್ರಸಿದ್ಧವಾದ ವಿಷಯ. ಏಕೆಂದರೆ, ಅದರ ಕೊನೆಯಲ್ಲಿ 'ಯಜ್ಞೇನ ಯಜ್ಞಂ' ಎಂದು ಯಜ್ಞಶಬ್ದವಿದೆ. 'ಯಜ್ಞನೆಂದರೆ ವಿಷ್ಣುದೇವತೆ' ಎಂದು ಶ್ರುತಿಯೇ ಹೇಳುತ್ತದೆ. ಸ್ಕಾಂದದಲ್ಲಿ ಹೀಗಿದೆ - 'ಹೇಗೆ ಪುರುಷಸೂಕ್ತ ವಿಷ್ಣುವನ್ನೇ ಹೇಳುತ್ತದೋ ಹಾಗೆಯೇ ತ್ರೇತಾಯುಗದಲ್ಲಿ ಎಲ್ಲೆಡೆಯೂ ರಾಮನೇ ಕೇಳಿಬರುತ್ತಿದ್ದ'.

**ವಿವರಣೆ :** ಛಾಂದೋಗ್ಯದಲ್ಲಿ ಗಾಯತ್ರಿಗೆ ನಾಲ್ಕು 'ಪಾದ'ಗಳನ್ನು ಹೇಳಿ ಅದಕ್ಕೆ ಆಧಾರವನ್ನಾಗಿ ಪುರುಷಸೂಕ್ತವನ್ನು ಉದಾಹರಿಸಲಾಗಿದೆ. ಪುರುಷಸೂಕ್ತದಲ್ಲಿ ವಿಷ್ಣುವೇ ಪ್ರತಿಪಾದ್ಯ. ಆದ್ದರಿಂದ ಗಾಯತ್ರಿಶಬ್ದದಿಂದಲೂ ಅವನೇ ವಾಚ್ಯ.

2. ಪರಮಾತ್ಮನ ಒಟ್ಟು ನಾಲ್ಕು ಪಾದ (ಅಂಶ)ಗಳಲ್ಲಿ ಮೂರು ಪಾದಗಳು ಶ್ವೇತದ್ವೀಪ, ಅನಂತಾಸನ, ವೈಕುಂಠಲೋಕಗಳಲ್ಲಿವೆ. ಈ ಸ್ಥಾನಗಳಲ್ಲಿರುವ ನಾರಾಯಣ, ವಾಸುದೇವ, ವೈಕುಂಠಗಳೆಂಬ ಪರಮಾತ್ಮನ ಮೂರು ರೂಪಗಳು, ಅವನ ಸ್ವರೂಪಾಂಶಗಳು. ಇದನ್ನೆ ಪುರುಷಸೂಕ್ತ ''ತ್ರಿಪಾದಸ್ಯಾಮೃತಂ ದಿವಿ'' ಎಂದು ಹೇಳಿದೆ. ಇನ್ನೊಂದು ''ಪಾದೋಸ್ಯ ವಿಶ್ವಾ ಭೂತಾನಿ'' ಭೂಲೋಕದಲ್ಲಿರುವ ಪ್ರಾಣಿಗಳು. ಆದರೆ, ಇವುಗಳು ಪರಮಾತ್ಮನ ಸ್ವರೂಪಾಂಶಗಳಲ್ಲ, ಭಿನ್ನಾಂಶಗಳು. 'ರಾಮನ ಶ್ರೀಮಂತಿಕೆಯ ಒಂದಂಶ ಕೃಷ್ಣನಲ್ಲಿದೆ' ಎಂದು ಹೇಳಿದಾಗ ರಾಮನ ಹಣವೇ ಕೃಷ್ಣನಲ್ಲಿರಬೇಕಾಗಿಲ್ಲ, ಅದರಂತೆ, ಸಕಲ ಪ್ರಾಣಿಗಳೂ ಪರಮಾತ್ಮನ ಅಂಶವೆನ್ನಬೇಕಾದರೆ ಜೀವಿಗಳಿಗೂ ಪರಮಾತ್ಮನಿಗೂ ಅಭೇದವಿರಬೇಕಾಗಿಲ್ಲ, ಭೇದವಿದ್ದರೂ ಅವನ ಒಂದಂಶಕ್ಕೆ ಎಲ್ಲರೂ ಸಮಾನರು ಎಂದು ಹೇಳಬಹುದು. ಅಲ್ಲದೆ, ಪಾದ ಎಂದರೆ ನಾಲ್ಕನೆಯ ಒಂದಂಶ. ಸಕಲ ಪ್ರಾಣಿಗಳೂ ಪರಮಾತ್ಮನ ನಾಲ್ಕನೆಯ ಒಂದು ಭಾಗಕ್ಕೆ ಸಮಾನ ಎಂದು ಹೇಳಿದರೆ ಇದರ ನಾಲ್ಕರಷ್ಟು ಪರಮಾತ್ಮನ ಸಾಮರ್ಥ್ಯ ಎಂದಂತಾಯಿತು. ಆಗ ಪರಮಾತ್ಮನ ಮಹತ್ವಕ್ಕೆ ಪರಿಮಿತಿ ಬಂದಂತಾಯಿತು. ಆದ್ದರಿಂದ ಪಾದ ಶಬ್ದಕ್ಕೆ ನಾಲ್ಕನೆಯ ಒಂದು ಭಾಗ ಎಂಬ ಮುಖ್ಯಾರ್ಥವನ್ನು ಬಿಟ್ಟು ಅಂಶ ಎಂದಿಷ್ಟೇ ಅರ್ಥವನ್ನು ಹೇಳಬೇಕು.

**ಶ್ರುತ್ಯರ್ಥ :** ಅ. 'ಸುವರ್ಣಂ ಕೋಶಂ' ಎಂಬ ಶ್ರುತಿಯಲ್ಲಿ 'ರಜಸಾ ಪರಿವೃತಂ' ಎಂದರೆ ಬ್ರಹ್ಮಾಂಡವು ರಜೋಗುಣದ ಆವರಣದಿಂದ ಸುತ್ತುವರಿಯಲ್ಪಟ್ಟಿದೆ ಎಂದರ್ಥ. ರಜೋಗುಣ ಮಾತ್ರವಲ್ಲದೆ, ನೀರು, ಅಗ್ನಿ, ವಾಯು, ಆಕಾಶ, ಅಹಂಕಾರ, ಮಹತ್ತತ್ತ್ವ, ಸತ್ವ, ತಮೋಗುಣಗಳು ಹೀಗೆ ನವ ಆವರಣಗಳು ಬ್ರಹ್ಮಾಂಡಕ್ಕಿವೆ.

ಆ. 'ಅಮೃತಸ್ಯ ಪೂರ್ಣಾಂ' ಎಂದರೆ 'ಅಮೃತೇನ ಪೂರ್ಣಾಂ' ಎಂದರ್ಥ. ಅಮೃತರು ಎಂದರೆ ಮುಕ್ತರು. ಬ್ರಹ್ಮಾಂಡದೊಳಗೆ ಮುಕ್ತ ಜೀವರಾಶಿಗಳು ತುಂಬಿದ್ದಾರೆ ಎಂದರ್ಥ.

ಇ. ಷಡ್ಢೋತುಃ - ಷಟ್=ಪಂಚ ಬಾಹ್ಯೇಂದ್ರಿಯಗಳು ಮತ್ತು ಮನಸ್ಸು ಎಂಬ ಆಂತರ ಇಂದ್ರಿಯ ಒಟ್ಟು ಆರು ಇಂದ್ರಿಯಗಳಿಗೆ ಹೋತುಃ=ವಿಷಯ ಪದಾರ್ಥಗಳನ್ನು ಒದಗಿಸುವವ.

''ಬ್ರಹ್ಮಾದಿ ದೇವತೆಗಳೂ ಒಂದು ಇಂದ್ರಿಯಕ್ಕೂ ವಿಷಯಗಳನ್ನು ಕೊಡಲಾರರು. ಅಂದಮೇಲೆ ಅಂತಹವರು ಪರಮಾತ್ಮನ ನಾಲ್ಕನೆಯ ಒಂದಂಶರಲ್ಲ ಎನ್ನುವುದು ಸ್ಪಷ್ಟ'' ಇದನ್ನು ಸೂಚಿಸುವುದಕ್ಕಾಗಿ ''ಷಡ್ಢೋತುಃ'' ಎಂಬ ವಿಶೇಷಣವನ್ನು ನೀಡಲಾಗಿದೆ.

ಉ. ನ ಕಿಲಾ ವಿವಿತ್ಸೇ- 'ನ ವಿವಿತ್ಸೇ ಕಿಲ' ಎಂದು ಅನ್ವಯ 'ಸರಿಗಟ್ಟಲಾರದು ತಾನೇ' ಎಂದರ್ಥ. 'ಕಿಲಾ' ಎಂಬ ದೀರ್ಘ ಛಾಂದಸ. ॥ 26 ॥

**ಓಂ ॥ ಉಪದೇಶಭೇದಾನ್ನೇತಿ ಚೇನ್ನೋಭಯಸ್ಮಿನ್ನಪ್ಯವಿರೋಧಾತ್ ॥ ಓಂ**

**'ತ್ರಿಪಾದಸ್ಯಾಮೃತಂ ದಿವಿ' (ಛಾಂ 3.12.6) ಇತಿ ಪೂರ್ವೋಪದೇಶಃ । 'ಪರೋದಿವಃ' (ಛಾಂ.3.13.7) ಇತಿ ಪಂಚಮ್ಯಂತಃ ಪಶ್ಚಿಮಃ । ತಸ್ಮಾತ್ ನೈಕಂ ವಸ್ತು ಅತ್ರೋಚ್ಯತೇ ಇತಿ ಚೇನ್ನ । ತ್ರಿಸಪ್ತಲೋಕಾಪೇಕ್ಷಯಾ ಉಭಯಸ್ಮಿನ್ನಪಿ ಅವಿರೋಧಾತ್ ॥ 27 ॥**

## ॥ ಇತಿ ಗಾಯತ್ರ್ಯಧಿಕರಣಮ್ ॥

''ಗಾಯತ್ರಿಯ ಮೂರು ಪಾದಗಳು ದ್ಯುಲೋಕದಲ್ಲಿವೆ'' ಎಂದು ಮೊದಲು ಹೇಳಲಾಗಿದೆ. ಅನಂತರ ''ಜ್ಯೋತಿಯು ದ್ಯುಲೋಕಕ್ಕಿಂತಲೂ ಮೇಲಿದೆ'' ಎಂದು 'ದಿವಃ' ಎಂಬ ಪಂಚಮೀವಿಭಕ್ತ್ಯಂತವಾದ ಪದದಿಂದ ಹೇಳಲಾಗಿದೆ. ಆದ್ದರಿಂದ ಮೊದಲ ಗಾಯತ್ರೀ ಪ್ರಕರಣ ಮತ್ತು ಅನಂತರದ ಜ್ಯೋತಿಃ ಪ್ರಕರಣಗಳಲ್ಲಿ ಹೇಳಿದ ವ್ಯಕ್ತಿ ಒಬ್ಬನೇ ಅಲ್ಲ'' ಹೀಗೆ ಹೇಳಬಾರದು. ಒಂದೇ ವಸ್ತುವು ಮೂರು ಲೋಕಗಳು, ಏಳು ಲೋಕಗಳು ಎಂಬ ವಿಭಿನ್ನ ಕಲ್ಪನೆಗಳಿಂದ ಎರಡು ವಿಧವೂ ಆಗಬಹುದು. ಆದ್ದರಿಂದ ಈ ಎರಡೂ ಹೇಳಿಕೆಗಳಲ್ಲಿ ವಿರೋಧವೇನೂ ಇಲ್ಲ.

**ವಿವರಣೆ : 1.** ಛಾಂದೋಗ್ಯದಲ್ಲಿ ಹೇಳಿದ ಗಾಯತ್ರಿ ಮತ್ತು ಜ್ಯೋತಿ ಎರಡೂ ಒಂದೇ ಆಗಿದೆ ಎನ್ನಲು ಬಾಧಕವನ್ನು ಹೇಳಿ ಇಲ್ಲಿ ಪರಿಹರಿಸಲಾಗಿದೆ.

ಛಾಂದೋಗ್ಯೋಪನಿಷತ್ತಿನ ಗಾಯತ್ರೀ ಪ್ರಕರಣದಲ್ಲಿ ಗಾಯತ್ರಿಯು 'ದಿವಿ - ದ್ಯುಲೋಕದಲ್ಲಿ ಇದೆ' ಎನ್ನಲಾಗಿದೆ. ಮುಂದಿನ ಜ್ಯೋತಿಃ ಪ್ರಕರಣದಲ್ಲಿ ''ಅಥ ಯದತಃ ಪರೋ ದಿವೋ ಜ್ಯೋತಿಃ'' ಎಂದು ಜ್ಯೋತಿಯು ದ್ಯುಲೋಕಕ್ಕಿಂತ ಮೇಲಿನ ಸ್ಥಾನದಲ್ಲಿದೆ ಎನ್ನಲಾಗಿದೆ. ಮೊದಲು 'ದಿವಿ' ಎಂದು ಸಪ್ತಮೀ ವಿಭಕ್ತಿ ಇರುವುದರಿಂದ 'ದ್ಯು ಲೋಕದಲ್ಲಿ' ಎಂಬ ಅರ್ಥವೂ ಅನಂತರ 'ದಿವಃ' ಎಂದು ಪಂಚಮೀ ವಿಭಕ್ತಿ ಇರುವುದರಿಂದ 'ದ್ಯುಲೋಕಕ್ಕಿಂತ ಮೇಲ್ಭಾಗದಲ್ಲಿ' ಎಂಬ ಅರ್ಥವೂ ತಿಳಿಯುತ್ತದೆ. ಒಂದೇ ವಸ್ತು ದ್ಯುಲೋಕದಲ್ಲಿ ಹಾಗೂ ಅದಕ್ಕಿಂತಲೂ ಉಚ್ಚಲೋಕದಲ್ಲಿ ಇರಲಾರದು. ಆದ್ದರಿಂದ ದ್ಯುಲೋಕದಲ್ಲಿರುವ ಗಾಯತ್ರೀ ಬೇರೆ, ಅದಕ್ಕಿಂತಲೂ ಮೇಲಿನ ಲೋಕದಲ್ಲಿರುವ ಜ್ಯೋತಿ ಬೇರೆ. ಹೀಗೆ ಪೂರ್ವಪಕ್ಷ.

**2. ಸಿದ್ಧಾಂತ :** ಲೋಕಗಳನ್ನು ಎರಡು ವಿಧವಾಗಿ ವಿಭಾಗಿಸುವ ಕ್ರಮವಿದೆ. ತ್ರಿಲೋಕ, ಸಪ್ತಲೋಕ ಎಂದು. ಭೂಃ, ಭುವಃ, ಸ್ವಃ ಎಂದು ತ್ರಿಲೋಕ ವಿಭಾಗ. ಹದಿನಾಲ್ಕು ಲೋಕಗಳೂ ಈ ಮೂರರಲ್ಲೇ ಸೇರಬೇಕು. ಆಗ ಭೂಲೋಕವೆಂದರೆ ನಾವು ವಾಸಮಾಡುವ ಲೋಕ. ಇದಕ್ಕಿಂತ ಒಂದು ಲಕ್ಷ ಯೋಜನ ಪರ್ಯಂತ ಅಂತರಿಕ್ಷ ಲೋಕ. ಅದರ ಮೇಲಿನದೆಲ್ಲ ದ್ಯುಲೋಕ(ಸ್ವಃ).

ಲೋಕತ್ರಯವಿವಕ್ಷಾಯಾಂ ಪರತೋ ಲಕ್ಷಯೋಜನಾತ್ ।

ಸರ್ವಂ ದ್ಯೌರಿತಿ ವಿಜ್ಞೇಯಂ ತತಸ್ತೇ ದಿವಿ ಸಂಸ್ಥಿತಾಃ ॥

ಎಂದು ಛಾಂದೋಗ್ಯಭಾಷ್ಯದಲ್ಲಿ ಆಚಾರ್ಯರು ಹೇಳಿದ್ದಾರೆ. ಶ್ವೇತದ್ವೀಪಾದಿ ಮೂರು ವಿಷ್ಣುಧಾಮಗಳು ಒಂದು ಲಕ್ಷಯೋಜನಕ್ಕಿಂತಲೂ (ಅಂತರಿಕ್ಷಕ್ಕಿಂತಲೂ) ಮೇಲ್ಭಾಗದಲ್ಲಿ ಇರುವುದರಿಂದ ಅವೆಲ್ಲವೂ ದ್ಯುಲೋಕದಲ್ಲಿದ್ದಂತೆ.

ಇನ್ನು 'ಭೂಃ, ಭುವಃ, ಸ್ವಃ, ಮಹಃ, ಜನಃ, ತಪಃ, ಸತ್ಯಂ' ಎಂದು ಲೋಕಗಳನ್ನು ಏಳನ್ನಾಗಿ ವಿಭಾಗಿಸಲಾಗುವುದು. ಆಗ 'ದಿವಃ ಪರತ್ವವನ್ನು' ಹೀಗೆ ಹೊಂದಿಸಬೇಕು-

ಪೃಥಿವ್ಯಾಂ ದ್ಯೌಃ ಮಹಾಮೇರುಃ ಆಕಾಶೇ ಸೂರ್ಯಮಂಡಲಮ್ ।

ದಿವೀಂದ್ರಸದನಂ ಚೈವ ತತ್‌ಪರೇ ತು ದಿವಃ ಪರೇ ॥

ಮೇರುಪರ್ವತವು ಪೃಥಿವೀಲೋಕದ ದ್ಯುಲೋಕ. ಅದರ ಮೇಲ್ಭಾಗದಲ್ಲಿ ಅನಂತಾಸನವಿದೆ. ಹೀಗೆ ಅದು 'ದಿವಃ ಪರ'ವಾಗುತ್ತದೆ. ಅಂತರಿಕ್ಷ ಲೋಕದಲ್ಲಿ (ಭುವಃ) ಸೂರ್ಯಮಂಡಲ ದ್ಯುಲೋಕ. ಅದರ ಮೇಲೆ ಶ್ವೇತದ್ವೀಪವಿದೆ. ಹೀಗೆ ಅದು ''ದಿವಃ ಪರ''. ಸ್ವರ್ಗಲೋಕದಲ್ಲಿ (ಸುವಃ) ಇಂದ್ರನ ಅರಮನೆ ದ್ಯುಲೋಕ. ಅದರ ಮೇಲಿರುವ ವೈಕುಂಠಲೋಕ ''ದಿವಃ ಪರ''. ಹೀಗೆ ಮೂರಕ್ಕೂ ದಿವಃ ಪರತ್ವವನ್ನು ಹೊಂದಿಸಬೇಕು.

**3.** ವಸ್ತುತಃ, ಮೇಲಿನ ರೀತಿಯಿಂದ ಹೊಂದಿಸುವಾಗ ಸಪ್ತಲೋಕದ ಅಪೇಕ್ಷೆ ಏನೂ ಇಲ್ಲ. ತ್ರಿಲೋಕಗಳನ್ನು ತೆಗೆದುಕೊಂಡರೂ ಹಿಂದೆ ಹೇಳಿದಂತೆ, ಮೂರು ದ್ಯುಲೋಕಗಳನ್ನು ಇಟ್ಟುಕೊಂಡು ದಿವಃಪರತ್ವವನ್ನು ಹೇಳಬಹುದು. ಆದರೆ ಹೀಗೆ ಸಪ್ತಲೋಕವನ್ನು ಇಟ್ಟುಕೊಂಡಾಗ ವೈಕುಂಠಲೋಕ ರೂಢವಾದ ಮೂರು ದ್ಯುಲೋಕಗಳಿಂದ ಮಾತ್ರವಲ್ಲದೆ ಪ್ರಸಿದ್ಧವಾದ ಸ್ವರ್ಗಲೋಕಕ್ಕಿಂತಲೂ (ದ್ಯು) ಎತ್ತರದ್ದು ಎಂದು ಸಿದ್ಧವಾಗುತ್ತದೆ. ಆದರೆ ತ್ರಿಲೋಕಗಳನ್ನು ಇಟ್ಟುಕೊಂಡಾಗ ವೈಕುಂಠಲೋಕ ದ್ಯುಶಬ್ದವಾಚ್ಯವಾದ ಮೇರು-ಸೂರ್ಯಮಂಡಲ-ಇಂದ್ರಸದನಗಳಿಗಿಂತ ಉಚ್ಚವಾಯಿತೇ ಹೊರತು ಸ್ವರ್ಗಲೋಕಕ್ಕಿಂತ ಉಚ್ಚವಾಗಲಿಲ್ಲ. ಏಕೆಂದರೆ, ಅಂತರಿಕ್ಷದ ಮೇಲಿನ ಲೋಕಗಳೆಲ್ಲವೂ ಸ್ವರ್ಗಲೋಕವಾದುದರಿಂದ ವೈಕುಂಠ 'ದ್ಯುಸ್ಥ'ವೇ ಆಗುತ್ತದೆ. 'ದಿವಃ ಪರ'ವಾಗುವುದಿಲ್ಲ. ಅದಕ್ಕಾಗಿ ಸಪ್ತಲೋಕ ವಿವಕ್ಷೆಯನ್ನು ಮಾಡಲಾಗಿದೆ-

ದ್ಯುತ್ರಿಕೇಭ್ಯಶ್ಚ ಸರ್ವೇಭ್ಯೋ ವೈಕುಂಠಶ್ಚೋಚ್ಚ ಉಚ್ಯತೇ ॥

ಒಟ್ಟಿನ ಭಾವ ಹೀಗೆ - ವ್ಯಕ್ತಿಯೊಬ್ಬ ಮನೆಯ ಜಗಲಿಯಲ್ಲಿ ಕುಳಿತಿದ್ದರೆ ಅವನನ್ನು ಮನೆಯಲ್ಲಿದ್ದಾನೆಂದೂ ಹೇಳಬಹುದು. ಮನೆಯ ಹೊರಗಿದ್ದಾನೆಂದೂ ಹೇಳಬಹುದು. ಜಗಲಿಯನ್ನೂ ಮನೆ ಎಂದು ಪರಿಗಣಿಸಿದರೆ ಮನೆಯಲ್ಲಿದ್ದಾನೆ ಎನ್ನಬಹುದು. ಅದನ್ನು ಮನೆಯಲ್ಲಿ ಸೇರಿಸಿಕೊಳ್ಳದೆ, ಬಾಗಿಲಿನ ಒಳಭಾಗವನ್ನಷ್ಟೇ ಮನೆ ಎಂದು ಪರಿಗಣಿಸಿದಾಗ

ಅವನು ಮನೆಯ ಹೊರಗಿದ್ದಾನೆ ಎಂದೂ ಹೇಳಬಹುದು. ಆದರಂತೆ, ಮಹರಾದಿ ಲೋಕಗಳನ್ನು ಒಳಗೊಂಡಂತೆ ದ್ಯುಲೋಕವನ್ನು ವಿಶಾಲವಾಗಿ ಪರಿಗಣಿಸಿದಾಗ ಧಾಮತ್ರಯಗಳು ದ್ಯುಲೋಕದಲ್ಲೇ ಇವೆ. ದ್ಯುಲೋಕದ ವಿಸ್ತಾರವನ್ನು ಕಡಿಮೆಗೊಳಿಸಿದಾಗ ಧಾಮತ್ರಯಗಳು 'ದಿವಃ ಪರ' ಎನಿಸಬಹುದು.

## ದ್ವೈತದರ್ಶನದಲ್ಲಿ ಸೂತ್ರಗಳ ಅರ್ಥ

**1. ಓಂ ॥ ಛಂದೋಽಭಿಧಾನಾತ್ ನೇತಿ ಚೇತ್ ನ**
**ತಥಾ ಚೇತೋಽರ್ಪಣನಿಗದಾತ್ ತಥಾ ಹಿ ದರ್ಶನಮ್ ॥ ಓಂ**

ಈ ಸೂತ್ರದಲ್ಲಿರುವ 'ಛಂದಃ' ಎಂಬ ಶಬ್ದವನ್ನು ಆವೃತ್ತಿ ಮಾಡಿಕೊಳ್ಳಬೇಕು. 'ಗಾಯತ್ರೀ ವಾ ಇದಂ ಸರ್ವಂ' ಎಂದು ಛಾಂದೋಗ್ಯಶ್ರುತಿಯಲ್ಲಿ ಹೇಳಲ್ಪಟ್ಟ ಗಾಯತ್ರಿಯು ಛಂದಃ= ಛಂದಸ್ಸು. ಛಂದೋಽಭಿಧಾನಾತ್= ಗಾಯತ್ರೀ ಶಬ್ದವು ಛಂದೋವಾಚಕವೆಂದು ಪ್ರಸಿದ್ಧವಾದುದರಿಂದ, ಇತಿ ಚೇನ್ನ= ಹೀಗೆ ಹೇಳುವುದು ಸರಿಯಲ್ಲ. ತಥಾ ಹಿ ದರ್ಶನಮ್='ಗಾಯತಿ ತ್ರಾಯತಿ ಚ' ಎಂದು ಗಾಯತ್ರೀ ಶಬ್ದದ ಅರ್ಥವನ್ನು ತಿಳಿಸುವ, ವಿಷ್ಣುವಿನಲ್ಲೇ ಇರುವ ಧರ್ಮಬೋಧಕವಾದ ಶ್ರುತಿ (ದರ್ಶನಂ) ಇದೆ. ಅಪ್ರಸಿದ್ಧವಾದ ಗಾಯತ್ರೀ ಶಬ್ದದಿಂದೇಕೆ ವಿಷ್ಣುವನ್ನು ತಿಳಿಸಬೇಕು? ಎಂದರೆ, ತಥಾ= ಗಾಯತ್ರೀ ಶಬ್ದಾರ್ಥವಾದ ಗಾನಕರ್ತೃತ್ವ, ತ್ರಾಣಕರ್ತೃತ್ವ ಧರ್ಮಗಳುಳ್ಳವನು ವಿಷ್ಣು ಎಂದು ಚೇತೋಽರ್ಪಣನಿಗದಾತ್, ಚೇತಸಿ= ಮನಸ್ಸಿನಲ್ಲಿ ಅರ್ಪಣಾಯ= ಉಪಾಸನೆ ಮಾಡುವುದಕ್ಕಾಗಿ ನಿಗದಾತ್='ಗಾಯತಿ ತ್ರಾಯತಿ ಚ' ಎಂದು ಹೇಳಿರುವುದರಿಂದ (ಗಾಯತ್ರೀ ಎಂಬ ಶಬ್ದದಿಂದ ವಿಷ್ಣುವನ್ನು ಹೆಸರಿಸಲಾಗಿದೆ.)

('ಗಾಯತ್ರೀ ವಾ ಇದಂ ಸರ್ವಂ' ಇತ್ಯುಕ್ತ ಗಾಯತ್ರೀ ಛಂದಃ ಸ್ಯಾತ್ । ಕುತಃ ? ಗಾಯತ್ರೀ ಪದೇನ ಛಂದಸೋಽಭಿಧಾನಾತ್ ಇತಿ ಚೇತ್ ನ । ಕುತಃ? ತಥಾ ಹಿ ದರ್ಶನಂ। ದರ್ಶನಂ= ಶ್ರುತಿಃ । ಗಾನ ತ್ರಾಣ ಕರ್ತೃತ್ವಾದಿಲಿಂಗಬೋಧನ ಶ್ರುತಿರ್ಹಿ ಯತೋ ಅತಃ । ಅಪ್ರಸಿದ್ಧ ಪದೇನ ಬ್ರಹ್ಮಣೋ ನಿರ್ದೇಶೇ ಕಿಂ ಪ್ರಯೋಜನಂ ? ಅತ ಉಕ್ತಂ- ತಥೇತಿ । ಗಾನಾದಿ ಕರ್ತೃತ್ವ ಗುಣವಿಶಿಷ್ಟತಯಾ ಚೇತಸಿ ಅರ್ಪಣಾಯ= ಉಪಾಸನಾಯ ನಿಗದಾತ್= ಕಥನಾತ್ ।)

**2. ಓಂ ॥ ಭೂತಾದಿ ಪಾದ ವ್ಯಪದೇಶೋಪಪತ್ತೇಶ್ಚೈವಮ್ ॥ ಓಂ**

ಭೂತಾದಿ ಪಾದ ವ್ಯಪದೇಶೋಪಪತ್ತೇಶ್ಚ - ಭೂತಾದಿಪಾದಸ್ಯ= ಸಕಲ ಪ್ರಾಣಿಗಳು ಹಾಗೂ ಅಮೃತಪದವಾಚ್ಯವಾದ ತ್ರಿರೂಪಗಳೂ ಗಾಯತ್ರಿಯ ಅಂಶ ಎಂದು ವ್ಯಪದೇಶೋಪಪತ್ತೇಃ= ''ಪಾದೋಸ್ಯ ಸರ್ವಾ ಭೂತಾನಿ ತ್ರಿಪಾದಸ್ಯಾಮೃತಂ ದಿವಿ'' ಎಂದು ಹೇಳಿರುವುದು ವಿಷ್ಣುವಿನಲ್ಲೇ ಸಮನ್ವಯವಾಗುವುದರಿಂದಲೂ ಏವಮ್= ಗಾಯತ್ರೀ ವಿಷ್ಣುವೆ.

(ಭೂತಂ=ವಿಶ್ವಂ ಆದಿಃ ಯಸ್ಯ ಅಮೃತಾಖ್ಯರೂಪಸ್ಯ ತತ್ ಭೂತಾದಿ। ಭೂತಾದಿ ಚಾಸೌ ಪಾದಶ್ಚ । ತಸ್ಯ ವ್ಯಪದೇಶಃ । ಏವಂ='ಪಾದೋಸ್ಯ....' ಇತ್ಯೇವಂ ಭೂತಾಮೃತರೂಪಪಾದ ವ್ಯಪದೇಶೋಪಪತ್ತೇಶ್ಚ ಏವಂ=ಗಾಯತ್ರೀ ಬ್ರಹ್ಮೈವ । ಏವಂ ಇತ್ಯಸ್ಯಾವೃತ್ತಿಃ।)

**3. ಓಂ॥ ಉಪದೇಶಭೇದಾತ್ ನೇತಿ ಚೇನ್ನ ಉಭಯಸ್ಮಿನ್ನಪಿ ಅವಿರೋಧಾತ್ ॥ ಓಂ**

ಉಪದೇಶಭೇದಾತ್=ಗಾಯತ್ರಿಯನ್ನು 'ತ್ರಿಪಾದಸ್ಯಾಮೃತಂ ದಿವಿ' ಎಂದೂ, ಜ್ಯೋತಿಯನ್ನು ''ಪರೋ ದಿವಃ' ಎಂದೂ ಹೇಳಿರುವುದರಿಂದ ನೇತಿಚೇತ್=ಛಾಂದೋಗ್ಯದಲ್ಲಿ ಹೇಳಿದ ಗಾಯತ್ರೀ ಮತ್ತು ಜ್ಯೋತಿ ಎರಡೂ ಒಂದೇ ಆಗಲಾರದು ಎಂದರೆ, ನ=ಅದು ಸರಿಯಲ್ಲ, ಉಭಯಸ್ಮಿನ್ನಪಿ=ಎರಡೂ ರೀತಿಯ ಹೇಳಿಕೆಯಲ್ಲಿ ಅವಿರೋಧಾತ್=ವಿರೋಧವಿಲ್ಲವಾದುದರಿಂದ (ಗಾಯತ್ರೀ ಮತ್ತು ಜ್ಯೋತಿ ಒಬ್ಬನೇ)

(ಗಾಯತ್ರೀ- ಜ್ಯೋತಿಷೋಃ ದ್ಯುಸ್ಥತ್ವ- ದಿವಃ ಪರತ್ವರೂಪ- ಉಪದೇಶ ಭೇದಾತ್ ತದ್ವಯಂ ಬ್ರಹ್ಮಾಖ್ಯಂ ಏಕಂ ವಸ್ತು ಇತ್ಯುಕ್ತಂ ನ ಯುಕ್ತಂ ಇತಿಚೇತ್ ನ । ಉಭಯಸ್ಮಿನ್ನಪಿ ಉಪದೇಶೇ ವಿರೋಧಾಭಾವಾತ್)

**ಶಾಂಕರಭಾಷ್ಯದಲ್ಲಿ ಹೇಳಿದ ಅರ್ಥ**

ಶಾಂಕರಭಾಷ್ಯದಲ್ಲಿ ಜ್ಯೋತಿರಧಿಕರಣ ಪ್ರತ್ಯೇಕವಲ್ಲ. ಒಟ್ಟು ನಾಲ್ಕು ಸೂತ್ರಗಳು ಸೇರಿ ಒಂದು ಅಧಿಕರಣ.

**1. ಜ್ಯೋತಿಃ ಚರಣಾಭಿಧಾನಾತ್** – 'ಯದತಃ ಪರೋ ದಿವೋ ಜ್ಯೋತಿಃ' ಎಂಬ ಛಾಂದೋಗ್ಯಶ್ರುತಿಯಲ್ಲಿ ಹೇಳಲ್ಪಟ್ಟ ಜ್ಯೋತಿ ಅಗ್ನ್ಯಾದಿ ತೇಜಸ್ಸುಗಳಲ್ಲ. ಬ್ರಹ್ಮನೇ. ಏಕೆಂದರೆ, ಚರಣಾಭಿಧಾನಾತ್=''ಪಾದೋಸ್ಯ ವಿಶ್ವಾ ಭೂತಾನಿ ತ್ರಿಪಾದಸ್ಯಾಮೃತಂದಿವಿ॥'' ಎಂದು ಆ ಜ್ಯೋತಿಗೆ ನಾಲ್ಕು ಪಾದಗಳನ್ನು (ಅಂಶಗಳನ್ನು) ಹೇಳಲಾಗಿದೆ. ಅಗ್ನ್ಯಾದಿಗಳಿಗೆ ಇಂತಹ ಅಂಶಗಳಿಲ್ಲ. ನಾಲ್ಕು ಅಂಶಗಳಲ್ಲಿ ದ್ಯುಲೋಕದಲ್ಲಿರುವ ಅಂಶಗಳನ್ನು ಇಲ್ಲಿ ಜ್ಯೋತಿಃ ಶಬ್ದದಿಂದ ಹೇಳಲಾಗಿದೆ. ಆದ್ದರಿಂದ ಜ್ಯೋತಿ ಬ್ರಹ್ಮನೇ.

**2. ಛಂದೋ ऽಭಿಧಾನಾತ್ ನೇತಿ ಚೇನ್ನ ತಥಾ ಚೇತೋऽರ್ಪಣನಿಗದಾತ್ ತಥಾ ಹಿ ದರ್ಶನಂ** – ಜ್ಯೋತಿರ್ವಾಕ್ಯಕ್ಕಿಂತ ಪೂರ್ವದಲ್ಲಿ 'ತ್ರಿಪಾದಸ್ಯಾಮೃತಂ ದಿವಿ' ಎಂದು ಬ್ರಹ್ಮನ ಪ್ರಸ್ತಾವ ಇರುವುದರಿಂದ ಜ್ಯೋತಿ ಬ್ರಹ್ಮ ಎನ್ನುವುದು ಸರಿಯಲ್ಲ. ಪೂರ್ವವಾಕ್ಯದಲ್ಲಿ ನಾಲ್ಕು ಪಾದಗಳುಳ್ಳದ್ದಾಗಿ ಪ್ರಸ್ತುತವಾದುದು ಗಾಯತ್ರೀ ಛಂದಸ್ಸು. ಅದಕ್ಕೆ ಷಡ್ವಿಧತ್ವವನ್ನು ಹೇಳಿ ''ಸೈಷಾ ಚತುಷ್ಪದಾ, ಷಡ್ವಿಧಾ ಗಾಯತ್ರೀ' ಎಂದು ನಾಲ್ಕು ಪಾದಗಳನ್ನು ವಿಧಾನಮಾಡಿ ಅದಕ್ಕೆ ಸಂವಾದವಾಗಿ ಪುರುಷಸೂಕ್ತವನ್ನು ನೀಡಲಾಗಿದೆ. ಆದ್ದರಿಂದ ಹಿಂದೆ ಪ್ರಸ್ತುತವಾದ

ಗಾಯತ್ರಿಯೇ ''ಯದತಃ ದಿವಃ ಪರೋ ಜ್ಯೋತಿಃ'' ಎನ್ನುವ ವಾಕ್ಯದಲ್ಲೂ ಪ್ರತಿಪಾದ್ಯ ವಾಗಿದೆ. ಹೀಗೆ ಜ್ಯೋತಿ ಬ್ರಹ್ಮನಲ್ಲ. ಇದು ಸೂತ್ರದಲ್ಲಿರುವ 'ಛಂದೋಽಭಿಧಾನಾತ್ ನೇತಿ ಚೇತ್' ಎಂಬ ಪೂರ್ವಪಕ್ಷಾಂಶ. ಅದಕ್ಕೆ ಉತ್ತರ - 'ತಥಾ ಚೇತೋಽರ್ಪಣ ನಿಗದಾತ್' ಎಂದು. ಬ್ರಹ್ಮನ ಜ್ಞಾನಕ್ಕೋಸ್ಕರ ಗಾಯತ್ರಿಯೇ ಬ್ರಹ್ಮ ಎಂದು ಹೇಳಲಾಗಿದೆ.

ಬ್ರಹ್ಮ ಪ್ರಪಂಚಕ್ಕೆ ಕಾರಣ. ಅದು ಅವ್ಯಕ್ತ. ಆದರೆ ಅದು ಕಾರ್ಯವಾದ ಪ್ರಪಂಚರೂಪದಿಂದ ವ್ಯಕ್ತವಾಗುತ್ತದೆ. ಆದ್ದರಿಂದ ಸಕಲಪ್ರಪಂಚವೂ ಬ್ರಹ್ಮ ಕಾರ್ಯವಾದುದರಿಂದ 'ಸರ್ವಂ ಖಲ್ವಿದಂ ಬ್ರಹ್ಮ' ಎಂದಂತೆ 'ಯದ್ವೈ ತದ್ಬ್ರಹ್ಮ' ಎಂದು ಗಾಯತ್ರಿಯನ್ನೂ ಬ್ರಹ್ಮ ಎನ್ನಲಾಗಿದೆ. ಇಲ್ಲವಾದರೆ 'ಗಾಯತ್ರೀ ವಾ ಇದಂ ಸರ್ವಂ' ಇದೆಲ್ಲವೂ ಗಾಯತ್ರೀ ಎನ್ನುವುದು ಹೇಗೆ? ಆದ್ದರಿಂದ ಗಾಯತ್ರೀ ಎಂದರೂ ಬ್ರಹ್ಮನೇ. ಹೀಗೆ ಛಂದಸ್ಸುಗಳಿಗೆ ಬ್ರಹ್ಮಾಭೇದವನ್ನು ಹೇಳುವುದು ಇತರ ಕಡೆಗಳಲ್ಲೂ ಕಂಡಿದೆ. ತಥಾಹಿ ದರ್ಶನಂ- 'ಸೈಷಾ ವಿರಾಡನ್ನಾದೀ' (ಛಾಂ.4.3.8). ಹತ್ತು ಅಕ್ಷರದ ಛಂದಸ್ಸು ವಿರಾಟ್. ಅದನ್ನೇ ಬ್ರಹ್ಮ ಎಂದು ಅಲ್ಲಿ ಹೇಳಲಾಗಿದೆ.

**3. ಭೂತಾದಿಪಾದವ್ಯಪದೇಶೋಪಪತ್ತೇಶ್ಚೈವಮ್** - ಜ್ಯೋತಿರ್ವಾಕ್ಯಕ್ಕಿಂತ ಪೂರ್ವ ದಲ್ಲಿ ಬ್ರಹ್ಮನೇ ಪ್ರಸ್ತುತ, ಗಾಯತ್ರೀ ಛಂದಸ್ಸಲ್ಲ ಎನ್ನಲು ಇದೂ ಒಂದು ಕಾರಣ- ಗಾಯತ್ರಿಗೆ ಭೂತ, ಪೃಥಿವೀ, ಶರೀರ, ಹೃದಯ ಹೀಗೆ ನಾಲ್ಕು ಪಾದಗಳನ್ನು ಹೇಳಲಾಗಿದೆ. ಅದಕ್ಕೆ ಆಧಾರವಾಗಿ ಪುರುಷಸೂಕ್ತವನ್ನೂ ಉದಾಹರಿಸಲಾಗಿದೆ. ಪುರುಷಸೂಕ್ತ ಬ್ರಹ್ಮಪರ. ಆದ್ದರಿಂದ ಗಾಯತ್ರಿಯೂ ಬ್ರಹ್ಮ.

**4. ಉಪದೇಶಭೇದಾತ್ ನೇತಿಚೇತ್ ನೋಭಯಸ್ಮಿನ್ನಪ್ಯವಿರೋಧಾತ್** - ಗಾಯತ್ರಿ ಯನ್ನು 'ಅಮೃತಂ ದಿವಿ' ಎಂದೂ, ಜ್ಯೋತಿಯನ್ನು 'ಪರೋ ದಿವಃ' ಎಂದೂ ಹೇಳಲಾಗಿದೆ. ಹೀಗೆ ವಿಭಿನ್ನ ಸ್ಥಾನಗತವನ್ನಾಗಿ ಹೇಳಿರುವುದರಿಂದ ಗಾಯತ್ರೀ ಮತ್ತು ಜ್ಯೋತಿ ಎರಡೂ ಒಂದೇ ಎನ್ನುವುದು ಹೇಗೆ? ಎಂಬ ಆಶಂಕೆ ಬೇಡ. ಎರಡು ರೀತಿಯಾಗಿ ಹೇಳಿದರೂ ವಿರೋಧವೇನಿಲ್ಲ. ಮರದ ಮೇಲೆ ಹಾರುತ್ತಿರುವ ಗಿಡುಗವನ್ನು ಮರದ ತುದಿಯಲ್ಲಿದೆ ಎಂದೂ, ಮರಕ್ಕಿಂತಲೂ ಮೇಲಿದೆ ಎಂದೂ ಎರಡೂ ರೀತಿಯಾಗಿ ಹೇಳುವುದಿದೆ.

## ರಾಮಾನುಜ ಭಾಷ್ಯದಲ್ಲಿ ವಿಶೇಷ

ರಾಮಾನುಜ ಭಾಷ್ಯದಲ್ಲಿ ಪ್ರಾಯಃ ಇದೇ ರೀತಿಯ ಅರ್ಥವನ್ನೇ ಹೇಳಲಾಗಿದೆ. ಆದರೆ, 'ಚೇತೋಽರ್ಪಣನಿಗದಾತ್' ಎಂದು ದ್ವೈತಾದ್ವೈತಸೂತ್ರಪಾಠವಾದರೆ ರಾಮಾನುಜ ಭಾಷ್ಯದಲ್ಲಿ 'ಚೇತೋರ್ಪಣ ನಿಗಮಾತ್' ಎಂದು ಪಾಠ. 'ಚೇತೋರ್ಪಣ' ಎಂದರೆ ಅನುಸಂಧಾನ - ತಿಳುವಳಿಕೆ, ನಿಗಮ ಎಂದರೆ ಉಪದೇಶ. ಬ್ರಹ್ಮನಿಗೆ ನಾಲ್ಕು

ಪಾದಗಳಿವೆ. ಅದರಂತೆ ವೇದದಲ್ಲಿ ಆರು ಅಕ್ಷರಗಳುಳ್ಳ ನಾಲ್ಕು ಪಾದದ ಗಾಯತ್ರೀ ಋಕ್ ಇದೆ. ಹೀಗೆ ಬ್ರಹ್ಮ ಮತ್ತು ಗಾಯತ್ರೀ ಋಕ್ಕಿಗೆ ಸಾಮ್ಯವನ್ನು ತಿಳಿಯುವುದಕ್ಕಾಗಿಯೇ ಬ್ರಹ್ಮನನ್ನು ಗಾಯತ್ರೀ ಎನ್ನಲಾಗಿದೆ. ಇದು ರಾಮಾನುಜ ಭಾಷ್ಯದಲ್ಲಿ ಹೇಳಲಾದ ವಿಶೇಷ.

## ಚಂದ್ರಿಕಾದಲ್ಲಿ ಮಾಡಿರುವ ವಿಮರ್ಶೆ

ಅ) ಜ್ಯೋತಿಃ ಸೂತ್ರದಲ್ಲಿ 'ಚರಣಾಭಿಧಾನಾತ್' ಎಂದರೆ 'ವಿಚರಣ- ದೂರ ಚಲಿಸು' ಎಂಬ ಅರ್ಥವನ್ನು ದ್ವೈತಭಾಷ್ಯದಲ್ಲಿ ಮಾಡಲಾಗಿದೆ. ಆದರೆ ಇತರ ಎರಡೂ ಭಾಷ್ಯಗಳಲ್ಲಿ 'ಚರಣ' ಎಂದರೆ ಪಾದ. ಈ ಅರ್ಥವು ಸೂತ್ರಕಾರರಿಗೆ ಅಭಿಮತವಾಗಿದ್ದಿದ್ದರೆ ''ಸೈಷಾ ಚತುಷ್ಪದಾ'' ಎಂದು ಶ್ರುತಿಯಲ್ಲಿ ಪಾದಶಬ್ದವಿರುವುದರಿಂದ ''ಪಾದಾಭಿಧಾನಾತ್'' ಎಂದೇ ಸೂತ್ರವಿರಬೇಕಿತ್ತು. ಅದರ ಬದಲು 'ಚರಣ' ಶಬ್ದದ ಬಳಕೆ ಅನುಚಿತ.

ಆ) ಇದೇ ಅರ್ಥವನ್ನು ''ಭೂತಾದಿ ಪಾದ ವ್ಯಪದೇಶ ಉಪಪತ್ತೇಃ'' ಎಂಬ ಸೂತ್ರಕ್ಕೂ ಮಾಡಿರುವುದರಿಂದ ಪ್ರಥಮ ಸೂತ್ರದಲ್ಲಿ ಹೇಳಿದ ಚರಣಾಭಿಧಾನದೊಂದಿಗೆ ಪೌನರುಕ್ತ್ಯ ದೋಷವೂ ಆ ಸೂತ್ರಕ್ಕೆ ಇದೆ.

ಪೌನರುಕ್ತ್ಯಂ ಪರಮತೇ ಜ್ಯೋತಿರ್ಭೂತಾದಿಸೂತ್ರಯೋಃ ।
ಪಾದೋಪದೇಶಾವನ್ಯಾ ಹಿ ಸೈವಾಸ್ತಿ ಚರಣಾಭಿಧಾ ॥ 27 ॥

॥ ಇಲ್ಲಿಗೆ ಗಾಯತ್ರ್ಯಧಿಕರಣ ಮುಗಿಯಿತು ॥

# ಪಾದಾಂತ್ಯ ಪ್ರಾಣಾಧಿಕರಣ - 12

**ಪ್ರಾಣೋ ವಿಷ್ಣುರಿತ್ಯುಕ್ತಮ್ । ತತ್ರ-**

**ತಾ ವಾ ಏತಾಃ ಶೀರ್ಷನ್ ಶ್ರಿಯಃ ಶ್ರಿತಾಃ**

**ಚಕ್ಷುಃ ಶ್ರೋತ್ರಂ ಮನೋ ವಾಕ್ ಪ್ರಾಣಃ । (ಐ.ಆ.2.1.4)**

**ಇತ್ಯತ್ರ ಪ್ರಾಣಸ್ಯ ವಿಷ್ಣುತ್ವಂ ನ ವಿದ್ಯತೇ । ಇಂದ್ರಿಯೈಃ ಸಹ ಅಭಿಧಾನಾತ್ ಇತಿ । ಅತ ಆಹ-**

**ಓಂ ॥ ಪ್ರಾಣಸ್ತಥಾ ಅನುಗಮಾತ್ ॥ ಓಂ**

**'ತಂ ದೇವಾಃ ಪ್ರಾಣಯಂತ' (ಐ.ಆ.2-1.15) 'ಸ ಏಷೋಽಸುಃ ಸ ಏಷ ಪ್ರಾಣಃ' (ಐ.ಆ.2-1.8) 'ಪ್ರಾಣ ಋಚ ಇತ್ಯೇವ ವಿದ್ಯಾತ್' (ಐ.ಆ.2.2.2)**

**'ತದಯಂ ಪ್ರಾಣೋಽಧಿತಿಷ್ಠತಿ' (ಐ.ಆ.2.3.8)**

**ಇತ್ಯಾದ್ಯನುಗಮಾತ್ । ಅತ್ರಾಪಿ ಪ್ರಾಣೋ ವಿಷ್ಣುರೇವ ।**

**ವಿಷ್ಣುಮೇವಾನಯನ್ ದೇವಾ ವಿಷ್ಣುಂ ಭೂತಿಮುಪಾಸತೇ ।**

**ಸ ಏವ ಸರ್ವವೇದೋಕ್ತಃ ತದ್ರಥೋ ದೇಹ ಉಚ್ಯತೇ ॥**

**ಇತಿ ಸ್ಕಾಂದೇ ॥**

**ಬ್ರಹ್ಮಶಬ್ದಾನುಗಮಾಚ್ಚ । ॥ 28 ॥**

ಹಿಂದಿನ ಪ್ರಾಣಾಧಿಕರಣದಲ್ಲಿ (ಸೂತ್ರ 23) ಪ್ರಾಣ ಶಬ್ದವಾಚ್ಯನಾದವನು ವಿಷ್ಣು ಎನ್ನಲಾಯಿತು. ಆದರೆ 'ತದ್ವೈ ತ್ವಂ ಪ್ರಾಣೋ ಅಭವಃ' ಎಂಬ ಹಿಂದಿನ ತೈತ್ತಿರೀಯ ಶ್ರುತಿಯಲ್ಲಿ ಹೇಳಲ್ಪಟ್ಟ ಪ್ರಾಣನು ವಿಷ್ಣು ಎಂದು ಹೇಳಲಾಗದು. ಏಕೆಂದರೆ, ''ಕಣ್ಣು, ಕಿವಿ, ಮನಸ್ಸು, ವಾಕ್, ಪ್ರಾಣ ಈ ಎಲ್ಲವು ತಲೆಯನ್ನು ಆಶ್ರಯಿಸಿಕೊಂಡಿವೆ'' ಎನ್ನುವ ಈ ಐತರೇಯ ಶ್ರುತಿಯಲ್ಲಿ, ಇಂದ್ರಿಯಗಳೊಂದಿಗೆ ಉಲ್ಲೇಖಗೊಂಡಿರುವುದರಿಂದ ಪ್ರಾಣ ವಿಷ್ಣುವಲ್ಲ. ಆದ್ದರಿಂದ ತೈತ್ತಿರೀಯದಲ್ಲಿ ಉಲ್ಲೇಖಿಸಲ್ಪಟ್ಟ ಪ್ರಾಣನೂ ವಿಷ್ಣುವಲ್ಲ. ಅದಕ್ಕಾಗಿ ಸೂತ್ರಕಾರರು ಹೇಳಿದ್ದಾರೆ- 'ಪ್ರಾಣಃ ತಥಾನುಗಮಾತ್' ಎಂದು.

''ಆ ನಾರಾಯಣನನ್ನು ಮತ್ತು ವಾಯುದೇವನನ್ನು ದೇವತೆಗಳು ಉಪದೇಶದ ಮೂಲಕ ಶಿಷ್ಯಪ್ರಶಿಷ್ಯರಿಗೆ ತಲುಪಿಸಿದರು'' ''ದುಷ್ಟಸಂಹಾರಕನಾದುದರಿಂದ ಪರಮಾತ್ಮನು 'ಅಸು' ಎಂದೂ ಉತ್ಕೃಷ್ಟಾನಂದರೂಪನಾದುದರಿಂದ ಪ್ರಾಣ ಎಂದೂ ಕರೆಸಿಕೊಳ್ಳುತ್ತಾನೆ'' ''ವೇದಮಂತ್ರಗಳೆಲ್ಲವೂ ಪ್ರಾಣನನ್ನೇ ಪ್ರತಿಪಾದಿಸುತ್ತವೆ'' ''ದೇಹಾಖ್ಯರಥದಲ್ಲಿ ಪ್ರಾಣನು ಕುಳಿತಿದ್ದಾನೆ'' ಹೀಗೆ ಪರಮಾತ್ಮಪರವಾದ ಅನೇಕ ಧರ್ಮಗಳನ್ನು ಹೇಳಿರುವುದರಿಂದ ಐತರೇಯಶ್ರುತಿಯಲ್ಲಿ ಪ್ರಾಣನೆಂದರೆ ವಿಷ್ಣು. ಆದ್ದರಿಂದ ತೈತ್ತಿರೀಯ ಶ್ರುತಿಯಲ್ಲೂ ವಿಷ್ಣುವೇ ಪ್ರಾಣ. ಈ ಎಲ್ಲ ಧರ್ಮಗಳೂ ವಿಷ್ಣುವಿನವು ಎಂದು ಸ್ಕಾಂದಪುರಾಣ ಹೇಳುತ್ತದೆ- ''ದೇವತೆಗಳು ವಿಷ್ಣುವನ್ನೇ ಶಿಷ್ಯಾದಿಗಳಿಗೆ ತಲುಪಿಸಿದರು. ಅವನನ್ನು ಜ್ಞಾನಾದಿ ಐಶ್ವರ್ಯಪ್ರದನಾದುದರಿಂದ 'ಭೂತಿ' ಎಂದು ಆರಾಧಿಸಿದರು. ಅವನೇ ಸರ್ವವೇದ ಪ್ರತಿಪಾದ್ಯ. ಈ ದೇಹ ಅವನದೇ ರಥ''. ಅಲ್ಲದೆ, ಈ ಪ್ರಾಣನಲ್ಲಿ ಅನೇಕ ಕಡೆ ಬ್ರಹ್ಮಶಬ್ದವನ್ನು ಪ್ರಯೋಗಿಸಲಾಗಿದೆ. ಆದ್ದರಿಂದ ಬ್ರಹ್ಮನೇ ಪ್ರಾಣ.

**ವಿವರಣೆ :** 1. ಹಿಂದಿನ ಪ್ರಾಣಾಧಿಕರಣದಲ್ಲಿ ಪ್ರಾಣಶಬ್ದವನ್ನು ಸಮನ್ವಯ ಮಾಡಲಾಗಿದೆ. ಆದರೆ ಹಿಂದೆ ತೈತ್ತಿರೀಯಶ್ರುತಿಯನ್ನು ಉದಾಹರಿಸಿ ಅಲ್ಲಿರುವ ಪ್ರಾಣಶಬ್ದವನ್ನು ವಿಷ್ಣುವಿನಲ್ಲಿ ಸಮನ್ವಯ ಮಾಡಲಾಯಿತು. ಅಲ್ಲಿ ಪ್ರಾಣಶಬ್ದ ವಾಯುವಾಚಕ ಎಂಬ ಪೂರ್ವಪಕ್ಷಕ್ಕೆ ಆ ಶಬ್ದ ವಾಯುವಿನಲ್ಲಿ ಪ್ರಸಿದ್ಧವಾಗಿದೆ ಎಂದಿಷ್ಟೇ ಯುಕ್ತಿ. ಆದರೆ ಪ್ರಕೃತ ಐತರೇಯ ಶ್ರುತಿಯಲ್ಲಿ ಪ್ರಾಣಶಬ್ದ ವಾಯುವಾಚಕ ಎನ್ನಲು

''ಇಂದ್ರಿಯವಾಚಕ ಶಬ್ದಗಳೊಂದಿಗೆ ಹೇಳಿರುವುದು'' ಎಂಬ ಒಂದು ವಿಶೇಷ ಯುಕ್ತಿ ಇದೆ. ಈ ಪ್ರಬಲ ಯುಕ್ತಿಯಿಂದ ಪ್ರಾಣಶಬ್ದ ವಾಯುವಾಚಕವೆಂದಾದರೆ ತೈತ್ತಿರೀಯ ಶ್ರುತಿಯಲ್ಲೂ ವಾಯುವಾಚಕ ಏಕಾಗಬಾರದು? ಎಂಬ ಪ್ರಶ್ನೆ ಬರುತ್ತದೆ. ಅದಕ್ಕಾಗಿ ಮತ್ತೆ ಪ್ರಾಣಶಬ್ದವನ್ನು ಸಮನ್ವಯ ಮಾಡಬೇಕಾಯಿತು.

2. ಈ ಅಧಿಕರಣದ ಪೂರ್ವಪಕ್ಷ ಯುಕ್ತಿಯೂ ಲಿಂಗ-ಇಂದ್ರಿಯಗಣಪಠಿತತ್ವ. ಸಿದ್ಧಾಂತಯುಕ್ತಿಯೂ ಲಿಂಗ-ಸಕಲವೇದ ಪ್ರತಿಪಾದ್ಯತ್ವ. ಆದರೆ ಸಿದ್ಧಾಂತದಲ್ಲಿ ಅನೇಕ ಲಿಂಗಗಳಿವೆ. ಪೂರ್ವಪಕ್ಷಕ್ಕೆ ಒಂದೇ ಲಿಂಗ. ಆದ್ದರಿಂದ ಸಿದ್ಧಾಂತ ಲಿಂಗಗಳಿಗೆ ಬಹುತ್ವ ನಿಮಿತ್ತ ಪ್ರಾಬಲ್ಯವಿದೆ.

ದ್ವಿವಿಧಂ ಬಲವತ್ತ್ವಂ ಚ ಬಹುತ್ವಾಚ್ಚ ಸ್ವಭಾವತಃ।

ಎಂದಿರುವಂತೆ ಬಹುತ್ವವೂ ಒಂದು ಪ್ರಾಬಲ್ಯ ಕಾರಣ.

ಆದರೆ, ಪೂರ್ವಪಕ್ಷ ಲಿಂಗ ಒಂದೇ ಆದರೂ ನಿರವಕಾಶ-ಇಂದ್ರಿಯ ವಾಚಕ ಶಬ್ದಗಳೊಂದಿಗೆ ಪ್ರಾಣಶಬ್ದವನ್ನು ಐತರೇಯದಲ್ಲಿ ಹೇಳಲಾಗಿದೆ. ವಾಯುದೇವ ಇಂದ್ರಿಯಾಧಿಪತಿಯಾದುದರಿಂದ ಪ್ರಾಣಶಬ್ದದಿಂದ ಅವನೇ ವಾಚ್ಯನಾಗುವುದು ಯುಕ್ತವಾಗುತ್ತದೆ. ಪರಮಾತ್ಮ ಸರ್ವೋತ್ತಮನಾದುದರಿಂದ ಅಧಮರಾದ ಇಂದ್ರಿಯಾಭಿಮಾನಿ ದೇವತೆಗಳ ಸಾಲಿನಲ್ಲಿ ಅವನನ್ನು ಸೇರಿಸಲಾಗದು. ಹೀಗೆ ನಿರವಕಾಶವಾದ ಯುಕ್ತಿ ಪೂರ್ವಪಕ್ಷಕ್ಕೆ ಆಧಾರವಾಗಿದೆ. ಬಹುತ್ವಕ್ಕಿಂತಲೂ ನಿರವಕಾಶತ್ವ ಪ್ರಬಲ-

ತಯೋಃ ಸ್ವಭಾವೋ ಬಲವಾನ್ ಉಪಜೀವ್ಯಾದಿಕಶ್ಚ ಸಃ।

ಆದ್ದರಿಂದ ಪ್ರಾಣ ವಿಷ್ಣು ಎಂದು ಸಿದ್ಧಾಂತ ಮಾಡುವುದು ಹೇಗೆ?

ಈ ಆಕ್ಷೇಪ ಪರಿಹಾರಕ್ಕಾಗಿ ಆಚಾರ್ಯರು ಸ್ಕಾಂದಪುರಾಣವನ್ನು ಉದಾಹರಿಸಿದ್ದಾರೆ. ಅಲ್ಲಿ ಸಿದ್ಧಾಂತ ಪಕ್ಷದಲ್ಲಿ ಹೇಳಲಾದ ನಾಲ್ಕು ಯುಕ್ತಿಗಳೂ ವಿಷ್ಣುವಿನ ಅಸಾಧಾರಣಧರ್ಮಗಳು ಎಂದು ಹೇಳಲಾದೆ. ಹೀಗೆ, ಸಿದ್ಧಾಂತಯುಕ್ತಿಗಳೂ ನಿರವಕಾಶಗಳು. ಇದರಿಂದ ಆ ಯುಕ್ತಿಗಳಿಗೆ ನಿರವಕಾಶತ್ವ, ಬಹುತ್ವ ಎರಡೂ ರೀತಿಯಿಂದ ಪ್ರಾಬಲ್ಯ ಬಂತು. ಅಷ್ಟೇ ಅಲ್ಲ, ಪೂರ್ವಪಕ್ಷಯುಕ್ತಿ ಸಾವಕಾಶ, ಇಂದ್ರಿಯಾಭಿಮಾನಿ ದೇವತೆಗಳಂತೆ ಅವರ ಅಂತರ್ಯಾಮಿಯಾದ ಪರಮಾತ್ಮನೂ ಇಂದ್ರಿಯವಾಚಕ ಶಬ್ದಗಳಿಂದ ಪ್ರಸ್ತುತನಾದುದರಿಂದ ಅವನೂ ಇಂದ್ರಿಯಗಣದಲ್ಲಿ ಪಠಿತನಾಗಬಹುದು. ಹೀಗೆ ಪೂರ್ವಪಕ್ಷ ಯುಕ್ತಿ ಒಂದು ಮತ್ತು ಸಾವಕಾಶ. ಸಿದ್ಧಾಂತಯುಕ್ತಿ ಅನೇಕ ಮತ್ತು ನಿರವಕಾಶ. ಆದ್ದರಿಂದ ಪ್ರಾಣಶಬ್ದವಾಚ್ಯ ವಿಷ್ಣು ಎಂಬ ಸಿದ್ಧಾಂತ ಯುಕ್ತವಾಗಿದೆ.

**3. ಶ್ರುತ್ಯರ್ಥ :** ಅ. 'ಶೀರ್ಷನ್ ಶ್ರಿತಾಃ' ಎಂಬಲ್ಲಿ ಶೀರ್ಷನ್ ಶಬ್ದ - ಸಪ್ತಮ್ಯಂತ-ಶೀರ್ಷ್ಣಿ- ತಲೆಯಲ್ಲಿ ಎಂದರ್ಥ. ಈ ಶ್ರುತಿ ಚತುರ್ಮುಖಬ್ರಹ್ಮನ ತಲೆಗೆ

'ಶಿರಃ' ಎಂಬ ಹೆಸರು ಹೇಗೆ ಬಂತು? ಎಂಬುದನ್ನು ವಿವರಿಸುತ್ತಿದೆ. ಚಕ್ಷುರಾದಿ ಇಂದ್ರಿಯಗಳಿಗೆ ಆಶ್ರಯವಾದುದರಿಂದ ಅದಕ್ಕೆ 'ಶಿರಃ' ಎಂದು ಹೆಸರು. (ಚಕ್ಷುರಾದಿಭಿಃ ಶ್ರಿತತ್ವಾತ್ ಶಿರಃ)

ಆ. 'ತಂ ದೇವಾಃ ಪ್ರಾಣಯಂತ' ಎಂಬ ಶ್ರುತಿಯಲ್ಲಿ ಪ್ರ+ಅನಯಂತ=ಕೊಂಡು ಹೋದರು ಎಂದರ್ಥ. ವಾಯುದೇವರಿಂದ ಬ್ರಹ್ಮೋಪದೇಶವನ್ನು ಹೊಂದಿದ ದೇವತೆಗಳು ಶಿಷ್ಯ-ಪ್ರಶಿಷ್ಯರಿಗೆ ಉಪದೇಶಿಸುವ ಮೂಲಕ ಆ ಪರಮಾತ್ಮನನ್ನು ಅವರಲ್ಲೂ ಒಯ್ದು ಮುಟ್ಟಿಸಿದರು ಎಂದರ್ಥ.

ತಸ್ಮಾತ್ ಶ್ರುತ್ವಾ ಪರಂ ಬ್ರಹ್ಮ ದೇವಾ ನಾರಾಯಣಾಭಿಧಮ್ ।
ಶಿಷ್ಯ-ಪ್ರಶಿಷ್ಯಾದಿಷು ಚ ತೇ ಅನಯನ್ ವಾಯುನೋದಿತಮ್ ।

(ಐತರೇಯ ಸಂಹಿತೆ)

ಇ. 'ಸ ಏಷೋಽಸುಃ ಸ ಏಷ ಪ್ರಾಣಃ' ಎಂಬ ಶ್ರುತಿಯಲ್ಲಿ ಅಸು ಎಂದರೆ ಪರಮಾತ್ಮ. ಅಸನಾತ್=ಸಂಹಾರಶೀಲನಾದುದರಿಂದ, ಅಸುಃ।

ಅಸನಾದ್ ಭಗವಾನ್ ಸೋಽಸುಃ ಸರ್ವಸ್ಯಾಪಿ ಜನಾರ್ದನಃ ।
ಪ್ರಕೃಷ್ಟಾನಂದರೂಪತ್ವಾತ್ ಪ್ರಾಣ ಇತ್ಯಭಿಧೀಯತೇ ॥

ಈ ಶ್ರುತಿಯಲ್ಲಿ ಮುಂದೆ 'ತಂ ಭೂತಿರಿತಿ ದೇವಾ ಉಪಾಸಾಂಚಕ್ರಿರೇ' ಎನ್ನಲಾಗಿದೆ. ದೇವತೆಗಳಿಂದ 'ಭೂತಿ' ಎಂದು ಧ್ಯಾನಿಸಲ್ಪಟ್ಟವನು ಪರಮಾತ್ಮ. ಆದ್ದರಿಂದ ಪ್ರಾಣನೂ ಅವನೇ.

ಈ. 'ತಾ ವಾ ಏತಾಃ ಸರ್ವಾ ಋಚಃ.... ಏಕೈವ ವ್ಯಾಹೃತಿಃ। ಪ್ರಾಣ ಏವ। ಪ್ರಾಣ ಋಚ ಏವ ವಿದ್ಯಾತ್' ಎಂದು ಶ್ರುತಿಪಾಠ. ಎಲ್ಲಾ ಮಂತ್ರಗಳೂ ಏಕೈವ ವ್ಯಾಹೃತಿಃ= ಒಂದನ್ನೇ ಹೇಳುತ್ತವೆ. ಅವುಗಳಿಂದ ಹೇಳಲ್ಪಡುವ ತತ್ತ್ವ ಪ್ರಾಣ. ಹೀಗೆ ಈ ಶ್ರುತಿ ಪ್ರಾಣನಿಗೆ ಸರ್ವವೇದಪ್ರತಿಪಾದ್ಯತ್ವವನ್ನು ಹೇಳುತ್ತದೆ. ಸರ್ವವೇದವೇದ್ಯ ವಿಷ್ಣು. ಆದ್ದರಿಂದ ಪ್ರಾಣನೆಂದರೆ ವಿಷ್ಣು.

ಉ. ''ಅಥ ದೇವರಥಃ, ತಸ್ಯ ವಾಗುದ್ಧಿಃ ತದಯಂ ಪ್ರಾಣೋ ಅಧಿತಿಷ್ಠತಿ'' ಈ ಶ್ರುತಿಯಲ್ಲಿ ದೇಹವನ್ನು ರಥವನ್ನಾಗಿ ಬಣ್ಣಿಸಿ ಅದರ ರಥಿಕ ಪ್ರಾಣ ಎನ್ನಲಾಗಿದೆ. ಆದ್ದರಿಂದ ಪ್ರಾಣ ವಿಷ್ಣು.

**4.** ಈ ಪ್ರಕರಣದಲ್ಲಿ 'ಏತದ್ ಬ್ರಹ್ಮ' 'ಬ್ರಹ್ಮಣೋ ಲೋಕಃ' ಎಂದು ಮುಂತಾಗಿ ಪ್ರಾಣನಲ್ಲಿ ಬ್ರಹ್ಮಶಬ್ದವನ್ನು ಪ್ರಯೋಗಿಸಲಾಗಿದೆ. ಆದ್ದರಿಂದಲೂ ಪ್ರಾಣ ವಿಷ್ಣು. ಹೀಗೆ ಸಿದ್ಧಾಂತಕ್ಕೆ ಲಿಂಗಗಳೊಂದಿಗೆ ಶ್ರುತಿಯೂ ಆಧಾರವಾಗಿದೆ. ॥ ಸೂತ್ರ 28 ॥

## ಓಂ ॥ ನ ವಕ್ತುರಾತ್ಮೋಪದೇಶಾದಿತಿ ಚೇತ್ ಅಧ್ಯಾತ್ಮಸಂಬಂಧಭೂಮಾ ಹ್ಯಸ್ಮಿನ್ ॥ ಓಂ

**''ಪ್ರಾಣೋ ವಾ ಅಹಮಸ್ಮಿ-ಋಷೇ'' (ಐ.ಆ.2.2.3)**

**ಇತಿ ವಕ್ತುಃ ಆತ್ಮೋಪದೇಶಾತ್ ಇಂದ್ರ ಏವ ಇತಿ ಚೇನ್ನ, 'ಪ್ರಾಣಸ್ತ್ವಂ ಪ್ರಾಣಃ ಸರ್ವಾಣಿ ಭೂತಾನಿ' (ಐ.ಆ.2.2.3) ಇತಿ ಬಹು– ಅಧ್ಯಾತ್ಮಸಂಬಂಧೋ ಹಿ ಅತ್ರ ವಿದ್ಯತೇ ॥ 29 ॥**

ಬೃಹತೀ ಸಹಸ್ರವನ್ನು ಹೇಳುತ್ತಿರುವ ವಿಶ್ವಾಮಿತ್ರನಿಗೆ (ವಕ್ತುಃ) ಇಂದ್ರನು 'ನಾನೇ ಪ್ರಾಣ' ಎಂದು ತನ್ನನ್ನೇ ಪ್ರಾಣನನ್ನಾಗಿ ಹೇಳಿರುವುದರಿಂದ ಇಂದ್ರನೇ ಪ್ರಾಣ ಎನ್ನಕೂಡದು. ಈ ಪ್ರಕರಣದಲ್ಲಿ ಇಂದ್ರನಿಂದ 'ನೀನು ಪ್ರಾಣ, ಸರ್ವಭೂತಗಳೂ ಪ್ರಾಣ' ಎಂದು ಈ ರೀತಿಯಾಗಿ ಪ್ರಾಣನಿಗೆ ಅನೇಕ ದೇಹಗಳಲ್ಲಿ ಅಂತರ್ಯಾಮಿತ್ವವನ್ನು ಹೇಳಲ್ಪಟ್ಟಿದೆ. ಆದ್ದರಿಂದ ಪ್ರಾಣ ವಿಷ್ಣು. ಅಥವಾ ''ಪ್ರಾಣಸ್ತ್ವಂ ಪ್ರಾಣಃ ಸರ್ವಾಣಿ ಭೂತಾನಿ'' ಎಂದು ಹೇಳಿರುವುದರಿಂದ ಇಂದ್ರನಲ್ಲಿ ಪರಮಾತ್ಮನ ಸಾನ್ನಿಧ್ಯವಿಶೇಷವಿದೆ ಎಂದು ತಿಳಿಯುತ್ತದೆ. ಆದ್ದರಿಂದ ಇಂದ್ರನೇ ಪ್ರಾಣನಲ್ಲ.

**ವಿವರಣೆ : 1. ಪೂರ್ವಪಕ್ಷ** - ದೇವೇಂದ್ರ ವೃತ್ರಾಸುರ ಸಂಹಾರ ಮಾಡಿದ ಮೇಲೆ ಮಹಾವ್ರತ ಎಂಬ ಯಜ್ಞವನ್ನು ಮಾಡಿದ. ಆ ಯಜ್ಞದಲ್ಲಿ ಇಂದ್ರ ವಿಶ್ವಾಮಿತ್ರನಿಗೆ ಹೇಳಿದ - ಋಷೇ, ಪ್ರಿಯಂ ವೈ ಮೇ ಧಾಮೋಪಾಗಾಃ। ವರಂ ತೇ ದದಾಮೀತಿ ॥ 'ನನ್ನ ರಾಜ್ಯಕ್ಕೆ ನೀನು ಬಂದುದು ನನಗೆ ಪ್ರಿಯವಾಗಿದೆ. ಅದಕ್ಕಾಗಿ ನಿನಗೆ ವರನೀಡುತ್ತೇನೆ' ಎಂದು. ವಿಶ್ವಾಮಿತ್ರ ಕೇಳಿದ- 'ತ್ವಮೇವ ಜಾನೀಯಾಂ-ನಿನ್ನನ್ನೇ ತಿಳಿಯಬಯಸುತ್ತೇನೆ'. ಅದಕ್ಕೆ ಇಂದ್ರ ಹೇಳಿದ - 'ಪ್ರಾಣೋ ವಾ ಅಹಮಸ್ಮಿ ಋಷೇ - ಋಷಿಯೆ, ನಾನೇ ಪ್ರಾಣ'. ಈ ಸಂವಾದದಿಂದ ಪ್ರಾಣಶಬ್ದವಾಚ್ಯ ಇಂದ್ರನೆಂದು ತಿಳಿಯುತ್ತದೆ, ಆದ್ದರಿಂದ ವಿಷ್ಣು ಪ್ರಾಣನಲ್ಲ.

**2. ಸಿದ್ಧಾಂತ** : ವಿಶ್ವಾಮಿತ್ರ ಇದೇ ಮೊದಲಾಗಿ ಇಂದ್ರನನ್ನು ನೋಡುವುದಲ್ಲ. ಅಂದಮೇಲೆ 'ನಿನ್ನನ್ನು ಪರಿಚಯಿಸು' ಎಂಬ ವಿಶ್ವಾಮಿತ್ರನ ವಾಕ್ಯಕ್ಕೆ ಅರ್ಥವಿಲ್ಲ. ಆದ್ದರಿಂದ ಅದರ ಅಭಿಪ್ರಾಯವನ್ನು ಹೀಗೆ ಗ್ರಹಿಸಬೇಕು- ಬೃಹತೀಸಹಸ್ರ ವಿಷ್ಣುವಿಗೆ ಪ್ರಿಯವಾದ ಅನ್ನ. ಅದನ್ನು ವಿಶ್ವಾಮಿತ್ರ ಪಠಿಸಿದಾಗ ಇಂದ್ರನಲ್ಲಿ ಪರಮಾತ್ಮನ ವಿಶೇಷ ಸನ್ನಿಧಾನ ಉಂಟಾಯಿತು. ಇಂದ್ರನ ವಿಲಕ್ಷಣ ತೇಜಸ್ಸನ್ನು ನೋಡಿ ''ನೀನಾರು?'' ಎಂದು ವಿಶ್ವಾಮಿತ್ರ ಕೇಳಿದ. ಅದಕ್ಕೆ ಇಂದ್ರನ ಉತ್ತರ 'ನನ್ನಲ್ಲಿ ಪ್ರಾಣನ ಸನ್ನಿಧಾನವಿದೆ' ಎಂದು. ಹೀಗೆ ಅರ್ಥ ಹೇಳದೆ ವಿಧಿ ಇಲ್ಲ, ಏಕೆಂದರೆ, ತನ್ನನ್ನು ಪ್ರಾಣನೆಂದು ಹೇಳಿಕೊಂಡ ದೇವೇಂದ್ರ ವಿಶ್ವಾಮಿತ್ರನನ್ನೂ, ಎಲ್ಲ ಜೀವಿಗಳನ್ನೂ ಪ್ರಾಣ ಎನ್ನುತ್ತಾನೆ. ಆಗ 'ಪ್ರಾಣ ಜೀವಿಗಳ ಅಂತರ್ಯಾಮಿ' ಎಂಬ ಅರ್ಥವನ್ನೇ ಮಾಡಬೇಕಾಗುತ್ತದೆ. ಆದ್ದರಿಂದ 'ಪ್ರಾಣೋ ವಾ ಅಹಂ' ಎಂದರೂ ನನ್ನ ಅಂತರ್ಯಾಮಿ ಪ್ರಾಣ ಎಂದೇ ಅರ್ಥ.

**3.** ಸೂತ್ರದ ''ಅಧ್ಯಾತ್ಮಸಂಬಂಧಭೂಮಾ'' ಎಂಬ ಶಬ್ದಕ್ಕೆ ಭಾಷ್ಯದಲ್ಲಿ 'ಬಹು ಅಧ್ಯಾತ್ಮಸಂಬಂಧಃ' ಎಂದು ವ್ಯಾಖ್ಯಾನ ಮಾಡಲಾಗಿದೆ. ಇದರಿಂದ 'ಭೂಮಾ' ಶಬ್ದಕ್ಕೆ 'ಬಹು' ಎಂದರ್ಥವನ್ನು ಹೇಳಿದಂತಾಯಿತು. 'ಅಧಿಕಃ+ ಆತ್ಮಾ= ಅಧ್ಯಾತ್ಮಾ' ಅಧ್ಯಾತ್ಮನೆಂದರೆ ಪರಮಾತ್ಮ. ಅವನಿಗೆ ಬಹುಸಂಬಂಧ ಎಂದರೆ ಅನೇಕ ದೇಹಗಳ ಸಂಬಂಧ. ಅದನ್ನು ಅಸ್ಮಿನ್= ಈ ಪ್ರಕರಣದಲ್ಲಿ ಹೇಳಲಾಗಿದೆ. ಇಂದ್ರಾದಿಗಳು ಆತ್ಮರಾದರೂ ಅವರೊಳಗಿರುವ ಪರಮಾತ್ಮನಿಗೆ ಅವರು ದೇಹದಂತೆ. ಅಂತಹ ಅನೇಕ ದೇಹಗಳ ಸಂಬಂಧವನ್ನು ಈ ಪ್ರಕರಣದಲ್ಲಿ ಪರಮಾತ್ಮನಿಗೆ ಹೇಳಲಾಗಿದೆ ಎಂದರ್ಥ.

ಅಥವಾ ಅಸ್ಮಿನ್=ಇಂದ್ರನಲ್ಲಿ, ಅಧ್ಯಾತ್ಮಸಂಬಂಧಭೂಮಾ= ಪರಮಾತ್ಮನ ಅತಿಶಯ ಸಾನ್ನಿಧ್ಯ ಇದೆ. ಏಕೆಂದರೆ 'ತಾನು ಪ್ರಾಣ' ಎಂದು ಹೇಳಿದ ಇಂದ್ರ ''ಪ್ರಾಣಃ ಸರ್ವಾಣಿ ಭೂತಾನಿ'' ಎನ್ನುತ್ತಿದ್ದಾನೆ. ಇಂದ್ರನೇ ಪ್ರಾಣನಾದರೆ ''ಸರ್ವಭೂತಗಳೂ ಇಂದ್ರ'' ಎಂದಂತಾಗುತ್ತದೆ. ಅದು ಅಯುಕ್ತ. ಆದ್ದರಿಂದ ಅಹಂ=ಇಂದ್ರನಲ್ಲಿರುವ ಪರಮಾತ್ಮನೇ, ಪ್ರಾಣ. ॥ ಸೂತ್ರ 29 ॥

**ಓಂ ॥ ಶಾಸ್ತ್ರದೃಷ್ಟ್ಯಾ ತೂಪದೇಶೋ ವಾಮದೇವವತ್ ॥ ಓಂ**

**ಶಾಸ್ತ್ರಂ ಅಂತರ್ಯಾಮೀ । 'ಸಂವಿತ್ ಶಾಸ್ತ್ರಂ ಪರಂ ಪದಮ್ ।' ಇತಿ ಹಿ ಭಾಗವತೇ ।**

**ತತ್ತನ್ನಾಮ್ನೋಚ್ಯತೇ ವಿಷ್ಣುಃ ಸರ್ವಶಾಸ್ತೃತ್ವಹೇತುತಃ ।**

**ನ ಕ್ವಾಪಿ ಕಿಂಚನ್ನಾಮಾಸ್ತಿ ತಮೃತೇ ಪುರುಷೋತ್ತಮಮ್ ॥ ಇತಿ ಚ ಪಾದ್ಮೇ ।**

**'ಅಹಂ ಮನುರಭವಂ ಸೂರ್ಯಶ್ಚ' (ಋ.4.26.1) ಇತ್ಯಾದಿವತ್ ॥ 30 ॥**

ಸೂತ್ರದಲ್ಲಿರುವ ಶಾಸ್ತ್ರಶಬ್ದಕ್ಕೆ ಅಂತರ್ಯಾಮಿ ಎಂದು ಅರ್ಥ. 'ಸಂವಿತ್ ಶಾಸ್ತ್ರಂ ಪರಂ ಪದಂ' ಎಂಬ ಭಾಗವತ ವಾಕ್ಯದಲ್ಲಿ ಶಾಸ್ತ್ರಶಬ್ದವನ್ನು ಅಂತರ್ಯಾಮಿ ಎಂಬ ಅರ್ಥದಲ್ಲಿ ಹೇಳಲಾಗಿದೆ. ಪಾದ್ಮಪುರಾಣದಲ್ಲಿ ಹೀಗಿದೆ - ''ಸರ್ವಕ್ಕೂ ಪರಮಾತ್ಮ ನಿಯಾಮಕನಾದುದರಿಂದ ಆಯಾಯ ವಸ್ತುಗಳಿಗೆ ವಾಚಕವಾದ ಪದಗಳಿಂದ ಅವನೇ ವಾಚ್ಯ. ಆ ಪುರುಷೋತ್ತಮನಿಗೆ ವಾಚಕವಾಗದ ಯಾವ ನಾಮಗಳೂ ಯಾವ ವಸ್ತುಗಳಿಗೂ ಇಲ್ಲ''

ವಾಮದೇವ ಋಷಿ 'ಅಹಂ ಮನುಃ' ಎಂದಂತೆ ಇಂದ್ರ 'ಪ್ರಾಣೋಽಹಂ' ಎಂದಿದ್ದಾನೆ.

**ವಿವರಣೆ :** 1. 'ಇಂದ್ರನೇ ಪ್ರಾಣನಲ್ಲ, ಇಂದ್ರನಲ್ಲಿ ಪ್ರಾಣ' ಎಂದು ಅಭಿಪ್ರಾಯವಾದರೆ ಇಂದ್ರ 'ಮಯಿ ಪ್ರಾಣಃ- ನನ್ನಲ್ಲಿ ಪ್ರಾಣನಿದ್ದಾನೆ' ಎನ್ನಬೇಕು. 'ಅಹಂ ಪ್ರಾಣಃ - ನಾನೇ ಪ್ರಾಣ' ಎಂದುದು ಹೇಗೆ? ಈ ಪ್ರಶ್ನೆಗೆ ಸೂತ್ರಕಾರರು ನೀಡಿದ ಉತ್ತರ- ಇದು ಅಂತರ್ಯಾಮಿ ದೃಷ್ಟಿಯ ಪ್ರಯೋಗ. ಎಲ್ಲ ಶಬ್ದಗಳೂ ಮುಖ್ಯವಾಗಿ

ಪರಮಾತ್ಮವಾಚಕ. ಆಯಾಯ ಶಬ್ದಗಳಿಂದ ವಾಚ್ಯವಾದ ಭಗವದ್ರೂಪ ವಸ್ತುವಿಶೇಷಗಳಲ್ಲಿ ಇರುವುದರಿಂದ ಅವುಗಳಿಗೆ ಆ ಹೆಸರುಗಳು. ಈ ನಿಯಮದಂತೆ 'ಅಹಂ' ಎಂಬ ಶಬ್ದ ಇಂದ್ರನ ಅಂತರ್ಯಾಮಿ ವಾಚಕ. 'ಅಹಂ ಪ್ರಾಣಃ' ಎಂದರೆ 'ನನ್ನ ಅಂತರ್ಯಾಮಿ ಪ್ರಾಣ' ಎಂದರ್ಥ. ಇಂತಹ ಪ್ರಯೋಗಗಳು ಶಾಸ್ತ್ರದಲ್ಲಿವೆ. ವಾಮದೇವನೆಂಬ ಋಷಿ ''ಅಹಂ ಮನುರಭವಂ ಸೂರ್ಯಶ್ಚ'' ಎಂದಿದ್ದಾನೆ. ಅವನು ಮನುವೂ ಅಲ್ಲ, ಸೂರ್ಯನೂ ಅಲ್ಲ. ಆದ್ದರಿಂದ ಅಹಂ ಎಂದರೆ ವಾಮದೇವನ ಅಂತರ್ಯಾಮಿ ಪರಮಾತ್ಮ. ಅವನು 'ಮನು' ಎಂದರೆ ಮನುವಿನ ಅಂತರ್ಯಾಮಿ, ಸೂರ್ಯ ಎಂದರೆ ಸೂರ್ಯನ ಅಂತರ್ಯಾಮಿ ಎಂದರ್ಥ. ಅದರಂತೆ ಪ್ರಕೃತ ಇಂದ್ರನ ವಾಕ್ಯಕ್ಕೂ ಅರ್ಥ ಹೇಳಬೇಕು.

**2.** ಸೂತ್ರದಲ್ಲಿ ಅಂತರ್ಯಾಮಿ ಎಂಬ ಅರ್ಥದಲ್ಲಿ ಶಾಸ್ತ್ರ ಪದವನ್ನು ಪ್ರಯೋಗಿಸಲಾಗಿದೆ. ಇದರಿಂದ -

ತತ್ತನ್ನಾಮ್ನಾ ಉಚ್ಯತೇ ವಿಷ್ಣುಃ ಸರ್ವಶಾಸ್ತೃತ್ವಹೇತುತಃ ॥

ಎಂಬ ಪ್ರಮಾಣ ಸೂಚಿತವಾಗುತ್ತದೆ. ಶಾಸ್ಯತ್ವಾತ್ ಶಾಸ್ತ್ರಂ- ನಿಯಾಮಕನಾದುದರಿಂದ ಪರಮಾತ್ಮ ತತ್ತಚ್ಛಬ್ದ ವಾಚ್ಯನಾಗಿದ್ದಾನೆ. ಹೀಗಾಗಿ ಶಾಸ್ತ್ರಶಬ್ದಕ್ಕೆ ಅಂತರ್ಯಾಮೀ ಎಂದು ಅರ್ಥ.

ಶಾಸ್ತ್ರಶಬ್ದವು 'ಅಂತರ್ಯಾಮಿ' ಎಂಬ ಅರ್ಥದಲ್ಲಿ ಪ್ರಯೋಗವಾಗಿರುವುದಕ್ಕೆ ಆಚಾರ್ಯರು ಭಾಗವತದ ಉದಾಹರಣೆಯನ್ನು ಕೊಟ್ಟಿದ್ದಾರೆ. ಪ್ರಥಮಸ್ಕಂಧದಲ್ಲಿ ವ್ಯಾಸರಿಗೆ ನಾರದರು ಹೇಳುತ್ತಾರೆ-

ಸ್ವಪ್ನೋ ಮಾಯಾಽಗ್ರಹಃ, ಶಯ್ಯಾ, ಜಾಗ್ರದಾಭಾಸ ಆತ್ಮನಃ ।

ನಾಮರೂಪಕ್ರಿಯಾವೃತ್ತಿಃ, ಸಂವಿಚ್ಛಾಸ್ತ್ರಂ ಪರಂ ಪದಮ್ ॥

''ನಮಗೆ ಸ್ವಪ್ನ, ನಿದ್ರೆ, ಎಚ್ಚರ ಈ ಮೂರು ಅವಸ್ಥೆಗಳು ಯಾವ ಆತ್ಮನಿಂದಾಗುವವೋ ಅಂತಹ ಆತ್ಮ ಜ್ಞಾನರೂಪನಾದುದರಿಂದ ಸಂವಿತ್ ಎಂದೂ ಅಂತರ್ಯಾಮಿಯಾದುದರಿಂದ 'ಶಾಸ್ತ್ರ' ಎಂದೂ, ಪರಮಪ್ರಾಪ್ಯನಾದುದರಿಂದ 'ಪರಂ ಪದಂ' ಎಂದೂ ಕರೆಯಲ್ಪಡುತ್ತಾನೆ'' ಎಂದು ಭಾಗವತ ಶ್ಲೋಕದ ಅರ್ಥ.

**3.** 'ಅಂತರ್ಯಾಮಿ' ಎಂಬ ಅರ್ಥದಲ್ಲಿ 'ಶಾಸ್ತ್ರ' ಶಬ್ದಪ್ರಯೋಗಕ್ಕೆ ಸೂತ್ರದಲ್ಲಿ ವಾಮದೇವ ಋಷಿಯ ವಾಕ್ಯವನ್ನು ಉದಾಹರಿಸಲಾಗಿದೆ. ವಾಮದೇವ, ತಾನು ಮನು, ಸೂರ್ಯ ಎಂದಿದ್ದಾನೆ. ಮುಂದೆ 'ಅಹಂ ಭೂಮಿಮದಾಂ ಆರ್ಯಾಯ- ನಾನು ಅಣ್ಣನಾದ ಇಂದ್ರನಿಗೆ ಬಲಿಯಿಂದ ಗೆದ್ದು ಭೂಮಿಯನ್ನು ನೀಡಿದೆ' ಎಂದಿದ್ದಾನೆ. ಅದ್ವೈತವಾದವೂ ಇಂತಹ ಸಂಸಾರಿ ಜೀವಿಗಳಿಗೆ ಪರಸ್ಪರ ಐಕ್ಯವನ್ನು ಹೇಳಲಾರದು. ಆದ್ದರಿಂದ ಇಲ್ಲಿ 'ಅಹಂ' ಎಂದರೆ 'ನನ್ನ ಅಂತರ್ಯಾಮಿ' ಎಂದೇ ಅರ್ಥ. ॥ 30 ॥

**ಓಂ ॥ ಜೀವ-ಮುಖ್ಯಪ್ರಾಣಲಿಂಗಾತ್ ನೇತಿ ಚೇನ್ನ ಉಪಾಸಾ ತ್ರೈವಿಧ್ಯಾತ್, ಆಶ್ರಿತತ್ವಾತ್, ಇಹ ತದ್ಯೋಗಾತ್ ॥ ಓಂ**

ತಾವಂತಿ ಶತಸಂವತ್ಸರಸ್ಯಾಹ್ನಾಂ ಸಹಸ್ರಾಣಿ ಭವಂತಿ' (ಐ.ಆ.2.2.4)

ಇತಿ ಜೀವಲಿಂಗಂ, ಪ್ರಾಣಸಂವಾದಾದಿ ಮುಖ್ಯ ಪ್ರಾಣಲಿಂಗಂ, ತಸ್ಮಾತ್ ನೇತಿ ಚೇತ್, ನ । ಅಂತರ್ಬಹಿಃ ಸರ್ವಗತತ್ವೇನ ಇತಿ ಉಪಾಸಾ ತ್ರೈವಿಧ್ಯಾತ್ ಇಹ ಆಶ್ರಿತತ್ವಾಚ್ಚ ।

'ಸ ಏತಮೇವ ಸೀಮಾನಂ ವಿದಾರ್ಯೈತಯಾ ದ್ವಾರಾ ಪ್ರಾಪದ್ಯತ' (2.4.3)
'ಸ ಏತಮೇವ ಪುರುಷಂ ಬ್ರಹ್ಮ ತತಮಪಶ್ಯತ್' (2.4.3)
'ಏತದ್ಧ ಸ್ಮ ವೈ ತದ್ವಿದ್ವಾನಾಹ ಮಹಿದಾಸ ಐತರೇಯಃ' (2.1.8) ಇತ್ಯಾದಿನಾ ।
ಮಹಿದಾಸಾಭಿಧೋ ಜಜ್ಞೇ ಇತರಾಯಾಸ್ತಪೋಬಲಾತ್ ।
ಸಾಕ್ಷಾತ್ ಸ ಭಗವಾನ್ ವಿಷ್ಣುರ್ಯಸ್ತಂತ್ರಂ ವೈಷ್ಣವಂ ವ್ಯಧಾತ್ ॥

ಇತಿ ಬ್ರಹ್ಮಾಂಡೇ ।

ತತ್ತದುಪಾಸನಾಯೋಗ್ಯತಯಾ ಚ ಪುರುಷಾಣಾಮ್-
ಕೇಷಾಂಚಿತ್ ಸರ್ವಗತತ್ವೇನ ಕೇಷಾಂಚಿತ್ ಹೃದಯೇ ಹರಿಃ ।
ಕೇಷಾಂಚಿದ್ ಬಹಿರೇವಾಸೌ ಉಪಾಸ್ಯಃ ಪುರುಷೋತ್ತಮಃ ॥ ಇತಿ ಬ್ರಾಹ್ಮೇ ।
ಅಗ್ನೌ ಕ್ರಿಯಾವತಾಂ ವಿಷ್ಣುರ್ಯೋಗಿನಾಂ ಹೃದಯೇ ಹರಿಃ ।
ಪ್ರತಿಮಾಸು ಅಪ್ರಬುದ್ಧಾನಾಂ ಸರ್ವತ್ರ ವಿದಿತಾತ್ಮನಾಮ್ ॥ ಇತಿ ಚ ।

**॥ ಇತಿ ಪಾದಾಂತ್ಯ ಪ್ರಾಣಾಧಿಕರಣಮ್ ॥ 31 ॥**

**ಇತಿ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತೇ ಬ್ರಹ್ಮಸೂತ್ರಭಾಷ್ಯೇ ಪ್ರಥಮಾಧ್ಯಾಯಸ್ಯ ಪ್ರಥಮಃ ಪಾದಃ ॥**

'ಒಂದು ಸಾವಿರ ಬೃಹತೀ ಋಕ್ಕುಗಳ ಸ್ವರಾಕ್ಷರಗಳಿಂದ ಪ್ರತಿಪಾದ್ಯನಾದ ವಿಷ್ಣುವಿನ ಪುರುಷರೂಪಗಳು ಎಷ್ಟು ಸಾವಿರವೋ (36 ಸಾವಿರ) ಅಷ್ಟೂ ರೂಪಗಳು ಮನುಷ್ಯರ ನೂರು ವರ್ಷಗಳ ಅವಧಿಯ ಆಯುಷ್ಯದ ಹಗಲುಗಳಿಗೆ (36 ಸಾವಿರ) ನಿಯಾಮಕವಾಗಿವೆ' ಹೀಗೆ ನೂರು ವರ್ಷಗಳ ಆಯುಷ್ಯ ಜೀವನ ಅಸಾಧಾರಣ ಧರ್ಮ. ''ಪ್ರಾಣನೊಂದಿಗೆ ಇಂದ್ರಿಯಗಳ ಸಂವಾದ' ಮುಖ್ಯಪ್ರಾಣ ಇಲ್ಲಿ ಪ್ರಸ್ತುತನಾಗಿರುವುದಕ್ಕೆ ಸೂಚಕ. ಆದ್ದರಿಂದ ಇಲ್ಲಿ ಪ್ರತಿಪಾದ್ಯನಾದ ಪ್ರಾಣ ಮುಖ್ಯಪ್ರಾಣ ಅಥವಾ ಜೀವ, ಹೊರತು

ಪರಮಾತ್ಮನಲ್ಲ. ಹೀಗೆ ಹೇಳುವುದು ಯುಕ್ತವಲ್ಲ - ಅಂತರುಪಾಸನೆ, ಬಹಿರುಪಾಸನೆ, ವ್ಯಾಪ್ತ್ಯೋಪಾಸನೆ ಹೀಗೆ ಉಪಾಸನೆ ಮೂರು ವಿಧವಾಗಿದೆ. ಈ ಮೂರೂ ವಿಧದ ಉಪಾಸನೆಗಳೂ ಇಲ್ಲಿ ಪ್ರಸ್ತುತವಾಗಿವೆ.

1. ವಾಸುದೇವ ರೂಪದ ಪರಮಾತ್ಮನು ತಲೆಯ ಮಧ್ಯವನ್ನು ಸೀಳಿ ಅಲ್ಲಿರುವ ಸುಷುಮ್ನಾ ನಾಡಿಯ ಮೂಲಕ ಈ ದೇಹದೊಳಗೆ ಪ್ರವೇಶಿಸಿದನು.

2. 'ಆಗಾಗಲೇ ಕಾಲಿನ ಮೂಲಕ ಬ್ರಹ್ಮನ ದೇಹದಲ್ಲಿ ಪ್ರವೇಶಮಾಡಿದ್ದ ನಾರಾಯಣನು ವ್ಯಾಸ-ಕೃಷ್ಣ-ಕಪಿಲಾದಿರೂಪದ ತನ್ನನ್ನು ವ್ಯಾಪ್ತನನ್ನಾಗಿ ತಿಳಿದ'

3. 'ಈವರೆಗೆ ಹೇಳಿದ್ದೆಲ್ಲವನ್ನೂ ಇತರಾದೇವಿಯ ಮಗನಾಗಿ ಅವತರಿಸಿದ ಜ್ಞಾನಿ ಮಹಿದಾಸನು ತಿಳಿಸಿದ್ದಾನೆ'

ಹೀಗೆ ಮೂರು ವಿಧದ ಉಪಾಸನೆಯನ್ನು ಇಲ್ಲಿ ಹೇಳಲಾಗಿದೆ.

ಬ್ರಹ್ಮಾಂಡಪುರಾಣದಲ್ಲಿ ಮಹಿದಾಸನು ವಿಷ್ಣುವಿನ ಅವತಾರವೆನ್ನಲಾಗಿದೆ. 'ಇತರಾದೇವಿಯ ತಪಃ ಪ್ರಭಾವದಿಂದ ಸಾಕ್ಷಾತ್ ವಿಷ್ಣುವೇ ಮಹಿದಾಸನಾಮದಿಂದ ಜನಿಸಿ ಪಂಚರಾತ್ರವೆಂಬ ವೈಷ್ಣವ ಗ್ರಂಥವನ್ನು ನಾರದಾದಿಗಳಿಗೆ ಉಪದೇಶಿಸಿದ'.

ಈ ಮೂರುವಿಧವಾದ ಉಪಾಸನೆಗೆ ಯೋಗ್ಯರಾದ ಸಾಧಕರೂ ವಿಭಿನ್ನರಾಗಿದ್ದಾರೆ. ಶ್ರೀಹರಿಯು ದೇವತೆಗಳಿಗೆ ವ್ಯಾಪ್ತನಾಗಿಯೂ, ಋಷಿಗಂಧರ್ವಾದಿಗಳಿಗೆ ತಮ್ಮ ಹೃದಯದಲ್ಲೂ, ಮನುಷ್ಯೋತ್ತಮರಿಗೆ ಅವತಾರಾದಿ ರೂಪಗಳಲ್ಲೂ ಉಪಾಸ್ಯನಾಗಿದ್ದಾನೆ. ಹೀಗೆ ಬ್ರಾಹ್ಮದಲ್ಲಿದೆ. 'ಯಜ್ಞಾದಿಕರ್ಮಾನುಷ್ಠಾನ ನಿರತರಿಗೆ ಗಾರ್ಹಪತ್ಯಾದಿ ಅಗ್ನಿಯಲ್ಲೂ, ಯೋಗಿಗಳಿಗೆ ಹೃದಯದೊಳಗೂ, ಅಜ್ಞಾನಿಗಳಿಗೆ ಪ್ರತಿಮೆಗಳಲ್ಲೂ, ಜ್ಞಾನಿಗಳಿಗೆ ಸರ್ವವಸ್ತುಗಳಲ್ಲೂ ಪರಮಾತ್ಮ ಉಪಾಸ್ಯನಾಗಿದ್ದಾನೆ ಎಂದೂ ಅಲ್ಲಿದೆ.

**ವಿವರಣೆ : 1. ಪೂರ್ವಪಕ್ಷ** – ಐತರೇಯೋಪನಿಷತ್ತಿನ ಎರಡನೆಯ ಆರಣ್ಯಕದಲ್ಲಿ ಪ್ರಾಣನ ಪ್ರಸ್ತಾವ ಬಂದಿದೆ. ಆ ಪ್ರಾಣ ಯಾರು? ಎಂದು ನಿಶ್ಚಯಿಸಬೇಕಾದರೆ ಈ ಪ್ರಕರಣದಲ್ಲಿ ಯಾರು ಪ್ರಸ್ತುತರಾಗಿದ್ದಾರೆ ಎಂದು ಪರಿಶೀಲಿಸಬೇಕು. ಈ ಪ್ರಕರಣದಲ್ಲಿ ಹೀಗೊಂದು ವಿಷಯ ಪ್ರಸ್ತುತವಾಗಿದೆ. 'ಪರಮಾತ್ಮ ಚತುರ್ಮುಖ ಬ್ರಹ್ಮದೇವರ ಶರೀರವನ್ನು ಪ್ರವೇಶಿಸಿ ನೂರು ವರ್ಷಗಳ ಕಾಲ ಅಲ್ಲೇ ಇದ್ದ. ಆದ್ದರಿಂದಲೇ ಮನುಷ್ಯರಿಗೆ ನೂರು ವರ್ಷಗಳು ಪೂರ್ಣಾಯುಷ್ಯ, ಎಂದು. ಅದರಂತೆ ಬೃಹತೀಸಹಸ್ರದ ಅಕ್ಷರಸಂಖ್ಯೆಗಳಿಗೂ ಮನುಷ್ಯನ ಆಯುಷ್ಯಕ್ಕೂ ಸಂಬಂಧವನ್ನು ತಿಳಿಸಲಾಗಿದೆ. '36 ಅಕ್ಷರಗಳ ಬೃಹತೀಋಕ್ಕುಗಳು ಒಂದು ಸಾವಿರ ಇವೆ. ಅವುಗಳಲ್ಲಿರುವ ಒಟ್ಟು ಅಕ್ಷರಗಳು 36 ಸಾವಿರ ಸ್ವರಗಳು ಮತ್ತು 36 ಸಾವಿರ ವ್ಯಂಜನಗಳು. ಮನುಷ್ಯನ 100 ವರ್ಷ ಆಯುಷ್ಯದಲ್ಲಿ ಒಂದು ವರ್ಷಕ್ಕೆ 360 ದಿನಗಳಂತೆ, 36 ಸಾವಿರ ಹಗಲುಗಳು ಮತ್ತು 36 ಸಾವಿರ ರಾತ್ರಿಗಳು.

ಈ ಹಗಲು ರಾತ್ರಿಗಳಿಗೆ ಬೃಹತೀಸಹಸ್ರದ ಸ್ವರ, ವ್ಯಂಜನಗಳಿಂದ ಪ್ರತಿಪಾದ್ಯಗಳಾದ ಪರಮಾತ್ಮನ ರೂಪಗಳು ನಿಯಾಮಕಗಳಾಗಿವೆ. ಹೀಗೆ ಮನುಷ್ಯರ ಪ್ರಸ್ತಾವ ಈ ಆರಣ್ಯಕದಲ್ಲಿ ಇರುವುದರಿಂದ ಪ್ರಾಣರೆಂದರೆ ಜೀವರು ಎಂದು ಹೇಳಬಹುದು.

ಇದರಂತೆ, ಇದೇ ಪ್ರಕರಣದಲ್ಲಿ ಚತುರ್ಮುಖನ ದೇಹದಲ್ಲಿ ಪ್ರವೇಶಿಸಿದ ಇಂದ್ರಿಯಾಭಿಮಾನಿದೇವತೆಗಳಲ್ಲಿ ಯಾರು ಶ್ರೇಷ್ಠರು ಎಂಬ ಬಗ್ಗೆ ಸ್ಪರ್ಧೆ ಬೆಳೆದು ಕೊನೆಯಲ್ಲಿ ಮುಖ್ಯಪ್ರಾಣನೇ ಶ್ರೇಷ್ಠನೆಂದು ತೀರ್ಮಾನಿಸಲಾಗಿದೆ. ಇದರಿಂದಾಗಿ ಮುಖ್ಯಪ್ರಾಣನೂ ಪ್ರಾಣಶಬ್ದವಾಚ್ಯನಾಗಬಹುದು. ಹೀಗೆ ಪ್ರಾಣಶಬ್ದ ವಿಷ್ಣುವಾಚಕವಲ್ಲ ಎಂದು ಪೂರ್ವಪಕ್ಷ.

**2. ಸಿದ್ಧಾಂತ :** ದೇವತೆಗಳು, ಋಷಿಗಳು, ಮನುಷ್ಯೋತ್ತಮರು ಎಂದು ಸಾಧಕರು ಮೂರು ವಿಧರಾಗಿದ್ದಾರೆ. ಅವರವರ ಯೋಗ್ಯತೆಗೆ ಅನುಗುಣವಾಗಿ ಪರಮಾತ್ಮನ ಉಪಾಸನೆಯೂ ಮೂರುವಿಧವಾಗಿದೆ. ದೇವತೆಗಳು ವ್ಯಾಪ್ತೋಪಾಸಕರು. ಋಷಿಗಳು ತಮ್ಮ ಹೃದಯದಲ್ಲಿರುವ ರೂಪದ ಉಪಾಸಕರು. ಮನುಷ್ಯರು ಪ್ರತಿಮೆ, ಭಗವಂತನ ಅವತಾರ ರೂಪಗಳ ಉಪಾಸಕರು. ಈ ಮೂರು ವಿಧವಾದ ಉಪಾಸನೆಯು ಐತರೇಯದ ದ್ವಿತೀಯಾರಣ್ಯಕದಲ್ಲಿ ನಿರೂಪಿಸಲ್ಪಟ್ಟಿದೆ-

ಅ. ''ಚತುರ್ಮುಖ ಬ್ರಹ್ಮನ ಶರೀರವನ್ನು ಅವನ ತಲೆಯಲ್ಲಿರುವ ಸುಷುಮ್ನಾ ನಾಡಿಯ ಮೂಲಕ ವಾಸುದೇವ ಪ್ರವೇಶ ಮಾಡಿದ.' ಎಂದು ದ್ವಿತೀಯಾರಣ್ಯಕದ ನಾಲ್ಕನೆಯ ಅಧ್ಯಾಯದಲ್ಲಿ ನಿರೂಪಿಸಲಾಗಿದೆ. ಉಪನಿಷತ್ತಿನಲ್ಲಿ ಹೇಳಿದ ವಿಷಯಗಳು ಉಪಾಸನೆಗಾಗಿಯೇ ಇವೆ. ಆದ್ದರಿಂದ 'ಹೀಗೆ ನಮ್ಮ ಹೃದಯದಲ್ಲಿರುವ ಪರಮಾತ್ಮನ ಉಪಾಸನೆ ನಡೆಸಬೇಕು' ಎಂದು ಇದರ ಅಭಿಪ್ರಾಯ.

ಆ. ಚತುರ್ಮುಖ ಬ್ರಹ್ಮನ ದೇಹದಲ್ಲಿದ್ದ ನಾರಾಯಣರೂಪವು ತನ್ನದೇ ವ್ಯಾಸಕೃಷ್ಣಾದಿ ರೂಪಗಳನ್ನು ವ್ಯಾಪ್ತಗಳನ್ನಾಗಿ ತಿಳಿಯಿತು ಎನ್ನುತ್ತದೆ; ಇದೇ ಅಧ್ಯಾಯದ ಮೂರನೆಯ ಮಂತ್ರ. ಇದರಿಂದ ವ್ಯಾಪ್ತರೂಪದ ಚಿಂತನೆಯನ್ನು ತಿಳಿಸಿದಂತಾಯಿತು.

ಇ. ಇದೇ ಖಂಡದ ಒಂದನೆಯ ಅಧ್ಯಾಯದಲ್ಲಿ ಮಹಿದಾಸನೆಂಬ ಭಗವಂತನ ಅವತಾರದ ನಿರೂಪಣೆ ಇದೆ. ಇದರಿಂದ ಮನುಷ್ಯರಿಗೆ ಯೋಗ್ಯವಾದ ಉಪಾಸನೆ ಪ್ರಸ್ತುತವಾಯಿತು.

ಆದರೆ, ಮನುಷ್ಯೋತ್ತಮರು ಬಾಹ್ಯದಲ್ಲಿ ಅವತಾರ ರೂಪಗಳನ್ನಷ್ಟೇ ಉಪಾಸನೆ ಮಾಡಿದರೆ ಸಾಲದು. ಹೃದಯದಲ್ಲಿರುವ ಬಿಂಬರೂಪದ ಉಪಾಸನೆಯನ್ನೂ ಮಾಡಬೇಕಾಗುತ್ತದೆ. ಅದನ್ನು ಮಾಡದ ಹೊರತು ಅವರಿಗೆ ಮೋಕ್ಷವಿಲ್ಲ. ಬೃಹದಾರಣ್ಯಕ ಭಾಷ್ಯದಲ್ಲಿ ಈ ವಿಷಯವಿದೆ. ''ಯೇಷಾಂ ಬಹಿರುಪಾಸನೇನ ಮುಕ್ತಿಃ ತೇಷಾಮಪಿ

ಹೃದ್ಯುಪಾಸನಂ ಕಿಂಚಿತ್ ಕಾರ್ಯಮೇವ।'' ನ್ಯಾಯವಿವರಣದಲ್ಲೂ ಹೀಗಿದೆ -

ಭಗವಾನ್ ಬಿಂಬದರ್ಶನೇನ್ನೈನಂ ಮೋಚಯತಿ॥

3. ಈ ಸೂತ್ರದಿಂದ ಪೂರ್ವಪಕ್ಷಕ್ಕೆ ಉತ್ತರವೇನೂ ಬಂದಂತಾಗಲಿಲ್ಲ. ಆದರೂ, ಅದಕ್ಕೆ ನೇರವಾದ ಉತ್ತರವನ್ನು ಹಿಂದಿನ ಸೂತ್ರಗಳಲ್ಲೇ ಹೇಳಲಾಗಿದೆ. ಪ್ರಥಮ ಸೂತ್ರದಲ್ಲಿ ಹೇಳಿದಂತೆ ಪರಮಾತ್ಮನ ಧರ್ಮಗಳ ಉಲ್ಲೇಖವಿರುವುದರಿಂದ ಪ್ರಾಣಶಬ್ದದಿಂದ ಅವನೇ ವಾಚ್ಯ. ಜೀವ ಮುಖ್ಯಪ್ರಾಣರ ಧರ್ಮದ ಪ್ರಸ್ತಾವವಿದ್ದರೂ ಅದು ಅವರಿಬ್ಬರ ಅಂತರ್ಯಾಮಿಯಾದ ಪರಮಾತ್ಮನಿಗೇ ಸಲ್ಲುತ್ತದೆ. 'ಹೀಗೆ ಅಂತರ್ಯಾಮಿತಯಾ ಪರಮಾತ್ಮನ ಪ್ರಸ್ತಾವ ಏಕೆ? ಸಾಕ್ಷಾತ್ತಾಗಿ ಅವನನ್ನೇ ಹೇಳಬಹುದಿತ್ತು?' ಎಂಬ ಆಕ್ಷೇಪಕ್ಕೆ ಈ ಸೂತ್ರದಲ್ಲಿ ಹೇಳಿದ ''ಉಪಾಸಾತ್ರೈವಿಧ್ಯಾತ್'' ಎಂಬುದು ಉತ್ತರ.

4. ವಸ್ತುತಃ, ಇಂದ್ರಿಯಗಳ ಸಂವಾದ, ಪ್ರಾಣನ ಗೆಲುವು ಇವು ಮುಖ್ಯಪ್ರಾಣನದೇ ಧರ್ಮಗಳು.

ಉದಾಸೀನೌ ಹಿ ತೌ ಆಸ್ತಾಂ ಕೇಶವಶ್ಚಾಬ್ಜಸಂಭವೌ॥

ಎಂದಂತೆ ಆ ಸಂದರ್ಭದಲ್ಲಿ ಬ್ರಹ್ಮ-ವಿಷ್ಣುಗಳು ತಟಸ್ಥರಾಗಿಯೇ ಇದ್ದರು. ಆದರೂ ಆ ಧರ್ಮಗಳು ಮುಖ್ಯಪ್ರಾಣನ ಅಂತರ್ಯಾಮಿಯಾಗಿ ಪರಮಾತ್ಮನಲ್ಲಿ ಇದ್ದೇ ಇವೆ. ಬಾಹ್ಯರೂಪದಿಂದಷ್ಟೇ ಪರಮಾತ್ಮ ತಟಸ್ಥನಾಗಿದ್ದ.

'ಶತಂ ವರ್ಷಾಣಿ ಅಭ್ಯಾರ್ಚತ್-ದೇಹದೊಳಗೆ ಮುಖ್ಯಪ್ರಾಣನು ಪರಮಾತ್ಮನೊಂದಿಗೆ ನೂರುವರ್ಷ ಇದ್ದನು'. ಇದು ಜೀವಧರ್ಮವೇ ಅಲ್ಲ. ''ತಸ್ಮಾತ್ ಶತಂ ವರ್ಷಾಣಿ ಪುರುಷಾಯುಷೋ ಭವಂತಿ'' ಈ ವಾಕ್ಯದಿಂದ ತಿಳಿಯುವ ನೂರುವರ್ಷದ ಬಾಳು ಮಾತ್ರ ಜೀವಲಿಂಗ. ಆದರೆ ಅದು ಪ್ರಾಣನಲ್ಲಿ ಇದೆ ಎಂದೇನೂ ಹೇಳಿಲ್ಲ. ಹೀಗಾಗಿ ಈ ಲಿಂಗದಿಂದ ಪ್ರಾಣನು ಜೀವ ಎಂದು ತಿಳಿಯಲು ಅವಕಾಶವೇ ಇಲ್ಲ.

ಪ್ರಾಣಲಿಂಗಾದಿಕಂ ಯದ್ಯಪ್ಯವಕಾಶೋಝ್ಝಿತಂ ಸ್ವತಃ।

ತಥಾಪಿ ಅಂತರ್ಯಾಮಿ ಪರತಯಾ ನೇತುಂ ಹಿ ಶಕ್ಯತೇ॥

5. 'ಬ್ರಹ್ಮ ತತಮಂ' ಎಂಬ ಐತರೇಯ ಶ್ರುತಿಗೆ 'ತತ+ತಮಂ' ಎಂದು ವ್ಯಾಖ್ಯಾನ ಮಾಡಿ ''ಸಮಾನೇ ಲೋಪಃ' ಎಂಬ ನಿಯಮದಂತೆ ಒಂದು ತಕಾರ ಲೋಪವಾಗಿದೆ ಎಂದು ತತ್ತ್ವಪ್ರದೀಪದಲ್ಲಿ ಹೇಳಲಾಗಿದೆ. ವಾದಿರಾಜರು ವಿಸ್ತಾರ ಎಂಬ ಅರ್ಥದ 'ತಸ್' ಧಾತುವಿನಿಂದ 'ತಂ' ಎಂಬ ರೂಪವನ್ನು ಮಾಡಿ ''ಅತಿಶಯೇನ ತಂ=ತತಮಂ'' ಎಂದು 'ತಮಪ್' ಪ್ರತ್ಯಯವನ್ನು ಮಾಡಿದ್ದಾರೆ.

6. ಸೂತ್ರಕ್ರಮ - ಪ್ರಥಮ ಸೂತ್ರದಲ್ಲಿ ಪ್ರಾಣ ವಿಷ್ಣು ಎನ್ನಲು ಸಾಧಕಗಳನ್ನು ಹೇಳಲಾಗಿದೆ. ಎರಡನೆಯ ಸೂತ್ರದಲ್ಲಿ ''ಪ್ರಾಣೋ ವಾ ಅಹಂ'' ಎಂಬ ಅಹಂ ಶಬ್ದದ

ಪ್ರಯೋಗ ಬಾಧಕ ಎಂಬ ಸಂಶಯವನ್ನು ಪರಿಹರಿಸಲಾಗಿದೆ. ಹಾಗಾದರೆ 'ಮಯಿ ಪ್ರಾಣಃ' ಎಂದೇ ಹೇಳಬೇಕಾಗಿತ್ತು. ''ಅಹಂ ಪ್ರಾಣಃ'' ಎಂದುದು ಹೇಗೆ? ಎಂಬ ಪ್ರಶ್ನೆಗೆ 'ಅಂತರ್ಯಾಮಿದೃಷ್ಟಿಯಿಂದ' ಹಾಗೆ ಹೇಳಲಾಗಿದೆ ಎಂದು ಉತ್ತರ. ನಾಲ್ಕನೆಯ ಸೂತ್ರದಲ್ಲಿ 'ಸಾಕ್ಷಾತ್ ಪರಮಾತ್ಮನನ್ನೇ ಹೇಳದೆ, ಹೀಗೆ ಅಂತರ್ಯಾಮಿಯಾಗಿ ಅವನನ್ನು ಏಕೆ ಹೇಳಬೇಕು?' ಎಂಬ ಪ್ರಶ್ನೆಗೆ ಉತ್ತರಿಸಲಾಗಿದೆ. ॥ 31 ॥

## ದ್ವೈತದರ್ಶನದಲ್ಲಿ ಸೂತ್ರಾರ್ಥ

### 1. ಓಂ ॥ ಪ್ರಾಣಃ ತಥಾ ಅನುಗಮಾತ್ ॥ ಓಂ

ಇಲ್ಲಿ ತಥಾ ಶಬ್ದ ಉಪಮಾ ಮತ್ತು ಸಮುಚ್ಚಯವನ್ನು ಹೇಳುತ್ತದೆ. ತಥಾ=''ತದ್ವೈತ್ವಂ ಪ್ರಾಣೋ ಅಭವಃ'' ಎಂಬ ತೈತ್ತಿರೀಯ ಶ್ರುತಿಯಂತೆ 'ಮನೋವಾಕ್ ಪ್ರಾಣಃ' ಇತ್ಯಾದಿ ಐತರೇಯ ಶ್ರುತಿಯಲ್ಲೂ ಪ್ರಾಣಃ=ಪ್ರಾಣನೆಂದರೆ ತತ್ತು=ವಿಷ್ಣುವೇ. ಅನುಗಮಾತ್= ಈ ಪ್ರಕರಣದಲ್ಲಿ ಅನೇಕ ಕಡೆ ವಿಷ್ಣುವಾಚಕ ಬ್ರಹ್ಮಪದ, ಅವನ ಅಸಾಧಾರಣ ಧರ್ಮಗಳನ್ನು ಹೇಳಲಾಗಿದೆಯಾದ್ದರಿಂದ.

(ಐತರೇಯೇ ಶ್ರುತಃ ಪ್ರಾಣಃ ಯಥಾ ''ತದ್ವೈ ತ್ವಂ ಪ್ರಾಣಃ'' ಇತ್ಯಯಂ ಬ್ರಹ್ಮ ತಥಾ ಅಯಂ ಚ ತತ್ತು=ಬ್ರಹ್ಮೈವ, ಕುತಃ? ಬ್ರಹ್ಮಶಬ್ದ-ದೇವೋಪಾಸ್ಯತ್ವಾದಿ ತತ್-ಶ್ರುತಿಲಿಂಗಾನಾಂ ಅಸ್ಮಿನ್ ಪ್ರಕರಣೇ ಅನುಗಮಾತ್=ಅನುವೃತ್ತೇಃ, ಅಭ್ಯಾಸಾತ್ ಇತ್ಯರ್ಥಃ।)

### 2. ಓಂ ॥ ನ ವಕ್ತುರಾತ್ಮೋಪದೇಶಾದಿತಿ ಚೇನ್ನ ಅಧ್ಯಾತ್ಮಸಂಬಂಧ ಭೂಮಾ ಹಿ ಅಸ್ಮಿನ್ ॥ ಓಂ

ವಕ್ತುಃ=ಬೃಹತೀ ಸಹಸ್ರವನ್ನು ಪಠಿಸುತ್ತಲಿದ್ದ ವಿಶ್ವಾಮಿತ್ರನಿಗೆ ಇಂದ್ರನು ಆತ್ಮೋಪದೇಶಾತ್='ಪ್ರಾಣೋ ವಾ ಅಹಮಸ್ಮಿ' ಎಂದು ತನ್ನನ್ನೇ ಪ್ರಾಣನೆಂದು ಉಪದೇಶ ಮಾಡಿರುವುದರಿಂದ ಪ್ರಾಣ ವಿಷ್ಣುವಲ್ಲ; ಇತಿ ಚೇನ್ನ=ಇದು ಸರಿಯಲ್ಲ. ಅಸ್ಮಿನ್= ಈ ಪ್ರಕರಣದಲ್ಲಿ, ಅಧ್ಯಾತ್ಮಸಂಬಂಧಭೂಮಾ ಅಧ್ಯಾತ್ಮ=ಶರೀರಗಳ ಸಂಬಂಧಭೂಮಾ= ಸಂಬಂಧ ಬಾಹುಲ್ಯವು, ಅರ್ಥಾತ್, ''ಪ್ರಾಣಃ ತ್ವಂ, ಪ್ರಾಣಃ ಸರ್ವಾಣಿ ಭೂತಾನಿ'' ಎಂದು ಪ್ರಾಣನಿಗೆ ಅನೇಕ ಆತ್ಮರ ಸಂಬಂಧವು ನಿರೂಪಿತವಾಗಿದೆ. (ಇಂದ್ರನು ಪ್ರಾಣನಾದರೆ ಇದು ಅಸಂಗತ) ಅಥವಾ ಅಸ್ಮಿನ್=ಈ ದೇವೇಂದ್ರನಲ್ಲಿ ಅಧ್ಯಾತ್ಮ=ಪರಮಾತ್ಮನ, ಸಂಬಂಧಭೂಮಾ=ಸಾನ್ನಿಧ್ಯಾತಿಶಯವು ಇದೆ. (ಆದರಿಂದಾಗಿ ಇಂದ್ರ ನಾನೇ ಪ್ರಾಣ ಎಂದಿದ್ದಾನೆ.)

(ವಕ್ತುಃ=ಬೃಹತೀಸಹಸ್ರಂ ವಕ್ತುಃ ವಿಶ್ವಾಮಿತ್ರಸ್ಯ ಇಂದ್ರೇಣ ಆತ್ಮನ ಏವ ಪ್ರಾಣತಯಾ ಉಪದೇಶಾತ್ ನ ಪ್ರಾಣೋ ಬ್ರಹ್ಮೇತಿ ಚೇತ್ । ನ ಇತಿ ಶೇಷಃ । ಕುತಃ? ಹಿ=ಯಸ್ಮಾತ್ ಅಸ್ಮಿನ್ ಪ್ರಕರಣೇ ಅಧ್ಯಾತ್ಮಂ=ದೇಹೇಷು, ವಿಷ್ಣು ದೇಹಭೂತ-ಇಂದ್ರವಿಶ್ವಾಮಿತ್ರಾದಿಷು,

ಸಂಬಂಧಭೂಮಾ=ಸಂಬಂಧಬಾಹುಲ್ಯಂ ವ್ಯಪದಿಷ್ಯತೇ ಯತಃ ಅತಃ ಪ್ರಾಣೋ ವಿಷ್ಣುಃ। ಯದ್ವಾ ಅಸ್ಮಿನ್=ಇಂದ್ರೇ ಅಧಿಕಾತ್ಮನಃ ಸಂಬಂಧಭೂಮಾ=ಆವೇಶಬಾಹುಲ್ಯಂ ಹಿ=ಯಸ್ಮಾತ್ ಅಸ್ತಿ ಅತಃ ತದಪೇಕ್ಷಯಾ 'ಪ್ರಾಣೋ ವಾ ಅಹಂ' ಇತ್ಯುಕ್ತಿರಿತ್ಯರ್ಥಃ।)

**3. ಓಂ॥ ಶಾಸ್ತ್ರದೃಷ್ಟ್ಯಾ ತು ಉಪದೇಶೋ ವಾಮದೇವವತ್ ॥ ಓಂ**

'ಮಯಿ ಪ್ರಾಣಃ' ಎನ್ನುವ ಬದಲು ''ಅಹಂ ಪ್ರಾಣಃ = ನಾನೇ ಪ್ರಾಣ'' ಎಂದು ಇಂದ್ರ ಮಾಡಿದ ಉಪದೇಶಃ=ಉಪದೇಶವು ವಾಮದೇವವತ್=''ಅಹಂ ಮನುರಭವಂ ಸೂರ್ಯಶ್ಚ-ನಾನೇ ಮನು-ಸೂರ್ಯ'' ಎಂದು ವಾಮದೇವ ಋಷಿ ಮಾಡಿದ ಉಪದೇಶದಂತೆ ಶಾಸ್ತ್ರದೃಷ್ಟ್ಯಾ=ಅಂತರ್ಯಾಮಿ ವಿವಕ್ಷೆಯಿಂದ.

(ತುಃ ಏವ। ಶಾಸ್ತೀತಿ-ಶಾಸ್ತ್ರಂ=ಅಂತರ್ಯಾಮೀ। ತದ್ದೃಷ್ಟ್ಯೈವ 'ಪ್ರಾಣೋ ವಾ' ಇತ್ಯುಪದೇಶಃ। ನ ತು ತಾದಾತ್ಮ್ಯೇನ। ವಾಮದೇವವತ್=ವಾಮದೇವೋಪದೇಶವತ್। )

**4. ಓಂ॥ ಜೀವ-ಮುಖ್ಯಪ್ರಾಣ ಲಿಂಗಾತ್ ನೇತಿ ಚೇತ್ ನ**
**ಉಪಾಸಾ ತ್ರೈವಿಧ್ಯಾತ್, ಆಶ್ರಿತತ್ವಾತ್, ಇಹ ತದ್ಯೋಗಾತ್ ॥ ಓಂ**

ಈ ಸೂತ್ರದಲ್ಲಿ ''ಪ್ರಾಣಃ ಬ್ರಹ್ಮ'' ಎಂಬುದನ್ನು ''ಶಾಸ್ತ್ರದೃಷ್ಟ್ಯಾ ತೂಪದೇಶಃ'' ಎಂಬುದನ್ನೂ ಅನುವೃತ್ತಿ ಮಾಡಿಕೊಳ್ಳಬೇಕು.

ಜೀವ-ಮುಖ್ಯಪ್ರಾಣಲಿಂಗಾತ್='ತಂ ಶತಂ ವರ್ಷಾಣಿ ಅಭ್ಯಾರ್ಚತ್' ಎಂಬ ಜೀವನ ಧರ್ಮ, ಮುಖ್ಯಪ್ರಾಣನೊಂದಿಗೆ ಇಂದ್ರಿಯಗಳ ಸಂವಾದರೂಪವಾದ ಮುಖ್ಯಪ್ರಾಣನಿಗೆ ಸಂಬಂಧಿಸಿದ ಘಟನೆ ಇವುಗಳಿಂದಾಗಿ ಪ್ರಾಣಶಬ್ದದಿಂದ ವಾಚ್ಯರಾದವರು ಜೀವ ಮತ್ತು ಮುಖ್ಯಪ್ರಾಣರು ಇತಿ ಚೇತ್=ಹೀಗೆಂದರೆ ನ=ಅದು ಸರಿಯಲ್ಲ. ಪ್ರಾಣಃ ಬ್ರಹ್ಮ=ಪ್ರಾಣನೇ ಬ್ರಹ್ಮ. ಜೀವಧರ್ಮ ಮತ್ತು ಪ್ರಾಣಧರ್ಮಗಳನ್ನು ಶಾಸ್ತ್ರದೃಷ್ಟ್ಯಾ=ಅಂತರ್ಯಾಮಿ ವಿವಕ್ಷೆಯಿಂದ ಉಪದೇಶಃ=ಹೇಳಲಾಗಿದೆ. ಅಂತರ್ಯಾಮಿ ಧರ್ಮವನ್ನು ಏಕೆ ಹೇಳಬೇಕು? ಉಪಾಸಾತ್ರೈವಿಧ್ಯಾತ್=ಅಂತಃ, ಬಹಿಃ, ವ್ಯಾಪ್ತಿ ಹೀಗೆ ಮೂರು ವಿಧದ ಬ್ರಹ್ಮೋಪಾಸನೆ ಇರುವುದರಿಂದ, ಇಹ=ಈ ಪ್ರಕರಣದಲ್ಲಿ ಆಶ್ರಿತತ್ವಾತ್=ಆ ಮೂರೂ ವಿಧದ ಉಪಾಸನೆಯನ್ನು ಹೇಳಿರುವುದರಿಂದ. (ಅಂತರ್ಯಾಮಿ ವಿವಕ್ಷಯಾ ಧರ್ಮಗಳನ್ನು ಹೇಳಲಾಗಿದೆ). ಮೂರು ವಿಧದ ಉಪಾಸನೆ ಏಕೆ? ಒಂದೇ ವಿಧದ ಉಪಾಸನೆ ಸಾಲದೆ? ಆದಕ್ಕುತ್ತರ- ತದ್ಯೋಗಾತ್, ತಸ್ಯ, ತ್ರಿವಿಧೋಪಾಸನೆಯು ಅಧಿಕಾರಿ ಭೇದದಿಂದ ಯೋಗಾತ್=ಯುಕ್ತವಾದುದರಿಂದ (ತ್ರಿವಿಧೋಪಾಸನೆಯನ್ನು ಹೇಳಲಾಗಿದೆ.)

(ಪ್ರಾಣೋ ಬ್ರಹ್ಮೇತಿ ವರ್ತತೇ। ನೇತ್ಯನಂತರಂ ಶಾಸ್ತ್ರದೃಷ್ಟ್ಯಾ ತೂಪದೇಶ ಇತಿ ಚ।

ಶತಾಯುಷ್ಟ್ವಾದಿರೂಪ ಜೀವಲಿಂಗಾತ್ ಪ್ರಾಣಸಂವಾದಾದಿ ಮುಖ್ಯಪ್ರಾಣಲಿಂಗಾತ್ ನ ಪ್ರಾಣೋ ಬ್ರಹ್ಮೇತಿ ಚೇನ್ನ। ''ತಂ ಶತಂ'' ಇತ್ಯಾದಿ ಜೀವ ಪ್ರಾಣಾದಿ ಲಿಂಗೋಪದೇಶಃ ತದಂತರ್ಯಾಮಿ ದೃಷ್ಟ್ಯೈವ ಯುಕ್ತಃ । ಕಿಮರ್ಥಾ ಅಂತರ್ಯಾಮ್ಯುಕ್ತಿಃ ಇತ್ಯತ ಉಕ್ತಂ- ಉಪಾಸಾ ಇತ್ಯಾದಿ। ಅಂತಃ - ವ್ಯಾಪ್ತಿ- ಬಹಿಷ್ಟ್ವತ್ವ ಭೇದೇನ ಬ್ರಹ್ಮೋಪಸಾಯಾಃ ತ್ರೈವಿಧ್ಯಾತ್, ಇಹ ಪ್ರಕರಣೇ ತತ್ ತ್ರೈವಿಧ್ಯಸ್ಯ ಆಶ್ರಿತತ್ವಾತ್=ಉಕ್ತತ್ವಾತ್ । ಏಕಯೈವ ಉಪಾಸನಯಾ ಅಲಂ। ಕಿಂ ತ್ರೈವಿಧ್ಯೇನ ಇತ್ಯತ ಉಕ್ತಂ- ತದ್ಯೋಗಾತ್। ತಸ್ಯ= ಉಪಾಸಾ ತ್ರೈವಿಧ್ಯಸ್ಯ ಅಧಿಕಾರಿಭೇದೇನ ಯೋಗಾತ್= ಯುಕ್ತತ್ವಾತ್ ।)

## ಶಾಂಕರಭಾಷ್ಯದಲ್ಲಿ ಸೂತ್ರಗಳ ಅರ್ಥ

**1. ಪ್ರಾಣಸ್ತಥಾ ಅನುಗಮಾತ್ ॥**

ಶಾಂಕರ- ರಾಮಾನುಜಭಾಷ್ಯದಲ್ಲಿ ಈ ಅಧಿಕರಣಕ್ಕೆ ಪ್ರತರ್ದನಾಧಿಕರಣವೆಂದು ಹೆಸರು. ಇಂದ್ರ- ಪ್ರತರ್ದನರ ಸಂವಾದ ಪ್ರಕರಣವು ಬ್ರಹ್ಮಪರ ಎಂದು ಸಾಧಿಸುವುದರಿಂದ ಈ ಹೆಸರನ್ನಿಡಲಾಗಿದೆ.

**ಪೂರ್ವಪಕ್ಷ** - ಕೌಶೀತಕೀ ಬ್ರಾಹ್ಮಣೋಪನಿಷತ್ತಿನಲ್ಲಿ ಪ್ರತರ್ದನನೆಂಬ ಕ್ಷತ್ರಿಯ ಸ್ವರ್ಗಲೋಕವನ್ನು ಆಕ್ರಮಿಸಿದಾಗ ಇಂದ್ರನು ಅವನಿಗೆ ಮಾಡಿದ ಉಪದೇಶದಲ್ಲಿ ಹೀಗಿದೆ- ''ಪ್ರಾಣೋಽಸ್ಮಿ ಪ್ರಜ್ಞಾತ್ಮಾ.... ಮಾಮೇವ ವಿಜಾನೀಹಿ'' ಎಂದು. ಇಲ್ಲಿ ಇಂದ್ರ ತನ್ನನ್ನು ಪ್ರಾಣನೆಂದಿದ್ದಾನೆ. ಆದ್ದರಿಂದ ಇಂದ್ರನೇ ಪ್ರಾಣ. ಅಥವಾ 'ಅಥ ಖಲು ಪ್ರಾಣ ಏವ ಪ್ರಜ್ಞಾತ್ಮಾ ಇದಂ ಶರೀರಂ ಪರಿಗೃಹ್ಯ ಉತ್ಥಾಪಯತಿ' ಎಂದು ಶರೀರಧಾರಣೆಗೆ ಕಾರಣನಾದ ವಾಯುವಿನ ಬಗ್ಗೆ ಹೇಳಿರುವುದರಿಂದ ಅವನೇ ಪ್ರಾಣಶಬ್ದದಿಂದ ವಾಚ್ಯ.

**ಸಿದ್ಧಾಂತ** - ಪ್ರಾಣಃ=ಪ್ರಾಣಶಬ್ದದಿಂದ ವಾಚ್ಯನಾದವನು ಬ್ರಹ್ಮನೇ. ತಥಾನುಗಮಾತ್, ತಥಾ=ಬ್ರಹ್ಮ ಪರವಾಗಿ, ಅನುಗಮಾತ್=ಪದಗಳಿಗೆ ಅನ್ವಯವು ತಿಳಿಯುತ್ತಿರುವುದರಿಂದ.

ಈ ಪ್ರಕರಣದ ಆರಂಭದಲ್ಲಿ ಪ್ರತರ್ದನ ಇಂದ್ರನಿಗೆ 'ಯಂ ತ್ವಂ ಮನುಷ್ಯಾಯ ಹಿತತಮಂ ಮನ್ಯಸೇ' ಮನುಷ್ಯನಿಗೆ ಹಿತವಾದುದನ್ನು ಹೇಳು- ಎಂದಿದ್ದಾನೆ. ಅದಕ್ಕೆ ಉತ್ತರವಾಗಿ 'ತಾನೇ ಪ್ರಾಣ' ಎಂಬ ಉಪದೇಶವನ್ನು ಇಂದ್ರ ಮಾಡಿದ್ದಾನೆ. ಮನುಷ್ಯರಿಗೆ ಹಿತವಾದುದು ಬ್ರಹ್ಮಜ್ಞಾನ. ಅದರಿಂದಲೇ ಕರ್ಮಕ್ಷಯವಾಗಿ ದುಃಖನಿವೃತ್ತಿಯಾಗುತ್ತದೆ. ಆದ್ದರಿಂದ ಇಂದ್ರ ಉಪದೇಶಿಸಿದ ಪ್ರಾಣ ಬ್ರಹ್ಮನೇ. ಇದರಂತೆ, ಈ ಪ್ರಕರಣದ ಕೊನೆಯಲ್ಲಿ 'ಆನಂದೋಽಜರೋಽಮೃತಃ' ಎಂದು ಆನಂದರೂಪನಾದ ಬ್ರಹ್ಮನ ಪ್ರಸ್ತಾವ ಇದೆ. ಹೀಗೆ ಉಪಕ್ರಮೋಪಸಂಹಾರಗಳಿಂದ ಈ ಪ್ರಕರಣ ಬ್ರಹ್ಮಪರವೆಂದು ತಿಳಿಯುತ್ತಿರುವುದರಿಂದ ಪ್ರಾಣ ಬ್ರಹ್ಮನೇ.

**2. ನ ವಕ್ತುರಾತ್ಮೋಪದೇಶಾದಿತಿ ಚೇತ್ ಅಧ್ಯಾತ್ಮಸಂಬಂಧಭೂಮಾ ಹ್ಯಸ್ಮಿನ್ ॥**

ವಕ್ತುಃ=ಉಪದೇಶ ಮಾಡುತ್ತಿರುವ ಇಂದ್ರನ, ಆತ್ಮೋಪದೇಶಾತ್='ಪ್ರಾಣೋಸ್ಮಿ ಪ್ರಜ್ಞಾತ್ಮಾ' ತಾನೇ ಪ್ರಾಣಸ್ವರೂಪ ಎಂಬ ಉಪದೇಶವಿರುವುದರಿಂದ, ಪ್ರಾಣ ಬ್ರಹ್ಮನಲ್ಲ, ಇತಿ ಚೇತ್=ಹೀಗೆಂದರೆ, ನ=ಅದು ಸರಿಯಲ್ಲ. ಅಸ್ಮಿನ್=ಈ ಪ್ರಕರಣದಲ್ಲಿ, ಅಧ್ಯಾತ್ಮ ಸಂಬಂಧ ಭೂಮಾ, ಅಧ್ಯಾತ್ಮ=(ಆತ್ಮನಿ ದೇಹೇ ಅಧಿಗತಃ ಅಧ್ಯಾತ್ಮಂ ಪ್ರತ್ಯಗಾತ್ಮಾ) ಶುದ್ಧಾತ್ಮನಿಗೆ ಸಂಬಂಧ=(ಸಃ ಸಂಬಂಧ್ಯತೇ ಯೈಃ) ಮಾತ್ರ ಸಂಬಂಧಿಸಿದ, ಇಂದ್ರನಲ್ಲಿ ಅಸಂಭಾವಿತವಾದ ಧರ್ಮಗಳ, ಭೂಮಾ=ಬಾಹುಲ್ಯವು ಇದೆ. ಈ ಪ್ರಕರಣದಲ್ಲಿ ಇಂದ್ರಾದಿಗಳಲ್ಲಿ ಅಸಂಭಾವಿತವಾದ, ಪ್ರತ್ಯಗಾತ್ಮನಲ್ಲೇ ಇರಬಹುದಾದ ಅನೇಕ ಧರ್ಮಗಳನ್ನು ಹೇಳಲಾಗಿದೆ.

ಅ) 'ಯಾವದ್ಧಿ ಅಸ್ಮಿನ್ ಶರೀರೇ ವಸತಿ ತಾವದಾಯುಃ - ಈ ಶರೀರದಲ್ಲಿ ಪ್ರಾಣ ಇರುವವರೆಗೆ ಆಯುಷ್ಯ' ಹೀಗೆ ಆಯುಷ್ಯದಾನ ಮತ್ತು ಆಯುಷ್ಯ ಉಪಸಂಹಾರದ ಸ್ವಾತಂತ್ರ್ಯ.

ಆ) 'ತದ್ಯಥಾ ರಥಸ್ಯಾರೇಷು ನೇಮಿಃ....ಪ್ರಾಣೇ ಅರ್ಪಿತಾಃ - ವಿಷಯ ಮತ್ತು ಇಂದ್ರಿಯಗಳಿಗೆ ಪ್ರಾಣನಲ್ಲಿ ಕಲ್ಪಿತತ್ವ.

ಇ) 'ಅಯಮಾತ್ಮಾ ಬ್ರಹ್ಮ ಸರ್ವಾನುಭೂಃ- ಇವನೇ ಸರ್ವಜ್ಞನಾದ ಬ್ರಹ್ಮ.

ಹೀಗೆ ಶುದ್ಧಾತ್ಮನಿಗೆ ಸಂಬಂಧಿಸಿದ ಅನೇಕ ಧರ್ಮಗಳನ್ನು ಹೇಳಿರುವುದರಿಂದ ಬ್ರಹ್ಮನೇ ಪ್ರಾಣ.

**3. ಶಾಸ್ತ್ರದೃಷ್ಟ್ಯಾ ತೂಪದೇಶೋ ವಾಮದೇವವತ್ ।**

ಉಪದೇಶಃ=''ಮಾಮೇವ ವಿಜಾನೀಹಿ'' ಎಂಬ ಇಂದ್ರನ ಉಪದೇಶ, ವಾಮದೇವವತ್=ವಾಮದೇವ ಋಷಿ ತನ್ನನ್ನೇ ಮನು-ಸೂರ್ಯ ಎಂದು ಉಪದೇಶಿಸಿದಂತೆ. ಇಂದ್ರನು ತನ್ನ ಬ್ರಹ್ಮಭಾವವನ್ನು ಆರ್ಷದೃಷ್ಟಿಯಿಂದ ತಿಳಿದುದರಿಂದ ಶಾಸ್ತ್ರದೃಷ್ಟ್ಯಾ=ಶಾಸ್ತ್ರತಾತ್ಪರ್ಯಕ್ಕೆ ಅನುಗುಣವಾದುದು.

'ತದ್ಯೋಹ ದೇವಾನಾಂ ಪ್ರತ್ಯಬುಧ್ಯತ ಸ ಏವ ತದಭವತ್' ಎಂಬ ಬೃಹದಾರಣ್ಯಕ ಶ್ರುತಿ ಜ್ಞಾನಿಗಳಿಗೆ ಬ್ರಹ್ಮೈಕ್ಯವನ್ನು ಹೇಳುತ್ತದೆ. ಜ್ಞಾನಿಯಾದ ಇಂದ್ರ, ಶಾಸ್ತ್ರ ಹೇಳಿದಂತೆ ಬ್ರಹ್ಮೈಕ್ಯವನ್ನು ತಿಳಿದು 'ನಾನೇ ಪ್ರಾಣ' ಎಂದಿದ್ದಾನೆ. ಆದ್ದರಿಂದ ಪ್ರಾಣ ಬ್ರಹ್ಮನೇ ಆದರೂ ಅವನ ಅಭೇದ ಇಂದ್ರನಿಗೆ ಅಯುಕ್ತವಲ್ಲ.

**4. ಜೀವ ಮುಖ್ಯಪ್ರಾಣ ಲಿಂಗಾತ್ ನೇತಿ ಚೇನ್ನ**

**ಉಪಾಸಾ ತ್ರೈವಿಧ್ಯಾದ್ ಆಶ್ರಿತತ್ವಾದ್ ಇಹ ತದ್ಯೋಗಾತ್ ॥**

''ನ ವಾಚಂ ವಿಜಿಜ್ಞಾಸೀತ ವಕ್ತಾರಂ ಹಿ ವಿದ್ಯಾತ್ - ವಾಗಿಂದ್ರಿಯದ ಉಪಾಸನೆ ಮಾಡಬಾರದು, ವಕ್ತೃವಾದ ಜೀವಾತ್ಮನನ್ನೇ ಉಪಾಸಿಸಬೇಕು'' ಇದು ಜೀವನ ಲಿಂಗ.

''ಅಥ ಖಲು ಪ್ರಾಣ ಏವ ಪ್ರಜ್ಞಾತ್ಮಾ ಇದಂ ಶರೀರಂ ಪರಿಗೃಹ್ಯ ಉತ್ಥಾಪಯತಿ - ಪ್ರಾಣನೇ ಈ ಶರೀರಕ್ಕೆ ಉತ್ಥಾಪಕ'' ಇದು ಮುಖ್ಯಪ್ರಾಣನ ಲಿಂಗ. ಹೀಗೆ ಜೀವ ಮುಖ್ಯಪ್ರಾಣರ ಪ್ರಸ್ತಾಪವಿರುವುದರಿಂದ ಈ ಪ್ರಕರಣದಲ್ಲಿ ಹೇಳಿದ ಪ್ರಾಣರು ಇವರಿಬ್ಬರು ಎನ್ನಬಾರದು. ಹೀಗೆ ಹೇಳಿದರೆ, ಒಂದೇ ಪ್ರಕರಣದಲ್ಲಿ ಬ್ರಹ್ಮ, ಪ್ರಾಣ, ಜೀವ ಈ ಮೂವರ ಉಪಾಸನೆಯನ್ನು ಹೇಳಿದಂತಾದೀತು. ಒಂದೇ ಪ್ರಕರಣದಲ್ಲಿ ಮೂವರ ಉಪಾಸನೆಯನ್ನು ಹೇಳುವುದು ಉಚಿತವಲ್ಲ. ಆದ್ದರಿಂದ ಉಪಕ್ರಮೋಪಸಂಹಾರದಲ್ಲಿ ಬ್ರಹ್ಮಗುಣಗಳ ಪ್ರಸ್ತಾವ ಇರುವುದರಿಂದ ಪ್ರಾಣ ಬ್ರಹ್ಮನೇ. ಆಶ್ರಿತತ್ವಾತ್='ಅತ ಏವ ಪ್ರಾಣಃ' ಎಂಬಲ್ಲೂ ಪ್ರಾಣ ಬ್ರಹ್ಮನೇ ಎಂದು ಪ್ರಾಣಶಬ್ದಕ್ಕೆ ಬ್ರಹ್ಮಾರ್ಥಕತ್ವವನ್ನು ಹೇಳಲಾಗಿದೆ.

ಇಹ ತದ್ಯೋಗಾತ್=ಇಲ್ಲೂ ಹೇಳಲಾದ ಬ್ರಹ್ಮಧರ್ಮಗಳು ಪ್ರಾಣನಲ್ಲೇ ಹೊಂದುತ್ತವೆ. ಆದ್ದರಿಂದ ಪ್ರಾಣ ಬ್ರಹ್ಮ.

ಜೀವಧಾರಣೆ ಪ್ರಧಾನವಾಗಿ ಬ್ರಹ್ಮನದೇ ಧರ್ಮ. ಜೀವನೂ ಬ್ರಹ್ಮನೇ ಆದುದರಿಂದ ಜೀವಲಿಂಗವನ್ನೂ ಬ್ರಹ್ಮನಲ್ಲೇ ಕೂಡಿಸಬಹುದು. ಹೀಗೆ ಜೀವಲಿಂಗ, ಪ್ರಾಣಲಿಂಗಗಳು ಪ್ರಾಣ ಬ್ರಹ್ಮನೆನ್ನಲು ಬಾಧಕಗಳಲ್ಲ.

## ಚಂದ್ರಿಕಾದಲ್ಲಿ ಮಾಡಿರುವ ವಿಮರ್ಶೆ

1. ಇಲ್ಲಿ ಹೇಳಿದ ಯಾವ ಧರ್ಮಗಳೂ ನಿರ್ವಿಶೇಷ ಬ್ರಹ್ಮನಲ್ಲಿ ಇಲ್ಲ. ಆದಕಾರಣ ಈ ಪ್ರಕರಣವು ಬ್ರಹ್ಮಪರ ಎಂದು ಅದ್ವೈತವಾದದಲ್ಲಿ ಸಮರ್ಥಿಸಲಾಗದು.

2. ಎರಡನೆಯ ಸೂತ್ರದಲ್ಲಿ 'ಆತ್ಮೋಪದೇಶಾತ್' ಎಂದಿಷ್ಟೇ ಸಾಕು. 'ವಕ್ತುಃ' ಎಂಬ ಪದ ವ್ಯರ್ಥ. ನಮ್ಮ ವ್ಯಾಖ್ಯಾನದಲ್ಲಿ 'ವಕ್ತುಃ' ಎಂದರೆ ಬೃಹತೀಸಹಸ್ರವನ್ನು ಪಠಿಸುವ ವಿಶ್ವಾಮಿತ್ರನಿಗೆ ಎಂದರ್ಥ. 'ಇಂದ್ರ ವಿಶ್ವಾಮಿತ್ರನಿಗೆ ಸುಳ್ಳು ಹೇಳಲಾರ' ಎಂಬುದನ್ನು ತಿಳಿಸಲು ಈ ಪದ ಸಾರ್ಥಕ. ಅದ್ವೈತ ದರ್ಶನದಲ್ಲಿ ವಕ್ತುಃ ಎಂದರೆ ಇಂದ್ರನಿಗೆ ಎಂದೇ ಅರ್ಥ. 'ಆತ್ಮೋಪದೇಶಾತ್' (ಇಂದ್ರನ ಉಪದೇಶದಿಂದ) ಎಂಬ ಪದದಿಂದಲೇ ಈ ಅರ್ಥ ಸಿಗುವಾಗ ವಕ್ತುಃ ಎಂಬುದು ವ್ಯರ್ಥ.

3. 'ಶಾಸ್ತ್ರದೃಷ್ಟ್ಯಾತೂಪದೇಶಃ' ಎಂಬ ಸೂತ್ರಾರ್ಥವೂ ಸರಿಯಲ್ಲ. ಇಂದ್ರ 'ಮಾಮೇವ ವಿಜಾನೀಹಿ-ನಾನೇ ಪ್ರಾಣನೆಂದು ತಿಳಿ' ಎಂದಿದ್ದಾನೆ. ಅದ್ವೈತದರ್ಶನದಲ್ಲಿ ನಾನು ಎಂದರೆ ಅಂತಃಕರಣವಿಶಿಷ್ಟ ಆತ್ಮ. ಅವನಿಗೆ ಬ್ರಹ್ಮನ ಅಭೇದವಿಲ್ಲ. 'ಮಾಂ' ಎಂಬ ಪದಕ್ಕೆ ಚಿನ್ಮಾತ್ರದಲ್ಲಿ ಲಕ್ಷಣಾ ಮಾಡಿದರೂ ''ವಿಜಾನೀಹಿ'' ಎಂದು ಜ್ಞಾನಕರ್ಮತ್ವ ಅಯುಕ್ತ. ಶುದ್ಧ ಚೇತನ ಸ್ವಪ್ರಕಾಶನಾದುದರಿಂದ ಜ್ಞಾನಕರ್ಮನಲ್ಲ.

## ರಾಮಾನುಜಭಾಷ್ಯದಲ್ಲಿ ಸೂತ್ರಗಳ ಅರ್ಥ

**1. ಪ್ರಾಣಸ್ತಥಾ ಅನುಗಮಾತ್ ।** ಕೌಷೀತಕೀ ಬ್ರಾಹ್ಮಣದಲ್ಲಿ ಪ್ರತರ್ದನನೆಂಬ ರಾಜ

ಸ್ವರ್ಗಕ್ಕೆ ದಾಳಿ ಮಾಡಿದಾಗ ಇಂದ್ರ ಕೇಳಿದ - 'ವರಂ ವೃಣೀಶ್ವ-ನನ್ನಿಂದ ವರ ಕೇಳು' ಎಂದು. ಪ್ರತರ್ದನ - 'ಮನುಷ್ಯರಿಗೆ ಹಿತವಾಗುವ ವರವನ್ನು ನೀನೇ ನನಗೆ ನೀಡು' ಎಂದ. ಆಗ ಇಂದ್ರ 'ಪ್ರಾಣೋಸ್ಮಿ ಪ್ರಜ್ಞಾತ್ಮಾ' ಎಂದು ತಾನೇ ಪ್ರಾಣನೆಂದು ಉಪದೇಶಿಸಿದ. ಇದರಿಂದ ಇಂದ್ರನೇ ಪ್ರಾಣನೆಂಬುದು ಸ್ಪಷ್ಟವಾಗುತ್ತದೆ. ತನ್ನನ್ನು ಪ್ರಾಣನೆಂದು ಉಪಾಸನೆ ಮಾಡುವುದು ಜೀವಲೋಕಕ್ಕೆ 'ಹಿತತಮ- ಮೋಕ್ಷ ಪ್ರಾಪ್ತಿಕಾರಣ' ಎಂದಿರುವುದರಿಂದ ಇಂದ್ರನೇ ಮೋಕ್ಷದಾತ, ಜಗತ್ಕಾರಣ ಎಂದಂತಾಗುತ್ತದೆ. ಅದನ್ನು ನಿರಾಕರಿಸಲು ಈ ಸೂತ್ರವಿದೆ.

'ಸ ಏಷ ಪ್ರಾಣಃ ಏವ ಪ್ರಜ್ಞಾತ್ಮಾ ಆನಂದೋಽಜರೋಽಮೃತ್ಯುಃ' ಎಂದು ಪ್ರಾಣ ಶಬ್ದವಾಚ್ಯನಾದವನನ್ನು 'ಆನಂದಃ ಅಜರಃ' ಎಂದು ಪರಮಾತ್ಮವಾಚಕ ಶಬ್ದದೊಂದಿಗೆ ಪರಾಮರ್ಶ ಮಾಡಿರುವುದರಿಂದ ಬ್ರಹ್ಮನೇ ಇಲ್ಲಿ ಪ್ರಾಣ. (ಅನುಗಮಃ= ಪೂರ್ವವಾಕ್ಯ ಪ್ರಕೃತಸ್ಯ ಉತ್ತರವಾಕ್ಯಸಂಬಂಧಃ)

ಇಂದ್ರಪ್ರಾಣಪದೋದ್ದಿಷ್ಟಃ ಇಂದ್ರಾತ್ಮಾ ಬ್ರಹ್ಮ ಚೇಷ್ಯತೇ ।
ಆನಂದಾಮೃತಶಬ್ದಾದ್ಯೈಃ ಉಪಸಂಹಾರದರ್ಶನಾತ್ ॥

**2. ನ ವಕ್ತುರಾತ್ಮೋಪದೇಶಾದಿತಿ ಚೇತ್ ಅಧ್ಯಾತ್ಮ ಸಂಬಂಧ ಭೂಮಾ ಹ್ಯಸ್ಮಿನ್ ॥**

ಇಂದ್ರ ''ಪ್ರಾಣೋಽಸ್ಮಿ ಪ್ರಜ್ಞಾತ್ಮಾ' ಎಂದು ತನ್ನನ್ನೇ ಪ್ರಾಣನೆಂದುದರಿಂದ ದೇವೇಂದ್ರನೇ ಪ್ರಾಣ ಎನ್ನಕೂಡದು. ಈ ಪ್ರಕರಣದಲ್ಲಿ ಚೇತನ ಅಚೇತನಗಳ ಅನೇಕ ಸಂಬಂಧವು ಪ್ರಾಣನಲ್ಲಿ ಹೇಳಲ್ಪಟ್ಟಿದೆ. ಅದು ಪರಮಾತ್ಮನಲ್ಲೇ ಇರಲು ಸಾಧ್ಯ.

'ಏತಾಃ ಭೂತಮಾತ್ರಾಃ ಪ್ರಜ್ಞಾಮಾತ್ರಾಸು ಅರ್ಪಿತಾಃ ।
ಪ್ರಜ್ಞಾಮಾತ್ರಾಃ ಪ್ರಾಣೇ ಅರ್ಪಿತಾಃ''

'ಜಡವಸ್ತುಗಳು ಚೇತನವನ್ನು ಆಶ್ರಯಿಸಿವೆ. ಚೇತನಗಳು ಪ್ರಾಣನನ್ನು ಆಶ್ರಯಿಸಿವೆ' ಹೀಗೆ ಪ್ರಾಣನಿಗೆ ಚೇತನಾಚೇತನಾಶ್ರಯತ್ವವನ್ನು ಹೇಳಲಾಗಿದೆ. ಆದ್ದರಿಂದ ಪ್ರಾಣನೆಂದರೆ ಬ್ರಹ್ಮನೆ. (ಆತ್ಮನಿ ಯಃ ಸಂಬಂಧಃ ಸಃ= ಅಧ್ಯಾತ್ಮ ಸಂಬಂಧಃ। ತಸ್ಯ ಭೂಮಾ= ಭೂಯಸ್ತ್ವಂ)

ಅಥವಾ, ಪರಮಾತ್ಮನಲ್ಲೇ ಅಸಾಧಾರಣವಾದ ಅನೇಕ ಧರ್ಮಗಳನ್ನು ಈ ಪ್ರಕರಣದಲ್ಲಿ ಹೇಳಲಾಗಿದೆ. ಆದ್ದರಿಂದ ಪ್ರಾಣ ಬ್ರಹ್ಮ. (ಪರಮಾತ್ಮಾಸಾಧಾರಣ ಧರ್ಮಸಂಬಂಧಃ- ಅಧ್ಯಾತ್ಮ ಸಂಬಂಧಃ)

**3. ಶಾಸ್ತ್ರದೃಷ್ಟ್ಯಾ ತೂಪದೇಶಃ ವಾಮದೇವವತ್ ।**

'ತಾನೇ ಪ್ರಾಣ' ಎಂಬ ಇಂದ್ರನ ಉಪದೇಶ ಶಾಸ್ತ್ರದೃಷ್ಟ್ಯಾ='ಸರ್ವಾತ್ಮಾ' 'ತತ್ವಮಸಿ' ಇತ್ಯಾದಿ ಶಾಸ್ತ್ರ ತಿಳಿಸುವಂತೆ ಜೀವಪರಮಾತ್ಮರಿಗೆ ಶರೀರ–ಶರೀರಿ ಸಂಬಂಧ ನಿಮಿತ್ತ. ವಾಮದೇವ 'ತಾನೇ ಮನು ಸೂರ್ಯ' ಎಂದಂತೆ.

ಪರಮಾತ್ಮನಿಗೆ ಇಂದ್ರಾದಿಗಳು ಶರೀರ. ಶರೀರವಾಚಕ ಶಬ್ದಗಳನ್ನು ಆತ್ಮನಲ್ಲೂ ಪ್ರಯೋಗಿಸಬಹುದು. ಹೀಗಾಗಿ ಇಂದ್ರನೆಂದರೆ ಇಂದ್ರನೊಳಗಿರುವ ಪರಮಾತ್ಮ. ಇಂದ್ರ ತನ್ನನ್ನು 'ಅಹಂ, ಮಾಂ' ಎಂದು ಕರೆದರೆ ಆ 'ಅಹಂ' ಅವನೊಳಗಿರುವ ಬ್ರಹ್ಮ. ಅವನೇ ಪ್ರಾಣ.

ಜಗಚ್ಛರೀರಂ ಬ್ರಹ್ಮೇತಿ ಶಾಸ್ತ್ರಜ್ಞಾನಾತ್ತು ಚೋದನಾ।
ವಾಮದೇವಾದಿವಚ್ಚಾತ್ರ ಮಾಮುಪಾಸ್ವೇತಿ ವಜ್ರಿಣಃ॥

**4. ಜೀವಮುಖ್ಯಪ್ರಾಣಲಿಂಗಾತ್ ನೇತಿ ಚೇನ್ನ।**
**ಉಪಾಸಾತ್ರೈವಿಧ್ಯಾತ್ ಆಶ್ರಿತತ್ವಾತ್ ಇಹ ತದ್ಯೋಗಾತ್॥**

ಇಲ್ಲಿ ಜೀವಾತ್ಮನ ಹಾಗೂ ಪ್ರಾಣನ ಲಿಂಗಗಳಿದ್ದರೂ ಅವರು ಪ್ರಾಣ ಶಬ್ದವಾಚ್ಯರಲ್ಲ. ಸ್ವರೂಪೋಪಾಸನೆ, ಭೋಕ್ತೃಶರೀರಿತಯಾ ಉಪಾಸನೆ, ಭೋಗ್ಯಶರೀರಿತಯಾ ಉಪಾಸನೆ, ಹೀಗೆ ಬ್ರಹ್ಮನ ಉಪಾಸನೆ ತ್ರಿವಿಧವಾಗಿದೆ. ಈ ರೀತಿಯ ಉಪಾಸನಾತ್ರೈವಿಧ್ಯ ತೈತ್ತಿರೀಯೋಪನಿಷತ್ತಿನಲ್ಲಿದೆ.

1. 'ಸತ್ಯಂ ಜ್ಞಾನಂ ಅನಂತಂ' ಎಂದು ಬ್ರಹ್ಮಸ್ವರೂಪಚಿಂತನೆ.

2. 'ತತ್ ಸೃಷ್ಟ್ವಾ ತದೇವಾನುಪ್ರಾವಿಶತ್... ವಿಜ್ಞಾನಂ ಚ ಅವಿಜ್ಞಾನಂ ಚ' ಎಂದು ಚೇತನಗಳು ಬ್ರಹ್ಮನ ಶರೀರ ಎಂದು ಉಪಾಸನೆ.

3. 'ಸತ್ಯಂ ಚಾನೃತಂ ಚ ಸತ್ಯಮಭವತ್' ಎಂದು ಭೋಗ್ಯವಾದ ಪ್ರಪಂಚವೇ ಬ್ರಹ್ಮನ ಶರೀರ ಎಂಬ ಉಪಾಸನೆ. ಹೀಗೆ ಮೂರು ಉಪಾಸನೆಗಳನ್ನು ಅಲ್ಲಿ ಹೇಳಲಾಗಿದೆ. ಇಹ ತದ್ಯೋಗಾತ್=ಕೌಶೀತಕೀ ಬ್ರಾಹ್ಮಣದಲ್ಲೂ ಆ ತ್ರಿವಿಧೋಪಾಸನೆಯ ಪ್ರಸ್ತಾಪ ಇದೆ-

1. 'ಆನಂದೋಽಜರೋಽಮೃತಃ ಎಂದು ಸ್ವರೂಪೋಪಾಸನೆ.

2. 'ಪ್ರಾಣೋಽಸ್ಮಿ' ಎಂದು ಅಚಿತ್ ಶರೀರಕೋಪಾಸನೆ.

3. 'ಮಾಂ...ಉಪಾಸ್ವ'' ಎಂದು ಚಿತ್ (ಇಂದ್ರ) ಶರೀರಕೋಪಾಸನೆ'. ಆದ್ದರಿಂದ ಪ್ರಾಣನೆಂದರೆ ಬ್ರಹ್ಮ.

ಇಂದ್ರಜೀವ ಪ್ರಾಣಲಿಂಗಾತ್ ನಾತ್ರ ಬ್ರಹ್ಮೇತಿ ಚೇನ್ನ ಹಿ।
ಅನ್ಯತ್ರೋಪಾಸ್ತಿತ್ರೈವಿಧ್ಯಾತ್ ತಥಾಖ್ಯಾನಮಿಹಾಪಿ ಹಿ॥

## ಚಂದ್ರಿಕಾದಲ್ಲಿ ಮಾಡಿರುವ ವಿಮರ್ಶೆ

ರಾಮಾನುಜದರ್ಶನದಲ್ಲಿ 'ಪ್ರಾಣ ಇಂದ್ರ' ಎಂದೇ ಪೂರ್ವಪಕ್ಷ. ಹಾಗಿದ್ದ ಮೇಲೆ ''ಜೀವ ಮುಖ್ಯಪ್ರಾಣ ಲಿಂಗಾತ್'' ಎಂಬ ಸೂತ್ರದಲ್ಲಿ ಜೀವಪದ ಅಸ್ವರಸ. ಜೀವನೆಂದರೆ

ಇಂದ್ರನೆಂಬ ಜೀವ ವಿಶೇಷ ಎಂದರ್ಥವಾದರೆ 'ನ ವಕ್ತುಃ ಆತ್ಮೋಪದೇಶಾತ್' ಎಂಬ ಸೂತ್ರ ವ್ಯರ್ಥ. ಅಲ್ಲಿ ವಕ್ತಾ=ಇಂದ್ರ. ಅವನ ಉಪದೇಶ- 'ನಾನೇ ಪ್ರಾಣ, ನನ್ನನ್ನು ಉಪಾಸನೆ ಮಾಡು' ಎಂದು. ಇದೂ ಜೀವಲಿಂಗವಾದುದರಿಂದ 'ಜೀವ ಮುಖ್ಯಪ್ರಾಣಲಿಂಗಾತ್' ಎಂದೇ ಸಂಗೃಹೀತವಾದ ಮೇಲೆ 'ಆತ್ಮೋಪದೇಶಾತ್' ಎಂದು ಪುನಃ ಪ್ರತ್ಯೇಕ ಆಕ್ಷೇಪ-ಸಮಾಧಾನ ವ್ಯರ್ಥ.

ಶರೀರವಾಚಕ ಶಬ್ದಗಳು ಶರೀರಿವಾಚಕವೂ ಆಗುತ್ತವೆ ಎಂಬುದು 'ಶಾಸ್ತ್ರದೃಷ್ಟಿ' ಎಂದು ಹೇಳಲಾಗಿದೆ. ಆದರೆ ಇದು ಲೋಕದೃಷ್ಟಿಯೂ ಆಗಿದೆ. ಲೋಕದಲ್ಲೂ 'ನಾನು ಬ್ರಾಹ್ಮಣ' ಎಂದು ಶರೀರವಾಚಕ ಪದವನ್ನು ಶರೀರಿಯಲ್ಲಿ ಪ್ರಯೋಗಿಸಲಾಗುತ್ತದೆ.

ಶಾಂಕರ-ರಾಮಾನುಜ ಭಾಷ್ಯಗಳಲ್ಲಿ ಶಾಸ್ತ್ರಪದಕ್ಕೆ ವೇದಾದಿ ಶಾಸ್ತ್ರಗಳು ಎಂದರ್ಥ. ಮಾಧ್ವ ಭಾಷ್ಯದಲ್ಲಿ ಶಾಸ್ತ್ರ ಪದಕ್ಕೆ ಶಾಸಕ ಪರಮಾತ್ಮ-ಅಂತರ್ಯಾಮಿ ಎಂದರ್ಥ. ಇದು ಆಚಾರ್ಯರ ಭಾಷ್ಯದ ವಿಶೇಷ.

**ಇಲ್ಲಿಗೆ ಪಾದಾಂತ್ಯ ಪ್ರಾಣಾಧಿಕರಣ ಮುಗಿಯಿತು.**

**ಇಲ್ಲಿಗೆ ಬ್ರಹ್ಮಸೂತ್ರಭಾಷ್ಯದ ಮೊದಲ ಅಧ್ಯಾಯದ ಮೊದಲಪಾದ ಮುಗಿಯಿತು.**

ಶ್ರೀಮದಾನಂದತೀರ್ಥರು ರಚಿಸಿರುವ

# ಬ್ರಹ್ಮಸೂತ್ರ ಭಾಷ್ಯ

## ಮೊದಲನೆಯ ಅಧ್ಯಾಯ

## ಎರಡನೆಯ ಪಾದ

## ಸರ್ವಗತತ್ವಾಧಿಕರಣ - 1

॥ ಹರಿಃ ಓಂ ॥

ಲಿಂಗಾತ್ಮಕಾನಾಂ ಶಬ್ದಾನಾಂ ವಿಷ್ಣೌ ಪ್ರವೃತ್ತಿಂ ದರ್ಶಯತಿ ಅಸ್ಮಿನ್ ಪಾದೇ ಪ್ರಾಧಾನ್ಯೇನ।

'ಬ್ರಹ್ಮ ತತಮಂ' ಇತಿ ಸರ್ವಗತತ್ವಮುಕ್ತಂ ವಿಷ್ಣೋಃ । ತಚ್ಚ ''ತಸ್ಯೈತಸ್ಯಾಸೌ ಆದಿತ್ಯೋ ರಸಃ'' (ಐ.ಆ.3.2.3) ಇತ್ಯಾದಿನಾ ಆದಿತ್ಯಸ್ಯ ಪ್ರತೀಯತೇ । ಅತೋಽಬ್ರವೀತ್-

ಓಂ ॥ ಸರ್ವತ್ರ ಪ್ರಸಿದ್ಧೋಪದೇಶಾತ್ ॥ ಓಂ

'ಸ ಯಶ್ಚಾಯಂ ಅಶರೀರಃ ಪ್ರಜ್ಞಾತ್ಮಾ' (ಐ.ಆ.3.2.4)

ಇತ್ಯಾದಿನಾ ಸರ್ವತ್ರ ಉಚ್ಯಮಾನೋ ನಾರಾಯಣ ಏವ।

'ತದೇವ ಬ್ರಹ್ಮ ಪರಮಂ ಕವೀನಾಮ್' (ಮಹಾನಾ. 1-6)

'ಪರಮಂ ಯೋ ಮಹದ್ ಬ್ರಹ್ಮ' (ಭಾ.)

**ವಾಸುದೇವಾತ್ ಪರಃ ಕೋ ನು ಬ್ರಹ್ಮಶಬ್ದೋದಿತೋ ಭವೇತ್ ।**

**ಸ ಹಿ ಸರ್ವಗುಣೈಃ ಪೂರ್ಣಃ ತದನ್ಯೇ ತೂಪಚಾರತಃ ॥**

**ಇತಿ ತಸ್ಮಿನ್ನೇವ ಪ್ರಸಿದ್ಧಬ್ರಹ್ಮಶಬ್ದೋಪದೇಶಾತ್ ॥ 1 ॥**

ಲಿಂಗಾತ್ಮಕ ಶಬ್ದಗಳು ವಿಷ್ಣುವಾಚಕಗಳು ಎನ್ನುವುದನ್ನು ಮುಖ್ಯವಾಗಿ ಈ ಪಾದದಲ್ಲಿ ತೋರಿಸಿಕೊಡಲಾಗಿದೆ.

ಐತರೇಯೋಪನಿಷತ್ತಿನಲ್ಲಿ ''ಬ್ರಹ್ಮ ತತಮಂ'' ಎಂದು ವಿಷ್ಣು ವ್ಯಾಪ್ತನಾಗಿದ್ದಾನೆ ಎನ್ನಲಾಗಿದೆ. ಆ ಪ್ರಕರಣದಲ್ಲಿ ''ಸಂವತ್ಸರಕ್ಕೆ ಈ ಸೂರ್ಯನೇ ಅಧಿಪತಿ'' ಎಂದು ಸೂರ್ಯನ ಉಲ್ಲೇಖವಿರುವುದರಿಂದ ಸರ್ವಗತನಾದವನು ಸೂರ್ಯ, ವಿಷ್ಣುವಲ್ಲ ಎಂದು ಪೂರ್ವಪಕ್ಷ. ಆದಕ್ಕಾಗಿ, ಸೂತ್ರಕಾರರು ಹೇಳಿದ್ದಾರೆ - ''ಸರ್ವಗತನಾದವನು ವಿಷ್ಣುವೆ, ಅವನಲ್ಲೇ ಪ್ರಸಿದ್ಧವಾದ ಬ್ರಹ್ಮಶಬ್ದವನ್ನು ಹೇಳಿರುವುದರಿಂದ'' ಎಂದು.

ಐತರೇಯದಲ್ಲಿ ''ಸ ಯಶ್ಚಾಯಂ'' ಎಂದು ಮುಂತಾದ ವಾಕ್ಯಗಳಲ್ಲಿ ಸರ್ವಗತನಾಗಿ ಹೇಳಲ್ಪಟ್ಟವನು ನಾರಾಯಣನೇ ಹೊರತು, ಸೂರ್ಯನಲ್ಲ. ಏಕೆಂದರೆ, 'ಜ್ಞಾನಿಗಳ ದೃಷ್ಟಿಯಲ್ಲಿ ವಿಷ್ಣುವೇ ಪರಬ್ರಹ್ಮ' ಎಂದು, 'ಸರ್ವೋತ್ತಮನಾದ ಯಾವ ಬ್ರಹ್ಮನಿರುವನೋ (ಅವನ ನಾಮ ಸಹಸ್ರಗಳನ್ನು ಹೇಳುತ್ತೇನೆ)' ಎಂದು, 'ವಾಸುದೇವನ ಹೊರತಾಗಿ ಇನ್ನಾರು ತಾನೇ, ಬ್ರಹ್ಮಪದವಾಚ್ಯರಾದಾರು. ಏಕೆಂದರೆ, ಅವನೇ ಸಕಲಗುಣಗಳಿಂದ ಪೂರ್ಣನಾದವನು. ಇತರರು ಅಮುಖ್ಯವಾಗಿ ಬ್ರಹ್ಮಶಬ್ದದಿಂದ ವಾಚ್ಯರು' ಎಂದೂ ನಾರಾಯಣನಿಗೇ ಸಲ್ಲುವ ಬ್ರಹ್ಮಶಬ್ದದ ಪ್ರಯೋಗವನ್ನು ಸರ್ವಗತನಾದ ದೇವತೆಯಲ್ಲಿ ಮಾಡಲಾಗಿದೆ. ॥ 1 ॥

**ವಿವರಣೆ :** ಈ ಎರಡನೆಯ ಪಾದದಲ್ಲಿ ಲಿಂಗಾತ್ಮಕ ಶಬ್ದಗಳನ್ನು ವಿಷ್ಣುವಿನಲ್ಲಿ ಸಮನ್ವಯ ಮಾಡಲಾಗುತ್ತದೆ. ಪ್ರಥಮಪಾದದಲ್ಲಿ ಅನ್ಯತ್ರಪ್ರಸಿದ್ಧವಾದ 'ಆಕಾಶ' ಮುಂತಾದ ರೂಢಶಬ್ದಗಳನ್ನು ಸಮನ್ವಯ ಮಾಡಲಾಗಿದೆ. ಈ ಪಾದದಲ್ಲಿ ಧರ್ಮವಾಚಕವಾದ ಯೌಗಿಕ ಶಬ್ದಗಳನ್ನು ಸಮನ್ವಯ ಮಾಡಲಾಗುತ್ತದೆ.

ಈ ಪಾದದ ವೈಶ್ವಾನರಾಧಿಕರಣದಲ್ಲಿ ''ವೈಶ್ವಾನರ'' ಎಂಬ ರೂಢಶಬ್ದದ ಸಮನ್ವಯವನ್ನು ಮಾಡಲಾಗಿದೆ. ಆದರೆ, ಆ ಒಂದು ರೂಢನಾಮದ ಸಮನ್ವಯದಿಂದ ಅನೇಕ ಯೌಗಿಕ ಶಬ್ದಗಳ ಸಮನ್ವಯ ಮಾಡಿದಂತಾಗುತ್ತದೆ. ಆದ್ದರಿಂದ ಲಿಂಗ ಸಮನ್ವಯ ಪಾದದಲ್ಲಿ ಆ ಅಧಿಕರಣ ಸಂಗತವಾಗಿದೆ. ಈ ವಿಶೇಷವನ್ನು ಸೂಚಿಸಲು ಆಚಾರ್ಯರು ಭಾಷ್ಯದಲ್ಲಿ 'ಪ್ರಾಧಾನ್ಯೇನ' ಎಂಬ ಪದವನ್ನು ಪ್ರಯೋಗಿಸಿದ್ದಾರೆ. 'ಪ್ರಧಾನವಾಗಿ ಲಿಂಗಾತ್ಮಕ ಶಬ್ದಗಳ ಸಮನ್ವಯ, ಒಂದೆಡೆ ಮಾತ್ರ ನಾಮಾತ್ಮಕ ಶಬ್ದದ ಸಮನ್ವಯ' ಎಂದು ಆಚಾರ್ಯರ ಅಭಿಪ್ರಾಯ.

**2.** ಈ ಅಧಿಕರಣದಲ್ಲಿ ''ಸರ್ವಗತತ್ವ'' ಧರ್ಮವನ್ನು ವಿಷ್ಣುವಿನಲ್ಲಿ ಸಮನ್ವಯ ಮಾಡಲಾಗುತ್ತದೆ. ಹಿಂದಿನ ಅಧಿಕರಣದಲ್ಲಿ ಈ ಧರ್ಮವನ್ನು ''ಬ್ರಹ್ಮ ತತಮಂ'' ಎಂದು ಪ್ರಾಣನಿಗೆ ಹೇಳಲಾಗಿದೆ. ಅದು ಆದಿತ್ಯನ ಧರ್ಮವಾದರೆ ಆಗ ಪ್ರಾಣನೂ ಆದಿತ್ಯನಾದಾನು. ಆದ್ದರಿಂದ ಈ ಧರ್ಮದ ಸಮನ್ವಯ ಮಾಡುವುದು ಸಂದರ್ಭೋಚಿತವಾಗಿದೆ.

ಐತರೇಯೋಪನಿಷತ್ತಿನ ಮೂರನೆಯ ಆರಣ್ಯಕದ ಎರಡನೆಯ ಅಧ್ಯಾಯದಲ್ಲಿ ಹೀಗೊಂದು ಪ್ರಕರಣವಿದೆ-

''ಸ ಯಶ್ಚಾಯಂ ಅಶರೀರಃ ಪ್ರಜ್ಞಾತ್ಮಾ । ಯಶ್ಚಾಸೌ ಆದಿತ್ಯಃ । ಏಕಮೇತದಿತಿ ವಿದ್ಯಾತ್ । ...ಏತಂ ಹ್ಯೇವ ಬಹ್ವೃಚಾ ಮಹತ್ಯುಕ್ಥೇ ಮೀಮಾಂಸತೇ । ಏತಮಗ್ನೌ ಅಧ್ವರ್ಯವಃ । ಏತಂ ಮಹಾವ್ರತೇ ಛಂದೋಗಾಃ । ಏತಮಸ್ಯಾಂ, ಏತಂ ದಿವಿ, ಏತಂ ವಾಯೌ, ಏತಮಾಕಾಶೇ, ಏತಮಪ್ಸು, ಏತಮೋಷಧೀಷು, ಏತಂ ವನಸ್ಪತಿಷು, ಏತಂ ಚಂದ್ರಮಸಿ, ಏತಂ ನಕ್ಷತ್ರೇಷು, ಏತಂ ಸರ್ವೇಷು ಭೂತೇಷು । ಏತಮೇವ ಬ್ರಹ್ಮೇತ್ಯಾಚಕ್ಷತೇ''

ಮೇಲಿನ ಪ್ರಕರಣದಲ್ಲಿ 'ಏತಂ=ಇವನನ್ನು' ಎಂದು ಸರ್ವನಾಮ ಶಬ್ದವನ್ನು ಪ್ರಯೋಗಿಸಿ ಪೃಥಿವ್ಯಾದಿ ಸಕಲವಸ್ತುಗಳಲ್ಲೂ 'ಅದು ಸನ್ನಿಹಿತವಾಗಿದೆ' ಎನ್ನಲಾಗಿದೆ. ಇಲ್ಲಿ 'ಅದು' ಎಂದರೆ ಯಾರು? ಆದಿತ್ಯ=ಸೂರ್ಯ ಎಂದು ಪೂರ್ವಪಕ್ಷ. ಏಕೆಂದರೆ, ಈ ಪ್ರಕರಣಕ್ಕಿಂತ ಮೊದಲಿನ ವಾಕ್ಯದಲ್ಲಿ 'ತಸ್ಯ ಏತಸ್ಯಾಸೌ ಆದಿತ್ಯೋ ರಸಃ' ಎಂದು ಆದಿತ್ಯನ ಪ್ರಸ್ತಾವ ಇದೆ. ಅಲ್ಲದೆ ಈ ವಿಷಯ ವಾಕ್ಯದಲ್ಲೂ ಆದಿತ್ಯ ಶಬ್ದದ ಪ್ರಸ್ತಾವ ಇದೆ. 'ತದಪ್ಯೇತದ್ ಋಷಿಣೋಕ್ತಂ' ಎಂದು ಹೇಳಿ ಉಪನಿಷತ್ತು 'ಚಿತ್ರಂ ದೇವಾನಾಂ... ಸೂರ್ಯ ಆತ್ಮಾ ಜಗತಃ ಚಕ್ಷುಷಶ್ಚ'' ಎಂದು ಸೂರ್ಯಮಂತ್ರವನ್ನು ಇದೇ ಪ್ರಕರಣದ ಮಧ್ಯದಲ್ಲಿ ಉಲ್ಲೇಖಿಸಿದೆ. ಇದರಿಂದ ಇದು ಸೂರ್ಯನಿಗೆ ಸಂಬಂಧಿಸಿದ ಪ್ರಕರಣ ಎಂದು ಸ್ಪಷ್ಟವಾಗುತ್ತದೆ. ಆದ್ದರಿಂದ 'ಏತಂ' ಎಂದರೆ 'ಸೂರ್ಯನನ್ನು' ಎಂದೇ ಅರ್ಥ. ಹೀಗೆ ಇಲ್ಲಿ ಸೂರ್ಯನೇ ಸರ್ವಗತ ಎಂದು ಹೇಳಲಾಗಿದೆ. ಆದ್ದರಿಂದ ಪ್ರಾಣನೂ ಅವನೆ.

**ಸಿದ್ಧಾಂತ** : ಪ್ರಕರಣದ ಪ್ರಾರಂಭದಲ್ಲಿ 'ಆದಿತ್ಯ' ಶಬ್ದವಿದ್ದರೂ ''ಏತಮೇವ ಬ್ರಹ್ಮೇತಿ ಆಚಕ್ಷತೇ'' ಎಂದು ಈ ಪ್ರಕರಣ ಮುಕ್ತಾಯವಾಗಿದೆ. 'ಪೃಥಿವ್ಯಾದಿ ಸರ್ವಗತನನ್ನು ಬ್ರಹ್ಮನೆಂದು ಕರೆಯುತ್ತಾರೆ' ಎಂದು ಅಲ್ಲಿ ಸ್ಪಷ್ಟವಾಗಿ ಹೇಳಲಾಗಿದೆ. ಬ್ರಹ್ಮ ಎಂಬ ಹೆಸರು ವಿಷ್ಣುವಿನದೇ ಆಗಿದೆ. ಇತರರಿಗೆ ಆ ಹೆಸರು ಗೌಣ. ಆದ್ದರಿಂದ ಇಲ್ಲಿ ಸರ್ವಗತನಾಗಿ ಹೇಳಲ್ಪಟ್ಟವನು ವಿಷ್ಣುವೆ, ಹೊರತು ಸೂರ್ಯನಲ್ಲ. ಈ ಪ್ರಕರಣದಲ್ಲಿ ಬಂದಿರುವ ಆದಿತ್ಯ, ಸೂರ್ಯ ಶಬ್ದಗಳಿಂದಲೂ ಅವನೇ ವಾಚ್ಯ. ॥ ಸೂತ್ರ 1 ॥

**ಓಂ ॥ ವಿವಕ್ಷಿತ ಗುಣೋಪಪತ್ತೇಶ್ಚ ॥ ಓಂ**

**'ಸ ಯೋಽತೋಽಶ್ರುತಃ' (ಐ.ಆ.3.2.4) ಇತ್ಯಾದಿ।**

**ಸ ಹಿ 'ನ ತೇ ವಿಷ್ಣೋ ಜಾಯಮಾನೋ ನ ಜಾತಃ ದೇವಃ' (ಋ.7-99-2) ಇತ್ಯಾದಿನಾ ಅಶ್ರುತತ್ವಾದಿ ಗುಣಕಃ।**

**'ಸ ಸವಿತಾ, ಸ ವಾಯುಃ, ಸ ಇಂದ್ರಃ, ಸೋಽಶ್ರುತಃ, ಸೋಽದೃಷ್ಟಃ, ಯೋ ಹರಿಃ, ಯಃ ಪರಮೋ, ಯೋ ವಿಷ್ಣುಃ, ಯೋಽನಂತಃ' ಇತ್ಯಾದಿ ಚತುರ್ವೇದ-ಶಿಖಾಯಾಮ್ ॥ 2 ॥**

ಈ ಮಂತ್ರದ ಕೊನೆಯಲ್ಲಿ 'ಸ ಯಃ ಅತೋ ಅಶ್ರುತಃ' ಎಂದು ಮುಂತಾಗಿ ಹೇಳಿರುವ ಗುಣಗಳು ನಾರಾಯಣನಲ್ಲೇ ಇರುವುದರಿಂದಲೂ ಸರ್ವಗತನಾಗಿ ಇಲ್ಲಿ ಪ್ರಸ್ತುತನಾದವನು ಅವನೆ. ಋಗ್ವೇದ ಸಂಹಿತೆ ಹೇಳುತ್ತದೆ- 'ವಿಷ್ಣುವೇ, ನಿನ್ನ ಮಹಿಮೆಯ ಅಂತವನ್ನು ಯಾರೂ ಕೇಳಿಲ್ಲ' ಚತುರ್ವೇದ ಶಿಖೆಯಲ್ಲಂತೂ ಸ್ಪಷ್ಟವಾಗಿದೆ- ''ಯಾರು ಜಗದುತ್ಪಾದಕನೋ ಅವನೇ ಹರಿ, ವಾಯುವೂ ಆ ಪರಮಾತ್ಮನೆ, ಇಂದ್ರನೂ ಆ ವಿಷ್ಣುವೇ, ಅಶ್ರುತ- ಅದೃಷ್ಟನಾದವನೂ ಅನಂತನಾದ ಆ ಪರಮಾತ್ಮನೆ''.

**ವಿವರಣೆ :** ದೀರ್ಘವಾದ ಈ ಮಂತ್ರದ ಕೊನೆಯಲ್ಲಿ- 'ಸ ಯೋ ಅತೋ ಅಶ್ರುತಃ...ಸರ್ವೇಷಾಂ ಭೂತಾನಾಂ ಅಂತರಪುರುಷಃ ಸ ಮೇ ಆತ್ಮೇತಿ ವಿದ್ಯಾತ್'' ಎಂದಿದೆ. ಇಲ್ಲಿ ಪೃಥಿವ್ಯಾದಿ ಸರ್ವಗತನಾದವನಿಗೆ ಇಂದ್ರಿಯಾತೀತತ್ವ ಮೊದಲಾದ ಗುಣಗಳನ್ನು ಹೇಳಲಾಗಿದೆ. ಆ ಗುಣಗಳು ಪರಮಾತ್ಮನವು. ಇತರರಿಗೆ ಅಂತಹ ಗುಣಗಳಿಲ್ಲ. ಆದ್ದರಿಂದ ಪೃಥಿವ್ಯಾದಿ ಸರ್ವಗತನಾದವನು ನಾರಾಯಣ.

ಮೊದಲ ಸೂತ್ರದಲ್ಲಿ ವಿಷ್ಣುತ್ವಸಮರ್ಥಕಶ್ರುತಿಯನ್ನು ಆಧಾರವನ್ನಾಗಿ ಹೇಳಿ ಈ ಸೂತ್ರದಲ್ಲಿ ಲಿಂಗವನ್ನು ಆಧಾರವನ್ನಾಗಿ ಹೇಳಲಾಗಿದೆ. ॥ 2 ॥

**ನ ಚ ಆದಿತ್ಯಶಬ್ದಾತ್ ಚಕ್ಷುರ್ಮಯತ್ವಾದೇಶ್ಚ ಜೀವಃ ಇತಿ ವಾಚ್ಯಮ್-**

**ಓಂ ॥ ಅನುಪಪತ್ತೇಸ್ತು ನ ಶಾರೀರಃ ॥ ಓಂ**

**ಏಕಸ್ಯ ಸರ್ವಶರೀರಸ್ಥತ್ವಾನುಪಪತ್ತೇರೇವ ॥ 3 ॥**

ಈ ಮಂತ್ರದ ಮೊದಲು ಆದಿತ್ಯ ಶಬ್ದವಿರುವುದರಿಂದ ಸೂರ್ಯನೇ ಸರ್ವಗತ ಏಕಾಗಬಾರದು? ಅಥವಾ ಈ ಮಂತ್ರದ ಮಧ್ಯದಲ್ಲಿ 'ಚಕ್ಷುರ್ಮಯಃ' ಎಂಬ ಜೀವ ವಾಚಕ ಶಬ್ದವಿರುವುದರಿಂದ ಜೀವನೂ ಸರ್ವಗತ ಎನ್ನಬಹುದು. ಎಂದರೆ, ಅದು ಸರಿಯಲ್ಲ. ಒಬ್ಬನೇ ಜೀವನು ಸರ್ವಗತನಾಗಲು ಸಾಧ್ಯವಿಲ್ಲ.

**ವಿವರಣೆ :** ಈ ಮಂತ್ರದಲ್ಲಿ ಆದಿತ್ಯಶಬ್ದವಿದೆ. ಹೀಗಾಗಿ ಆದಿತ್ಯನೂ

ಸರ್ವಗತನೆಂದು ಹೇಳಬಹುದು. 'ಚಕ್ಷುರ್ಮಯಃ ಶ್ರೋತ್ರಮಯಃ' ಎಂಬ ಶಬ್ದವಿದೆ. ಜ್ಞಾನೇಂದ್ರಿಯಸಹಿತವಾದ ದೇಹಕ್ಕೆ ಅಭಿಮಾನಿಯಾದ ಜೀವನಿಗೆ ಈ ಶಬ್ದಗಳು ವಾಚಕವಾಗಿವೆ. ಇದರಿಂದ ಜೀವನೂ ಸರ್ವಗತನೆಂದು ಹೇಳಬಹುದಲ್ಲವೆ? ಎಂದು ಪ್ರಶ್ನೆ. ಆದರೆ, ಆದಿತ್ಯನಾಗಲೀ, ಜೀವನಾಗಲಿ ಎಲ್ಲೆಡೆ ಇರಲು ಸಾಧ್ಯವಿಲ್ಲ. ಒಬ್ಬ ಜೀವ ಒಂದು ಶರೀರದಲ್ಲಿರಬಹುದಷ್ಟೆ. ಸರ್ವಗತನಾಗಲು ಸಾಧ್ಯವಿಲ್ಲ. ಆದ್ದರಿಂದ ಸರ್ವಗತ ಜೀವ ಎನ್ನುವ ಸಂಶಯಕ್ಕೆ ಅವಕಾಶವೇ ಇಲ್ಲ.

## ಓಂ || ಕರ್ಮಕರ್ತೃವ್ಯಪದೇಶಾಚ್ಚ || ಓಂ

**'ಆತ್ಮಾನಂ ಪರಸ್ಮೈ ಶಂಸತಿ' (ಐ.ಆ.3.2.3) ಇತ್ಯಾದಿ || 4 ||**

ಈ ಮಂತ್ರದಲ್ಲಿ 'ಸರ್ವಗತನಾದ ಆತ್ಮನನ್ನು ಮತ್ತೊಬ್ಬರಿಗೆ ಉಪದೇಶಿಸುತ್ತಾನೆ' ಎನ್ನಲಾಗಿದೆ. ಹೀಗೆ ಸರ್ವಗತನನ್ನು ಶಂಸನ ಕ್ರಿಯೆಗೆ ಕರ್ಮವನ್ನಾಗಿಯೂ ಜೀವನನ್ನು ಕರ್ತೃವನ್ನಾಗಿಯೂ ಹೇಳಿರುವುದರಿಂದ ಸರ್ವಗತ ಜೀವನಲ್ಲ.

**ವಿವರಣೆ :** ಈ ಮಂತ್ರದ ಫಲಶ್ರುತಿ ಹೀಗಿದೆ- ''ಸ ಯ ಏವಮೇತಂ... ವಾಙ್ಮಯಮಾತ್ಮಾನಂ ಪರಸ್ಮೈ ಶಂಸತಿ ದುಗ್ಧದೋಹಾ ಅಸ್ಯ ವೇದಾ ಭವಂತಿ।'' 'ಈ ಸರ್ವಗತನಾದ ಆತ್ಮನನ್ನು ಯಾರು ಅಯೋಗ್ಯರಿಗೆ ಉಪದೇಶಿಸುವರೋ ಅವರು ಕಲಿತ ವಿದ್ಯೆ, ಹಾಲು ಕರೆದು ಬರಡಾದ ಆಕಳಿನಂತೆ ನಿಷ್ಫಲವಾಗುತ್ತದೆ.''

ಇಲ್ಲಿ ಉಪದೇಶ ಮಾಡುವ ಜೀವ ಆ ಕ್ರಿಯೆಗೆ ಕರ್ತೃ. ಉಪದೇಶಿಸಲ್ಪಡುವ ಆತ್ಮ ಕರ್ಮ. ಒಂದುವೇಳೆ ಸರ್ವಗತನಾದವನು ಜೀವನೇ ಆದರೆ ಆಗ ಉಪದೇಶ ಮಾಡುವ ಕರ್ತೃವೂ ಉಪದೇಶ್ಯವಾದ ಕರ್ಮವೂ ಒಂದೇ ಆಗುತ್ತದೆ. ಸಾಮಾನ್ಯವಾಗಿ ಒಂದು ಕ್ರಿಯೆಗೆ ಕರ್ತೃಕರ್ಮಗಳು ವಿಭಿನ್ನವಾಗಿರುತ್ತವೆ. ಸರ್ವಗತ ಪರಮಾತ್ಮನಾದರೆ ''ಏತಂ=ಪರಮಾತ್ಮನನ್ನು ಜೀವಾತ್ಮನು ಉಪದೇಶಿಸುತ್ತಾನೆ'' ಎನ್ನುವುದು ಯುಕ್ತವಾಗುತ್ತದೆ. ಆದ್ದರಿಂದ ಪರಮಾತ್ಮನೇ ಸರ್ವಗತ, ಜೀವನಲ್ಲ. || 4 ||

## ಓಂ || ಶಬ್ದವಿಶೇಷಾತ್ || ಓಂ

**'ಏತಮೇವ ಬ್ರಹ್ಮೇತ್ಯಾಚಕ್ಷತೇ' ಇತಿ। ನ ಹಿ ಜೀವಮೇವ ಬ್ರಹ್ಮೇತ್ಯಾಚಕ್ಷತೇ।**

**''ಏಷ ಉ ಏವ ಬ್ರಹ್ಮ ಏಷ ಉ ಏವಾತ್ಮಾ ಏಷ ಉ ಏವ ಸವಿತಾ ಏಷ ಉ ಏವ ಇಂದ್ರಃ ಏಷ ಉ ಏವ ಹರಿಃ ಹರತಿ ಪರಃ ಪರಾನಂದಃ''**

**ಇತಿ ಚ ಇಂದ್ರದ್ಯುಮ್ನಶಾಖಾಯಾಮ್ || 5 ||**

'ಇವನನ್ನೇ ಬ್ರಹ್ಮನೆಂದು ಹೇಳುತ್ತಾರೆ' ಎಂದು ಸಾವಧಾರಣ ಬ್ರಹ್ಮಶಬ್ದವಿರುವುದರಿಂದಲೂ ಸರ್ವಗತನಾದವನು ನಾರಾಯಣ. ಜ್ಞಾನಿಗಳೆಂದೂ ಜೀವನೇ ಬ್ರಹ್ಮ ಎನ್ನುವುದಿಲ್ಲ. ಇಂದ್ರದ್ಯುಮ್ನ ಶಾಖೆ ಹೀಗೆ ಹೇಳುತ್ತದೆ - ''ಶ್ರೀಹರಿಯೇ ಬ್ರಹ್ಮ.

ಆತ್ಮನೆಂದರೂ ಅವನೇ, ಸವಿತಾ ಎಂದರೂ ಅವನೆ, ಇಂದ್ರನೂ ಅವನೇ, ಸಜ್ಜನರ ಪಾಪಹರ್ತನಾದುದರಿಂದ ಅವನೇ ಹರಿ. ಅವನೇ ಸರ್ವೋತ್ತಮ, ಪೂರ್ಣಾನಂದ''.

**ವಿವರಣೆ :** ಸರ್ವಗತ ವಿಷ್ಣು ಎನ್ನಲು ಪ್ರಥಮಸೂತ್ರದಲ್ಲಿ ಬ್ರಹ್ಮಶಬ್ದ ಪ್ರಯೋಗವನ್ನು ಕಾರಣವನ್ನಾಗಿ ಹೇಳಲಾಯಿತು. ಆದರೆ ಜೀವನಿಗೂ ಅಮುಖ್ಯವಾಗಿ ಬ್ರಹ್ಮ ಎಂಬ ಹೆಸರಿದೆ. ಜೀವ ಅಮುಖ್ಯಾರ್ಥವಾದರೂ 'ಚಕ್ಷುರ್ಮಯಃ' ಎಂಬ ಜೀವವಾಚಕವಾದ ನಿಃಸ್ಸಂದಿಗ್ಧ ಶಬ್ದವಿರುವುದರಿಂದ ಬ್ರಹ್ಮಶಬ್ದಕ್ಕೆ ಜೀವ ಎಂಬ ಅಮುಖ್ಯಾರ್ಥವನ್ನು ಹೇಳಬಹುದು. ಈ ಆಕ್ಷೇಪ ಪರಿಹಾರಕ್ಕಾಗಿ ಪ್ರಕೃತ ಸೂತ್ರವಿದೆ. ಉಪನಿಷತ್ತಿನಲ್ಲಿ ಬ್ರಹ್ಮಶಬ್ದವಷ್ಟೇ ಇಲ್ಲ. 'ಅವನೇ ಬ್ರಹ್ಮ' ಎಂದು ನಿರ್ಧಾರವಾಗಿ ಹೇಳಲಾಗಿದೆ. ಜೀವನು ಅಮುಖ್ಯ ಬ್ರಹ್ಮನಾದುದರಿಂದ 'ಅವನೂ ಬ್ರಹ್ಮ' ಎನ್ನಬಹುದು. 'ಅವನೇ ಬ್ರಹ್ಮ' ಎನ್ನುವುದು ಸರಿಯಲ್ಲ. ಆದ್ದರಿಂದ ನಾರಾಯಣನೇ ಸರ್ವಗತ. ॥ 5 ॥

## ಓಂ ॥ ಸ್ಮೃತೇಶ್ಚ ॥ ಓಂ

**ಅಹಮಾತ್ಮಾ ಗುಡಾಕೇಶ ಸರ್ವಭೂತಾಶಯಸ್ಥಿತಃ ॥ (ಭ.ಗೀ.10.20)**

**ಗಾಮಾವಿಶ್ಯ ಚ ಭೂತಾನಿ ಧಾರಯಾಮ್ಯಹಮೋಜಸಾ ॥ (ಭ.ಗೀ.15.15)**

**ಇತ್ಯಾದಿ ।**

**ನ ಚ ಅಪ್ರಾಮಾಣಿಕಂ ಕಲ್ಪ್ಯಮ್ ॥ 6 ॥**

''ಅರ್ಜುನನೆ, ಎಲ್ಲ ಪ್ರಾಣಿಗಳ ಹೃದಯ ಪ್ರದೇಶದಲ್ಲಿರುವ ಆತ್ಮ ನಾನು''

''ನಾನು ಭೂಮಿಯಲ್ಲಿ ಅವತರಿಸಿ ನನ್ನ ಸಾಮರ್ಥ್ಯದಿಂದ ಜೀವಿಗಳನ್ನು ಉಳಿಸಿದ್ದೇನೆ'' ಹೀಗೆ ಭಗವದ್ಗೀತೆಯಲ್ಲಿ ಪರಮಾತ್ಮನೇ ಸರ್ವಗತನೆನ್ನಲಾಗಿದೆ.

ಈ ಸೂತ್ರಗಳಿಗೆ ನಾವು ಹೇಳಿದ ಅರ್ಥ ಬಿಟ್ಟು 'ಜೀವೇಶಭೇದವು ಮಿಥ್ಯಾ' ಎಂಬ ಅಪ್ರಾಮಾಣಿಕವಾದ ಅಭಿಪ್ರಾಯವನ್ನು ಹೇಳಬಾರದು.

**ವಿವರಣೆ :** 1. 'ಸರ್ವಗತತ್ವ, ಸರ್ವಭೂತಾಧಾರತ್ವ' ಇವೆಲ್ಲವೂ ವಿಷ್ಣುವಿನ ಧರ್ಮಗಳು ಎನ್ನುತ್ತದೆ ಭಗವದ್ಗೀತೆ. ಗೀತೆ ಸೂತ್ರಕಾರರಾದ ವೇದವ್ಯಾಸರದೇ ರಚನೆ. ಹಾಗಿದ್ದ ಮೇಲೆ ತಾನು ಸೂತ್ರದಲ್ಲಿ ಮಾಡಿದ ಸಿದ್ಧಾಂತಕ್ಕೆ ತನ್ನದೇ ಗ್ರಂಥದ ಆಧಾರವನ್ನು ವ್ಯಾಸರು ಹೇಗೆ ನೀಡುವುದು? ಎಂದರೆ, ಗೀತೆಯನ್ನು ಬರೆದವರು ವ್ಯಾಸರು. ಅದನ್ನು ಹೇಳಿದವ ಶ್ರೀಕೃಷ್ಣ. ಹೀಗಾಗಿ ವ್ಯಾಸರು ಗೀತೆಯ ಅನುವಾದಕರೇ ಹೊರತು ಅದನ್ನು ರಚಿಸಿದವರಲ್ಲ.

2. ಇಲ್ಲಿ 'ಸ್ಮೃತೇಃ' ಎಂದರೆ 'ಸ್ಮೃತಿ ಗ್ರಂಥ ಇದೆ' ಎಂದು ಅರ್ಥವಲ್ಲ. ಮಹಾಭಾರತದಲ್ಲಿ ಸೇರಿ ಗೀತೆ ಇತಿಹಾಸ, ಸ್ಮೃತಿಯಲ್ಲ. ಆದ್ದರಿಂದ, 'ಹೀಗೆ ಪೌರುಷೇಯಗ್ರಂಥದಲ್ಲೂ ಹೇಳಲಾಗಿದೆ' ಎಂದರ್ಥ.

3. ಶಾಂಕರಭಾಷ್ಯದಲ್ಲಿ ''ಮನೋಮಯಃ ಪ್ರಾಣಶರೀರ ನೇತಾ'' ಎಂಬ ಛಾಂದೋಗ್ಯ ಉಪನಿಷತ್ತಿನ ವಾಕ್ಯವನ್ನು ವಿಷಯವನ್ನಾಗಿ ಇಟ್ಟುಕೊಂಡು ಈ ಅಧಿಕರಣದಲ್ಲಿ ಮನೋಮಯ ಬ್ರಹ್ಮನೆಂದು ಸಿದ್ಧಾಂತ ಮಾಡಲಾಗಿದೆ. ''ಅನುಪಪತ್ತೇಸ್ತು ನ ಶಾರೀರಃ'' ಎಂಬ ಮೂರನೆಯ ಸೂತ್ರ ಶಾರೀರನೆನಿಸಿದ ಜೀವ ಮನೋಮಯನಲ್ಲ ಎನ್ನುತ್ತದೆ. ಆದರೆ ಜೀವ ಬ್ರಹ್ಮರು ಒಂದೇ ಆದ ಮೇಲೆ 'ಮನೋಮಯ ಜೀವನಲ್ಲ, ಬ್ರಹ್ಮನೇ' ಎಂದು ಸಿದ್ಧಾಂತ ಮಾಡಿರುವುದು ಹೇಗೆ? ಎಂದು ಶಾಂಕರಭಾಷ್ಯದಲ್ಲಿ ಆಕ್ಷೇಪಿಸಿ ಒಂದೇ ಆದರೂ ಔಪಾಧಿಕ ಭೇದವಿದೆ, ಎಂದು ಹೇಳಲಾಗಿದೆ.

ಅತ್ರಾಹ - ಕಃ ಪುನರಯಂ ಶಾರೀರೋ ನಾಮ ಪರಮಾತ್ಮನಃ ಅನ್ಯಃ ಯಃ ಪ್ರತಿಷಿಧ್ಯತೇ 'ಅನುಪಪತ್ತೇಸ್ತು ನ ಶಾರೀರಃ' ಇತ್ಯಾದಿನಾ । ಶ್ರುತಿಸ್ತು 'ನಾನ್ಯೋಽತೋಽಸ್ತಿ ದ್ರಷ್ಟಾ...' ಇತ್ಯೇವಂ ಜಾತೀಯಕಾ ಪರಮಾತ್ಮನೋಽನ್ಯಮಾತ್ಮಾನಂ ವಾರಯತಿ । ತಥಾ ಸ್ಮೃತಿರಪಿ 'ಕ್ಷೇತ್ರಜ್ಞಂ ಚಾಪಿ ಮಾಂ ವಿದ್ಧಿ ಸರ್ವಕ್ಷೇತ್ರೇಷು ಭಾರತ ॥' ಇತ್ಯೇವಂ ಜಾತೀಯಕಾ ಇತಿ । ಅತ್ರೋಚ್ಯತೇ ಸತ್ಯಮೇವೈತತ್ । ಪರ ಏವಾತ್ಮಾ ದೇಹೇಂದ್ರಿಯಮನೋ ಬುದ್ಧ್ಯಾದಿಭಿಃ ಪರಿಚ್ಛಿದ್ಯಮಾನಃ ಬಾಲೈಃ ಶಾರೀರ ಇತ್ಯುಪಚರ್ಯತೇ ॥ (ಶಾಂ.ಭಾ.)

ಈ ವಿಷಯ ಸೂತ್ರದಲ್ಲಿಲ್ಲ, ಸೂತ್ರಕಾರರು ಭೇದವನ್ನೇ ಸೂಚಿಸಿದ್ದಾರೆ. ಅದು ಮಿಥ್ಯಾಭೂತವಾದುದು ಎಂದು ಭಾಷ್ಯಕಾರರು ತಾವೇ ಹೇಳುತ್ತಿದ್ದಾರೆ. ಆದರೆ ಶ್ರುತಿ ಸೂತ್ರಗಳಲ್ಲಿ ಸಿದ್ಧವಾದ ಜೀವೇಶಭೇದವನ್ನು ಮಿಥ್ಯಾ ಎಂದು ಅಲ್ಲಗಳೆಯುವುದು ಅವುಗಳಿಗೆ ಅಪಚಾರವೆಸಗಿದಂತೆ. ಆದ್ದರಿಂದ 'ಭೇದವುಮಿಥ್ಯಾ' ಎನ್ನುವುದು ಉಚಿತವಲ್ಲ.

॥ ಸೂತ್ರ 6 ॥

**ಓಂ ॥ ಅರ್ಭಕೌಕಸ್ತ್ವಾತ್ ತದ್ವ್ಯಪದೇಶಾಚ್ಚ ನೇತಿ ಚೇನ್ನ ನಿಚಾಯ್ಯತ್ವಾದೇವಂ ವ್ಯೋಮವಚ್ಚ ॥ ಓಂ**

**'ಸರ್ವೇಷು ಭೂತೇಷು' ಇತಿ ಅಲ್ಪೌಕಸ್ತ್ವಾತ್, ಚಕ್ಷುರ್ಮಯತ್ವಾದಿನಾ ಜೀವವ್ಯಪದೇಶಾಚ್ಚ ನೇತಿ ಚೇನ್ನ । ಅರ್ಭಕೌಕಸ್ತ್ವೇನ ಚಕ್ಷುರ್ಮಯತ್ವಾದಿರೂಪೇಣ ಚ ತಸ್ಯೈವ ವಿಷ್ಣೋಃ ನಿಚಾಯ್ಯತ್ವಾತ್ । ಸರ್ವಗತತ್ವೇಽಪಿ ಅಲ್ಪೌಕಸ್ತ್ವಂ ಚ ಯುಜ್ಯತೇ ವ್ಯೋಮವತ್ ।**

**ಸರ್ವೇಂದ್ರಿಯಮಯೋ ವಿಷ್ಣುಃ ಸರ್ವಪ್ರಾಣೇಷು ಚ ಸ್ಥಿತಃ ।**
**ಸರ್ವನಾಮಾಭಿಧೇಯಶ್ಚ ಸರ್ವವೇದೋದಿತಶ್ಚ ಸಃ ॥**

**ಇತಿ ಸ್ಕಾಂದೇ ॥ 7 ॥**

ಈ ಮಂತ್ರದ ಕೊನೆಯಲ್ಲಿ 'ಸರ್ವ ಪ್ರಾಣಿಗಳೊಳಗೆ ಅವಿತಿರುವ ಇವನನ್ನೇ ಬ್ರಹ್ಮನೆನ್ನುತ್ತಾರೆ' ಎಂದು ಸೂಕ್ಷ್ಮವಾದ ಪ್ರದೇಶದಲ್ಲಿರುವವನ್ನಾಗಿ, ಹಾಗೂ ''ಚಕ್ಷುರ್ಮಯಃ

ಶ್ರೋತ್ರಮಯಃ'' ಎಂದು ಚಕ್ಷುರ್ಮಯನನ್ನಾಗಿ ಜೀವಾತ್ಮನನ್ನೇ ಹೇಳಿರುವುದರಿಂದ ಸರ್ವಗತ ಪರಮಾತ್ಮನೆಂದು ಹೇಳಬಾರದು, ಎನ್ನುವುದು ಸರಿಯಲ್ಲ. ಸೂಕ್ಷ್ಮ ಹೃದಯಾಕಾಶಗತನೆಂದೂ, ಚಕ್ಷುರ್ಮಯನೆಂದೂ ಆ ವಿಷ್ಣುವು ಉಪಾಸ್ಯನಾದುದರಿಂದ ಅದು ಬಾಧಕವಲ್ಲ. ಅವನು ಸರ್ವಗತನಾದರೂ ಆಕಾಶದಂತೆ ಅಲ್ಪದೇಶ ಸ್ಥಿತಿಯೂ ಅವನಿಗೆ ಇದೆ. ಸ್ಕಾಂದ ಪುರಾಣದಲ್ಲಿ ಹೀಗಿದೆ- ''ವಿಷ್ಣು ಸರ್ವಪ್ರಾಣಿಗಳಲ್ಲಿದ್ದು ಇಂದ್ರಿಯಗಳಿಗೆ ನಿಯಾಮಕನಾಗಿರುವುದರಿಂದ ಸರ್ವೇಂದ್ರಿಯಮಯನಾಗಿದ್ದಾನೆ. ಅವನು ಸರ್ವನಾಮ ಗಳಿಂದಲೂ ವಾಚ್ಯನಾದುದರಿಂದ ಸರ್ವ ವೇದಗಳಿಂದ ಪ್ರತಿಪಾದ್ಯ''.

**ವಿವರಣೆ :** ವಿಷ್ಣು ವ್ಯಾಪ್ತ. ಆದರೆ ಇಲ್ಲಿ ಸರ್ವಗತನಾದ ವ್ಯಕ್ತಿಯು ಸರ್ವ ಪ್ರಾಣಿಗಳ ಹೃದಯಾಕಾಶದಲ್ಲಿದ್ದಾನೆ ಎನ್ನಲಾಗಿದೆ. ಜೀವ ಅಣುವಾದ್ದರಿಂದ ಅವನಿಗೆ ಅದು ಯುಕ್ತ. ಅಲ್ಲದೆ, ಚಕ್ಷುರ್ಮಯ ಇತ್ಯಾದಿ ಶಬ್ದಗಳೂ ಜೀವನಲ್ಲಿ ಹೊಂದುತ್ತವೆ. ಆದ್ದರಿಂದ ಜೀವನೇ ಸರ್ವಗತ ಎಂದು ಪ್ರಶ್ನೆ. ವ್ಯಾಪ್ತನಾದರೂ ಪರಮಾತ್ಮ ಅಣುರೂಪದಿಂದ ಹೃದಯಾಕಾಶದ ಅಲ್ಪಪ್ರದೇಶದಲ್ಲೂ ಇದ್ದಾನೆ. ಅವನು ಇಂದ್ರಿಯ ಪ್ರೇರಕನಾದುದರಿಂದ ಚಕ್ಷುರ್ಮಯ ಇತ್ಯಾದಿ ಶಬ್ದಗಳೂ ಅವನಿಗೆ ಯುಕ್ತವಾಗಿದೆ.

ಸರ್ವೇ ವಿಷ್ಣೌ ಸ್ಥಿತಾ ಯಸ್ಮಾತ್ ತಸ್ಮಾತ್ ಸರ್ವಮಯೋ ಹ್ಯಸೌ ||

ಎಂದು ಭಾಗವತತಾತ್ಪರ್ಯದಲ್ಲಿ ಆಚಾರ್ಯರು ವಿಷ್ಣು ಸರ್ವಮಯ ಎನ್ನಲು ಇನ್ನೊಂದು ಕಾರಣ ನೀಡಿದ್ದಾರೆ.

ಪರಮಾತ್ಮ ಹೃದಯಾಕಾಶಸ್ಥ, ಚಕ್ಷುರ್ಮಯಾದಿ ಶಬ್ದವಾಚ್ಯ ಎಂದು ಮೋಕ್ಷಯೋಗ್ಯ ಜೀವರು ಉಪಾಸನೆ ಮಾಡಬೇಕು. ಅದಕ್ಕಾಗಿಯೇ ಉಪನಿಷತ್ತು ಅವನಲ್ಲಿ ಇಂತಹ ಶಬ್ದಗಳನ್ನು ಪ್ರಯೋಗಿಸುತ್ತದೆ. ಆದ್ದರಿಂದ ವಿಷ್ಣುವೇ ಸರ್ವಗತ. || ಸೂತ್ರ 7 ||

**ಓಂ || ಸಂಭೋಗಪ್ರಾಪ್ತಿರಿತಿ ಚೇನ್ನ ವೈಶೇಷ್ಯಾತ್ || ಓಂ**

**ಜೀವ-ಪರಯೋಃ ಏಕಶರೀರಸ್ಥತ್ವೇ ಸಮಾನಭೋಗಪ್ರಾಪ್ತಿರಿತಿ ಚೇನ್ನ । ಸಾಮರ್ಥ್ಯವೈಶೇಷ್ಯಾತ್ । ಉಕ್ತಂ ಚ ಗಾರುಡೇ -**

**ಸರ್ವಜ್ಞಾಲ್ಪಜ್ಞತಾ ಭೇದಾತ್ ಸರ್ವಶಕ್ತ್ಯಲ್ಪಶಕ್ತಿತಃ ।**

**ಸ್ವಾತಂತ್ರ್ಯಪಾರತಂತ್ರ್ಯಾಭ್ಯಾಂ ಸಂಭೋಗೋ ನೇಶಜೀವಯೋಃ ।**

**ಇತಿ ಚ || 8 ||**

**|| ಇತಿ ಸರ್ವಗತತ್ವಾಧಿಕರಣಮ್ ||**

ಜೀವ ಮತ್ತು ಪರಮಾತ್ಮ ಒಂದೇ ದೇಹದಲ್ಲಿದ್ದರೆ ಅವರಿಬ್ಬರಿಗೂ ಸಮಾನವಾಗಿ

ಸುಖ ದುಃಖಾದಿಗಳ ಸಂವೇದನೆ ಬರಬೇಕಾದೀತು ಎನ್ನುವುದು ಸರಿಯಲ್ಲ. ಒಂದೇ ದೇಹದಲ್ಲಿದ್ದರೂ ಪರಮಾತ್ಮನಲ್ಲಿ ವಿಶಿಷ್ಟ ಸಾಮರ್ಥ್ಯವಿದೆ. ಗಾರುಡದಲ್ಲಿ ಹೀಗೆ ಹೇಳಿದೆ ''ಈಶ ಸರ್ವಜ್ಞ, ಜೀವ ಅಲ್ಪಜ್ಞ, ಅವನು ಸರ್ವಶಕ್ತ, ಇವನು ಅಲ್ಪಶಕ್ತ. ಅವನು ಸ್ವತಂತ್ರ, ಇವನು ಪರತಂತ್ರ. ಹೀಗಾಗಿ ಈಶ- ಜೀವರಿಗೆ ಸಮಾನ ಭೋಗವಿಲ್ಲ''. ॥ 8 ॥

## ದ್ವೈತ ದರ್ಶನದಲ್ಲಿ ಸೂತ್ರಗಳ ಅರ್ಥ

**1. ಓಂ ॥ ಸರ್ವತ್ರ ಪ್ರಸಿದ್ಧೋಪದೇಶಾತ್ ॥ ಓಂ**

(ಈ ಸೂತ್ರದಲ್ಲಿ 'ಉಚ್ಯಮಾನಂ' ಎಂಬ ಪದವನ್ನು ಅಧ್ಯಾಹಾರ ಮಾಡಿಕೊಳ್ಳಬೇಕು.)

ಐತರೇಯಶ್ರುತಿಯಲ್ಲಿ ಸರ್ವತ್ರ=ಪೃಥಿವ್ಯಾದಿಗಳಲ್ಲಿ ಇರುವವನೆಂದು ಹೇಳಲ್ಪಟ್ಟವನು ವಿಷ್ಣು. ವಿಷ್ಣುವಿನಲ್ಲೇ ಪ್ರಸಿದ್ಧವಾದ ಬ್ರಹ್ಮಶಬ್ದವನ್ನು ಹೇಳಿರುವುದರಿಂದ.

(ತತ್ತು ಇತಿ ವರ್ತತೇ । ಉಚ್ಯಮಾನಮಿತಿ ಶೇಷಃ । ಸರ್ವತ್ರ ಪೃಥಿವ್ಯಾದಿಷು ಉಚ್ಯಮಾನಂ ತತ್ತು= ಬ್ರಹ್ಮೈವ । ಕುತಃ? ಪ್ರಸಿದ್ಧಸ್ಯ= ಬ್ರಹ್ಮಣ್ಯೇವ ಶ್ರುತ್ಯಾದೌ ಪ್ರಸಿದ್ಧಸ್ಯ ಬ್ರಹ್ಮ ಶಬ್ದಸ್ಯ ಉಪದೇಶಾತ್ ।)

**2. ಓಂ ॥ ವಿವಕ್ಷಿತಗುಣೋಪಪತ್ತೇಶ್ಚ ॥ ಓಂ**

ವಿವಕ್ಷಿತ ಗುಣ=ಮುಂದೆ ಹೇಳಲಾದ ಅಶ್ರುತತ್ವಾದಿ ಗುಣಗಳು, ಉಪಪತ್ತೇಶ್ಚ= ಅವನಲ್ಲೇ ಉಪಪನ್ನವಾಗುವುದರಿಂದಲೂ ವಿಷ್ಣುವೇ ಸರ್ವಗತನಾಗಿ ಹೇಳಲ್ಪಟ್ಟಿದ್ದಾನೆ.

(ಸರ್ವತ್ರ, ತತ್ತು ಇತಿ ವರ್ತತೇ। ವಿವಕ್ಷಿತಾನಾಂ, ವಕ್ತುಂ ಯೋಗ್ಯಾನಾಂ ವಕ್ಷ್ಯಮಾಣಾನಾಂ ಇತಿ ವಾ, ತಾತ್ಪರ್ಯ ವಿಷಯಾಣಾಂ ಇತಿ ವಾ ಗುಣಾನಾಂ= ಅಶ್ರುತತ್ವಾದಿ ಧರ್ಮಾಣಾಂ ಉಪಪತ್ತೇಶ್ಚ ಪೃಥಿವ್ಯಾದೌ ಬ್ರಹ್ಮೈವ)

**3. ಓಂ ॥ ಅನುಪಪತ್ತೇಸ್ತು ನ ಶಾರೀರಃ ॥ ಓಂ**

ಅನುಪಪತ್ತೇಃ=ಸರ್ವಗತತ್ವ ಇಲ್ಲವಾದುದರಿಂದ ಶಾರೀರಃ=ಜೀವನು ನ=ಸರ್ವಗತನಾಗಿ ಹೇಳಲ್ಪಟ್ಟವನು ಆಗಲಾರ.

(ಸರ್ವತ್ರ ಉಚ್ಯಮಾನಂ ಇತಿ ವರ್ತತೇ। ತುರೇವ। ಶಾರೀರಃ=ಶರೀರಸಂಬಂಧೀ ಆದಿತ್ಯೋ ಜೀವೋ ವಾ ನ ತಥಾ। ಸರ್ವಗತತ್ವಾನುಪಪತ್ತೇರೇವ)

**4. ಓಂ ॥ ಕರ್ಮಕರ್ತೃವ್ಯಪದೇಶಾಚ್ಚ ॥ ಓಂ**

'ಆತ್ಮಾನಂ ಪರಸ್ಮೈಶಂಸತಿ' ಎಂದ ಸರ್ವಗತನಾದವನನ್ನು 'ಆತ್ಮಾನಂ' ಎಂದು ಕರ್ಮವನ್ನಾಗಿಯೂ ಜೀವನನ್ನು 'ಶಂಸತಿ' ಎಂದು ಕರ್ತೃವನ್ನಾಗಿಯೂ ಹೇಳಿರುವುದರಿಂದ ಜೀವನು ಸರ್ವಗತನಾಗಿ ಹೇಳಲ್ಪಟ್ಟಿಲ್ಲ.

(ಭಾವಪ್ರಧಾನೋಽಯಂ। ಸರ್ವತ್ರೋಚ್ಯಮಾನಸ್ಯೇತಿ ಶಾರೀರಸ್ಯೇತಿ ಚ ವಿಪರಿಣಮ್ಯ ಅನುವರ್ತತೇ। ಸರ್ವತ್ರ ಉಚ್ಯಮಾನಸ್ಯ ಕರ್ಮತ್ವೇನ, ಶಾರೀರಸ್ಯ ಶಂಸತೀತಿ ಕರ್ತೃತ್ವೇನ ವ್ಯಪದೇಶಾಚ್ಚ ನ ಶಾರೀರಃ ತಥಾ।)

**5. ಓಂ॥ ಶಬ್ದವಿಶೇಷಾತ್ ॥ ಓಂ**

ಶಬ್ದಸ್ಯ=ಬ್ರಹ್ಮಶಬ್ದಕ್ಕೆ ವಿಶೇಷಾತ್=ಅವಧಾರಣರೂಪ ವಿಶೇಷವಿರುವುದರಿಂದ ಬ್ರಹ್ಮಶಬ್ದ ಜೀವವಾಚಕವಲ್ಲ.

(ಶಬ್ದಸ್ಯ=ಬ್ರಹ್ಮಶಬ್ದಸ್ಯ ವಿಶೇಷಾತ್=ಸಾವಧಾರಣತ್ವರೂಪ ವಿಶೇಷಾತ್ ಬ್ರಹ್ಮ ಶಬ್ದಃ ನ ಶಾರೀರ ಪರಃ।)

**6. ಓಂ॥ ಸ್ಮೃತೇಶ್ಚ॥ ಓಂ**

''ಅಹಮಾತ್ಮಾ ಗುಡಾಕೇಶ ಸರ್ವಭೂತಾಶಯಸ್ಥಿತಃ'' ಹೀಗೆ ಸರ್ವಗತನಾಗಿ ವಿಷ್ಣುವೇ ಹೇಳಲ್ಪಟ್ಟಿರುವುದರಿಂದಲೂ ವಿಷ್ಣುವೇ ಸರ್ವಗತ.

('ಅಹಮಾತ್ಮಾ ಗುಡಾಕೇಶ ಸರ್ವಭೂತಾಶಯಸ್ಥಿತಃ' ಇತಿ ಸ್ಮೃತೇಶ್ಚ ಸರ್ವತ್ರ ತದೇವ।)

**7. ಓಂ॥ ಅರ್ಭಕೌಕಸ್ತ್ವಾತ್ ತದ್ವ್ಯಪದೇಶಾಚ್ಚ ನೇತಿ ಚೇನ್ನ ನಿಚಾಯ್ಯತ್ವಾದೇವಂ ವ್ಯೋಮವಚ್ಚ॥**

ಅರ್ಭಕ=ಅಲ್ಪವಾದ ಓಕ=ಸ್ಥಾನದಲ್ಲಿರುವವನು. (ವ್ಯಪದೇಶಾತ್ ಎಂಬ ಶಬ್ದವನ್ನು ಇದರೊಂದಿಗೆ ಸೇರಿಸಿಕೊಂಡರೆ) 'ಸರ್ವೇಷು ಭೂತೇಷು' ಎಂದು ಎಲ್ಲ ಪ್ರಾಣಿಗಳ ಕಿರಿದಾದ ಹೃದಯ ದೇಶದಲ್ಲಿರುವವನನ್ನಾಗಿ ಹೇಳಿರುವುದರಿಂದ ತದ್ವ್ಯಪದೇಶಾಚ್ಚ= ಚಕ್ಷುರ್ಮಯನನ್ನಾಗಿ ಹೇಳಿರುವುದರಿಂದಲೂ ಸರ್ವಗತ ಪರಮಾತ್ಮನಲ್ಲ. ಇತಿ ಚೇನ್ನ=ಹೀಗೆನ್ನಕೂಡದು. ಏವಂ ನಿಚಾಯ್ಯತ್ವಾತ್=ಹೃದಯಾಕಾಶ ಗತತ್ವೇನ ಉಪಾಸನೆಗಾಗಿ ಹಾಗೆ ಹೇಳಲಾಗಿದೆ. ಅದು ಅವನಿಗೆ ವ್ಯೋಮವತ್=ಆಕಾಶದಂತೆ ಯುಕ್ತವೂ ಆಗಿದೆ. (ವ್ಯಾಪ್ತವಾದ ಆಕಾಶ ಚಿಕ್ಕಪ್ರದೇಶದಲ್ಲೂ ಇಲ್ಲವೆ? ಅದರಂತೆ ಬ್ರಹ್ಮ.)

(ಸರ್ವತ್ರ, ತತ್ತು ಇತಿ ವರ್ತತೇ) ಅರ್ಭಕಂ=ಅಲ್ಪಂ, ಓಕಃ=ಸ್ಥಾನಂ ಯಸ್ಯ ತಸ್ಯ ಭಾವಃ ತತ್ವಂ ತಸ್ಮಾತ್। ವ್ಯಪದೇಶಾದಿತ್ಯೇತದತ್ರಾನ್ವೇತಿ। 'ಸರ್ವೇಷು ಭೂತೇಷು' ಇತಿ ಸರ್ವಪ್ರಾಣಿ ಹೃದಯಗುಹಾಸ್ಥತ್ವರೂಪ - ಅರ್ಭಕೌಕಸ್ತ್ವವ್ಯಪದೇಶಾತ್ ತದ್ವ್ಯಪದೇಶಾಚ್ಚ=ಚಕ್ಷುರ್ಮಯತ್ವಾದಿಲಿಂಗೇನ ವ್ಯಪದೇಶಾತ್ ನ ಸರ್ವತ್ರ ಬ್ರಹ್ಮ ಇತಿ ಯುಕ್ತಮ್। ಏವಂ ನಿಚಾಯ್ಯತ್ವಾತ್=ಅರ್ಭಕೌಕಸ್ತ್ವಾದಿನಾ ಉಪಾಸ್ಯತ್ವಾತ್ ನ ವ್ಯರ್ಥಾ। ವ್ಯೋಮವತ್ ಭೂತಾಶಯಾದೌ ಸ್ಥಿತಿಃ ಯುಕ್ತಾ।)

**8. ಓಂ॥ ಸಂಭೋಗ ಪ್ರಾಪ್ತಿರಿತಿ ಚೇನ್ನ ವೈಶೇಷ್ಯಾತ್ ॥ ಓಂ**

ಸಂಭೋಗ=ಸಮಾನವಾದ ಭೋಗವು ಪ್ರಾಪ್ತಿಃ=ಪರಮಾತ್ಮನಿಗೆ ಬಂದೀತು ಎಂದರೆ ನ=ಇಲ್ಲ, ವೈಶೇಷ್ಯಾತ್=ಅವನಿಗೆ ಜೀವನಿಗಿಂತಲೂ ವಿಶೇಷ ಶಕ್ತಿ ಇದೆ.

(ಸಮಾನೋ ಭೋಗಃ ಸಂಭೋಗಃ, ಸಮಾನಭೋಗಪ್ರಾಪ್ತಿಃ ಬ್ರಹ್ಮಣಃ ಇತಿ ಚೇನ್ನ ಕುತಃ? ವೈಶೇಷ್ಯಾತ್=ಸಾಮರ್ಥ್ಯಾತಿಶಯಾತ್ ।)

## ಶಾಂಕರಭಾಷ್ಯದಲ್ಲಿ ಸೂತ್ರಗಳ ಅರ್ಥ

**1. ಸರ್ವತ್ರ ಪ್ರಸಿದ್ಧೋಪದೇಶಾತ್ ।**

ಈ ಪಾದ ಮತ್ತು ಮುಂದಿನ ಪಾದದಲ್ಲಿ ಅಸ್ಪಷ್ಟವಾದ ಬ್ರಹ್ಮಧರ್ಮಗಳನ್ನು ಹೇಳಿರುವ ವಾಕ್ಯಗಳನ್ನು ಸಮನ್ವಯ ಮಾಡಲಾಗಿದೆ. ಈ ಅಧಿಕರಣದಲ್ಲಿ ''ಮನೋಮಯಃ ಪ್ರಾಣಶರೀರಃ ಭಾರೂಪಃ'' ಎಂದು ಛಾಂದೋಗ್ಯೋಪನಿಷತ್ತಿನ ವಾಕ್ಯದ ಸಮನ್ವಯವನ್ನು ಮಾಡಲಾಗಿದೆ. ಈ ವಾಕ್ಯದಲ್ಲಿ ಮನೋಮಯ ಎಂಬ ಶಬ್ದ ಜೀವವಾಚಕ. ಆದುದರಿಂದ ಅವನೇ ಈ ಪ್ರಕರಣದಲ್ಲಿ ಉಪಾಸ್ಯನಾಗಿ ಪ್ರತಿಪಾದ್ಯ ಎಂದು ಪೂರ್ವಪಕ್ಷ. ಸರ್ವತ್ರ ಪ್ರಸಿದ್ಧೋಪದೇಶಾತ್=ಸರ್ವವೇದಾಂತಗಳಲ್ಲಿಯೂ ಜಗತ್ತಿಗೆ ಕಾರಣವಾಗಿ, ಬ್ರಹ್ಮಶಬ್ದ ದಿಂದ ವಾಚ್ಯನಾಗಿ ಪ್ರಸಿದ್ಧನಾದ ಬ್ರಹ್ಮನೇ ಈ ಪ್ರಕರಣದ ಪ್ರಾರಂಭದಲ್ಲಿ ''ಸರ್ವಂ ಖಲ್ವಿದಂ ಬ್ರಹ್ಮ'' ಎಂದು ಪ್ರಸ್ತುತವಾಗಿದೆ. ಆದ್ದರಿಂದ ಅವನನ್ನೇ ಮನೋಮಯ ಶಬ್ದದಿಂದ ಉಪನಿಷತ್ತು ಉಪದೇಶಿಸಿದೆ.

**2. ವಿವಕ್ಷಿತಗುಣೋಪಪತ್ತೇಶ್ಚ ॥**

ಈ ಪ್ರಕರಣದಲ್ಲಿ ಶ್ರುತಿಗೆ ತಾತ್ಪರ್ಯವಿಷಯವಾದ (ವಿವಕ್ಷಿತ) ಸತ್ಯಸಂಕಲ್ಪತ್ವ, ಅಪಹತಪಾಪ್ಮತ್ವ ಇತ್ಯಾದಿ ಉಪಾಸನಾಯೋಗ್ಯವಾದ ಗುಣಗಳು ಬ್ರಹ್ಮನಲ್ಲಿ ಉಪಪನ್ನವಾಗುತ್ತವೆ. ಆದ್ದರಿಂದಲೂ ಅವನೇ ಮನೋಮಯ ವಾಕ್ಯದಿಂದ ಪ್ರತಿಪಾದ್ಯ. ಅವನು ಸರ್ವಾತ್ಮಕನಾದುದರಿಂದ ಜೀವನ ಧರ್ಮವಾದ ಮನೋಮಯತ್ವವು ಅವನಲ್ಲಿದೆ.

**3. ಅನುಪಪತ್ತೇಸ್ತು ನ ಶಾರೀರಃ ।**

ಹಿಂದಿನ ಸೂತ್ರದಲ್ಲಿ ಪ್ರಕೃತ ಪ್ರಕರಣ ಪ್ರತಿಪಾದ್ಯ ಗುಣಗಳು ಬ್ರಹ್ಮನಲ್ಲಿ ಇವೆ ಎಂದು ಹೇಳಲಾಯಿತು. ಈ ಸೂತ್ರದಲ್ಲಿ ಅಂತಹ ಗುಣಗಳು ಜೀವನಲ್ಲಿ ಇಲ್ಲ ಎನ್ನಲಾಗಿದೆ. ಅನುಪಪತ್ತೇಃ=ಆ ಗುಣಗಳು ಜೀವನಲ್ಲಿ ಇಲ್ಲವಾದುದರಿಂದ ಶಾರೀರಃ=ಜೀವನು ನ=ಈ ಪ್ರಕರಣದಲ್ಲಿ ಪ್ರತಿಪಾದ್ಯನಲ್ಲ.

**4. ಕರ್ಮಕರ್ತೃವ್ಯಪದೇಶಾಚ್ಚ ॥**

ಇಲ್ಲಿ ''ಏತಂ ಇತಃ ಪ್ರೇತ್ಯ ಅಭಿಸಂಭವಿತಾಸ್ಮಿ'' ಎಂದು ಮನೋಮಯ ಆತ್ಮನನ್ನು 'ಏತಂ' ಎಂದು ಕರ್ಮನನ್ನಾಗಿಯೂ ಜೀವನನ್ನು 'ಅಭಿಸಂಭವಿತಾಸ್ಮಿ' ಎಂದು

ಕರ್ತೃವನ್ನಾಗಿಯೂ ಉಲ್ಲೇಖಿಸಲಾಗಿದೆ. ಹೀಗೆ ಜೀವನು ಮರಣ ಹೊಂದಿ ಮನೋಮಯ ಆತ್ಮನನ್ನು ಹೊಂದುತ್ತಾನೆ ಎಂದು ಹೇಳಿರುವುದರಿಂದ ಮನೋಮಯ ಜೀವನಲ್ಲ.

**5. ಶಬ್ದವಿಶೇಷಾತ್ ॥**

ಇದೇ ರೀತಿಯಲ್ಲಿ ಶ್ವೇತಾಶ್ವತರೋಪನಿಷತ್ತಿನ ಪ್ರಕರಣವೊಂದಿದೆ. ಅಲ್ಲಿ ''ಅಯಂ ಅಂತರಾತ್ಮನ್ ಪುರುಷೋ ಹಿರಣ್ಮಯಃ'' ಎಂದು ಜೀವನನ್ನು 'ಅಂತರಾತ್ಮನ್' ಎಂಬುದಾಗಿ ಸಪ್ತಮ್ಯಂತವಾಗಿಯೂ ಮನೋಮಯನನ್ನು 'ಪುರುಷಃ' ಎಂದು ಪ್ರಥಮಾಂತ ಪದದಿಂದಲೂ ಪರಾಮರ್ಶೆ ಮಾಡಿರುವುದರಿಂದ ಜೀವನು ಮನೋಮಯನಲ್ಲ.

(ಶಾರೀರಾತ್ಮನೋ ಯಃ ಶಬ್ದೋಽಭಿದಾಯಕಃ ಸಪ್ತಮ್ಯಂತಃ ಅಂತರಾತ್ಮನ್ನಿತಿ ತಸ್ಮಾದ್ ವಿಶಿಷ್ಟಃ ಅನ್ಯಃ ಪ್ರಥಮಾಂತಃ ಪುರುಷಶಬ್ದಃ ಮನೋಮಯತ್ವಾದಿ ವಿಶಿಷ್ಟಸ್ಯಾತ್ಮನೋಽಭಿಧಾಯಕಃ।)

**6. ಸ್ಮೃತೇಶ್ಚ॥**

ಜೀವ ಪರಮಾತ್ಮರಿಗೆ ಭೇದವನ್ನು ತಿಳಿಸುವ ಪೌರುಷೇಯ ಗ್ರಂಥವೂ ಇದೆ.

ಈಶ್ವರಃ ಸರ್ವಭೂತಾನಾಂ ಹೃದ್ದೇಶೇಽರ್ಜುನ ತಿಷ್ಠತಿ।
ಭ್ರಾಮಯನ್ ಸರ್ವಭೂತಾನಿ ಯಂತ್ರಾರೂಢಾನಿ ಭಾರತ॥

**7. ಅರ್ಭಕೌಕಸ್ತ್ವಾತ್ ತದ್ವ್ಯಪದೇಶಾಚ್ಚ ನೇತಿ ಚೇನ್ನ ನಿಚಾಯ್ಯತ್ವಾದೇವಂ ವ್ಯೋಮವಚ್ಚ॥**

''ಆತ್ಮಾನಂ ಅಂತಃ ಹೃದಯೇ'' ಎಂದು ಅಲ್ಪಪ್ರದೇಶದಲ್ಲಿ ಸ್ಥಿತಿಯನ್ನು ಮತ್ತು 'ಅಣೀಯಾನ್ ವ್ರೀಹೇರ್ವಾ' ಎಂದು ಅಣುತ್ವವನ್ನೂ ಹೇಳಿರುವುದರಿಂದ ಮನೋಮಯ ಬ್ರಹ್ಮನಲ್ಲ ಎನ್ನುವುದು ಸರಿಯಲ್ಲ. ಸರ್ವಗತನಾದ ಬ್ರಹ್ಮನಿಗೆ ಉಪಾಸನೆಗಾಗಿ ಅಲ್ಪದೇಶಸ್ಥಿತಿಯನ್ನು ಹೇಳಲಾಗಿದೆ. ಅದು ಆಕಾಶದಂತೆ ಅವನಿಗೆ ಉಪಾಧ್ಯಪೇಕ್ಷಯಾ ಅಪಾರಮಾರ್ಥಿಕ.

**8. ಸಂಭೋಗಪ್ರಾಪ್ತಿರಿತಿ ಚೇನ್ನ ವೈಶೇಷ್ಯಾತ್ ॥**

ಜೀವನೊಡನೆ ಏಕದೇಹದಲ್ಲಿ ಐಕ್ಯದಿಂದಿರುವ ಪರಬ್ರಹ್ಮನಿಗೆ ಜೀವನಂತೆ ಸುಖಾದಿಗಳೂ ಬರಬೇಕು ಎಂದರೆ ಅದು ಸರಿಯಲ್ಲ. ಅವನಲ್ಲಿ ಪಾಪರಾಹಿತ್ಯ ಎಂಬ ವಿಶೇಷವಿದೆ.

## ಚಂದ್ರಿಕಾದಲ್ಲಿ ಮಾಡಿರುವ ವಿಮರ್ಶೆ

ಮನೋಮಯತ್ವ ಜೀವನ ಧರ್ಮ. 'ಅಪ್ರಾಣಃ ಅಮನಾಃ ಶುಭ್ರಃ' ಎಂಬ ಶ್ರುತಿಯಂತೆ ಬ್ರಹ್ಮ ಮನೋಮಯನಲ್ಲ ಎಂದು ಪೂರ್ವಪಕ್ಷ. ಅದಕ್ಕೆ ಸಿದ್ಧಾಂತ- ಮನೋಮಯನಲ್ಲಿ 'ಸತ್ಯಕಾಮತ್ವ' ಎಂಬ ಧರ್ಮವನ್ನು ಹೇಳಲಾಗಿದೆ. ಅದು

ಬ್ರಹ್ಮನ ಧರ್ಮ. ಆದ್ದರಿಂದ ಬ್ರಹ್ಮನೇ ಮನೋಮಯ ಎಂದು. ಇಲ್ಲಿ ಪೂರ್ವಪಕ್ಷ ಸಿದ್ಧಾಂತ ಯುಕ್ತಿಗಳು ಸಮಬಲವಾದುದರಿಂದ ಪರಬ್ರಹ್ಮನೇ ಮನೋಮಯ ಎಂದು ನಿರ್ಧರಿಸಲು ಬರುವುದಿಲ್ಲ.

2. ದ್ವೈತಭಾಷ್ಯದಂತೆ ಮೊದಲ ಸೂತ್ರದ 'ಸರ್ವತ್ರ' ಎಂಬ ಪದವು ಪ್ರತಿಜ್ಞಾಬೋಧಕಪದ. 'ಉಪನಿಷತ್ತಿನಲ್ಲಿ ಸರ್ವಗತನಾಗಿ ಹೇಳಲ್ಪಟ್ಟವನು' ಎಂದು ಅದರ ಅರ್ಥ. ಆದರೆ ಶಾಂಕರಭಾಷ್ಯದಲ್ಲಿ 'ಸರ್ವತ್ರ ಪ್ರಸಿದ್ಧೋಪದೇಶಾತ್' ಎಂದು ಒಂದೇ ಪದ. ಅದು ಹೇತುವಾಚಕ ಪದ. ಹೀಗಾಗಿ ಸೂತ್ರದಲ್ಲಿ ಕಾರಣವನ್ನಷ್ಟೇ ಹೇಳಿದಂತಾಯಿತು. ಸಾಧ್ಯವಾದ ಅಂಶವನ್ನು ಉಲ್ಲೇಖ ಮಾಡಲಾಗಿಲ್ಲ. ಇದು ಸೂತ್ರವ್ಯಾಖ್ಯಾನದ ಕೌಶಲವಲ್ಲ.

3. 'ವಿವಕ್ಷಿತಗುಣೋಪಪತ್ತೇಶ್ಚ' ಎಂಬ ಸೂತ್ರ 'ಈ ಪ್ರಕರಣದಲ್ಲಿ ಹೇಳಿದ ಗುಣಗಳು ಬ್ರಹ್ಮನಲ್ಲಿ ಉಪಪನ್ನವಾಗುತ್ತವೆ' ಎಂದು ತಿಳಿಸುತ್ತದೆ. ಇದರಿಂದ ಆ ಗುಣಗಳು ಜೀವನಲ್ಲಿ ಇಲ್ಲ ಎಂದು ತಿಳಿದಂತಾಗುತ್ತದೆ. ಅದನ್ನು ತಿಳಿಸಲು ಪುನಃ 'ಅನುಪಪತ್ತೇಸ್ತು ನ ಶಾರೀರಃ' ಎಂಬ ಪ್ರತ್ಯೇಕ ಸೂತ್ರ ವ್ಯರ್ಥ.

## ರಾಮಾನುಜ ಭಾಷ್ಯದಲ್ಲಿ ಹೇಳಿದ ಸೂತ್ರಾರ್ಥ

ಪ್ರಥಮ ಪಾದದಲ್ಲಿ ಸರ್ವಜ್ಞನಾದ ಬ್ರಹ್ಮನೇ ಶಾಸ್ತ್ರಪ್ರತಿಪಾದ್ಯ ಎಂದು ಹೇಳಲಾಗಿದೆ. ಎರಡನೆಯ ಪಾದದಲ್ಲಿ ಜೀವಾತ್ಮನ ಅಸ್ಪಷ್ಟವಾದ ಧರ್ಮಗಳನ್ನು ಹೇಳುವ ವಾಕ್ಯಗಳನ್ನು ತೃತೀಯಪಾದದಲ್ಲಿ ಸ್ಫುಟವಾಗಿ ಜೀವಧರ್ಮಗಳನ್ನು ಹೇಳುವ ವಾಕ್ಯಗಳನ್ನೂ ಚತುರ್ಥಪಾದದಲ್ಲಿ ಇನ್ನೂ ಹೆಚ್ಚು ಸ್ಫುಟವಾಗಿ ಜೀವಧರ್ಮಗಳನ್ನು ಹೇಳುವ ವಾಕ್ಯಗಳನ್ನು ಬ್ರಹ್ಮನಲ್ಲಿ ಸಮನ್ವಯ ಮಾಡಲಾಗುತ್ತದೆ. ಹೀಗೆ ರಾಮಾನುಜಭಾಷ್ಯದಲ್ಲಿ ಪಾದವ್ಯವಸ್ಥೆ ಯನ್ನು ಮಾಡಲಾಗುತ್ತದೆ.

**ಸರ್ವತ್ರ ಪ್ರಸಿದ್ಧೋಪದೇಶಾತ್ ।**

ಛಾಂದೋಗ್ಯದ 'ಮನೋಮಯಃ ಪ್ರಾಣಶರೀರಃ ಭಾರೂಪಃ' ಎಂಬ ವಾಕ್ಯದಲ್ಲಿ ಮನೋಮಯ ಶಬ್ದವಿರುವುದರಿಂದ ಜೀವನ ಕುರಿತು ಆ ವಾಕ್ಯವಿದೆ ಎಂದು ಪೂರ್ವಪಕ್ಷ. ಸರ್ವತ್ರ=ಎಲ್ಲಾ ವೇದಾಂತ ವಾಕ್ಯಗಳಲ್ಲೂ ಬ್ರಹ್ಮಪರವಾದ ಶಬ್ದ 'ಮನೋಮಯ' ಎಂಬುದು. ಮುಂಡಕದಲ್ಲಿ 'ಮನೋಮಯಃ ಪ್ರಾಣಶರೀರನೇತಾ' ತೈತ್ತಿರೀಯದಲ್ಲಿ - 'ತಸ್ಮಿನ್ನಯಂ ಪುರುಷೋ ಮನೋಮಯಃ'

ಹೀಗೆ ಉಪನಿಷತ್ತುಗಳು ಮನೋಮಯಶಬ್ದದಿಂದ ಬ್ರಹ್ಮನನ್ನೇ ಕರೆದಿರುವುದ ರಿಂದ ಛಾಂದೋಗ್ಯದಲ್ಲಿ ಹೇಳಿದ ಮನೋಮಯನೂ ಬ್ರಹ್ಮನೇ. ಮನೋಮಯನೆಂದರೆ ಶುದ್ಧಮನಸ್ಸಿನಿಂದ ವೇದ್ಯ ಎಂದರ್ಥ.

**2. ವಿವಕ್ಷಿತಗುಣೋಪಪತ್ತೇಶ್ಚ।**

ಈ ಉಪನಿಷತ್ತಿನಲ್ಲಿ ಮನೋಮಯನಾದ ಬ್ರಹ್ಮನಿಗೆ ಮುಂದೆ ಹೇಳಲಾಗುವ 'ಭಾರೂಪಃ, ಸತ್ಯಸಂಕಲ್ಪಃ, ಆಕಾಶಾತ್ಮಾ, ಸರ್ವಕರ್ಮಾ, ಸರ್ವಕಾಮಃ' ಇತ್ಯಾದಿ ಗುಣಗಳು ಸರಿಹೊಂದುತ್ತವೆ. ಜೀವನಲ್ಲಿ ಆ ಗುಣಗಳು ಇಲ್ಲ.

**3. ಅನುಪಪತ್ತೇಸ್ತು ನ ಶಾರೀರಃ।**

ಈ ಎಲ್ಲ ಗುಣಗಳು ಜೀವಾತ್ಮನಲ್ಲಿ ಇಲ್ಲವಾದುದರಿಂದ ಶಾರೀರಃ= ಜೀವಾತ್ಮನು ಇಲ್ಲಿ ಮನೋಮಯನಾಗಿ ವಿವಕ್ಷಿತನಲ್ಲ.

**4. ಕರ್ಮಕರ್ತೃವ್ಯಪದೇಶಾಚ್ಚ।**

'ಏತಂ ಇತಃ ಪ್ರೇತ್ಯ ಅಭಿಸಂಭವಿತಾಸ್ಮಿ' ಎಂದು ಇಲ್ಲಿ ಮನೋಮಯನನ್ನು ಪ್ರಾಪ್ಯನನ್ನಾಗಿಯೂ ಜೀವನನ್ನು ಪ್ರಾಪ್ತೃವನ್ನಾಗಿಯೂ ಹೇಳಲಾಗಿದೆ. ಆದ್ದರಿಂದ ಜೀವ ಮನೋಮಯನಲ್ಲ.

**5. ಶಬ್ದವಿಶೇಷಾತ್ ।**

'ಏಷಃ ಮೇ ಆತ್ಮಾ ಅಂತರ್ಹೃದಯೇ' ಎಂದು ಜೀವಾತ್ಮನನ್ನು 'ಮೇ' ಎಂಬ ಷಷ್ಠ್ಯಂತ ಪದದಿಂದಲೂ ಮನೋಮಯನನ್ನು 'ಆತ್ಮಾ' ಎಂದು ಪ್ರಥಮಾಂತ ಪದದಿಂದಲೂ ನಿರ್ದೇಶ ಮಾಡಲಾಗಿದೆ. ಆದ್ದರಿಂದ ಜೀವ ಮನೋಮಯನಲ್ಲ.

**6. ಸ್ಮೃತೇಶ್ಚ**

'ಸರ್ವಸ್ಯ ಚಾಹಂ' ಇತ್ಯಾದಿ ಗೀತಾವಾಕ್ಯ ಜೀವನ ಹೃದಯದೊಳಗಿರುವವನು ಬ್ರಹ್ಮನೆಂದೇ ಹೇಳಿದೆ. ಆದ್ದರಿಂದ ಉಪನಿಷತ್ತಿನಲ್ಲಿ ಸರ್ವಗತನಾಗಿ ಹೇಳಲ್ಪಟ್ಟವನು ಬ್ರಹ್ಮನೇ.

ಇತರ ಎರಡು ಸೂತ್ರಗಳಿಗೆ ಶಾಂಕರಭಾಷ್ಯದಂತೆಯೇ ಅರ್ಥ.

## ಚಂದ್ರಿಕಾದಲ್ಲಿ ಮಾಡಿರುವ ವಿಮರ್ಶೆ

ರಾಮಾನುಜಭಾಷ್ಯದಲ್ಲಿ ಪ್ರಥಮ ಸೂತ್ರಕ್ಕೆ ಇನ್ನೊಂದು ಅರ್ಥವನ್ನು ಹೇಳಲಾಗಿದೆ- 'ಸರ್ವಂ ಖಲ್ವಿದಂ ಬ್ರಹ್ಮ' ಎಂದು ಈ ಪ್ರಸಂಗದಲ್ಲಿ ವಾಕ್ಯವಿದೆ. ಇಲ್ಲಿ ಸರ್ವಾತ್ಮಕವೆಂದು ಪ್ರಸ್ತುತನಾದವನು ಜೀವ. ಅವನು ಕರ್ಮವಶದಿಂದ ತೃಣದಿಂದ ಉಚ್ಚ ಯೋನಿಯವರೆಗಿನ ಎಲ್ಲ ದೇಹಗಳನ್ನು ಪಡೆಯುತ್ತಾನೆ. ಆದ್ದರಿಂದ ಅವನೇ ಸರ್ವಾತ್ಮಕನಾದ ಬ್ರಹ್ಮ. ಹೀಗೆ ಪೂರ್ವಪಕ್ಷ. ಸಿದ್ಧಾಂತ–ಸರ್ವತ್ರ ಎಲ್ಲ ಜಗದಾತ್ಮಕವಾಗಿ ಉಪದಿಷ್ಟವಾದ ಬ್ರಹ್ಮ ಜೀವನಲ್ಲ ಪರಬ್ರಹ್ಮನೆ. ಶ್ರುತಿಯಲ್ಲಿ 'ಖಲು' ಎಂಬ ಶಬ್ದದಿಂದ 'ಸರ್ವಾತ್ಮಕತ್ವವು ಶ್ರುತಿ ಪ್ರಸಿದ್ಧ' ಎಂದು ಸೂಚಿಸಲಾಗಿದೆ. ಪರಮಾತ್ಮ ಎಲ್ಲರೊಳಗೂ ಇರುವುದರಿಂದ ಸರ್ವಾತ್ಮಕನೆಂದು ಪ್ರಸಿದ್ಧ. ಆದರೆ ಜೀವ ಹೀಗೆ ಪ್ರಸಿದ್ಧನಲ್ಲ.

ಆದರೆ ಈ ಅರ್ಥ ಸೂತ್ರಕ್ಕೆ ಸಂಗತವಾಗುವುದಿಲ್ಲ. 'ಸರ್ವತ್ರ' ಎಂದರೆ ಎಲ್ಲೆಡೆ ಇರುವ ಎಂದು ಅರ್ಥ. ಆದರೆ ರಾಮಾನುಜಭಾಷ್ಯದಲ್ಲಿ 'ಎಲ್ಲವೂ' ಎಂದು ಅರ್ಥವನ್ನು ಮಾಡಲಾಗಿದೆ. ಆಗ 'ಸರ್ವಂ' ಎಂಬ ಶಬ್ದವಿರಬೇಕಿತ್ತು. ಅದರಂತೆ, 'ಪ್ರಸಿದ್ಧೋಪದೇಶಾತ್' ಎನ್ನುವುದಕ್ಕೂ, 'ಪ್ರಸಿದ್ಧತ್ವೇನ ಉಪದೇಶಾತ್' ಎಂದು ಅರ್ಥ ಹೇಳಬೇಕಾಗುತ್ತದೆ. ಇದೂ ಸ್ವರಸವಲ್ಲ.

**॥ ಇಲ್ಲಿಗೆ ಸರ್ವಗತತ್ವಾಧಿಕರಣ ಮುಗಿಯಿತು ॥**

## ಅತ್ತೃತ್ವಾಧಿಕರಣ - 2

**'ಜನ್ಮಾದ್ಯಸ್ಯ ಯತಃ' ಇತ್ಯುಕ್ತಮ್ । ತತ್ರಾತ್ತೃತ್ವಂ-**

**ಸ ಯದ್ಯದೇವಾಸೃಜತ ತತ್ತದತ್ತುಮಧ್ರಿಯತ ।**

**ಸರ್ವಂ ವಾ ಅತ್ತೀತಿ ತದದಿತೇರದಿತಿತ್ವಮ್ । (ಬೃ3.2.5)**

**ಇತ್ಯದಿತೇಃ ಪ್ರತೀಯತೇ । 'ಸ ಯದ್ಯದೇವಾಸೃಜತ' ಇತಿ ಪುಂಲಿಂಗಂ ಚ 'ಕೂಟಸ್ಥೋಽಕ್ಷರ ಉಚ್ಯತೇ' (ಭ.ಗೀ.15.16) ಇತ್ಯಾದಿವತ್ । ಅತ್ರೋಚ್ಯತೇ-**

**ಓಂ ॥ ಅತ್ತಾ ಚರಾಚರಗ್ರಹಣಾತ್ ॥ ಓಂ**

**ನ ಹಿ ಚರಾಚರಸ್ಯ ಸರ್ವಸ್ಯ ಅತ್ತೃತ್ವಂ ಅದಿತೇಃ ।**

**ಸ್ರಷ್ಟಾ ಪಾತಾ ತಥೈವಾತ್ತಾ ನಿಖಿಲಸ್ಯೈಕ ಏವ ತು ।**

**ವಾಸುದೇವಃ ಪರಃ ಪುಂಸಾಮ್ ಇತರೇಽಲ್ಪಸ್ಯ ವಾ ನ ವಾ ॥**

**ಇತಿ ಸ್ಕಾಂದೇ ।**

**ಏಕಃ ಪುರಸ್ತಾದ್ಯ ಇದಂ ಬಭೂವ**

**ಯತೋ ಬಭೂವ ಭುವನಸ್ಯ ಗೋಪಾಃ ।**

**ಯಮಪ್ಯೇತಿ ಭುವನಂ ಸಾಂಪರಾಯೇ**

**ಸ ನೋ ಹರಿರ್ಘೃತಮಿಹಾಯುಷೇಽತ್ತು ದೇವಃ ॥**

**ಇತಿ ಶ್ರುತಿಃ (ಘೃತಸೂ.) ॥ 19 ॥**

'ಜನ್ಮಾದ್ಯಸ್ಯ ಯತಃ' ಎಂಬ ಸೂತ್ರದಲ್ಲಿ ಬ್ರಹ್ಮನೇ ಜಗತ್ತಿನ ಸೃಷ್ಟ್ಯಾದಿಗಳಿಗೆ ಕಾರಣ ಎನ್ನಲಾಯಿತು. ಸೃಷ್ಟ್ಯಾದಿಗಳಲ್ಲಿ ಸೇರಿದ ಸಂಹಾರಕರ್ತೃತ್ವ 'ಸ ಯದ್ಯದೇವ' ಇತ್ಯಾದಿ

ಬೃಹದಾರಣ್ಯಕೋಪನಿಷತ್ತಿನಲ್ಲಿ 'ಅದಿತಿಯ' ಕಾರ್ಯ ಎಂದು ತಿಳಿಯುತ್ತದೆ. ದೇವತೆಗಳ ಜನನಿಯಾದ ಅದಿತಿಯು ಸ್ತ್ರೀಯಾದರೂ ಉಪನಿಷತ್ತಿನಲ್ಲಿ 'ಸಃ' ಎಂಬ ಪುಂಲಿಂಗಶಬ್ದ ಭಗವದ್ಗೀತೆಯಲ್ಲಿ ಲಕ್ಷ್ಮೀದೇವಿಗೆ 'ಕೂಟಸ್ಥಃ ಅಕ್ಷರಃ' ಎಂದಂತೆ ಯುಕ್ತವಾಗುತ್ತದೆ. ಈ ಪೂರ್ವಪಕ್ಷಕ್ಕೆ ಸೂತ್ರಕಾರರು ನೀಡಿದ ಸಮಾಧಾನ - 'ಚರಾಚರಪ್ರಪಂಚವೆಲ್ಲವನ್ನೂ ಸಂಹಾರ ಮಾಡುವವನು' ಎಂದು ಉಪನಿಷತ್ತಿನಲ್ಲಿ ಹೇಳಿರುವುದರಿಂದ ಇಲ್ಲಿ ಸಂಹಾರಕನಾಗಿ ಹೇಳಲ್ಪಟ್ಟವನು ವಿಷ್ಣುವೆ, ದೇವಮಾತೆಯಲ್ಲ. ಏಕೆಂದರೆ, ಅವಳಿಗೆ ಚರಾಚರವೆಲ್ಲವನ್ನೂ ಸಂಹರಿಸುವ ಸಾಮರ್ಥ್ಯವಿಲ್ಲ. ಸ್ಕಾಂದಪುರಾಣದಲ್ಲಿ ಹೀಗೆಯೇ ಹೇಳಲಾಗಿದೆ - ಸಕಲ ಪ್ರಪಂಚದ ಸೃಷ್ಟಿಕರ್ತೃ, ರಕ್ಷಕ, ಸಂಹಾರಕ ಸರ್ವೋತ್ತಮನಾದ ವಾಸುದೇವನೊಬ್ಬನೆ. ಬ್ರಹ್ಮಾದಿ ಇತರ ದೇವತೆಗಳು ಪ್ರಪಂಚದ ಯಾವುದೋ ಒಂದು ಭಾಗಕ್ಕೆ, ಅಸ್ವತಂತ್ರರಾಗಿ ಸೃಷ್ಟಿಕರ್ತರು, ಸ್ವತಂತ್ರರಾಗಿ ಅಲ್ಲ. ವೇದವೂ ಹೀಗೆ ಹೇಳುತ್ತದೆ- ''ಯಾರೊಬ್ಬನೇ ಈ ಪ್ರಪಂಚದ ಆದಿಯಲ್ಲಿ ಇದ್ದನೋ, ಯಾರಿಂದ ಈ ಭುವನವು ಸೃಷ್ಟಿಗೊಂಡಿತೋ, ಯಾರು ಇದನ್ನು ರಕ್ಷಿಸುವನೋ, ಪ್ರಲಯಕಾಲದಲ್ಲಿ (ಸಾಂಪರಾಯೇ) ಈ ಜಗತ್ತು ಯಾರಲ್ಲಿ ಲೀನಗೊಳ್ಳುವುದೋ ಅಂತಹ ಶ್ರೀಹರಿಯು ಯಜ್ಞವೇದಿಕೆಗೆ ಬಂದು ನಮ್ಮ ಆಯುರ್ವೃದ್ಧಿಗಾಗಿ ಆಹುತಿಯಾಗಿ ನೀಡಲ್ಪಟ್ಟ ಆಜ್ಯವನ್ನು ಸ್ವೀಕರಿಸಲಿ''.

**ವಿವರಣೆ :** ಈ ಅಧಿಕರಣದಲ್ಲಿ 'ಅತ್ತೃತ್ವ' ಲಿಂಗವನ್ನು ಬ್ರಹ್ಮನಲ್ಲಿ ಸಮನ್ವಯ ಮಾಡಲಾಗಿದೆ. ಅತ್ತೃತ್ವ ಎಂದರೆ ಸಂಹಾರಕರ್ತೃತ್ವ. ಅದು ಬ್ರಹ್ಮನ ಲಕ್ಷಣವೆಂದು ಜನ್ಮಾಧಿಕರಣದಲ್ಲಿ ಹೇಳಲಾಗಿದೆ. ಆದರೆ ಬೃಹದಾರಣ್ಯಕದಲ್ಲಿ 'ಮೃತ್ಯುನೈವೇದಂ ಆವೃತಮಾಸೀತ್' ಎಂದು ಮೃತ್ಯುವಿಗೆ ಸಂಹಾರಕರ್ತೃತ್ವವನ್ನು ಹೇಳಲಾಗಿದೆ. ಅದೇ ಮಂತ್ರದಲ್ಲಿ ಅದಿತಿ ಎಂಬ ಹೆಸರಿನ ಉಲ್ಲೇಖವಿದೆ. 'ಅದಿತಿ' ಎಂಬ ಹೆಸರು ದೇವತೆಗಳ ಜನನಿಯಾದ ಕಶ್ಯಪನ ಪತ್ನಿಗೆ ಪ್ರಸಿದ್ಧವಾದುದು. ಆದ್ದರಿಂದ ಅವಳಿಗೇ ಸಂಹಾರಕರ್ತೃತ್ವ ಎಂದು ಪೂರ್ವಪಕ್ಷ.

ಅ) ''ಸಃ ಯದ್ಯದೇವಾಸೃಜತ ತತ್ತದತ್ತುಂ ಅಧ್ರಿಯತ'' ಎಂಬುದು ಈ ಅಧಿಕರಣದ ವಿಷಯವಾಕ್ಯ. ಇಲ್ಲಿ 'ಸಃ=ಅವನು' ಎಂದರೆ ಹಿಂದೆ ಪ್ರಕೃತನಾದ ವ್ಯಕ್ತಿ. ಹಿಂದೆ 'ತತ್ ಸಂವತ್ಸರೋಽಭವತ್' ಎಂದು ಸಂವತ್ಸರನಾಮಕನಾದ ಚತುರ್ಮುಖನು ಪ್ರಸ್ತುತನಾಗಿದ್ದಾನೆ. ಅವನನ್ನೆ 'ಸಃ' ಎಂಬ ಪದದಿಂದ ಪರಾಮರ್ಶ ಮಾಡಬಹುದು. ಆದರೆ 'ಸಃ ತಯಾ ವಾಚಾ ತೇನ ಆತ್ಮನಾ ಇದಂ ಸರ್ವಂ ಅಸೃಜತ'' ಎಂದಿವೆ. ಈ ವಾಕ್ಯದಲ್ಲಿ 'ಸಃ' ಎಂದರೆ ಮೃತ್ಯುನಾಮಕ ಅದಿತಿ. 'ಆ ಮೃತ್ಯುವು ತೇನ ಆತ್ಮನಾ=ಚತುರ್ಮುಖ ಬ್ರಹ್ಮನಿಂದ ತಯಾ ವಾಚಾ=ಸರಸ್ವತೀದೇವಿಯಿಂದ ಇದಂ ಸರ್ವಂ=ಈ ಎಲ್ಲವನ್ನೂ ಅಸೃಜತ=ಸೃಷ್ಟಿ ಮಾಡಿಸಿತು.'' ಈ ವಾಕ್ಯದ ಮುಂದೆ 'ಸಃ ಯದ್ಯದೇವಾಸೃಜತ ತತ್ತದತ್ತುಂ ಅಧ್ರಿಯತ- ಅದು ಏನನ್ನು ಸೃಷ್ಟಿಮಾಡಿತೋ ಅದನ್ನು ತಿನ್ನಲು ನಿರ್ಧರಿಸಿತು' ಎಂದಿದೆ. ಆದ್ದರಿಂದ 'ಸಃ' ಎಂಬ ಪದದಿಂದ ಸಹಜವಾಗಿ ಸೃಷ್ಟಿಕರ್ತನಾದ ಮೃತ್ಯುವೇ ಪರಮಾರ್ಶ ಮಾಡಲು ಯೋಗ್ಯವಾಗಿದೆ.

ಆ) ಅದಿತಿಯೂ ಈ ವಾಕ್ಯದಿಂದ ಪ್ರತಿಪಾದ್ಯಳಾದರೆ 'ಸಃ' ಎಂದು ಪುಂಲಿಗ ಪ್ರಯೋಗ ಹೇಗೆ? 'ಸಾ' ಎನ್ನಬೇಕಲ್ಲವೆ? ಎಂದರೆ, ಅದಕ್ಕೆ ಸಮಾಧಾನ - ಸ್ತ್ರೀಯು ಪುರುಷರಂತೆ ಸಾಮರ್ಥ್ಯ ಪಡೆದಿದ್ದರೆ ಅವಳಿಗೂ ಪುಂಲಿಂಗ ಶಬ್ದಗಳನ್ನು ಪ್ರಯೋಗಿಸಬಹುದು. ಆದ್ದರಿಂದಲೇ ಭಗವದ್ಗೀತೆಯಲ್ಲಿ ಲಕ್ಷ್ಮೀದೇವಿಯನ್ನು 'ಕೂಟಸ್ಥಃ' ಎಂದು ಪುಂಲಿಂಗ ಶಬ್ದದಿಂದಲೇ ಉಲ್ಲೇಖಿಸಲಾಗಿದೆ. ಅದರಂತೆ ಅದಿತಿಗೂ 'ಸಃ' ಎಂಬ ಪುಂಲಿಂಗ ಶಬ್ದ ಯುಕ್ತವಾಗಿದೆ.

**ಸಿದ್ಧಾಂತ :** ವಿಷಯವಾಕ್ಯದಲ್ಲಿ 'ಸರ್ವಂ ಅತ್ತುಂ ಅಧ್ರಿಯತ-ಸರ್ವಂ ವಾ ಅತ್ತಿ' ಎಂದು ಸರ್ವಪದವಿದೆ. ಪರಮಾತ್ಮೇತರರು ಜಗತ್ತಿನ ಏಕದೇಶಕ್ಕೆ ಸಂಹರ್ತೃಗಳಾಗಬಹುದು. ಆದರೆ, ಸರ್ವವನ್ನೂ ಸಂಹಾರಮಾಡುವ ಸಾಮರ್ಥ್ಯ ಅವರಿಗಿಲ್ಲ, ಆದ್ದರಿಂದ, ಮೃತ್ಯು-ಅದಿತಿ ಪದಗಳಿಂದ ವಾಚ್ಯನಾದ ಶ್ರೀಹರಿಯೇ ಸರ್ವಸಂಹರ್ತಾ. ॥ 9 ॥

## ಓಂ ॥ ಪ್ರಕರಣಾಚ್ಚ ॥ ಓಂ

**ಅಪ್‌ಸಂವತ್ಸರ ಸೃಷ್ಟ್ಯಾದಿನಾ ತತ್ ಪ್ರಕರಣತ್ವಾಚ್ಚ ।**

**ನೇಹಾಸೀತ್ ಕಿಂಚನಾಪ್ಯಾದೌ ಮೃತ್ಯುರಾಸೀದ್ಧರಿಸ್ತದಾ ।**
**ಸೋಽತ್ಮನೋ ಮನಸಾಸ್ರಾಕ್ಷೀದ್ ಅಪ ಏವ ಜನಾರ್ದನಃ ॥**
**ಶಯಾನಸ್ತಾಸು ಭಗವಾನ್ ನಿರ್ಮಮೇಽಂಡಂ ಮಹತ್ತರಮ್ ।**
**ತತ್ರ ಸಂವತ್ಸರಂ ನಾಮ ಬ್ರಹ್ಮಾಣಮಸೃಜತ್ ಪ್ರಭುಃ ॥**
**ತದತ್ತುಂ ವ್ಯಾದದಾದಾಸ್ಯಂ ತದಾಸೌ ವಿರುರಾವ ಹ ।**
**ಅಥ ತತ್‌ಕೃಪಯಾ ವಿಷ್ಣುಃ ಸೃಷ್ಟಿಕರ್ಮಣ್ಯಯೋಜಯತ್ ।**
**ಸೋಽಸೃಜದ್ ಭುವನಂ ವಿಶ್ವಂ ಅದ್ಯಾರ್ಥಂ ಹರಯೇ ವಿಭುಃ ॥**

**ಇತಿ ಬ್ರಹ್ಮವೈವರ್ತೇ ॥ 10 ॥**

## ॥ ಇತಿ ಅತ್ತೃತ್ವಾಧಿಕರಣಮ್ ॥

ಈ ಪ್ರಕರಣದಲ್ಲಿ ನೀರಿನ ಮತ್ತು ಸಂವತ್ಸರನಾಮಕ ಚತುರ್ಮುಖ ಬ್ರಹ್ಮನ ಸೃಷ್ಟಿಯನ್ನು ಹೇಳಿರುವುದರಿಂದ ಇದು ವಿಷ್ಣುವಿನ ಕುರಿತು ಹೇಳುವ ಪ್ರಕರಣ. ಆದ್ದರಿಂದ ಈ ಪ್ರಕರಣದಲ್ಲಿ ಸಂಹಾರಕರ್ತೃತ್ವೇನ ಪ್ರತಿಪಾದ್ಯನಾದವನು ವಿಷ್ಣುವೇ. ಬ್ರಹ್ಮ ವೈವರ್ತ ಪುರಾಣದಲ್ಲಿ ನೀರು ಮೊದಲಾದುದನ್ನು ಸೃಷ್ಟಿ ಮಾಡಿದವನು ವಿಷ್ಣುವೆಂದೇ ಹೇಳಲಾಗಿದೆ - ''ಮೊದಲು ಈ ಅಸ್ವತಂತ್ರವರ್ಗದಲ್ಲಿ (ಇಹ) ಯಾವುದೂ ಇರಲಿಲ್ಲ, ಆದರೆ,

ಮೃತ್ಯುನಾಮಕ ಶ್ರೀಹರಿ ಇದ್ದ. ಅವನು ಸ್ವೇಚ್ಛೆಯಿಂದ ನೀರನ್ನು ಸೃಷ್ಟಿಮಾಡಿದನು. ಅದರಲ್ಲಿ ಮಲಗಿದ್ದು ವಿಶಾಲವಾದ ಈ ಬ್ರಹ್ಮಾಂಡವನ್ನು ನಿರ್ಮಿಸಿದನು. ಆ ಬ್ರಹ್ಮಾಂಡದಲ್ಲಿ ಸಂವತ್ಸರ ನಾಮಕ ಚತುರ್ಮುಖನನ್ನು ಸೃಷ್ಟಿಮಾಡಿ ಅವನನ್ನೇ ನುಂಗಲು ಬಾಯ್ತೆರೆದನು. ಆಗ ಚತುರ್ಮುಖ ಬೊಬ್ಬಿಟ್ಟ. ದಯೆಗೊಂಡು ಅವನನ್ನು ಸೃಷ್ಟಿಕಾರ್ಯದಲ್ಲಿ ತೊಡಗಿಸಿದನು. ಆ ಚತುರ್ಮುಖನು ವಿಷ್ಣುವಿಗೆ ಆಹಾರವಾಗಿ ಹದಿನಾಲ್ಕು ಲೋಕಗಳನ್ನು ಸೃಷ್ಟಿಮಾಡಿದನು.

**ವಿವರಣೆ :** ಬೃಹದಾರಣ್ಯಕೋಪನಿಷತ್ತಿನ ಈ ಪ್ರಕರಣ ಹೀಗೆ ಆರಂಭಗೊಂಡಿದೆ.

ನೈವೇಹ ಕಿಂಚನಾಗ್ರೇ ಆಸೀತ್। ಮೃತ್ಯುನೈವೇದಮಾವೃತಮಾಸೀತ್ ಅಶನಾಯಯಾ। ಅಶನಾಯಾ ಹಿ ಮೃತ್ಯುಃ। ತನ್ಮನೋಽಕುರುತ ಆತ್ಮಾನ್ವೀ ಸ್ಯಾಮಿತಿ । ಸೋಽರ್ಚನ್ನಚರತ್ । ತಸ್ಯಾರ್ಚತಃ ಆಪೋಽಜಾಯಂತ । ತದ್ಯದಪಾಂ ಶರ ಆಸೀತ್ ತತ್ ಸಮಹನ್ಯತ । ಸಾ ಪೃಥಿವೀ ಅಭವತ್ । ತಸ್ಯಾಂ ಅಶ್ರಾಮ್ಯತ್ ॥

ಹೀಗೆ ಈ ಪ್ರಕರಣದಲ್ಲಿ ಏಕಾಕಿಯಾಗಿದ್ದ ಮೃತ್ಯುವಿನಿಂದ ನೀರು, ಪೃಥಿವೀ, ಸಂವತ್ಸರನಾಮಕ ಬ್ರಹ್ಮ ಇವರ ಸೃಷ್ಟಿಯನ್ನು ಹೇಳಲಾಗಿದೆ. ಇದರಿಂದ ಈ ಪ್ರಕರಣ ವಿಷ್ಣುವಿಗೆ ಸಂಬಂಧಿಸಿದ್ದು ಎಂದು ತಿಳಿಯುತ್ತದೆ. ಹೀಗೆ ಪ್ರಕರಣ ಮತ್ತು ಸರ್ವಾತ್ತೃತ್ವ ಲಿಂಗಗಳಿಂದ ಕಾಠಕದಲ್ಲಿ ಹೇಳಲಾದ ಅತ್ತೃತ್ವವು ವಿಷ್ಣುಧರ್ಮ ಎಂದು ನಿಶ್ಚಯವಾಗುತ್ತದೆ. ॥ 10 ॥

## ದ್ವೈತದರ್ಶನದಲ್ಲಿ ಸೂತ್ರಗಳ ಅರ್ಥ

**ಓಂ ॥ ಅತ್ತಾ ಚರಾಚರಗ್ರಹಣಾತ್ ॥ ಓಂ**

'ಸರ್ವಂ ವಾ ಅತ್ತಿ' ಎಂಬ ಬೃಹದಾರಣ್ಯಕ ಶ್ರುತಿಯಲ್ಲಿ ಹೇಳಲ್ಪಟ್ಟ ಅತ್ತಾ=ಸಂಹಾರಕರ್ತೃ, ತತ್ತು=ಬ್ರಹ್ಮನೆ, ಅದಿತಿಯಲ್ಲ. ಚರಾಚರಗ್ರಹಣಾತ್= 'ಸರ್ವಂ ಅತ್ತಿ' ಎಂದು ಚರಾಚರ ಪ್ರಪಂಚವನ್ನೇ ಸಂಹಾರ್ಯವನ್ನಾಗಿ ಹೇಳಿರುವುದರಿಂದ.

(ಅತ್ರ ನಯೇ ಸಂಹಾರರೂಪಕ್ರಿಯಾತ್ಮಕ ಲಿಂಗ ಸಮನ್ವಯಃ ಉಚ್ಯತೇ। 'ಸರ್ವಂ ವಾ ಅತ್ತಿ' ಇತ್ಯುಕ್ತಾ ತತ್ತು=ಬ್ರಹ್ಮೈವ । ನ ತ್ವದಿತಿಃ । ಸರ್ವಂ ಇತಿ ಚರಾಚರಸ್ಯ ಅದ್ಯತಯಾ ಗ್ರಹಣಾತ್ ।)

**ಓಂ ॥ ಪ್ರಕರಣಾಚ್ಚ ॥ ಓಂ**

'ನೈವೇಹ ಕಿಂಚನ' ಎಂದು ಮುಂತಾಗಿ ಬ್ರಹ್ಮನ ಪ್ರಕರಣದಲ್ಲಿ ಪ್ರಸ್ತುತವಾದುದರಿಂದಲೂ ಸಂಹಾರಕರ್ತನಾದವನು ವಿಷ್ಣುವೇ.

('ನೈವೇಹ ಕಿಂಚನ' ಇತ್ಯಾದಿ ಬ್ರಹ್ಮಪ್ರಕರಣಾಚ್ಚ ಅತ್ತಾ ಬ್ರಹ್ಮೈವ ಇತ್ಯರ್ಥಃ ।)

## ಶಾಂಕರಭಾಷ್ಯದಲ್ಲಿ ಸೂತ್ರಗಳ ಅರ್ಥ

**1. ಅತ್ತಾ ಚರಾಚರಗ್ರಹಣಾತ್**

**ಪೂರ್ವಪಕ್ಷ :** ಕಾಠಕದಲ್ಲಿ,

ಯಸ್ಯ ಬ್ರಹ್ಮ ಚ ಕ್ಷತ್ರಂ ಚ ಉಭೇ ಭವತ ಓದನಃ।

ಮೃತ್ಯುಃ ಯಸ್ಯೋಪಸೇಚನಂ ಕ ಇತ್ಥಾ ವೇದ ಯತ್ರ ಸಃ॥

ಎಂದು ಒಂದು ವಾಕ್ಯವಿದೆ. ಅಲ್ಲಿ 'ಬ್ರಾಹ್ಮಣ ಕ್ಷತ್ರಿಯರೆಂಬ ಅನ್ನಕ್ಕೆ ಯಮನನ್ನು ಉಪಸೇಚನವನ್ನಾಗಿ ಮಾಡಿ ಯಾರು ಉಣ್ಣುವನೋ ಅವನನ್ನು ಸರಿಯಾಗಿ ತಿಳಿದವರು ಯಾರಿದ್ದಾರೆ?' ಎನ್ನಲಾಗಿದೆ. ಹೀಗೆ ಬ್ರಾಹ್ಮಣ ಕ್ಷತ್ರಿಯರನ್ನು ಆಹಾರವನ್ನಾಗಿ ಉಪಯೋಗಿಸುವ ವ್ಯಕ್ತಿಯ ಪ್ರಸ್ತಾವವನ್ನು ಅಲ್ಲಿ ಮಾಡಲಾಗಿದೆ. ಕಾಠಕದಲ್ಲಿ ಯಮ-ನಚಿಕೇತರ ಸಂವಾದರೂಪವಾಗಿ ಅಗ್ನಿ, ಜೀವ, ಬ್ರಹ್ಮ ಮೂರೂ ಪ್ರಸ್ತುತವಾಗಿದೆ. ಈ ಮೂವರಲ್ಲಿ ಬ್ರಹ್ಮನಿಗೆ 'ಅನಶ್ನನ್ನನ್ಯಃ' ಎಂಬ ಶ್ರುತಿಯಂತೆ ಭೋಗವಿಲ್ಲ. ಆದ್ದರಿಂದ ಜೀವ ಅಥವಾ ಅಗ್ನಿಯೇ ಇಲ್ಲಿ ಪ್ರಸ್ತುತರಾದ ಭೋಕ್ತೃಗಳು.

**ಸಿದ್ಧಾಂತ :** ಜೀವನಾಗಲೀ ಅಗ್ನಿಯಾಗಲೀ ಬ್ರಾಹ್ಮಣ ಕ್ಷತ್ರಿಯರನ್ನು ತಿನ್ನಲಾರರು. ಆದ್ದರಿಂದ ಇಲ್ಲಿ ಭೋಜನವೆಂದರೆ ಸಂಹಾರ. ಬ್ರಹ್ಮ ಮೃತ್ಯುವಿನ ಜೊತೆ ಸರ್ವವನ್ನೂ ಸಂಹಾರ ಮಾಡುವವನಾದ್ದರಿಂದ ಅವನೇ ಈ ವಾಕ್ಯದಿಂದ ಪ್ರತಿಪಾದ್ಯ.

ಶ್ರುತಿಯಲ್ಲಿ 'ಮೃತ್ಯುಃ ಉಪಸೇಚನಂ - ಸಂಹಾರಕನಾದ ಯಮ ಅನ್ನಕ್ಕೆ ಸುರಿವ ತುಪ್ಪದಂತೆ' ಎಂದು ಹೇಳಿರುವುದರಿಂದ ಇಲ್ಲಿ ಚರಾಚರ ಸಕಲ ಪ್ರಪಂಚದ ಅತ್ತೃತ್ವ ಪ್ರಸ್ತುತವಾಗಿದೆ. ಅಂತಹ ಅತ್ತೃತ್ವ ಸಂಹಾರಕರ್ತೃತ್ವರೂಪವಾದುದು. ಅದು ಬ್ರಹ್ಮನ ಧರ್ಮ. ಆದ್ದರಿಂದ ಪರಬ್ರಹ್ಮನೇ ಈ ವಾಕ್ಯದಿಂದ ಪ್ರತಿಪಾದ್ಯ.

**2. ಪ್ರಕರಣಾಚ್ಚ -** ಈ ಮಂತ್ರಕ್ಕಿಂತ ಹಿಂದಿನ ಹದಿನೆಂಟನೆಯ ಮಂತ್ರದಲ್ಲಿ ''ನ ಜಾಯತೇ ಮ್ರಿಯತೇ ವಾ ವಿಪಶ್ಚಿತ್'' ಎಂದು ಬ್ರಹ್ಮನ ಪ್ರಸ್ತಾವ ಇದೆ. ಅದರಿಂದ ಈ ಪ್ರಕರಣ ಬ್ರಹ್ಮಪರ ಎಂದು ತಿಳಿಯುತ್ತದೆ. ಅಂತಹ ಪ್ರಕರಣದಲ್ಲಿ ಹೇಳಿರುವುದರಿಂದ ಅತ್ತೃ ಬ್ರಹ್ಮನೇ.

## ಚಂದ್ರಿಕಾದಲ್ಲಿ ಮಾಡಿರುವ ವಿಮರ್ಶೆ

ಶಾಂಕರಭಾಷ್ಯದಂತೆ ಅತ್ತೃತ್ವ ಭೋಕ್ತೃತ್ವರೂಪವಾದುದು, ಬ್ರಹ್ಮ ಅಭೋಕ್ತಾ. ಆದ್ದರಿಂದ ಅವನು ಅತ್ತೃವಲ್ಲ ಎಂದು ಪೂರ್ವಪಕ್ಷ. ಅತ್ತೃತ್ವವೆಂದರೆ ಸಂಹಾರಕರ್ತೃತ್ವ. ಅದು ಬ್ರಹ್ಮನ ಧರ್ಮ ಎಂದು ಸಿದ್ಧಾಂತ. ಆದರೆ ಸಂಹಾರಕರ್ತೃತ್ವವೂ ಶುದ್ಧಬ್ರಹ್ಮನಿಗಿಲ್ಲ, ಅದಿರುವುದು ಮಾಯಾವಿಶಿಷ್ಟ ಬ್ರಹ್ಮನಿಗೆ. ಅವನಿಗೆ ಸಂಹಾರಕರ್ತೃತ್ವವಿದ್ದಂತೆ, ಭೋಕ್ತೃತ್ವವೂ ಇದೆ. 'ಅನಶ್ನನ್ನನ್ಯಃ' ಎಂದು ಹೇಳಿದ ಅಭೋಕ್ತೃತ್ವ ಶುದ್ಧಬ್ರಹ್ಮನಿಗೆ,

ವಿಶಿಷ್ಟನಿಗಲ್ಲ. ಹೀಗಿದ್ದ ಮೇಲೆ ಅತ್ತೃತ್ವ ಭೋಕ್ತೃತ್ವವಲ್ಲ ಸಂಹಾರಕರ್ತೃತ್ವ ಎಂದು ಸಿದ್ಧಾಂತಿಸುವುದು ಹೇಗೆ?

ಭೋಕ್ತೃತಾಪಿ ವಿಶಿಷ್ಟೇಽಸ್ತು ಯಥಾ ಸಂಹರ್ತೃತಾ ತವ ।

ಅಭೋಕ್ತೃತ್ವಂ ನಿವಿಶತಾಂ ಶುದ್ಧೇ ಕೌಟಸ್ಥ್ಯವತ್ ಸುಖಮ್ ॥

2. ಅಲ್ಲದೆ, ನಾವು ಉಲ್ಲೇಖಿಸಿದ ವಿಷಯ ವಾಕ್ಯದಲ್ಲಿ 'ಸರ್ವಂ ವಾ ಅತ್ತಿ' ಎಂದು ಸರ್ವಪದವಿರುವುದರಿಂದ 'ಚರಾಚರ ಗ್ರಹಣಾತ್' ಎಂಬ ಸೂತ್ರೋಕ್ತ ಹೇತು ಉಚಿತವಾಗುತ್ತದೆ. ಕಾಠಕವಾಕ್ಯದಲ್ಲಿ ಹೀಗೆ ಹೇಳಿಲ್ಲವಾದುದರಿಂದ 'ಚರಾಚರಗ್ರಹಣಾತ್' ಎಂಬ ಸೂತ್ರಪದಕ್ಕೆ ಕಾಠಕದ ವಿಷಯ ವಾಕ್ಯ ಅನುಗುಣವಾಗಿಲ್ಲ.

3. 'ನ ಜಾಯತೇ ಮ್ರಿಯತೇ ವಾ' ವಾಕ್ಯದ ಅನಂತರ 'ನ ಹನ್ಯತೇ ಹನ್ಯಮಾನೇಽಪಿ ದೇಹೇ' ಎಂದು ಜೀವನ ಪ್ರಸ್ತಾಪವೂ ಇದೆ. ಆದ್ದರಿಂದ ಎರಡನೆಯ ಸೂತ್ರದಿಂದ ಈ ಪ್ರಕರಣ ಬ್ರಹ್ಮನದೇ ಎಂದು ನಿರ್ಧಾರ ಮಾಡಲಾಗುವುದಿಲ್ಲ.

### ರಾಮಾನುಜ ಭಾಷ್ಯದಲ್ಲಿ ಸೂತ್ರಗಳ ಅರ್ಥ

ರಾಮಾನುಜ ಭಾಷ್ಯದಲ್ಲಿ ಅತ್ತೃತ್ವಾಧಿಕರಣ ಮತ್ತು ಗುಹಾಧಿಕರಣಗಳ ನಾಲ್ಕು ಸೂತ್ರಗಳನ್ನೂ ಸೇರಿಸಿ ಒಂದೇ ಅಧಿಕರಣವನ್ನಾಗಿ ಪರಿಗಣಿಸಲಾಗಿದೆ. ಸೂತ್ರಗಳ ಅರ್ಥದಲ್ಲೂ ಶಾಂಕರಭಾಷ್ಯಕ್ಕಿಂತ ಹೆಚ್ಚಿನ ವಿಶೇಷವೇನೂ ಇಲ್ಲ. ಆದ್ದರಿಂದ ಚಂದ್ರಿಕಾದಲ್ಲಿ ಮಾಡಲಾದ ಆ ಭಾಷ್ಯದ ವಿಮರ್ಶೆಯನ್ನು ಮುಂದಿನ ಅಧಿಕರಣದಲ್ಲಿ ಕೊಡಲಾಗಿದೆ.

॥ ಸೂತ್ರ 10 ॥

**ಇಲ್ಲಿಗೆ ಅತ್ತೃತ್ವಾಧಿಕರಣ ಮುಗಿಯಿತು.**

# ಗುಹಾಧಿಕರಣ - 3

**ಸರ್ವಾತ್ಮಾ ಏಕಃ ಪರಃ ಉಕ್ತಃ**

**ಋತಂ ಪಿಬಂತೌ ಸುಕೃತಸ್ಯ ಲೋಕೇ ಗುಹಾಂ ಪ್ರವಿಷ್ಟೌ ಪರಮೇ ಪರಾರ್ಧೇ ।**

**ಛಾಯಾತಪೌ ಬ್ರಹ್ಮವಿದೋ ವದಂತಿ ಪಂಚಾಗ್ನಯೋ ಯೇ ಚ ತ್ರಿನಾಚಿಕೇತಾಃ ॥**

**(ಕಠ 1.3.1)**

**ಇತಿ ಪಿಬಂತೌ ಪ್ರತೀಯೇತೇ । ತೌ ಕೌ ಇತಿ । ಉಚ್ಯತೇ-**

**ಓಂ ॥ ಗುಹಾಂ ಪ್ರವಿಷ್ಟೌ ಆತ್ಮಾನೌ ಹಿ ತದ್ದರ್ಶನಾತ್ ॥ ಓಂ**

**ಗುಹಾಂ ಪ್ರವಿಷ್ಟೌ ಪಿಬಂತೌ ವಿಷ್ಣುರೂಪೇ ಏವ ।**

**ಘರ್ಮಾ ಸಮಂತಾ ತ್ರಿವೃತಂ ವ್ಯಾಪತುಃ ತಯೋರ್ಜುಷ್ಟಿಂ ಮಾತರಿಶ್ವಾ ಜಗಾಮ ॥**

**(ಋ.10.114.1)**

**ಇತ್ಯಾದಿನಾ ತದ್ದರ್ಶನಾತ್ ।**

**ಆತ್ಮಾಂತರಾತ್ಮೇತಿ ಹರಿರೇಕ ಏವ ದ್ವಿಧಾ ಸ್ಥಿತಃ ।**

**ನಿವಿಷ್ಟೋ ಹೃದಯೇ ನಿತ್ಯಂ ರಸಂ ಪಿಬತಿ ಕರ್ಮಜಮ್ ॥**

**ಇತಿ ಚ ಬೃಹತ್ಸಂಹಿತಾಯಾಮ್ ।**

**ಶುಭಂ ಪಿಬತ್ಯಸೌ ನಿತ್ಯಂ ನಾಶುಭಂ ಸ ಹರಿಃ ಪಿಬೇತ್ ।**

**ಪೂರ್ಣಾನಂದಮಯಸ್ಯಾಸ್ಯ ಚೇಷ್ಟಾ ನ ಜ್ಞಾಯತೇ ಕ್ವಚಿತ್ ॥ ಇತಿ ಪಾದ್ಮೇ ॥**

**'ಯೋ ವೇದ ನಿಹಿತಂ ಗುಹಾಯಾಂ' (ತೈ.2-1)**

**ಇತ್ಯಾದಿನಾ ಪ್ರಸಿದ್ಧಂ 'ಹಿ' ಶಬ್ದೇನ ದರ್ಶಯತಿ ॥ 11 ॥**

ಹಿಂದಿನ ಅಧಿಕರಣದಲ್ಲಿ ಬ್ರಹ್ಮನೇ ಸರ್ವಸಂಹಾರಕ ಎಂದು ಹೇಳಲಾಯಿತು. ಆದರೆ ಕಾಠಕದಲ್ಲಿ ಹೀಗಿದೆ - 'ಪುಣ್ಯ ನಿರ್ಮಿತವಾದ ಈ ಶರೀರದಲ್ಲಿ(ಸುಕೃತಸ್ಯಲೋಕೇ) ಜೀವೋತ್ತಮನಾದ (ಪರಮೇ) ಅತಿಶಯವಾಗಿ ಪೂರ್ಣನಾದ ವಾಯುದೇವನಲ್ಲಿ ಇದ್ದು (ಪರಾರ್ಧೇ) (ಗುಹಾಂ) ಹೃದಯಾಕಾಶವನ್ನು ಪ್ರವೇಶಿಸಿ (ಪ್ರವಿಷ್ಟೌ) ಪುಣ್ಯಫಲವನ್ನು ಭೋಗಿಸುವ (ಋತಂ ಪಿಬಂತೌ) ಆ ಇಬ್ಬರನ್ನು, ಮೂರು ಬಾರಿ ನಾಚಿಕೇತಾಗ್ನಿಯನ್ನು ಆರಾಧಿಸಿರುವ, ದೇವ, ಪಿತೃ, ಭೂತ, ಮನುಷ್ಯ, ಬ್ರಹ್ಮ ಈ ಪಂಚಯಜ್ಞಗಳನ್ನು ಮಾಡುತ್ತಿರುವ, ಬ್ರಹ್ಮಜ್ಞಾನಿಗಳು ನೆರಳು ಮತ್ತು ಬೆಳಕಿನಂತೆ (ಛಾಯಾತಪೌ) ಸುಖ-ದುಃಖ ಪ್ರದರನ್ನಾಗಿ ಹೇಳುತ್ತಾರೆ.' ಇಲ್ಲಿ ಹೇಳಲ್ಪಟ್ಟ ಪುಣ್ಯಫಲ ಭೋಕ್ತೃಗಳು ಯಾರು? ಅದನ್ನು ಸೂತ್ರಕಾರರು ತಿಳಿಸುತ್ತಾರೆ-

'ಹೃದಯಾಕಾಶದಲ್ಲಿದ್ದು ಪುಣ್ಯಫಲವನ್ನು ಭೋಗಿಸುತ್ತಿರುವುದು ಪರಮಾತ್ಮನ ಎರಡು ರೂಪಗಳು. ಋಗ್ವೇದ ಸಂಹಿತೆಯಲ್ಲಿ ಹೀಗೆಂದು ಹೇಳಿದೆ- ಪ್ರಕಾಶಮಾನವಾದ, ವ್ಯಾಪ್ತವಾದ, ಆತ್ಮ, ಅಂತರಾತ್ಮ ಎಂಬ ಭಗವಂತನ ಎರಡು ರೂಪಗಳು ತೇಜಸ್ಸು, ನೀರು, ಪೃಥಿವೀ ತತ್ತ್ವಗಳಿಂದ ನಿರ್ಮಿತವಾದ ಈ ದೇಹವನ್ನು ವಿಶೇಷವಾಗಿ ಹೊಂದಿದವು. (ಪ್ರವೇಶ ಮಾಡಿದವು) ಈ ಎರಡು ರೂಪಗಳ ಸೇವೆಗಾಗಿ ವಾಯುದೇವನೂ ಆ ದೇಹವನ್ನು ಪ್ರವೇಶಿಸಿದನು.

ಬೃಹತ್ಸಂಹಿತೆಯಲ್ಲಿ ಹೀಗಿದೆ - 'ಒಬ್ಬನೇ ವಿಷ್ಣು ಆತ್ಮ ಮತ್ತು ಅಂತರಾತ್ಮ ಎಂಬ

ಎರಡು ರೂಪಗಳಿಂದ ಈ ಶರೀರದಲ್ಲಿದ್ದಾನೆ. ಅವನು ಹೃದಯದಲ್ಲಿದ್ದು ಪುಣ್ಯಫಲದ ಸಾರವನ್ನು ನಿಯತವಾಗಿ ಭೋಗಿಸುತ್ತಾನೆ'. ಪಾದ್ಮಪುರಾಣದಲ್ಲೂ ಹೀಗಿದೆ- 'ಯಜ್ಞದ ಹವಿರ್ಭಾಗವನ್ನು ಸ್ವೀಕರಿಸುವ ಪರಮಾತ್ಮನು ನಮ್ಮ ಪುಣ್ಯಫಲವನ್ನಷ್ಟೇ ಭೋಗಿಸುತ್ತಾನೆ, ಪಾಪದ ಫಲವನ್ನು ಎಂದೂ ಅನುಭವಿಸುವುದಿಲ್ಲ. ತುಂಬಿದ ಆನಂದರೂಪನಾದ ಆ ಶ್ರೀಹರಿಯ ಭೋಗಕ್ರಿಯೆ ಎಂದೂ ನಮಗೆ ಅರ್ಥವಾಗದು'.

ಸೂತ್ರದಲ್ಲಿರುವ 'ಹಿ' ಶಬ್ದದಿಂದ ಪರಮಾತ್ಮನು ಹೃದಯಾಕಾಶದಲ್ಲಿದ್ದಾನೆಂಬುದು ''ಯೋ ವೇದ ನಿಹಿತಂ ಗುಹಾಯಾಂ' ಇತ್ಯಾದಿ ಶ್ರುತಿವಾಕ್ಯಗಳಲ್ಲಿ ಪ್ರಸಿದ್ಧವಾಗಿದೆ ಎಂದು ಸೂತ್ರಕಾರರು ಸೂಚಿಸಿದ್ದಾರೆ.

**ವಿವರಣೆ :** ಕಾಠಕಶ್ರುತಿಯಲ್ಲಿ 'ಗುಹಾಂ ಪ್ರವಿಷ್ಟೌ' ಎಂದು ಎಲ್ಲ ಪ್ರಾಣಿಗಳ ಹೃದಯಕಾಶದಲ್ಲಿರುವ ಇಬ್ಬರು ವ್ಯಕ್ತಿಗಳು ಉಲ್ಲೇಖಿಸಲ್ಪಟ್ಟಿದ್ದಾರೆ. ಅಲ್ಲಿ ದ್ವಿವಚನವಿರುವುದರಿಂದ ಅದ್ವಿತೀಯನಾದ ಪರಮಾತ್ಮನನ್ನು 'ಹೃದಯಸ್ಥ' ಎನ್ನುವಂತಿಲ್ಲ. ಅಲ್ಲದೆ, ಆ ಶ್ರುತಿಯಲ್ಲಿ 'ಋತಂ ಪಿಬಂತೌ' ಎಂದು 'ಅವರಿಬ್ಬರು ದೇಹದಲ್ಲಿದ್ದು ಪುಣ್ಯದ ಫಲವನ್ನು ಅನುಭವಿಸುತ್ತಿದ್ದಾರೆ' ಎನ್ನಲಾಗಿದೆ. ಪರಮಾತ್ಮನು ದೇಹದಲ್ಲಿದ್ದರೂ ದೇಹದಲ್ಲಾಗುವ ಸುಖದುಃಖಗಳನ್ನು ಅನುಭವಿಸುವುದಿಲ್ಲ. ಆದ್ದರಿಂದ ಆ ಇಬ್ಬರಲ್ಲಿ ಒಬ್ಬನು ಜೀವ. ಅವನು ಸುಖವನ್ನು ಅನುಭವಿಸುವುದರಿಂದ ಅವನ ಜೊತೆಯಲ್ಲಿರುವ ಪರಮಾತ್ಮನಿಗೆ ಜೀವನ ಪುಣ್ಯದ ಫಲವಾದ ಸುಖದ ಅನುಭವ ಇಲ್ಲದಿದ್ದರೂ ಅವರಿಬ್ಬರನ್ನೂ ''ಪಿಬಂತೌ= ಅನುಭವಿಸುವವರು' ಎಂದು ಗೌಣವಾಗಿ ಹೇಳಬಹುದು. ಹತ್ತಾರು ಮಂದಿ ಊಟಮಾಡುತ್ತಿರುವಾಗ ಒಬ್ಬನು ಉಪವಾಸ ಇದ್ದರೂ 'ಇವರೆಲ್ಲರೂ ಊಟ ಮಾಡಿದ್ದಾರೆ' ಎನ್ನುವುದಿಲ್ಲವೆ? ಅದರಂತೆ. ಹೀಗೆ ಈ ಶ್ರುತಿಯಲ್ಲಿ ಹೃದಯಾಕಾಶದಲ್ಲಿರುವವರು ಜೀವ ಮತ್ತು ಪರಮಾತ್ಮರು. ಅವರಿಬ್ಬರಲ್ಲಿ ಕರ್ಮ ಫಲ ಭೋಕ್ತೃ ಜೀವ, ಈಶನಲ್ಲ. ಅಂದಮೇಲೆ ಹಿಂದಿನ ಸೂತ್ರದಲ್ಲಿ 'ಚರಾಚರಗ್ರಹಣಾತ್' ಎಂದು ಹೇಳಿದ ಸಕಲಾತ್ತೃತ್ವವು ಪರಮಾತ್ಮನಿಗೆ ಇಲ್ಲವೆಂದಂತಾಯಿತು, ಎಂದು ಪೂರ್ವಪಕ್ಷ.

**ಸಿದ್ಧಾಂತ :** ಪರಮಾತ್ಮನೇ ಆತ್ಮ, ಅಂತರಾತ್ಮ ಎಂಬ ಎರಡು ರೂಪಗಳಿಂದ ಎಲ್ಲರೊಳಗಿದ್ದು ಅವರವರ ಪುಣ್ಯಫಲವನ್ನು ಅನುಭವಿಸುತ್ತಾನೆ, ಎಂದು ವೇದದಲ್ಲಿ ಹೇಳಿರುವುದರಿಂದ ಹೃದಯಾಕಾಶಸ್ಥನಾಗಿ ಕಾಠಕದಲ್ಲಿ ಹೇಳಲ್ಪಟ್ಟವನು ಪರಮಾತ್ಮನೇ ಹೊರತು ಜೀವಾತ್ಮನಲ್ಲ. ಅವನು ಏಕನಾದರೂ ಎರಡು ರೂಪಗಳಿರುವುದರಿಂದ 'ಪಿಬಂತೌ' ಎಂಬ ದ್ವಿವಚನವೂ ಸರಿಹೊಂದುತ್ತದೆ. ಜೀವವನ್ನು ಇಟ್ಟುಕೊಂಡರೆ 'ಛಾಯಾತಪೌ' ಎಂಬ ವಿಶೇಷಣ ಅಯುಕ್ತವಾಗುತ್ತದೆ. ಛಾಯಾ ಎಂದರೆ ನೆರಳು, ಆತಪ ಎಂದರೆ ಬಿಸಿಲು. ಪರಮಾತ್ಮ ತಪ್ಪು ಮಾಡಿದವರಿಗೆ ಬಿಸಿಲಿನಂತೆ ಸುಡುತ್ತಾನೆ, ಸತ್ಕಾರ್ಯ

ಮಾಡಿದವರಿಗೆ ನೆರಳಿನಂತೆ ತಂಪನ್ನೀಯುತ್ತಾನೆ. ಜೀವನಿಗೆ ಈ ಸಾಮರ್ಥ್ಯವಿಲ್ಲ. ಆದ್ದರಿಂದ ಪರಮಾತ್ಮನೇ ಹೃದಯಾಕಾಶಸ್ಥನಾಗಿ ಕರ್ಮಫಲವನ್ನು ಭೋಗಿಸುವವನು.

**ಶ್ರುತ್ಯರ್ಥ :** ಅ. 'ಋತಂ ಪಿಬಂತೌ' ಎಂಬ ಕಾಠಕವಾಕ್ಯದಲ್ಲಿ ಋತಂ ಎಂದರೆ 'ಪುಣ್ಯಫಲವನ್ನು' ಎಂದು ಅರ್ಥ.

ಪರಾರ್ಧೇ - ಪರೇಭ್ಯಃ= ರುದ್ರಾದಿಭ್ಯಃ ಆ+ಋದ್ಧಃ=ಪೂರ್ಣ. ರುದ್ರಾದಿದೇವತೆಗಳಿಗಿಂತಲೂ ಹೆಚ್ಚು ಪೂರ್ಣನಾದವನು.

ಪಂಚಾಗ್ನಯಃ - ದೇವತೆಗಳಿಗೆ ವೈಶ್ವದೇವ ಹೋಮ, ಪಿತೃಗಳಿಗೆ ಶ್ರಾದ್ಧ ತರ್ಪಣ, ಪ್ರಾಣಿಗಳಿಗೆ ಅನ್ನದಾನ, ಮನುಷ್ಯರಿಗೆ ಉಪಕಾರ, ವೇದಾಧ್ಯಯನ ಇವು ಕ್ರಮವಾಗಿ ದೇವಯಜ್ಞ, ಪಿತೃಯಜ್ಞ, ಭೂತಯಜ್ಞ, ಮನುಷ್ಯಯಜ್ಞ, ಬ್ರಹ್ಮಯಜ್ಞಗಳೆನಿಸುತ್ತವೆ.

ತ್ರಿನಾಚಿಕೇತಾಃ- ಯಮದೇವರು ನಚಿಕೇತನಿಗೆ ಅಗ್ನಿಸ್ಥ ಪರಮಾತ್ಮನನ್ನು ಉಪದೇಶಿಸಿ ಅಗ್ನಿಯಲ್ಲಿ ಅವನ ಆರಾಧನೆಯ ಕ್ರಮವನ್ನು ತಿಳಿಸಿದರು. ಅದಕ್ಕೆ ನಾಚಿಕೇತಾಗ್ನಿ ಎಂದೇ ಹೆಸರಿಟ್ಟರು. ಅದನ್ನು ಮೂರುಬಾರಿ ಮಾಡಿದರೆ ಜನ್ಮ-ಮರಣಗಳನ್ನು ಕಳೆದುಕೊಳ್ಳುತ್ತಾರೆ ಎಂದೂ ತಿಳಿಸಿದರು.

ಆ) 'ಘರ್ಮಾ ಸಮಂತಾ' ಶ್ರುತ್ಯರ್ಥ- ಘರ್ಮಾ-'ಘರ್ಮೌ' ಎಂದು ದ್ವಿವಚನಾಂತವಾದ ಶಬ್ದ. ಇದು 'ಘೃ =ಕ್ಷರದೀಪ್ತ್ಯೋಃ' ಧಾತುವಿನಿಂದಾದ ಶಬ್ದ. 'ದೀಪ್ತಿ' ಎಂಬ ಅರ್ಥದ ಘೃಧಾತುವಿನ ರೂಪವಾದುದರಿಂದ ಪ್ರಕಾಶಮಾನವಾದ ಎಂದು ಅರ್ಥ.

ಸಮಂತಾ-'ಸಮಂತೌ=ಸಂಪೂರ್ಣೌ' ಎಂದು ತತ್ತ್ವಪ್ರದೀಪಿಕಾದಲ್ಲಿ ವ್ಯಾಖ್ಯಾನಿಸಲಾಗಿದೆ. ತತ್ತ್ವಪ್ರಕಾಶಿಕಾದಲ್ಲಿ 'ವ್ಯಾಪ್ತೌ' ಎಂದು ಅರ್ಥ ಹೇಳಲಾಗಿದೆ. ಗುರ್ವರ್ಥ ದೀಪಿಕಾದಲ್ಲಿ ಇದನ್ನು ವಿವರಿಸುತ್ತಾ 'ಸಮಂತಾತ್' ಎಂದು ಪದವನ್ನು ವಿಭಾಗಮಾಡಿ 'ವಿದ್ಯಮಾನೌ' ಪದವನ್ನು ಅಧ್ಯಾಹಾರ ಮಾಡಿ ಒಟ್ಟು ಅದರ ತಾತ್ಪರ್ಯವನ್ನು 'ವ್ಯಾಪ್ತರಾದವರು' ಎಂದು ಹೇಳಲಾಗಿದೆ. ಇದನ್ನು ಭಾಷ್ಯದೀಪಿಕಾದಲ್ಲಿ 'ತಚ್ಚಿಂತ್ಯಂ' ಎನ್ನಲಾಗಿದೆ.

ತ್ರಿವೃತಂ ವ್ಯಾಪತುಃ - 'ಪ್ರಕೃತಿ ಪುರುಷ ಕಾಲ ವ್ಯಾಪಿನೌ' ಎಂದು ತತ್ತ್ವಪ್ರದೀಪಿಕಾದಲ್ಲಿ ಹೇಳಿದ ಅರ್ಥ. ಅಲ್ಲಿ ಈ ಮಂತ್ರದ ಮುಂದಿನ ಭಾಗದಲ್ಲಿರುವ 'ಅಪಶ್ಯಂ ಅಂತಿತಃ' ಎಂಬ ಪದದಿಂದ ಗುಹಾಪ್ರವಿಷ್ಟತ್ವವನ್ನು ಸಮರ್ಥಿಸಲಾಗಿದೆ. ತತ್ತ್ವಪ್ರಕಾಶಿಕಾದಲ್ಲಿ 'ತ್ರಿವೃತಂ' ಎಂಬ ಪದಕ್ಕೆ 'ದೇಹ' ಎಂಬ ಅರ್ಥವನ್ನು ಹೇಳಲಾಗಿದೆ.

ಈ ಶ್ರುತಿಯಿಂದ ಪರಮಾತ್ಮನು ದ್ವಿರೂಪದಿಂದ ಹೃದಯದಲ್ಲಿದ್ದಾನೆ ಎಂದು ತಿಳಿಯುತ್ತದೆ. ಪರಮಾತ್ಮ ಜಡದೇಹದಲ್ಲಿ ಆತ್ಮರೂಪದಿಂದಲೂ ಜೀವಸ್ವರೂಪದಲ್ಲಿ ಅಂತರಾತ್ಮ ರೂಪದಿಂದಲೂ ಇದ್ದಾನೆ.

ಇ) ಪರಮಾತ್ಮ ಕರ್ಮಫಲವನ್ನು ಅನುಭವಿಸುತ್ತಾನೆಂದರೆ ಜೀವ ಮಾಡಿದ ಪಾಪದ ಫಲವನ್ನು ಅನುಭವಿಸುತ್ತಾನೆಯೇ ಎಂಬ ಜಿಜ್ಞಾಸೆಗೆ ಪಾದ್ಮಪುರಾಣ- 'ಶುಭಂ ಪಿಬತ್ಯಸೌ ನಿತ್ಯಂ' ಎಂದು ಸಮಾಧಾನ ನೀಡಿದೆ.

ನಿತ್ಯತೃಪ್ತನಾದ ಭಗವಂತನಿಗೆ ಶುಭವನ್ನು ಅನುಭವಿಸುವುದರಿಂದ ಆಗುವ ಲಾಭವೇನು? ಈ ಪ್ರಶ್ನೆಗೆ 'ಚೇಷ್ಟಾ ನ ಜ್ಞಾಯತೇ' ಎಂಬುದು ಅದೇ ಪುರಾಣ ನೀಡಿದ ಉತ್ತರ. ॥ 11 ॥

## ಓಂ ॥ ವಿಶೇಷಣಾಚ್ಚ ॥ ಓಂ

'ಯಃ ಸೇತುರೀಜಾನಾನಾಂ ಅಕ್ಷರಂ ಬ್ರಹ್ಮ ಯತ್ ಪರಮ್ ॥

(ಕಠ 1-3-2) ಇತಿ ।

ಪೃಥಗ್ ವಕ್ತುಂ ಗುಣಾಸ್ತಸ್ಯ ನ ಶಕ್ಯಂತೇಽಮಿತತ್ವತಃ ।
ಯತೋಽತೋ ಬ್ರಹ್ಮಶಬ್ದೇನ ಸರ್ವೇಷಾಂ ಗ್ರಹಣಂ ಭವೇತ್ ॥
ಏತಸ್ಮಾದ್ ಬ್ರಹ್ಮಶಬ್ದೋಽಯಂ ವಿಷ್ಣೋರೇವ ವಿಶೇಷಣಮ್ ।
ಅಮಿತಾ ಹಿ ಗುಣಾ ಯಸ್ಮಾತ್ ನಾನ್ಯೇಷಾಂ ತಮೃತೇ ಪ್ರಭುಮ್ ॥

-ಇತಿ ಬ್ರಾಹ್ಮೇ ।

ನ ಚ ಜೀವೇ ಸಮನ್ವಯಃ ಅಭಿಧೀಯತೇ ।

ಸತ್ಯ ಆತ್ಮಾ ಸತ್ಯೋ ಜೀವಃ ಸತ್ಯಂ ಭಿದಾ ಸತ್ಯಂ ಭಿದಾ ।
ಸತ್ಯಂ ಭಿದಾ ಮೈವಾರುವಣ್ಯೋ ಮೈವಾರುವಣ್ಯೋ ಮೈವಾರುವಣ್ಯಃ ।

ಇತಿ ಪೈಂಗಿ ಶ್ರುತಿಃ ।

ಆತ್ಮಾ ಹಿ ಪರಮಃ ಸ್ವತಂತ್ರೋಽಧಿಗುಣೋ
ಜೀವೋಽಲ್ಪಶಕ್ತಿಃ ಅಸ್ವತಂತ್ರೋಽವರಃ ।

ಇತಿ ಚ ಭಾಲ್ಲವೇಯ ಶ್ರುತಿಃ ।

'ಯಥೇಶ್ವರಸ್ಯ ಜೀವಸ್ಯ ಭೇದಃ ಸತ್ಯೋ ವಿನಿಶ್ಚಯಾತ್ ।
ಏವಮೇವ ಹಿ ಮೇ ವಾಚಂ ಸತ್ಯಾಂ ಕರ್ತುಮಿಹಾರ್ಹಸಿ ॥'
'ಯಥೇಶ್ವರಶ್ಚ ಜೀವಶ್ಚ ಸತ್ಯಭೇದೌ ಪರಸ್ಪರಮ್ ।
ತೇನ ಸತ್ಯೇನ ಮಾಂ ದೇವಾಃ ತ್ರಾಯಂತು ಸಹಕೇಶವಾಃ ॥'

ಇತ್ಯಾದೇಃ ನಾಸತ್ಯೋ ಭೇದಃ ॥ 12 ॥

## ॥ ಇತಿ ಗುಹಾಧಿಕರಣಮ್ ॥

ಹೃದಯಸ್ಥವಾಗಿ ಕರ್ಮಫಲವನ್ನು ಅನುಭವಿಸುವ ಆತ್ಮನಿಗೆ ಮುಂದಿನ 'ಯಃ ಸೇತುಃ' ಎಂಬ ಮಂತ್ರದಲ್ಲಿ ಏಕತ್ವವನ್ನೂ, ಬ್ರಹ್ಮತ್ವವನ್ನೂ ಹೇಳಿರುವುದರಿಂದಲೂ ಅವನು ವಿಷ್ಣುವೆ. ಬ್ರಹ್ಮ ಎಂಬ ಹೆಸರು ಮುಖ್ಯವಾಗಿ ವಿಷ್ಣುವಿಗೇ ಸಲ್ಲುತ್ತದೆ, ಎಂದು ಬ್ರಾಹ್ಮಪುರಾಣದಲ್ಲಿದೆ. ಪರಮಾತ್ಮನಲ್ಲಿ ಅನಂತಗುಣಗಳು ಇರುವುದರಿಂದ ಅವುಗಳನ್ನು ಒಂದೊಂದನ್ನಾಗಿ ಹೇಳಲು ಸಾಧ್ಯವಿಲ್ಲ. ಆದರೆ ಬ್ರಹ್ಮಶಬ್ದವೊಂದರಿಂದಲೇ ಆ ಎಲ್ಲ ಗುಣಗಳ ಸಂಗ್ರಹವಾಗುತ್ತದೆ. ಆದರಿಂದಾಗಿ ಬ್ರಹ್ಮಶಬ್ದದಿಂದ ವಿಷ್ಣುವೊಬ್ಬನೇ ವಾಚ್ಯನಾಗಲು ಅರ್ಹ. ಏಕೆಂದರೆ ಅನಂತಗುಣಗಳು ಅವನಿಗಿವೆ, ಹೊರತು ಇತರರಿಗಿಲ್ಲ.

**ಪರವ್ಯಾಖ್ಯಾನ ವಿಮರ್ಶೆ :** ಈ ಅಧಿಕರಣದಲ್ಲಿ ''ಋತಂ ಪಿಬಂತೌ'' ಎಂಬ ವಾಕ್ಯದ ಸಮನ್ವಯವನ್ನು ಜೀವನಲ್ಲಿ ಮಾಡುವುದು ಸಮಂಜಸವಲ್ಲ. ಅದು ಪ್ರಕೃತಾಧ್ಯಾಯಕ್ಕೆ ಅಸಂಗತ. (ಜೀವೇಶ್ವರರಿಗೆ ಅಭೇದವಿದೆಯಾದ್ದರಿಂದ ಜೀವನಲ್ಲಿ ಶ್ರುತಿ ಸಮನ್ವಯ ಮಾಡಿದರೆ ಬ್ರಹ್ಮನಲ್ಲೂ ಮಾಡಿದಂತಾಗುತ್ತದೆ ಎನ್ನುವುದೂ ಸರಿಯಲ್ಲ. ಅವರಿಬ್ಬರಿಗೆ ತಾತ್ವಿಕ ಭೇದವೇ ಪ್ರಮಾಣಗಳಿಂದ ಸಿದ್ಧವಾಗುತ್ತದೆ). ಪೈಂಗಿ ಶ್ರುತಿಯಲ್ಲಿ ಹೀಗಿದೆ- ಪರಮಾತ್ಮನೂ ಸತ್ಯ, ಜೀವಾತ್ಮನೂ ಸತ್ಯ, ಭೇದವೂ ಸತ್ಯ, ಭೇದವೂ ಸತ್ಯ, ಭೇದವೂ ಸತ್ಯ. ಭೇದವು ಅಸತ್ಯ ಎನ್ನುವವರು ಎಂದೂ ವಿಷ್ಣುವನ್ನು ಮೆಚ್ಚಿಸಲಾರರು, ಮೆಚ್ಚಿಸಲಾರರು, ಮೆಚ್ಚಿಸಲಾರರು. ಭಾಲ್ಲವೇಯ ಶ್ರುತಿಯೂ ಹೀಗಿದೆ- ''ಆತ್ಮನೇ ಸರ್ವೋತ್ತಮ, ಸ್ವತಂತ್ರ, ಪೂರ್ಣಶಕ್ತ. ಜೀವನಾದರೋ ಅಲ್ಪಶಕ್ತ, ಅಸ್ವತಂತ್ರ, ಅಧಮ''. (ಹೀಗೆ ವಿರುದ್ಧ ಧರ್ಮಗಳಿರುವುದರಿಂದ ಜೀವೇಶ್ವರರು ಭಿನ್ನರು) 'ಹೇಗೆ ಜೀವೇಶ್ವರ ಭೇದವು ಖಂಡಿತವಾಗಿಯೂ ಸತ್ಯವೋ ಹಾಗೆಯೇ ನನ್ನ(?) ಮಾತನ್ನೂ ಸತ್ಯವನ್ನಾಗಿಸು'' ''ಜೀವ ಮತ್ತು ಈಶ್ವರರಲ್ಲಿ ಭೇದವು ಪ್ರಾಮಾಣಿಕವಾದುದರಿಂದ ಅದನ್ನು ತಿಳಿದ ನನ್ನ ಜ್ಞಾನ ಯಥಾರ್ಥವಾಗಿದೆ. ಅಂತಹ ತತ್ತ್ವಜ್ಞಾನವುಳ್ಳ ನನ್ನನ್ನು (?) ಕೇಶವನಿಂದ ಸಹಿತರಾದ ದೇವತೆಗಳು ರಕ್ಷಿಸಲಿ'' ಹೀಗೆ ಪ್ರಮಾಣಗಳು ಇರುವುದರಿಂದ ಭೇದವು ಅಸತ್ಯವಲ್ಲ.

**ವಿವರಣೆ :** 1. ಕಾಠಕದ ಪ್ರಥಮಾಧ್ಯಾಯದ ಎರಡನೆಯ ವಲ್ಲಿಯ ಮೊದಲ ಮಂತ್ರ 'ಋತಂ ಪಿಬಂತೌ' ಎಂದು. ಅಲ್ಲಿ ದ್ವಿವಚನದಿಂದ ಹೇಳಲ್ಪಟ್ಟ ಆತ್ಮನನ್ನು ಮುಂದಿನ ಎರಡನೆಯ ಮಂತ್ರದಲ್ಲಿ ''ಯಃ ಸೇತುಃ'' ಎಂದು ಏಕವಚನದಿಂದ ಉಲ್ಲೇಖಿಸಲಾಗಿದೆ. ಇದರಿಂದ ಹೃದಯದಲ್ಲಿರುವವರು ಇಬ್ಬರಲ್ಲ, ಒಬ್ಬನೇ. ಅವನದೇ ಎರಡು ರೂಪಗಳು ಅಲ್ಲಿರುವುದರಿಂದಷ್ಟೇ 'ಪಿಬಂತೌ' ಎಂದು ದ್ವಿವಚನದ ಪ್ರಯೋಗ ಎನ್ನುವುದು ಸ್ಪಷ್ಟವಾಗುತ್ತದೆ. ಆ ಒಬ್ಬನಾದರೂ ಯಾರು? ಅದಕ್ಕೂ ಎರಡನೆಯ ಮಂತ್ರದಲ್ಲೇ ಸ್ಪಷ್ಟನೆ ಇದೆ. ಅಲ್ಲಿ 'ಅಕ್ಷರಂ ಬ್ರಹ್ಮ' ಎಂದು ಬ್ರಹ್ಮ ಶಬ್ದವಿದೆ. ಆ ಶಬ್ದ ವಿಷ್ಣುವಾಚಕ. ಆದ್ದರಿಂದ ಹೃದಯಸ್ಥ ಆತ್ಮ ಬ್ರಹ್ಮಪದವಾಚ್ಯನಾದ ವಿಷ್ಣು ಎಂದು ಸ್ಪಷ್ಟವಾಗುತ್ತದೆ.

2. ಇಲ್ಲಿ ವಾದಿರಾಜರು ಜೀವಾತ್ಮನ ಸ್ಥಾನ ಹೃದಯವಲ್ಲ ಎಂದಿದ್ದಾರೆ. ಅದನ್ನು ಅವರು ಹೀಗೆ ಸಮರ್ಥಿಸಿದ್ದಾರೆ - ಜೀವ ಎಚ್ಚರದಲ್ಲಿ ಮತ್ತು ಸ್ವಪ್ನಾವಸ್ಥೆಯಲ್ಲಿ

ನಾಡಿಯಲ್ಲಿರುತ್ತಾನೆ. ನಿದ್ರಾವಸ್ಥೆಯಲ್ಲಿ ಪರಮಾತ್ಮನ ಉದರದೊಳಗೆ ಪ್ರವೇಶಿಸುತ್ತಾನೆ. ಹೀಗಾಗಿ ಎಂದೂ ಜೀವ ಹೃದಯಸ್ಥಾನದಲ್ಲಿ ಇರುವುದೇ ಇಲ್ಲ, ಎಂದು. ಇದು ಭಾಷ್ಯಕಾರರಿಗೂ ಸಮ್ಮತವಾದಂತಿದೆ. ಏಕೆಂದರೆ 'ಗುಹಾಂ ಪ್ರವಿಷ್ಟೌ' ಎನ್ನುವುದು ಆತ್ಮಾನೌ ಎಂಬ ಶಬ್ದಕ್ಕೆ ಹೇತು ಗರ್ಭ ವಿಶೇಷಣ. ಗುಹಾ ಪ್ರವಿಷ್ಟರಾಗಿ ಹೇಳಲ್ಪಟ್ಟಿರುವುದರಿಂದಲೇ ಆ ಆತ್ಮರು ಪರಮಾತ್ಮನ ರೂಪವಿಶೇಷಗಳು, ಎಂದು ಸೂತ್ರದ ಅರ್ಥ. ಇದರಿಂದ, ಹೃದಯಗುಹಾಸ್ಥತ್ವ ಪರಮಾತ್ಮನಲ್ಲೆ ಇರುವ ವಿಶೇಷ, ಅದು ಜೀವನಿಗಿಲ್ಲ ಎಂದು ತಿಳಿಯುತ್ತದೆ. ಆದರೆ 'ಹೃದಿ ಹ್ಯೇಷ ಆತ್ಮಾ'' ಎಂಬ ಉಪನಿಷತ್ತು 'ಅವಸ್ಥಿತಿ ವೈಶೇಷ್ಯಾದಿತಿ ಚೇನ್ನ ಅಭ್ಯುಪಗಮಾತ್ ಹೃದಿ ಹಿ' ಎಂಬ ಬ್ರಹ್ಮಸೂತ್ರ (2-3-25) ಜೀವಾತ್ಮ ಹೃದಯದಲ್ಲೇ ಇರುತ್ತಾನೆ ಎಂದಿದೆ. ಅಂದಮೇಲೆ ರಾಜರ ಅಭಿಪ್ರಾಯವನ್ನು ಹೀಗೆ ತಿಳಿಯಬೇಕು - 'ಜೀವ ಹೃದಯದಲ್ಲಿರುವ ಪರಮಾತ್ಮನಲ್ಲಿರುತ್ತಾನೆ. ನೇರವಾಗಿ ತಾನೇ ಹೃದಯದಲ್ಲಿಲ್ಲ' ಎಂದು.

3. ಶಾಂಕರಭಾಷ್ಯದಲ್ಲಿ 'ಋತಂ ಪಿಬಂತೌ' ಎಂಬ ಇದೇ ವಾಕ್ಯವನ್ನು ವಿಷಯವನ್ನಾಗಿ ಪರಿಗಣಿಸಿ ಅಲ್ಲಿ ಹೇಳಲಾದ ಕರ್ಮಫಲಭೋಕ್ತೃಗಳು ಬುದ್ಧಿ ಮತ್ತು ಜೀವರು ಎಂದು ಪೂರ್ವಪಕ್ಷ ಮಾಡಿ ಜೀವ ಮತ್ತು ಈಶ್ವರರು ಎಂದು ಸಿದ್ಧಾಂತಿಸಲಾಗಿದೆ. ಅವರಿಬ್ಬರಲ್ಲೂ, ಭೋಕ್ತೃತ್ವವು ಪರಬ್ರಹ್ಮನಿಗೆ ಇಲ್ಲವಾದುದರಿಂದ ಜೀವನೇ ಭೋಕ್ತಾ. ಇದರಿಂದ, ಕೊನೆಯಲ್ಲಿ 'ಋತಂ ಪಿಬಂತೌ' ಎಂಬ ವಾಕ್ಯವನ್ನು ಜೀವಾತ್ಮನಲ್ಲಿ ಸಮನ್ವಯ ಮಾಡಿದಂತಾಗುತ್ತದೆ. ಇದು ಅಸಂಗತ ಎಂದಿದ್ದಾರೆ ಆಚಾರ್ಯರು. ಬ್ರಹ್ಮಸೂತ್ರಗಳು ಬ್ರಹ್ಮನಲ್ಲಿ ಶ್ರುತಿಸಮನ್ವಯ ಮಾಡಲು ಹೊರಟಿವೆ. ಜೀವನಲ್ಲಿ ಸಮನ್ವಯ ಮಾಡಿದರೆ ಸೂತ್ರದ ಉದ್ದೇಶಕ್ಕೆ ಭಂಗಬಂದಂತಾಗುತ್ತದೆ.

ಇದಕ್ಕೆ ಅದ್ವೈತವಾದ ಹೀಗೆ ಉತ್ತರಿಸಬಹುದು- ಜೀವ ಮತ್ತು ಬ್ರಹ್ಮರು ಅಭಿನ್ನರು. ಅವರಲ್ಲಿರುವ ಭೇದ ಅವಾಸ್ತವ. ಅಂದಮೇಲೆ ಜೀವನಲ್ಲಿ ಮಾಡಿದ ಸಮನ್ವಯ ಬ್ರಹ್ಮನಿಗೂ ಅನ್ವಯಿಸುತ್ತದೆ, ಎಂದು. ಈ ವಾದವನ್ನು ನಿರಾಕರಿಸಲು ಆಚಾರ್ಯರು ಜೀವೇಶ್ವರ ಭೇದವು ಸತ್ಯ ಎಂದು ಇಲ್ಲಿ ಸಮರ್ಥಿಸಿದ್ದಾರೆ.

**ಶ್ರುತ್ಯರ್ಥ** : ಅ) ಆರುವಣ್ಯಃ - ಅರ ಎಂದರೆ ದೋಷ. ದೋಷವುಳ್ಳವರು 'ಆರು'ಗಳು. ಅವರಿಂದ ವನನೀಯಃ=ಭಜನೀಯನಾದವನು ಆರು+ವಣ್ಯ. 'ವನ ಸಂಭಕ್ತೌ' ಧಾತು. ನಕಾರಣಕಾರಗಳಿಗೆ ಅಭೇದವಾದುದರಿಂದ 'ವನ್ಯಃ' ಎನ್ನುವ ಬದಲು 'ವಣ್ಯಃ' ಎನ್ನಲಾಗಿದೆ. ಇದರೊಂದಿಗೆ 'ಮೈವ' ಎಂಬ ನಿಷೇಧಾರ್ಥಕ ಅವ್ಯಯವನ್ನು ಸೇರಿಸಿಕೊಂಡಾಗ 'ಪರಮಾತ್ಮ ಜೀವಾತ್ಮಾಭೇದಜ್ಞಾನಿಗಳಾದ ದುಷ್ಟರಿಂದ ಉಪಾಸ್ಯನಾಗಲಾರ' ಎಂದು ಅರ್ಥ ಬರುತ್ತದೆ. ಭೇದ ಸತ್ಯತ್ವದ ಬಗ್ಗೆ, ಅಭೇದದ ಅವಾಸ್ತವತೆಯ ಬಗ್ಗೆ ಶ್ರುತಿಗೆ ತಾತ್ಪರ್ಯವಿದೆ ಎಂದು ಸೂಚಿಸಲು ಮೂರು ಬಾರಿ ಶಪಥಪೂರ್ವಕ ಈ ಮಾತನ್ನು ಹೇಳಲಾಗಿದೆ.

ಆ) ಆಚಾರ್ಯರು ಭಾಗವತತಾತ್ಪರ್ಯದಲ್ಲಿ ಇದೇ ರೀತಿಯ ಶ್ರುತಿಯನ್ನು ಉದಾಹರಿಸಿ ಅದು ಭಾಲ್ಲವೇಯ ಶಾಖೆಗೆ ಸೇರಿದೆ ಎಂದಿದ್ದಾರೆ. ಇಲ್ಲಿ ಅದನ್ನು ಪೈಂಗಿಶ್ರುತಿ ಎಂದು ಹೇಳಿ 'ಆತ್ಮಾ ಹಿ' ಎಂಬ ಮುಂದಿನ ವಾಕ್ಯ ಭಾಲ್ಲವೇಯ ಶ್ರುತಿ ಎಂದಿದ್ದಾರೆ. ಭಾಷ್ಯ ದೀಪಿಕಾಕಾರರು 'ಕೆಲವು ಪ್ರತಿಗಳಲ್ಲಿ 'ಸತ್ಯ ಆತ್ಮಾ' ಮತ್ತು 'ಆತ್ಮಾ ಹಿ ಸ್ವತಂತ್ರಃ' ಎಂಬ ಎರಡೂ ವಾಕ್ಯಗಳ ನಂತರ 'ಇತಿ ಭಾಲ್ಲವೇಯ ಶ್ರುತಿಃ' ಎಂಬ ಪಾಠವಿದೆ. ಆದರೂ, ಅನೇಕ ಪುಸ್ತಕಗಳಲ್ಲಿ ಮಧ್ಯದಲ್ಲಿ 'ಇತಿ ಪೈಂಗಿಶ್ರುತಿಃ' ಎಂಬ ಪಾಠವೇ ಇರುವುದರಿಂದ ಅದನ್ನೇ ಅನುಸರಿಸಲಾಗಿದೆ ಎನ್ನುತ್ತಾರೆ.

ಭಾಗವತತಾತ್ಪರ್ಯದಲ್ಲಿ ಉದಾಹರಿಸಲ್ಪಟ್ಟ ಭಾಲ್ಲವೇಯಶ್ರುತಿಪಾಠ 'ಸ್ಥಾಣುರ್ಹೋರ್ಚಕ್ರಾಮ' ಎಂದು ಮುಂತಾಗಿ ಇಲ್ಲಿಗಿಂತ ವಿಲಕ್ಷಣವಾಗಿದೆ. ಆದುದರಿಂದ ಅದು ಭಾಲ್ಲವೇಯಶ್ರುತಿ. ಇಲ್ಲಿ ಉದಾಹೃತವಾದುದು ಪೈಂಗಿಶ್ರುತಿ ಎಂದು ತಿಳಿಯಬಹುದು.

ಇ) ಕೊನೆಯಲ್ಲಿ ಉದಾಹರಿಸಿರುವ ಎರಡು ಶ್ಲೋಕಗಳ ಆಕರಗಳನ್ನು ಆಚಾರ್ಯರು ಉಲ್ಲೇಖಿಸಿಲ್ಲ. ಅವುಗಳಲ್ಲಿ ಮೊದಲ ಶ್ಲೋಕ ಪಾದ್ಮಪುರಾಣದ್ದು ಎರಡನೆಯ ಶ್ಲೋಕ ಸ್ಕಾಂದ ಪುರಾಣದ್ದು. ಅದನ್ನು ತತ್ವಪ್ರದೀಪಿಕಾದಲ್ಲಿ ಹೇಳಲಾಗಿದೆ- ಯಥೇಶ್ವರಸ್ಯ ಜೀವಸ್ಯೇತಿ ಪಾದ್ಮೇ। ಯಥೇಶ್ವರಶ್ಚ ಜೀವಶ್ಚೇತಿ ಸ್ಕಾಂದೇ. ॥ 12 ॥

## ದ್ವೈತದರ್ಶನದಲ್ಲಿ ಸೂತ್ರಗಳ ಅರ್ಥ

### 1. ಓಂ ॥ ಗುಹಾಂ ಪ್ರವಿಷ್ಟಾವಾತ್ಮಾನೌ ಹಿ ತದ್ದರ್ಶನಾತ್ ॥ ಓಂ

'ಋತಂ ಪಿಬಂತೌ' ಎಂಬ ಶ್ರುತಿಯಲ್ಲಿ ಹೇಳಲ್ಪಟ್ಟಿರುವ ಕರ್ಮಫಲಭೋಗಿಗಳು ಆತ್ಮಾನೌ= ಆತ್ಮ- ಅಂತರಾತ್ಮ ಎಂಬ ಪರಮಾತ್ಮನ ರೂಪವಿಶೇಷಗಳು. ಏಕೆಂದರೆ, ಗುಹಾಂ ಪ್ರವಿಷ್ಟೌ= ಅವರಿಬ್ಬರು ಹೃದಯಾಕಾಶದಲ್ಲಿದ್ದಾರೆಂದು ಹೇಳಲಾಗಿದೆ. (ಇದು ಹೇತುಗರ್ಭವಿಶೇಷಣವಾದುದರಿಂದ ಹೇತುಪರವಾಗಿ ಅರ್ಥಮಾಡಬೇಕು). ಹಿ= ಹೃದಯಾಕಾಶಸ್ಥಿತಿ 'ಯೋ ವೇದ ನಿಹಿತಂ ಗುಹಾಯಾಂ' ಇತ್ಯಾದಿ ಶ್ರುತಿಯಲ್ಲಿ ಪರಬ್ರಹ್ಮನಿಗೆ ಪ್ರಸಿದ್ಧವಾಗಿದೆಯಷ್ಟೇ! ಪರಮಾತ್ಮನ ರೂಪದ್ವಯಗಳು ಹೃದಯಾಕಾಶದಲ್ಲಿವೆ ಎನ್ನಲು ಏನು ಆಧಾರ? ತದ್ದರ್ಶನಾತ್- ತಸ್ಯ= ರೂಪದ್ವಯಗಳಿಗೆ ಹೃದಯಾಕಾಶ ಸ್ಥಿತಿಯು ದರ್ಶನಾತ್= 'ಘರ್ಮಾ ಸಮಂತಾತ್' ಇತ್ಯಾದಿ ಶ್ರುತಿಗಳಿಂದ ಸಿದ್ಧವಾಗಿದೆ.

(ಅತ್ರ ಕರ್ಮಫಲಭೋಗರೂಪಕ್ರಿಯಾಲಿಂಗಂ ಸಮನ್ವೀಯತೇ । 'ಋತಂ ಪಿಬಂತೌ' ಇತಿ ಯೋಗ್ಯತಯಾ ಅನ್ವೇತಿ। 'ಋತಂ ಪಿಬಂತೌ' ಇತಿ ಶ್ರುತ್ಯುಕ್ತೌ ಋತಂ ಪಿಬಂತೌ ಆತ್ಮಾನೌ ಏವ= ಆತ್ಮ ಅಂತರಾತ್ಮಾಖ್ಯ ಬ್ರಹ್ಮರೂಪವಿಶೇಷಾವೇವ । ನ ತು ಜೀವೇಶ್ವರೌ । ಕುತಃ? ಗುಹಾಂ ಪ್ರವಿಷ್ಟೌ। ಹೇತುಗರ್ಭಮಿದಂ । ಹೃದಯಗುಹಾ

ಪ್ರವಿಷ್ಟತ್ವಲಿಂಗಾತ್ ಇತ್ಯರ್ಥಃ । ಹಿ ಶಬ್ದೇನ ಬ್ರಹ್ಮಣ್ಯೇವ 'ಯೋ ವೇದ ನಿಹಿತಂ ಗುಹಾಯಾಂ' ಇತ್ಯಾದೌ ತಸ್ಯ ಪ್ರಸಿದ್ಧಿಮಾಹ । ರೂಪದ್ವಯಸ್ಯ ಗುಹಾಸ್ಥತ್ವಂ 'ಘರ್ಮಾ ಸಮಂತಾ' ಇತ್ಯಾದಿ ಶ್ರುತ್ಯುಕ್ತೇಃ॥)

**2. ಓಂ॥ ವಿಶೇಷಣಾಚ್ಚ॥ ಓಂ**

ಮುಂದಿನ 'ಯಃ ಸೇತುರೀಜಾನಾನಾಂ' ಎಂಬ ಮಂತ್ರದಲ್ಲಿ 'ಏಕ, ಸಂಸಾರ ಸಾಗರದ ತಾರಕ, ಬ್ರಹ್ಮ' ಎಂದು ಮುಂತಾಗಿ ವಿಶೇಷಣವಿರುವುದರಿಂದಲೂ ಕರ್ಮಫಲ ಭೋಕ್ತೃಗಳಾಗಿ ಹೇಳಲ್ಪಟ್ಟವು ಪರಮಾತ್ಮನ ರೂಪಗಳೇ ಆಗಿವೆ.

('ಯಃ ಸೇತುರೀಜಾನಾಂನಾಂ ಅಕ್ಷರಂ ಬ್ರಹ್ಮ ತತ್ಪರಂ' ಇತ್ಯೇಕವಚನೇನ ಸೇತುತ್ವ ಬ್ರಹ್ಮತ್ವಾದಿನಾ ಚ ವಿಶೇಷಣಾಚ್ಚ ಪಿಬಂತೌ ಆತ್ಮಾನಾಮೇವ ನ ಜೀವೇಶೌ।)

## ಶಾಂಕರಭಾಷ್ಯದಲ್ಲಿ ಹೇಳಿದ ಸೂತ್ರಗಳ ಅರ್ಥ

**1. ಗುಹಾಂ ಪ್ರವಿಷ್ಟೌ ಆತ್ಮಾನೌ ಹಿ ತದ್ದರ್ಶನಾತ್ ।**

**ಪೂರ್ವಪಕ್ಷ** – 'ಋತಂ ಪಿಬಂತೌ' ಎಂಬ ಕಾಠಕೋಪನಿಷತ್ತಿನಲ್ಲಿ ಹೇಳಲಾದ ಇಬ್ಬರು ಜೀವ ಮತ್ತು ಬುದ್ಧಿ ತತ್ತ್ವಗಳೋ ಅಥವಾ ಜೀವ ಮತ್ತು ಪರಮಾತ್ಮರೋ ಎಂದು ಸಂಶಯ. ಈ ಎರಡೂ ಪಕ್ಷಗಳಲ್ಲೂ ಪುಣ್ಯಫಲದ ಭೋಗ ಜೀವಾತ್ಮನಿಗೆ ಮಾತ್ರ. ಜಡವಾದ ಬುದ್ಧಿಗೂ ಇಲ್ಲ, ಚೇತನಸಾದ ಬ್ರಹ್ಮನಿಗೂ ಇಲ್ಲ. ಆದರೂ ಛತ್ರಿನ್ಯಾಯದಿಂದ ಅಥವಾ ಕರಣವಾದ ಬುದ್ಧಿಗೆ 'ಕಾಷ್ಠಂ ಪಚತಿ' ಎಂದಂತೆ ಗೌಣವಾದ ಕರ್ತೃತ್ವವನ್ನು ಅವಲಂಬಿಸಿ 'ಪಿಬಂತೌ' ಎಂಬ ವಿಶೇಷಣವನ್ನು ಹೊಂದಿಸಬೇಕು. ಅಂತೆಯೇ ಬ್ರಹ್ಮ ಸ್ವಯಂ ಫಲಭೋಕ್ತೃವಲ್ಲದಿದ್ದರೂ ಜೀವನ ಭೋಗಕ್ಕೆ ಅವನು ಕಾರಣನಾದುದರಿಂದ ಅವನನ್ನೂ ಗೌಣವಾಗಿ ಭೋಕ್ತೃ ಎಂದು ಪರಿಗಣಿಸಿ 'ಪಿಬಂತೌ' ಎಂಬ ವಿಶೇಷಣವನ್ನು ಸಮರ್ಥಿಸ ಬೇಕು. ಹೀಗೆ ಜೀವನ ಜೊತೆಯಲ್ಲಿ ಬುದ್ಧಿಯನ್ನು ಸೇರಿಸಿಕೊಂಡರೂ ಬ್ರಹ್ಮನನ್ನು ಸೇರಿಸಿ ಕೊಂಡರೂ ಸಮಸ್ಯೆ ಸಮಾನ. ಆದರೆ, ವ್ಯಾಪ್ತನಾದ ಬ್ರಹ್ಮ ಸಂಕುಚಿತ ಹೃದಯ ಪ್ರದೇಶದಲ್ಲಿ ಇರಲಾರನಾದುದರಿಂದ 'ಗುಹಾಂ ಪ್ರವಿಷ್ಟೌ' ಎಂಬ ಇಲ್ಲಿನ ವಿಶೇಷಣ ಬ್ರಹ್ಮನಲ್ಲಿ ಹೊಂದ ಲಾರದು. ಅಷ್ಟೇ ಅಲ್ಲ, 'ಛಾಯಾತಪೌ' ಎಂದು ಹೇಳಲಾದ ನೆರಳು ಬೆಳಕಿನಂತೆ ವಿರುದ್ಧ ಸ್ವಭಾವ ಜಡಚೇತನರೂಪರಾದ ಬುದ್ಧಿ-ಜೀವರಿಗೆ ಅನ್ವಯವಾಗುವಂತೆ ಜೀವ-ಈಶ್ವರ ರಿಗೆ ಅನ್ವಯಿಸುವುದಿಲ್ಲ. ಆದ್ದರಿಂದ ಇಲ್ಲಿ ಹೇಳಲಾದವರು ಬುದ್ಧಿತತ್ವ ಮತ್ತು ಜೀವರು.

**ಸಿದ್ಧಾಂತ** : 'ಪಿಬಂತೌ' ಎಂಬ ಶಬ್ದವಿರುವುದರಿಂದ ಒಬ್ಬನಂತೂ ಚೇತನನೆನ್ನುವುದು ನಿಶ್ಚಿತ. ಅವನ ಜೊತೆ ಇನ್ನೊಬ್ಬರಿದ್ದಾಗ ದ್ವಿವಚನ ಸರಿಯಾಗುತ್ತದೆ. ಇನ್ನೊಬ್ಬನು ಯಾರು? 'ಈ ಎತ್ತಿಗೆ ಜೊತೆ ಹುಡುಕಬೇಕು' ಎಂದಾಗ ಮತ್ತೊಂದು ಎತ್ತು ಎಂದೇ ಅರ್ಥವಾಗುವಂತೆ ಚೇತನನಿಗೆ ಜೊತೆಗಾರ ಮತ್ತೊಬ್ಬ ಚೇತನನಾಗುವುದೇ

ನ್ಯಾಯಸಮ್ಮತ. ಅದನ್ನು ಸೂತ್ರಕಾರರು 'ಆತ್ಮಾನೌ' ಎಂಬ ಪದದಿಂದ ಹೇಳಿದ್ದಾರೆ. ಆತ್ಮರೇ ಹೊರತು ಅನಾತ್ಮವಾದ ಬುದ್ಧಿಯನ್ನು ಜೊತೆಯಲ್ಲಿ ಸೇರಿಸಿಕೊಳ್ಳಬಾರದು ಎಂದರ್ಥ. ವ್ಯಾಪ್ತನಾದ ಪರಬ್ರಹ್ಮನಿಗೂ ಗುಹಾಸ್ಥಿತಿ 'ಗುಹಾಹಿತಂ ಗಹ್ವರೇಷ್ಠಂ ಪುರಾಣಂ' ಎಂದು ಶ್ರುತಿಯಲ್ಲಿ ಪ್ರಸಿದ್ಧವಾಗಿದೆ. ಜೀವ ಸಂಸಾರಿ, ಪರಬ್ರಹ್ಮ ಅಸಂಸಾರಿ. ಹೀಗೆ ವಿರುದ್ಧ ಸ್ವಭಾವದ ಅವರಿಬ್ಬರನ್ನು 'ಛಾಯಾತಪೌ' ಎನ್ನುವುದೂ ಉಚಿತ. ಆದ್ದರಿಂದ ಜೀವೇಶ್ವರರೇ ಹೃದಯದಲ್ಲಿದ್ದು ಸುಕೃತಫಲವನ್ನು ಅನುಭವಿಸುವವರು. 'ಅನ್ಯತ್ರ ಧರ್ಮಾತ್' ಇತ್ಯಾದಿ ಹಿಂದಿನ ಮಂತ್ರದಲ್ಲಿ ನಚಿಕೇತ ಜೀವ- ಜಡಗಳಿಗಿಂತ ವಿಲಕ್ಷಣನಾದ ಪರಮಾತ್ಮನ ಬಗ್ಗೆ ಕೇಳಿರುವುದರಿಂದ ಇಲ್ಲಿ ಅವರಿಬ್ಬರನ್ನು ಉಲ್ಲೇಖಿಸುವುದು ಯುಕ್ತವೂ ಆಗಿದೆ.

**2. ವಿಶೇಷಣಾಚ್ಚ:** ಮುಂದಿನ ಮೂರನೆಯ ಮಂತ್ರದಲ್ಲಿ-

'ಆತ್ಮಾನಂ ರಥಿನಂ ವಿದ್ಧಿ ಶರೀರಂ ರಥಮೇವ ಚ'

ಎಂದು ಜೀವನನ್ನು ರಥಿಕನನ್ನಾಗಿಯೂ

'ಸೋಽಧ್ವನಃ ಪಾರಮಾಪ್ನೋತಿ ತದ್ವಿಷ್ಣೋಃ ಪರಮಂ ಪದಂ'

ಎಂದು ಪರಮಾತ್ಮನನ್ನು ಪ್ರಾಪ್ಯನನ್ನಾಗಿಯೂ ಉಲ್ಲೇಖಿಸಿರುವುದರಿಂದಲೂ 'ಋತಂ ಪಿಬಂತೌ' ಎಂಬ ಮಂತ್ರದಲ್ಲಿ ಉಲ್ಲೇಖಿಸಲ್ಪಟ್ಟವರು ಜೀವ ಮತ್ತು ಈಶ್ವರರು.

## ಚಂದ್ರಿಕಾದಲ್ಲಿ ಮಾಡಿರುವ ವಿಮರ್ಶೆ

ಅದ್ವೈತದರ್ಶನದಲ್ಲಿ ಕರ್ತೃತ್ವ, ಭೋಕ್ತೃತ್ವ ಇವು ಜಡವಾದ ಬುದ್ಧಿಯ ಧರ್ಮಗಳು. ಅವು ಚೇತನನಾದ ಜೀವನಲ್ಲಿ ಆರೋಪಿಸಲ್ಪಟ್ಟಿವೆ. ಸ್ಫಟಿಕದ ಸಮೀಪದಲ್ಲಿ ಕೆಂಪು ರತ್ನವಿದ್ದರೆ ಅದರ ಕೆಂಬಣ್ಣ ಬಿಳಿಯಾದ ಸ್ಫಟಿಕದಲ್ಲಿ ಕಾಣುವಂತೆ ಜೀವಾತ್ಮನಲ್ಲಿ ಕಾಣುವ ಕರ್ತೃತ್ವಾದಿ ಧರ್ಮಗಳು ವಾಸ್ತವವಾಗಿ ಅವನಲ್ಲಿಲ್ಲ. ಹೀಗೆ ಆರೋಪಿತವಾದ ಭೋಕ್ತೃತ್ವ (ಸುಖದುಃಖಗಳನ್ನು ಅನುಭವಿಸುವುದು) ಇದ್ದ ಮಾತ್ರಕ್ಕೆ ಅವನನ್ನು 'ಪಿಬಂತೌ' ಎಂದು ಹೇಳುವುದಾದರೆ ದೇಹದಲ್ಲೂ ಆರೋಪಿತವಾದ ಆತ್ಮತ್ವವಿರುವುದರಿಂದ 'ಆತ್ಮಾ ದ್ರಷ್ಟವ್ಯಃ' ಎಂಬಲ್ಲೂ ಆತ್ಮಪದಕ್ಕೆ ದೇಹ ಎಂಬ ಅರ್ಥವನ್ನು ಹೇಳಬೇಕಾದೀತು. ಹೀಗೆ ಭೋಕ್ತೃತ್ವ ಜೀವನಲ್ಲಿ ಇಲ್ಲವೆಂದಾದ ಮೇಲೆ ಶ್ರುತಿಯಲ್ಲಿ 'ಪಿಬಂತೌ' ಎಂದಿರುವುದರಿಂದ ಜೀವಾತ್ಮನನ್ನು ಹೇಳಲಾಗಿದೆ ಎಂದು ನಿಶ್ಚಯಮಾಡಲಾಗದು. ಹಾಗಿದ್ದ ಮೇಲೆ ಅವನ ಜೊತೆಯಲ್ಲಿರಬೇಕಾದವನು ಮತ್ತೊಬ್ಬ ಪರಬ್ರಹ್ಮ ಎಂದೂ ನಿಶ್ಚೈಸಲಾಗದು. ಇದಕ್ಕಿಂತ ಹೀಗೆ ಸಿದ್ಧಾಂತ ಮಾಡುವುದೇ ಉಚಿತ– 'ಪಿಬಂತೌ' ಎಂದಿರುವುದರಿಂದ ಭೋಕ್ತೃವಾದ ಜಡಬುದ್ಧಿಯನ್ನು ತೆಗೆದುಕೊಳ್ಳುವುದು ಅನಿವಾರ್ಯ. ಆ ಬುದ್ಧಿಯಲ್ಲಿ ಕ್ರಿಯಾಶಕ್ತಿ ಮತ್ತು ಜ್ಞಾನಶಕ್ತಿಗಳು ಇರುವುದರಿಂದ ದ್ವಿವಚನವನ್ನು ಹೊಂದಿಸಬೇಕು. ಅಥವಾ, ದ್ವಿವಚನ

ವಿರುವುದರಿಂದ ಎರಡು ತತ್ತ್ವಗಳೇ ಇರಬೇಕು ಎನ್ನುವುದಾದರೂ ವಾಸ್ತವ ಭೋಕ್ತೃವಾದ ಬುದ್ಧಿ, ಆರೋಪಿತ ಭೋಕ್ತೃವಾದ ಜೀವ ಹೀಗೆ ಇವರಿಬ್ಬರನ್ನು ತೆಗೆದುಕೊಳ್ಳಬೇಕು, ಎಂದು. ಸರ್ವಥಾ ಬ್ರಹ್ಮನನ್ನು ಭೋಕ್ತೃವನ್ನಾಗಿ ತೆಗೆದುಕೊಳ್ಳುವುದು ಯೋಗ್ಯವೆನಿಸಲಾರದು.

2. ಮುಂದಿನ ಮಂತ್ರದಲ್ಲಿ ಪರಮಾತ್ಮನ ಉಲ್ಲೇಖವಿರುವಂತೆ 'ಬುದ್ಧಿಂ ತು ಸಾರಥಿಂ ವಿದ್ಧಿ' ಎಂದು ಬುದ್ಧಿಯ ಉಲ್ಲೇಖವೂ ಇದೆ. ಆದ್ದರಿಂದ ಎರಡನೆಯ ಸೂತ್ರದಲ್ಲಿ ಮಾಡಿರುವ ಸಿದ್ಧಾಂತವೂ ಸರಿಯಲ್ಲ.

3. ತತ್ತ್ವಪ್ರಕಾಶಿಕಾದಲ್ಲಿ ಅದ್ವೈತಭಾಷ್ಯದ ಪೂರ್ವಪಕ್ಷಸಿದ್ಧಾಂತಗಳೆರಡೂ ಅನುಚಿತ ಎಂದು ಹೀಗೆ ಹೇಳಲಾಗಿದೆ - ಕರ್ಮ ಫಲವನ್ನು ಅನುಭವಿಸುವವರು ಬುದ್ಧಿ ಮತ್ತು ಜೀವರು ಎಂದು ಹೇಳಿದಾಗಲೂ ಜೀವನೇ ಭೋಕ್ತೃ. ಜೀವ-ಪರಬ್ರಹ್ಮರು ಎಂದು ಹೇಳಿದಾಗಲೂ ಅವನೇ ಭೋಕ್ತೃ. ಅಂದಮೇಲೆ ಪೂರ್ವಪಕ್ಷದಲ್ಲಿ ಆಗಿರುವ ನಷ್ಟವೇನು? ಸಿದ್ಧಾಂತದಲ್ಲಿ ಬಂದ ಲಾಭವೇನು? ಎರಡೂ ಪಕ್ಷಗಳಲ್ಲಿ ಪರಬ್ರಹ್ಮನಲ್ಲಿಯಂತೂ ಸಮನ್ವಯವನ್ನು ಸಾಧಿಸಿದಂತಾಗುವುದಿಲ್ಲ.

## ರಾಮಾನುಜ ಭಾಷ್ಯದಲ್ಲಿ ಹೇಳಿರುವ ಸೂತ್ರಾರ್ಥ

ರಾಮಾನುಜಭಾಷ್ಯದಲ್ಲೂ ಈ ಸೂತ್ರಗಳನ್ನು ಶಾಂಕರಭಾಷ್ಯದಂತೆಯೇ ವ್ಯಾಖ್ಯಾನಿಸಲಾಗಿದೆ. ಆದರೆ ಹಿಂದಿನ ಅಧಿಕರಣದ ಎರಡು ಸೂತ್ರಗಳನ್ನೂ ಈ ಅಧಿಕರಣದ ಎರಡು ಸೂತ್ರಗಳನ್ನೂ ಸೇರಿಸಿ ನಾಲ್ಕು ಸೂತ್ರಗಳ ಒಂದೇ ಅಧಿಕರಣವನ್ನಾಗಿ ಪರಿಗಣಿಸಲಾಗಿದೆ. ಮೊದಲ ಎರಡು ಸೂತ್ರಗಳಿಗೆ ಕಾಠಕದ ಪ್ರಥಮಾಧ್ಯಾಯದ ಎರಡನೆಯ ವಲ್ಲಿಯ ಇಪ್ಪತ್ತನಾಲ್ಕನೆಯ ಮಂತ್ರವಾದ 'ಯಸ್ಯ ಬ್ರಹ್ಮ ಚ ಕ್ಷತ್ರಂ ಚ' ಎನ್ನುವುದು ವಿಷಯವಾಕ್ಯ. ಮುಂದಿನ ಗುಹಾಧಿಕರಣದ ಎರಡು ಸೂತ್ರಗಳಿಗೆ ಪ್ರಥಮಾಧ್ಯಾಯದ ಮೂರನೆಯ ವಲ್ಲಿಯ 'ಋತಂ ಪಿಬಂತೌ' ಎಂಬ ಮಂತ್ರ ವಿಷಯವಾಕ್ಯ. ಹೀಗೆ ವಿಷಯವಾಕ್ಯಗಳು ಬೇರೆಯಾದುದರಿಂದ ಅಧಿಕರಣಗಳೂ ಬೇರೆಯಾಗಬೇಕು. ಆದರೆ ಈ ಎರಡೂ ಅಧಿಕರಣಗಳು ಒಂದರ ನಂತರ ಮತ್ತೊಂದು ಇವೆ. ಅಲ್ಲದೆ, ಈ ಎರಡು ವಿಷಯಗಳೂ ಪರಸ್ಪರ ಪೂರಕವಾಗಿವೆ. 'ಋತಂ ಪಿಬಂತೌ' ಎಂಬ ಮುಂದಿನ ವಾಕ್ಯದಲ್ಲಿ 'ಬುದ್ಧಿ-ಜೀವರ' ಪ್ರಸ್ತಾವವಿರುವುದಾದರೆ ಅದರ ಹಿಂದಿರುವ 'ಯಸ್ಯ ಬ್ರಹ್ಮ ಚ ಕ್ಷತ್ರಂ ಚ' ಎಂಬ ವಾಕ್ಯವೂ ಜೀವನನ್ನೇ ಕುರಿತು ಹೇಳಬೇಕು. ಬ್ರಹ್ಮನ ಬಗ್ಗೆ ಹೇಳಬಾರದು. ಏಕೆಂದರೆ, ಆಗ ಇದು ಜೀವಾತ್ಮನ ಕುರಿತ ಪ್ರಕರಣವಾಗುತ್ತದೆ. ಹೀಗೆ ಒಂದು ವಾಕ್ಯ ಬ್ರಹ್ಮಪರವಾಗಬೇಕಾದರೆ ಎರಡೂ ವಾಕ್ಯಗಳು ಬ್ರಹ್ಮಪರವಾಗಲೇಬೇಕು. ಆದ್ದರಿಂದ ಪರಸ್ಪರ ಸಂಬಂಧಪಡುವ ಈ ಎರಡು ವಿಷಯಗಳೂ ಒಂದೇ ಅಧಿಕರಣಕ್ಕೆ ಸೇರಿವೆ. ಇದು ರಾಮಾನುಜಭಾಷ್ಯದ ಸಮರ್ಥನೆ.

## ಚಂದ್ರಿಕಾದಲ್ಲಿ ಮಾಡಿರುವ ವಿಮರ್ಶೆ

ಮೊದಲ ಎರಡು ಸೂತ್ರಗಳಿಗೆ ರಾಮಾನುಜಭಾಷ್ಯದಲ್ಲಿ 'ಯಸ್ಯ ಬ್ರಹ್ಮ ಚ ಕ್ಷತ್ರಂ ಚ' ಎಂಬ ದ್ವಿತೀಯ ವಲ್ಲಿಯ 25ನೇ ಮಂತ್ರವನ್ನು ವಿಷಯವಾಕ್ಯವನ್ನಾಗಿ ತೆಗೆದುಕೊಳ್ಳಲಾಗಿದೆ. ಆ ವಾಕ್ಯ ಬ್ರಹ್ಮಪರ ಎಂದು ಸಮರ್ಥಿಸಲು 'ಪ್ರಕರಣಾಚ್ಚ' ಎಂಬ ಎರಡನೇ ಸೂತ್ರವನ್ನು ವ್ಯಾಖ್ಯಾನಿಸಲಾಗಿದೆ. ದ್ವಿತೀಯ ವಲ್ಲಿಯ 22ನೆಯ ಮಂತ್ರ 'ಮಹಾಂತಂ ವಿಭುಮಾತ್ಮಾನಂ ಮತ್ವಾ ಧೀರೋ ನ ಶೋಚತಿ' ಎಂದು ಪರಬ್ರಹ್ಮಪರವಾದುದರಿಂದ ಈ ಪ್ರಕರಣ ಬ್ರಹ್ಮಪರ ಎಂದು ಆ ಸೂತ್ರದ ಅಭಿಪ್ರಾಯ. 'ಋತಂ ಪಿಬಂತೌ' ಎಂಬ ಮಂತ್ರ ಮೂರನೆಯ ವಲ್ಲಿಯಲ್ಲಿದೆ. ಅದು ಬುದ್ಧಿ ಜೀವರ ಪರವಾದರೂ ಹಿಂದಿನ ಪ್ರಕರಣ ಅಂದರೆ ಎರಡನೆಯ ವಲ್ಲಿ ಬ್ರಹ್ಮಪರವಾಗಿರಲು ಅಡ್ಡಿಯೇನೂ ಇಲ್ಲ. ಅಂದಮೇಲೆ ಈ ಎರಡು ವಿಷಯಗಳು ಪರಸ್ಪರ ಪೂರಕವಾಗಿರುವುದು ಹೇಗೆ?

ಅಲ್ಲದೆ, ಈ ಪಾದದಲ್ಲಿರುವ 'ಅದೃಶ್ಯತ್ವಾಧಿಕರಣ' ಮತ್ತು ಮುಂದಿನ ಪಾದದಲ್ಲಿರುವ 'ದ್ಯುಭ್ವಾದ್ಯಾಯತನತ್ವಾಧಿಕರಣ' ಇವೆರಡಕ್ಕೂ ಮುಂಡಕೋಪನಿಷತ್ತಿನ ಮಂತ್ರಗಳೇ ವಿಷಯ ವಾಕ್ಯಗಳು. ಎರಡು ಅಧಿಕರಣಗಳ ವಿಷಯಗಳೂ, ಇಲ್ಲಿರುವಂತೆ ಪರಸ್ಪರ ಪೂರಕಗಳಾಗಿವೆ. ಆದರೆ ಅವೆರಡನ್ನು ಪ್ರತ್ಯೇಕ ಅಧಿಕರಣಗಳನ್ನಾಗಿ ಸೂತ್ರಕಾರರು ಪರಿಗಣಿಸಿದ್ದಾರೆ. ಆದ್ದರಿಂದ ಪ್ರಕೃತದಲ್ಲೂ ವಿಷಯವಾಕ್ಯಗಳು ವಿಭಿನ್ನವಾದುದರಿಂದ ಅಧಿ ಕರಣಗಳನ್ನೂ ಪ್ರತ್ಯೇಕಗೊಳಿಸುವುದು ಉಚಿತವೆನಿಸುತ್ತದೆ.

**ಇಲ್ಲಿಗೆ ಗುಹಾಧಿಕರಣ ಮುಗಿಯಿತು.**

# ಅಂತರಾಧಿಕರಣ - 4

**ಆದಿತ್ಯೇ ವಿಷ್ಣುರಿತ್ಯುಕ್ತಮ್ ।**

**'ಯ ಏಷ ಆದಿತ್ಯೇ ಪುರುಷಃ ಸೋಽಹಮಸ್ಮಿ ಸ ಏವಾಹಮಸ್ಮಿ' (ಛಾಂ 4.11) ಇತ್ಯಾದೌ ಅಗ್ನೀನಾಮೇವ ಆದಿತ್ಯಾದಿಸ್ಥತ್ವಮುಚ್ಯತೇ । ಅತೋ ಅಕ್ಷ್ಯಾದಿತ್ಯ-ಯೋರೈಕ್ಯಾತ್ 'ಯ ಏಷೋಽಂತರಕ್ಷಿಣಿ ಪುರುಷೋ ದೃಶ್ಯತೇ' (ಛಾಂ. 4.15) ಇತ್ಯತ್ರಾಪಿ ಅಗ್ನಿರೇವ ಉಚ್ಯತೇ । ಅತಃ,**

**'ತದ್ಯಥಾ ಪುಷ್ಕರಪಲಾಶೇ ಆಪಃ ನ ಶ್ಲಿಷ್ಯಂತೇ**
**ಏವಂ ಏವಂವಿದಿ ಪಾಪಂ ಕರ್ಮ ನ ಶ್ಲಿಷ್ಯತೇ' । (ಛಾಂ.4.14)**

**ಇತ್ಯಗ್ನಿಜ್ಞಾನಾದೇವ ಸರ್ವಪಾಪಾಶ್ಲೇಷಾತ್ ಮೋಕ್ಷೋಪಪತ್ತಿರಿತಿ । ಅತೋ ಬ್ರವೀತಿ-**

## ಓಂ ॥ ಅಂತರ ಉಪಪತ್ತೇಃ ॥ ಓಂ

**ಚಕ್ಷುರಂತಸ್ಥೋ ವಿಷ್ಣುರೇವ । 'ತ್ರಿಪಾದಸ್ಯಾಮೃತಂ ದಿವಿ' (ಋ.10.10.3) ಇತ್ಯಾದಿನಾ ತಸ್ಯೈವ ಅಮೃತತ್ವಾದ್ಯುಪಪತ್ತೇಃ । ಬ್ರಹ್ಮಶಬ್ದಾದ್ಯುಪಪತ್ತೇಶ್ಚ । 'ಸೋಽಹಮಸ್ಮಿ' ಇತ್ಯಾದಿ ತು ಅಂತರ್ಯಾಮ್ಯಪೇಕ್ಷಯಾ-**

**ಅಂತರ್ಯಾಮಿಣಮೀಶೇಶಂ ಅಪೇಕ್ಷ್ಯಾಹಂ ತ್ವಮಿತ್ಯಪಿ ।**

**ಸರ್ವೇ ಶಬ್ದಾಃ ಪ್ರಯುಜ್ಯಂತೇ ಸತಿ ಭೇದೇಽಪಿ ವಸ್ತುಷು ॥**

**ಇತಿ ಮಹಾಕೌರ್ಮೇ ॥ 13 ॥**

ಆನಂದಮಯಾಧಿಕರಣದಲ್ಲಿ 'ಯಶ್ಚಾಸೌ ಆದಿತ್ಯೇ' ಎಂದು ಸೂರ್ಯಮಂಡಲ ದಲ್ಲಿರುವವನು ವಿಷ್ಣು ಎಂದು ಹೇಳಲಾಗಿದೆ. ಆದರೆ ಛಾಂದೋಗ್ಯೋಪನಿಷತ್ತಿನಲ್ಲಿ 'ಸೂರ್ಯಮಂಡಲದಲ್ಲಿರುವ ಪುರುಷ ನಾನು, ನಾನೇ ಅವನು' ಎಂದು ಮೊದಲಾದ ವಾಕ್ಯಗಳಿಂದ ಗಾರ್ಹಪತ್ಯ-ಆಹವನೀಯ-ದಕ್ಷಿಣಾಗ್ನಿಗಳು ಸೂರ್ಯಾದಿ ಸ್ಥಾನಗಳಲ್ಲಿವೆ ಎಂದು ಹೇಳಲಾಗಿದೆ. ಆದ್ದರಿಂದ, ಕಣ್ಣಿನ ಅಭಿಮಾನಿದೇವತೆ ಮತ್ತು ಸೂರ್ಯಮಂಡಲದ ಅಭಿಮಾನಿದೇವತೆಗಳು ಅಭಿನ್ನರಾದುದರಿಂದ 'ಯ ಏಷೋಽಂತರಕ್ಷಿಣಿ ಪುರುಷೋ ದೃಶ್ಯತೇ' ಎಂದು ಕಣ್ಣಿನಲ್ಲಿ ಇರುವುದಾಗಿ ಹೇಳಲ್ಪಟ್ಟವನೂ ಅಗ್ನಿಯೇ ಆಗುತ್ತಾನೆ. ಇದರಿಂದ 'ಕಮಲದ ಎಲೆಯಲ್ಲಿ ನೀರು ಅಂಟದಿರುವಂತೆ ಕಣ್ಣಿನಲ್ಲಿರುವ ದೇವತೆಯನ್ನು ತಿಳಿದವನಿಗೆ ಪಾಪವು ಅಂಟುವುದಿಲ್ಲ' ಎಂದಿರುವುದರಿಂದ ಅಗ್ನಿಯ ಜ್ಞಾನದಿಂದಲೇ ಪಾಪಕ್ಷಯ, ಆ ಮೂಲಕ ಮೋಕ್ಷವು ಲಭಿಸುತ್ತದೆ. ಆದುದರಿಂದ ಆನಂದಮಯ ಅಗ್ನಿ, ಅವನ ಜ್ಞಾನವೇ ಮೋಕ್ಷಸಾಧನ. ಹೀಗೆ ಆಕ್ಷೇಪ ಬಂದಾಗ ಅದಕ್ಕೆ ಪರಿಹಾರವನ್ನು ಸೂತ್ರಕಾರರು ಹೇಳಿದ್ದಾರೆ - 'ಅಂತರ ಉಪಪತ್ತೇಃ' ಎಂದು.

ಕಣ್ಣಿನ ಒಳಗೆ ನಿಯಾಮಕನಾಗಿರುವವನು ವಿಷ್ಣುವೆ. ಏಕೆಂದರೆ, ಇಲ್ಲಿ 'ಏತದಮೃತಂ' ಎಂದು ಹೇಳಿದ ಅಮೃತತ್ವವು 'ತ್ರಿಪಾದಸ್ಯಾಮೃತಂ ದಿವಿ' ಎಂದು ವೇದದಲ್ಲಿ ವಿಷ್ಣುವಿನ ಧರ್ಮವಾಗಿ ಹೇಳಲ್ಪಟ್ಟಿದೆ. ಅಷ್ಟೇ ಅಲ್ಲದೆ, 'ಏತದ್ ಬ್ರಹ್ಮ' ಎಂದು ಇಲ್ಲಿ ಹೇಳಿದ ಬ್ರಹ್ಮಶಬ್ದವೂ ಆಗ ಸಂಗತವಾಗುತ್ತದೆ. ಅಗ್ನಿ ಹೇಳಿದ 'ಸೋಽಹಮಸ್ಮಿ' ಇತ್ಯಾದಿ ವಾಕ್ಯಗಳು ತನ್ನ ಅಂತರ್ಯಾಮಿದೃಷ್ಟಿಯಿಂದ ಪರಮಾತ್ಮನಿಗೆ ಅನ್ವಯಿಸುತ್ತವೆ. ಮಹಾಕೂರ್ಮ ಪುರಾಣ ಹೀಗೆ ಹೇಳುತ್ತದೆ- 'ಬ್ರಹ್ಮಾದಿದೇವತೆಗಳಿಗೂ ಅಧಿಪತಿಯಾದ ವಿಷ್ಣುವು ಸರ್ವಾಂತರ್ಯಾಮಿಯಾದುದರಿಂದ 'ಅಹಂ' 'ತ್ವಂ' ಎಂಬ ಶಬ್ದಗಳನ್ನು ಅಷ್ಟೇ ಏಕೆ, ಸಕಲಕ್ಕೂ ಅವನಿಗೂ ಭೇದವಿದ್ದರೂ ಸಕಲ ಪದಾರ್ಥ ವಾಚಕವಾದ ಶಬ್ದಗಳನ್ನೂ ಅವನಲ್ಲಿ ಪ್ರಯೋಗಿಸಲಾಗುತ್ತದೆ.'

**ವಿವರಣೆ :** 1.ಈ ಅಧಿಕರಣಕ್ಕೆ ಆನಂದಮಯಾಧಿಕರಣದೊಂದಿಗೆ ಸಂಬಂಧ ವನ್ನು ಕಲ್ಪಿಸಲಾಗಿದೆ. ಆನಂದಮಯನು 'ಯಶ್ಚಾಸೌ ಆದಿತ್ಯೇ' ಎಂದು ಸೂರ್ಯನಲ್ಲಿ

ಸನ್ನಿಹಿತನಾಗಿದ್ದಾನೆ ಎನ್ನಲಾಗಿದೆ. ಆದರೆ ಸೂರ್ಯನಲ್ಲಿರುವುದು ಅಗ್ನಿ ಎಂದು ಛಾಂದೋಗ್ಯದಲ್ಲಿದೆ. ಅಂದಮೇಲೆ ಅವನೇ ಆನಂದಮಯ ಎಂದಂತಾಯಿತು. ಅಲ್ಲದೆ, ಸೂರ್ಯ, ಆದಿತ್ಯರಲ್ಲಿ ಸನ್ನಿಹಿತನಾದ ಅಗ್ನಿಯ ಜ್ಞಾನದಿಂದ ಪಾಪವೆಲ್ಲ ನಾಶವಾಗುತ್ತದೆ ಎಂದು ಇಲ್ಲಿ ಹೇಳಲಾಗಿದೆ. ಪಾಪನಾಶವಾದರೆ ದುಃಖವಿಲ್ಲ. ದುಃಖವಿಲ್ಲದ ಸ್ಥಿತಿಯೇ ಮೋಕ್ಷ. ಹೀಗೆ ಅಗ್ನಿಯೇ ಮೋಕ್ಷದಾಯಕ ಎಂದಂತಾಗುತ್ತದೆ. ಆಗ ಜನ್ಮಾಧಿಕರಣದಲ್ಲಿ ಹೇಳಿದ ಮೋಕ್ಷಕಾರಣತ್ವ ಲಕ್ಷಣಕ್ಕೆ ಅಗ್ನಿಯಲ್ಲಿ ಅತಿವ್ಯಾಪ್ತಿದೋಷ ಬರುತ್ತದೆ. ಅದಕ್ಕಾಗಿ ಸೂರ್ಯನ ಅಂತರ್ಯಾಮಿ ಯಾರು? ಎಂಬುದು ಅವಶ್ಯ ನಿರ್ಣಯಿಸಬೇಕಾದ ವಿಷಯ.

2. ಈ ಅಧಿಕರಣದ ಪೂರ್ವಪಕ್ಷ ನೇರವಾದುದಲ್ಲ - 'ಯ ಏಷ ಆದಿತ್ಯೇ ಪುರುಷಃ ಸೋऽಹಮಸ್ಮಿ' ಎಂದು ಅಗ್ನಿ ಹೇಳಿರುವುದರಿಂದ ಸೂರ್ಯನಲ್ಲಿರುವವನು ಅಗ್ನಿ. 'ಆದಿತ್ಯಃ ಚಕ್ಷುರ್ಭೂತ್ವಾ ಅಕ್ಷಿಣೀ ಪ್ರಾವಿಶತ್' ಈ ಪ್ರಮಾಣದಂತೆ ಸೂರ್ಯಸ್ಥನಾದವನೇ ಕಣ್ಣಿನಲ್ಲೂ ಸನ್ನಿಹಿತನಾಗಿದ್ದಾನೆ. ಆದ್ದರಿಂದ

ಯ 'ಏಷೋऽಂತರಕ್ಷಿಣಿ ಪುರುಷೋ ದೃಶ್ಯತೇ ಏಷ ಆತ್ಮೇತಿ ಹೋವಾಚ'

ಎಂದು ಅಕ್ಷಿಸ್ಥನಾದವನೂ ಅಗ್ನಿ. ಅಕ್ಷಿಸ್ಥನಾದವನ ಜ್ಞಾನದಿಂದ ಪಾಪಕ್ಷಯವನ್ನು ಹೇಳಲಾಗಿದೆ. ಹೀಗಾಗಿ ಅಗ್ನಿಯ ಜ್ಞಾನದಿಂದಲೇ ಪಾಪಕ್ಷಯ-ಮೋಕ್ಷ ಸಿದ್ಧವಾಗುತ್ತದೆ, ಎಂದು ಪೂರ್ವಪಕ್ಷ. ಇಲ್ಲಿ ಸೂರ್ಯಸ್ಥನಾದವನ ಪ್ರಸ್ತಾವವನ್ನು ಮಾಡಬೇಕಿಲ್ಲ. ಅಕ್ಷಿಸ್ಥನಾದವನು ಅಗ್ನಿ. ಅವನ ಜ್ಞಾನದಿಂದಲೇ ಮೋಕ್ಷ ಎಂದೇ ನೇರವಾಗಿ ಪೂರ್ವಪಕ್ಷವನ್ನು ಮಾಡಬಹುದು. ಆದರೆ, ಹೀಗೆ ಪೂರ್ವಪಕ್ಷ ಮಾಡುವುದರಿಂದ ಆದಿತ್ಯಸ್ಥತ್ವ ಧರ್ಮವನ್ನು ವಿಷ್ಣುವಿನಲ್ಲಿ ಸಮನ್ವಯ ಮಾಡಿದಂತೆ ಆಗುವುದಿಲ್ಲ. ಅದಕ್ಕಾಗಿ, ಆದಿತ್ಯಸ್ಥ ಯಾರು? ಎಂಬುದನ್ನು ಸೇರಿಸಿ ಪೂರ್ವಪಕ್ಷವನ್ನು ಮಾಡಲಾಗಿದೆ.

3. ಭಾಷ್ಯದಲ್ಲಿ 'ಅಕ್ಷ್ಯಾದಿತ್ಯಯೋರೈಕ್ಯಾತ್' ಎಂದಿದೆ. ಅದಕ್ಕೆ ತತ್ತ್ವಪ್ರದೀಪಿಕಾದಲ್ಲಿ 'ಅಕ್ಷೀಂದ್ರಿಯ ಪ್ರೇರಕಾದಿತ್ಯಯೋರೈಕ್ಯಾತ್' ಎಂದು ಅಭಿಮಾನಿದೇವತಾ ಪರವಾಗಿ ಅರ್ಥವನ್ನು ಮಾಡಲಾಗಿದೆ. ತತ್ತ್ವಪ್ರಕಾಶಿಕಾದಲ್ಲಿ 'ಅಕ್ಷ್ಯಾದಿತ್ಯಯೋರೇಕವಿಧತ್ವಾತ್' ಎಂದು ಜಡಪರವಾಗಿ ಅರ್ಥ ಮಾಡಲಾಗಿದೆ.

4. ಉಪಕೋಸಲನ ಅಗ್ನಿಸೇವೆಗೆ ತೃಪ್ತರಾದ ಗಾರ್ಹಪತ್ಯ, ಆಹವನೀಯ, ದಕ್ಷಿಣಾಗ್ನಿಗಳು ಪ್ರಸನ್ನರಾಗಿ ಉಪದೇಶವನ್ನು ನೀಡುವ ಸಂದರ್ಭದಲ್ಲಿ ಪ್ರಕೃತ ಅಧಿಕರಣದ ವಿಷಯವಾಕ್ಯವಿದೆ. ಅಲ್ಲಿ ಮತ್ತೆ ಮತ್ತೆ 'ಅಗ್ನಿ' ಶಬ್ದವನ್ನು ಪ್ರಯೋಗಿಸಲಾಗಿದೆ. ಅಗ್ನಿಯು ಆದಿತ್ಯನಲ್ಲಿ ತಾನಿದ್ದೇನೆ ಎಂದಿಷ್ಟೇ ಹೇಳದೆ 'ಸೋऽಹಮಸ್ಮಿ, ಸ ಏವಾಹಮಸ್ಮಿ' ಎಂದು ಎರಡು ಸಲ, ನಿರ್ಧಾರಾತ್ಮಕವಾಗಿ ಹೇಳಿದ್ದಾನೆ. ಅಗ್ನಿಯನ್ನು ಆದಿತ್ಯಸ್ಥನನ್ನಾಗಿ ಉಪಾಸನೆ ಮಾಡಿದರೆ,

'ಅಪಹತೇ ಪಾಪಕೃತ್ಯಾಂ, ಲೋಕೀ ಭವತಿ, ಸರ್ವಮಾಯುರೇತಿ'

ಎಂದು ಅರ್ಥವಾದವಿದೆ. ಅಲ್ಲದೆ, ಅಗ್ನಿಗಳು ಕೊನೆಯಲ್ಲಿ 'ಅಸ್ಮದ್ವಿದ್ಯಾ ಆತ್ಮವಿದ್ಯಾ ಚ - ನಿನಗೆ ನಮ್ಮ ವಿದ್ಯೆ ಮತ್ತು ಆತ್ಮವಿದ್ಯೆಯನ್ನು ಹೇಳಿದ್ದೇವೆ' ಎಂದಿದ್ದಾರೆ. ಇದರಿಂದ ಇಲ್ಲಿ ಆದಿತ್ಯಸ್ಥವಿದ್ಯೆ ಅಗ್ನಿವಿದ್ಯೆ ಎಂದೇ ತಿಳಿಯುತ್ತದೆ. ಹೀಗೆ ಇಲ್ಲಿ ಪ್ರಬಲವಾದ ಕಾರಣಗಳಿಂದ ಪೂರ್ವಪಕ್ಷ ದೃಢವಾಗಿದೆ.

5. ಸಿದ್ಧಾಂತದ ಸಮರ್ಥನೆಗೆ 'ಅಮೃತತ್ವ, ಅಭಯತ್ವ' ಈ ಎರಡು ನಿರವಕಾಶವಾದ ಲಿಂಗಗಳು, ಬ್ರಹ್ಮಶಬ್ದ ಇವು ಸಹಕಾರಿಯಾಗಿವೆ. 'ತ್ರಿಪಾದಸ್ಯಾಮೃತಂ ದಿವಿ' ಎಂಬ ಶ್ರುತಿಯಂತೆ ಅಮೃತತ್ವ ವಿಷ್ಣುವಿನ ಧರ್ಮ. 'ಅಭಯಂ ತಿತೀರ್ಷತಾಂ ಪಾರಂ' ಎಂಬ ಕಾಠಕಶ್ರುತಿ ನಿರ್ಭಯತ್ವವೂ ವಿಷ್ಣುವಿನ ಧರ್ಮ ಎಂದಿದೆ. ಆದರೆ, ಅಗ್ನಿಗೆ –

'ಪರಿ ಹ್ಯೇನಂ ಮ್ರಿಯಂತೇ ವಿದ್ಯುತ್ ವೃಷ್ಟಿಃ, ಚಂದ್ರಮಾಃ, ಆದಿತ್ಯೋಽಗ್ನಿಃ'

ಎಂದು, ಮರಣವಿದೆ ಎನ್ನಲಾಗಿದೆ. 'ಭೀಷಾಸ್ಮಾತ್ ಅಗ್ನಿಶ್ಚೇಂದ್ರಶ್ಚ' ಎಂದು ಅವನಿಗೆ ಭಯವೂ ಇದೆ.

6. 'ಸೋಽಹಂ ಅಸ್ಮಿ' ಎಂದರೆ ನನ್ನ ಅಂತರ್ಯಾಮಿ ಆದಿತ್ಯನಲ್ಲಿದ್ದಾನೆ ಎಂದು ಅರ್ಥ. 'ಅಸ್ಮದ್ವಿದ್ಯಾ' ಎಂದರೂ ನಮ್ಮ ಅಂತರ್ಯಾಮಿಯಾದ ಪರಮಾತ್ಮನ ವಿದ್ಯೆ ಎಂದೇ ಅರ್ಥ. ಹೀಗೆ ಪೂರ್ವಪಕ್ಷ ಯುಕ್ತಿಗಳು ಸಾವಕಾಶ. ಸಿದ್ಧಾಂತ ಯುಕ್ತಿ-ಶ್ರುತಿಗಳು ನಿರವಕಾಶ. ಆದ್ದರಿಂದ ಕಣ್ಣು ಮತ್ತು ಆದಿತ್ಯನಲ್ಲಿ ಸನ್ನಿಹಿತನಾಗಿ ಹೇಳಲ್ಪಟ್ಟವನು ವಿಷ್ಣು. ॥ 13 ॥

## ಓಂ ॥ ಸ್ಥಾನಾದಿ ವ್ಯಪದೇಶಾಚ್ಚ ॥ ಓಂ

**'ತದ್ಯದಸ್ಮಿನ್ ಸರ್ಪಿರ್ವಾ ಉದಕಂ ವಾ ಸಿಂಚತಿ ವರ್ತ್ಮನೀ ಏವ ಗಚ್ಛತಿ'(ಛಾ. 4,15) ಇತ್ಯಾದಿ ಸ್ಥಾನಶಕ್ತಿಃ, 'ವಾಮನಿಃ ಭಾಮನಿಃ' ಇತ್ಯಾದಿ ಆತ್ಮಶಕ್ತಿಶ್ಚ ಉಚ್ಯತೇ । ತಸ್ಯ ಹ್ಯೇತಲ್ಲಿಂಗಮ್ ।**

**'ಸ ಈಶಃ, ಸೋಽಸಪತ್ನಃ, ಸ ಹರಿಃ, ಸ ಪರಃ, ಸ ಪರೋವರೀಯಾನ್ ಯದಿದಂ ಚಕ್ಷುಷಿ ಸರ್ಪಿರ್ವಾ ಉದಕಂ ವಾ ಸಿಂಚತಿ ವರ್ತ್ಮನೀ ಏವ ಗಚ್ಛತಿ । ಸ ವಾಮನಃ ಸ ಭಾಮನಃ ಸ ಆನಂದಃ ಸೋಽಚ್ಯುತಃ ।'**

**ಇತಿ ಚತುರ್ವೇದಶಿಖಾಯಾಮ್ ॥**

**ಯತ್ ಸ್ಥಾನತ್ವಾದಿದಂ ಚಕ್ಷುಃ ಅಸಂಗಂ ಸರ್ವವಸ್ತುಭಿಃ ।**
**ಸ ವಾಮನಃ ಪರೋಽಸ್ಮಾಕಂ ಗತಿರಿತ್ಯೇವ ಚಿಂತಯೇತ್ ॥ ಇತಿ ವಾಮನೇ ॥ 14 ॥**

'ಪರಮಾತ್ಮನು ಸನ್ನಿಹಿತನಾಗಿರುವುದರಿಂದಲೇ ಈ ಕಣ್ಣಿನಲ್ಲಿ ತುಪ್ಪವನ್ನೋ, ನೀರನ್ನೋ ಸುರಿದರೆ ಅದೇ ದಾರಿಯಲ್ಲಿ ಹಿಂದೆ ಬರುತ್ತದೆ. ಕಣ್ಣಿಗೆ ಅಂಟಿಕೊಳ್ಳುವುದಿಲ್ಲ' ಎಂದು ಸ್ಥಾನಶಕ್ತಿಯನ್ನು, ಸ್ತ್ರೀ ಪುರುಷ ನಿಯಮನಾದಿರೂಪವಾದ ಆತ್ಮಶಕ್ತಿಯನ್ನು ಅಕ್ಷಿಸ್ಥನಿಗೆ ಹೇಳಿರುವುದರಿಂದ ಅಕ್ಷಿಸ್ಥನಾಗಿ ಪ್ರಸ್ತುತನಾದವನು ವಿಷ್ಣು. ಇವೆರಡೂ ವಿಷ್ಣುವಿನ

ಧರ್ಮಗಳೆಂದು ಚತುರ್ವೇದಶಿಖೆಯಲ್ಲಿ ಹೇಳಲಾಗಿದೆ. 'ಅವನೇ ಶಾಸಕ, ಅವನಿಗೆ ಶತ್ರುಗಳೇ ಇಲ್ಲ, ಅವನು ಹರಿ, ಅವನು ಉತ್ತಮ, ಉತ್ತಮರಾದ ಬ್ರಹ್ಮಾದಿಗಳಿಗಿಂತಲೂ ಉತ್ತಮ, ಅವನ ಸನ್ನಿಧಾನದಿಂದಲೇ ಈ ನಮ್ಮ ಕಣ್ಣಿನಲ್ಲಿ ತುಪ್ಪ, ನೀರು ಮೊದಲಾದ ದ್ರವ ಪದಾರ್ಥಗಳನ್ನು ಹಾಕಿದರೆ ಸ್ವಲ್ಪವೂ ಅಂಟಿಕೊಳ್ಳದೆ ಹಾಕಿದ ದಾರಿಯಲ್ಲೇ ಹಿಂದಕ್ಕೆ ಬರುತ್ತವೆ. ಅವನೇ ವಾಮನ, ಭಾಮನ, ಅವನು ಆನಂದರೂಪ. ಅವನೇ ಅಚ್ಯುತ.' ವಾಮನಪುರಾಣದಲ್ಲೂ ಹೀಗಿದೆ- 'ಯಾರ ಸನ್ನಿಧಿಯಿಂದಾಗಿ ಈ ನಮ್ಮ ಕಣ್ಣು ಸರ್ವವಸ್ತುಗಳಿಂದಲೂ ಅಸಂಗವಾಗಿದೆಯೋ, ಅಂತಹ ಸರ್ವೋತ್ತಮನಾದ ವಾಮನನೇ ನಮಗೆ ಗತಿ ಎಂದು ತಿಳಿಯಬೇಕು.'

**ವಿವರಣೆ :** 1. ಸೂತ್ರದಲ್ಲಿರುವ ಸ್ಥಾನಶಬ್ದಕ್ಕೆ ಸ್ಥಾನಶಕ್ತಿ ಎಂದು ಅರ್ಥ. ಆದಿಪದದಿಂದ ಕಣ್ಣಿನಲ್ಲಿರುವ ದೇವತೆಯ (ಪರಮಾತ್ಮನ) ಶಕ್ತಿಯನ್ನು ಸೂಚಿಸಲಾಗಿದೆ. ಕಣ್ಣಿಗಿರುವ ವಿಚಿತ್ರವಾದ ಶಕ್ತಿ, ಅಲ್ಲಿ ಸನ್ನಿಹಿತನಾದವನ ಅಸಾಧಾರಣ ಗುಣಗಳು ಇವುಗಳಿಂದಲೂ ಅಕ್ಷಿಸ್ಥನಾದವನು ವಿಷ್ಣುವೆಂದು ನಿಶ್ಚೈಸಬಹುದು ಎಂದರ್ಥ.

2. ಕಣ್ಣಿನಲ್ಲಿರುವ ವಿಷ್ಣುವಿಗೆ 'ವಾಮನಿ' 'ಭಾಮನಿ' ಎಂದು ಹೆಸರು. ಅದರ ಅರ್ಥವನ್ನು ಛಾಂದೋಗ್ಯೋಪನಿಷತ್ತೇ ಬಿಡಿಸಿದೆ - 'ಏತಂ ಸಂಯದ್ವಾಮ ಇತ್ಯಾಚಕ್ಷತೇ, ಏತಂ ಹಿ ಸರ್ವಾಣಿ ವಾಮಾನಿ ಅಭಿ ಸಂಯಂತಿ । ಏಷ ಉ ಏವ ವಾಮನಿಃ । ಏಷ ಹಿ ಸರ್ವಾಣಿ ವಾಮಾನಿ ನಯತಿ । ಏಷ ಉ ಏವ ಭಾಮನಿಃ । ಏಷ ಹಿ ಸರ್ವೇಷು ಲೋಕೇಷು ಭಾತಿ ॥ ''

ವಾಮ ಎಂದರೆ ಸೌಂದರ್ಯ. ಸ್ತ್ರೀಯರು ಸೌಂದರ್ಯ ಪ್ರಧಾನರು. ಹೀಗಾಗಿ ಅವರು 'ವಾಮ'ರು. ಅವರನ್ನು 'ನಯತಿ' ನಿಯಮಿಸುತ್ತಾನೆ, ಆದ್ದರಿಂದ ಪರಮಾತ್ಮ 'ವಾಮನಿ'. ಅದರಂತೆ ಭಾಮ ಎಂದರೆ ತೇಜಸ್ಸು-ಪರಾಕ್ರಮ. ಪುರುಷ ಸಮಾಜ ತೇಜಃ ಪ್ರಧಾನವಾದುದರಿಂದ ಭಾಮ ಎನಿಸಿದೆ. ಅವರಿಗೆ ನಿಯಾಮಕನಾದುದರಿಂದ ವಿಷ್ಣು 'ಭಾಮನಿ'. ॥ 14 ॥

## ಓಂ ॥ ಸುಖವಿಶಿಷ್ಟಾಭಿಧಾನಾದೇವ ಚ ॥ ಓಂ

**'ಪ್ರಾಣೋ ಬ್ರಹ್ಮ ಕಂ ಬ್ರಹ್ಮ ಖಂ ಬ್ರಹ್ಮ' (ಛಾಂ. 4.10) ಇತಿ । 'ವಿಜ್ಞಾನಮಾನಂದಂ ಬ್ರಹ್ಮ' (ಬೃ5.9.28) 'ಆನಂದೋ ಬ್ರಹೇತಿ ವ್ಯಜಾನಾತ್' (ತೈ. 3.6) ಇತ್ಯಾದೇಃ ತಸ್ಯೈವ ಹಿ ತಲ್ಲಕ್ಷಣಮ್।**

**ಲಕ್ಷಣಂ ಪರಮಾನಂದೋ ವಿಷ್ಣೋರೇವ ನ ಸಂಶಯಃ ।**
**ಅವ್ಯಕ್ತಾದಿ ತೃಣಾಂತಾಸ್ತು ವಿಪ್ರುಡಾನಂದಭಾಗಿನಃ ।**

**ಇತಿ ಬ್ರಹ್ಮವೈವರ್ತೇ ।**

**ನ ಚ ಮುಖ್ಯೇ ಸತಿ ಅಮುಖ್ಯಂ ಯುಜ್ಯತೇ ॥ 15 ॥**

ಈ ಪ್ರಕರಣದ ಆರಂಭದಲ್ಲಿ 'ಕಂ ಬ್ರಹ್ಮ' ಎಂದು ಪೂರ್ಣಸುಖ ರೂಪನಾದ ಬ್ರಹ್ಮನನ್ನು ಹೇಳಿರುವುದರಿಂದಲೂ ಈ ಪ್ರಕರಣದಲ್ಲಿ ಅಕ್ಷಿಸ್ಥನಾಗಿ ಹೇಳಲ್ಪಟ್ಟವನು ವಿಷ್ಣು. 'ವಿಜ್ಞಾನಂ ಆನಂದಂ ಬ್ರಹ್ಮ' 'ಆನಂದೋ ಬ್ರಹ್ಮೇತಿ ವ್ಯಜಾನಾತ್' ಇತ್ಯಾದಿ ಶ್ರುತಿಗಳಿಂದ ಪೂಣಾನಂದವು ಅವನದೇ ಅಸಾಧಾರಣ ಧರ್ಮ. ಬ್ರಹ್ಮವೈವರ್ತ ಪುರಾಣದಲ್ಲೂ ಹೀಗಿದೆ- ಪೂರ್ಣಾನಂದ ಎಂಬ ಲಕ್ಷಣ ವಿಷ್ಣುವಿಗೆ ಮಾತ್ರ ಎನ್ನುವುದರಲ್ಲಿ ಸಂದೇಹವೇ ಬೇಡ. ಲಕ್ಷ್ಮೀದೇವಿಯಿಂದ ಹಿಡಿದು ತೃಣಪರ್ಯಂತ ಜೀವಿಗಳ ಆನಂದ ಅವನ ಆನಂದದ ಮುಂದೆ ಒಂದು ಬಿಂದು ಮಾತ್ರ.'

ಆನಂದ ಪದಕ್ಕೆ ಪೂರ್ಣಾನಂದನಾದ ವಿಷ್ಣು ಎಂಬ ಮುಖ್ಯಾರ್ಥವನ್ನು ಹೇಳಲು ಬರುವಾಗ ಅದರಿಂದ ಅಲ್ಪಾನಂದನಾದ ಅಗ್ನಿಯನ್ನು ವ್ಯಾಚ್ಯನೆಂದು ಹೇಳುವುದು ಯುಕ್ತವಲ್ಲ.

**ವಿವರಣೆ :** 1. ಉಪನಿಷತ್ತಿನ ಈ ಪ್ರಕರಣ 'ಪ್ರಾಣೋ ಬ್ರಹ್ಮ' ಇತ್ಯಾದಿ ವಾಕ್ಯಗಳಿಂದ ಆರಂಭಗೊಂಡಿದೆ. ಪ್ರಾಣಃ=ಮುಖ್ಯಪ್ರಾಣನು ಇತರ ಜೀವಿಗಳಿಗಿಂತ ಬ್ರಹ್ಮ=ಪೂರ್ಣ, ಕಂ=ಸುಖವು ಬ್ರಹ್ಮ=ಪೂರ್ಣ, ಖಂ=ಜ್ಞಾನವು ಬ್ರಹ್ಮ=ಪೂರ್ಣ. ಹೀಗೆ ಪ್ರಾಣನಿಗಿಂತಲೂ ನಿರವಧಿಕ ಸುಖ-ಜ್ಞಾನಗಳಿಂದ ಪೂರ್ಣವಾದ ತತ್ತ್ವದ ಪ್ರಸ್ತಾವ ಆ ವಾಕ್ಯದಲ್ಲಿದೆ. ನಿರವಧಿಕ ಸುಖ-ಜ್ಞಾನ ಪೂರ್ಣತ್ವ ಬ್ರಹ್ಮನ ಲಕ್ಷಣ. ಅಗ್ನಿಯು, ತನಗಿಂತ ಅಧಮ ದೇವತೆಗಳಿಂದ ಪೂರ್ಣನಾದರೂ ನಿರತಿಶಯ ಪೂರ್ಣತ್ವ ಅವನಿಗಿಲ್ಲ. ಬ್ರಹ್ಮಪದಕ್ಕೆ ಮುಖ್ಯಾರ್ಥವೇ ನಿರವಧಿಕಪೂರ್ಣತೆ. ಅದನ್ನು ಸಂಕೋಚಗೊಳಿಸಿ ಅಲ್ಪಪೂರ್ಣನಾದ ಅಗ್ನಿಯನ್ನು 'ಕಂ ಬ್ರಹ್ಮ' ಎಂಬ ಪದಗಳಿಂದ ವಾಚ್ಯನೆಂದು ಹೇಳುವುದು ಸಮಂಜಸವಲ್ಲ. ಆದ್ದರಿಂದ ಉಪಕ್ರಮದಲ್ಲಿ ಬ್ರಹ್ಮನ ಪ್ರಸ್ತಾಪವಿರುವುದರಿಂದ ಈ ಪ್ರಕರಣ ವಿಷ್ಣುವಿಗೆ ಸಂಬಂಧಿಸಿದೆ. ಅಂತಹ ಪ್ರಕರಣದಲ್ಲಿ ಉಲ್ಲೇಖಗೊಂಡ ಅಕ್ಷಿಸ್ಥತ್ವ ವಿಷ್ಣುವಿಗೇ ಉಚಿತ.

ವಸ್ತುತಃ, ಈ ಪ್ರಕರಣದ ಆರಂಭದಲ್ಲಿ ಪ್ರಾಣನ ಪ್ರಸ್ತಾಪವೂ ಇದೆ. ಆದರೆ ಪ್ರಾಣಪ್ರಕರಣ ಎನ್ನಲು ವಿಷ್ಣುವಿನ ಅಸಾಧಾರಣ ಗುಣಗಳ ಉಲ್ಲೇಖ ಬಾಧಕವಾಗುತ್ತದೆ. ಆದ್ದರಿಂದ ಇದು ವಿಷ್ಣುಪ್ರಕರಣವೆಂದೇ ನಿರ್ಧಾರ ಮಾಡಬೇಕಾಗುತ್ತದೆ.

2. ಕಂ=ಪೂರ್ಣಸುಖರೂಪನಾದವನು ಬ್ರಹ್ಮ=ಬ್ರಹ್ಮನು, ಖಂ=ಪೂರ್ಣಜ್ಞಾನ ರೂಪನಾದವನು ಬ್ರಹ್ಮ=ಬ್ರಹ್ಮನು ಎಂದು ಛಾಂದೋಗ್ಯಭಾಷ್ಯದಲ್ಲಿ 'ಕಂ ಬ್ರಹ್ಮ, ಖಂ ಬ್ರಹ್ಮ' ಎನ್ನುವುದಕ್ಕೆ ಇನ್ನೊಂದು ವಿಧದ ವಿವರಣೆಯೂ ಇದೆ.

3. ಸೂತ್ರದಲ್ಲಿ 'ಸುಖವಿಶಿಷ್ಟ' ಎಂಬ ಶಬ್ದಕ್ಕೆ ವಿಶಿಷ್ಟಸುಖ ಎಂದು ಅರ್ಥ. ವಿಶಿಷ್ಟ ಸುಖವೆಂದರೆ ಪೂರ್ಣಸುಖ. 'ವಿಶಿಷ್ಟಂ ಸುಖಂ-ಸುಖವಿಶಿಷ್ಟಂ, 'ಅಗ್ನಿಃ ಆಹಿತಃ ಯೇನ ಸಃ ಆಹಿತಾಗ್ನಿಃ' ಎಂದಿರುವಂತೆ ಪರನಿಪಾತ ಬಂದಿದೆ. ಈ ಸುಖವು ಸರ್ವಸುಖಕ್ಕಿಂತಲೂ

ಉಚ್ಚಮಟ್ಟದ್ದು ಎಂದು ತಿಳಿಸಲು ಸೂತ್ರಕಾರರು ಪೂರ್ವಪದವನ್ನು ಉತ್ತರಪದವನ್ನಾಗಿ ಮಾಡಿದ್ದಾರೆ - ಎಂದು ಶ್ರೀವಾದಿರಾಜರ ವಿವರಣೆ. ॥ 5 ॥

## ಓಂ ॥ ಶ್ರುತೋಪನಿಷತ್ಕ–ಗತ್ಯಭಿಧಾನಾಚ್ಚ ॥ ಓಂ

**'ಸ ಏನಾನ್ ಬ್ರಹ್ಮ ಗಮಯತಿ' (ಛಾಂ. 4.15) ಇತಿ । ನ ಹಿ ಅನ್ಯವಿದ್ಯಯಾ ಅನ್ಯಗತಿರ್ಯುಕ್ತಾ ॥ 6 ॥**

ಈ ಅಗ್ನಿವಿದ್ಯೆಯನ್ನು ತಿಳಿದು ಉಪಾಸನೆ ಮಾಡುವವರು ಪರಬ್ರಹ್ಮನ ಬಳಿ ಸೇರುತ್ತಾರೆ ಎಂದು ಫಲವನ್ನು ಹೇಳಿದ್ದಾರೆ. ಅಗ್ನಿವಿದ್ಯೆ ಪರಬ್ರಹ್ಮನ ವಿದ್ಯೆಯಲ್ಲದಿದ್ದರೆ ಅನ್ಯವಿದ್ಯೆಯಿಂದ ಬ್ರಹ್ಮಪ್ರಾಪ್ತಿಯನ್ನು ಹೇಳುವುದು ಅನುಚಿತವಾಗುತ್ತದೆ. ಆದ್ದರಿಂದ ಅಗ್ನಿವಿದ್ಯೆಗೂ ಪರಮಾತ್ಮನೇ ವಿಷಯ.

**ವಿವರಣೆ :** 1. ಆದಿತ್ಯ, ಕಣ್ಣು ಮುಂತಾದ ಸ್ಥಾನಗಳಲ್ಲಿ 'ಸೋಽಹಮಸ್ಮಿ' ಎಂದು ಉಪದೇಶಿಸಿದ ಅಗ್ನಿದೇವ ಕೊನೆಯಲ್ಲಿ ಈ ವಿದ್ಯೆಯನ್ನು ಉಪಾಸನೆ ಮಾಡಿದಾಗ ಬರುವ ಫಲವನ್ನು ಹೀಗೆ ಹೇಳಿದ್ದಾನೆ -

'ಅಥ ಯದು ಚೈವಾಸ್ಮಿನ್ ಶವ್ಯಂ ಕರ್ಮ ಕುರ್ವಂತಿ ಯದು ಚ ನ, ಅರ್ಚಿಷಮೇವ ಅಭಿಸಂಭವಂತಿ । ಅರ್ಚಿಷೋ ಅಹಃ.... ಚಂದ್ರಮಸೋ ವಿದ್ಯುತಂ । ತತ್ ಪುರುಷೋ ಮಾನವಃ । ಸ ಏನಾನ್ ಬ್ರಹ್ಮ ಗಮಯತಿ ।'

ಇಲ್ಲಿ ಮಾನವ ಪುರುಷನೆಂದರೆ ವಾಯುದೇವ. ಅವನು ವಿದ್ಯೋಪಾಸಕನನ್ನು ಬ್ರಹ್ಮನ ಬಳಿ ಕರೆದೊಯ್ಯುತ್ತಾನೆ ಎಂದಿದೆ. ಹಿಂದೆ ಹೇಳಿದ ಅಕ್ಷಿಸ್ಥನಾದವನು ಅಗ್ನಿದೇವನಾದರೆ ಆಗ ಅಗ್ನಿಯ ಉಪಾಸನೆಯಿಂದ ಬ್ರಹ್ಮನ ಪ್ರಾಪ್ತಿಯನ್ನು ಹೇಳಿದಂತಾಗುತ್ತದೆ. ಇದು ಅಸಂಗತ. ಆದ್ದರಿಂದ ಅಕ್ಷಿಸ್ಥನಾದವನು ವಿಷ್ಣುವೆ.

2. ಹಿಂದೆ ಹೇಳಿದ ಸಿದ್ಧಾಂತದ ಬಗ್ಗೆ ಬರಬಹುದಾದ ಆಕ್ಷೇಪದ ಸಮಾಧಾನಕ್ಕಾಗಿ ಈ ಸೂತ್ರವಿದೆ. ಅಕ್ಷಿಸ್ಥನಾದವನು ಪರಬ್ರಹ್ಮನಾದರೆ 'ಉಪಕೊಸಲ, ಏಷಾ ಸೋಮ್ಯ ತೇ ಅಸ್ಮದ್ವಿದ್ಯಾ ಆತ್ಮವಿದ್ಯಾ ಚ' ಎಂಬ ಅಗ್ನಿಯ ಮಾತು ಅಸಂಗತವಾಗುತ್ತದೆ. ಅಕ್ಷಿಸ್ಥ ಪರಮಾತ್ಮನಾದರೆ ಕೇವಲ ಪರಮಾತ್ಮನ ವಿದ್ಯೆಯನ್ನಷ್ಟೇ ಹೇಳಿದಂತಾಗಿ 'ಅಸ್ಮದ್ವಿದ್ಯಾ-ನಮ್ಮ-ಅಗ್ನಿಗಳ-ವಿದ್ಯೆ' ಎನ್ನುವುದು ಸರಿಯಲ್ಲ. ಅಕ್ಷಿಸ್ಥವಿದ್ಯೆ ಅಗ್ನಿವಿದ್ಯೆ, 'ಪ್ರಾಣೋ ಬ್ರಹ್ಮ ಕಂ ಬ್ರಹ್ಮ' ಇತ್ಯಾದಿ ಆತ್ಮವಿದ್ಯೆ ಎಂದು ಪರಿಗಣಿಸಿದರೆ ಮಾತ್ರ ಅದು ಸಮಂಜಸವಾಗುತ್ತದೆ. ಆದ್ದರಿಂದ ಅಕ್ಷಿಸ್ಥ ಬ್ರಹ್ಮನಲ್ಲ ಎಂದು ಆಕ್ಷೇಪ.

ಅಗ್ನಿವಿದ್ಯೆಯು, ಆತ್ಮವಿದ್ಯೆ ಅಲ್ಲವಾದರೆ 'ಸರ್ವೇಷು ಲೋಕೇಷು ಭಾತಿ ಯ ಏವಂ ವೇದ' ಎಂದು ವಿದ್ಯೆಯ ಫಲವನ್ನು ಹೇಳುತ್ತಾ ಬ್ರಹ್ಮಪ್ರಾಪ್ತಿಯನ್ನು ಹೇಳುವುದು ಅಸಂಗತ.

ದೇವಾನ್ ದೇವಯಜೋ ಯಾಂತಿ ಮದ್ಭಕ್ತಾ ಯಾಂತಿ ಮಾಮಪಿ ॥

ಎಂದು ದೇವತೋಪಾಸಕರಿಗೆ ದೇವತಾಪ್ರಾಪ್ತಿಯೇ ಬೇಕು. ಬ್ರಹ್ಮಪ್ರಾಪ್ತಿಯಲ್ಲ. ಆದ್ದರಿಂದ ಅಕ್ಷಿಸ್ಥನೂ ಪರಬ್ರಹ್ಮನೇ ಎಂದು ಸಿದ್ಧಾಂತ.

ಆತ್ಮವಿದ್ಯೆ ಎಂದರೆ ವ್ಯಾಪ್ತನಾದ ಆತ್ಮನ ಜ್ಞಾನ. 'ಅಸ್ಮದ್ವಿದ್ಯೆ' ಎಂದರೆ ಅಗ್ನ್ಯಾದಿ ಅಂತರ್ಯಾಮಿಯ ಜ್ಞಾನ. ಎರಡೂ ಬ್ರಹ್ಮಜ್ಞಾನವಾದರೂ ರೂಪಭೇದದಿಂದ ವಿದ್ಯಾಭೇದ-

ಅಸ್ಮತ್ ಶಬ್ದೋದಿತೋಽಂತಸ್ಥಃ, ಆತ್ಮಾ ವ್ಯಾಪ್ತೋ ಜನಾರ್ದನಃ ।
ಅಗ್ನಯೇ ದ್ವಿವಿಧಂ ವಿಷ್ಣುಂ ಅವೋಚನ್ನುಪಕೋಸಲಃ ॥

3. ಸೂತ್ರದಲ್ಲಿ- ಶ್ರುತ ಎಂದರೆ ಶ್ರವಣ ಮಾಡಿದ ಎಂದರ್ಥ. ಅಷ್ಟರಿಂದಲೇ ಬ್ರಹ್ಮ ಪ್ರಾಪ್ತಿಯಾಗದು. ಅದರೊಂದಿಗೆ ಮನನ-ಧ್ಯಾನಗಳನ್ನು ಸೇರಿಸಿಕೊಳ್ಳಬೇಕು. ಶ್ರುತೋಪನಿಷದಾಂ-ವಿದ್ಯೆಯ ಶ್ರವಣ ಮನನ-ಧ್ಯಾನಗಳನ್ನು ಮಾಡಿದವರಿಗೆ ಕೇನ=ವಾಯುದೇವನಿಂದ ಕಸ್ಯ=ಪರಮಾತ್ಮನ ಬಳಿಗೆ ಗತಿ=ಪ್ರಾಪ್ತಿಯನ್ನು ಅಭಿಧಾನಾತ್=ಹೇಳಿರುವುದರಿಂದ, ಅಕ್ಷಿಸ್ಥನಾದವನು ಬ್ರಹ್ಮ, ಎಂದು ಸೂತ್ರದ ಅರ್ಥ.

ತತ್ತ್ವಪ್ರದೀಪಿಕಾದಲ್ಲಿ ಹೀಗಿದೆ- 'ಶ್ರುತೋಪನಿಷತ್ಕಾನಾಂ=ಶ್ರುತ- ಉಪನಿಷತ್ ಗತ ಉಪಾಸನಾನಾಂ ಬ್ರಹ್ಮಗತ್ಯಭಿಧಾನಾಚ್ಚ ಅಂತರೋ ವಿಷ್ಣುರೇವ । ಅಸ್ಯಾಂ ಉಪನಿಷಣ್ಣಂ ಬ್ರಹ್ಮೇತಿ ಉಪನಿಷತ್ = ಉಪಾಸನಾ, ಅನಯಾ ಬ್ರಹ್ಮ ಉಪನಿಷೀದತಿ ಇತಿ ವಾ ।' ಉಪನಿಷತ್ ಎಂದರೆ ಉಪಾಸನೆ. ಶ್ರುತ=ಶ್ರವಣ ಮಾಡಿದ ವಸ್ತುವಿನ ಉಪನಿಷತ್ಕಾನಾಂ= ಧ್ಯಾನರೂಪವಾದ ಉಪಾಸನೆ ಮಾಡಿದವರಿಗೆ ಗತ್ಯಭಿಧಾನಾತ್=ಬ್ರಹ್ಮಪ್ರಾಪ್ತಿಯನ್ನು ಹೇಳಿರುವುದರಿಂದ ಅಕ್ಷಿಸ್ಥನಾದವನು ಬ್ರಹ್ಮ. ॥ 16 ॥

**ಓಂ ॥ ಅನವಸ್ಥಿತೇಃ ಅಸಂಭವಾಚ್ಚ ನೇತರಃ ॥ ಓಂ**

**ಜೀವಸ್ಯ ಜೀವಾಂತರನಿಯಾಮಕತ್ವೇ ಅನವಸ್ಥಿತಿಃ, ಸಾಮ್ಯಾತ್ ಅಸಂಭವಾಚ್ಚ ನ ಜೀವಃ ನಿಯಮ ಪ್ರಮಾಣಾಭಾವಾತ್ । ಅನೀಶ್ವರಾಪೇಕ್ಷತ್ವಾಚ್ಚ ॥ 17 ॥**

**ಇತಿ ಅಂತರಾಧಿಕರಣಮ್ ॥**

ಅಗ್ನಿಯೂ ಒಬ್ಬ ಜೀವಾತ್ಮನಾದುದರಿಂದ, ಒಬ್ಬ ಜೀವ ಮತ್ತೊಬ್ಬ ಜೀವನಿಗೆ ನಿಯಾಮಕನಾದರೆ ಅನವಸ್ಥಾ ದೋಷ. ಮಾತ್ರವಲ್ಲ, ಅವನೂ ಇತರ ಜೀವರಂತೆ ನಿಯಮ್ಯನಾದುದರಿಂದ ಅವನಿಗೆ ನಿಯಾಮಕತ್ವ ಅಸಂಭಾವಿತವೂ ಆಗಿದೆ. 'ಜೀವನಾದರೂ ಅಗ್ನಿಯು ನಿಯಮ್ಯನಲ್ಲ ಸ್ವತಂತ್ರ' ಎಂಬ ನಿಯಮಕ್ಕೆ ಆಧಾರವೇನೂ ಇಲ್ಲ. ಪೂರ್ವಪಕ್ಷಿಯು ಈಶ್ವರನ ಅಪೇಕ್ಷೆಯನ್ನು ಒಪ್ಪುವುದಿಲ್ಲವಾದುದರಿಂದ ಅಗ್ನಿಯು ಜೀವನ ಅಕ್ಷಿನಿಯಾಮಕ ಎಂದು ಹೇಳಲು ಬರುವುದಿಲ್ಲ.

**ವಿವರಣೆ :** ಇದುವರೆಗೆ 'ಅಕ್ಷಿಸ್ಥ ಪರಮಾತ್ಮ' ಎನ್ನಲು ಸಾಧಕವನ್ನು ಹೇಳಿ ಈ ಸೂತ್ರದಲ್ಲಿ 'ಅಗ್ನಿಯು ಅಕ್ಷಿಸ್ಥ' ಎನ್ನಲು ಬಾಧಕವನ್ನು ಹೇಳಲಾಗಿದೆ.

ಅಕ್ಷಿಸ್ಥ ಎಂದರೆ ಅಕ್ಷಿಯಲ್ಲಿದ್ದು ಜೀವನಿಗೆ ಪ್ರೇರಕ ಎಂದರ್ಥ. ಅಗ್ನಿಯು ಸ್ವತಂತ್ರನಲ್ಲ, ಅವನೂ ಪರತಂತ್ರನಾದ ಒಬ್ಬ ಜೀವ. ಅಂದಮೇಲೆ ಅವನಿಗೆ ಮತ್ತೊಬ್ಬ ನಿಯಾಮಕನಿರಬೇಕು. ಹೀಗೆ ಸ್ವತಂತ್ರನಾದ ಪರಮಾತ್ಮನನ್ನು ಒಪ್ಪುವವರೆಗೆ ನಿಯಾಮಕ ಪರಂಪರೆ ನಿಲ್ಲುವುದಿಲ್ಲ. ಅದಕ್ಕಾಗಿ ಸ್ವತಂತ್ರನಾದ ಪರಮಾತ್ಮನನ್ನು ಒಪ್ಪುವುದಾದರೆ ಅವನನ್ನೇ ಅಕ್ಷಿಸ್ಥ ಎನ್ನಬಹುದಲ್ಲ?

'ಜೀವ ಅಸ್ವತಂತ್ರ, ಅವನ ಕಣ್ಣಿಗೆ ನಿಯಾಮಕನಾದ ಅಗ್ನಿ ಸ್ವತಂತ್ರ' ಎನ್ನುವುದೂ ಸರಿಯಲ್ಲ. ಅಗ್ನಿ ಸ್ವತಂತ್ರನಾಗುವುದಾದರೆ ಜೀವನೇ ಏಕೆ ಸ್ವತಂತ್ರನಾಗಬಾರದು?

'ಅಗ್ನಿಯು ಅಸ್ವತಂತ್ರನಾದರೂ ಅವನು ಜೀವನಿಗಿಂತ ಯೋಗ್ಯತೆಯಲ್ಲಿ ದೊಡ್ಡವನು. ಆದ್ದರಿಂದ ಜೀವನಿಗೆ ನಿಯಾಮಕ' ಎನ್ನುವಂತೆಯೂ ಇಲ್ಲ. ಈ ವ್ಯವಸ್ಥೆ ಸರ್ವನಿಯಾಮಕನಾದ ಪರಮಾತ್ಮನನ್ನು ಒಪ್ಪಿದರೆ ಮಾತ್ರ ಸಾಧ್ಯ. ಚಕ್ರವರ್ತಿರಾಜನಿದ್ದರೆ ಅವನ ಕೈಕೆಳಗೆ ಸಾಮಂತರು, ಅವರ ಕೈಕೆಳಗೆ ಗ್ರಾಮಾಧೀಶರು ಹೀಗೆ ವ್ಯವಸ್ಥೆ ಸರಿಯಾಗುತ್ತದೆ. ರಾಜನಿಲ್ಲದಿದ್ದರೆ ಈ ವ್ಯವಸ್ಥೆ ಇರಲಾರದು. ಅದರಂತೆ, ಸರ್ವೋತ್ತಮನಾದ ಈಶನೊಬ್ಬನಿದ್ದರೆ ಅವನ ಆದೇಶದಂತೆ ಒಬ್ಬ ಜೀವ ನಿಯಾಮಕ ಮತ್ತೊಬ್ಬ ನಿಯಮ್ಯ ಎಂಬ ವ್ಯವಸ್ಥೆ ಇರಬಹುದು. ಆದರೆ, ಪೂರ್ವಪಕ್ಷಿ ಅಂತಹ ಈಶನನ್ನು ಒಪ್ಪಿಲ್ಲ. ಒಪ್ಪಿದ್ದರೆ ಅವನನ್ನೇ ಅಕ್ಷಿನಿಯಾಮಕ ಎನ್ನುತ್ತಿದ್ದ. ಆದ್ದರಿಂದ ಅಗ್ನ್ಯಾದಿಗಳೇ ಅಕ್ಷಿಸ್ಥರು ಎನ್ನುವುದು ಸರಿಯಲ್ಲ. || 17 ||

## ದ್ವೈತದರ್ಶನದಲ್ಲಿ ಸೂತ್ರಗಳ ಅರ್ಥ

**1. ಓಂ || ಅಂತರ ಉಪಪತ್ತೇಃ || ಓಂ**

ತತ್ತು ಎಂಬುದನ್ನು ಅನುವೃತ್ತಿ ಮಾಡಿಕೊಂಡಾಗ, ಅಂತರಃ='ಯ ಏಷೋಽಂತರಕ್ಷಿಣಿ ಪುರುಷಃ' ಎಂಬ ಶ್ರುತಿಯಲ್ಲಿ ಕಣ್ಣಿನೊಳಗೆ ನಿಯಾಮಕನಾಗಿ ಹೇಳಲ್ಪಟ್ಟವನು ತತ್ತು= ಆ ಬ್ರಹ್ಮನೆ, ಅಗ್ನಿಯಲ್ಲ. 'ಏತದಮೃತಮಭಯಂ ಏತದ್ ಬ್ರಹ್ಮ' ಎಂದು ಹೇಳಿದ ಅಮೃತತ್ವ, ಅಭಯತ್ವ ಧರ್ಮಗಳು ಮತ್ತು ಬ್ರಹ್ಮಶಬ್ದ ಇವುಗಳು ಅವನಲ್ಲೇ ಉಪಪತ್ತೇಃ= ಯುಕ್ತವಾಗುವುದರಿಂದ.

(ಅಂತರಃ= ಚಕ್ಷುರಂತಸ್ಥಿತ್ವಾ ರಮಮಾಣಃ ಬ್ರಹ್ಮೈವ ನ ತ್ವಗ್ನಿಃ| 'ಏತದಮೃತಮಭಯಂ ಏತದ್ ಬ್ರಹ್ಮ' ಇತ್ಯುಕ್ತ- ಅಮೃತತ್ವ- ಅಭಯತ್ವ ಲಿಂಗ- ಬ್ರಹ್ಮಶಬ್ದಾನಾಂ ತತ್ರೈವ ಉಪಪತ್ತೇಃ। 'ಅಂತರಕ್ಷಿಣಿ' ಇತಿ ಶ್ರುತೌ ಅಂತಸ್ಥತ್ವೋಕ್ತಾವಪಿ

'ಏಷ ಆತ್ಮಾ' ಇತ್ಯಾತ್ಮಪದೇನ 'ಆದೇಯಂ ಮಾತಿ' ಇತಿ ರಮಣಸ್ಯಾಪಿ ಉಕ್ತೇಃ ಅಂತರುಪಪದಾತ್ ರಮತೇಃ ಇಮಂತಾತ್ ಡಪ್ರತ್ಯಯೇನ ಅಂತರ ಇತಿ ನಿರದಿಕ್ಷತ್।)

**2. ಓಂ॥ ಸ್ಥಾನಾದಿವ್ಯಪದೇಶಾಚ್ಚ॥ ಓಂ**

ಸ್ಥಾನವಾದ ಕಣ್ಣಿನ ಶಕ್ತಿವಿಶೇಷ, ಅದರಲ್ಲಿರುವವನ ವಿಲಕ್ಷಣ ಸಾಮರ್ಥ್ಯಗಳನ್ನು ಹೇಳಿರುವುದರಿಂದ ಕಣ್ಣಿನೊಳಗಿರುವವನು ಬ್ರಹ್ಮ.

(ಸ್ಥಾನಂ ಅಕ್ಷಿ। ಆದಿಪದಾತ್ ತದಧಿಷ್ಠಾತೃ ಗೃಹ್ಯತೇ। ಸ್ಥಾನಾದಿ ಶಬ್ದಾತ್ ಸ್ಥಾನಾದಿ ಶಕ್ತಿಃ ಉಪಲಕ್ಷ್ಯತೇ । ಸ್ಥಾನರೂಪ-ಅಕ್ಷಿಶಕ್ತೇಃ ಅಧಿಷ್ಠಾತೃ ಶಕ್ತೇಶ್ಚ ವ್ಯಪದೇಶಾಚ್ಚ ಅಂತರೋ ಬ್ರಹ್ಮೈವ।)

**3. ಓಂ॥ ಸುಖವಿಶಿಷ್ಟಾಭಿಧಾನಾದೇವ ಚ॥ ಓಂ**

ಪ್ರಾರಂಭದಲ್ಲಿ 'ಕಂ ಬ್ರಹ್ಮ' ಎಂದು ಪೂರ್ಣತ್ವರೂಪವಾದ ವಿಶೇಷವುಳ್ಳ ಸುಖವನ್ನು ಹೇಳಿರುವುದರಿಂದ ಈ ಪ್ರಕರಣ ಬ್ರಹ್ಮನಿಗೆ ಸಂಬಂಧಿಸಿದೆ. ಅಂತಹ ಪ್ರಕರಣದಲ್ಲಿ ಹೇಳಿರುವ ಅಕ್ಷಿಸ್ಥ ವಿಷ್ಣುವೇ.

(ವಿಶಿಷ್ಟಂ ಚ ತತ್ ಸುಖಂ ಚ-ಸುಖ ವಿಶಿಷ್ಟಂ । ಸುಖೇನ ವಿಶಿಷ್ಟಂ ಇತಿ ವಾ, ಸುಖೇಷು ವಿಶಿಷ್ಟಂ ಇತಿ ವಾ - ಸುಖವಿಶಿಷ್ಟಮ್ । 'ಕಂ ಬ್ರಹ್ಮ' ಇತಿ ಪೂರ್ಣತ್ವ ವಿಶಿಷ್ಟ ಸುಖರೂಪತ್ವಾಭಿಧಾನಾಚ್ಚ ಅಂತರೋ ಬ್ರಹ್ಮೈವ।)

**4. ಓಂ॥ ಶ್ರುತೋಪನಿಷತ್ ಕಗತ್ಯಭಿಧಾನಾಚ್ಚ॥ ಓಂ**

ಶ್ರುತೋಪನಿಷದಾಂ = ಈ ವಿದ್ಯೆಯನ್ನು ಶ್ರವಣ-ಮನನ-ಧ್ಯಾನ ಮಾಡಿದವರಿಗೆ ಕೇನ=ವಾಯುವಿನಿಂದ ಕಸ್ಯ=ಪರಬ್ರಹ್ಮನ ಗತೇಃ=ಪ್ರಾಪ್ತಿಯ ಅಭಿಧಾನಾತ್= ಹೇಳಿರುವುದರಿಂದಲೂ ಅಕ್ಷಿಸ್ಥನಾದವನು ಬ್ರಹ್ಮ.

(ಶ್ರುತ ಇತ್ಯುಪಲಕ್ಷಣಮ್ । ಕೇತಿ ಬ್ರಹ್ಮವಾಯೂ ತಂತ್ರೇಣ ಉಕ್ತೌ । ಶ್ರುತೋಪನಿಷದಾಂ=ಶ್ರುತ-ಮತ-ಧ್ಯಾತ- ಏತದ್ವಿದ್ಯಾನಾಂ ಪುಂಸಾಂ ಕೇನ=ವಾಯುನಾ ಕಸ್ಯ=ಬ್ರಹ್ಮಣಃ, ಗತೇಃ-ಪ್ರಾಪ್ತೇಃ 'ಸ ಏನಾನ್ ಬ್ರಹ್ಮ ಗಮಯತಿ' ಇತ್ಯಭಿಧಾನಾಚ್ಚ ಅಂತರಃ ಬ್ರಹ್ಮೈವ।)

**5. ಓಂ॥ ಅನವಸ್ಥಿತೇಃ ಅಸಂಭವಾಚ್ಚ ನೇತರಃ॥ ಓಂ**

ಅಗ್ನಿಯೂ ಒಬ್ಬ ಜೀವನಾದುದರಿಂದ ಅವನು ಅಕ್ಷಿಸ್ಥನಾಗಿ ಪ್ರೇರಕನಾದರೆ ಅವನಿಗೆ ಮತ್ತೊಬ್ಬ ಪ್ರೇರಕನಿರಬೇಕು. ಹೀಗೆ ಅನವಸ್ಥಾದೋಷ ಬರುವುದರಿಂದ, ಜೀವನಾದ ಅವನಿಗೆ ಪ್ರೇರಕತ್ವ ಅಸಂಭಾವಿತವೂ ಆದುದರಿಂದ ಬ್ರಹ್ಮನಿಗಿಂತ ಅನ್ಯರು ಅಕ್ಷಿಸ್ಥರಲ್ಲ.

(ಅಂತರಃ, ಇತರಃ=ಅಗ್ನಿಃ ನ । ಕಿಂತು ಬ್ರಹ್ಮೈವ । ಕುತಃ? ಅನವಸ್ಥಿತೇಃ । ಜೀವಸ್ಯಾಗ್ನೇಃ ಜೀವಾಂತರ ಪ್ರೇರಕತ್ವೇ ತಸ್ಯಾಪಿ ಪ್ರೇರಕಾಂತರೇಣ ಭಾವ್ಯಮ್। ತಸ್ಯಾಪಿ ತಥಾ

ಇತಿ ಅನವಸ್ಥಾನಾತ್ । ಅಂಗೀಕೃತ್ಯ ಚೇದಮುದಿತಂ । ಅಗ್ನೇರಪಿ ಪ್ರೇರ್ಯೇಣ ಜೀವತ್ವ-ಸಾಮ್ಯೇನ ಪ್ರೇರಣಾಸಂಭವಾಚ್ಚ।)

## ಅದ್ವೈತ ಭಾಷ್ಯದಲ್ಲಿ ಸೂತ್ರಗಳ ಅರ್ಥ

**1. ಅಂತರ ಉಪಪತ್ತೇಃ ॥**

**ಪೂರ್ವಪಕ್ಷ :** 'ಯ ಏಷಃ ಅಕ್ಷಿಣಿ ಪುರುಷಃ ದೃಶ್ಯತೇ ಏಷ ಆತ್ಮೇತಿ ಹೋವಾಚ । ಏತದಮೃತಂ, ಏತದಭಯಂ, ಏತದ್ ಬ್ರಹ್ಮೇತಿ । ತದ್ ಯದ್ಯಪ್ಯಸ್ಮಿನ್ ಸರ್ಪಿರ್ವಾ ಉದಕಂ ವಾ ಸಿಂಚತಿ ವರ್ತನೀ ಏವ ಗಚ್ಛತಿ'। (ಛಾಂ.4.15.1)

ಇಲ್ಲಿ ಹೇಳಿದ ಕಣ್ಣಿನಲ್ಲಿರುವ ತತ್ತ್ವ ಪ್ರತಿಬಿಂಬ. ನಮ್ಮ ಕಣ್ಣಿನಲ್ಲಿ ಮತ್ತೊಬ್ಬರ ಪ್ರತಿಬಿಂಬ ಕಾಣುತ್ತದೆ. ಅದನ್ನೇ ಇಲ್ಲಿ ವರ್ಣಿಸಲಾಗಿದೆ. ಅದು ಕಣ್ಣಿನಲ್ಲಿ ಎಲ್ಲರಿಗೂ ಕಾಣುವುದರಿಂದ 'ಕಣ್ಣಿನಲ್ಲಿ ಕಾಣುವ ಪುರುಷ' ಎಂದು ಎಲ್ಲರಿಗೂ ಪರಿಚಿತವಾಗಿರುವಂತೆ ಉಪನಿಷತ್ತು ಹೇಳುತ್ತಿದೆ. ಅಥವಾ, ಆತ್ಮಶಬ್ದವನ್ನು ಪ್ರಯೋಗಿಸಿರುವುದರಿಂದ ಜೀವನೂ ಅಕ್ಷಿಸ್ಥನಾಗಬಹುದು. ಅವನು ಕಣ್ಣಿನಿಂದ ನೋಡುತ್ತಾನೆ, ಹೀಗಾಗಿ ಕಣ್ಣಿನಲ್ಲಿದ್ದಾನೆ. ಅಥವಾ ಸೂರ್ಯನಾದರೂ ಸರಿ. ಪರಬ್ರಹ್ಮನಂತೂ ಅಲ್ಲ. ಸರ್ವಗತನಾದ ಅವನನ್ನು ಕಣ್ಣಿಗೆ ಸೀಮಿತಗೊಳಿಸುವುದು ಉಚಿತವಲ್ಲ.

**ಸಿದ್ಧಾಂತ :** 'ಏಷ ಆತ್ಮಾ' ಎಂದು ಅಕ್ಷಿಸ್ಥನನ್ನು ಆತ್ಮಾ ಎನ್ನಲಾಗಿದೆ. 'ಸ ಆತ್ಮಾ ತತ್ತ್ವಮಸಿ' ಎಂದು ಶ್ರುತಿಗಳಲ್ಲಿ ಆತ್ಮಶಬ್ದವನ್ನು ಬ್ರಹ್ಮನಲ್ಲೇ ಪ್ರಯೋಗಿಸಲಾಗಿದೆ. ಅದಲ್ಲದೆ ಇಲ್ಲಿ ಹೇಳಿರುವ ಅಮೃತತ್ವ, ಅಭಯತ್ವ, ಸಂಯದ್ವಾಮತ್ವ ಗುಣಗಳೂ ಬ್ರಹ್ಮನಿಗಷ್ಟೇ ಇವೆ. ಬ್ರಹ್ಮ ಪಾಪಲೇಪ ರಹಿತನಾದಂತೆ ಕಣ್ಣೂ ಸರ್ವಲೇಪರಹಿತವಾಗಿದೆ. ಈ ಕಾರಣಗಳಿಂದ ಬ್ರಹ್ಮನೇ ಅಕ್ಷಿಸ್ಥ.

'ಸಂಯದ್ವಾಮ' ಪದಕ್ಕೆ ಅದ್ವೈತ ಭಾಷ್ಯ ಬೇರೆ ವಿವರಣೆಯನ್ನು ನೀಡಿದೆ - ವಾಮ ಎಂದರೆ ಪುಣ್ಯ ಫಲ. 'ಸಂಯಾಂತಿ ವಾಮಾನಿ ಅನೇನ ಇತಿ - ಸಂಯದ್ವಾಮ.' ಯಾರಿಂದಾಗಿ ಜೀವನಿಗೆ ಪುಣ್ಯಫಲ ಬರುವುದೋ ಅಂತಹ ಬ್ರಹ್ಮ. 'ಏಷ ಹ್ಯೇವ ಸಾಧುಕರ್ಮ ಕಾರಯತಿ' ಎಂದಿರುವುದರಿಂದ ಜೀವನಿಂದ ಸತ್ಕರ್ಮಗಳನ್ನು ಮಾಡಿಸುವವನು ಬ್ರಹ್ಮನಾದುದರಿಂದ ಅವನು 'ಸಂಯದ್ವಾಮ' ಎನಿಸುತ್ತಾನೆ.

**2. ಸ್ಥಾನಾದಿವ್ಯಪದೇಶಾಚ್ಚ** - ವ್ಯಾಪ್ತನಾದ ಬ್ರಹ್ಮನಿಗೆ ಸಂಕುಚಿತವಾದ ಅಕ್ಷಿಸ್ಥತ್ವ ಹೇಗೆ? ಅದಕ್ಕೆ ಹೀಗೆ ಉತ್ತರ - ಈ ಪ್ರಕರಣದಲ್ಲಿ 'ಯಃ ಚಕ್ಷುಷಿ ತಿಷ್ಠನ್' 'ಯಃ ಪೃಥಿವ್ಯಾಂ ತಿಷ್ಠನ್' ಎಂದು ಮುಂತಾಗಿ ಇನ್ನೂ ಅನೇಕ ಸ್ಥಾನಗಳಲ್ಲಿ ಸ್ಥಿತಿಯನ್ನು ಹೇಳಲಾಗಿದೆ. ಅಷ್ಟೇ ಅಲ್ಲ, ನಾಮ-ರೂಪಗಳಿಲ್ಲದ ಅವನಿಗೆ 'ತಸ್ಯ ಓದಿತಿ ನಾಮ' ಎಂದೂ 'ಹಿರಣ್ಯ ಶ್ಮಶ್ರುಃ'

ಎಂದೂ ನಾಮರೂಪಗಳನ್ನು (ಆದಿ) ತಿಳಿಸಲಾಗಿದೆ. ಇವೆಲ್ಲ ಕೇವಲ ಉಪಾಸನೆಗಾಗಿ. ವಿಷ್ಣುವಿಗೆ ಸಾಲಿಗ್ರಾಮದಂತೆ ಬ್ರಹ್ಮನ ಉಪಾಸನೆಗೆ ಕಣ್ಣು ಉಪಾಸನಾ ಸ್ಥಾನ.

**3. ಸುಖವಿಶಿಷ್ಟಾಭಿಧಾನದೇವ ಚ** - ಈ ಪ್ರಕರಣದ ಪ್ರಾರಂಭದಲ್ಲಿ 'ಪ್ರಾಣೋ ಬ್ರಹ್ಮ ಕಂ ಬ್ರಹ್ಮ ಖಂ ಬ್ರಹ್ಮ' ಎಂದು ಸುಖವಿಶಿಷ್ಟನಾದ ಬ್ರಹ್ಮನನ್ನು ಹೇಳಿರುವುದರಿಂದಲೂ ಇಲ್ಲಿ ಹೇಳಲಾದ ಅಕ್ಷಿಸ್ಥ ಪರಬ್ರಹ್ಮ. ಆದ್ದರಿಂದಲೇ ಅಗ್ನಿಗಳು ತಮ್ಮ ಮಹತ್ತ್ವವನ್ನೂ ಹೇಳಿಕೊಂಡು, ಪ್ರಾರಂಭದಲ್ಲಿ ಪ್ರಸ್ತುತನಾದ ಬ್ರಹ್ಮನ ಬಗ್ಗೆಯೂ ಹೇಳಿ 'ಏಷಾ ಸೋಮ್ಯ ತೇ ಅಸ್ಮದ್ವಿದ್ಯಾ ಆತ್ಮವಿದ್ಯಾ ಚ' ಎಂದಿವೆ. ಕೊನೆಗೆ ಗುರುಗಳಿಂದಲೇ ವಿದ್ಯೆ ಫಲಿಸಬೇಕಾದುದರಿಂದ 'ಆಚಾರ್ಯಸ್ತು ತೇ ಗತಿಂ ವಕ್ತಾ-ನಿನ್ನ ಗುರುಗಳು ಈ ವಿದ್ಯೆಯಿಂದಾಗುವ ಫಲವನ್ನು ಹೇಳುತ್ತಾರೆ' ಎಂದೂ ಹೇಳಿವೆ. ಅನಂತರ ಗುರುಗಳು ಕಮಲದೆಲೆಯ ದೃಷ್ಟಾಂತ ನೀಡಿ ಅಕ್ಷಿಸ್ಥನ ಜ್ಞಾನದಿಂದ ಪಾಪದ ಅಲೇಪ, ಬ್ರಹ್ಮಪ್ರಾಪ್ತಿಗಳನ್ನು ನಿರೂಪಿಸಿದ್ದಾರೆ.

**4. ಶ್ರುತೋಪನಿಷತ್ಕ-ಗತ್ಯಭಿಧಾನಾಚ್ಚ** - ಈ ರಹಸ್ಯವಿದ್ಯೆ (ಉಪನಿಷತ್) ಯನ್ನು ತಿಳಿದವನಿಗೆ ದೇವಯಾನ ಮಾರ್ಗದಲ್ಲಿ ಗಮನವನ್ನು ಹೇಳಿರುವುದರಿಂದಲೂ ಇಲ್ಲಿ ಅಕ್ಷಿಸ್ಥನಾದವನು ಬ್ರಹ್ಮ. ಅಬ್ರಹ್ಮಜ್ಞಾನಿಗಳಿಗೆ ಆ ಮಾರ್ಗಪ್ರವೇಶ ಅಪುನರಾವೃತ್ತಿಗಳು ಇಲ್ಲ.

**5. ಅನವಸ್ಥಿತೇರಸಂಭವಾಚ್ಚ ನೇತರಃ** - ಕಣ್ಣಿನಲ್ಲಿ ಕಾಣುವ ಪ್ರತಿಬಿಂಬ ನಶ್ವರ (ಅನವಸ್ಥಿತೇಃ). ಆದ್ದರಿಂದಲೇ ಅದರಲ್ಲಿ ಅಮೃತತ್ವ ಅಸಂಭಾವಿತ. ದೇಹವ್ಯಾಪಿಯಾದ ಜೀವನು ಕಣ್ಣಿನಲ್ಲಿರುವುದೂ ಸಾಧ್ಯವಿಲ್ಲ. ಆದ್ದರಿಂದ ಇತರರು ಅಕ್ಷಿಸ್ಥರಲ್ಲ.

## ಚಂದ್ರಿಕಾದಲ್ಲಿ ಮಾಡಿರುವ ವಿಮರ್ಶೆ

ಪ್ರಥಮಾಧ್ಯಾಯದ ಪ್ರಥಮಪಾದದ ಏಳನೆಯ ಅಧಿಕರಣವೂ ಅಂತರಧಿಕರಣ. ಅದ್ವೈತಭಾಷ್ಯ, ಅಲ್ಲೂ ಛಾಂದೋಗ್ಯದ ಪ್ರಥಮಾಧ್ಯಾಯದ ವಾಕ್ಯವನ್ನು ಬ್ರಹ್ಮಪರ ಎಂದು ಸಿದ್ಧಾಂತ ಮಾಡಿದೆ. ಅಲ್ಲಿ 'ಅಥ ಏಷೋಽಂತರಕ್ಷಿಣಿ ಪುರುಷೋ ದೃಶ್ಯತೇ' ಎಂಬ ವಾಕ್ಯವನ್ನು ಬ್ರಹ್ಮಪರ ಎಂದು ಸಿದ್ಧಾಂತ ಮಾಡಿದ ಮೇಲೆ ಮತ್ತೆ ಪುನಃ ಇಲ್ಲಿ ಆಕ್ಷೇಪಕ್ಕೆ ಕಾರಣವೇ ಇಲ್ಲ. ಆದ್ದರಿಂದ ಈ ಅಧಿಕರಣದ ಪೂರ್ವಪಕ್ಷ ಸರಿಯಲ್ಲ.

ಸಿದ್ಧಾಂತವೂ ಸರಿಯಲ್ಲ- 'ಅಕ್ಷಿಸ್ಥನಾದವನು ಕಾರ್ಯಬ್ರಹ್ಮ (ಚತುರ್ಮುಖ) ನಾದರೆ ಅವನಿಗೆ ಅಮೃತತ್ವ - ಅಭಯತ್ವ ಧರ್ಮಗಳಿಲ್ಲ. ಅಕಾರ್ಯ ಬ್ರಹ್ಮನಾದರೆ (ಪರಬ್ರಹ್ಮ) ಅವನ ಉಪಾಸನೆಯಿಂದ ಅರ್ಚಿರಾದಿಮಾರ್ಗಗಮನ ಅಯುಕ್ತ. ಅದು ಕಾರ್ಯಬ್ರಹ್ಮೋಪಾಸಕರು ಹೋಗುವ ಮಾರ್ಗ.

ಕಾರ್ಯಬ್ರಹ್ಮಪರತ್ವಂ ಚೇತ್ ಅಮೃತತ್ವಾದ್ಯಸಂಭವಃ।
ಅಕಾರ್ಯಪರತಾ ಚೇತ್ ಸ್ಯಾತ್ ಅರ್ಚಿರಾದೇರಸಂಭವಃ॥

## ರಾಮಾನುಜ ಭಾಷ್ಯ

ರಾಮಾನುಜಭಾಷ್ಯದಲ್ಲೂ ಇದೇ ವಿಷಯವಾಕ್ಯವನ್ನು ತೆಗೆದುಕೊಂಡು ಪ್ರಾಯಃ ಸೂತ್ರಗಳಿಗೆ ಹೀಗೆಯೇ ಅರ್ಥವನ್ನು ಹೇಳಲಾಗಿದೆ. ಆದರೆ, ಅಲ್ಲಿ 'ಸುಖವಿಶಿಷ್ಟಾಭಿಧಾನಾದೇವ ಚ ' ಮತ್ತು 'ಶ್ರುತೋಪನಿಷತ್ಕ ಗತ್ಯಭಿಧಾನಾಚ್ಚ' ಎಂಬ ಎರಡು ಸೂತ್ರಗಳ ಮಧ್ಯದಲ್ಲಿ ಮತ್ತೊಂದು ಸೂತ್ರ ಅಧಿಕವಾಗಿದೆ-

**'ಅತ ಏವ ಚ ಸ ಬ್ರಹ್ಮ'**

ಪ್ರಾರಂಭದಲ್ಲಿ 'ಕಂ ಬ್ರಹ್ಮ ಖಂ ಬ್ರಹ್ಮ' ಎಂದು ಸುಖವಿಶಿಷ್ಟನಾದ ಬ್ರಹ್ಮನ ಉಲ್ಲೇಖವಿರುವುದರಿಂದ 'ಖಂ' ಎಂಬ ಶಬ್ದದಿಂದ ಹೇಳಲ್ಪಟ್ಟ ಆಕಾಶವೂ ಬ್ರಹ್ಮನೆ. ಅಲ್ಲಿ ಪ್ರಕೃತನಾದ ಬ್ರಹ್ಮನನ್ನೇ 'ಯ ಏಷ ಅಂತರಕ್ಷಿಣಿ' ಎಂದು ಕಣ್ಣಿಗೆ ಆಧಾರನನ್ನಾಗಿ ಹೇಳಲಾಗಿದೆ ಎಂದು ಆ ಸೂತ್ರದ ಅರ್ಥ.

2. 'ಈ ಅಧಿಕರಣ ಅಂತರಾಧಿಕರಣದ ವಿಷಯವನ್ನೇ ಮತ್ತೆ ಹೇಳುತ್ತಿರುವುದರಿಂದ ಪುನರುಕ್ತಿ' ಎಂಬ ದೋಷ ರಾಮಾನುಜ ಭಾಷ್ಯಕ್ಕೂ ಸಮಾನ.

**ಇಲ್ಲಿಗೆ ಅಂತರಾಧಿಕರಣ ಮುಗಿಯಿತು.**

# ಅಂತರ್ಯಾಮ್ಯಧಿಕರಣ - 5

**''ಯಃ ಪೃಥಿವ್ಯಾಂ ತಿಷ್ಠನ್ ಪೃಥಿವ್ಯಾ ಅಂತರಃ, ಯಂ ಪೃಥಿವೀ ನ ವೇದ, ಯಸ್ಯ ಪೃಥಿವೀ ಶರೀರಂ, ಯಃ ಪೃಥಿವೀಂ ಅಂತರೋ ಯಮಯತಿ ಏಷ ತೇ ಆತ್ಮಾ ಅಂತರ್ಯಾಮೀ ಅಮೃತಃ (ಬೃ.5.7.3)**

**ಇತ್ಯಾದಿ ಅಂತರ್ಯಾಮೀ ಉಚ್ಯತೇ । ತತ್ರ ಚ 'ಏತದಮೃತಂ' (ಛಾಂ 4.15.1) ಇತ್ಯುಕ್ತಂ ಅಮೃತತ್ವಂ ಉಚ್ಯತೇ । ಸ ಚ 'ಯಸ್ಯ ಪೃಥಿವೀ ಶರೀರಂ' ಇತ್ಯಾದಿನಾ ಸರ್ವಾತ್ಮಕತ್ವಾತ್ ಪ್ರಕೃತಿಃ, ತತ್ತಜ್ಜೀವೋ ವಾ ಯುಕ್ತಃ । ನ ಹಿ ವಿಷ್ಣೋಃ ಪೃಥಿವ್ಯಾದಿಶರೀರತ್ವಂ ಅಂಗೀಕ್ರಿಯತೇ ಇತಿ । ಅತ ಆಹ-**

**ಓಂ ॥ ಅಂತರ್ಯಾಮ್ಯಧಿದೈವಾದಿಷು ತದ್ಧರ್ಮವ್ಯಪದೇಶಾತ್ ॥ ಓಂ**

**'ಯಂ ಪೃಥಿವೀ ನ ವೇದ, ಯಃ ಪೃಥಿವ್ಯಾಃ ಅಂತರಃ' ಇತ್ಯಾದಿನಾ ಅಧಿದೈವಾದಿಷು ತದ್ಧರ್ಮವ್ಯಪದೇಶಾತ್ ವಿಷ್ಣುರೇವ ಅಂತರ್ಯಾಮೀ । ಸ ಹಿ-**

**'ನ ತೇ ವಿಷ್ಣೋ ಜಾಯಮಾನೋ ನ ಜಾತಃ' (ಋ. 7.99.2)**

**ಸ ಯೋ ಅತೋ, ಅಶ್ರುತೋ, ಅಗತೋ, ಅಮತೋ, ಅನತೋ, ಅದೃಷ್ಟೋ, ಅವಿಜ್ಞಾತೊ, ಅನಾದಿಷ್ಟಃ ಸರ್ವೇಷಾಂ ಭೂತಾನಾಂ ಅಂತರಪುರುಷಃ' (ಐ.ಆ.3.2.4)**

**ಇತ್ಯಾದಿನಾ ಅವಿದಿತೋ, ಅಂತರಶ್ಚ॥ 18 ॥**

ಬೃಹದಾರಣ್ಯಕೋಪನಿಷತ್ತಿನಲ್ಲಿ ಯಾಜ್ಞವಲ್ಕ್ಯರು ಉದ್ದಾಲಕನಿಗೆ ಹೀಗೆ ಹೇಳಿದ್ದಾರೆ. 'ಯಾರು ಪೃಥಿವಿಯಲ್ಲಿದ್ದು ಅದಕ್ಕಿಂತ ಭಿನ್ನನಾಗಿರುವನೋ, ಯಾರನ್ನು ಪೃಥಿವಿ ತಿಳಿಯಲಾರದೋ', 'ಯಾರು ಅಲ್ಲಿದ್ದು ಸ್ವರಮಣನಾಗಿ (ಅಂತರಃ) ಪೃಥಿವಿಯನ್ನು ನಿಯಮಿಸುವನೋ, ಅಂತಹವನು ನಿನ್ನ ಅಂತರ್ಯಾಮಿಯಾಗಿದ್ದು ನಿತ್ಯನಾಗಿದ್ದಾನೆ.' ಇದೇ ರೀತಿಯಾಗಿ ಅನೇಕ ವಾಕ್ಯಗಳಿಂದ ಅಂತರ್ಯಾಮಿಯನ್ನು ಹೇಳಲಾಗಿದೆ. ಈ ಅಂತರ್ಯಾಮಿಯನ್ನೂ, ಹಿಂದೆ ಅಕ್ಷಿಸ್ಥನನ್ನು 'ಏತದಮೃತಂ' ಎಂದು ಛಾಂದೋಗ್ಯದಲ್ಲಿ ಹೇಳಿದಂತೆ, 'ಅಮೃತ-ನಾಶರಹಿತ' ಎನ್ನಲಾಗಿದೆ. ಇಲ್ಲಿ ಹೇಳಿದ ಅಂತರ್ಯಾಮಿ 'ಯಸ್ಯ ಪೃಥಿವೀ ಶರೀರಂ' ಎಂದು ಮುಂತಾಗಿ ಸರ್ವಾತ್ಮಕ ಎಂದಿರುವುದರಿಂದ ಜಡಪ್ರಕೃತಿ ಅಥವಾ ಚಿತ್‌ಪ್ರಕೃತಿ ಇಲ್ಲವೇ ಅಲ್ಲಿರುವ ಜೀವವಿಶೇಷ ಆಗಿರುವುದೇ ಯುಕ್ತ, ವಿಷ್ಣುವಂತೂ ಅಲ್ಲ; ಅವನಿಗೆ ಪೃಥಿವಿಯು ಶರೀರವೆಂದು ಒಪ್ಪುವುದಿಲ್ಲ ತಾನೆ. ಹೀಗೆ ಪೂರ್ವಪಕ್ಷ ಬಂದಾಗ ಸೂತ್ರಕಾರರು ಹೇಳಿದ್ದಾರೆ-

'ಯಂ ಪೃಥಿವೀ ನ ವೇದ, ಯಃ ಪೃಥಿವ್ಯಾಃ ಅಂತರಃ'

ಇತ್ಯಾದಿ ವಾಕ್ಯಗಳಿಂದ ಇಲ್ಲಿರುವ ಅಧಿದೈವ, ಅಧಿಭೂತ, ಅಧ್ಯಾತ್ಮ ಈ ಮೂರೂ ಪ್ರಕರಣಗಳಲ್ಲೂ 'ಏಷ ತೇ ಅಂತರ್ಯಾಮಿ' ಎಂದು ಅಂತರ್ಯಾಮಿಯಾಗಿ ಹೇಳಲ್ಪಟ್ಟವನು ವಿಷ್ಣುವೆ. ಈ ಧರ್ಮಗಳು ಅವನದೇ ಆಗಿವೆ. 'ವಿಷ್ಣುವೆ, ಹಿಂದೆ ಹುಟ್ಟಿದವನಾಗಲೀ, ಮುಂದೆ ಹುಟ್ಟುವವನಾಗಲಿ, ಯಾರೂ ನಿನ್ನ ಮಹತಿಯನ್ನು ತಿಳಿದಿಲ್ಲ' ''ವಿಷ್ಣು ದೇಶ-ಕಾಲ-ಗುಣಗಳಿಂದ ವ್ಯಾಪ್ತ, ಅವನನ್ನು ಕೇಳಿ ಮುಗಿಯುವಂತಿಲ್ಲ, ಅವನು ಸಾಕಲ್ಯೇನ ಅಜ್ಞೇಯ, ಮನನಕ್ಕೆ ಸಿಗದವನು, ಅವನಿಗೆ ಮತ್ತೊಬ್ಬ ನಿಯಾಮಕನಿಲ್ಲ, ದೃಷ್ಟಿಗೆ ಅಗೋಚರ, ವಿಶೇಷರೂಪದಿಂದ ಅಜ್ಞೇಯ, ಅವನಿಗೆ ಆಜ್ಞೆ ಮಾಡುವವರಿಲ್ಲ, ಎಲ್ಲ ಪ್ರಾಣಿಗಳ ಒಳಗಿರುವ ಪೂರ್ಣಷಡ್ಗುಣ'' ಇತ್ಯಾದಿ ಪ್ರಮಾಣಗಳಿಂದ ಅಜ್ಞೇಯನಾದವನೂ ಅಂತರ್ಯಾಮಿಯಾಗಿರುವವನೂ ಅವನೆ.

**ವಿವರಣೆ :** 1. ಹಿಂದೆ ಇದೇ ರೀತಿಯ ಎರಡು ಅಧಿಕರಣಗಳು ಬಂದಿವೆ. ಪ್ರಥಮ ಪಾದದ ಏಳನೆಯ ಅಧಿಕರಣ ಅಂತಸ್ಥತ್ವಾಧಿಕರಣ. ಅಲ್ಲಿ ತೈತ್ತಿರೀಯ ಮಂತ್ರವನ್ನು ವಿಮರ್ಶೆ ಮಾಡಲಾಗಿದೆ. ಇದಕ್ಕಿಂತ ಹಿಂದಿನ ಅಧಿಕರಣ ಅಂತರಾಧಿಕರಣ. ಅಲ್ಲಿ ಛಾಂದೋಗ್ಯದ

ಮಂತ್ರವನ್ನು ವಿಚಾರ ಮಾಡಲಾಗಿದೆ. ಇದು ಅಂತರ್ಯಾಮಿ ಅಧಿಕರಣ. ಇದರಲ್ಲಿ ಬೃಹದಾರಣ್ಯಕದ ವಾಕ್ಯವನ್ನು ವಿಚಾರ ಮಾಡಲಾಗಿದೆ.

2. ಬೃಹದಾರಣ್ಯಕದಲ್ಲಿ ಮೂರು ಪ್ರಕರಣಗಳಿವೆ. ಪೃಥಿವೀ ಮೊದಲಾದ ತತ್ತ್ವಗಳ ಅಭಿಮಾನಿ ದೇವತಾ ಪ್ರಕರಣ - ಅಧಿದೈವ ಪ್ರಕರಣ. 'ಯಃ ಪ್ರಾಣೇ ತಿಷ್ಠನ್' ಮುಂತಾಗಿ ಅಧ್ಯಾತ್ಮ ಪ್ರಕರಣ. 'ಯಃ ಸರ್ವೇಷು ಭೂತೇಷು ತಿಷ್ಠನ್' ಇತ್ಯಾದಿ ಅಧಿಭೂತ ಪ್ರಕರಣ. ಈ ಮೂರೂ ಪ್ರಕರಣಗಳಲ್ಲೂ ಅಂತರ್ಯಾಮಿಯಾಗಿ ಹೇಳಲ್ಪಟ್ಟವನು ವಿಷ್ಣು ಎಂದು ಇಲ್ಲಿನ ಸಿದ್ಧಾಂತ.

3. ಹಿಂದಿನ ಅಧಿಕರಣದಲ್ಲಿ ಕಣ್ಣಿನಲ್ಲಿರುವ ಆತ್ಮನಿಗೆ ಅಮೃತತ್ವವನ್ನು ಹೇಳಲಾಗಿದೆ. ಆ ಧರ್ಮವನ್ನು ಇಲ್ಲಿ 'ಏಷ ತೇ ಆತ್ಮಾ ಅಂತರ್ಯಾಮೀ ಅಮೃತಃ' ಎಂದು ಅಂತರ್ಯಾಮಿಗೆ ಹೇಳಲಾಗಿದೆ. ಅಂತರ್ಯಾಮಿ ವಿಷ್ಣುವಿಗಿಂತ ಇತರರಾದರೆ ಹಿಂದೆ ಹೇಳಿದ ಅಕ್ಷಿಸ್ಥನೂ ಅವರೇ ಆಗಬೇಕು. ಹೀಗೆ ಹಿಂದಿನ ಅಧಿಕರಣದ ಸಿದ್ಧಾಂತದ ಮೇಲೆ ಆಕ್ಷೇಪ ಪರಿಹಾರಗಳನ್ನು ಇಲ್ಲಿ ಮಾಡಲಾಗಿದೆ.

4. ಶ್ರುತಿಯಲ್ಲಿರುವ ಪೃಥಿವೀ ಶಬ್ದಕ್ಕೆ 'ಪೃಥುಂ=ವಿಷ್ಣುಂ ಊಢ್ವಾ ವಾತಿ'. ವಿಷ್ಣುವನ್ನು ಹೊತ್ತು ನಡೆವ ಗರುಡ ಎಂದರ್ಥ. ಆದರೆ ಪೂರ್ವಪಕ್ಷಿ 'ಪೃಥಿವೀ' ಎಂದರೆ ಪಂಚಭೂತಗಳಲ್ಲಿ ಒಂದು ಎಂದು ತಿಳಿದು ಪ್ರಶ್ನಿಸುತ್ತಿದ್ದಾನೆ.

5. ಭಾಷ್ಯದಲ್ಲಿ 'ಇತ್ಯಾದಿ ಅಂತರ್ಯಾಮೀ ಉಚ್ಯತೇ' ಎಂದಿದೆ. ಅಲ್ಲಿ 'ಇತ್ಯಾದಿನಾ, ಇತ್ಯಾದಿಷು' ಎಂದು ತೃತೀಯಾ ಅಥವಾ ಸಪ್ತಮೀ ವಿಭಕ್ತಿಯನ್ನು ಇಟ್ಟುಕೊಳ್ಳಬೇಕು. ಸಪ್ತಮ್ಯಾದಿ ವಿಭಕ್ತಿಗಳಿಗೆ 'ಸು' ಎಂಬ ಆದೇಶ ಬಂದು ಪ್ರಥಮಾವಿಭಕ್ತಿಯ ರೂಪವಾಗುವುದು ವೈದಿಕ ಪ್ರಯೋಗ ಪದ್ಧತಿ.

6. ಅ) 'ಪೃಥಿವೀ ಶರೀರಂ' ಎಂದರೆ ಪೂರ್ವಪಕ್ಷದಲ್ಲಿ ಪೃಥಿವಿಯ ಸ್ವರೂಪ ಎಂದರ್ಥ. ಶಾಸ್ತ್ರಗಳಲ್ಲಿ 'ವ್ಯಾಪ್ತಿಶರೀರಂ' ಎಂದರೆ 'ವ್ಯಾಪ್ತಿಸ್ವರೂಪಂ' ಎಂದರ್ಥ. ಪ್ರಕೃತಿ ತತ್ತ್ವದಿಂದ ಪಂಚಭೂತಗಳು ಹುಟ್ಟುವುದರಿಂದ ಪೃಥಿವ್ಯಾದಿಗಳು ಪ್ರಕೃತಿಯ ಸ್ವರೂಪ. ಹಾಗಾದರೆ, 'ಪೃಥಿವ್ಯಾಂ ತಿಷ್ಠನ್' ಎನ್ನುವುದು ಹೇಗೆ? 'ವ್ಯಾಪ್ತಂ ಕಾರ್ಯೇಷು ಕಾರಣಂ' 'ಕಾರ್ಯದಲ್ಲಿ ಕಾರಣವು ವ್ಯಾಪಿಸಿದೆ' ಎಂದು ಪ್ರಯೋಗವಿದೆ. ಕಾರ್ಯವು ಕಾರಣಾತ್ಮಕವಾದರೂ 'ಕಾರ್ಯದಲ್ಲಿ ಕಾರಣ' ಎಂಬ ಪ್ರಯೋಗವೂ ಇದೆ. ಪ್ರಕೃತದಲ್ಲಿ ಕಾರಣ ಪ್ರಕೃತಿ. ಪೃಥಿವ್ಯಾದಿಗಳು ಕಾರ್ಯ. ಹೀಗಾಗಿ 'ಪೃಥಿವಿಯಲ್ಲಿ ಪ್ರಕೃತಿ' ಎನ್ನಬಹುದು.

ಆ) ಶರೀರಶಬ್ದಕ್ಕೆ ದೇಹ ಎಂದು ಅರ್ಥವನ್ನು ಮಾಡುವುದಾದರೆ ಪ್ರಕೃತ್ಯಭಿಮಾನಿನಿಯಾದ ಲಕ್ಷ್ಮೀದೇವಿಯು ಅಭಿಮಾನಿನಿಯಾಗಿ ಪೃಥಿವ್ಯಾದಿಗಳಲ್ಲಿದ್ದಾಳೆ. ಅಥವಾ ಅಲ್ಲಿರುವ ದೇವತೆಗಳಿಗೆ ಅದು ಶರೀರ.

ಹೀಗೆ ಅಂತರ್ಯಾಮಿ ಜಡಪ್ರಕೃತಿ, ಲಕ್ಷ್ಮೀದೇವಿ, ಜೀವಾತ್ಮರು ಎಂದು ಪೂರ್ವಪಕ್ಷ.

ಇ) ವಸ್ತುತಃ 'ಅಮೃತತ್ವ' ಹಿಂದೆ ಹೇಳಿದಂತೆ ವಿಷ್ಣುವಿನ ಧರ್ಮ. ಆದರೂ ಪ್ರಕೃತ ಅಂತರ್ಯಾಮಿ ವಿಷ್ಣುವಲ್ಲ. ಇಲ್ಲಿ 'ಯಸ್ಯ ಪೃಥಿವೀ ಶರೀರಂ ಯಸ್ಯ ಆಪಃ ಶರೀರಂ' ಎಂದು ಮುಂತಾಗಿ ಪೃಥಿವ್ಯಾದಿಗಳು ಅಂತರ್ಯಾಮಿಯ ಶರೀರ ಎನ್ನಲಾಗಿದೆ. ಬ್ರಹ್ಮ ಅಶರೀರ. ಅವನಿಗೆ ಪೃಥಿವ್ಯಾದಿಗಳು ಶರೀರವಾಗಿರಲು ಸಾಧ್ಯವಿಲ್ಲ. ಹೀಗೆ ಶರೀರತ್ವರೂಪ ನಿರವಕಾಶ ಲಿಂಗದಿಂದ 'ಅಮೃತತ್ವ' ಲಿಂಗವು ಬಾಧಿತವಾಗಿದೆ ಎಂದು ಪೂರ್ವಪಕ್ಷದ ಅಭಿಪ್ರಾಯ. || 18 ||

**3. ಓಂ || ನ ಚ ಸ್ಮಾರ್ತಂ ಅತದ್ಧರ್ಮಾಭಿಲಾಪಾತ್ || ಓಂ**

**ತ್ರಿಗುಣತ್ವಾದಿ ಪ್ರಧಾನಧರ್ಮಾನುಕ್ತೇಃ ನ ಸ್ಮೃತ್ಯುಕ್ತಂ ಪ್ರಧಾನಂ ಅಂತರ್ಯಾಮಿ ||19 ||**

ಸತ್ವ-ರಜಸ್ಸು-ತಮಸ್ಸು ಈ ಗುಣತ್ರಯ ರೂಪವಾದ ಪ್ರಕೃತಿಯ ಧರ್ಮಗಳಾವುದನ್ನು ಇಲ್ಲಿ ಹೇಳಿಲ್ಲವಾದುದರಿಂದ ಕಾಪಿಲ ಸ್ಮೃತ್ಯುಕ್ತವಾದ ಪ್ರಕೃತಿಯು ಇಲ್ಲಿ ಅಂತರ್ಯಾಮಿಯಾಗಿ ಹೇಳಲ್ಪಟ್ಟಿಲ್ಲ.

**ವಿವರಣೆ :** 1. ಪ್ರಕೃತಿಯ ಗುಣಗಳು ಸತ್ವಾದಿಗಳು. ಅದು ಜಗತ್ತಿಗೆ ಉಪಾದಾನ ಕಾರಣ, ಜಡ. ಈ ಯಾವ ಧರ್ಮಗಳ ಉಲ್ಲೇಖವೂ ಪ್ರಕೃತ ಪ್ರಕರಣಗಳಲ್ಲಿ ಇಲ್ಲ. ಅಂತೆಯೇ ಜೀವಾತ್ಮನ ಧರ್ಮಗಳ ಉಲ್ಲೇಖವೂ ಇಲ್ಲ. ಆದ್ದರಿಂದ ಇತರರು ಇಲ್ಲಿ ಹೇಳಿದ ಅಂತರ್ಯಾಮಿಗಳಲ್ಲ.

2. ತತ್ತ್ವಪ್ರದೀಪಿಕಾದಲ್ಲಿ 'ಅತದ್ಧರ್ಮ' ಎಂಬುದಕ್ಕೆ 'ತನಗೆ ವಿರುದ್ಧ ಧರ್ಮ' ಎಂಬ ಅರ್ಥವನ್ನು ಮಾಡಿ ಪ್ರಕೃತಿಗೆ ವಿರುದ್ಧವಾದ ದ್ರಷ್ಟೃತ್ವಾದಿ ಧರ್ಮಗಳನ್ನು ಹೇಳಿರುವುದರಿಂದ ಇಲ್ಲಿ ಪ್ರಕೃತಿ ಪ್ರಸ್ತುತವಲ್ಲ ಎಂದೂ ವ್ಯಾಖ್ಯಾನಿಸಲಾಗಿದೆ.

3. ಕಾಪಿಲಸ್ಮೃತಿ ಈಶ್ವರನ ಸ್ಥಾನವನ್ನು ಪ್ರಕೃತಿಗೆ ನೀಡಿ ಪ್ರಕೃತಿಯೇ ಜಗತ್‌ಕರ್ತೃ ಎಂದು ಹೇಳಿದೆ. ಆದ್ದರಿಂದ ಪ್ರಕೃತಿಯನ್ನು 'ಸ್ಮಾರ್ತ-ಸ್ಮೃತಿಸಿದ್ಧ' 'ಆನುಮಾನಿಕ- ಅನುಮಾನ ಸಿದ್ಧ' ಎಂದೆಲ್ಲ ಸೂತ್ರಗಳಲ್ಲಿ ಹೇಳಲಾಗುತ್ತದೆ. || 19 ||

**3. ಓಂ || ಶಾರೀರಶ್ಚೋಭಯೇಽಪಿ ಹಿ ಭೇದೇನೈನಮಧೀಯತೇ || ಓಂ**

**'ಯ ಆತ್ಮನಿ ತಿಷ್ಠನ್ ಆತ್ಮನೋಽಂತರೋ, ಯಮಾತ್ಮಾ ನ ವೇದ, ಯಸ್ಯಾತ್ಮಾ ಶರೀರಂ, ಯ ಆತ್ಮಾನಮಂತರೋ ಯಮಯತಿ ಏಷ ತೇ ಆತ್ಮಾ ಅಂತರ್ಯಾಮೀ ಅಮೃತಃ ।' (ಬೃಮಾಧ್ಯಂದಿನಪಾಠ) 'ಯೋ ವಿಜ್ಞಾನೇ ತಿಷ್ಠನ್ ವಿಜ್ಞಾನಾದಂತರಃ ಯಂ ವಿಜ್ಞಾನಂ ನ ವೇದ ಯಸ್ಯ ವಿಜ್ಞಾನಂ ಶರೀರಮ್|| (ಬೃ 5.7.22)**

**ಇತಿ ಉಭಯೇಽಪಿ ಶಾಖಿನೋ ಭೇದೇನ ಏನಂ=ಜೀವಂ ಅಧೀಯತೇ ।**

**ಶೀರ್ಯತೇ ನಿತ್ಯಮೇವಾಸ್ಮಾತ್ ವಿಷ್ಣೋಸ್ತು ಜಗದೀದೃಶಮ್ ।**

**ರಮತೇ ಚ ಪರೋ ಹ್ಯಸ್ಮಿನ್ ಶರೀರಂ ತಸ್ಯ ತಜ್ಜಗತ್ ॥**

**ಇತಿ ವಚನಾತ್ ನ ಶರೀರತ್ವವಿರೋಧಃ ॥ 20 ॥**

'ಯಾರು ಆತ್ಮನಲ್ಲಿದ್ದರೂ ಆತ್ಮನಿಗಿಂತ ಭಿನ್ನನೋ, ಯಾರನ್ನು ಆತ್ಮ ತಿಳಿಯಲಾರನೋ, ಯಾರಿಗೆ ಆತ್ಮನೂ ಶರೀರದಂತಿರುವನೋ, ಯಾರು ಆತ್ಮನನ್ನೂ ನಿಯಂತ್ರಿಸುವನೋ, ಅಂತಹ ಆತ್ಮನು ನಿನ್ನ ಅಂತರ್ಯಾಮಿಯಾಗಿ ಅಮೃತನಾಗಿದ್ದಾನೆ' ಹೀಗೆ ಮಾಧ್ಯಂದಿನಾಯನ ಶಾಖೆಯಲ್ಲೂ 'ಯಾರು ವಿಜ್ಞಾನರೆನಿಸಿರುವ ಜೀವನಲ್ಲಿದ್ದು ವಿಜ್ಞಾನಕ್ಕಿಂತ ಭಿನ್ನನೋ, ಯಾರನ್ನು ವಿಜ್ಞಾನನು ತಿಳಿದಿಲ್ಲವೋ, ಯಾರಿಗೆ ವಿಜ್ಞಾನನು ಶರೀರದಂತಿರುವನೋ' ಎಂದು ಕಾಣ್ವ ಶಾಖೆಯಲ್ಲೂ ಈ ಜೀವನನ್ನು ಅಂತರ್ಯಾಮಿಗಿಂತ ಭಿನ್ನನನ್ನಾಗಿ ಹೇಳಿದ್ದಾರೆ.

'ಇಂತಹ ಅನೇಕ ಜಗತ್ತುಗಳು ಪ್ರತಿಕಲ್ಪದಲ್ಲೂ ವಿಷ್ಣುವಿನಿಂದ ಸಂಹಾರಕ್ಕೊಳಗಾಗುವುದರಿಂದ ಹಾಗೂ ಇದರಲ್ಲಿದ್ದು ಅವನು ಕ್ರೀಡಿಸುವುದರಿಂದ ಈ ಜಗತ್ತು ಅವನ ಶರೀರವಾಗಿದೆ' ಎಂದು ಹೇಳಿರುವುದರಿಂದ 'ಯಸ್ಯ ಪೃಥಿವೀ ಶರೀರಂ' ಎಂದಿರುವುದು ಪರಮಾತ್ಮನಿಗೆ ಅಸಂಗತವಾದುದೇನಲ್ಲ.

**ವಿವರಣೆ :** 1. ಹಿಂದಿನ ಸೂತ್ರದಲ್ಲಿ 'ಅತದ್ಧರ್ಮಾಭಿಲಾಪಾತ್' ಎಂದು ಹೇಳಿ ಜೀವನು ಅಂತರ್ಯಾಮಿಯಲ್ಲ ಎನ್ನಲಾಯಿತು. ಆದರೂ ಯೋಗಿಯಾದ ಜೀವನೊಬ್ಬ ಪೃಥಿವ್ಯಾದಿ ಅನೇಕ ತತ್ತ್ವಗಳಲ್ಲಿ ಇರಬಾರದೇಕೆ? ಎಂಬ ಸಂಶಯವನ್ನು ಇಲ್ಲಿ ನಿರಾಕರಿಸಲಾಗಿದೆ. (ತ.ಪ್ರ.)

2. ಕಾಣ್ವ, ಮಾಧ್ಯಂದಿನಾಯನ ಎಂದು ಯಜುರ್ವೇದದ ಎರಡು ಶಾಖೆಗಳು. ಎರಡೂ ಶಾಖೆಯ ಪಾಠಗಳಲ್ಲೂ ಅಂತರ್ಯಾಮಿಯು ಜೀವನೊಳಗೂ ಇದ್ದಾನೆ. ಅವನನ್ನೂ ನಿಯಂತ್ರಿಸುತ್ತಾನೆ ಎನ್ನಲಾಗಿದೆ. ಇದರಿಂದಾಗಿ ನಿಯಮ್ಯನಾದ ಜೀವ ನಿಯಾಮಕನಾದ ಅಂತರ್ಯಾಮಿ ಎನ್ನಲು ಸಾಧ್ಯವೇ ಇಲ್ಲ.

ಇದೇ ಪ್ರಕರಣದಲ್ಲಿ 'ಯಃ ತೇಜಸಿ ತಿಷ್ಠನ್' ಎಂದೂ 'ಯಃ ತಮಸಿ ತಿಷ್ಠನ್' ಎಂದೂ ವಿಷ್ಣುವು ಲಕ್ಷ್ಮೀದೇವಿಯ ಶ್ರೀರೂಪ ಮತ್ತು ದುರ್ಗಾರೂಪಗಳಲ್ಲೂ ಅಂತರ್ಯಾಮಿಯಾಗಿ ಇದ್ದಾನೆ ಎಂದಿರುವುದರಿಂದ ಲಕ್ಷ್ಮೀದೇವಿಯೂ ಈ ಪ್ರಕರಣದಲ್ಲಿ ಪ್ರಸ್ತುತಳಲ್ಲ.

3. ಪೂರ್ವಪಕ್ಷದ ಸಮರ್ಥನೆಗೆ ಪ್ರಬಲವಾದ ಯುಕ್ತಿ 'ಶರೀರ' ಪದ. ಅದು ಪರಮಾತ್ಮನಿಗೆ ಅನ್ವಯಿಸಲು ಸಾಧ್ಯವಿಲ್ಲ ಎಂದು. ಆದರೆ, ಆ ಪದದಲ್ಲಿ ಶರೀ+ರ ಎಂದು

ಎರಡು ಭಾಗಗಳಿವೆ. 'ಶೀರಣಂ ಅಸ್ಯ ಅಸ್ತೀತಿ ಶರೀ- ವಿಷ್ಣುವಿನಿಂದ ವಿನಾಶೀ'. 'ರಮತೇ ಅಸ್ಮಿನ್ನಿತಿ ರಂ- ವಿಷ್ಣುವಿನ ಕ್ರೀಡಾಸ್ಥಾನ' ಆದ್ದರಿಂದ ಈ ಜಗತ್ತು ವಿಷ್ಣುವಿಗೆ 'ಶರೀರ' ಎನಿಸಿದೆ. ಹೀಗೆ 'ಪೃಥಿವೀಶರೀರಂ' ಎಂಬ ವಚನ ವಿಷ್ಣುವಿಗೂ ಸಂಗತವಾಗಿದೆ. ॥ 20 ॥

## ದ್ವೈತದರ್ಶನದಲ್ಲಿ ಸೂತ್ರಗಳ ಅರ್ಥ

**1. ಓಂ ॥ ಅಂತರ್ಯಾಮೀ ಅಧಿದೈವಾದಿಷು ತದ್ಧರ್ಮ ವ್ಯಪದೇಶಾತ್ ॥ ಓಂ**

ಅಧಿದೈವಾದಿಷು= ಅಧಿದೈವ- ಅಧಿಭೂತ- ಅಧ್ಯಾತ್ಮ ಪ್ರಕರಣಗಳಲ್ಲಿ ತದ್ಧರ್ಮವ್ಯಪ- ದೇಶಾತ್, ತಸ್ಯ= ಆ ವಿಷ್ಣುವಿಗೆ ಸಂಬಂಧಿಸಿದ ಧರ್ಮಸ್ಯ= ಪೃಥಿವ್ಯಾದಿಗಳಿಗೆ ಅಗೋಚರನಾಗಿ ಅವುಗಳ ಒಳಗಿದ್ದು ನಿಯಮನ ಮಾಡುವುದು ಈ ಮೊದಲಾದ ಧರ್ಮಗಳನ್ನು ವ್ಯಪದೇಶಾತ್= ಹೇಳಿರುವುದರಿಂದ ಅಂತರ್ಯಾಮೀ= 'ಏಷ ತೇ ಆತ್ಮಾ ಅಂತರ್ಯಾಮಿ' ಎಂದು ಅಂತರ್ಯಾಮಿಯಾಗಿ ಹೇಳಲ್ಪಟ್ಟವನು, ತತ್ತು= ಬ್ರಹ್ಮನೇ.

(ಅತ್ರ ನಯೇ ಅಂತಃಸ್ಥಿತಿರೂಪ ಭಾವಯುಕ್ತಂ ನಿಯಮನಾಖ್ಯಂ ಕ್ರಿಯಾತ್ಮಕಂ ಲಿಂಗಂ ಸಮನ್ವೀಯತೇ। ಅಧಿದೈವಾದಿ ಪದೇನ ತತ್ಪ್ರಕರಣಂ ಲಕ್ಷ್ಯತೇ। ತದಿತಿ ತಂತ್ರಂ। ತತ್ತು ಇತಿ ಅಸ್ತಿ। 'ಏಷ ತೇ ಆತ್ಮಾ ಅಂತರ್ಯಾಮೀ। ಅಮೃತಃ' ಇತಿ ಶ್ರುತಃ ಅಂತರ್ಯಾಮೀ ಬ್ರಹ್ಮೈವ। ಕುತಃ ? ಅಧಿದೈವ- ಅಧಿಭೂತಾದಿ ಪ್ರಕರಣೇಷು ತಸ್ಯ= ಅಂತರ್ಯಾಮಿಣಃ ಸಂಬಂಧಿತಯಾ ತಸ್ಯ= ಬ್ರಹ್ಮಣಃ ಧರ್ಮಸ್ಯ= ಪೃಥಿವ್ಯಾದ್ಯವಿದಿತತ್ವ- ಆಂತರತ್ವಾದೇಃ ವ್ಯಪದೇಶಾತ್। ತದ್ಧರ್ಮವ್ಯಪದೇಶಾತ್ ಇತ್ಯೇವ ಪೂರ್ತೌ ಅಧಿದೈವೇತ್ಯುಕ್ತಿಃ ಪೃಥಿವ್ಯಾದೇಃ ಚೇತನತ್ವಸೂಚನಾರ್ಥಾ।)

**2. ಓಂ ॥ ನ ಚ ಸ್ಮಾರ್ತಂ ಅತದ್ಧರ್ಮಾಭಿಲಾಪಾತ್ ॥ ಓಂ**

ಅತದ್ಧರ್ಮಾಭಿಲಾಪಾತ್= ಪ್ರಕೃತಿಯ ತ್ರಿಗುಣತ್ವಧರ್ಮವನ್ನಾಗಲೀ ಜೀವನ ಸಂಸಾರಿತ್ವಧರ್ಮವನ್ನಾಗಲೀ ಈ ಪ್ರಕರಣದಲ್ಲಿ ಹೇಳದಿರುವುದರಿಂದ ಸ್ಮಾರ್ತಂ= ಸಾಂಖ್ಯ ಸ್ಮೃತಿಯಲ್ಲಿ ಹೇಳಿರುವ ಪ್ರಕೃತಿಯಾಗಲೀ ಅಥವಾ ಜೀವಾತ್ಮನಾಗಲೀ ನಚ= ಅಂತರ್ಯಾಮಿಗಳಲ್ಲ.

(ಚಃ ತು ಅರ್ಥೇ। ಶಾರೀರಶ್ಚೇತಿ ಅನುಕೃಷ್ಯತೇ। ಸ್ಮಾರ್ತಂ= ಸಾಂಖ್ಯಸ್ಮೃತ್ಯುಕ್ತಂ ಪ್ರಧಾನಂ। ಅಂತರ್ಯಾಮೀ ತದೇವ, ನ ತು ಸ್ಮಾರ್ತಂ ಶಾರೀರೋ ಜೀವಶ್ಚ। ಕುತಃ ? ಅತದ್ಧರ್ಮಾಭಿಲಾಪಾತ್। ತಯೋಃ= ಸ್ಮಾರ್ತಜೀವಯೋಃ ಧರ್ಮಾಣಾಂ= ತ್ರಿಗುಣತ್ವ- ಸಂಸಾರಿತ್ವಾದೀನಾಂ ಅಭಿಲಾಪಾಭಾವಾತ್। ಸ್ಮಾರ್ತಮಿತ್ಯುಕ್ತಿಃ ಸ್ಮೃತ್ಯುಕ್ತದಿಶಾ ಸರ್ವಸ್ಯ ತದುಪಾದಾನಕತಯಾ ತದಭೇದೇನ ತತ್ಸ್ವರೂಪತ್ವಾಭಿಪ್ರಾಯೇಣ ಪೃಥಿವ್ಯಾದಿ ಶರೀರತ್ವಂ ಇತಿ ಪೂರ್ವಪಕ್ಷೇ ಯುಕ್ತಿಂ ಸೂಚಯಿತುಂ। ಶರೀರೇತ್ಯುಕ್ತಿರಪಿ ಶಾರೀರತ್ವಾತ್ ತತ್ತ ಚ್ಛರೀರತ್ವಂ ತತ್ತದಭಿಮಾನಿಜೀವಸ್ಯ ಯುಕ್ತಮಿತಿ ಸೂಚಯಿತುಮಿತ್ಯಾಹುಃ।)

**3. ಓಂ ॥ ಶಾರೀರಶ್ಚೋಭಯೇಽಪಿ ಹಿ ಭೇದೇನೈನಮಧೀಯತೇ ॥ ಓಂ**

ಹಿಂದಿನ ಸೂತ್ರದಿಂದ 'ನ' ಶಬ್ದವನ್ನು ಇಲ್ಲೂ ಸೇರಿಸಿಕೊಳ್ಳಬೇಕು. ಉಭಯೇಽಪಿ= ಮಾಧ್ಯಂದಿನಾಯನಶಾಖೆಯವರು ಮತ್ತು ಕಾಣ್ವಶಾಖೆಯವರು ಏನಂ= ಜೀವನನ್ನು ಭೇದೇನ= ಅಂತರ್ಯಾಮಿಗಿಂತ ಭಿನ್ನನನ್ನಾಗಿ ಅಧೀಯತೇ= ಪಠಿಸುತ್ತಾರೆ. ಆದ್ದರಿಂದ ಶಾರೀರಃ= ಜೀವಾತ್ಮನು ನ= ಅಂತರ್ಯಾಮಿ ಅಲ್ಲ.

(ನೇತಿ ವರ್ತತೇ । 'ಆತ್ಮನೋ ಅಂತರಃ' ಇತಿ ಮಾಧ್ಯಂದಿನಾಯನಾಃ 'ವಿಜ್ಞಾನಾದಂತರ' ಇತಿ ಕಾಣ್ವಾಶ್ಚ ಏನಂ= ಜೀವಂ ಪ್ರಕೃತಾತ್ ಅಂತರ್ಯಾಮಿಣಃ ಭೇದೇನ ಅಧೀಯತೇ ಹಿ= ಯಸ್ಮಾತ್ ಅತೋ ನ ಶಾರೀರಶ್ಚ ಅಂತರ್ಯಾಮೀ ।)

## ಶಾಂಕರಭಾಷ್ಯದಲ್ಲಿ ಸೂತ್ರಗಳ ಅರ್ಥ

**1. ಅಂತರ್ಯಾಮ್ಯಧಿದೈವಾದಿಷು ತದ್ಧರ್ಮವ್ಯಪದೇಶಾತ್ ।**

**ಪೂರ್ವಪಕ್ಷ-** ಬೃಹದಾರಣ್ಯಕೋಪನಿಷತ್ತಿನಲ್ಲಿ 'ಯಃ ಪೃಥಿವ್ಯಾಂ ತಿಷ್ಠನ್' ಎಂದು ಮುಂತಾಗಿ ದೇವತೆಗಳ, ಲೋಕಗಳ, ವೇದಗಳ, ಯಜ್ಞದ, ಪ್ರಾಣಿಗಳ ಮತ್ತು ಆತ್ಮನ ಒಳಗೆ ನಿಯಾಮಕನಾಗಿ ಇರುವ ವ್ಯಕ್ತಿಯ ಪ್ರಸ್ತಾವ ಮಾಡಲಾಗಿದೆ. ಅದು ಅದೃಷ್ಟದ ಮೂಲಕ ಜೀವನಾಗಬಹುದು, ಯೋಗಿಯೊಬ್ಬನಾಗಿರಬಹುದು ಅಥವಾ ದೇವತಾವಿಶೇಷವಾಗಿರ ಬಹುದು. ಬ್ರಹ್ಮನಂತೂ ಅಲ್ಲ. ಅವನಿಗೆ ಶರೀರವಿಲ್ಲ. ಅಂದಮೇಲೆ ಅವನು ನಿಯಾಮಕನಾಗಲಾರ.

**ಸಿದ್ಧಾಂತ :** ಸರ್ವನಿಯಾಮಕತ್ವ ಪರಮಾತ್ಮನ ಧರ್ಮ. ನಿಯಮಿಸಲ್ಪಡುವ ಚರಾಚರ ಪ್ರಪಂಚವೇ ಅವನ ಶರೀರ ಅಥವಾ ಅಚಿಂತ್ಯಮಾಯಾಶಕ್ತಿಯ ಸಹಾಯದಿಂದ ಅವನು ಶರೀರವಿಲ್ಲದೆಯೂ ಈ ಪ್ರಪಂಚವನ್ನು ನಿಯಮಿಸಬಲ್ಲ. ಆತ್ಮನಿಗೂ ಮತ್ತೊಬ್ಬ ನಿಯಾಮಕನಿರುವುದಾದರೆ ಅವನಿಗೆ ಇನ್ನೊಬ್ಬ ನಿಯಾಮಕನಿರಬೇಕು. ಹೀಗೆ ಅನವಸ್ಥಾದೋಷವೂ ಇಲ್ಲ. ನಿಯಮ್ಯನಾದ ಜೀವ, ನಿಯಾಮಕನಾದ ಪರಮಾತ್ಮ ಇವರಿಬ್ಬರಿಗೆ ತಾತ್ವಿಕ ಬೇಧವೇ ಇಲ್ಲ. ಅವರಿಬ್ಬರೂ ಅಭಿನ್ನರು.

ಇದರಂತೆ, ಈ ಪ್ರಕರಣದಲ್ಲಿ 'ಏಷ ತೇ ಆತ್ಮಾ ಅಂತರ್ಯಾಮೀ ಅಮೃತಃ' ಎಂದು ಆತ್ಮತ್ವ ಅಮೃತತ್ವ ಧರ್ಮಗಳನ್ನೂ 'ಅದೃಷ್ಟೋಽಶ್ರುತಃ' ಎಂದು ಮುಂತಾಗಿ ಅದೃಶ್ಯತ್ವಾದಿ ಧರ್ಮಗಳನ್ನೂ ಹೇಳಲಾಗಿದೆ. ಅವೆಲ್ಲವೂ ಬ್ರಹ್ಮ ಧರ್ಮಗಳು. ಆದ್ದರಿಂದ ಬ್ರಹ್ಮನೇ ಅಂತರ್ಯಾಮಿ.

**2. ನ ಚ ಸ್ಮಾರ್ತಮತದ್ಧರ್ಮಾಭಿಲಾಪಾತ್ ।**

ಸಾಂಖ್ಯ ಸ್ಮೃತ್ಯುಕ್ತವಾದ ಪ್ರಕೃತಿಗೆ 'ಅಪ್ರತರ್ಕ್ಯಮವಿಜ್ಞೇಯಂ' ಎಂದು ಮನುಸ್ಮೃತಿಯಲ್ಲಿ ಹೇಳಿದಂತೆ ಈ ಪ್ರಕರಣದಲ್ಲಿ ಹೇಳಲಾದ ಅದೃಶ್ಯತ್ವ ಧರ್ಮವಿದ್ದರೂ

ಅದು ಪ್ರಕೃತದಲ್ಲಿ ಅಂತರ್ಯಾಮಿಯಾಗಿ ವಿವಕ್ಷಿತವಲ್ಲ. ಏಕೆಂದರೆ, 'ದ್ರಷ್ಟೃತ್ವ, ಆತ್ಮತ್ವ' ಧರ್ಮಗಳನ್ನೂ ಪ್ರಕೃತದಲ್ಲಿ ಹೇಳಲಾಗಿದೆ. ಆ ಧರ್ಮಗಳು ಜಡವಾದ ಪ್ರಕೃತಿಯಲ್ಲಿಲ್ಲ.

ಈ ವಿಷಯವನ್ನು 'ಈಕ್ಷತ್ಯಧಿಕರಣದಲ್ಲೇ ಹೇಳಲಾಗಿದ್ದರೂ ಮತ್ತೆ ಇಲ್ಲಿ ಆಕ್ಷೇಪಕ್ಕೆ ಇಲ್ಲಿ ಹೇಳಿದ 'ಅದೃಶ್ಯತ್ವ' ಧರ್ಮ ಪ್ರಕೃತಿಗೂ ಸಂಬಂಧಿಸಿರುವುದು ಕಾರಣ.

**3. ಶಾರೀರಶ್ಚೋಭಯೇಽಪಿ ಹಿ ಭೇದೇನೈನಮಧೀಯತೇ ॥**

ಶಾರೀರನೆನಿಸಿದ ಜೀವನೂ ಅಂತರ್ಯಾಮಿಯಲ್ಲ. ಅವನು ಚೇತನನಾದುದರಿಂದ ದ್ರಷ್ಟೃ ಆಗಬಹುದು, ಅದೃಶ್ಯನೂ ಆಗಿರಬಹುದು. ಆದರೆ ಕಾಣ್ವ ಮತ್ತು ಮಾಧ್ಯಂದಿನ ಶಾಖೆಯವರಿಬ್ಬರೂ ಅವನನ್ನು ನಿಯಮ್ಯರ ಗುಂಪಿನಲ್ಲಿ ಸೇರಿಸಿ ನಿಯಾಮಕ ಪರಮಾತ್ಮನಿಂದ ಭಿನ್ನನನ್ನಾಗಿ ಪರಿಗಣಿಸಿದ್ದಾರೆ.

ಇಲ್ಲಿ ಹೇಳಿದ ಭೇದ ವಾಸ್ತವವಲ್ಲ. ಬ್ರಹ್ಮ ವ್ಯಾಪ್ತನಾದವನು. ಶರೀರ ಸಂಬಂಧವಿರುವ ಆ ಬ್ರಹ್ಮತತ್ವವೇ ಜೀವ. ವಿಶಾಲವಾದ ಆಕಾಶಕ್ಕೂ ಮನೆಯೊಳಗಿರುವ ಆಕಾಶಕ್ಕೂ ಇರುವ ಸಂಬಂಧ ಜೀವೇಶ್ವರರಿಗೆ. ಆದ್ದರಿಂದ ಅವರಿಬ್ಬರೂ ಅಭಿನ್ನರು.

## ಚಂದ್ರಿಕಾದಲ್ಲಿ ಮಾಡಿರುವ ವಿಮರ್ಶೆ

ಇಲ್ಲಿ 'ಯ ಆತ್ಮನಿ ತಿಷ್ಠನ್' 'ಯಃ ವಿಜ್ಞಾನೇ ತಿಷ್ಠನ್' ಎಂದು ಈಶ್ವರನು ಜೀವನಿಗೆ ನಿಯಾಮಕ ಎಂದು ಹೇಳಲಾಗಿದೆ. ಅವರಿಬ್ಬರಿಗೆ ಅಭೇದವಿದ್ದರೆ ಇದು ಹೇಗೆ ಸಾಧ್ಯ? ಕಾಲ್ಪನಿಕ ಭೇದವಿರುವುದರಿಂದ ಅದು ಸಾಧ್ಯವೆನ್ನುವುದಾದರೆ ಈಶ್ವರನಿಗೂ ಕಾಲ್ಪನಿಕ ಭೇದವಿರುವ ಮತ್ತೊಬ್ಬ ನಿಯಾಮಕ ಏಕಿರಬಾರದು? ಈಶ್ವರ ಸ್ವತಂತ್ರನಾದುದರಿಂದ ಅವನಿಗೆ ಮತ್ತೊಬ್ಬ ನಿಯಾಮಕ ಇಲ್ಲ ಎನ್ನುವುದಾದರೆ ಇದೇ ಉತ್ತರವನ್ನು ಮೊದಲೇ ಹೇಳಬಹುದಲ್ಲ ! ಜೀವನೂ ಈಶ್ವರನೂ ಭಿನ್ನರು. ಆದರೂ ಜೀವ ಅಸ್ವತಂತ್ರನಾದುದರಿಂದ ನಿಯಮ್ಯ, ಈಶ್ವರ ಸ್ವತಂತ್ರನಾದುದರಿಂದ ನಿಯಾಮಕ. ಹೀಗೆಯೇ ಅನವಸ್ಥಾ ಪರಿಹಾರ ಮಾಡಲು ಬರುವಾಗ 'ಅವರಿಬ್ಬರಿಗೆ ಭೇದವೇ ಇಲ್ಲವಾದುದರಿಂದ ಅನವಸ್ಥಾ ಇಲ್ಲ' ಎಂಬ ಉತ್ತರವನ್ನೇಕೆ ಕೊಡಬೇಕು?

ಸೂತ್ರದಲ್ಲಿ 'ಭೇದೇನೈನಮಧೀಯತೇ' ಎಂದು ಸ್ಪಷ್ಟವಾಗಿ ನಿಯಮ್ಯ ನಿಯಾಮಕರಿಗೆ ಭೇದವನ್ನೇ ಹೇಳಿರುವಾಗ ಆ ಭೇದ ವ್ಯಾವಹಾರಿಕ ಎನ್ನುವುದಾದರೆ ಜಡವಾದ ಶರೀರಕ್ಕೂ ಆತ್ಮನಿಗೂ ಅಭೇದವನ್ನೇ ಏಕೆ ಹೇಳಬಾರದು? ಶರೀರಾತ್ಮರಿಗೆ ಭೇದವನ್ನು ತಿಳಿಸುವ ಪ್ರಮಾಣಗಳು ಅತಾತ್ವಿಕ ಭೇದವನ್ನು ಹೇಳುತ್ತವೆ ಎಂದೇಕೆ ಹೇಳಬಾರದು? ಆದ್ದರಿಂದ ಪ್ರಮಾಣಸಿದ್ಧವಾದ ಭೇದವನ್ನು ಕಾಲ್ಪನಿಕ ಎನ್ನುವುದು ಉಚಿತವಲ್ಲ.

## ರಾಮಾನುಜಭಾಷ್ಯದಲ್ಲಿರುವ ವಿಶೇಷ

ರಾಮಾನುಜಭಾಷ್ಯದಲ್ಲೂ ಈ ಅಧಿಕರಣ ಸಿದ್ಧಾಂತದಲ್ಲಿ ಹೆಚ್ಚಿನ ವಿಶೇಷಗಳೇನೂ ಇಲ್ಲ. ಆದರೆ ಸೂತ್ರಪಾಠದಲ್ಲಿ ವಿಶೇಷವಿದೆ. ಮೊದಲನೆಯ ಸೂತ್ರ-

**ಅಂತರ್ಯಾಮ್ಯಧಿದೈವಾಧಿಲೋಕಾದಿಷು ತದ್ಧರ್ಮವ್ಯಪದೇಶಾತ್ ।**

ಸೂತ್ರದಲ್ಲಿ 'ಅಧಿಲೋಕ' ಎಂಬ ಪದ ಹೆಚ್ಚಿನದು. 'ಕಾಣ್ವಶಾಖೆಯಲ್ಲಿ 'ಅಧಿ ದೈವ'ಗಳ ಅಂತರ್ಯಾಮಿಯಾಗಿ ಪ್ರಸ್ತಾವವಿದ್ದರೆ ಮಾಧ್ಯಂದಿನ ಶಾಖೆಯಲ್ಲಿ 'ಅಧಿ ಲೋಕ'ಗಳ ಅಂತರ್ಯಾಮಿ ಹಾಗೂ ಇನ್ನೂ ಹೆಚ್ಚಿನ ತತ್ತ್ವಗಳ ಅಂತರ್ಯಾಮಿಯ ಪ್ರಸ್ತಾವ ಇದೆ ಎಂದು ಸೂಚಿಸಲು ಆ ಪದವನ್ನು ಸೂತ್ರದಲ್ಲಿ ವ್ಯಾಸರು ಸೇರಿಸಿದ್ದಾರೆ' ಎಂಬ ವಿವರಣೆ ಆ ಭಾಷ್ಯದಲ್ಲಿದೆ. ಎರಡನೆಯ ಸೂತ್ರಪಾಠವೂ ಹೀಗಿದೆ-

**ನ ಚ ಸ್ಮಾರ್ತಂ ಅತದ್ಧರ್ಮಾಭಿಲಾಪಾತ್ ಶಾರೀರಶ್ಚ ॥**

ದ್ವೈತಾದ್ವೈತಭಾಷ್ಯಗಳಲ್ಲಿ ಮೂರನೆಯ ಸೂತ್ರದಲ್ಲಿರುವ 'ಶಾರೀರಶ್ಚ' ಎಂಬ ಪದ ಈ ಭಾಷ್ಯದಂತೆ ಎರಡನೆಯ ಸೂತ್ರದಲ್ಲಿದೆ. ದ್ವೈತಭಾಷ್ಯದಲ್ಲೂ ಮುಂದಿನ ಸೂತ್ರದಲ್ಲಿರುವ ಈ ಪದವನ್ನು ಈ ಸೂತ್ರದಲ್ಲೂ ಅನುಕರ್ಷ ಮಾಡಿಕೊಳ್ಳಲಾಗಿದೆ.

ರಾಮಾನುಜಭಾಷ್ಯದಲ್ಲಿ ಜೀವನೇ ಅಂತರ್ಯಾಮಿ ಎಂದು ಪೂರ್ವಪಕ್ಷ. 'ನಾನ್ಯತೋಽಸ್ತಿ ದ್ರಷ್ಟಾ' ಎಂದು ಇಲ್ಲಿ ಹೇಳಿರುವ ದ್ರಷ್ಟೃತ್ವ-ಇಂದ್ರಿಯಗಳ ಮೂಲಕ ವಸ್ತುಗಳನ್ನು ಗ್ರಹಿಸುವ ಸಾಮರ್ಥ್ಯ-ಅವನ ಧರ್ಮವಾದುದರಿಂದ ಅವನೇ ಅಂತರ್ಯಾಮಿ ಎಂದು ಪೂರ್ವಪಕ್ಷದ ಅಭಿಪ್ರಾಯ. ಆದರೆ, ಸಕಲಲೋಕ, ಸಕಲ ಆತ್ಮ, ಸಕಲದೇವತೆಗಳ ಒಳಗಿದ್ದು ನಿಯಂತ್ರಿಸುವ ಕಾರ್ಯ ಜೀವನಿಂದಾಗದು. ಆದ್ದರಿಂದ ಪರಮಾತ್ಮನೇ ನಿಯಾಮಕ, ಎಂದು ಸಿದ್ಧಾಂತ.

## ಚಂದ್ರಿಕಾದಲ್ಲಿ ಮಾಡಿರುವ ವಿಮರ್ಶೆ

ಅದ್ವೈತ ಮತ್ತು ವಿಶಿಷ್ಟಾದ್ವೈತ ದರ್ಶನಗಳಲ್ಲಿ 'ಅಧಿದೈವಾದಿಷು ಅಂತರ್ಯಾಮೀ ಪರಮಾತ್ಮಾ' ಎಂದು ಸೂತ್ರದಲ್ಲಿ ಪದಗಳ ಅನ್ವಯ. ಈ ರೀತಿ ಅನ್ವಯ ಮಾಡಿದಾಗ ಅಧಿ ದೈವಾದಿಷು ಎಂಬ ಪದ ವ್ಯರ್ಥ. 'ಅಂತಃ ತದ್ಧರ್ಮೋಪದೇಶಾತ್' ಎಂಬ ಹಿಂದಿನ ಪ್ರಥಮಪಾದದ ಸೂತ್ರದಲ್ಲಿರುವಂತೆ 'ಅಂತರ್ಯಾಮೀ ತದ್ಧರ್ಮವ್ಯಪದೇಶಾತ್' ಎಂದಿಷ್ಟೆ ಸೂತ್ರ ಸಾಕಾಗುತ್ತದೆ. ದ್ವೈತದರ್ಶನದಲ್ಲಿ 'ಅಧಿದೈವಾದಿಷು ತದ್ಧರ್ಮವ್ಯಪದೇಶಾತ್' ಎಂದು ಅನ್ವಯ. ಅಧಿದೈವಾದಿಷು ಎಂಬ ಪದ ಸಾಧ್ಯದಲ್ಲಿ ಸೇರಿಲ್ಲ. ಹೇತುವಿನಲ್ಲಿ ಸೇರಿದೆ. 'ಅಧಿದೈವಾದಿ ಪ್ರಕರಣದಲ್ಲಿ ವಿಷ್ಣುವಿನ ಧರ್ಮವನ್ನು ಹೇಳಿರುವುದರಿಂದ ಈ ಪ್ರಕರಣದಲ್ಲಿ ಅಂತರ್ಯಾಮಿತಯಾ ಹೇಳಲ್ಪಟ್ಟವನು ವಿಷ್ಣು' ಎಂದರ್ಥ. ಇಲ್ಲಿರುವ ಪೃಥಿವೀ ಮೊದಲಾದ

ಶಬ್ದಗಳಿಂದ ಜಡವಸ್ತುಗಳು ವಿವಕ್ಷಿತವಲ್ಲ. ಅದರ ಅಭಿಮಾನಿದೇವತೆಯೇ ವಿವಕ್ಷಿತ ಎಂದು ಸೂಚಿಸಲು 'ಅಧಿದೈವಾದಿಷು' ಎಂಬ ಸೂತ್ರದ ಶಬ್ದ ದ್ವೈತದರ್ಶನದಲ್ಲಿ ಸಾರ್ಥಕ.

**॥ ಇಲ್ಲಿಗೆ ಅಂತರ್ಯಾಮ್ಯಧಿಕರಣ ಮುಗಿಯಿತು ॥**

# ಅದೃಶ್ಯತ್ವಾಧಿಕರಣ - 6

ಅದೃಶ್ಯತ್ವಾದಿಗುಣಾಃ ವಿಷ್ಣೋರುಕ್ತಾಃ। ತತ್ರ-

ಯತ್ತದದ್ರೇಶ್ಯಂ, ಅಗ್ರಾಹ್ಯಂ, ಅಗೋತ್ರಂ, ಅವರ್ಣಂ, ಅಚಕ್ಷುಃಶ್ರೋತ್ರಂ, ತದಪಾಣಿಪಾದಂ, ನಿತ್ಯಂ, ವಿಭುಂ, ಸರ್ವಗತಂ, ಸುಸೂಕ್ಷ್ಮಂ, ತದವ್ಯಯಂ ಯದ್ಭೂತಯೋನಿಂ ಪರಿಪಶ್ಯಂತಿ ಧೀರಾಃ॥ (ಮುಂ.1.1.6)

ಇತ್ಯುಕ್ತ್ವಾ-

ಯಥೋರ್ಣನಾಭಿಃ ಸೃಜತೇ ಗೃಹ್ಣತೇ ಚ
ಯಥಾ ಪೃಥಿವ್ಯಾಂ ಓಷಧಯಃ ಸಂಭವಂತಿ।
ಯಥಾ ಸತಃ ಪುರುಷಾತ್ ಕೇಶಲೋಮಾನಿ
ತಥಾಕ್ಷರಾತ್ ಸಂಭವತೀಹ ವಿಶ್ವಮ್॥ (ಮುಂ-1.1.7)

ಇತ್ಯುಕ್ತ್ವಾ ತಸ್ಮಾಚ್ಚ 'ಅಕ್ಷರಾತ್ ಪರತಃ ಪರಃ' (ಮುಂ.2-1-2) ಇತಿ ಪರಃ ಪ್ರತೀಯತೇ। ಅತೋ ಬ್ರವೀತಿ-

**ಓಂ॥ ಅದೃಶ್ಯತ್ವಾದಿಗುಣಕೋ ಧರ್ಮೋಕ್ತೇಃ॥ ಓಂ**

ಪೃಥಿವ್ಯಾದಿ ದೃಷ್ಟಾಂತಂ ಉಕ್ತ್ವಾ 'ಅಕ್ಷರಾತ್ ಸಂಭವತೀಹ ವಿಶ್ವಮ್ (1.1.7) ಇತ್ಯತಃ ಪರಂ ತತ್ಪರತಃಪರಾಭಿಧಾನಾತ್ 'ಕೂಟಸ್ಥೋಽಕ್ಷರ ಉಚ್ಯತೇ' (ಗೀ.15.16) ಇತಿ ಸ್ಮೃತೇಶ್ಚ ಪ್ರಕೃತೇಃ ಪ್ರಾಪ್ತಿಃ। ಬ್ರಹ್ಮಶಬ್ದಾತ್ ಪರತಃ ಪರಾಭಿಧಾನಾದೇವ ಚ ಹಿರಣ್ಯಗರ್ಭಸ್ಯ।

'ತಮೇವಂ ವಿದ್ವಾನಮೃತ ಇಹ ಭವತಿ' (ತೈ.ಆ.3.12.7)

'ತತ್ಕರ್ಮ ಹರಿತೋಷಂ ಯತ್ ಸಾ ವಿದ್ಯಾ ತನ್ಮತಿರ್ಯಯಾ।'

'ಅಥ ದ್ವೇ ವಾವ ವಿದ್ಯೇ ವೇದಿತವ್ಯೇ ಪರಾ ಚೈವಾಪರಾ ಚ।

ತತ್ರ ಯೇ ವೇದಾ ಯಾನ್ಯಂಗಾನಿ ಯಾನ್ಯುಪಾಂಗಾನಿ ಯಾನಿ ಪ್ರತ್ಯಂಗಾನಿ

ಸಾಽಪರಾ। ಅಥ ಪರಾ ಯಯಾ ಸ ಹರಿರ್ವೇದಿತವ್ಯಃ।

ಯೋಽಸಾವದೃಶ್ಯೋ ನಿರ್ಗುಣಃ ಪರಃ ಪರಮಾತ್ಮಾ॥'

**ಇತ್ಯಾದಿನಾ ತದ್ಧರ್ಮತ್ವೇನಾವಗತ-ಪರವಿದ್ಯಾವಿಷಯತ್ವೋಕ್ತೇಃ ವಿಷ್ಣುರೇವ ಅದೃಶ್ಯತ್ವಾದಿಗುಣಕಃ ।। 21 ।।**

ಆನಂದಮಯಾಧಿಕರಣದಲ್ಲಿ ವಿಷ್ಣುವಿಗೆ (ಆನಂದಮಯನಿಗೆ) 'ಅದೃಶ್ಯತ್ವಾದಿ' ಗುಣಗಳನ್ನು ಹೇಳಲಾಗಿದೆ. ಆದರೆ ಮುಂಡಕೋಪನಿಷತ್ತಿನಲ್ಲಿ 'ಯಾವ ತತ್ತ್ವವು ಅದೃಶ್ಯವೋ, ಮನಸ್ಸಿನಿಂದ ತಿಳಿಯಲಾಗದುದೋ ವಸಿಷ್ಠಾದಿ ಗೋತ್ರಗಳು ಯಾವುದಕ್ಕೆ ಇಲ್ಲವೋ ಯಾವುದಕ್ಕೆ (ಪ್ರಾಕೃತ) ಕಣ್ಣು ಕಿವಿಗಳು ಇಲ್ಲವೋ (ಪ್ರಾಕೃತ) ಕೈಕಾಲುಗಳು ಇಲ್ಲವೋ ಅಂತಹ ನಿತ್ಯವಾದ, ಸಮರ್ಥವಾದ, ಸರ್ವಗತವಾದ, ಅತ್ಯಂತ ಸೂಕ್ಷ್ಮವಾದ, ದೇಹನಾಶವಿಲ್ಲದ ತತ್ತ್ವವನ್ನು ಜ್ಞಾನಿಗಳು ಸಕಲ ಪ್ರಾಣಿಗಳಿಗೂ ಕಾರಣವನ್ನಾಗಿ ತಿಳಿಯುತ್ತಾರೆ' ಹೀಗೆ ಹೇಳಿ 'ಜೇಡರ ಹುಳುವು ಬಲೆಯನ್ನು ಹೆಣೆದು ತಾನೇ ನುಂಗುವಂತೆ, ಭೂಮಿಯಲ್ಲಿ (ಬೀಜಗಳಿಂದ) ಸಸ್ಯಗಳು ಹುಟ್ಟುವಂತೆ, ಜೀವಿಸಿರುವ ದೇಹದಿಂದ ರೋಮ-ಕೂದಲುಗಳು ಹುಟ್ಟುವಂತೆ ಅಕ್ಷರ ತತ್ವದಿಂದ ಈ ಜಗತ್ತು ಹುಟ್ಟುತ್ತದೆ' ಎಂದು ಅಕ್ಷರ ತತ್ವವನ್ನು ಪ್ರಸ್ತಾಪ ಮಾಡಿ 'ಅಂತಹ ಅಕ್ಷರತತ್ವಕ್ಕಿಂತ ಉತ್ತಮನಾದವನಿಗಿಂತಲೂ ಉತ್ತಮ' ಎಂದು ಸರ್ವೋತ್ತಮನಾದ (ಅಕ್ಷರತತ್ವಕ್ಕಿಂತಲೂ ಉತ್ತಮನಾದ) ವಿಷ್ಣುವನ್ನು ಹೇಳಿದಂತೆ ಕಾಣುತ್ತದೆ. ಇಲ್ಲಿ ಅದೃಶ್ಯನಾದ ಅಕ್ಷರ ಯಾರು ಎಂಬ ಸಂಶಯಕ್ಕೆ ಅವಕಾಶವಿರುವುದರಿಂದ ಸೂತ್ರಕಾರರು 'ಅದೃಶ್ಯತ್ವಾದಿ ಗುಣಕಃ' ಇತ್ಯಾದಿ ಸೂತ್ರವನ್ನು ರಚಿಸಿದ್ದಾರೆ.

ಇಲ್ಲಿ ಪೃಥಿವಿಯ ನಿದರ್ಶನವನ್ನು ಕೊಟ್ಟು 'ಅಕ್ಷರ ತತ್ವದಿಂದ ವಿಶ್ವವು ಹುಟ್ಟುತ್ತದೆ' ಎಂದು ಹೇಳಿ ಅನಂತರ (ಪರಂ) ಅದಕ್ಕಿಂತ ಉತ್ತಮೋತ್ತಮನನ್ನಾಗಿ (ವಿಷ್ಣುವನ್ನು) ಹೇಳಿರುವುದರಿಂದ 'ಕೂಟಸ್ಥೋಽಕ್ಷರ ಉಚ್ಯತೇ' ಎಂದು ಗೀತೆಯಲ್ಲಿ ಅಕ್ಷರಶಬ್ದದಿಂದ ಪ್ರಕೃತಿಯನ್ನು ಹೇಳಿರುವುದರಿಂದಲೂ ಪ್ರಕೃತಿತತ್ವವೇ ಅಕ್ಷರ ಶಬ್ದದಿಂದ ಉಲ್ಲೇಖಿಸಲ್ಪಟ್ಟಿರಬಹುದು. ಅಥವಾ, 'ಸ ಬ್ರಹ್ಮವಿದ್ಯಾಂ' ಎಂದು ಈ ಪ್ರಕರಣದಲ್ಲಿ ಬ್ರಹ್ಮಶಬ್ದ ಮತ್ತು ವಿಷ್ಣುವು ಅಕ್ಷರ ತತ್ವಕ್ಕಿಂತ ಉತ್ತಮೋತ್ತಮ ಎಂದಿರುವುದರಿಂದಲೂ ಚತುರ್ಮುಖ ಬ್ರಹ್ಮನು ಅಕ್ಷರನಾಗಿರಬಹುದು. (ಇದು ಪೂರ್ವಪಕ್ಷ)

ಸಿದ್ಧಾಂತ - 'ಅವನನ್ನು ಹೀಗೆ (ಪುರುಷ ಸೂಕ್ತದಲ್ಲಿ ಹೇಳಿದಂತೆ) ತಿಳಿದರೆ ಮಾತ್ರ ಮೋಕ್ಷ' ಎಂದೂ 'ಪರ-ಅಪರ ಎಂಬ ಎರಡು ವಿದ್ಯೆಗಳಿವೆ ಎಂದು ತಿಳಿಯಬೇಕು. ಅವುಗಳಲ್ಲಿ ವೇದಗಳು, ವೇದಾಂಗಗಳು (ಶಿಕ್ಷಾದಿ ಷಡಂಗಗಳು) ಉಪಾಂಗಗಳು (ಆಯುರ್ವೇದ, ಧನುರ್ವೇದ, ಗಾಂಧರ್ವವಿದ್ಯೆ), ಪ್ರತ್ಯಂಗಗಳು (ಇತರ ಕಲಾವಿದ್ಯೆ ಗಳು) ಹೀಗೆ ಯಾವುದೆಲ್ಲ ಇವೆಯೋ ಅವೆಲ್ಲವೂ ಅಪರವಿದ್ಯೆಗಳು. ಇನ್ನು ಪರವಿದ್ಯೆ ಎಂದರೆ, ಯಾವುದರಿಂದ ಶ್ರೀಹರಿಯ ಜ್ಞಾನವು ಬರುವುದೋ ಅದು. ಅವನು ಅದೃಶ್ಯ, ಪ್ರಾಕೃತಗುಣರಹಿತ, ವಿಲಕ್ಷಣ, ಸರ್ವೋತ್ತಮ'. ಇದೇ ಮೊದಲಾದ ಪ್ರಮಾಣಗಳಿಂದ

ವಿಷ್ಣುವಿನ ಅಸಾಧಾರಣ ಗುಣವಾಗಿ ತಿಳಿಯಲ್ಪಡುವ, ಮೋಕ್ಷಕಾರಣಜ್ಞಾನವಾದ ಪರವಿದ್ಯಾ ವಿಷಯತ್ವವನ್ನು ವಿಷ್ಣುವಿಗೆ ಇಲ್ಲಿ ಹೇಳಿರುವುದರಿಂದ ಅದೃಶ್ಯತ್ವಾದಿಗುಣಗಳೂ ಅವನಿಗೇ ಸೇರಬೇಕು.

**ವಿವರಣೆ :** 1. ಈ ಅಧಿಕರಣಕ್ಕೆ ಆನಂದಮಯಾಧಿಕರಣದೊಂದಿಗೆ ಸಂಗತಿ. ಅಲ್ಲಿ ಆನಂದಮಯನಾದ ವಿಷ್ಣುವಿಗೆ 'ಅದೃಶ್ಯೇಽನಾತ್ಮ್ಯೇ' ಎಂದು ತೈತ್ತಿರೀಯವಾಕ್ಯವನ್ನು ಉಲ್ಲೇಖಿಸಿ ಅದೃಶ್ಯತ್ವಗುಣವಿದೆ ಎಂದೂ ಹೇಳಲಾಗಿದೆ. ಆದರೆ, ಮುಂಡಕೋಪನಿಷತ್ತಿನಲ್ಲಿ ಆ ಗುಣವು ಅಕ್ಷರತತ್ವಕ್ಕೆ ಹೇಳಲ್ಪಟ್ಟಿದೆ. ಆ ಅಕ್ಷರ ತತ್ವವು ವಿಷ್ಣುವಲ್ಲ. ಏಕೆಂದರೆ, ಅಕ್ಷರ ತತ್ವದಿಂದ ಜಗತ್ತಿನ ಸೃಷ್ಟಿಯನ್ನು ಹೇಳಿ 'ಅಕ್ಷರಾತ್ ಪರತಃ ಪರಃ' ಎಂದು ಅಂತಹ ಅಕ್ಷರ ತತ್ವಕ್ಕಿಂತಲೂ ಉತ್ತಮೋತ್ತಮನಾದವನು ವಿಷ್ಣು ಎಂದು ಹೇಳಲಾಗಿದೆ. ಅಕ್ಷರತತ್ತ್ವ ವಿಷ್ಣುವಾದರೆ ಅವನಿಗಿಂತ ಉತ್ತಮನಾದವನೊಬ್ಬನನ್ನು ಹೇಳಬೇಕಾಗುವುದು. ಆಗ ವಿಷ್ಣುಸರ್ವೋತ್ತಮತ್ವಕ್ಕೆ ಭಂಗಬರುತ್ತದೆ. ಹೀಗಾಗಿ ಅಕ್ಷರತತ್ವ ವಿಷ್ಣುವಲ್ಲ ಎನ್ನುವುದಂತೂ ಖಚಿತ.

ಹಾಗಾದರೆ, ಯಾರೀ ಅಕ್ಷರ? ಜಡ ಅಥವಾ ಚೇತನ ಪ್ರಕೃತಿಯಾಗಿರಬಹುದು. ಜಡಪ್ರಕೃತಿ ವಿಶ್ವಕ್ಕೆ ಉಪಾದಾನಕಾರಣವಾದುದರಿಂದ 'ಯಥೋರ್ಣನಾಭಿಃ' ಎಂದು ಇಲ್ಲಿ ಹೇಳಲಾದ ವಿಶ್ವಕಾರಣತ್ವ ಅದಕ್ಕೆ ಸಂಗತವಾಗುತ್ತದೆ. ಗೀತೆಯಲ್ಲಿ ಲಕ್ಷ್ಮೀದೇವಿಯನ್ನು 'ಅಕ್ಷರ' ಎಂದು ಹೆಸರಿಸಿರುವುದರಿಂದ ಅವಳೂ ಇಲ್ಲಿ ಹೇಳಲ್ಪಟ್ಟಿರಬಹುದು. ಚತುರ್ಮುಖನ 'ಬ್ರಹ್ಮ' ಎಂಬ ನಾಮವೂ ಈ ಪ್ರಕರಣದಲ್ಲಿ ಪ್ರಸ್ತುತವಾಗಿದೆ. ಅವನು ಈ ಜಗತ್ತಿಗೆ ಕಾರಣನೂ ಆಗಿದ್ದಾನೆ. ಹೀಗಾಗಿ ಅವನೂ ಇಲ್ಲಿ ಅಕ್ಷರನಾಗಿ ಪ್ರಸ್ತುತನಾಗಿರಬಹುದು.

ಸಿದ್ಧಾಂತ : ಇಲ್ಲಿ 'ದ್ವೇ ವಿದ್ಯೇ ವೇದಿತವ್ಯೇ' ಎಂದು ಪರಾಪರ ವಿದ್ಯೆಗಳನ್ನು ಪ್ರಸ್ತುತಪಡಿಸಿ 'ಅಥ ಪರಾ ಯಯಾ ತದಕ್ಷರಮಧಿಗಮ್ಯತೇ' ಎಂದು ಅಕ್ಷರತತ್ತ್ವವನ್ನು ಪ್ರತಿಪಾದಿಸುವ ವಿದ್ಯೆ ಪರವಿದ್ಯೆ ಎಂದು ಹೇಳಲಾಗಿದೆ. ಪರಮ ಪುರುಷಾರ್ಥವಾದ ಮೋಕ್ಷಕ್ಕೆ ಕಾರಣವಾದುದರಿಂದ ಆ ವಿದ್ಯೆಗೆ ಪರವಿದ್ಯೆ ಎಂದು ಹೆಸರು. ಮೋಕ್ಷಕ್ಕೆ ವಿಷ್ಣುವಿನ ಜ್ಞಾನವೇ ಕಾರಣ. ಆದ್ದರಿಂದ ಪರವಿದ್ಯೆಗೆ ವಿಷಯನಾದವನು ವಿಷ್ಣು. ಪ್ರಕೃತ ಪ್ರಕರಣದಲ್ಲಿ ಅಕ್ಷರತತ್ವವು ಪರವಿದ್ಯೆಗೆ ವಿಷಯ ಎಂದಿರುವುದರಿಂದ ಅಕ್ಷರತತ್ತ್ವ ವಿಷ್ಣು. ಆದ್ದರಿಂದ ಅದೃಶ್ಯತ್ವಾದಿಗುಣಗಳೂ ವಿಷ್ಣುವಿನ ಧರ್ಮಗಳು. || 21 ||

**ಓಂ || ವಿಶೇಷಣಭೇದವ್ಯಪದೇಶಾಭ್ಯಾಂ ಚ ನೇತರೌ || ಓಂ**

**ಯಃ ಸರ್ವಜ್ಞಃ ಸರ್ವವಿತ್ ಯಸ್ಯ ಜ್ಞಾನಮಯಂ ತಪಃ । (ಮುಂ.1.1.9)**

**ಇತಿ ವಿಶೇಷಣಾತ್ ನ ಪ್ರಕೃತಿಃ ।**

**ತಸ್ಮಾದೇತದ್ ಬ್ರಹ್ಮ ನಾಮ ರೂಪಮನ್ನಂ ಚ ಜಾಯತೇ । (ಮು.1.1.9)**

**ಇತಿ ಭೇದವ್ಯಪದೇಶಾತ್ ನ ವಿರಿಂಚಃ ।**

**ಅಪರಂ ತ್ವಕ್ಷರಂ ಯಾ ಸಾ ಪ್ರಕೃತಿರ್ಜಡರೂಪಿಕಾ ।**
**ಶ್ರೀಃ ಪರಾ ಪ್ರಕೃತಿಃ ಪ್ರೋಕ್ತಾ ಚೇತನಾ ವಿಷ್ಣುಸಂಶ್ರಯಾ ॥**
**ತಾಮಕ್ಷರಂ ಪರಂ ಪ್ರಾಹುಃ ಪರತಃಪರಮಕ್ಷರಮ್ ।**
**ಹರಿಮೇವಾಖಿಲಗುಣಂ ಅಕ್ಷರತ್ರಯಮೀರಿತಮ್ ॥**

**ಇತಿ ಸ್ಕಾಂದೇ ತ್ರ್ಯಕ್ಷರಾಭಿಧಾನಾತ್ 'ಅಕ್ಷರಾತ್ ಪರತಃ ಪರಃ' ಇತ್ಯಪಿ ವಿಶೇಷಣಮೇವ ।**

**ಜುಷ್ಟಂ ಯದಾ ಪಶ್ಯತ್ಯನ್ಯಮೀಶಮಸ್ಯ**
**ಮಹಿಮಾನಮಿತಿ ವೀತಶೋಕಃ (ಮು.3.1.2)**

**ಇತಿ ಭೇದವ್ಯಪದೇಶಾತ್ ಈಶಪದ ಪ್ರಾಪ್ತೋಽಪಿ ನ ರುದ್ರಃ ॥ 22 ॥**

ಈ ಉಪನಿಷತ್ತಿನಲ್ಲಿ 'ಅವನು ಸಕಲವನ್ನೂ ತಿಳಿದವನು, ಹೊಂದಿದವನು, ಅವನ ಯೋಚನೆಯೂ ಜ್ಞಾನರೂಪವಾದುದು' ಎಂದು ಅಕ್ಷರಕ್ಕೆ ವಿಶೇಷಣ ನೀಡಿರುವುದರಿಂದ ಪ್ರಕೃತಿತತ್ತ್ವವು ಅಕ್ಷರವಲ್ಲ. 'ಆ ಅಕ್ಷರತತ್ತ್ವದಿಂದ ಈ ಚತುರ್ಮುಖ ಬ್ರಹ್ಮ, ನಾಮ, ರೂಪ, ಅನ್ನ, ಅವುಗಳ ಅಭಿಮಾನಿದೇವತೆಗಳು ಹುಟ್ಟುತ್ತಾರೆ' ಎಂದು ಚತುರ್ಮುಖನಿಂದ ಭೇದವನ್ನು ತಿಳಿಸಿರುವುದರಿಂದ ಚತುರ್ಮುಖಬ್ರಹ್ಮನೂ ಅಕ್ಷರನಲ್ಲ.

'ಜಡರೂಪವಾದ ಪ್ರಕೃತಿಯು 'ಅಪರ ಅಕ್ಷರ'. ಯಾರು 'ಪರ ಪ್ರಕೃತಿ' ಎನಿಸಿ ಚೇತನಳಾಗಿ ವಿಷ್ಣುವನ್ನು ಆಶ್ರಯಿಸಿರುವಳೋ ಅಂತಹ ಲಕ್ಷ್ಮೀದೇವಿಯನ್ನು 'ಪರ ಅಕ್ಷರ' ಎನ್ನುವರು. ಸಕಲ ಗುಣಪೂರ್ಣನಾದ ವಿಷ್ಣುವನ್ನೇ ಅಕ್ಷರಕ್ಕಿಂತ ಉತ್ತಮೋತ್ತಮ' ಎನ್ನುತ್ತಾರೆ. ಹೀಗೆ ಸ್ಕಾಂದ ಪುರಾಣದಲ್ಲಿ ಮೂರು ಅಕ್ಷರತತ್ತ್ವಗಳನ್ನು ಹೇಳಿರುವುದರಿಂದ 'ಅಕ್ಷರಾತ್ ಪರತಃ ಪರಃ' ಎಂಬುದೂ ವಿಷ್ಣುವಿಗೇ ವಿಶೇಷಣ.

'ತಾನು ಆರಾಧಿಸುವ, ಪ್ರಸಿದ್ಧ ಈಶನಿಗಿಂತ (ರುದ್ರ) ಭಿನ್ನನಾದ ವಿಷ್ಣುವನ್ನೂ ಹಿಂದೆ ಹೇಳಿದ ಅವನ ಮಹಿಮೆಯನ್ನೂ ಜೀವನು ಸಾಕ್ಷಾತ್ಕರಿಸಿಕೊಂಡರೆ ಶೋಕದೂರನಾಗುವನು' ಹೀಗೆ ಇದೇ ಉಪನಿಷತ್ತಿನಲ್ಲಿ ರುದ್ರನ ಭೇದವನ್ನು ಅಕ್ಷರನಿಗೆ ಹೇಳಿರುವುದರಿಂದ ಈಶಪದದಿಂದ ಇಲ್ಲಿ ಪ್ರಸಕ್ತನಾದವನೂ ವಿಷ್ಣುವೇ.

**ವಿವರಣೆ :** 1. ಈ ಸೂತ್ರದಲ್ಲಿ 'ಪ್ರಕೃತ್ಯಾದಿಗಳು ಅದೃಶ್ಯತ್ವಾದಿ ಗುಣಗಳುಳ್ಳವರಾಗಿ ಪ್ರತಿಪಾದ್ಯರಲ್ಲ' ಎನ್ನಲು ಕಾರಣಗಳನ್ನು ನೀಡಲಾಗಿದೆ. ಸೂತ್ರ ಅದಕ್ಕೆ ನೀಡಿದ ಕಾರಣ ವಿಶೇಷಣ ಮತ್ತು ಭೇದವ್ಯಪದೇಶ. ಇಲ್ಲಿ ಅಕ್ಷರತತ್ತ್ವಕ್ಕೆ ಹೇಳಿದ ಕೆಲವು ವಿಶೇಷಣಗಳಿಂದ

ಜಡ-ಚೇತನ ಪ್ರಕೃತಿಗಳು ಅಕ್ಷರಪದ ವಾಚ್ಯರಲ್ಲ ಎಂದು ತಿಳಿದರೆ 'ಚತುರ್ಮುಖನು ಅಕ್ಷರನಿಂದ ಹುಟ್ಟಿದನು' 'ರುದ್ರನಿಗಿಂತ ಭಿನ್ನ' ಎಂಬ ಸ್ಪಷ್ಟವಚನಗಳಿರುವುದರಿಂದ ಬ್ರಹ್ಮರುದ್ರರೂ ಅಕ್ಷರಪದವಾಚ್ಯರಲ್ಲ ಎಂದು ತಿಳಿಯುತ್ತದೆ ಎಂದು ಸೂತ್ರದ ಒಟ್ಟು ತಾತ್ಪರ್ಯ.

2. 'ತಪಸಾ ಚೀಯತೇ ಬ್ರಹ್ಮ' ಎಂದು ಹಿಂದಿನ ವಾಕ್ಯದಲ್ಲಿ ಹೇಳಲಾದ ಬ್ರಹ್ಮನ ತಪಸ್ಸು ಆಲೋಚನಾರೂಪವಾದುದಲ್ಲ, ಜ್ಞಾನರೂಪವಾದುದು ಎಂದು ತಿಳಿಸಲು 'ಯಃ ಸರ್ವಜ್ಞಃ ಸರ್ವವಿತ್ ಯಸ್ಯಜ್ಞಾನಮಯಂ ತಪಃ' ಎಂಬ ವಾಕ್ಯವಿದೆ. ಅಲ್ಲಿ ಅಕ್ಷರತತ್ತ್ವವನ್ನು 'ಸರ್ವಜ್ಞ' ಎಂದುದರಿಂದ ಜಡ–ಚೇತನ ಪ್ರಕೃತಿಗಳು ಅಕ್ಷರರಲ್ಲ. 'ಅನ್ಯಮೀಶಂ' 'ಇವನು (ಅಕ್ಷರ) ಬೇರೆಯೇ ಈಶ' ಎಂದೂ ಇಲ್ಲಿ ಹೇಳಲಾಗಿದೆ. ಇವನು 'ಮತ್ತೊಬ್ಬ ಯತಿ' ಎಂದರೆ ಪ್ರಸಕ್ತ ಯತಿಗಿಂತ ಭಿನ್ನನಾದ ಯತಿ ಎಂದು ಅರ್ಥ. ಅದರಂತೆ, ಪ್ರಕೃತ ಅಕ್ಷರತತ್ತ್ವವೂ ಪ್ರಸಿದ್ಧನಾದ ಈಶಪದವಾಚ್ಯನಾದ ರುದ್ರನಿಗಿಂತ ಭಿನ್ನನಾದ ಈಶ ಎಂದು ಅರ್ಥ. ಇದರಿಂದ ಅಕ್ಷರನು ರುದ್ರನಲ್ಲ ಎಂದು ಸ್ಪಷ್ಟವಾಗುತ್ತದೆ.

3. 'ಸರ್ವಜ್ಞಃ ಸರ್ವವಿತ್' ಎಂಬ ಪದಗಳಿಗೆ ಅರ್ಥವ್ಯತ್ಯಾಸವನ್ನು ಅನೇಕ ವಿಧದಿಂದ ಹೇಳಬಹುದು. ಬ್ರಹ್ಮನಿಗೆ ಸಕಲದ ಸಾಮಾನ್ಯಜ್ಞಾನ- ವಿಶೇಷ ಜ್ಞಾನಗಳು ಇವೆ ಎಂದು ಅವಕ್ಕೆ ಅರ್ಥ ಮಾಡಬಹುದು. ಆಗ 'ವಿದ' ಧಾತುವಿಗೆ 'ಜ್ಞಾನ' ಎಂದು ಅರ್ಥ. ಅದರಂತೆ 'ವಿದ ಲಾಭೇ' ಎಂದೂ ಧಾತುವಿದೆ. ಆಗ 'ಸರ್ವವಿತ್' ಎಂದರೆ ಸರ್ವವನ್ನೂ ಪಡೆದವನು, ಆಪ್ತಕಾಮ ಎಂದರ್ಥ. 'ವಿದ ಸತ್ತಾಯಾಂ' ಧಾತುವಾದರೆ ಎಲ್ಲೆಡೆ ಇರುವವನು ಎಂದರ್ಥ.

4. ವಿಷ್ಣುವು 'ಅಕ್ಷರಾತ್ ಪರತಃ ಪರಃ' ಎಂದುದು ಹೇಗೆ? ಎಂದು ಪೂರ್ವಪಕ್ಷದ ಪ್ರಧಾನ ಯುಕ್ತಿ. ಅದಕ್ಕೆ ಸ್ಕಾಂದ ಪುರಾಣವನ್ನು ಆಧರಿಸಿ ಆಚಾರ್ಯರು ಹೀಗೆ ಉತ್ತರ ನೀಡಿದ್ದಾರೆ - ಮೂರು ಅಕ್ಷರತತ್ತ್ವಗಳಿವೆ. ಜಡಪ್ರಕೃತಿ, ಲಕ್ಷ್ಮೀದೇವಿ, ವಿಷ್ಣು. ಮೊದಲನೆಯದು 'ಅಪರ ಅಕ್ಷರ', ಎರಡನೆಯದು 'ಪರ ಅಕ್ಷರ' ಮೂರನೆಯವನು 'ಪರಾತ್ ಪರಾಕ್ಷರ'. ಈಗ ಮುಂಡಕೋಪನಿಷತ್ತಿನಲ್ಲಿ ಹೇಳಿದ 'ಅಕ್ಷರಾತ್ ಪರತಃ ಪರಃ' ಎಂಬ ವಿಶೇಷಣವನ್ನು ವಿಷ್ಣುವಿನಲ್ಲೂ ಸಮನ್ವಯ ಮಾಡಬಹುದು. 'ಲಕ್ಷ್ಮೀದೇವಿ ಅಕ್ಷರವಾದ ಜಡಪ್ರಕೃತಿಗಿಂತ ಪರ. ಅವಳಿಗೂ ಪರ ವಿಷ್ಣು. ಹೀಗಾಗಿ ವಿಷ್ಣು 'ಅಕ್ಷರಾತ್ ಪರತಃ ಪರ' ॥ 22 ॥

**ಓಂ ॥ ರೂಪೋಪನ್ಯಾಸಾಚ್ಚ ॥ ಓಂ**

**ಯದಾ ಪಶ್ಯಃ ಪಶ್ಯತೇ ರುಕ್ಮವರ್ಣಂ ಕರ್ತಾರಮೀಶಂ ಪುರುಷಂ ಬ್ರಹ್ಮಯೋನಿಮ್ ।**

**(ಮು.3.1.3) ಇತಿ ।**

> ''ಏಕೋ ನಾರಾಯಣ ಆಸೀನ್ನ ಬ್ರಹ್ಮಾ ನ ಚ ಶಂಕರಃ । ಸ ಮುನಿರ್ಭೂತ್ವಾ ಸಮಚಿಂತಯತ್ । ತತ ಏತೇ ವ್ಯಜಾಯಂತ ವಿಶ್ವೋ ಹಿರಣ್ಯ-ಗರ್ಭೋಽಗ್ನಿರ್ಯಮೋ ವಣುರರುದ್ರೇಂದ್ರಾ ಇತಿ । ತಸ್ಯ ಹೈತಸ್ಯ ಪರಮಸ್ಯ ನಾರಾಯಣಸ್ಯ ಚತ್ವಾರಿ ರೂಪಾಣಿ ಶುಕ್ಲಂ ರಕ್ತಂ ರೌಕ್ಮಂ ಕೃಷ್ಣಮಿತಿ । ಸ ಏತಾನಿ ಏತೇಭ್ಯೋ ಅಭ್ಯಚೀಕ್ಲೃಪತ್ । ವಿಮಿಶ್ರಾಣಿ ವ್ಯಮಿಶ್ರಯತ್ । ಅತ ಏತಾದೃಗ್ ಏತದ್ರೂಪಮಿತಿ ತಸ್ಯೈವ ಹಿ ರೂಪಾಣಿ ಅಭಿಧೀಯಂತೇ ॥ 23 ॥

## ॥ ಇತಿ ಅದೃಶ್ಯತ್ವಾಧಿಕರಣಮ್ ॥

ಈ ಉಪನಿಷತ್ತಿನಲ್ಲಿ 'ಜೀವನು ಸ್ವರ್ಣವರ್ಣದ, ಬ್ರಹ್ಮನ ಜನಕನಾದ, ವಿಶ್ವಕರ್ತನಾದ, ಪೂರ್ಣಷಡ್ಗುಣನಾದ ತನ್ನ ಸ್ವಾಮಿಯ ದರ್ಶನವನ್ನು ಪಡೆದಾಗ (ಪರಮಾತ್ಮನ ಪರಮ ಸಾಮ್ಯವನ್ನು ಪಡೆಯುತ್ತಾನೆ)' ಎಂದು ಹಳದಿ ವರ್ಣವನ್ನು ಅಕ್ಷರನಿಗೆ ಹೇಳಿರುವುದರಿಂದಲೂ ಅದೃಶ್ಯತ್ವಾದಿಗಳು ವಿಷ್ಣುವಿನ ಗುಣಗಳು.

'ನಾರಾಯಣನು ಒಬ್ಬನೇ ಇದ್ದನು. ಬ್ರಹ್ಮನೂ ಇರಲಿಲ್ಲ. ರುದ್ರನೂ ಇರಲಿಲ್ಲ. ಅವನು ಮೌನವಹಿಸಿ ಯೋಚಿಸಿದನು. ಆದರಿಂದ ವಾಯು, ಬ್ರಹ್ಮ, ಅಗ್ನಿ, ಯಮ, ರುದ್ರ, ಇಂದ್ರ ಮುಂತಾದವರು ಹುಟ್ಟಿದರು. ಸರ್ವೋತ್ತಮನಾದ ಆ ನಾರಾಯಣನಿಗೆ ಬಿಳಿ, ಕೆಂಪು, ಹಳದಿ, ಕಪ್ಪು ಎಂದು ನಾಲ್ಕು ಬಣ್ಣಗಳು. ಅವನು, ಪ್ರಾಕೃತ ಬಣ್ಣಗಳೊಂದಿಗೆ ಬೆರೆಸಿದ ಈ ನಾಲ್ಕು ಮೂಲಭೂತವಾದ ಬಣ್ಣಗಳನ್ನು ಬ್ರಹ್ಮಾದಿ ದೇವತೆಗಳಿಗೆ ಮೀಸಲಾಗಿಟ್ಟನು. ಮೊದಲೇ ಮಿಶ್ರವಾದ ಆ ಬಣ್ಣಗಳನ್ನು ಮತ್ತೆ ಪ್ರಾಕೃತರೂಪಗಳಿಂದ ಮಿಶ್ರಗೊಳಿಸಿ ಮನುಷ್ಯರಿಗೆ ಮೀಸಲಾಗಿಟ್ಟನು' ಈ ಶ್ರುತಿಗಳಿರುವುದರಿಂದ ಶುದ್ಧ ಪೀತಾದಿಗಳು ವಿಷ್ಣುವಿನದೇ ಬಣ್ಣಗಳು. ಆದ್ದರಿಂದ ಶ್ರುತಿಯಲ್ಲಿ 'ರುಕ್ಮವರ್ಣಂ' ಎಂದು ಅವನದೇ ರೂಪವನ್ನು ಹೇಳಲಾಗಿದೆ.

**ವಿವರಣೆ :** ಇಲ್ಲಿ ಹೇಳಿದ ಅದೃಶ್ಯತ್ವಾದಿಗಳು ವಿಷ್ಣುವಿನ ಗುಣಗಳು ಎನ್ನಲು ಇನ್ನೊಂದು ಕಾರಣವನ್ನು ಈ ಸೂತ್ರ ತಿಳಿಸುತ್ತದೆ- ಆಥರ್ವಣೋಪನಿಷತ್ತಿನಲ್ಲಿ (ಮುಂಡಕ) ಅಕ್ಷರನಿಗೆ 'ರುಕ್ಮವರ್ಣಂ' ಎಂದು 'ಹಳದಿ' ಬಣ್ಣವನ್ನು ಹೇಳಲಾಗಿದೆ. ಕಪ್ಪು, ಬಿಳಿ, ಹಳದಿ, ಕೆಂಪು ದೇವತೆಗಳ ಸ್ವರೂಪಭೂತವಾದ ಈ ಬಣ್ಣಗಳೂ ಪರಮಾತ್ಮನ ಬಿಂಬರೂಪದ ನಾಲ್ಕು ಬಣ್ಣಗಳಲ್ಲಿ ಒಂದರಿಂದ ಮಿಶ್ರಿತವಾಗಿರುತ್ತವೆ. ಜೀವರ ಸ್ವರೂಪಭೂತವಾದ ಬಣ್ಣವು ಪರಮಾತ್ಮನ ಹಾಗೂ ಇತರ ಬಿಂಬದೇವತೆಗಳ ಬಣ್ಣಗಳಿಂದ ಮಿಶ್ರಿತವಾಗಿರುತ್ತವೆ. ಜಡವಸ್ತುಗಳ ಪ್ರಾಕೃತ ಬಣ್ಣವು ಅವುಗಳಲ್ಲಿರುವ ಬಿಂಬರೂಪದ ಬ್ರಹ್ಮನ ಬಣ್ಣದೊಂದಿಗೆ ಮಿಶ್ರಿತವಾಗಿರುತ್ತದೆ. ಹೀಗೆ ಅಮಿಶ್ರಿತವಾದ, ಶುದ್ಧವಾದ ಹಳದಿ ಬಣ್ಣ ವಿಷ್ಣುವಿನಲ್ಲಿ ಮಾತ್ರ ಇದೆ. ಹೀಗಾಗಿ 'ರುಕ್ಮವರ್ಣಂ' ಎಂಬ ಪದ ಮುಖ್ಯವಾಗಿ ವಿಷ್ಣುವಿನ ವರ್ಣವನ್ನೇ ಹೇಳುತ್ತದೆ. ಆದ್ದರಿಂದ ಇಲ್ಲಿ ಪ್ರಸ್ತುತವಾದ ಅಕ್ಷರ ವಿಷ್ಣು.

ಶುತ್ಯರ್ಥ : 'ಯದಾ ಪಶ್ಯಃ' ಇತ್ಯಾದಿ ಶ್ರುತಿಯ ಉತ್ತರಾರ್ಧ-

ತದಾ ವಿದ್ವಾನ್ ಪುಣ್ಯಪಾಪೇ ವಿಧೂಯ ನಿರಂಜನಃ ಪರಮಂ ಸಾಮ್ಯಮುಪೈತಿ ||

ಈ ಶ್ರುತಿಯಲ್ಲಿ 'ಪಶ್ಯತೀತಿ ಪಶ್ಯಃ' ಎಂಬ ವ್ಯುತ್ಪತ್ತಿಯಿಂದ ಪಶ್ಯಪದಕ್ಕೆ ಜೀವ ಎಂದು ಅರ್ಥ. || 23 ||

## ದ್ವೈತದರ್ಶನದಲ್ಲಿ ಸೂತ್ರಗಳ ಅರ್ಥ

**1. ಓಂ || ಅದೃಶ್ಯತ್ವಾದಿ ಗುಣಕೋ ಧರ್ಮೋಕ್ತೇಃ || ಓಂ**

ಆಥರ್ವಣೋಪನಿಷತ್ತಿನಲ್ಲಿ 'ಯತ್ತದದ್ರೇಶ್ಯಂ' ಎಂದು ಮುಂತಾಗಿ ಹೇಳಿದ ಅದೃಶ್ಯತ್ವಾದಿ ಗುಣಗಳುಳ್ಳ 'ಅಕ್ಷರನು' ಬ್ರಹ್ಮನೇ. ಏಕೆಂದರೆ, 'ಅಥ ಪರಾ ಯಯಾ ತದಕ್ಷರಮಧಿಗಮ್ಯತೇ' ಎಂದು ಮೋಕ್ಷ ಕಾರಣವಾದ ವಿದ್ಯೆಗೆ ಅಕ್ಷರನನ್ನು ವಿಷಯನನ್ನಾಗಿ ಹೇಳಲಾಗಿದೆ ಆದ್ದರಿಂದ.

(ಅತ್ರ ನಯೇ ಅಭಾವಾತ್ಮಕಲಿಂಗಂ ಸಮನ್ವೀಯತೇ। ಅದೃಶ್ಯತ್ವಾದಯೋ ಗುಣಾಃ ಯಸ್ಯ ಸ ತಥಾ । 'ಶೇಷಾದ್ವಿಭಾಷಾ' ಇತಿ ಕಃ । 'ಯತ್ತದದ್ರೇಶ್ಯಂ ಅಗ್ರಾಹ್ಯಂ' ಇತ್ಯುಕ್ತ - ಅದೃಶ್ಯತ್ವಾದಿ ಗುಣಕಂ ಅಕ್ಷರಂ ಬ್ರಹ್ಮೈವ । ನ ತು ಚಿದಚಿತ್ ಪ್ರಕೃತಿ ವಿರಿಂಚಿರುದ್ರಾಃ । 'ಅಥ ಪರಾ ಯಯಾ ತದಕ್ಷರಮಧಿಗಮ್ಯತೇ' ಇತಿ ಖುಗಾದಿ ಪರವಿದ್ಯಾವಿಷಯತ್ವರೂಪ ಧರ್ಮೋಕ್ತೇಃ ।)

**2. ಓಂ || ವಿಶೇಷಣ ಭೇದವ್ಯಪದೇಶಾಭ್ಯಾಂ ಚ ನೇತರೌ || ಓಂ**

ವಿಶೇಷಣ = 'ಯಃ ಸರ್ವಜ್ಞಃ' ಎಂದು ಸರ್ವಜ್ಞತ್ವ ಮೊದಲಾದ ವಿಶೇಷಣಗಳನ್ನು ಮತ್ತು ಭೇದ='ತಸ್ಮಾದೇತದ್ ಬ್ರಹ್ಮ' 'ಅನ್ಯಮೀಶಂ' ಎಂದು ಬ್ರಹ್ಮರುದ್ರರನ್ನು ಅಕ್ಷರನಿಗಿಂತ ಭಿನ್ನರನ್ನಾಗಿಯೂ ವ್ಯಪದೇಶಾತ್= ಹೇಳಿರುವುದರಿಂದಲೂ ಇತರೌ= ಬ್ರಹ್ಮರುದ್ರರಾಗಲೀ, ಜಡಪ್ರಕೃತಿಯಾಗಲೀ ನ= ಅದೃಶ್ಯತ್ವಾದಿ ಗುಣಗಳುಳ್ಳವರಲ್ಲ.

(ಬ್ರಹ್ಮರುದ್ರರು ಚೇತನರಾದ್ದರಿಂದ ಅವರನ್ನು ಒಂದು ಗುಂಪಿನಲ್ಲಿ ಪರಿಗಣಿಸಿದಾಗ ಆ ಇಬ್ಬರು ಚೇತನರ ಒಂದು ಗುಂಪು ಮತ್ತು ಜಡಪ್ರಕೃತಿ ಹೀಗೆ ಎರಡು ಗುಂಪಾಗುತ್ತದೆ. ಆದ್ದರಿಂದ ಈ ಮೂವರನ್ನು ಸೂತ್ರದಲ್ಲಿ 'ಇತರೌ' ಎಂಬ ದ್ವಿವಚನದಿಂದ ಹೇಳಲಾಗಿದೆ)

(ಇತರೌ ನಾದೃಶ್ಯತ್ವಾದಿಗುಣಕೌ, ಕುತಃ ? 'ಯಃ ಸರ್ವಜ್ಞಃ' ಇತಿ ಸಾರ್ವಜ್ಞ್ಯ ವಿಶೇಷಣಾತ್, ಪರತಃ ಪರತ್ವವಿಶೇಷಣಾಚ್ಚ ಜಡಪ್ರಕೃತಿಃ ನ । 'ತಸ್ಮಾದೇತದ್ ಬ್ರಹ್ಮ' ಇತಿ 'ಅನ್ಯಮೀಶಂ' ಇತಿ ಚ ವಿರಿಂಚರುದ್ರಯೋಃ ಅದೃಶ್ಯತ್ವಾದಿಗುಣಕಾಕ್ಷರಾತ್ ಭೇದವ್ಯಪದೇಶಾಚ್ಚ ನ ವಿರಿಂಚರುದ್ರೌ ಇತಿ ಯಥಾಕ್ರಮಂ ಹೇತೂ ।)

**3. ಓಂ॥ ರೂಪೋಪನ್ಯಾಸಾಚ್ಚ॥ ಓಂ**

'ರುಕ್ಮವರ್ಣಂ' ಎಂದು ಅಪ್ರಾಕೃತ ಪೀತವರ್ಣವನ್ನು ಅಕ್ಷರನಿಗೆ ಹೇಳಿರುವುದರಿಂದಲೂ ಅದೃಶ್ಯನಾಗಿ ಹೇಳಲ್ಪಟ್ಟವನು ಬ್ರಹ್ಮ.

('ಯದಾ ಪಶ್ಯಃ ಪಶ್ಯತೇ ರುಕ್ಮವರ್ಣಂ' ಇತಿ ರುಕ್ಮವರ್ಣೋಪನ್ಯಾಸಾಚ್ಚ ಅದೃಶ್ಯತ್ವಾದಿ ಗುಣಕೋ ಬ್ರಹ್ಮೈವ।)

## ಶಾಂಕರಭಾಷ್ಯದಲ್ಲಿ ಹೇಳಿರುವ ಸೂತ್ರಗಳ ಅರ್ಥ

**1. ಅದೃಶ್ಯತ್ವಾದಿಗುಣಕೋ ಧರ್ಮೋಕ್ತೇಃ** – 'ಯತ್ತದದ್ರೇಶ್ಯಂ' ಎಂದು ಮುಂತಾಗಿ ಆಥರ್ವಣೋಪನಿಷತ್ತಿನಲ್ಲಿ ಹೇಳಲಾದ ಅದೃಶ್ಯತ್ವಾದಿ ಗುಣಗಳು ಪ್ರಧಾನಕ್ಕೆ ಸಂಬಂಧಿಸಿವೆ. ಏಕೆಂದರೆ, ಆ ವಾಕ್ಯದಲ್ಲಿ 'ತದವ್ಯಯಂ ಯದ್ ಭೂತಯೋನಿಂ' ಎಂದು 'ಭೂತಯೋನಿ' ಶಬ್ದವನ್ನು ಪ್ರಯೋಗಿಸಲಾಗಿದೆ. 'ಯೋನಿ' ಎಂದರೆ ಉಪಾದಾನ. ಅದೃಶ್ಯತ್ವಾದಿಗುಣವುಳ್ಳ ತತ್ತ್ವವು ಈ ಜಗತ್ತಿಗೆ ಉಪಾದಾನಕಾರಣ ಎಂದು ಅದರ ಅರ್ಥ. ಅದಕ್ಕೆ ಉದಾಹರಣೆಯಾಗಿ-

ಯಥೋರ್ಣನಾಭಿಃ ಸೃಜತೇ ಗೃಹ್ಣತೇ ಚ
ಯಥಾ ಪೃಥಿವ್ಯಾಂ ಓಷಧಯಃ ಸಂಭವಂತಿ।
ಯಥಾ ಸತಃ ಪುರುಷಾತ್ ಕೇಶಲೋಮಾನಿ
ತಥಾಕ್ಷರಾತ್ ಸಂಭವತೀಹ ವಿಶ್ವಮ್ ॥

ಎಂದು ಜೇಡರಹುಳುವಿನ ದೇಹ, ಭೂಮಿ, ಪುರುಷ ದೇಹಗಳನ್ನು ಕೊಡಲಾಗಿದೆ. ಇದರಿಂದ ಈ ಜಗತ್ತಿಗೆ ಉಪಾದಾನ ಕಾರಣವಾದ ಜಡಪ್ರಕೃತಿಯೇ 'ಭೂತಯೋನಿ' ಪದದಿಂದ ವಿವಕ್ಷಿತವೆಂದು ತಿಳಿಯುತ್ತದೆ. 'ಅಕ್ಷರಾತ್‌ಪರತಃ ಪರಃ' ಎಂದು 'ಅದೃಶ್ಯತ್ವಾದಿ ಗುಣವುಳ್ಳವನು ಅಕ್ಷರತತ್ತ್ವಕ್ಕಿಂತ ಉತ್ತಮೋತ್ತಮ ಬ್ರಹ್ಮ' ಎಂದಿರುವುದರಿಂದ ಬ್ರಹ್ಮನಂತೂ ಇಲ್ಲಿ ಪ್ರತಿಪಾದ್ಯನಲ್ಲ.

ಅಥವಾ, ಭೂತಯೋನಿಶಬ್ದಕ್ಕೆ ನಿಮಿತ್ತಕಾರಣ ಎಂದು ಅರ್ಥಮಾಡುವುದಾದರೂ ಪುಣ್ಯಪಾಪಗಳ ಮೂಲಕ ಜಗತ್ತಿಗೆ ಕಾರಣನಾದ ಜೀವಾತ್ಮನೇ ಅಕ್ಷರ ಶಬ್ದವಾಚ್ಯನಾಗಬಹುದು.

**ಸಿದ್ಧಾಂತ :** ಇಲ್ಲಿ 'ಅಕ್ಷರಾತ್ ಸಂಭವತೀಹ ವಿಶ್ವಂ' ಎಂದು ಅಕ್ಷರತತ್ತ್ವವನ್ನು ಜಗತ್ಕಾರಣ ಎಂದು ಹೇಳಿ ಅದೇ ಅಕ್ಷರತತ್ತ್ವವನ್ನು 'ಯಃ ಸರ್ವಜ್ಞಃ' ಎಂದು ಸರ್ವಜ್ಞನನ್ನಾಗಿ ಹೇಳಲಾಗಿದೆ. 'ಸರ್ವಜ್ಞನ' ಬ್ರಹ್ಮನ ಧರ್ಮ. ಅದನ್ನು ಅದೃಶ್ಯತ್ವಾದಿ ಗುಣವುಳ್ಳ ಅಕ್ಷರನಲ್ಲಿ ಹೇಳಿರುವುದರಿಂದ ಅಕ್ಷರತತ್ತ್ವ ಬ್ರಹ್ಮ, ಅದೃಶ್ಯತ್ವಾದಿಗುಣಗಳೂ ಬ್ರಹ್ಮನಿಗೇ ಸೇರುತ್ತವೆ.

ಅಲ್ಲದೆ, ''ಯಯಾ ತದಕ್ಷರಮಧಿಗಮ್ಯತೇ' ಎಂದು ಅಕ್ಷರತತ್ತ್ವವು ಪರವಿದ್ಯೆಗೆ ವಿಷಯ ಎಂದು ಹೇಳಲಾಗಿದೆ. ಅಕ್ಷರನು ಬ್ರಹ್ಮನಲ್ಲವಾದರೆ ಅವನ ಕುರಿತ ವಿದ್ಯೆ ಪರವಿದ್ಯೆಯಾಗಲಾರದು. ಆದ್ದರಿಂದ ಬ್ರಹ್ಮನೇ ಇಲ್ಲಿ ನಿರೂಪಿಸಲಾದ ಅಕ್ಷರ.

**2) ವಿಶೇಷಣ ಭೇದವ್ಯಪದೇಶಾಭ್ಯಾಂ ಚ ನೇತರೌ ॥** – ಇಲ್ಲಿ ಅಕ್ಷರ ತತ್ವಕ್ಕೆ 'ದಿವ್ಯೋ ಹ್ಯಮೂರ್ತಃ ಪುರುಷಃ' ಎಂದು ವಿಶೇಷಣಗಳನ್ನು ನೀಡಲಾಗಿದೆ. 'ದಿವ್ಯಃ' ಎಂದರೆ 'ಸ್ವಯಂ ಜ್ಯೋತಿ' ಎಂದರ್ಥ. ಇತರ ವಸ್ತುಗಳು ಸ್ವಯಂ ಪ್ರಕಾಶಗಳಲ್ಲ. ಆದ್ದರಿಂದ ಇತರರಾರೂ ಅಕ್ಷರರಲ್ಲ. 'ಅಕ್ಷರಾತ್ ಪರತಃ ಪರಃ' ಎಂದು 'ಪ್ರಕೃತಿಗಿಂತ ಪ್ರಕೃತ ಅಕ್ಷರ ತತ್ತ್ವವು ಭಿನ್ನ' ಎಂದು ಹೇಳಿರುವುದರಿಂದಲೂ ಇಲ್ಲಿ ವಿವಕ್ಷಿತವಾದ ಅಕ್ಷರ ಪ್ರಕೃತಿಯಲ್ಲ. ನಾಮರೂಪಾತ್ಮಕವಾದ ಪ್ರಪಂಚಕ್ಕೆ ಉಪಾದಾನವಾದ ಭೂತಸೂಕ್ಷ್ಮವೇ ಪರ ಅಕ್ಷರ. ಅವಿಕಾರನಾದ ಪರಬ್ರಹ್ಮ ವಿಕಾರಹೊಂದುವ ಈ ಪರ ಅಕ್ಷರಕ್ಕಿಂತ ಭಿನ್ನವಾದುದು ಎಂದು 'ಅಕ್ಷರಾತ್ ಪರತಃ ಪರಃ' ಎಂಬ ವಾಕ್ಯದ ಅರ್ಥ. ಹೀಗೆ ಪ್ರಕೃತಿಯ ಭೇದವನ್ನು ಬ್ರಹ್ಮನಿಗೆ ಹೇಳಿರುವುದರಿಂದಲೂ ಪ್ರಕೃತಿಯು ಇಲ್ಲಿ ಪ್ರಕೃತವಾದ ಅಕ್ಷರವಲ್ಲ.

**3) ರೂಪೋಪನ್ಯಾಸಾಚ್ಚ ॥** ಇಲ್ಲಿ ಅಕ್ಷರನಿಂದ ಪ್ರಪಂಚದ ಸೃಷ್ಟಿಯನ್ನು ಹೇಳಿ-

ಅಗ್ನಿರ್ಮೂರ್ಧಾ ಚಕ್ಷುಷೀ ಚಂದ್ರಸೂರ್ಯೌ

ದಿಶಃ ಶ್ರೋತ್ರೇ ವಾಗ್ ವಿವೃತಾಶ್ಚ ವೇದಾಃ।

ವಾಯುಃ ಪ್ರಾಣೋ ಹೃದಯಂ ವಿಶ್ವಮಸ್ಯ

ಪದ್ಭ್ಯಾಂ ಪೃಥಿವೀ ಹ್ಯೇಷ (ಸರ್ವ) ಭೂತಾಂತರಾತ್ಮಾ॥

ಹೀಗೆ ಅಕ್ಷರನ ಅಂಗಾಂಗಗಳ ಸ್ವರೂಪವನ್ನು ಕಲ್ಪಿಸಲಾಗಿದೆ. ಜೀವನಿಗೆ ಇಂತಹ ಮಹಿಮೆ ಇಲ್ಲ. ಜಡವಾದ ಪ್ರಕೃತಿ 'ಸರ್ವಭೂತಗಳ ಅಂತರಾತ್ಮ'ವಲ್ಲ. ಆದ್ದರಿಂದ ಬ್ರಹ್ಮನೇ ಇಲ್ಲಿ ಪ್ರಸ್ತುತನಾದ ಅಕ್ಷರ.

## ಚಂದ್ರಿಕಾದಲ್ಲಿ ಮಾಡಿರುವ ವಿಮರ್ಶೆ

ಅದ್ವೈತ ದರ್ಶನದಲ್ಲಿ ಹಗ್ಗವು ಹಾವಿನ ಕಲ್ಪನೆಗೆ ಅಧಿಷ್ಠಾನವಾದಂತೆ ಪ್ರಪಂಚದ ಕಲ್ಪನೆಗೆ ಬ್ರಹ್ಮನು ಅಧಿಷ್ಠಾನ. ಅಂತಹ ಬ್ರಹ್ಮನು ವಾಚ್ಯನಾದರೆ ಅವನು ನಿರ್ಧರ್ಮಕನಾದುದರಿಂದ ಸೂತ್ರದಲ್ಲಿ ಹೇಳಿದ 'ಧರ್ಮೋಕ್ತೇಃ' ಎಂಬ ಕಾರಣ ಅಸಮಂಜಸವಾಗುತ್ತದೆ. ಅಲ್ಲದೆ, 'ಇಲ್ಲಿ ಸೂರ್ಯದ್ವಾರೇಣ ವಿರಜಾಃ ಪ್ರಯಾಂತಿ' ಎಂದು ಅಕ್ಷರ ಬ್ರಹ್ಮನ ಪ್ರಾಪ್ತಿಗೆ ಮಾರ್ಗವಾಗಿ ಸೂರ್ಯನನ್ನು ಹೇಳಲಾಗಿದೆ. ಆ ಮಾರ್ಗದಿಂದ ಗಮ್ಯನಾದವನು ಕಾರ್ಯ ಬ್ರಹ್ಮ. ಅವನು ಜಗತ್ತಿಗೆ ಅಧಿಷ್ಠಾನನಲ್ಲ. ಹೀಗೆ ನಿರ್ಗುಣನಿಗೆ 'ಧರ್ಮೋಕ್ತೇಃ' ಎಂಬ ಸೂತ್ರದ ಪದ ಭಾದಕವಾಗಿದೆ. ಕಾರ್ಯಬ್ರಹ್ಮ ಜಗತ್ತಿಗೆ

ಕಾರಣನಲ್ಲ. ಆದ್ದರಿಂದ ಅದ್ವೈತವಾದದಂತೆ ಈ ಅಧಿಕರಣದ ಪ್ರತಿಪಾದ್ಯ ವಸ್ತುವನ್ನು ನಿಖರವಾಗಿ ಹೇಳಲು ಬರುವುದಿಲ್ಲ.

## ರಾಮಾನುಜ ಭಾಷ್ಯದಲ್ಲಿ ಸೂತ್ರಗಳ ಅರ್ಥ

ಈ ಭಾಷ್ಯದಲ್ಲೂ ಮೊದಲ ಮತ್ತು ಕೊನೆಯ ಎರಡು ಸೂತ್ರಗಳಿಗೂ ಶಾಂಕರಭಾಷ್ಯದಂತೆಯೇ ಅರ್ಥವನ್ನು ಹೇಳಲಾಗಿದೆ. 'ವಿಶೇಷಣ ಭೇದವ್ಯಪದೇಶಾಭ್ಯಾಂ ಚ ನೇತರೌ'' ಎಂಬ ಮಧ್ಯದ ಸೂತ್ರದಲ್ಲಿ 'ವಿಶೇಷಣ ವ್ಯಪದೇಶ' ಪದಕ್ಕೆ ''ಈ ಪ್ರಕರಣವು ಏಕವಿಜ್ಞಾನದಿಂದ ಸರ್ವವಿಜ್ಞಾನದ ಪ್ರತಿಜ್ಞೆ ಹಾಗೂ ಅದರ ಸಮರ್ಥನೆಗಳನ್ನು ಮಾಡುತ್ತಿದೆ. ಇದರಿಂದ ಈ ಪ್ರಕರಣ ಬ್ರಹ್ಮ ಪ್ರಕರಣ ಎಂದು ತಿಳಿಯುತ್ತದೆ. ಆದ್ದರಿಂದ ಇಲ್ಲಿ ಹೇಳಲ್ಪಟ್ಟ ಅಕ್ಷರವು ಬ್ರಹ್ಮನೆ'' ಎಂದು ಅರ್ಥ.

ಈ ಪ್ರಕರಣದ ಆರಂಭದಲ್ಲಿ ನಾರದ 'ಕಸ್ಮಿನ್ನು ಭಗವೋ ವಿಜ್ಞಾತೇ ಸರ್ವಮಿದಂ ವಿಜ್ಞಾತಂ ಭವತಿ' ಎಂದು ಪ್ರಶ್ನಿಸಿದ್ದಾರೆ. ಅದಕ್ಕೆ ಉತ್ತರವಾಗಿ ಪರಾಪರ ವಿದ್ಯೆಗಳನ್ನು ಅಂಗಿರಸರು ಪ್ರಸ್ತಾಪಿಸಿದ್ದಾರೆ. ಅಪರವಿದ್ಯೆ ಎಂದರೆ ಪರೋಕ್ಷಜ್ಞಾನ. ಭಕ್ತಿರೂಪಾಪನ್ನವಾದ ಅಪರೋಕ್ಷ ಜ್ಞಾನ ಪರ ವಿದ್ಯೆ. ಅದಕ್ಕೆ ಅಕ್ಷರನು ವಿಷಯ. ಆದ್ದರಿಂದ ಈ ಅಕ್ಷರ ಪುರುಷ ಬ್ರಹ್ಮ ಹೊರತು, ಪ್ರಕೃತಿ ಜೀವರಲ್ಲ ಎಂದು ಅಭಿಪ್ರಾಯ.

## ಚಂದ್ರಿಕಾದಲ್ಲಿ ಮಾಡಿರುವ ವಿಮರ್ಶೆ

ಇಲ್ಲಿ ಹೇಳಿದ ಅದೃಶ್ಯತ್ವಾದಿ ಗುಣಗಳು ಪ್ರಧಾನಕ್ಕೆ ಸಂಬಂಧಿಸಿವೆ. 'ಅಕ್ಷರಾತ್ ಪರತಃ ಪರಃ' ಎಂಬ ವಿಶೇಷಣ ಜೀವನಿಗೆ ಸಂಬಂಧಿಸಿದೆ. ಪರತಃ ಅಕ್ಷರಾತ್-ಪ್ರಧಾನಕ್ಕಿಂತ ಪರಃ- ಉತ್ತಮ ಜೀವ. ಇದು ರಾಮಾನುಜಮತದ ಪೂರ್ವಪಕ್ಷ. ಆದರೆ ಈ ವಿಶೇಷಣವನ್ನು ತಿಳಿಸುವ ಮಂತ್ರ ಹೀಗಿದೆ-

ದಿವ್ಯೋ ಹ್ಯಮೂರ್ತಃ ಪುರುಷಃ ಸ ಬಾಹ್ಯಾಭ್ಯಂತರೋ ಹ್ಯಜಃ ।

ಅಪ್ರಾಣೋ ಹ್ಯಮನಾಃ ಶುದ್ಧಃ ಅಕ್ಷರಾತ್ ಪರತಃ ಪರಃ ॥

ಇಲ್ಲಿ ಹೇಳಿರುವ 'ಬಾಹ್ಯಾಭ್ಯಂತರಃ-ವ್ಯಾಪ್ತತ್ವ' ವಿಶೇಷಣ ಜೀವನಿಗೆ ಇಲ್ಲ. ಆದ್ದರಿಂದ ಜೀವ 'ಅದೃಶ್ಯತ್ವಾದಿಗುಣಕ' ಎಂದು ಪೂರ್ವಪಕ್ಷಕ್ಕೆ ಅವಕಾಶವೇ ಇಲ್ಲ.

**॥ ಇಲ್ಲಿಗೆ ಅದೃಶ್ಯತ್ವಾಧಿಕರಣ ಮುಗಿಯಿತು ॥**

# ವೈಶ್ವಾನರಾಧಿಕರಣ - 7

**ಅದೃಶ್ಯತ್ವಾದಿಗುಣೇಷು ಸರ್ವಗತತ್ವಂ,**

**ಯಸ್ತು ಏತಮೇವಂ ಪ್ರಾದೇಶಮಾತ್ರಂ ಅಭಿವಿಮಾನಂ**

**ಆತ್ಮಾನಂ ವೈಶ್ವಾನರಂ ಉಪಾಸ್ತೇ ॥ (ಛಾಂ. 5.18.1)**

**ಇತಿ ವೈಶ್ವಾನರಸ್ಯ ಉಕ್ತಂ ಇತ್ಯತ ಆಹ-**

**ಓಂ ॥ ವೈಶ್ವಾನರಃ ಸಾಧಾರಣಶಬ್ದವಿಶೇಷಾತ್ ॥ ಓಂ**

**ಅಗ್ನಾವಿಷ್ಣ್ವೋಃ ಸಾಧಾರಣಸ್ಯ ವೈಶ್ವಾನರಶಬ್ದಸ್ಯ ವಿಷ್ಣಾವೇವ ಪ್ರಸಿದ್ಧಾತ್ಮಶಬ್ದೇನ ವಿಶೇಷಣಾತ್ ವೈಶ್ವಾನರೋ ವಿಷ್ಣುರೇವ ॥ 24 ॥**

ಹಿಂದಿನ ಅಧಿಕರಣದಲ್ಲಿ ಅಕ್ಷರನಿಗೆ ಹೇಳಲಾದ ಅದೃಶ್ಯತ್ವಾದಿಗಳಲ್ಲಿ ಒಂದಾದ ಸರ್ವತ್ರ ವ್ಯಾಪ್ತಿರೂಪವಾದ ಗುಣವನ್ನು 'ಯಸ್ತು ಏತಮೇವ' ಇತ್ಯಾದಿ ಛಾಂದೋಗ್ಯೋಪನಿಷತ್ತಿನಲ್ಲಿ ವೈಶ್ವಾನರನಿಗೆ ಹೇಳಲಾಗಿದೆ. ಆ ವೈಶ್ವಾನರ ಯಾರು? ಎಂದು ನಿರ್ಧರಿಸಲು ಸೂತ್ರಕಾರರು 'ವೈಶ್ವಾನರಃ' ಇತ್ಯಾದಿ ಈ ಸೂತ್ರವನ್ನು ರಚಿಸಿದ್ದಾರೆ. ಅಗ್ನಿ ಹಾಗೂ ವಿಷ್ಣು ಇಬ್ಬರಿಗೂ ವಾಚಕವಾದ ವೈಶ್ವಾನರ ಶಬ್ದಕ್ಕೆ ವಿಷ್ಣುವಿನಲ್ಲೇ ಪ್ರಸಿದ್ಧವಾದ ಆತ್ಮ ಎಂಬ ಶಬ್ದವನ್ನು ವಿಶೇಷಣವನ್ನಾಗಿ ನೀಡಿರುವುದರಿಂದ ವೈಶ್ವಾನರ ವಿಷ್ಣುವೇ ಹೊರತು, ಅಗ್ನಿಯಲ್ಲ.

**ವಿವರಣೆ :** 1. ಈ ಅಧಿಕರಣದಲ್ಲಿ ಸಾಕ್ಷಾತ್ತಾಗಿ ಯಾವುದೇ ಲಿಂಗವನ್ನು ಸಮನ್ವಯ ಮಾಡಲಾಗಿಲ್ಲ. 'ವೈಶ್ವಾನರ' ಎಂಬ ನಾಮವನ್ನು ಸಮನ್ವಯ ಮಾಡಲಾಗಿದೆ. ಅಂದಮೇಲೆ ಲಿಂಗಸಮನ್ವಯ ಮಾಡುವ ಈ ಪಾದದಲ್ಲಿ ಈ ಅಧಿಕರಣ ಅಸಂಗತವಾಗುತ್ತದೆ. ಆದರೂ ಒಂದು ನಾಮವನ್ನು ಸಮನ್ವಯ ಮಾಡುವುದರಿಂದ ಆ ನಾಮವಾಚ್ಯನಾದ ವಿಷ್ಣುವಿಗೆ ಸಂಬಂಧಿಸಿದ ಅನೇಕ ಲಿಂಗಗಳನ್ನು ಸಮನ್ವಯ ಮಾಡಿದಂತೆ ಆಗುವುದರಿಂದ ಈ ಅಧಿಕರಣ ಇಲ್ಲಿ ಸಂಗತವಾಗುತ್ತದೆ.

2. ಈ ಅಧಿಕರಣಕ್ಕೆ ಹಿಂದಿನ ಅದೃಶ್ಯತ್ವಾಧಿಕರಣದೊಂದಿಗೆ ಆಕ್ಷೇಪಕೀ ಸಂಗತಿ ಇದೆ. ಅಲ್ಲಿ ಅದೃಶ್ಯತ್ವಾದಿ ಗುಣಗಳು ವಿಷ್ಣುವಿಗೆ ಸಂಬಂಧಿಸಿವೆ ಎನ್ನಲಾಗಿದೆ. ಅಂತಹ ಅದೃಶ್ಯತ್ವ ಗುಣಗಳನ್ನು ಹೇಳುವ ಮುಂಡಕೋಪನಿಷತ್ತಿನ 'ಯತ್ತದದ್ರೇಶ್ಯಂ ಅಗ್ರಾಹ್ಯಂ...ನಿತ್ಯಂ ವಿಭುಂ ಸರ್ವಗತಂ' ಎಂಬ ವಾಕ್ಯದಲ್ಲಿ ಸರ್ವಗತತ್ವವನ್ನು ಹೇಳಲಾಗಿದೆ. ಆ ಸರ್ವಗತತ್ವ ಧರ್ಮವನ್ನು ಛಾಂದೋಗ್ಯೋಪನಿಷತ್ತಿನಲ್ಲಿ ವೈಶ್ವಾನರನಿಗೆ ಹೇಳಲಾಗಿದೆ. ವೈಶ್ವಾನರನು ವಿಷ್ಣುವಲ್ಲವಾದರೆ ಆಗ ಅದೃಶ್ಯತ್ವಾದಿ ಗುಣಗಳೂ ವಿಷ್ಣುವಿಗಿಲ್ಲ ಎಂದಂತಾಗಿ

ಹಿಂದಿನ ಅಧಿಕರಣದ ಸಿದ್ಧಾಂತ ಅಸಮಂಜಸವಾಗುತ್ತದೆ. ಅದಕ್ಕಾಗಿ ಸೂತ್ರಕಾರರು ವೈಶ್ವಾನರ ನಾಮವನ್ನು ವಿಷ್ಣುವಿನಲ್ಲಿ ಸಮರ್ಥಿಸಿದ್ದಾರೆ.

3. ಛಾಂದೋಗ್ಯ ಉಪನಿಷತ್ತಿನಲ್ಲಿ ಪ್ರಸ್ತುತನಾದ ವೈಶ್ವಾನರ ಜಡವಾದ ಅಗ್ನಿ ಅಥವಾ ಅಗ್ನಿದೇವತೆ, ವಿಷ್ಣುವಲ್ಲ. ಏಕೆಂದರೆ, ವೈಶ್ವಾನರ ಎಂಬ ಪದವನ್ನು ಅವರಿಬ್ಬರಲ್ಲಿಯೇ ಲೋಕದಲ್ಲಿ ಪ್ರಯೋಗಿಸಲಾಗುತ್ತದೆ. ಈ ಲೌಕಿಕ ವ್ಯವಹಾರವನ್ನು ಸಮರ್ಥಿಸಬೇಕಾದರೆ ವೈಶ್ವಾನರ ಶಬ್ದ ಅಗ್ನಿವಾಚಕ ಎಂದು ಹೇಳುವುದು ಅನಿವಾರ್ಯ. ಸರ್ವಗತತ್ವ ಧರ್ಮ ವಿಷ್ಣುವಿಗೆ ಮಾತ್ರ ಇರುವುದರಿಂದ ಅದು ನಿರವಕಾಶವಾದರೂ ಲಿಂಗಕ್ಕಿಂತ ನಿರವಕಾಶ ಶ್ರುತಿಯೇ ಪ್ರಬಲವಾದುದರಿಂದ ಪ್ರಕೃತ ವೈಶ್ವಾನರ ಶಬ್ದದಿಂದ ಅಗ್ನಿಯೇ ವಾಚ್ಯ ವಿಷ್ಣುವಲ್ಲ. ಇದು ಪೂರ್ವಪಕ್ಷ.

4. ಅಗ್ನಿಗೆ ವೈಶ್ವಾನರ ಎಂಬ ಹೆಸರು ಇರುವಂತೆ ವಿಷ್ಣುವಿಗೂ ಆ ಹೆಸರಿದೆ. ಭಗವದ್ಗೀತೆಯಲ್ಲಿ 'ಅಹಂ ವೈಶ್ವಾನರೋ ಭೂತ್ವಾ' ಎಂದು ಶ್ರೀಕೃಷ್ಣ ತನ್ನನ್ನು ವೈಶ್ವಾನರ ಎಂದಿದ್ದಾನೆ. ಹೀಗೆ ವೈಶ್ವಾನರ ಎಂಬ ಶಬ್ದ ಅಗ್ನಿ- ವಿಷ್ಣು ಇಬ್ಬರಿಗೂ ಸಾಧಾರಣ. ಆದರೂ, ಪ್ರಕೃತ ಉಪನಿಷತ್ತಿನಲ್ಲಿ ವೈಶ್ವಾನರನನ್ನು 'ಆತ್ಮ' ಎಂದು ಕರೆದಿರುವುದರಿಂದ ವಿಷ್ಣುವೇ ವೈಶ್ವಾನರ. ಆತ್ಮಶಬ್ದದಿಂದ ಮುಖ್ಯವಾಚ್ಯ ವಿಷ್ಣುವೆ. ಆದ್ದರಿಂದ ವಿಷ್ಣುವೇ ವೈಶ್ವಾನರ, ಎಂದು ಸಿದ್ಧಾಂತ.

5. **ಶ್ರುತ್ಯರ್ಥ** – ಛಾಂದೋಗ್ಯದ ವಿಷಯವಾಕ್ಯದಲ್ಲಿರುವ 'ಪ್ರಾದೇಶಮಾತ್ರಂ' ಎಂದರೆ ನಮ್ಮ ಹೃದಯದಲ್ಲಿ ಅಂಗುಷ್ಠದಷ್ಟೇ ಚಿಕ್ಕವನಾಗಿ ಅಡಗಿರುವ ಎಂದರ್ಥ.

**ಅಭಿವಿಮಾನಂ** – 'ಅಭಿತೋ ವಿಗತಂ ಮಾನಂ' ಅಳತೆಗೆ ಮೀರಿರುವವನು, ವ್ಯಾಪ್ತ. ಮಾನ ಶಬ್ದಕ್ಕೆ ಜ್ಞಾನ ಎಂದೂ ಅರ್ಥವಿದೆ. ಅಳತೆ ಎಂದೂ ಅರ್ಥವಿದೆ. ॥ 24 ॥

## ಓಂ ॥ ಸ್ಮರ್ಯಮಾಣಂ ಅನುಮಾನಂ ಸ್ಯಾದಿತಿ ॥ ಓಂ

**'ಅಹಂ ವೈಶ್ವಾನರೋ ಭೂತ್ವಾ ಪ್ರಾಣಿನಾಂ ದೇಹಮಾಶ್ರಿತಃ॥' (ಭ.ಗೀ.15.14)**

**ಇತಿ ಸ್ಮರ್ಯಮಾಣಂ ಅತ್ರಾಪಿ ಸ ಏವೋಚ್ಯತೇ ಇತ್ಯಸ್ಯ ಅನುಮಾಪಕಮ್ । ಸಮಾಖ್ಯಾನಾತ್ । ಇತಿ ಶಬ್ದಃ ಸಮಾಖ್ಯಾ ಪ್ರದರ್ಶಕಃ ॥ 25 ॥**

'ನಾನು ವೈಶ್ವಾನರನೆನಿಸಿ ಪ್ರಾಣಿಗಳ ದೇಹವನ್ನು ಆಶ್ರಯಿಸಿದ್ದೇನೆ' ಎಂದು ಭಗವದ್ಗೀತೆ ಎಂಬ ಸ್ಮೃತಿಯಲ್ಲಿ ಹೇಳಿರುವುದು 'ಪ್ರಕೃತದಲ್ಲೂ ವಿಷ್ಣುವೇ ವಾಚ್ಯ' ಎಂದು ಊಹೆ ಮಾಡಲು ಕಾರಣವಾಗುತ್ತದೆ. ಗೀತಾಸ್ಮೃತಿಯು ಛಾಂದೋಗ್ಯಶ್ರುತಿಗೆ ಸಮಾಖ್ಯಾರೂಪವಾಗಿದೆ ಎಂಬ ಸೂಚನೆಯನ್ನು ಸೂತ್ರದಲ್ಲಿರುವ ಇತಿ ಶಬ್ದವು ಕೊಡುತ್ತದೆ.

**ವಿವರಣೆ :** 1. ಸೂತ್ರದಲ್ಲಿರುವ ಇತಿ ಶಬ್ದವನ್ನು ಸ್ಮರ್ಯಮಾಣ ಶಬ್ದದೊಂದಿಗೆ ಸೇರಿಸಿಕೊಂಡಾಗ 'ಇತಿ ಸ್ಮರ್ಯಮಾಣಂ' ಎಂದಾಗುತ್ತದೆ. 'ಇತಿ' ಎಂದರೆ 'ಹೀಗೆ' ಎಂದು

ಅರ್ಥ. ಸೂತ್ರಕಾರರು 'ಹೀಗೆ' ಎಂದರೆ ತಾನು ಭಗವದ್ಗೀತೆಯಲ್ಲಿ ಹೇಳಿದಂತೆ ಎಂದು ಸೂಚನೆ ನೀಡಿದ್ದಾರೆ. ಭಗವದ್ಗೀತೆಯಲ್ಲಿ ಶ್ರೀಕೃಷ್ಣ 'ಅಹಂ-ನಾನು' ಎಂದು ಹೇಳಿರುವುದರಿಂದ ವೈಶ್ವಾನರ ಅವನೆಂದು ಸ್ಪಷ್ಟವಾಗಿದೆ. ಆ ಸಮಾಖ್ಯಾನದಿಂದ ಇಲ್ಲಿ ಹೇಳಿದ ವೈಶ್ವಾನರನೂ ವಿಷ್ಣು ಎಂದು ನಿರ್ಧರಿಸಬಹುದು.

2. 'ಸಮಾನೋಕ್ತಿಃ ಸಮಾಖ್ಯಾ' - ಒಂದೇ ರೀತಿಯ ಎರಡು ಮಾತುಗಳು ಸಮಾಖ್ಯಾ. ಭಗವದ್ಗೀತೆಯಲ್ಲಿ ವೈಶ್ವಾನರನು ಎಲ್ಲ ಪ್ರಾಣಿಗಳ ದೇಹದಲ್ಲಿದ್ದು ಆಹಾರವನ್ನು ಜೀರ್ಣಿಸುತ್ತಾನೆ ಎನ್ನಲಾಗಿದೆ. ಪ್ರಕೃತ ಛಾಂದೋಗ್ಯದಲ್ಲೂ ಅದೇ ವಿವರಣೆ ಇದೆ. ಹೀಗಾಗಿ ಭಗವದ್ಗೀತೆಯು ಛಾಂದೋಗ್ಯ ಶ್ರುತಿಗೆ ಸಮಾಖ್ಯಾ ರೂಪವಾಗಿದೆ. ॥ 25 ॥

**3. ಓಂ ॥ ಶಬ್ದಾದಿಭ್ಯೋ ಅಂತಃಪ್ರತಿಷ್ಠಾನಾತ್ ನೇತಿ ಚೇನ್ನ**
**ತಥಾ ದೃಷ್ಟ್ಯುಪದೇಶಾತ್ ಅಸಂಭವಾತ್**
**ಪುರುಷವಿಧಮಪಿ ಚೈನಮಧೀಯತೇ॥ ಓಂ**

**'ಅಯಮಗ್ನಿರ್ವೈಶ್ವಾನರಃ' (ಬೃ.7.9.1) 'ವೈಶ್ವಾನರಮೃತಮ್ ಅಜಾತಮಗ್ನಿಂ' (ಋ.6.7.1) ಇತ್ಯಾದಿ ಶಬ್ದಃ। 'ವೈಶ್ವಾನರೇ ತದ್ಧುತಂ ಭವತಿ' (ಛಾಂ.5.24.4) 'ಹೃದಯಂ ಗಾರ್ಹಪತ್ಯೋ ಮನೋಽನ್ವಾಹಾರ್ಯಪಚನಃ ಆಸ್ಯಂ ಆಹವನೀಯಃ' (ಛಾಂ.5-18-2) ಇತ್ಯಾದಿ ಅಗ್ನಿಲಿಂಗಂ ಆದಿಶಬ್ದೋಕ್ತಮ್ । 'ಯೇನೇದಂ ಅನ್ನಂ ಪಚ್ಯತೇ' (ಬೃ.7.9.1) 'ತದ್ಯದ್ಭಕ್ತಂ ಪ್ರಥಮಮಾಗಚ್ಛೇತ್ತದ್ಧೋಮೀಯಂ' (ಛಾಂ. 5.19.1)**

**ಇತ್ಯಾದಿನಾ ಪಾಚಕತ್ವೇನ ಅಂತಃ ಪ್ರತಿಷ್ಠಾನಂ ಚ ಪ್ರತೀಯತೇ। ತಸ್ಮಾನ್ನ ವಿಷ್ಣುರಿತಿ ಚೇತ್ ನ-**

**'ಅಥ ಹೇಮಮಾತ್ಮಾನಂ ಅಣೋರಣೀಯಾಂಸಂ ಪರತಃ ಪರಂ ವಿಶ್ವಂ ಹರಿಂ ಉಪಾಸೀತ। ಸರ್ವನಾಮಾ, ಸರ್ವಕರ್ಮಾ, ಸರ್ವಲಿಂಗಃ, ಸರ್ವಗುಣಃ, ಸರ್ವಕಾಮಃ, ಸರ್ವಧರ್ಮಾಃ, ಸರ್ವರೂಪಃ ಇತಿ' ।**

**ಸ ಯ ಏತಮೇವಮಾತ್ಮಾನಂ ವಿಶ್ವಂ ಹರಿಂ ಆರಾತ್ ಅರಂ ಉಪಾಸ್ತೇ ತಸ್ಯ ಸರ್ವೇಷು ಲೋಕೇಷು, ಸರ್ವೇಷು ಭೂತೇಷು, ಸರ್ವೇಷು ದೇವೇಷು, ಸರ್ವೇಷು ವೇದೇಷು, ಕಾಮಚಾರೋ ಭವತಿ' ।**

**ಇತಿ ತತ್ತನ್ನಾಮ ಲಿಂಗಾದಿನಾ ತಸ್ಯೈವ ದೃಷ್ಟ್ಯುಪದೇಶಾತ್ ಮಹೋಪನಿಷದಿ ॥**

'ಅಯಮಗ್ನಿಃ ವೈಶ್ವಾನರಃ ಯೋಽಯಂ ಅಂತಃಪುರುಷೇ' ಎಂಬ ಬೃಹದಾರಣ್ಯಕವಾಕ್ಯ ಮತ್ತು 'ಮೂರ್ಧಾನಂ ದಿವೋ...' ಇತ್ಯಾದಿ ಋಗ್ವೇದ ಮಂತ್ರ ಇವೇ ಮೊದಲಾದವು ಸೂತ್ರದಲ್ಲಿ ಹೇಳಿರುವ 'ಶಬ್ದ' ಎಂಬ ಶಬ್ದದ ಅರ್ಥ. 'ವೈಶ್ವಾನರೇ ತದ್ಧುತಂ' ಎಂದು ಛಾಂದೋಗ್ಯದಲ್ಲಿ ಹೇಳಿದ ಹೋಮಾಧಾರತ್ವ, 'ಹೃದಯಂ ಗಾರ್ಹಪತ್ಯಃ...''

ಇತ್ಯಾದಿಯಾಗಿ ಹೇಳಿರುವ ಗಾರ್ಹ್ಯಪತ್ಯಾದಿಪ್ರಭೇದಗಳು ಸೂತ್ರದ 'ಆದಿ' ಶಬ್ದದಿಂದ ಹೇಳಲಾದ ಅಗ್ನಿಯ ಗಮಕಗಳು.

'ಯೇನೇದಂ ಅನ್ನಂ ಪಚ್ಯತೇ' ಎಂಬ ಬೃಹದಾರಣ್ಯಕ ಮಂತ್ರ 'ತದ್ಭಕ್ತಂ' ಇತ್ಯಾದಿ ಛಾಂದೋಗ್ಯಮಂತ್ರಗಳಲ್ಲಿ 'ನಾವು ತಿಂದ ಆಹಾರವನ್ನು ಜೀರ್ಣಮಾಡುತ್ತಾ ಉದರದೊಳಗಿದ್ದಾನೆ' ಎಂದು ವೈಶ್ವಾನರನು ಹೇಳಲ್ಪಟ್ಟಿದ್ದಾನೆ. ಆದ್ದರಿಂದ ವೈಶ್ವಾನರ ವಿಷ್ಣುವಲ್ಲ, ಎಂದರೆ ಅದು ಸರಿಯಲ್ಲ. 'ಅಥ ಹೇಮಮಾತ್ಮಾನಂ' ಎಂಬ ಮಹೋಪನಿಷತ್ತಿನ ವಾಕ್ಯದಲ್ಲಿ ವಿಷ್ಣುವನ್ನು ಇಂದ್ರನೇ ಮೊದಲಾದ ಸಕಲ ದೇವತಾವಾಚಕ ಪದಗಳಿಂದ ವಾಚ್ಯನನ್ನಾಗಿಯೂ ವಜ್ರಾಯುಧಧಾರಣೆ, ಪಚನಕರ್ತೃತ್ವ ಮುಂತಾದ ಕ್ರಿಯಾಕಾರಕನನ್ನಾಗಿಯೂ ಉಪಾಸನೆ ಮಾಡಬೇಕೆಂದು ಹೇಳಿರುವುದರಿಂದ ವೈಶ್ವಾನರಾದಿ ನಾಮಗಳು, ಪಾಚಕತ್ವಾದಿ ಧರ್ಮಗಳು ವಿಷ್ಣುವಿಗೇ ಸಂಬಂಧಿಸಿವೆ.

**ವಿವರಣೆ :** 1. ವೈಶ್ವಾನರನು ವಿಷ್ಣುವಲ್ಲ ಅಗ್ನಿ ಎಂದು ಸಮರ್ಥಿಸಲು ಸೂತ್ರಕಾರರು ಎರಡು ಕಾರಣಗಳನ್ನು ಪೂರ್ವಪಕ್ಷ ಸಮರ್ಥನೆಗಾಗಿ ನೀಡಿದ್ದಾರೆ.

ಅ. ವೈಶ್ವಾನರ ಶಬ್ದದೊಂದಿಗೆ ಬೃಹದಾರಣ್ಯಕ ಮತ್ತು ಋಗ್ವೇದ ಎರಡೂ ಕಡೆ ಅಗ್ನಿಶಬ್ದವನ್ನು ಪ್ರಯೋಗಿಸಲಾಗಿದೆ. ಪ್ರಥಮ ಸೂತ್ರದಲ್ಲಿ ಹೇಳಿದಂತೆ, ವಿಷ್ಣುವಾಚಕವಾದ ಆತ್ಮಶಬ್ದವು ಜೊತೆಗಿರುವುದರಿಂದ ವೈಶ್ವಾನರನು ವಿಷ್ಣುವಾಗುವುದಾದರೆ ಅಗ್ನಿವಾಚಕ ಶಬ್ದವಿರುವುದರಿಂದ ವೈಶ್ವಾನರ ಅಗ್ನಿ ಏಕಾಗಬಾರದು?

ಆ. ''ವೈಶ್ವಾನರ ವಿದ್ಯೆಯನ್ನು ತಿಳಿದವನು ಪತಿತನಿಗೆ ಅನ್ನ ಹಾಕಿದರೂ ವೈಶ್ವಾನರನ ಹೋಮಮಾಡಿದಂತೆ'' ಎಂದು ಛಾಂದೋಗ್ಯದಲ್ಲಿದೆ. ಹೋಮ ಮಾಡುವುದು ಅಗ್ನಿಯಲ್ಲೇ. ಆದ್ದರಿಂದ ವೈಶ್ವಾನರ ಅಗ್ನಿ. ಹೀಗೆ ಹೋಮಕ್ಕೆ ಆಧಾರನನ್ನಾಗಿ ವೈಶ್ವಾನರನನ್ನು ಹೇಳಿರುವುದರಿಂದ ವೈಶ್ವಾನರನು ಅಗ್ನಿಯೆಂದು ತಿಳಿಯಬಹುದು.

ಇ. ಇದಲ್ಲದೆ ಛಾಂದೋಗ್ಯದ ವೈಶ್ವಾನರ ಪ್ರಕರಣದಲ್ಲಿ ಗಾರ್ಹಪತ್ಯ, ಅನ್ವಾಹಾರ್ಯಪಚನ, ಆಹವನೀಯ ಎಂದು ಮೂರು ಪ್ರಭೇದಗಳನ್ನು ಹೇಳಲಾಗಿದೆ. ಈ ಮೂರೂ ಅಗ್ನಿಯ ಪ್ರಭೇದಗಳು. ಇದರಿಂದಲೂ ವೈಶ್ವಾನರನು ಅಗ್ನಿ ಎಂದು ನಿಶ್ಚಯಿಸಬಹುದು.

**2.** ಇಲ್ಲಿ 'ಅಂತಃ ಪ್ರತಿಷ್ಠಾನಾತ್ (ದೇಹದೊಳಗೆ ಪಾಚಕನಾಗಿರುವುದು)' ಎನ್ನುವುದೂ ಅಗ್ನಿ ಸಾಧಕವಾದ ಒಂದು ಲಿಂಗ. ಅಂದಮೇಲೆ ಅದನ್ನೂ 'ಶಬ್ದಾದಿಭ್ಯಃ' ಎಂಬಲ್ಲಿರುವ ಆದಿಪದದಿಂದ ತೆಗೆದುಕೊಳ್ಳಬಹುದು. ಪುನಃ ಪ್ರತ್ಯೇಕವಾಗಿ ಉಲ್ಲೇಖಿಸುವ ಅಗತ್ಯವಿಲ್ಲ. ಆದರೂ ಆದಿಪದದಿಂದ ಧರ್ಮಗಳನ್ನಷ್ಟೇ ಸಂಗ್ರಹಿಸಿ 'ಪಾಚಕತ್ವ'ವು ಕ್ರಿಯಾರೂಪವಾದುದರಿಂದ ಅದನ್ನು ಪ್ರತ್ಯೇಕವಾಗಿ ಉಲ್ಲೇಖಿಸಲಾಗಿದೆ.

3. ಈ ಎರಡು ಸಾಧಕಗಳನ್ನು ಸೂತ್ರಕಾರರು ಹೀಗೆ ವಿಮರ್ಶಿಸಿದ್ದಾರೆ- ಆತ್ಮಶಬ್ದ ವಿಷ್ಣುವಿಗೆ ಹೊರತಾಗಿ ಇತರರಿಗೆ ಇಲ್ಲ. ಆದರೆ ಅಗ್ನಿಶಬ್ದದಿಂದ ವಿಷ್ಣುವೂ ವಾಚ್ಯನಾಗಿದ್ದಾನೆ - ಆಚಾರ್ಯರು ಭಾಷ್ಯದಲ್ಲಿ ಉದಾಹರಿಸಿರುವ ಮಹೋಪನಿಷತ್ತಿನ ವಾಕ್ಯದಿಂದ ವಿಷ್ಣುವನ್ನು ಸರ್ವನಾಮ ವಾಚ್ಯನೆಂದು ಉಪಾಸನೆ ಮಾಡಬೇಕು ಎಂದು ತಿಳಿಯುತ್ತದೆ. ಇದರಿಂದ ವಿಷ್ಣುವು ಅಗ್ನಿಪದವಾಚ್ಯನೆಂದು ಸಿದ್ಧವಾಗುತ್ತದೆ. ಅದರಂತೆ, ಆ ಶ್ರುತಿಯಲ್ಲಿ 'ಸರ್ವಕರ್ಮಾ' 'ಸಕಲ ಕ್ರಿಯೆಗಳೂ ಅವನಿಂದಲೇ ನಡೆಯುತ್ತವೆ ಎಂದು ಉಪಾಸನೆ ಮಾಡಬೇಕು' ಎನ್ನಲಾಗಿದೆ. ಇದರಿಂದ ಪಚನಕ್ರಿಯೆಯೂ, ಪ್ರಧಾನವಾಗಿ, ಅವನಿಂದಲೇ ನಡೆಯುತ್ತದೆ ಎಂದು ತಿಳಿಯುತ್ತದೆ. ಹೀಗೆ ಸಿದ್ಧಾಂತಕ್ಕೆ ಪೋಷಕವಾದ 'ಆತ್ಮ' ಶ್ರುತಿ ನಿರವಕಾಶ. ಪೂರ್ವಪಕ್ಷಸಮರ್ಥಕವಾದ 'ಅಗ್ನಿ' ಶ್ರುತಿ, 'ಪಾಚಕತ್ವ' ಲಿಂಗಗಳು ಸಾವಕಾಶ. ಆದ್ದರಿಂದ ವೈಶ್ವಾನರನು ವಿಷ್ಣು ಎನ್ನುವುದೇ ಉಚಿತ.

4. ಗಾಯತ್ರ್ಯಧಿಕರಣದಲ್ಲಿ 'ತಥಾ ಚೇತೋಽರ್ಪಣನಿಗದಾತ್' ಎನ್ನಲಾಗಿದೆ. ಇಲ್ಲಿ 'ತಥಾ ದೃಷ್ಟ್ಯುಪದೇಶಾತ್' ಎಂದಿದೆ. ಇವೆರಡರ ಅರ್ಥ ಒಂದೇ ಆದರೂ ಉದ್ದೇಶ ಬೇರೆ. ಅಲ್ಲಿ ವಿಷ್ಣುವಿನ ಪ್ರಸಿದ್ಧ ನಾಮಗಳನ್ನು ಹೇಳದೆ 'ಗಾಯತ್ರೀ' ನಾಮವನ್ನು ಹೇಳಿರುವುದಕ್ಕೆ ಕಾರಣವನ್ನು ನೀಡಲಾಗಿದೆ. ಇಲ್ಲಿ ಅಗ್ನಿ ಶ್ರುತಿ- ಲಿಂಗಗಳು ಸಾವಕಾಶ ಎನ್ನಲಾಗಿದೆ.

**5. ಶ್ರುತ್ಯರ್ಥ-** ಮೂರ್ಧಾನಂ ದಿವೋ ಅರತಿಂ ಪೃಥಿವ್ಯಾ

ವೈಶ್ವಾನರಮೃತ ಆಜಾತಮಗ್ನಿಮ್ ।

ಕವಿಂ ಸಂರಾಜಮತಿಥಿಂ ಜನಾನಾ–

ಮಾಸನ್ನಾ ಪಾತ್ರಂ ಜನಯಂತ ದೇವಾಃ ॥

ಈ ಋಗ್ವೇದ ಮಂತ್ರದ ಎರಡನೆಯ ಪಾದವನ್ನು ಭಾಷ್ಯದಲ್ಲಿ ಉದಾಹರಿಸಲಾಗಿದೆ. ಅದರ ಅರ್ಥ ಹೀಗಿದೆ-

ದಿವಃ=ಸ್ವರ್ಗಲೋಕಕ್ಕೆ ಕಾರಣವಾದ ಮೂರ್ಧಾನಂ=ಶಿರೋಭಾಗವುಳ್ಳ, ಪೃಥಿವ್ಯಾಃ=ಪೃಥಿವೀಲೋಕಕ್ಕೆ ಕಾರಣವಾದ ಅರತಿಂ=ಪಾದಗಳುಳ್ಳ (ಅರಂ=ಅಲಂ, ಅತತಿ=ಗಚ್ಛತಿ ಯೇನ ಪುರುಷಃ ಸಃ ಅರತಿಃ, ಪಾದಃ) ಜನಾನಾಂ=ಸಜ್ಜನರ ಆ ಋತೇ=ತತ್ತ್ವಜ್ಞಾನಕ್ಕಾಗಿ ಜಾತಂ=ಅಭಿವ್ಯಕ್ತನಾದ ಕವಿಂ=ಸರ್ವಜ್ಞನಾದ ಸಂರಾಜಂ= ಅಂಡಕೋಶವೇ, ಅತಿಥಿಂ=ಅನ್ನವಾಗಿಉಳ್ಳ ಜನಾನಾಂ=ಸಜ್ಜನರ ಪಾತ್ರಂ=ರಕ್ಷಕನಾದ ವೈಶ್ವಾನರಂ=ಎಲ್ಲರೊಳಗೆ ಅಂತರ್ಯಾಮಿಯಾಗಿರುವುದರಿಂದ ವೈಶ್ವಾನರ ಶಬ್ದವಾಚ್ಯನಾದ ಅಗ್ನಿಂ=ಪ್ರೇರಕನಾದ ವಿಷ್ಣುವನ್ನು ದೇವಾಃ= ದೇವತೆಗಳು ಆಸನ್=ತಮ್ಮ ಮುಖವನ್ನಾಗಿ (ಆಸ್ಯ ಶಬ್ದಕ್ಕೆ ಆಸನ್ ಎಂಬ ಆದೇಶ ಬಂದು ಈ ರೂಪವಾಗಿದೆ. 'ಆಸನ್ನಾ' ಎಂದು ಶ್ರುತಿಯಲ್ಲಿರುವ ಶಬ್ದವನ್ನು 'ಆಸನ್+ಆ' ಎಂದು ಭೇದಮಾಡಿಕೊಳ್ಳಬೇಕು.) ಆಜನಯಂತ= ಮಾಡಿಕೊಂಡರು.

ಆ. 'ವೈಶ್ವಾನರೇ ತದ್ಧುತಂ' ಎಂದು ಭಾಷ್ಯದಲ್ಲಿ ಉದಾಹರಿಸಿರುವ ಛಾಂದೋಗ್ಯ ಶ್ರುತಿಯ ಪೂರ್ಣಪಾಠ- 'ತಸ್ಮಾದು ಹೈವಂವಿದ್ ಯದ್ಯಪಿ ಚಂಡಾಲಾಯೋಚ್ಛಿಷ್ಟಂ ಪ್ರಯಚ್ಛೇದ್ ಆತ್ಮನಿ ಹೈವಾಸ್ಯ ವೈಶ್ವಾನರೇ ಹುತಂ ಸ್ಯಾತ್'

ಯದಿ ಏವಂ ವಿತ್=ಎಲ್ಲರ ಹೃದಯದೊಳಗಿರುವವನನ್ನಾಗಿ ವೈಶ್ವಾನರನನ್ನು ತಿಳಿದವನು ಉಚ್ಛಿಷ್ಟಂ=ಭುಕ್ತಶೇಷವನ್ನು ಚಂಡಾಲಾಯ=ಪತಿತನಿಗೆ ಪ್ರಯಚ್ಛೇತ್= ಕೊಟ್ಟರೂ ಅದು ಅಸ್ಯ=ಅವನ ಅಂತರ್ಯಾಮಿಯಾದ ವೈಶ್ವಾನರೇ ಆತ್ಮನಿ=ವೈಶ್ವಾನರ ನಾಮಕನಾದ ಪರಮಾತ್ಮನಲ್ಲೇ ಹುತಂ ಸ್ಯಾತ್=ಹೋಮಿಸಿದಂತಾಗುತ್ತದೆ.

ಇ. ತದ್ಯದ್ ಭಕ್ತಂ-ತತ್=ಭೋಜನಕಾಲದಲ್ಲಿ ಯದ್ ಭಕ್ತಂ=ತಿನ್ನುವ ಅನ್ನವೆಲ್ಲವೂ ಪ್ರಥಮಂ=ಮೊದಲು, ಆಗಚ್ಛೇತ್=ಪ್ರಾಣಾಹುತಿರೂಪದಿಂದ ಬಂದು ತದ್ಧೋಮೀಯಂ=ಜೀರ್ಣಕಾರಿಯಾಗಿ ಉದರದ ಒಳಗಿರುವ ವೈಶ್ವಾನರನಲ್ಲಿ ಮಾಡಲಾಗುವ ಹೋಮದ ದ್ರವ್ಯ.

ಈ. ಅಥಹೇಮಂ ಆತ್ಮಾನಂ - ಇಮಂ ಆತ್ಮಾನಂ=ಸಕಲವನ್ನೂ ಸ್ವೀಕರಿಸುವ ಅಣೋರಣೀಯಾಂಸಂ=ಸೂಕ್ಷ್ಮವಸ್ತುಗಳಿಗಿಂತಲೂ ಸೂಕ್ಷ್ಮನಾದ, ಪರತಃ ಪರಂ= ಸರ್ವೋತ್ತಮನಾದ ವಿಶ್ವಂ=ಪೂರ್ಣನಾದ ಹರಿಂ=ವಿಷ್ಣುವನ್ನು ಇತಿ=ಹೀಗೆ ಉಪಾಸೀತ=ಧ್ಯಾನಿಸಬೇಕು. ಹೇಗೆಂದರೆ, ಅವನು ಸರ್ವಕರ್ಮಾ=ಸ್ವತಂತ್ರನಾಗಿ ಸಕಲಕ್ರಿಯೆಗಳನ್ನೂ ಮಾಡುವವನು, ಸರ್ವನಾಮಾ=ಇಂದ್ರಾದಿ ಸಕಲನಾಮಗಳೂ ಅವನಿಗಿವೆ. ಸರ್ವಲಿಂಗಃ=ವಜ್ರಾಯುಧಧಾರಣೆ ಮೊದಲಾದ ಸರ್ವಧರ್ಮಗಳೂ ಅವನಿಗಿವೆ. ಸರ್ವಗುಣಃ=ಜ್ಞಾನಾನಂದಾದಿ ಗುಣಗಳೂ ಇವೆ. ಸರ್ವಕಾಮಃ= ಪೂರ್ಣಕಾಮ, ಸರ್ವರೂಪಃ= (ಸರ್ವಂ ರೂಪಂ=ಪ್ರತಿಮಾ ಅಸ್ಯೇತಿ) ಎಲ್ಲವೂ ಅವನ ಪ್ರತೀಕವಾಗಿವೆ.

ಉ. 'ಸ ಯ ಏತಂ' - ಹಿಂದಿನ ಶ್ರುತಿಯಲ್ಲಿ ಹೇಳಿದಂತೆ ವಿಷ್ಣುವನ್ನು ಧ್ಯಾನಿಸಿದರೆ ಸಿಗುವ ಫಲವನ್ನು ಈ ವಾಕ್ಯ ತಿಳಿಸುತ್ತದೆ. ಯಃ=ಅರ್ಹನಾದ ಯಾವ ವ್ಯಕ್ತಿಯು, ವಿಶ್ವಂ ಆತ್ಮಾನಂ ಏತಂ ಹರಿಂ=ಹರಿಯನ್ನು ಹಿಂದೆ ಹೇಳಿದ ಗುಣಗಳುಳ್ಳವನನ್ನಾಗಿ ಅರಂ(ಅಲಂ)=ಸರಿಯಾಗಿ ಆರಾತ್=ಸಮೀಪದಲ್ಲಿ ಅಂದರೆ ಹೃದಯದಲ್ಲಿ ಉಪಾಸ್ತೇ=ಧ್ಯಾನಿಸುವನೋ ತಸ್ಯ=ಅಂತಹವನಿಗೆ ಸರ್ವೇಷು ಲೋಕೇಷು=ಎಲ್ಲ ಲೋಕಗಳಲ್ಲೂ ಸರ್ವೇಷು ಭೂತೇಷು=ಎಲ್ಲ ಪ್ರಾಣಿಗಳಲ್ಲೂ ಸರ್ವೇಷು ದೇವೇಷು=ಸಕಲ ದೇವತೆಗಳಲ್ಲೂ ಸರ್ವೇಷು ವೇದೇಷು=ಸಕಲ ವೇದಗಳಲ್ಲೂ ಕಾಮಚಾರಃ ಭವತಿ=ಸ್ವೇಚ್ಛಾವೃತ್ತಿಯು ಇರುತ್ತದೆ. 'ಅಂತಹವನು ಎಲ್ಲ ಲೋಕಗಳಲ್ಲೂ ಸಂಚರಿಸಬಹುದು. ಎಲ್ಲರಿಂದಲೂ ಅವನು ವಂದ್ಯನಾಗುತ್ತಾನೆ, ಸರ್ವಜ್ಞನಾಗುತ್ತಾನೆ' ಎಂದು ಇದರ ಭಾವವನ್ನು ತತ್ತ್ವಪ್ರದೀಪದಲ್ಲಿ ವರ್ಣಿಸಲಾಗಿದೆ.

ಅನಾತ್ತ್ವಾದನಾತ್ಮಾನಃ ಊನತ್ವಾದ್ ಗುಣರಾಶಿತಃ ।
ಅಬ್ರಹ್ಮಾಣಃ ಪರೇ ಸರ್ವೇ ಬ್ರಹ್ಮಾತ್ಮಾ ವಿಷ್ಣುರೇವ ಹಿ ।

ಇತ್ಯಾದಿನಾ 'ಕೋನ ಆತ್ಮಾ ಕಿಂ ಬ್ರಹ್ಮ' (ಛಾಂ. 5.11.1) ಇತ್ಯಾರಂಭಾಚ್ಚ ಅನ್ಯೇಷಾಂ ಅಸಂಭವಾತ್ ವಿಷ್ಣುರೇವ ವೈಶ್ವಾನರಃ ।

ಚಂದ್ರಮಾ ಮನಸೋ ಜಾತಃ ಚಕ್ಷೋಃಸೂರ್ಯೋ ಅಜಾಯತ ॥ (ಆ.3.12)

ಇತ್ಯಾದಿನಾ ಯಃ ಪುರುಷಾಖ್ಯಃ ವಿಷ್ಣುಃ ಅಭಿಹಿತಃ ತದ್ವಿಧಮೇವಾತ್ರ-

'ಮೂರ್ಧೈವ ಸುತೇಜಾಃ ಚಕ್ಷುರ್ವಿಶ್ವರೂಪಃ
ಪ್ರಾಣಃ ಪೃಥಗ್ ವರ್ತ್ಮಾ (ಛಾಂ.5.18.2)

ಇತ್ಯಾದಿನಾ ಏನಂ ವೈಶ್ವಾನರಂ ಅಧೀಯತೇ ।

ಚಶಬ್ದೇನ ಸಕಲವೇದತಂತ್ರಪುರಾಣಾದಿಷು ವಿಷ್ಣುಪರತ್ವಂ ಪುರುಷಸೂಕ್ತಸ್ಯ ದರ್ಶಯತಿ ।

ತಥಾ ಚ ಬ್ರಾಹ್ಮೇ-

ಯಥೈವ ಪೌರುಷಂ ಸೂಕ್ತಂ ನಿತ್ಯಂ ವಿಷ್ಣುಪರಾಯಣಮ್ ।
ತಥೈವ ಮೇ ಮನೋ ನಿತ್ಯಂ ಭೂಯಾದ್ವಿಷ್ಣುಪರಾಯಣಮ್ ॥ ಇತಿ ।

ಚತುರ್ವೇದ ಶಿಖಾಯಾಂ ಚ-

'ಸಹಸ್ರಶೀರ್ಷಾ ಪುರುಷಃ ಸಹಸ್ರಾಕ್ಷಃ ಸಹಸ್ರಪಾತ್' ಇತಿ । ಏಷ ಹ್ಯೇವಾಚಿಂತ್ಯಃ, ಪರಃ, ಪರಮಃ, ಹರಿಃ, ಆದಿಃ, ಅನಾದಿಃ, ಅನಂತಃ, ಅನಂತಶೀರ್ಷಃ, ಅನಂತಾಕ್ಷಃ, ಅನಂತಬಾಹುಃ, ಅನಂತಗುಣಃ, ಅನಂತರೂಪಃ ಇತಿ।

ಬೃಹತ್ ಸಂಹಿತಾಯಾಂ ಚ-

ಯಥಾ ಹಿ ಪೌರುಷಂ ಸೂಕ್ತಂ ವಿಷ್ಣೋರೇವಾಭಿಧಾಯಕಮ್ ।
ನ ತಥಾ ಸರ್ವವೇದಾಶ್ಚ ವೇದಾಂಗಾನಿ ಚ ನಾರದ ॥ ಇತ್ಯಾದಿ ।
ಯಸ್ಮಾದ್ ಯಜ್ಞಾಯತೇ ಚಾಂಗಾತ್ ಲೋಕವೇದಾದಿಕಂ ಹರೇಃ ।
ತನ್ನಾಮವಾಚ್ಯಂ ಅಂಗಂ ತದ್ ಯಥಾ ಬ್ರಹ್ಮಾದಿಕಂ ಮುಖಮ್ ॥

ಇತಿ ನಾರದೀಯವಚನಾತ್ ನಾಭೇದೋಕ್ತಿವಿರೋಧಃ ॥ 26 ॥

'ಇತರ ದೇವದೇವತೆಗಳನ್ನು ಸರ್ವೋತ್ತಮರೆಂದು ಜ್ಞಾನಿಗಳು ಒಪ್ಪಿಲ್ಲವಾದುದರಿಂದ ಅವರು ಆತ್ಮರಲ್ಲ. ಅವರು ಗುಣಗಳಲ್ಲಿ ಅಲ್ಪರಾದುದರಿಂದ ಬ್ರಹ್ಮರೂ ಅಲ್ಲ. ಹೀಗಾಗಿ ಆತ್ಮ, ಬ್ರಹ್ಮ ಎಂದರೆ ವಿಷ್ಣುವೆ' ಈ ಮೊದಲಾದ ಪ್ರಮಾಣಗಳಿಂದ ವಿಷ್ಣುವಿಗೆ ಮಾತ್ರ ಅನ್ವಯಿಸುವ ಇತರರಲ್ಲಿ ಅಸಂಭಾವಿತವಾದ ಆತ್ಮ-ಬ್ರಹ್ಮ ಶಬ್ದಗಳಿಂದ 'ಕೋ ನ ಆತ್ಮಾ ಕಿಂ ತದ್ ಬ್ರಹ್ಮ' ಎಂದು ಈ ವೈಶ್ವಾನರ ಪ್ರಕರಣವು ಪ್ರಾರಂಭವಾಗಿರುವುದರಿಂದಲೂ, ಈ ಪ್ರಕರಣದಲ್ಲಿ ಪ್ರಸ್ತುತನಾದ ವೈಶ್ವಾನರನು ವಿಷ್ಣುವೆ.

ಅಲ್ಲದೆ, ಪುರುಷಸೂಕ್ತದಲ್ಲಿ 'ಚಂದ್ರನು ಮನಸ್ಸಿನಿಂದ ಹುಟ್ಟಿದ. ಕಣ್ಣಿನಿಂದ ಸೂರ್ಯ ಜನಿಸಿದ' ಎಂದು ಮುಂತಾಗಿ ಪುರುಷನಾಮಕನಾದ ವಿಷ್ಣುವು ಹೇಗೆ ವರ್ಣಿಸಲ್ಪಟ್ಟಿರುವನೋ ಅದೇ ರೀತಿ ವೈಶ್ವಾನರ ಪ್ರಕರಣದಲ್ಲೂ 'ಪ್ರಕಾಶಮಾನವಾದ ಸ್ವರ್ಗಲೋಕವು ವೈಶ್ವಾನರನ ಶಿರೋಭಾಗ, ಸರ್ವತಃ ಪ್ರಕಾಶರೂಪನಾದ ಸೂರ್ಯ ಅವನ ಕಣ್ಣು, ವಾಯುವೇ (ಪೃಥಗ್‌ವರ್ತ್ಮಾ) ಅವನ ಪ್ರಾಣ-ವಾಯು' ಎಂದು ಮುಂತಾಗಿ ಆ ವೈಶ್ವಾನರನನ್ನು ವರ್ಣಿಸಲಾಗಿದೆ.

'ಪುರುಷವಿಧಮಪಿ ಚ' ಎಂದು ಸೂತ್ರದಲ್ಲಿರುವ ಚಶಬ್ದದಿಂದ ಸೂತ್ರಕಾರರು 'ಪುರುಷಸೂಕ್ತವು ವಿಷ್ಣುವನ್ನು ಪ್ರತಿಪಾದಿಸುತ್ತದೆ ಎನ್ನುವುದು ವೇದ-ತಂತ್ರ-ಪುರಾಣಗಳಲ್ಲಿ ಪ್ರಸಿದ್ಧ' ಎಂದು ಸೂಚನೆ ನೀಡಿದ್ದಾರೆ. ಬ್ರಾಹ್ಮಪುರಾಣ ಹೀಗಿದೆ - 'ಪುರುಷಸೂಕ್ತವು ವಿಷ್ಣು ಮಾತ್ರ ಪ್ರತಿಪಾದಕವಾಗಿರುವಂತೆ ನನ್ನ ಮನಸ್ಸು ಸದಾ ವಿಷ್ಣುವಿನಲ್ಲೇ ರತವಾಗಲಿ'. ಚತುರ್ವೇದ ಶಿಖೆಯಲ್ಲೂ ಹೀಗಿದೆ- ''ಸಹಸ್ರಶೀರ್ಷಾ ಪುರುಷಃ ಸಹಸ್ರಾಕ್ಷಃ ಸಹಸ್ರಪಾತ್' ಎಂದರೆ, ಪುರುಷಸೂಕ್ತದಲ್ಲಿ ಪ್ರತಿಪಾದ್ಯನಾದ, ಅಚಿಂತ್ಯನಾದ, ಲೋಕವಿಲಕ್ಷಣ, ಸರ್ವೋತ್ತಮ, ಅನಾದಿ, ಅನಂತನಾದ ಶ್ರೀಹರಿಯು ಅನಂತಮುಖನು, ಅನಂತಕಣ್ಣುಗಳು ಅವನಿಗೆ ಇವೆ. ಅನಂತ ತೋಳುಗಳಿವೆ. ಅಸಂಖ್ಯ ಗುಣಗಳೂ ರೂಪಗಳೂ ಇವೆ. ಬೃಹತ್ಸಂಹಿತೆಯೂ ಹೀಗೆನ್ನುತ್ತದೆ- 'ನಾರದರೇ, ಪುರುಷಸೂಕ್ತವು ವಿಷ್ಣುವನ್ನು ಹೇಳಿದಂತೆ ವೇದಗಳೂ ವೇದಾಂಗಗಳೂ ಹೇಳುವುದಿಲ್ಲ' (ವೇದಗಳು ಪುರುಷಸೂಕ್ತ ವ್ಯಾಖ್ಯಾನರೂಪವಾಗಿ ವಿಷ್ಣುವನ್ನು ಪ್ರತಿಪಾದಿಸುತ್ತವೆ.)

'ಲೋಕಗಳಾಗಲೀ, ವೇದಾದಿಗಳಾಗಲೀ ಶ್ರೀಹರಿಯ ಯಾವ ಅಂಗದಿಂದ ಹುಟ್ಟಿ ಅದನ್ನು ಆಶ್ರಯಿಸಿ, ಅದರಲ್ಲೇ ಲೀನವಾಗುತ್ತವೋ ಆ ಆ ಅಂಗಗಳನ್ನು, 'ಬ್ರಾಹ್ಮಣನೇ ವಿಷ್ಣುವಿನ ಮುಖ' ಎಂದಂತೆ, ಆಯಾಯ ಲೋಕ, ವೇದಗಳ ಹೆಸರಿನಿಂದಲೇ ಕರೆಯಲಾಗುವುದು'. ಹೀಗೆ ನಾರದೀಯಪುರಾಣದ ವಚನವಿರುವುದರಿಂದ ಛಾಂದೋಗ್ಯದ ವೈಶ್ವಾನರ ವಿದ್ಯೆಯಲ್ಲಿ 'ಮೂರ್ಧೈವ ಸುತೇಜಾಃ' ಎಂದು ಪರಮಾತ್ಮನ ಶಿರಸ್ಸಿಗೂ ಸ್ವರ್ಗಲೋಕಕ್ಕೂ ಅಭೇದವನ್ನು ಹೇಳಿರುವುದು ವಿರುದ್ಧವಲ್ಲ.

**ವಿವರಣೆ :** 1. ಸೂತ್ರದ 'ದೃಷ್ಟ್ಯುಪದೇಶಾತ್' ಎಂಬ ಅಂಶ ವೈಶ್ವಾನರನಿಗೆ ಅಗ್ನಿಶಬ್ದ ವಾಚ್ಯತ್ವವನ್ನೂ ಪಾಚಕತ್ವ ಧರ್ಮವನ್ನೂ ಸಮರ್ಥಿಸಿ ಆ ಮೂಲಕ ಪೂರ್ವಪಕ್ಷದಲ್ಲಿ ಹೇಳಲಾದ ಅಗ್ನಿಪರವಾದ ಶ್ರುತಿಲಿಂಗಗಳು ಸಾವಕಾಶಗಳು ಎಂದು ಸಮರ್ಥಿಸುತ್ತದೆ. 'ಅಸಂಭವಾತ್' ಎಂಬ ಪದ 'ಅಗ್ನಿಯು ವೈಶ್ವಾನರ ಶಬ್ದದಿಂದ ವಾಚ್ಯನಾಗಲು ಸಾಧ್ಯವಿಲ್ಲ' ಎಂದು ಬಾಧಕವನ್ನು ಸೂಚಿಸುತ್ತದೆ. ಅದಕ್ಕೆ ಎರಡು ಅಭಿಪ್ರಾಯಗಳನ್ನು ಭಾಷ್ಯದಲ್ಲಿ ವಿವರಿಸಲಾಗಿದೆ- ವೈಶ್ವಾನರ ವಿಷ್ಣು ಎಂದು ನಿರ್ಧರಿಸಲು 'ಆತ್ಮ' ಶಬ್ದವು ಆಧಾರ. ಅಂತಹ ಆತ್ಮಶಬ್ದವು ಅಗ್ನಿಯಲ್ಲಿ ಅಸಂಭವವಾದುದರಿಂದ ವೈಶ್ವಾನರ ಅಗ್ನಿಯಲ್ಲ. ಅಥವಾ, ಈ

ಪ್ರಕರಣದ ಪ್ರಾರಂಭದಲ್ಲಿ ಆತ್ಮ ಬ್ರಹ್ಮರ ಬಗ್ಗೆ ಪ್ರಶ್ನೆ ಇದೆ. ಇದರಿಂದಾಗಿ ಈ ಪ್ರಕರಣ ವಿಷ್ಣುಪರ ಎಂದು ತಿಳಿಯುತ್ತದೆ. ಅಂದಮೇಲೆ ಅಲ್ಲಿ ಅಗ್ನಿಯನ್ನು ತಿಳಿಸುವುದು ಅಸಂಗತ. ಹೀಗೆ ಅಗ್ನಿಯು ವೈಶ್ವಾನರನಾಗಿ ಇಲ್ಲಿ ಪ್ರತಿಪಾದ್ಯನಾಗಲು ಸಾಧ್ಯವಿಲ್ಲ.

2. 'ಪುರುಷವಿಧಮಪಿ ಚೈನಮಧೀಯತೇ' ಎಂಬ ಸೂತ್ರದ ಭಾಗವು ವೈಶ್ವಾನರ ವಿಷ್ಣು ಎನ್ನಲು ಮತ್ತೊಂದು ಕಾರಣವನ್ನು ಹೇಳುತ್ತಿದೆ- ಈ ವೈಶ್ವಾನರನನ್ನು ಪುರುಷಸೂಕ್ತದಲ್ಲಿ ಹೇಳಲಾದ ಪುರುಷನಂತೆಯೇ ಇಲ್ಲಿ ವರ್ಣಿಸಲಾಗಿದೆ. ಪುರುಷಸೂಕ್ತದಲ್ಲಿ ವಿಷ್ಣು ಪ್ರತಿಪಾದ್ಯ. ಆದ್ದರಿಂದ ವೈಶ್ವಾನರ ಪ್ರಕರಣದಲ್ಲೂ ಅವನೇ ಪ್ರತಿಪಾದ್ಯ. ಹೀಗೆ ಪುರುಷಸೂಕ್ತದ 'ಸಮಾಖ್ಯಾ' (ಸಮಾನವಾದ ಆಖ್ಯಾ=ಹೇಳಿಕೆ) ಇರುವುದರಿಂದ ವೈಶ್ವಾನರ ವಿಷ್ಣು.

ಛಾಂದೋಗ್ಯೋಪನಿಷತ್ತಿನ ಅರ್ಥ– 'ಮೂರ್ಧೈವ ಸುತೇಜಾಃ' ಎಂದರೆ 'ಸುಷ್ಠು ತೇಜೋರೂಪತ್ವಾತ್ ಸುತೇಜಾಃ=ಪ್ರಕಾಶಮಾನವಾದ ಸ್ವರ್ಗಲೋಕವೇ ವಿಷ್ಣುವಿನ ಶಿರಸ್ಸು. ಚಕ್ಷುಃ ವಿಶ್ವರೂಪಃ- ವಿಶ್ವಂ ರೂಪಯತಿ ಪ್ರಕಾಶಯತಿ ಇತಿ ವಿಶ್ವರೂಪಃ=ಸೂರ್ಯ. ಅವನೇ ವಿಷ್ಣುವಿನ ಕಣ್ಣು.

ಪ್ರಾಣಃ ಪೃಥಗ್ವರ್ತ್ಮಾ-ಸರ್ವೇಂದ್ರಿಯಾಭಿಮಾನಿದೇವೇಭ್ಯಃ ಪೃಥಕ್= ವೈಲಕ್ಷಣ್ಯೇನ ವರ್ತ್ಮ ಯಸ್ಯ । ನಿದ್ರಾಕಾಲದಲ್ಲಿ ಇತರ ಇಂದ್ರಿಯ ದೇವತೆಗಳು ನಿಷ್ಕ್ರಿಯರಾಗಿದ್ದಾಗಲೂ ಸಕ್ರಿಯನಾಗಿರುವುದರಿಂದ ವಾಯು ಪೃಥಗ್ವರ್ತ್ಮಾ. ಅವನೇ ವಿಷ್ಣುವಿನ ಪ್ರಾಣವಾಯು. ॥ ಸೂತ್ರ 26 ॥

## ಓಂ ॥ ಅತ ಏವ ನ ದೇವತಾ ಭೂತಂ ಚ ॥ ಓಂ

**ಅಗ್ನಿ ವೈಶ್ವಾನರಾದಿ ಶಬ್ದಃ ತೇಜಸಿ ಭೂತೇ, ಅಗ್ನಿದೇವತಾಯಾಂ ಚ ಪ್ರಸಿದ್ಧೋಽಪಿ 'ಅತಃ' ಪೂರ್ವೋಕ್ತಹೇತುತ ಏವ ಅತ್ರ ನ ಸಾ ತಚ್ಚ ಅಭಿಧೀಯತೇ ॥ 27 ॥**

ಅಗ್ನಿ, ವೈಶ್ವಾನರ, ಜಾತವೇದಾಃ ಮೊದಲಾದ ಶಬ್ದಗಳು ಭೌತಿಕ ತೇಜಸ್ಸಿನ (ಬೆಂಕಿಯ) ಮತ್ತು ಅಗ್ನಿದೇವತೆಯ ವಾಚಕವಾಗಿ ಪ್ರಸಿದ್ಧವಾಗಿದ್ದರೂ ಹಿಂದೆ ಹೇಳಿದ ಆತ್ಮಶಬ್ದಪ್ರಯೋಗರೂಪವಾದ ಕಾರಣದಿಂದಲೇ ಈ ವೈಶ್ವಾನರ ಪ್ರಕರಣದಲ್ಲಿ ಆ ದೇವತೆಯಾಗಲೀ ಜಡವಾದ ಬೆಂಕಿಯಾಗಲೀ ಪ್ರತಿಪಾದ್ಯವಲ್ಲ.

**ವಿವರಣೆ :** ಅಗ್ನಿಶಬ್ದದ ಲೌಕಿಕ ಪ್ರಯೋಗ ಬೆಂಕಿಯಲ್ಲೋ ದೇವತೆಯಲ್ಲೋ ಇರುವುದರಿಂದ ಅಗ್ನಿ ಎಂದು ಹೆಸರಿಸಲ್ಪಟ್ಟ ವೈಶ್ವಾನರನು ಬೆಂಕಿ ಅಥವಾ ದೇವತೆ ಎಂದು ಪೂರ್ವಪಕ್ಷದ ಯುಕ್ತಿ. ಆದರೆ ಈ ಪ್ರಕರಣದಲ್ಲಿ ವೈಶ್ವಾನರನಿಗೆ 'ಆತ್ಮ' ಶಬ್ದದ ಪ್ರಯೋಗ ಮಾಡಿರುವುದರಿಂದ ಅವೆರಡೂ ವೈಶ್ವಾನರ ಶಬ್ದದ ಅರ್ಥವಲ್ಲ. ॥ 27 ॥

**ಓಂ ॥ ಸಾಕ್ಷಾದಪಿ ಅವಿರೋಧಂ ಜೈಮಿನಿಃ ॥ ಓಂ**

**ನಾಗ್ನ್ಯಾದಯಃ ಶಬ್ದಾಃ ಅಗ್ನ್ಯಾದಿವಾಚಕಾಃ, ತಥಾಪಿ ಸಾಕ್ಷಾದೇವ ಅನನ್ಯಯೋಗೇನ ಬ್ರಹ್ಮವಾಚಕೈಃ ಶಬ್ದೈಃ ವ್ಯವಹಾರಾರ್ಥಂ, ಅನಭಿಜ್ಞಾನಾಚ್ಚ ಅನ್ಯತ್ರ ವ್ಯವಹರಂತಿ ಇತಿ ಅಭ್ಯುಪಗಮೆ ಅವಿರೋಧಂ ಜೈಮಿನಿಃ ವಕ್ತಿ।**

**ವ್ಯಾಸಚಿತ್ತಸ್ಥಿತಾಕಾಶಾತ್ ಅವಚ್ಛಿನ್ನಾನಿ ಕಾನಿಚಿತ್ ।**

**ಅನ್ಯೇ ವ್ಯವಹರಂತ್ಯೈತಾನ್ಯೂರೀಕೃತ್ಯ ಗೃಹಾದಿವತ್ ॥**

**ಇತಿ ಸ್ಕಾಂದವಚನಾತ್ ನ ಮತಾನಾಂ ಪರಸ್ಪರವಿರೋಧಃ ॥ 28 ॥**

ಅಗ್ನ್ಯಾದಿ ಶಬ್ದಗಳು ಜಡ-ದೇವತಾಗ್ನಿಗಳಿಗೆ ವಾಚಕಗಳಲ್ಲ. ಆದರೂ ಅಗ್ನ್ಯಾದಿಗಳಲ್ಲಿ ಇಲ್ಲದಿರುವ ಕೇವಲ ವಿಷ್ಣುವಿನಲ್ಲಿ ಮಾತ್ರವೇ ಇರುವ ಅರ್ಥವಿಶೇಷನಿಮಿತ್ತದಿಂದ ನೇರವಾಗಿ ಬ್ರಹ್ಮವಾಚಕವಾದ ಆ ಶಬ್ದಗಳಿಂದ (ಜ್ಞಾನಿಗಳು) ಲೌಕಿಕ ವ್ಯವಹಾರ ಸಿದ್ಧಿಗಾಗಿಯೂ (ಅಜ್ಞಾನಿಗಳು) ತಿಳುವಳಿಕೆ ಇಲ್ಲದೆಯೂ ಇತರ ವಸ್ತುಗಳನ್ನು ಕರೆಯುತ್ತಾರೆ. ಹೀಗೆ ಹೇಳಿದಾಗ ಆ ಶಬ್ದಗಳನ್ನು ಇತರ ವಸ್ತುಗಳಲ್ಲಿ ಪ್ರಯೋಗಿಸುವುದು ತಪ್ಪೇನಲ್ಲ ಎಂದು ಜೈಮಿನಿ ಮುನಿಗಳು ಹೇಳುತ್ತಾರೆ.

''ಆಕಾಶ ವಿಶಾಲವಾದರೂ ನಮ್ಮ ನಮ್ಮ ಮನೆಯೊಳಗಿರುವ ಆಕಾಶವು ನಮ್ಮನಮ್ಮದು ಎಂದಂತೆ ಶ್ರೀವೇದವ್ಯಾಸರ ಮನಸ್ಸಿನಲ್ಲಿರುವ ಅನೇಕ ಅಭಿಪ್ರಾಯ ವಿಶೇಷಗಳನ್ನು ಒಬ್ಬೊಬ್ಬ ಶಿಷ್ಯರು ಗ್ರಹಿಸಿ ತಮ್ಮ ಮತವನ್ನಾಗಿ ಹೇಳುತ್ತಾರೆ'' ಹೀಗೆ ಸ್ಕಾಂದಪುರಾಣವಿರುವುದರಿಂದ ಜೈಮಿನಿಮತಕ್ಕೂ ವ್ಯಾಸರ ಮತಕ್ಕೂ ಪರಸ್ಪರ ವಿರೋಧವಿಲ್ಲ.

**ವಿವರಣೆ :** 1. ವಿಷ್ಣುವೇ ಸರ್ವಪದಗಳಿಂದಲೂ ವಾಚ್ಯನಾದರೆ ಲೋಕವ್ಯವಹಾರ ನಡೆಯುವುದು ಹೇಗೆ? 'ಅಗ್ನಿಯನ್ನು ತಾ' ಎಂದಾಗಲೂ ಅಗ್ನಿ ಎಂದರೆ ವಿಷ್ಣು ಎಂದು ಅರ್ಥವಾದರೆ 'ಬೆಂಕಿಯನ್ನು ತರಬೇಕು' ಎಂಬ ತಿಳುವಳಿಕೆ ಆ ವಾಕ್ಯದಿಂದ ಹೇಗೆ ಉಂಟಾಗಬೇಕು? ಈ ಪ್ರಶ್ನೆಗೆ ಪ್ರಕೃತ ಸೂತ್ರ ಉತ್ತರ ನೀಡಿದೆ- ಜ್ಞಾನಿಗಳ ದೃಷ್ಟಿಯಲ್ಲಿ ಅಗ್ನಿಶಬ್ದದ ಅರ್ಥ ಮುಖ್ಯವಾಗಿ ಪರಮಾತ್ಮ. ಏಕೆಂದರೆ 'ಅಗ=ಸ್ಥಾವರವಾದುದನ್ನು ನಿ=ಪ್ರೇರಿಸುತ್ತಾನೆ' ಎಂಬ ಆದರ ಅರ್ಥ ಪ್ರಧಾನವಾಗಿ ಅನ್ವಯಿಸುವುದು ವಿಷ್ಣುವಿಗೆ ಮಾತ್ರ. ಆದರೂ ಅನ್ಯಮಾರ್ಗವಿಲ್ಲದೆ ಅಗ್ನ್ಯಾದಿ ಶಬ್ದಗಳನ್ನು ಜ್ಞಾನಿಗಳು ಜಡವಾದ ಅಗ್ನಿ, ಅಗ್ನಿದೇವತೆಗಳಲ್ಲಿ ಪ್ರಯೋಗಿಸುತ್ತಾರೆ. ಅಜ್ಞರಾದವರಿಗಂತೂ ಅಗ್ನಿಶಬ್ದ ವಿಷ್ಣುವಾಚಕವೆಂದು ಗೊತ್ತೇ ಇಲ್ಲ. ಹೀಗಾಗಿ ಅವರು ಲೌಕಿಕ ವಸ್ತುಗಳಲ್ಲಿ ಅದನ್ನು ಪ್ರಯೋಗಿಸುತ್ತಾರೆ.

2. ಈ ಸೂತ್ರದಲ್ಲಿ ವ್ಯಾಸರು 'ಹೀಗೆ ಜೈಮಿನಿ ಮುನಿಗಳು ಹೇಳುತ್ತಾರೆ' ಎಂದಿದ್ದಾರೆ. ಇದರಿಂದ ತನಗೆ ಅದು ಸಮ್ಮತವಲ್ಲ ಎಂದು ತಿಳಿಯುತ್ತದೆ. ಸಮ್ಮತವಾಗಿದ್ದಿದ್ದರೆ ಜೈಮಿನಿಗಳ

ಹೆಸರನ್ನೇಕೆ ಹೇಳಬೇಕು? ಈ ಪ್ರಶ್ನೆಗೆ ಸ್ಕಾಂದ ಪುರಾಣ ನೀಡಿದ ಉತ್ತರ ಹೀಗೆ - ಆಕಾಶದಲ್ಲಿ ಅನೇಕ ಭಾಗಗಳಿವೆ. ನಮ್ಮ ನಮ್ಮ ಮನೆಯೊಳಗಿರುವ ಭಾಗ ನಮ್ಮ ನಮ್ಮದು. ಅದರಂತೆ ವ್ಯಾಸರ ವಿಶಾಲ ಬುದ್ಧಿಯಲ್ಲೂ ಅನೇಕ ಅಭಿಪ್ರಾಯಗಳಿವೆ. ಒಬ್ಬೊಬ್ಬ ಶಿಷ್ಯರು ಒಂದೊಂದು ಅಭಿಪ್ರಾಯವನ್ನು ಸ್ವೀಕರಿಸುತ್ತಾರೆ. ಅದು ಅವರ ಮತವಾಗುತ್ತದೆ. ಅಂದಮಾತ್ರಕ್ಕೆ ಅದನ್ನು ವ್ಯಾಸರ ಮತವಲ್ಲ ಎನ್ನುವಂತಿಲ್ಲ.

3. 'ವ್ಯಾಸಚಿತ್ತಸ್ಥಿತಾಕಾಶಾತ್' ಎಂಬುದನ್ನು ಸತ್ತರ್ಕದೀಪಾವಲಿಯಲ್ಲಿ ಹೀಗೆ ವಿವರಿಸಲಾಗಿದೆ. 'ಆಕಾಶದಂತೆ ವಿಸ್ತೃತವಾದುದರಿಂದಲೂ ಬೆಳಗುವುದರಿಂದಲೂ ವ್ಯಾಸರ ಚಿತ್ತದಲ್ಲಿರುವ ಮತಗಳೇ ಆಕಾಶಗಳು. ಅವುಗಳಲ್ಲಿ ತಮ್ಮ ತಮ್ಮ ಬುದ್ಧಿಗೆ ಯೋಗ್ಯವಾದುದನ್ನು ಸ್ವೀಕರಿಸಿ ಶಿಷ್ಯರು 'ಇದು ತಮ್ಮ ಮತ' ಎನ್ನುತ್ತಾರೆ.

4. ಸೂತ್ರದಲ್ಲಿರುವ ಸಾಕ್ಷಾತ್ ಎಂಬ ಪದಕ್ಕೆ ಆಚಾರ್ಯರು 'ಅನನ್ಯ ಯೋಗೇನ' ಎಂಬ ಅರ್ಥವನ್ನು ಹೇಳಿದ್ದಾರೆ. ಅದನ್ನು ತ್ರಿವಿಕ್ರಮ ಪಂಡಿತರು ಹೀಗೆ ವಿವರಿಸಿದ್ದಾರೆ. 'ಸಾಕ್ಷಾದೇವ=ಅನ್ಯತ್ರಯೋಗಾಭಾವೇನ ಬ್ರಹ್ಮಣಿ ಸಮ್ಯಗ್ ಯೋಗೇನ'. ರಾಯರು ತಂತ್ರದೀಪಿಕೆಯಲ್ಲಿ ಹೀಗೆ ವ್ಯಾಖ್ಯಾನಿಸಿದ್ದಾರೆ- ''ವಾಚ್ಯಾರ್ಥಧೀವ್ಯವಹಿತಂ ಲಕ್ಷಣಾದಿಕಂ ವಿನಾ ಸಾಕ್ಷಾತ್=ಮುಖ್ಯವೃತ್ತ್ಯಾ''. 'ಇತರರಲ್ಲಿ ಅಗ್ನ್ಯಾದಿಶಬ್ದಗಳ ಅರ್ಥಪೂರ್ಣವಾಗಿಲ್ಲ. ಅದು ಬ್ರಹ್ಮನಲ್ಲಿ ಮಾತ್ರವೇ ಇದೆ' ಇದು ಪಂಡಿತಾಚಾರ್ಯರ ಅಭಿಪ್ರಾಯ. 'ಲಾಕ್ಷಣಿಕ ಪದಗಳಿಗೆ ಮುಖ್ಯಾರ್ಥ ಬಾಧವನ್ನು ತಿಳಿದು ಲಕ್ಷ್ಯಾರ್ಥದಲ್ಲಿ ಪ್ರಯೋಗ. ಆದರೆ ಬ್ರಹ್ಮನಲ್ಲಿ ಶಬ್ದಗಳನ್ನು ಹೀಗೆ ಪ್ರಯೋಗಿಸುವುದಲ್ಲ. ಮುಖ್ಯವೃತ್ತಿಯಿಂದಲೇ ಪ್ರಯೋಗ''. ಇದು ರಾಯರು ತಿಳಿಸಿದ ಭಾವ. ॥ 28 ॥

## ಓಂ ॥ ಅಭಿವ್ಯಕ್ತೇರಿತಿ ಆಶ್ಮರಥ್ಯಃ ॥ ಓಂ

**ತತ್ರ ತತ್ರ ಪ್ರಸಿದ್ಧಾವಪಿ ಅಗ್ನ್ಯಾದಿಷು ಬ್ರಹ್ಮಣೋ ಅಭಿವ್ಯಕ್ತೇಃ ಅಗ್ನ್ಯಾದಿ ಸೂಕ್ತನಿಯಮಃ ಇತ್ಯಾಶ್ಮರಥ್ಯಃ ॥ 29 ॥**

ಅಗ್ನಿ, ವಾಯು ಮುಂತಾದ ಸೂಕ್ತಗಳಲ್ಲಿ ವಿಷ್ಣುವೇ ಪ್ರತಿಪಾದ್ಯನಾದರೂ ಅಗ್ನ್ಯಾದಿ ಸೂಕ್ತಗಳ ಉಪಾಸನೆಯಿಂದ ಅಗ್ನ್ಯಾದಿಗಳಲ್ಲೇ ವಿಷ್ಣುವು ಸ್ವೇಚ್ಛೆಯಿಂದ ಕಾಣಿಸಿಕೊಳ್ಳುವುದರಿಂದ ಅಗ್ನಿಸೂಕ್ತ, ವಾಯುಸೂಕ್ತ ಎಂಬ ನಿಯಮ ಯೋಗ್ಯವಾಗಿರುತ್ತದೆ, ಎಂದು ಆಶ್ಮರಥ್ಯಾಚಾರ್ಯರು ಹೇಳುತ್ತಾರೆ.

**ವಿವರಣೆ :** ಎಲ್ಲ ಶಬ್ದಗಳೂ ವಿಷ್ಣುವಾಚಕಗಳಾದರೆ ವೇದದಲ್ಲಿರುವ ಎಲ್ಲ ಸೂಕ್ತಗಳೂ ವಿಷ್ಣುಸೂಕ್ತಗಳೇ ಆದಾವು. ಅಂದಮೇಲೆ ಕೆಲವು ಅಗ್ನಿಸೂಕ್ತ, ಕೆಲವು ವಾಯು ಸೂಕ್ತ, ಇನ್ನು ಕೆಲವು ವಿಷ್ಣುಸೂಕ್ತ ಈ ವ್ಯವಸ್ಥೆಗಳು ಹೇಗೆ? ಉಪನಿಷತ್ತುಗಳಲ್ಲಿ ವೈಶ್ವಾನರ ವಿದ್ಯೆ, ಅಗ್ನಿ ವಿದ್ಯೆ, ವಾಯು ವಿದ್ಯೆ ಹೀಗೆ ಅನೇಕ ವಿದ್ಯೆಗಳಿವೆ. ಎಲ್ಲ ಶಬ್ದಗಳೂ ವಿಷ್ಣುವಾಚಕಗಳಾದರೆ ಎಲ್ಲವೂ ವಿಷ್ಣುವಿದ್ಯೆಗಳೇ ಆಗಬೇಕಲ್ಲವೆ?

ಈ ಆಕ್ಷೇಪಗಳಿಗೆ ಆಶ್ಮರಥ್ಯರು (ವ್ಯಾಸರು) ನೀಡಿದ ಸಮಾಧಾನ - ಅಗ್ನಿಸೂಕ್ತವನ್ನು ಜಪಿಸಿದರೆ ಪರಮಾತ್ಮ ಅಗ್ನಿಯ ಮಾಧ್ಯಮದಲ್ಲಿ ಕಾಣಿಸಿಕೊಳ್ಳುತ್ತಾನೆ. ಅದರಂತೆ, ಅಗ್ನಿವಿದ್ಯೆಯನ್ನು ಉಪಾಸನೆ ಮಾಡಿದರೆ ಅಗ್ನಿಶಬ್ದವಾಚ್ಯನಾದ ವಿಷ್ಣು ಅಗ್ನಿಯಲ್ಲೇ ದರ್ಶನ ನೀಡುತ್ತಾನೆ. ಈ ಕಾರಣದಿಂದ ವೇದದಲ್ಲಿ ಸೂಕ್ತವ್ಯವಸ್ಥೆ ವಿದ್ಯಾವ್ಯವಸ್ಥೆಗಳನ್ನು ಹೊಂದಿಸಬೇಕು. ॥ 29 ॥

## ಓಂ ॥ ಅನುಸ್ಮೃತೇಃ ಬಾದರಿಃ ॥ ಓಂ

**ತತ್ರ ತತ್ರ ಉಕ್ತಸ್ಯ ವಿಷ್ಣೋಃ ಅಗ್ನ್ಯಾದಿಷು ಅನುಸ್ಮರ್ಯಮಾಣತ್ವಾತ್ ತತ್ತನ್ನಿಯಮಃ ಇತಿ ಬಾದರಿಃ ॥ 30 ॥**

ಆಯಾಯಾ ಸೂಕ್ತದಲ್ಲಿ ಹೇಳಿರುವ ಗುಣಗಳಿಂದ ಯುಕ್ತನಾದ ವಿಷ್ಣುವನ್ನು ಅಗ್ನಿ, ವಾಯು ಮುಂತಾದ ಮಾಧ್ಯಮಗಳಲ್ಲೇ ಚಿಂತಿಸಬೇಕಾದುದರಿಂದಲೂ ಸೂಕ್ತನಿಯಮ ಸರಿ ಎನ್ನುತ್ತಾರೆ ಬಾದರಾಯಣಾತ್ಮಜರಾದ ಶುಕಾಚಾರ್ಯರು.

**ವಿವರಣೆ :** ಅಗ್ನಿಸೂಕ್ತೋಪಾಸಕರಿಗೆ ಅಗ್ನಿಯಲ್ಲೇ ಪರಮಾತ್ಮ ಕಾಣಿಸಿಕೊಳ್ಳುತ್ತಾನೆ ಎಂದು ಹಿಂದಿನ ಸೂತ್ರದ ಅಭಿಪ್ರಾಯ. ಈ ಸೂತ್ರದಲ್ಲಿ ಅಗ್ನಿಸೂಕ್ತದಲ್ಲಿ ಹೇಳಲಾದ ಗುಣಗಳಿಂದ ಅಗ್ನಿಯ ಮಾಧ್ಯಮದಿಂದಲೇ ವಿಷ್ಣುವಿನ ಉಪಾಸನೆ ಮಾಡಬೇಕು. ಹೊರತು ಅಗ್ನಿಸೂಕ್ತವನ್ನು ಹೇಳಿ ವಾಯುವಿನಲ್ಲಿ ಭಗವದುಪಾಸನೆ ನಡೆಸಕೂಡದು. ಹೀಗಾಗಿ ಅಗ್ನ್ಯಾದಿ ಸೂಕ್ತಗಳ ವ್ಯವಸ್ಥೆ ಸರಿಯಾದುದು ಎಂದು ಹೇಳಲಾಗಿದೆ. ॥ 30 ॥

## ಓಂ ॥ ಸಂಪತ್ತೇರಿತಿ ಜೈಮಿನಿಃ ತಥಾ ಹಿ ದರ್ಶಯತಿ ॥ ಓಂ

**ಸಾಕ್ಷಾದಪಿ ಅವಿರೋಧಂ ವದನ್ ಜೈಮಿನಿಃ ಸೂಕ್ತಾದಿನಿಯಮಂ ಅಗ್ನ್ಯಾದಿ ಸಂಪ್ರಾಪ್ತ್ಯಾ ಮನ್ಯತೇ ।**

**"ತಂ ಯಥಾ ಯಥೋಽಪಾಸತೇ ತದೇವ ಭವತಿ"**

**ಇತಿ ದರ್ಶಯತಿ ॥ 31 ॥**

ಸಾಕ್ಷಾತ್ ವಿಷ್ಣುವಾಚಕಶಬ್ದಗಳನ್ನು ಲೌಕಿಕವಸ್ತುಗಳಲ್ಲಿ ಪ್ರಯೋಗಿಸುವುದು ವಿರುದ್ಧವೇನಲ್ಲ ಎಂದು ಹೇಳುವ ಜೈಮಿನಿಯು ಅಗ್ನ್ಯಾದಿ ಪ್ರಾಪ್ತಿ ನಿಮಿತ್ತವಾಗಿ ಸೂಕ್ತ ವ್ಯವಸ್ಥೆಯನ್ನು ಅನುಮೋದಿಸುತ್ತಾನೆ.

'ಉಪಾಸಕನು ಅವನನ್ನು ಹೇಗೆ ಹೇಗೆ ಉಪಾಸನೆ ಮಾಡುತ್ತಾನೊ ಹಾಗೆಯೇ ಆಗುತ್ತಾನೆ' ಎಂದು ಶ್ರುತಿಯೂ ಹೇಳುತ್ತದೆ.

**ವಿವರಣೆ :** 1. ವಿಷ್ಣುವಾಚಕ ಪದಗಳನ್ನು ಇತರ ವಸ್ತುಗಳಲ್ಲಿ ಪ್ರಯೋಗಿಸುವುದು ಹೇಗೆ? ಎಂಬ ಜಿಜ್ಞಾಸೆಗೆ ಉತ್ತರಿಸಿದ ಜೈಮಿನ್ಯಾಚಾರ್ಯರು ಸೂಕ್ತ ನಿಯಮವನ್ನು ಹೀಗೆ

ಹೇಳುತ್ತಾರೆ - ಅಗ್ನಿಸೂಕ್ತದಿಂದ ವಿಷ್ಣುವನ್ನು ಉಪಾಸನೆ ಮಾಡಿದರೆ ಅಗ್ನಿಯ ಪ್ರಾಪ್ತಿಯಾಗುತ್ತದೆ. ಹೀಗಾಗಿ ಅದು ಅಗ್ನಿಸೂಕ್ತ. ವಾಯುವಿನ ಪ್ರಾಪ್ತಿಗೆ ಕಾರಣವಾದ ಸೂಕ್ತ ವಾಯುಸೂಕ್ತ.

ಬಾದರಿ ಋಷಿ ಉಪಾಸನಾದೃಷ್ಟಿಯಿಂದ ಸೂಕ್ತವ್ಯವಸ್ಥೆಯನ್ನು ಹೇಳಿದರೆ ಆಶ್ಮರಥ್ಯರು ಅಪರೋಕ್ಷದೃಷ್ಟಿಯಿಂದ ಆ ವ್ಯವಸ್ಥೆಯನ್ನು ಹೊಂದಿಸುತ್ತಾರೆ. ಜೈಮಿನಿಗಳು ಫಲದ ದೃಷ್ಟಿಯಿಂದ ಸೂಕ್ತವ್ಯವಸ್ಥೆಯನ್ನು ಹೇಳಿದ್ದಾರೆ.

2. ಆಚಾರ್ಯರು ಋಗ್ ಭಾಷ್ಯದಲ್ಲಿ ಇನ್ನೊಂದು ದೃಷ್ಟಿಯಿಂದ ಸೂಕ್ತವ್ಯವಸ್ಥೆಯನ್ನು ತಿಳಿಸಿದ್ದಾರೆ - ಅಗ್ನಿ ಎಂಬ ಶಬ್ದ ಅಗ್ನಿಯ ಅಂತರ್ಗತನಾದ ವಿಷ್ಣುವನ್ನು ಹೇಳುತ್ತದೆ. ಒಳಗಿರುವ ವಿಷ್ಣುವಿಗೆ ಆ ಹೆಸರು ಇರುವುದರಿಂದಲೇ ದೇವತೆಗಾಗಲೀ, ಜಡವಾದ ಬೆಂಕಿಗಾಗಲೀ ಆ ಹೆಸರು ಬರುತ್ತದೆ. ಹೀಗೆ 'ಅಗ್ನಿ' ಎಂಬ ಹೆಸರಿನ, ಅಗ್ನಿಯಲ್ಲಿ ಸನ್ನಿಹಿತನಾದ ವಿಷ್ಣುರೂಪವನ್ನು ಪ್ರತಿಪಾದಿಸುವ ಸೂಕ್ತ ಅಗ್ನಿಸೂಕ್ತ-

ಪೃಥಗ್ ರೂಪಾಣಿ ವಿಷ್ಣೋಸ್ತು ದೇವತಾಂತರಗಾಣಿ ತು ।
ಅಗ್ನ್ಯಾದಿಶಬ್ದವಾಚ್ಯಾನಿ ನಾಮ್ನಾ ಸೂಕ್ತಭಿದಾ ಭವೇತ್ ॥

3. 'ಭಕ್ತನು ಪರಮಾತ್ಮನ ಯಾವ ರೂಪವನ್ನು ಮೆಚ್ಚುತ್ತಾನೋ ಅದೇ ರೂಪವನ್ನು ತಾನು ಪಡೆಯುತ್ತಾನೆ - 'ತದೇವ ಭವತಿ' ಇದರ ಅರ್ಥ- ಆ ರೂಪದ ಐಕ್ಯವನ್ನು ಪಡೆಯುತ್ತಾನೆ ಎಂದಲ್ಲ. 'ಆ ರೂಪವನ್ನು ಹೊಂದುತ್ತಾನೆ' ಎಂದಿಷ್ಟೇ ಅರ್ಥ.

ತತ್ತ್ವಪ್ರದೀಪಕಾರರು ಹೀಗೆ ಹೇಳುತ್ತಾರೆ - 'ತದೇವ ಭವತಿ' ಎಂದರೆ 'ತಥೈವ ಭವತಿ' ಎಂದರ್ಥ. ಭಕ್ತನು ತಾನು ಭಜಿಸಿದ ಭಗವಂತನ ರೂಪವನ್ನು ತಾಳುತ್ತಾನೆ. ಆಚಾರ್ಯರು ತೃತೀಯಸ್ಕಂಧ ತಾತ್ಪರ್ಯದಲ್ಲಿ ಹೀಗೆಯೇ ಹೇಳಿದ್ದಾರೆ-

ಯಾದೃಶೋ ಭಾವಿತಸ್ತ್ವೀಶಃ ತಾದೃಶೋ ಜೀವ ಆಭವೇತ್ ॥ 31 ॥

**ನ ಹಿ ಅನ್ಯೋಪಾಸಕೋ ಅನ್ಯಂ ಪ್ರಾಪ್ನುತೇ ಇತಿ ಯುಜ್ಯತೇ ಇತ್ಯತ ಆಹ-**

## ಓಂ ॥ ಆಮನಂತಿ ಚೈನಮಸ್ಮಿನ್ ॥ ಓಂ

**ಏನಂ=ವಿಷ್ಣುಂ ಅಸ್ಮಿನ್=ಅಗ್ನ್ಯಾದೌ ಆಮನಂತಿ- 'ಯೋಽಗ್ನೌ ತಿಷ್ಠನ್' (ಬೃ.5.7.5) 'ಯ ಏಷ ಏತಸ್ಮಿನ್ನಗ್ನೌ ತೇಜೋಮಯೋಽಮೃತಮಯಃ ಪುರುಷಃ'' (ಬ-.4.5.3) ಇತ್ಯಾದಿನಾ ॥ 32 ॥**

## ಇತಿ ವೈಶ್ವಾನಾಧಿಕರಣಮ್ ॥

## ॥ ಇತಿ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತೇ ಬ್ರಹ್ಮಸೂತ್ರಭಾಷ್ಯೇ ಪ್ರಥಮಾಧ್ಯಾಯಸ್ಯ ದ್ವಿತೀಯಃ ಪಾದಃ ॥

ಒಬ್ಬನ ಉಪಾಸನೆ, ಮತ್ತೊಬ್ಬರ ಪ್ರಾಪ್ತಿ ಇದು ಸರಿಯಲ್ಲ, ಎಂದರೆ ಅದಕ್ಕೆ ಸೂತ್ರಕಾರರ ಉತ್ತರ- ಏನಂ= ಈ ವಿಷ್ಣುವನ್ನು ಅಸ್ಮಿನ್= ಅಗ್ನ್ಯಾದಿಗಳಲ್ಲಿ ಆಮನಂತಿ= 'ಯೋ ಅಗ್ನೌ ತಿಷ್ಠನ್' '...ಏತಸ್ಮಿನ್ನಗ್ನೌ...' ಎಂದು ಮುಂತಾಗಿ ಶ್ರುತಿಗಳು ಹೇಳುತ್ತವೆ.

**ವಿವರಣೆ :** ಅಗ್ನಿಯಲ್ಲಿ ವಿಷ್ಣುವನ್ನು ಉಪಾಸನೆ ಮಾಡಿದರೆ ಅಗ್ನಿಯ ಪ್ರಾಪ್ತಿಯಾಗುತ್ತದೆ ಎನ್ನುವುದು ಪ್ರಮಾಣವಿರುದ್ಧ. ಶ್ರೀಕೃಷ್ಣ ಗೀತೆಯಲ್ಲಿ 'ಮದ್ಭಕ್ತಾಃ ಯಾಂತಿ ಮಾಮಪಿ'' ಎಂದಿದ್ದಾನೆ. ಆದ್ದರಿಂದ ವಿಷ್ಣುವಿನ ಉಪಾಸನೆಯಿಂದ ವಿಷ್ಣುವನ್ನೇ ಹೊಂದಬೇಕಲ್ಲವೆ? ಈ ಪ್ರಶ್ನೆಗೆ ಸೂತ್ರ ಕೊಡುವ ಉತ್ತರ- ''ಹೌದು ಅಗ್ನಿಯ ಪ್ರಾಪ್ತಿ ಎಂದರೆ ಅಗ್ನಿಯಲ್ಲಿರುವ ವಿಷ್ಣುವಿನ ಪ್ರಾಪ್ತಿ. ಅಗ್ನಿಯಲ್ಲೂ ವಿಷ್ಣು ತತ್ತನ್ನಾಮದಿಂದ ಇದ್ದಾನೆ ಎಂದು ಶ್ರುತಿಗಳು ಹೇಳುತ್ತವೆ'' ಎಂದು. || ಸೂತ್ರ 32 ||

## ದ್ವೈತ ದರ್ಶನದಲ್ಲಿ ಸೂತ್ರಗಳ ಅರ್ಥ

**1. ಓಂ || ವೈಶ್ವಾನರಃ ಸಾಧಾರಣಶಬ್ದ ವಿಶೇಷಾತ್ || ಓಂ**

'ಆತ್ಮಾನಂ ವೈಶ್ವಾನರಂ ಉಪಾಸ್ತೇ' 'ಅಯಮಗ್ನಿಃ ವೈಶ್ವಾನರಃ' ಇತ್ಯಾದಿ ವಾಕ್ಯಗಳಲ್ಲಿ (ಛಾಂದೋಗ್ಯ) ಉಲ್ಲೇಖಿಸಲ್ಪಟ್ಟ ವೈಶ್ವಾನರ ವಿಷ್ಣು. ಏಕೆಂದರೆ ಅಗ್ನಿ ಮತ್ತು ವಿಷ್ಣುಗಳಲ್ಲಿ ಸಾಧಾರಣವಾದ 'ವೈಶ್ವಾನರ' ಎಂಬ ಹೆಸರಿಗೆ 'ಆತ್ಮ' ಎಂಬ ವಿಶೇಷಣವನ್ನು ಕೊಡಲಾಗಿದೆ. ('ಆತ್ಮಾನಂ ವೈಶ್ವಾನರಂ' 'ಅಯಮಗ್ನಿಃ ವೈಶ್ವಾನರಃ' ಇತ್ಯಾದೌ ಶ್ರುತಃ ವೈಶ್ವಾನರಃ ಬ್ರಹ್ಮೈವ, ನ ತ್ವಗ್ನಿಃ, ಸಾಧಾರಣಶಬ್ದಸ್ಯ= ಅಗ್ನಾವಿಷ್ಣು ಸಾಧಾರಣಸ್ಯಾಪಿ ವೈಶ್ವಾನರಶಬ್ದಸ್ಯ ವಿಶೇಷಾತ್= ಆತ್ಮಪದೇನ ವಿಶೇಷಣಾತ್ ।)

**2. ಓಂ || ಸ್ಮರ್ಯಮಾಣಂ ಅನುಮಾನಂ ಸ್ಯಾದಿತಿ || ಓಂ**

'ವೈಶ್ವಾನರಃ ಬ್ರಹ್ಮ' ಎಂಬ ಶಬ್ದವನ್ನು ಅಧ್ಯಾಹಾರ ಮಾಡಿಕೊಳ್ಳಬೇಕು. ಇತಿ ಸ್ಮರ್ಯಮಾಣಂ= ಭಗವದ್ಗೀತೆಯಲ್ಲಿ 'ಅಹಂ ವೈಶ್ವಾನರೋ ಭೂತ್ವಾ' ವಿಷ್ಣು ವೈಶ್ವಾನರ ಎಂದು ಹೇಳಿರುವುದು ಅನುಮಾನಂ= ಛಾಂದೋಗ್ಯದಲ್ಲಿ ಹೇಳಿರುವ ವೈಶ್ವಾನರನೂ ಬ್ರಹ್ಮ ಎನ್ನುವುದಕ್ಕೆ ಜ್ಞಾಪಕವಾಗಿದೆ.

(ವೈಶ್ವಾನರೋ ಬ್ರಹ್ಮೇತ್ಯಸ್ತಿ । ತೇನ ಇತಿ ಶಬ್ದಸ್ಯಾನ್ವಯಃ । ಅನುಮೀಯತೇ ಅನೇನ ಇತಿ ಅನುಮಾನಂ । 'ಅಹಂ ವೈಶ್ವಾನರಃ' ಇತಿ ಗೀತಾಯಾಂ ಸ್ಮರ್ಯಮಾಣಂ ವಿಷ್ಣೋಃ ವೈಶ್ವಾನರತ್ವಂ ಅತ್ರಾಪಿ ಸ ಏವ ವೈಶ್ವಾನರಃ ಇತ್ಯಸ್ಯ ಅನುಮಾಪಕಂ ಸ್ಯಾದಿತ್ಯರ್ಥಃ ।)

**3. ಓಂ || ಶಬ್ದಾದಿಭ್ಯೋ ಅಂತಃ ಪ್ರತಿಷ್ಠಾನಾತ್ ನೇತಿ ಚೇನ್ನ<br>ತಥಾ ದೃಷ್ಟ್ಯುಪದೇಶಾತ್ ಅಸಂಭವಾತ್<br>ಪುರುಷವಿಧಮಪಿ ಚೈನಮಧೀಯತೇ || ಓಂ**

'ಶಬ್ದಾದಿ' ಎಂಬಲ್ಲಿ ಆದಿಪದದಿಂದ ಲಿಂಗಗಳನ್ನು ತೆಗೆದುಕೊಳ್ಳಬೇಕು. ಅಂತಃ ಪ್ರತಿಷ್ಠಾನಪದಕ್ಕೆ ಪಚನ ಕ್ರಿಯಾ ಎಂದು ಅರ್ಥ. 'ಅಯಮಗ್ನಿಃ' ಎಂದು ವೈಶ್ವಾನರನಿಗೆ ಅಗ್ನಿಶಬ್ದವನ್ನು ಪ್ರಯೋಗಿಸಿರುವುದರಿಂದ, 'ವೈಶ್ವಾನರೇ ತದ್ಧುತಂ' 'ಹೃದಯಂ ಗಾರ್ಹಪತ್ಯಃ' ಹೀಗೆ ಹೋಮಾಧಾರತ್ವ, ಗಾರ್ಹಪತ್ಯಾದಿ ಪ್ರಬೇಧ ಇವುಗಳನ್ನು ಹೇಳಿರುವುದರಿಂದ ಹಾಗೂ 'ಯೋಽಯಂ ಅಂತಃ ಪುರುಷೇ' 'ಯೇನೇದಂ ಅನ್ನಂ ಪಚ್ಯತೇ' ಎಂದು ದೇಹದೊಳಗಿದ್ದು ಆಹಾರವನ್ನು ಜೀರ್ಣಮಾಡುವ ಕ್ರಿಯೆಯನ್ನು ಹೇಳಿರುವುದರಿಂದ ನೇತಿಚೇನ್ನ=ವೈಶ್ವಾನರನು ವಿಷ್ಣುವಲ್ಲ ಎಂದು ಹೇಳುವುದು ಸರಿಯಲ್ಲ. ತಥಾ=ಅಗ್ನ್ಯಾದಿ ಹೆಸರುಗಳಿಂದ, ಅವರು ಮಾಡುವ ಕ್ರಿಯೆಗಳಿಂದ ದೃಷ್ಟ್ಯುಪದೇಶಾತ್= ವಿಷ್ಣುವನ್ನು ಉಪಾಸನೆ ಮಾಡಬೇಕು ಎಂದು ಶ್ರುತಿಗಳಲ್ಲಿ ಹೇಳಿರುವುದರಿಂದ ಅಗ್ನಿಶ್ರುತಿ-ಲಿಂಗಗಳು ಸಾವಕಾಶಗಳಾಗಿವೆ. ಅಲ್ಲದೆ, ಅಸಂಭವಾತ್ ಈ ಪ್ರಕರಣದ ಆರಂಭದಲ್ಲಿ ಹೇಳಿದ 'ಕೋ ನ ಆತ್ಮಾ' ಎಂಬ ಆತ್ಮಾದಿಶಬ್ದಗಳು ಅಗ್ನ್ಯಾದಿಗಳಲ್ಲಿ ಅಸಂಭಾವಿತವಾಗಿರುವುದರಿಂದಲೂ ಅಗ್ನಿ ವೈಶ್ವಾನರನಲ್ಲ. ಅಪಿ=ಮಾತ್ರವಲ್ಲದೆ ಏನಂ=ಈ ವೈಶ್ವಾನರನನ್ನು ಪುರುಷವಿಧಂ=ಪುರುಷಸೂಕ್ತದಲ್ಲಿ ಹೇಳಿರುವ ಪುರುಷನಂತೆಯೇ ಇಲ್ಲಿಯೂ ಅಧೀಯತೇ=ಪಠಿಸುತ್ತಾರೆ. ಪುರುಷಸೂಕ್ತದಲ್ಲಿ ಪುರುಷನಿಗೆ ಹೇಳಿರುವ ವಿಶೇಷಣಗಳನ್ನೇ ಇಲ್ಲಿ ವೈಶ್ವಾನರನಿಗೂ ಹೇಳಲಾಗಿದೆ.

(ಆದಿಪದಾತ್ ಲಿಂಗಾನಿ, ಅಂತಃ ಪ್ರತಿಷ್ಠಾನೇನ ತತ್ಕರ್ಮ ಉಪಲಕ್ಷ್ಯತೇ । 'ಅಯಮಗ್ನಿಃ' ಇತ್ಯಾದಿ ಅಗ್ನಿಶಬ್ದಾತ್ 'ವೈಶ್ವಾನರೇ ತದ್ಧುತಂ' ಇತಿ 'ಹೃದಯಂ ಗಾರ್ಹಪತ್ಯಃ' ಇತ್ಯಾದಿನಾ ಹೋಮಾದ್ಯಾಧಾರತ್ವ-ಗಾರ್ಹಪತ್ಯಾದ್ಯಂಗತ್ವಲಿಂಗೇಭ್ಯಃ, 'ಯೋಽಯಂ ಅಂತಃಪುರುಷೇ' 'ಯೇನೇದಂ ಅನ್ನಂ ಪಚ್ಯತೇ' ಇತಿ ಅಂತಃಪ್ರತಿಷ್ಠಾನೇನ ಪಚನವ್ಯಾಪಾರಾತ್, ಪಾಚಕತ್ವೇನ ಅಂತಃ ಪ್ರತಿಷ್ಠಾನಾತ್ ಇತಿ ವಾ ವೈಶ್ವಾನರೋ ನ ಬ್ರಹ್ಮ ಇತಿ ಚೇತ್। ನ । ಕುತಃ? ತಥಾ=ಅಗ್ನ್ಯಾದಿ ನಾಮ-ಲಿಂಗ-ಕರ್ಮವತ್ವೇನ ದೃಷ್ಟ್ಯುಪದೇಶಾತ್= ಉಪಾಸನೋಪದೇಶಾತ್ ತೇಷಾಂ ಸಾವಕಾಶತ್ವಾತ್ ಇತಿ ಭಾವಃ। ಕಿಂಚ, 'ಕೋ ನ ಆತ್ಮಾ ಕಿಂ ಬ್ರಹ್ಮ' ಇತಿ ಉಪಕ್ರಮೋಕ್ತ ಆತ್ಮತ್ವಾದ್ಯಸಂಭವಾತ್ । ಬ್ರಹ್ಮ ಪ್ರಕರಣಾಚ್ಚ ಇತಿ ಯಾವತ್, ಅಪಿ=ಕಿಂ ಚೇತ್ಯರ್ಥಃ। ಏನಂ=ವೈಶ್ವಾನರಂ ಪುರುಷವಿಧಂ= ಪುರುಷೋ ಯದ್ವಿದಃ ತದ್ವಿಧಂ ಅಧೀಯತೇ ಛಂದೋಗಾ ಯತೋ ಅತೋಽಪಿ ಇತಿ ಯೋಜ್ಯಮ್)

**4. ಓಂ॥ ಅತ ಏವ ನ ದೇವತಾ ಭೂತಂ ಚ॥ ಓಂ**

ಅತ ಏವ=ಆತ್ಮಶಬ್ದವಿರುವುದರಿಂದಲೇ ದೇವತಾ=ಅಗ್ನಿದೇವನಾಗಲೀ ಭೂತಂ= ಜಡವಾದ ಅಗ್ನಿಯಾಗಲೀ ನ-ವೈಶ್ವಾನರ ಪದವಾಚ್ಯರಲ್ಲ.

(ಆತ್ಮಶಬ್ದಾದಿತಿ ಹೇತೋರೇವ ಅಗ್ನಿರ್ದೇವತಾ, ತೇಜೋಭೂತಂ ಚ ವೈಶ್ವಾನರೋ ನ ಭವತಿ ।)

**5. ಓಂ ।। ಸಾಕ್ಷಾದಪಿ ಅವಿರೋಧಂ ಜೈಮಿನಿಃ ।। ಓಂ**

ಸಾಕ್ಷಾದಪಿ= ಮುಖ್ಯವೃತ್ತಿಯಿಂದ ವಿಷ್ಣುವು ಅಗ್ನ್ಯಾದಿಶಬ್ದಗಳಿಂದ ವಾಚ್ಯನಾದರೂ ಅವಿರೋಧಂ= ಲೌಕಿಕವ್ಯವಹಾರದ ವಿರೋಧವಿಲ್ಲವೆಂದು ಜೈಮಿನಿಃ= ಜೈಮಿನಿಯು ಹೇಳುತ್ತಾನೆ.

(ವಾಚ್ಯಾರ್ಥಧೀವ್ಯವಹಿತಂ ಲಕ್ಷಣಾದಿಕಂ ವಿನಾ ಸಾಕ್ಷಾತ್= ಮುಖ್ಯವೃತ್ತ್ಯಾ ಬ್ರಹ್ಮಣಃ ಅಗ್ನ್ಯಾದಿ ಶಬ್ದಾರ್ಥತ್ವೇಽಪಿ ಅನ್ಯತ್ರ ವ್ಯವಹಾರಾವಿರೋಧಂ ಜೈಮಿನಿಃ ಆಹ)

**6. ಓಂ ।। ಅಭಿವ್ಯಕ್ತೇರಿತಿ ಆಶ್ಮರಥ್ಯಃ ।। ಓಂ**

ಅಗ್ನ್ಯಾದಿ ಸೂಕ್ತಗಳನ್ನು ಉಪಾಸನೆ ಮಾಡಿದರೆ ವಿಷ್ಣುವು ಅಗ್ನ್ಯಾದಿಗಳಲ್ಲೇ ಅಭಿವ್ಯಕ್ತೇಃ= ಪ್ರತ್ಯಕ್ಷನಾಗುವುದರಿಂದ ಅಗ್ನಿಸೂಕ್ತ ವಾಯುಸೂಕ್ತ ಎಂಬ ನಿಯಮ ಸರಿ, ಇತಿ= ಹೀಗೆಂದು ಆಶ್ಮರಥ್ಯಃ= ಆಶ್ಮರಥ್ಯಾಚಾರ್ಯರು ಹೇಳುತ್ತಾರೆ.

(ಅಗ್ನ್ಯಾದಿಸೂಕ್ತಾದಿಭಿಃ ಬ್ರಹ್ಮೋಪಾಸ್ತೌ ಅಗ್ನ್ಯಾದಿಷ್ವೇವ ತಸ್ಯಾಭಿವ್ಯಕ್ತೇಃ ಇತಿ ಭಾವೇನ ಅಗ್ನ್ಯಾದಿಸೂಕ್ತನಿಯಮಃ ಇತಿ ಆಶ್ಮರಥ್ಯೋ ಮನ್ಯತೇ।)

**7. ಓಂ ।। ಅನುಸ್ಮೃತೇಃ ಬಾದರಿಃ ।। ಓಂ**

ಅಗ್ನ್ಯಾದಿಸೂಕ್ತೋಪಾಸಕರು ಅಗ್ನ್ಯಾದಿಮಾಧ್ಯಮಗಳಲ್ಲೇ ಅನುಸ್ಮೃತೇಃ= ಧ್ಯಾನಮಾಡಬೇಕಾದುದರಿಂದ ಸೂಕ್ತಗಳ ನಿಯಮ ಎಂದು ಬಾದರಿ (ಶುಕ)ಗಳು ಹೇಳುತ್ತಾರೆ.

(ತತ್ತತ್ ಸೂಕ್ತಾದ್ಯುಪಾಸಕೈಃ ಅಗ್ನ್ಯಾದಿಷ್ವೇವ ಬ್ರಹ್ಮಣೋಽನುಸ್ಮೃತೇಃ ಹೇತೋಃ= ಸೂಕ್ತಾದಿ ವ್ಯವಸ್ಥಾ ಇತಿ ಬಾದರಿಃ ಮನ್ಯತೇ।)

**8. ಓಂ ।। ಸಂಪತ್ತೇರಿತಿ ಜೈಮಿನಿಃ ತಥಾ ಹಿ ದರ್ಶಯತಿ ।। ಓಂ**

ಅಗ್ನ್ಯಾದಿ ಸೂಕ್ತಗಳನ್ನು ಉಪಾಸನೆ ಮಾಡುವವರಿಗೆ ಸಂಪತ್ತೇಃ= ಅಗ್ನ್ಯಾದಿಗಳ ಪ್ರಾಪ್ತಿಯಾಗುವುದರಿಂದ ಸೂಕ್ತನಿಯಮ ಇತಿ= ಎಂದು ಜೈಮಿನಿಗಳು ಹೇಳುತ್ತಾರೆ. ತಥಾಹಿ ದರ್ಶಯತಿ= 'ತಂ ಯಥಾ ಯಥೋಪಾಸತೇ ತದೇವ ಭವತಿ' ಎಂಬ ಶ್ರುತಿಯು ಜೈಮಿನಿ ಹೇಳಿದುದನ್ನು ತಿಳಿಸುತ್ತದೆ.

(ಅಗ್ನ್ಯಾದಿ ಸೂಕ್ತಾದಿ ಉಪಾಸಕಾನಾಂ ಅಗ್ನ್ಯಾದಿಪ್ರಾಪ್ತೇಃ ನಿಮಿತ್ತಾತ್ ಇತಿ ಭಾವೇನ ಸೂಕ್ತಾದಿನಿಯಮಃ ಇತಿ ಜೈಮಿನಿಃ ಮನ್ಯತೇ। ತದುಪಾಸ್ತೌ ತತ್ ಪ್ರಾಪ್ತಿಃ ಕುತಃ ? ತಥಾ ಹಿ ದರ್ಶಯತಿ= 'ತಂ ಯಥಾ...' ಇತಿ ಹಿ ಪ್ರಸಿದ್ಧಾ ಶ್ರುತಿಃ ಜೈಮಿನಿಮತಂ ಯಥಾ ತಥಾ ದರ್ಶಯತಿ।)

**9. ಓಂ ॥ ಆಮನಂತಿ ಚೈನಮಸ್ಮಿನ್ ॥ ಓಂ**

ಏನಂ=ವಿಷ್ಣುವನ್ನು ಅಸ್ಮಿನ್=ಈ ಅಗ್ನ್ಯಾದಿಗಳಲ್ಲಿ 'ಯೋ ಅಗ್ನೌ ತಿಷ್ಠನ್' ಎಂದು ಮುಂತಾಗಿ ಆಮನಂತಿ=ವೇದಗಳು ಹೇಳುತ್ತವೆ.

(ಏನಂ=ವಿಷ್ಣುಂ ಅಸ್ಮಿನ್=ಅಗ್ನ್ಯಾದೌ, 'ಯೋಽಗ್ನೌ ತಿಷ್ಠನ್' ಇತ್ಯಾದಿನಾ ಆಮನಂತಿ ಶ್ರುತಯಃ ಇತ್ಯರ್ಥಃ।)

## ಶಾಂಕರಭಾಷ್ಯದಲ್ಲಿ ಹೇಳಿದ ಸೂತ್ರಗಳ ಅರ್ಥ

**1. ವೈಶ್ವಾನರಃ ಸಾಧಾರಣಶಬ್ದವಿಶೇಷಾತ್ ।**

**ಪೂರ್ವಪಕ್ಷ** – ,ಛಾಂದೋಗ್ಯದಲ್ಲಿ ಹೇಳಿರುವ ವೈಶ್ವಾನರ ಜಾಠರಾಗ್ನಿ ಅಥವಾ ಭೂತಾಗ್ನಿ, ಅಗ್ನಿದೇವತೆ. ಈ ಮೂವರಿಗೂ ವೈದಿಕಸಾಹಿತ್ಯದ ವೈಶ್ವಾನರ ಶಬ್ದ ಪ್ರಯೋಗವಿದೆ. 'ಕೋ ನ ಆತ್ಮಾ' ಎಂದು ಪ್ರಕರಣಾರಂಭದಲ್ಲಿ ಆತ್ಮಶಬ್ದವಿರುವುದರಿಂದ ಜೀವ ಅಥವಾ ಪರಬ್ರಹ್ಮರೂ ವೈಶ್ವಾನರರೆನಿಸಬಹುದು. ಆತ್ಮಶಬ್ದ ಅವರಿಬ್ಬರಿಗೂ ಸಾಧಾರಣ. ಆದರೂ 'ಪ್ರಾದೇಶಮಾತ್ರಂ' ಎಂದು ವೈಶ್ವಾನರನು ಪರಿಚ್ಛಿನ್ನನೆಂದು ಹೇಳಿರುವುದರಿಂದ ಬ್ರಹ್ಮ ವೈಶ್ವಾನರನಲ್ಲ.

**ಸಿದ್ಧಾಂತ** : ವೈಶ್ವಾನರ-ಆತ್ಮಶಬ್ದಗಳು ಸಾಧಾರಣವಾದರೂ 'ಮೂರ್ಧೈವ ಸುತೇಜಾಃ' ಎಂದು ಮುಂತಾಗಿ ಆ ವೈಶ್ವಾನರನಿಗೆ ಜೀವನಿಗಿಲ್ಲದ ವಿಶೇಷವನ್ನು ಹೇಳಲಾಗಿದೆ. ಬ್ರಹ್ಮ ನಿರ್ಧರ್ಮಕನಾದರೂ ಇಂತಹ ಕಾಲ್ಪನಿಕ ರೂಪವಿಶೇಷಗಳಿಂದ ಅವನನ್ನು ಧ್ಯಾನಮಾಡಬೇಕಾದುದರಿಂದ ಹೀಗೆ ಹೇಳುವುದು ವಿರುದ್ಧವಲ್ಲ. ಆದ್ದರಿಂದ ಬ್ರಹ್ಮನೇ ಇಲ್ಲಿ ಹೇಳಲಾದ ವೈಶ್ವಾನರ.

**2. ಸ್ಮರ್ಯಮಾಣಂ ಅನುಮಾನಂ ಸ್ಯಾದಿತಿ ।**

ಯಸ್ಯಾಗ್ನಿರಾಸ್ಯಂ, ದ್ಯೌರ್ಮೂರ್ಧಾ, ಖಂ ನಾಭಿಶ್ಚರಣೌ ಕ್ಷಿತಿಃ।
ಸೂರ್ಯಃ ಚಕ್ಷುಃ, ದಿಶಃ ಶ್ರೋತ್ರಂ, ತಸ್ಮೈ ಲೋಕಾತ್ಮನೇ ನಮಃ॥

ಎಂದು ಸ್ಮೃತಿ ಇದೆ. ಇದರಲ್ಲಿ ಅಗ್ನಿ, ದ್ಯುಲೋಕ ಮುಂತಾದುವನ್ನು ಬ್ರಹ್ಮನ ಅವಯವಗಳನ್ನಾಗಿ ಹೇಳಲಾಗಿದೆ. ಸ್ಮೃತಿಯು ಶ್ರುತಿಗೆ ಜ್ಞಾಪಕ. ಈ ಸ್ಮೃತಿಯಿಂದಾಗಿ ಶ್ರುತಿಯಲ್ಲಿ ಹೇಳಲಾದ ಸ್ವರ್ಗಾದಿಲೋಕಗಳು ಬ್ರಹ್ಮನದೇ ಅವಯವಗಳು ಎಂದು ತಿಳಿಯುತ್ತದೆ. ಆದ್ದರಿಂದ ಬ್ರಹ್ಮನೇ ವೈಶ್ವಾನರ. (ಸ್ಮರ್ಯಮಾಣಂ=ಸ್ಮೃತಿಯಲ್ಲಿ ಹೇಳಿದ ಬ್ರಹ್ಮಸ್ವರೂಪವು ಅನುಮಾನಂ=ವೈಶ್ವಾನರಶ್ರುತಿಯೂ ಬ್ರಹ್ಮಪರ ಎನ್ನಲು ಗಮಕವಾಗುತ್ತದೆ.)

**3. ಶಬ್ದಾದಿಭ್ಯೋಽಂತಃ ಪ್ರತಿಷ್ಠಾನಾಚ್ಚ ನೇತಿ ಚೇನ್ನ ತಥಾ ದೃಷ್ಟ್ಯುಪದೇಶಾತ್ ಅಸಂಭವಾತ್ ಪುರುಷವಿಧಮಪಿ ಚೈನಮಧೀಯತೇ ॥**

ಅಗ್ನಿ ವೈಶ್ವಾನರ ಮುಂತಾದ ಬ್ರಹ್ಮೇತರವಾಚಕ ಶಬ್ದಗಳಿವೆ. 'ತದ್ಯದ್ಭಕ್ತಂ...' ಎಂದು ಪ್ರಾಣಾಹುತಿಗೆ ಅಧಿಕರಣವಾಗಿ ಅಗ್ನಿಯನ್ನು ಹೇಳಲಾಗಿದೆ. 'ಪುರುಷೇ ಅಂತಃ ಪ್ರತಿಷ್ಠಿತಂ' ಎಂದು ಜಠರದೊಳಗೆ ಇರುವುದಾಗಿ ಹೇಳಲಾಗಿದೆ. ಈ ಕಾರಣಗಳಿಂದ ಇಲ್ಲಿ ಹೇಳಿದ ವೈಶ್ವಾನರನು ಜಾಠರಾಗ್ನಿಯೇ ಆಗಿರಬೇಕು ಎನ್ನುವುದು ಸರಿಯಲ್ಲ. 'ಮನೋ ಬ್ರಹ್ಮೇತಿ ಉಪಾಸೀತ' ಎಂದಂತೆ ಜಾಠರಾಗ್ನಿಯನ್ನು ಬ್ರಹ್ಮನೆಂದು ಉಪಾಸನೆ ನಡೆಸುವುದಕ್ಕಾಗಿ ವೈಶ್ವಾನರನಲ್ಲಿ ಬ್ರಹ್ಮತ್ವವನ್ನು ಇಲ್ಲಿ ಹೇಳಲಾಗಿದೆ. ಅಥವಾ ಜಾಠರಾಗ್ನಿಯು ವೈಶ್ವಾನರನಿಗೆ ಉಪಾಧಿಯಾಗಿ ಹೇಳಲ್ಪಟ್ಟಿದೆ. ಕೇವಲ ಜಾಠರಾಗ್ನಿಯನ್ನಷ್ಟೇ ಇಲ್ಲಿ ಹೇಳಿದ್ದರೆ 'ಸ ಏಷೋಽಗ್ನಿಃ ವೈಶ್ವಾನರಃ ಯತ್ ಪುರುಷಃ'' ಎಂದು ವಾಜಸನೇಯ ಶಾಖೆಯಲ್ಲಿ ಅದಕ್ಕೆ ಪುರುಷತ್ವವನ್ನು ಹೇಳಿರುವುದು ಅಸಂಭಾವಿತವಾದೀತು. ಕೇವಲ ಜಾಠರಾಗ್ನಿಗೆ ಇಲ್ಲಿ ಹೇಳಿದ 'ಮೂರ್ಧೈವ ಸುತೇಜಾಃ' ಎಂಬ ವಿಶೇಷಗಳೂ ಹೊಂದುವುದಿಲ್ಲ. ಬ್ರಹ್ಮನಾದರೆ, ಸರ್ವಾತ್ಮಕನಾದುದರಿಂದ ಪುರುಷನೂ ಪುರುಷಾಂತರ್ಗತನೂ ಆಗುತ್ತಾನೆ. ಆದ್ದರಿಂದ ಬ್ರಹ್ಮನೇ ವೈಶ್ವಾನರ.

**4. ಅತ ಏವ ನ ದೇವತಾ ಭೂತಂ ಚ ।**

ಜಡವಾದ ಅಗ್ನಿಯ ಶಿರೋಭಾಗ ದ್ಯುಲೋಕವಾಗಿರಲು ಸಾಧ್ಯವಿಲ್ಲ. ಅಥವಾ ಅಗ್ನಿದೇವತೆಗೂ ಇಂತಹ ಸಾಮರ್ಥ್ಯವಿಲ್ಲ. ಶ್ರುತಿಯಲ್ಲಿ ವೈಶ್ವಾನರನಿಗೆ ಇಂತಹ ವಿಶಾಲರೂಪವನ್ನೂ ಆತ್ಮಶಬ್ದವನ್ನೂ ಹೇಳಿರುವುದರಿಂದ ಅಗ್ನಿದೇವತೆ, ಜಡಾಗ್ನಿ ಇಲ್ಲಿ ವಿವಕ್ಷಿತವಾದ ವೈಶ್ವಾನರನಲ್ಲ.

**5. ಸಾಕ್ಷಾದಪಿ ಅವಿರೋಧಂ ಜೈಮಿನಿಃ ।**

'ತಥಾ ದೃಷ್ಟ್ಯುಪದೇಶಾತ್' ಎಂದು ಜಾಠರಾಗ್ನಿಯು ಬ್ರಹ್ಮನಿಗೆ ಪ್ರತೀಕ ಅಥವಾ ಉಪಾಧಿ ಎನ್ನಲಾಯಿತು. ಆದರೆ ಜೈಮಿನಿ ಆಚಾರ್ಯರು ಪ್ರತೀಕ-ಉಪಾಧಿಗಳ ಕಲ್ಪನೆ ಇಲ್ಲದೆ ಸಾಕ್ಷಾತ್ ಪರಬ್ರಹ್ಮನೇ ವೈಶ್ವಾನರ ಶಬ್ದವಾಚ್ಯ ಎನ್ನುತ್ತಾರೆ. ಅವನಿಗೆ 'ಮೂರ್ಧೈವ ಸುತೇಜಾಃ' ಎಂದು ಹೇಳಿದಂತೆ ಅಂಗಾಂಗಳನ್ನು ಕಲ್ಪಿಸಿರುವುದರಿಂದ ಪುರುಷವಿಧತ್ವ ಉಪಪನ್ನವಾಗುತ್ತದೆ. ಬ್ರಹ್ಮನು ಸರ್ವಾತ್ಮಕನಾದುದರಿಂದ ವರ್ಣಿಸಿರುವ ಅನೇಕ ಅವಯವ ಸಮುದಾಯದಲ್ಲಿ ಅಂತಃಪ್ರವಿಷ್ಟನೂ ಆಗುತ್ತಾನೆ. ಹೀಗೆ 'ಪುರುಷತ್ವ-ಪುರುಷಾಂತಃ ಪ್ರವಿಷ್ಟತ್ವ' ಎರಡೂ ಉಪಪನ್ನವಾಗುವುದರಿಂದ ವ್ಯಾಪ್ತನಾದ ಬ್ರಹ್ಮನೇ ವೈಶ್ವಾನರ.

**6. ಅಭಿವ್ಯಕ್ತೇರಿತಿ ಆಶ್ಮರಥ್ಯಃ ।**

ಬ್ರಹ್ಮನು ವ್ಯಾಪ್ತನಾದರೂ 'ಅಂಗುಷ್ಠಮಾತ್ರ ಪರಿಮಿತನಾಗಿ ಪ್ರತ್ಯಕ್ಷನಾಗುವುದರಿಂದ ಇಲ್ಲಿ ವೈಶ್ವಾನರನಿಗೆ ಹೇಳಿದ 'ಪ್ರಾದೇಶಮಾತ್ರಂ' ಎಂಬ ವಿಶೇಷಣಯುಕ್ತವಾಗಿದೆ ಎಂದು ಆಶ್ಮರಥ್ಯರು ಹೇಳುತ್ತಾರೆ.

**7. ಅನುಸ್ಮೃತೇಃ ಬಾದರಿಃ ॥**

ಅಂಗುಷ್ಠಗಾತ್ರದ ಹೃದಯ ಪ್ರದೇಶದಲ್ಲಿರುವವನು ಎಂದು ಅವನನ್ನು ಧ್ಯಾನಿಸಬೇಕಾದುದರಿಂದ ವ್ಯಾಪ್ತನಾದರೂ ಬ್ರಹ್ಮನಿಗೆ 'ಪ್ರಾದೇಶಮಾತ್ರಂ' ಎಂಬ ಉಕ್ತಿ ಸರಿಯಾಗುತ್ತದೆ ಎನ್ನುತ್ತಾರೆ ಬಾದರಿಗಳು. (ಒಂದು ಸೇರಿನ ಪಾತ್ರೆಯಲ್ಲಿ ತುಂಬುವ ಅಕ್ಕಿಯನ್ನು 'ಸೇರು' ಎನ್ನುವಂತೆ)

**8. ಸಂಪತ್ತೇರಿತಿ ಜೈಮಿನಿಃ ತಥಾಹಿ ದರ್ಶಯತಿ ।**

ವೈಶ್ವಾನರನಿಗೆ ತಲೆಯಿಂದ ಕೆಳತುಟಿಯವರೆಗಿನ ಅಂಗಗಳನ್ನು ಹೇಳಲಾಗಿದೆ. ತಲೆಯಿಂದ ತುಟಿಯವರೆಗಿನ ಅಳತೆ 'ಪ್ರಾದೇಶ'. ಆದ್ದರಿಂದ ಅವನನ್ನು 'ಪ್ರಾದೇಶಮಾತ್ರಂ' ಎನ್ನಲಾಗಿದೆ. ವಾಜಸನೇಯ ಶಾಖೆಯಲ್ಲಿ ಹೀಗೆಯೇ ಇದೆ. 'ಪ್ರಾದೇಶಮಾತ್ರಮಿವ ಹ ವೈ ದೇವಾಃ ಸುವಿದಿತಾಃ' (ಇಲ್ಲಿ ಹೇಳಿರುವ ದ್ಯುಲೋಕದಿಂದ ಪೃಥಿವಿಯವರೆಗಿನ ಸ್ಥಾನಗಳು ವ್ಯಾಪ್ತನಾದ ಬ್ರಹ್ಮನ ಪ್ರಾದೇಶ ಮಾತ್ರ.) ಇದು ಜೈಮಿನಿ ಆಚಾರ್ಯರ ಮತ.

**9. ಆಮನಂತಿ ಚೈನಮಸ್ಮಿನ್ ।**

ಜಾಬಿಲ ಶ್ರುತಿಯು - ಹುಬ್ಬಿನಿಂದ ಕೆಳತುಟಿಯವರೆಗಿನ ಮುಖಭಾಗ ಪ್ರಾದೇಶ ಪರಿಮಿತವಾಗಿದ್ದು ಅದು ಜೀವನ ಸ್ಥಾನವಾಗಿದೆ ಎಂದು ಹೇಳಿದೆ. ಏನಂ=ಬ್ರಹ್ಮನನ್ನು (ಜೀವನನ್ನು) ಅಸ್ಮಿನ್=ಈ ಪ್ರಾದೇಶಸ್ಥಾನದಲ್ಲಿ ಆಮನಂತಿ=ಹೇಳುತ್ತಾರೆ. (ಏಷೋಽನಂತೋಽವ್ಯಕ್ತ ಆತ್ಮಾ ಸೋಽವಿಮುಕ್ತೇ ಪ್ರತಿಷ್ಠಿತಃ ಇತಿ । ಸೋಽವಿಮುಕ್ತಃ ಕಸ್ಮಿನ್ ಪ್ರತಿಷ್ಠಿತಃ ಇತಿ। ವರಣಾಯಾಂ (ಹುಬ್ಬು) ನಾಸ್ಯಾಂ ಚ ಮಧ್ಯೆ ಪ್ರತಿಷ್ಠಿತ ಇತಿ।)

## ಚಂದ್ರಿಕಾದಲ್ಲಿ ಮಾಡಿರುವ ವಿಮರ್ಶೆ

1. ವೈಶ್ವಾನರಶಬ್ದವು ಜಾತರ, ಭೂತಾಗ್ನಿ, ದೇವತೆ ಈ ಮೂರರಲ್ಲಿ ಸಾಧಾರಣವಾದುದು. ಆದ್ದರಿಂದ, ಅದರಿಂದ ಬ್ರಹ್ಮ ವಾಚ್ಯನಲ್ಲ ಎಂದು ಅದ್ವೈತ ಭಾಷ್ಯದ ಪೂರ್ವಪಕ್ಷ. ಆದರೆ 'ಸೋಽಯಮಾತ್ಮಾ ಚತುಷ್ಪಾತ್-ಸ್ಥೂಲಭುಕ್ ವೈಶ್ವಾನರಃ' (ಮಾಂಡೂಕೋಪನಿಷತ್) ಎಂದು ವೈಶ್ವಾನರ ಶಬ್ದದ ಪ್ರಯೋಗ ಬ್ರಹ್ಮನಲ್ಲೂ ಇದೆ. ಆದ್ದರಿಂದ, ವೈಶ್ವಾನರ ಶಬ್ದ ಮೂರರಲ್ಲಿ ಮಾತ್ರ ಎನ್ನುವ ಪೂರ್ವಪಕ್ಷ ಯುಕ್ತಿ ಸರಿಯಲ್ಲ.

ಅ) ಆತ್ಮಶಬ್ದವು ಜೀವ ಮತ್ತು ಈಶ್ವರರಲ್ಲಿ ಸಾಧಾರಣವಾದುದು ಎಂದೂ 'ಸಾಧಾರಣ ಶಬ್ದ' ಎಂಬ ಸೂತ್ರದ ಪದಕ್ಕೆ ಅರ್ಥ ಎಂದು ಅದ್ವೈತಭಾಷ್ಯದಲ್ಲಿ ಹೇಳಲಾಗಿದೆ. ಆದರೆ 'ದ್ಯುಭ್ವಾದ್ಯಾಯತನಂ ಸ್ವಶಬ್ದಾತ್' ಎಂಬ ಸೂತ್ರದಲ್ಲಿ 'ಸ್ವಶಬ್ದಾತ್-ಆತ್ಮಶಬ್ದಾತ್' ಎಂಬ ಹೇತುವನ್ನು ಹೇಳಿ ದ್ಯುಭ್ವಾದ್ಯಾಯತನತ್ವವನ್ನು ಬ್ರಹ್ಮನಿಗೆ ಶಾಂಕರಭಾಷ್ಯದಲ್ಲೇ ಸಮರ್ಥಿಸಲಾಗಿದೆ. ಇದರಿಂದ ಆತ್ಮಶಬ್ದ ಬ್ರಹ್ಮಮಾತ್ರ ವಾಚಕವೆಂದು ತಿಳಿಯುತ್ತದೆ. 'ನಾನುಮಾನಂ ಅತಚ್ಛಬ್ದಾತ್' ಎಂಬ ಸೂತ್ರದಲ್ಲೂ ಆತ್ಮಶಬ್ದ ಬ್ರಹ್ಮನಿಗೆ ಮಾತ್ರ

ಎನ್ನಲಾಗಿದೆ. ಆದಕ್ಕೆ ವಿರುದ್ಧವಾಗಿ ಈ ಸೂತ್ರದಲ್ಲಿ ಆತ್ಮಶಬ್ದ ಜೀವನಲ್ಲೂ ಇದೆ ಎನ್ನುವುದು ಅಯುಕ್ತ.

3. ವೈಶ್ವಾನರ ಬ್ರಹ್ಮನ ಪ್ರತೀಕ ಅಥವಾ ಬ್ರಹ್ಮನಿಗೆ ಉಪಾಧಿ ಎಂದು 'ತಥಾ ದೃಷ್ಟ್ಯುಪದೇಶಾತ್' ಎಂಬ ಸೂತ್ರಭಾಗದ ಅರ್ಥ ಎನ್ನುವುದು ಸರಿಯಲ್ಲ. ವೈಶ್ವಾನರನು ಪ್ರತೀಕವಾದರೆ ಆ ಶಬ್ದವು ಬ್ರಹ್ಮವಾಚಕವಾಗುವುದು ಹೇಗೆ? 'ಮನಸ್ಸು' ಬ್ರಹ್ಮ ಪ್ರತೀಕ-'ಮನೋ ಬ್ರಹ್ಮೇತಿ ಉಪಾಸೀತ'. ಆದರಿಂದ ಬ್ರಹ್ಮ ಮನಃ ಶಬ್ದವಾಚ್ಯನಾಗುತ್ತಾನೆಯೇ? ಅಲ್ಲದೆ, ಇಂತಹ ಪ್ರತೀಕಗಳಲ್ಲಿ ಬ್ರಹ್ಮೋಪಾಸನೆಯಿಂದ 'ಸರ್ವೇ ಪಾಪ್ಮಾನಃ ಪ್ರದೂಯಂತೇ' ಎಂದು ಹೇಳಿದ ಸರ್ವಪಾಪಕ್ಷಯವಾಗದು. ಅದು ನಿರ್ಗುಣೋಪಾಸನೆಯಿಂದ ಮಾತ್ರ ಸಾಧ್ಯ.

4. 'ಅಭಿವ್ಯಕ್ತೇರಿತಿ ಆಶ್ಮರಥ್ಯಃ' ಇತ್ಯಾದಿ ಸೂತ್ರಗಳು ಬ್ರಹ್ಮನಿಗೆ 'ಪ್ರಾದೇಶ ಪರಿಮಾಣವನ್ನು' ಸಮರ್ಥಿಸುತ್ತವೆ ಎಂಬ ವ್ಯಾಖ್ಯಾನವೂ ಸರಿಯಲ್ಲ. ಅದನ್ನು 'ಅರ್ಭಕೌಕಸ್ತ್ವಾತ್' ಇತ್ಯಾದಿ ಸೂತ್ರದಲ್ಲಿ 'ತಥಾ ದೃಷ್ಟ್ಯುಪದೇಶಾತ್' ಎಂದು ಸಮರ್ಥಿಸಿ ಆಗಿದೆ. ಆದ್ದರಿಂದ ಪುನರುಕ್ತಿ.

## ರಾಮಾನುಜ ಭಾಷ್ಯದಲ್ಲಿ ಹೇಳಿದ ಅರ್ಥ

**1. ವೈಶ್ವಾನರಃ ಸಾಧಾರಣ ಶಬ್ದವಿಶೇಷಾತ್**

ಜಾಠರಾಗ್ನಿ, ಭೂತಾಗ್ನಿ, ದೇವತೆ, ಪರಬ್ರಹ್ಮ ಈ ನಾಲ್ಕರಲ್ಲೂ ಸಾಧಾರಣವಾದ ವೈಶ್ವಾನರ ನಾಮಕ್ಕೆ ಇಲ್ಲಿ ಪರಮಾತ್ಮನಲ್ಲೇ ಇರುವ ಧರ್ಮಗಳನ್ನು ವಿಶೇಷಣಗಳನ್ನಾಗಿ ಹೇಳಲಾಗಿದೆ. ಆದ್ದರಿಂದ ವೈಶ್ವಾನರ ಬ್ರಹ್ಮ.

ಔಪಮನ್ಯವನೇ ಮೊದಲಾದ ಐದು ಮಂದಿ ಶಿಷ್ಯರು ವೈಶ್ವಾನರ ವಿದ್ಯೆಯನ್ನು ಉದ್ದಾಲಕರು ಬಲ್ಲವರೆಂದು ತಿಳಿದು ಅವರಲ್ಲಿಗೆ ಬಂದರು. ಆದರೆ, ಉದ್ದಾಲಕರು ತಾವೂ ಅದನ್ನು ಅಲ್ಪಸ್ವಲ್ಪವೇ ತಿಳಿದಿದ್ದೇವೆಂದು ಹೇಳಿ ಆ ವಿದ್ಯೆಯನ್ನು ಚೆನ್ನಾಗಿ ಬಲ್ಲ ಕೇಕಯದ ಅಶ್ವಪತಿರಾಜನ ಬಳಿ ಅವರನ್ನು ಕರೆದುಕೊಂಡು ಹೋದರು. ಅವರೆಲ್ಲರೂ ರಾಜನಲ್ಲಿ 'ಕೋ ನ ಆತ್ಮಾ ಕಿಂ ತದ್ಬ್ರಹ್ಮ' ಎಂದು ಬ್ರಹ್ಮನ ಕುರಿತು ಕೇಳಿದ ಪ್ರಶ್ನೆಗೆ ಉತ್ತರವಾಗಿ ವೈಶ್ವಾನರನನ್ನು ರಾಜನು ಉಪದೇಶ ಮಾಡಿದ್ದಾನೆ. ಆದುದರಿಂದ ವೈಶ್ವಾನರ ಬ್ರಹ್ಮ.

ವೈಶ್ವಾನರಃ ಪರಂ ಬ್ರಹ್ಮ ಜಾಠರಾದಿ ವಿಲಕ್ಷಣಮ್ ।
ಬ್ರಹ್ಮಶಬ್ದ ಪ್ರಭೃತಿಭಿಃ ಸಾಮಾನ್ಯಸ್ಯ ವಿಶೇಷಣಾತ್॥

**2. ಸ್ಮರ್ಯಮಾಣಂ ಅನುಮಾನಂ ಸ್ಯಾದಿತಿ ॥**

ದ್ಯುಲೋಕದಿಂದ ಪೃಥಿವೀಲೋಕಪರ್ಯಂತವಾಗಿ ಎಲ್ಲ ಲೋಕಗಳನ್ನೂ

ವೈಶ್ವಾನರನ ಅವಯವಗಳನ್ನಾಗಿ ನಿರೂಪಿಸಲಾಗಿದೆ. ಇಂತಹ ಅವಯವಗಳು ಬ್ರಹ್ಮನಿಗಿವೆ ಎಂದು 'ಅಗ್ನಿರ್ಮೂರ್ಧಾ' ಇತ್ಯಾದಿ ಶ್ರುತಿಗಳು ಹೇಳುತ್ತವೆ. ಅದೇ ರೂಪಗಳನ್ನು ವೈಶ್ವಾನರನಿಗೆ ಇಲ್ಲಿ ಉಲ್ಲೇಖಿಸಿರುವುದು (ಸ್ಮರ್ಯಮಾಣಂ-ಪ್ರತ್ಯಭಿಜ್ಞಾಯಮಾನಂ) ವೈಶ್ವಾನರ ಬ್ರಹ್ಮ ಎನ್ನಲು ಗಮಕ (ಅನುಮಾನಂ).

ಅಗ್ನಿರ್ಮೂರ್ಧೇತಿ ಯದ್ರೂಪಂ ಬ್ರಹ್ಮಣೋऽನ್ಯಶ್ರುತೌ ಸ್ಮೃತಮ್ ।
ವೈಶ್ವಾನರಃ ಪರಂ ಬ್ರಹ್ಮ ತದ್ರೂಪಸ್ಮರಣಾದಿಹ ॥

**3. ಶಬ್ದಾದಿಭ್ಯೋऽಂತಃ ಪ್ರತಿಷ್ಠಾನಾಚ್ಚ ನೇತಿ ಚೇನ್ನ**
**ತಥಾ ದೃಷ್ಟ್ಯುಪದೇಶಾತ್ ಅಸಂಭವಾತ್**
**ಪುರುಷವಿಧಮಪಿ ಚೈನಮಧೀಯತೇ ॥**

ಅಗ್ನಿಶಬ್ದಪ್ರಯೋಗ, ಗಾರ್ಹಪತ್ಯಾದಿ ತ್ರೈವಿಧ್ಯ ಕಲ್ಪನೆ, ಪ್ರಾಣಾಹುತಿಗೆ ಆಧಾರತ್ವ, 'ಅಂತಃ ಪ್ರತಿಷ್ಠಿತಂ ವೇದ' ಎಂದು ದೇಹದೊಳಗೆ ಸ್ಥಿತಿ ಈ ಕಾರಣಗಳಿಂದ ವೈಶ್ವಾನರ ಜಾಠರಾಗ್ನಿ ಎನ್ನಬಾರದು. ಜಾಠರಾಗ್ನಿಯು ಬ್ರಹ್ಮನ ಶರೀರವೆಂದು ಉಪಾಸನೆ ಮಾಡುವುದಕ್ಕಾಗಿ ಅಗ್ನ್ಯಾದಿ ಶಬ್ದ-ಲಿಂಗಗಳನ್ನು ವೈಶ್ವಾನರನಿಗೆ ಹೇಳಲಾಗಿದೆ. ಕೇವಲ ಜಾಠರಾಗ್ನಿಗೆ 'ಮೂರ್ಧೈವ ಸುತೇಜಾಃ' ಇತ್ಯಾದಿಯಾಗಿ ಹೇಳಿದ ತ್ರೈಲೋಕ್ಯಶರೀರತ್ವ ಅಸಂಭಾವಿತ. ಅಲ್ಲದೆ ವಾಜಸನೇಯರು 'ಸ ಏಷೋऽಗ್ನಿಃ ವೈಶ್ವಾನರಃ ಯತ್ ಪುರುಷಃ' ಎಂದು ವೈಶ್ವಾನರನನ್ನು ಪುರುಷ ಶಬ್ದದಿಂದ ಕರೆದಿದ್ದಾರೆ. 'ಸಹಸ್ರಶೀರ್ಷಾ ಪುರುಷಃ' ಎಂದು ಪುರುಷಶಬ್ದದಿಂದ ಪರಬ್ರಹ್ಮನೇ ವಾಚ್ಯ. ಆದ್ದರಿಂದ ಅವನೇ ವೈಶ್ವಾನರ.

**4. ಅತ ಏವ ನ ದೇವತಾ ಭೂತಂ ಚ** - ಹಿಂದೆ ಹೇಳಿದ ಕಾರಣಗಳಿಂದಲೇ ಅಗ್ನಿದೇವತೆ, ಭೂತಾಗ್ನಿ ಇವುಗಳು ವೈಶ್ವಾನರರಲ್ಲ.

**5. ಸಾಕ್ಷಾದಪಿ ಅವಿರೋಧಂ ಜೈಮಿನಿಃ।** ವಿಶ್ವ (ಸಕಲ) ನರರನ್ನು ನಿಯಮಿಸುವ ನಿಮಿತ್ತದಿಂದ ವೈಶ್ವಾನರ ಶಬ್ದವು ಸಾಕ್ಷಾತ್ ಪರಬ್ರಹ್ಮ ವಾಚಕವಾಗುವಂತೆ 'ಶ್ರೇಷ್ಠ ಪದವಿಗೆ ಒಯ್ಯುವವನು' (ಅಗ್ರನಯನ) ಎಂಬ ಧರ್ಮವನ್ನು ಹೇಳುವ ಮೂಲಕ ಅಗ್ನಿಶಬ್ದವೂ ಸಾಕ್ಷಾತ್ (ಜಡಾಗ್ನಿ ಶರೀರಕನೆಂಬ ವಿವಕ್ಷೆ ಇಲ್ಲದೆ) ಬ್ರಹ್ಮವಾಚಕ. ಇದು ಜೈಮಿನಿಯ ಮತ.

**6. ಅಭಿವ್ಯಕ್ತೇರಿತ್ಯಾಶ್ಮರಥ್ಯಃ** - ವ್ಯಾಪ್ತನಾದ ಬ್ರಹ್ಮನನ್ನು ಉಪಾಸನೆ ಮಾಡಲು ನಮ್ಮ ಬುದ್ಧಿಗೆ ಸಾಧ್ಯವಾಗದು. ಆದ್ದರಿಂದ ಅಭಿವ್ಯಕ್ತೇಃ-ಬುದ್ಧಿಸೌಕರ್ಯಕ್ಕಾಗಿ 'ಪ್ರಾದೇಶಮಾತ್ರಂ' ಎಂದು ವೈಶ್ವಾನರನಿಗೆ ಪರಿಚ್ಛೇದವನ್ನು ಹೇಳಲಾಗಿದೆ.

**7. ಅನುಸ್ಮೃತೇಃ ಬಾದರಿಃ** - ಈ ಪ್ರಕರಣದ ಕೊನೆಯಲ್ಲಿ 'ಯಸ್ತು ಏತಂ ಏವಂ' ಎಂದು ವೈಶ್ವಾನರನನ್ನು 'ದ್ಯುಶಿರಸ್ಕನನ್ನಾಗಿ ಉಪಾಸನೆ ಮಾಡಬೇಕು, ಎಂದು ಹೇಳಲಾಗಿದೆ.

ಅದಕ್ಕಾಗಿ ಈ ಪ್ರಕರಣದಲ್ಲಿ ಅವನಿಗೆ ಪುರುಷನಂತೆ ಅಂಗಾಂಗಗಳನ್ನು ಹೇಳಲಾಗಿದೆ. ಇದು ಬಾದರಿಯ ಮತ.

**8. ಸಂಪತ್ತೇರಿತಿ ಜೈಮಿನಿಃ ತಥಾ ಹಿ ದರ್ಶಯತಿ** - ವೈಶ್ವಾನರನ ವಿವಿಧ ಅವಯವಗಳನ್ನು ಯಜ್ಞದ ಅಂಗಗಳನ್ನಾಗಿ ನಿರೂಪಿಸಲಾಗಿದೆ- ಅವನ ಎದೆ ಯಜ್ಞವೇದಿಕೆ ಎಂದು ಮುಂತಾಗಿ. ಅದಕ್ಕೆ ಕಾರಣ, ನಾವು ಪ್ರತಿನಿತ್ಯ ಮಾಡುವ ಪ್ರಾಣಾಗ್ನಿಹೋತ್ರ ಸಫಲವಾಗುವುದೇ ಆಗಿದೆ (ಸಂಪತ್ತೇಃ). ಶ್ರುತಿ ಹಾಗೆಯೇ ಹೇಳಿದೆ. 'ಸ ಯ ಇದಂ ಅವಿದ್ವಾನ್ ಅಗ್ನಿಹೋತ್ರಂ ಜುಹೋತಿ, ಯಥಾ ಅಂಗಾರಾನಪೋಹ್ಯ ಅಗ್ನಿಹೋತ್ರಂ ಜುಹುಯಾತ್, ತಾದೃಕ್ ತತ್‌ಸ್ಯಾತ್ । ಅಥ ಯ ಏತದೇವಂ ವಿದ್ವಾನ್ ಅಗ್ನಿಹೋತ್ರಂ ಜುಹೋತಿ, ತಸ್ಯ ಸರ್ವೇಷು ಲೋಕೇಷು, ಸರ್ವೇಷು ಭೂತೇಷು, ಸರ್ವೇಷು ಆತ್ಮಸು ಹುತಂ ಭವತಿ (ಛಾಂ. 5-24-2) ಹೀಗೆ ಪ್ರಾಣಾಹುತಿಗೆ ಅಗ್ನಿಹೋತ್ರತ್ವ ಸಂಪತ್ತಿ(ಸಿದ್ಧಿ)ಗಾಗಿ ಯಜ್ಞಾಂಗ ಪರಿಕಲ್ಪನೆ.

**9. ಆಮನಂತಿ ಚೈನಮಸ್ಮಿನ್**—ಏನಂ=ಪರಮಾತ್ಮನನ್ನು ಅಸ್ಮಿನ್=ಉಪಾಸಕನ ದೇಹದಲ್ಲಿ ಆಮನಂತಿ=ಪ್ರಾಣಾಹುತಿಗೆ ಆಧಾರನನ್ನಾಗಿ ಛಂದೋಗರು ಹೇಳುತ್ತಾರೆ.

ವೈಶ್ವಾನರನಿಗೆ ತ್ರಿಲೋಕಗಳು ಶರೀರವಿದ್ದಂತೆ. ಅಂತಹ ತ್ರಿಲೋಕ ಶರೀರನಾದ ಪರಬ್ರಹ್ಮನನ್ನು ತನ್ನ ಶರೀರದಲ್ಲಿ ಸನ್ನಿಹಿತನಾಗಿದ್ದಾನೆ ಎಂದು ಉಪಾಸಕನು ತಿಳಿಯಬೇಕು. ತನ್ನ ತಲೆ, ಕಣ್ಣು ಕಾಲುಗಳಲ್ಲಿ ಅವನ ಅಂಗಾಂಗಗಳನ್ನು ಚಿಂತಿಸಿ ಎದೆ-ರೋಮ-ಹೃದಯ-ಮನಸ್ಸು-ಬಾಯಿ ಇವುಗಳನ್ನು ಯಜ್ಞಾಂಗಗಳಾದ ವೇದಿಕೆ-ದರ್ಭೆ-ಗಾರ್ಹಪತ್ಯ-ಅನ್ವಾಹಾರ್ಯಪಚನ-ಆಹವನೀಯ ಎಂದು ಅನುಸಂಧಾನ ಮಾಡಿ ಪ್ರಾಣಾಹುತಿಯನ್ನು ಅಗ್ನಿಹೋತ್ರವನ್ನಾಗಿ ಪರಿಗಣಿಸಬೇಕು ಎಂದು ಶ್ರುತಿಯ ಅಭಿಪ್ರಾಯ.

## ಚಂದ್ರಿಕಾದಲ್ಲಿ ಮಾಡಿರುವ ವಿಮರ್ಶೆ

'ಅಭಿವ್ಯಕ್ತೇರಿತಿ ಆಶ್ಮರಥ್ಯಃ' ಇತ್ಯಾದಿ ಸೂತ್ರಗಳು ಬೇರೆ ಬೇರೆ ಋಷಿಗಳ ಹೆಸರುಗಳನ್ನು ಉಲ್ಲೇಖಿಸಿ ಒಂದೇ ವಿಷಯದಲ್ಲಿ ಅಭಿಪ್ರಾಯಭೇದಗಳನ್ನು ಸೂಚಿಸಿದೆ. ಆದರೆ, ರಾಮಾನುಜಭಾಷ್ಯದಂತೆ ಈ ಸೂತ್ರಗಳು ಪ್ರತ್ಯೇಕ ಒಂದೊಂದು ವಿಷಯವನ್ನು ಸಮರ್ಥಿಸುತ್ತವೆ. ಇದು ಸ್ವರಸವೆನಿಸದು.

**ಇಲ್ಲಿಗೆ ವೈಶ್ವಾನರಾಧಿಕರಣ ಮುಗಿಯಿತು.**

**ಪ್ರಥಮಾಧ್ಯಾಯದ ಎರಡನೆ ಪಾದವೂ ಮುಗಿಯಿತು.**

## ಶ್ರೀಮದಾನಂದತೀರ್ಥರು ರಚಿಸಿರುವ

# ಬ್ರಹ್ಮಸೂತ್ರ ಭಾಷ್ಯ

### ಮೊದಲನೆಯ ಅಧ್ಯಾಯ

## ಮೂರನೆಯ ಪಾದ

॥ ಹರಿಃ ಓಂ ॥

ತತ್ರ ಚಾನ್ಯತ್ರ ಚ ಪ್ರಸಿದ್ಧಾನಾಂ ಶಬ್ದಾನಾಂ ವಿಷ್ಣೌ ಸಮನ್ವಯಂ ಪ್ರಾಯೇಣ ಅಸ್ಮಿನ್ ಪಾದೇ ದರ್ಶಯತಿ ।

ವಿಷ್ಣೋಃ ಪರವಿದ್ಯಾವಿಷಯತ್ವಂ ಉಕ್ತಮ್ । ತತ್ರ,

'ಯಸ್ಮಿನ್ ದ್ಯೌಃ ಪೃಥಿವೀ ಚಾಂತರಿಕ್ಷಮೋತಂ ಮನಃ ಸಹ ಪ್ರಾಣೈಶ್ಚ ಸರ್ವೈಃ ।

ತಮೇವೈಕಂ ಜಾನಥ ಆತ್ಮಾನಂ' (ಮುಂ.2.2.5) ಇತ್ಯತ್ರ,

ಪ್ರಾಣಾನಾಂ ಗ್ರಂಥಿರಸಿ ರುದ್ರೋ ಮಾऽವಿಶಾಂತಕಃ ॥ (ಮ.ನಾ.35)

'ಪ್ರಾಣೇಶ್ವರಃ ಕೃತ್ತಿವಾಸಾಃ ಪಿನಾಕೀ ॥' (ಘೃತಸೂ)

ಇತ್ಯಾದಿನಾ ರುದ್ರಸ್ಯ ಪ್ರಾಣಾಧಾರತ್ವಪ್ರತೀತೇಃ,

ಸ ಏಷೋऽಂತಶ್ಚರತೇ ಬಹುಧಾ ಜಾಯಮಾನಃ (ಮು.2.2.6)

ಇತಿ ಜೀವಲಿಂಗಾಚ್ಚ ತಯೋಃ ಪ್ರಾಪ್ತಿರಿತಿ । ಅತ ಉಚ್ಯತೇ-

### ಓಂ ॥ ದ್ಯುಭ್ವಾದ್ಯಾಯತನಂ ಸ್ವಶಬ್ದಾತ್ ॥ ಓಂ

'ತಮೇವೈಕಂ ಜಾನಥ ಆತ್ಮಾನಂ' ಇತಿ ಆತ್ಮಶಬ್ದಾತ್ ದ್ಯುಭ್ವಾದ್ಯಾಶ್ರಯೋ ವಿಷ್ಣುರೇವ ।

ಆತ್ಮಬ್ರಹ್ಮಾದಯಃ ಶಬ್ದಾಃ ತಮೃತೇ ವಿಷ್ಣುಮವ್ಯಯಮ್ ।
ನ ಸಂಭವಂತಿ ಯಸ್ಮಾತ್ತೈಃ ನೈವಾಪ್ತಾ ಗುಣಪೂರ್ಣತಾ ॥

ಇತಿ ಬ್ರಹ್ಮವೈವರ್ತೇ ॥ 1 ॥

ಈ ಪಾದದಲ್ಲಿ ವಿಷ್ಣು ಹಾಗೂ ಹೆಚ್ಚಾಗಿ ಇತರ ತತ್ತ್ವಗಳಲ್ಲಿ ಪ್ರಸಿದ್ಧವಾಗಿರುವ ಶಬ್ದಗಳನ್ನು ವಿಷ್ಣುವಿನಲ್ಲಿ ಸಮನ್ವಯ ಮಾಡಿ ತೋರಿಸಲಾಗಿದೆ. ಅದಕ್ಕೆ ಸಂಬಂಧಿಸಿದ ಕೆಲವು ಇತರ ವಿಷಯಗಳೂ ಇವೆ.

ಅದೃಶ್ಯತ್ವಾಧಿಕರಣದಲ್ಲಿ ವಿಷ್ಣು ಪರವಿದ್ಯೆಗೆ ವಿಷಯ ಎನ್ನಲಾಗಿದೆ. ಆ ಪರವಿದ್ಯಾವಿಷಯತ್ವವು (ತತ್ರ) 'ಯಸ್ಮಿದ್ಯೌಃ' ಎಂಬ ಆಥರ್ವಣ ಶ್ರುತಿಯಲ್ಲಿ ದ್ಯು-ಭೂ ಮೊದಲಾದ ಲೋಕಗಳಿಗೆ ಆಶ್ರಯನಾದವನಿಗೆ ಹೇಳಲ್ಪಟ್ಟಿದೆ. ಈ ದ್ಯುಭ್ವಾದಿ - ಆಯತನತ್ವ (ಆಶ್ರಯತ್ವ) ರುದ್ರದೇವ ಅಥವಾ ಜೀವರಿಗೆ ಇದೆ ಎನ್ನಬಹುದು. ಏಕೆಂದರೆ ದ್ಯುಭ್ವಾದಿ-ಆಶ್ರಯನಾದವನು 'ಮನಃ ಸಹ ಪ್ರಾಣೈಶ್ಚ ಸರ್ವೈಃ' ಎಂದು ಇಂದ್ರಿಯಗಳಿಗೆ ಆಧಾರ ನಾಗಿದ್ದಾನೆ ಎಂದಿದೆ. 'ಪ್ರಾಣಾನಾಂ ಗ್ರಂಥಿರಸಿ' ಎಂಬ ವಾಕ್ಯದಲ್ಲಿ ಪ್ರಾಣಾಧಾರ ರುದ್ರ ಎಂದು ತಿಳಿಯುತ್ತದೆ. ಅಲ್ಲದೆ, ರುದ್ರದೇವನಿಗೆ 'ಪ್ರಾಣೇಶ್ವರಃ' ಎಂಬ ಹೆಸರೂ ಇದೆ. ಅಥವಾ, ಈ ಲೋಕಾಶ್ರಯನಾದವನಿಗೆ 'ಸ ಏಷೋಽಂತಃ ಚರತೇ ಬಹುಧಾ ಜಾಯ ಮಾನಃ' ಎಂದು ಅನೇಕ ಶರೀರಗಳಲ್ಲಿ ಹುಟ್ಟಿ ಅದರೊಳಗಿರುತ್ತಾನೆ ಎಂದು ಜೀವಾತ್ಮನ ಧರ್ಮವನ್ನೂ ಹೇಳಲಾಗಿದೆ. ಹೀಗೆ ರುದ್ರ ಅಥವಾ ಜೀವಾತ್ಮನೇ ದ್ಯು-ಭುವಾದಿ ಆಯತನ ಎಂದು ಆಕ್ಷೇಪ ಬರುವ ಸಂಭವವಿರುವುದರಿಂದ ಸೂತ್ರಕಾರರು ಈ ಸೂತ್ರವನ್ನು ರಚಿಸಿದ್ದಾರೆ.

ದ್ಯುಭ್ವಾದ್ಯಾಯತನನಾದವನನ್ನು 'ತಮೇವೈಕಂ ಜಾನಥ ಆತ್ಮಾನಂ' ಎಂದು 'ಆತ್ಮ' ಎಂದಿರುವುದರಿಂದ ಅವನು ವಿಷ್ಣುವೆ. 'ಚತುರ್ಮುಖಾದಿ ದೇವತೆಗಳು ಗುಣಪೂರ್ಣರಲ್ಲ, ಆದುದರಿಂದ ಆತ್ಮ, ಬ್ರಹ್ಮ ಮೊದಲಾದ ಹೆಸರುಗಳು ವಿಷ್ಣುವಿಗೆ ಹೊರತು ಅವರಿಗಿಲ್ಲ' ಎಂದು ಬ್ರಹ್ಮವೈವರ್ತ ಪುರಾಣದಲ್ಲಿದೆ.

**ವಿವರಣೆ : 1.** ಈ ಪಾದದಲ್ಲಿ ಉಭಯತ್ರ ಪ್ರಸಿದ್ಧವಾದ ನಾಮ ಲಿಂಗಾತ್ಮಕ ಶಬ್ದಗಳನ್ನು ಸಮನ್ವಯ ಮಾಡಲಾಗಿದೆ. ವಿಷ್ಣುವಾಚಕವಾಗಿರುವ ಕೆಲವು ಹೆಸರುಗಳು ಅಥವಾ ಧರ್ಮವಾಚಕ ಶಬ್ದಗಳು (ಲಿಂಗಾತ್ಮಕಶಬ್ದ) ವೇದಾದಿ ಶಾಸ್ತ್ರಗಳಲ್ಲಿ ಇತರ ದೇವತೆಗಳಲ್ಲೂ ಪ್ರಯೋಗಿಸಲ್ಪಟ್ಟಿರುತ್ತವೆ. ಇಂತಹ ರೂಢಶಬ್ದಗಳು ಉಭಯತ್ರ ಪ್ರಸಿದ್ಧ ನಾಮಗಳು, ಧರ್ಮವಾಚಕ ಶಬ್ದಗಳು ಉಭಯತ್ರ ಪ್ರಸಿದ್ಧ ಲಿಂಗಗಳು. ಅಂತಹ ಶಬ್ದಗಳನ್ನು ಈ ಪಾದದಲ್ಲಿ ಸಮನ್ವಯ ಮಾಡಲಾಗಿದೆ. ಉದಾಹರಣೆಗೆ - 'ಅಕ್ಷರ' ಎಂಬ ಹೆಸರು ವೈದಿಕಸಾಹಿತ್ಯದಲ್ಲಿ ಲಕ್ಷ್ಮೀದೇವಿಗೂ ಇದೆ. ಪರಮಾತ್ಮನಿಗೂ ಇದೆ. ಇದು ಉಭಯತ್ರ ಪ್ರಸಿದ್ಧವಾದ ನಾಮಾತ್ಮಕ ಶಬ್ದ. 'ಹೃದಯಕಮಲದಲ್ಲಿಸ್ಥಿತಿ' (ಹೃತ್‌ಪದ್ಮಸ್ಥತ್ವ) ವಿಷ್ಣು ಹಾಗೂ ಆಕಾಶಗಳೆರಡರಲ್ಲೂ ಇದೆ. ಇದು ಉಭಯತ್ರ ಪ್ರಸಿದ್ಧಲಿಂಗಾತ್ಮಕ ಶಬ್ದ. ಇಂತಹ ಶಬ್ದಗಳು ವಿಷ್ಣುವಿನ ಮುಖ್ಯವಾಚಕಗಳು ಎಂದು ಈ ಪಾದದಲ್ಲಿ ಸಮರ್ಥಿಸಲಾಗುತ್ತದೆ.

ಆದರೆ, ಈ ಪಾದದ ದೇವತಾಧಿಕರಣದಲ್ಲಿ ಯಾವ ಶಬ್ದಗಳನ್ನೂ ಸಮನ್ವಯ

ಮಾಡಲಾಗಿಲ್ಲ. ಸಮನ್ವಯಕ್ಕೆ ಸಂಬಂಧಿಸಿರುವ ವೇದವಿದ್ಯಾಧಿಕಾರದ ಬಗ್ಗೆ ಅಲ್ಲಿ ಚರ್ಚಿಸಲಾಗಿದೆ. ಅದಕ್ಕಾಗಿ ಭಾಷ್ಯದಲ್ಲಿ 'ಪ್ರಾಯೇಣ' ಎಂದು ಹೇಳಲಾಗಿದೆ.

**2.** ಪ್ರಕೃತ ಭಾಷ್ಯವಾಕ್ಯದಲ್ಲಿ ಅನ್ವಯ ಕ್ಲಿಷ್ಟವಾಗಿದೆ. ಅದರಲ್ಲಿ ತತ್ರ ಎಂದರೆ ತತ್ ಅದು, ಇತ್ಯತ್ರ=ಈ ವಾಕ್ಯದಲ್ಲಿ ಎಂದರ್ಥ. 'ದ್ಯುಭ್ವಾದ್ಯಾಯತನೇ ಉಕ್ತಂ' ಎಂದು ಅಧ್ಯಾಹಾರ ಮಾಡಿಕೊಳ್ಳಬೇಕು. 'ತತ್ 'ಯಸ್ಮಿನ್ ದ್ಯೌಃ...' ಇತಿ ವಾಕ್ಯೇ ದ್ಯುಭ್ವಾದ್ಯಾಯತನೇ ಉಕ್ತಮ್' ಎಂದು ಒಂದು ವಾಕ್ಯ 'ತತ್ರ ತಯೋಃ ಪ್ರಾಪ್ತಿಃ' ಎಂದು ಮತ್ತೊಂದು ವಾಕ್ಯ. 'ಅತ್ರ ಪ್ರಾಣಾಧಾರತ್ವಪ್ರತೀತೇಃ ಜೀವಲಿಂಗಾಚ್ಚ' ಎಂದು, ಮೂರನೆಯ ವಾಕ್ಯ. ಉಳಿದಂತೆ ಸ್ಪಷ್ಟವಾಗಿದೆ.

**3. ಅ.** ಪೂರ್ವಪಕ್ಷ ಭಾಷ್ಯದ ಒಟ್ಟು ಅಭಿಪ್ರಾಯ - ಅದೃಶ್ಯತ್ವಾದಿ ಗುಣಗಳುಳ್ಳ ಅಕ್ಷರ ತತ್ತ್ವವು ಪರವಿದ್ಯೆಗೆ ವಿಷಯ. ಆ ಪರವಿದ್ಯಾ ವಿಷಯನಾದವನು ಸ್ವರ್ಗಾದಿಲೋಕಗಳಿಗೆ ಆಧಾರನಾಗಿದ್ದಾನೆ. ಅಂತಹವನು ಇಂದ್ರಿಯಗಳಿಗೆ ಆಶ್ರಯ. 'ಪ್ರಾಣೇಶ್ವರ' ಎಂದು ಅನ್ವರ್ಥನಾಮನಾದ ರುದ್ರ ಇಂದ್ರಿಯಾಶ್ರಯ. ಹೀಗಾಗಿ ಅವನೇ ಲೋಕಾಶ್ರಯ. ಅವನೇ ಪರವಿದ್ಯಾವಿಷಯ, ಅದೃಶ್ಯತ್ವಾದಿಗುಣಗಳುಳ್ಳವನು. ಆದುದರಿಂದ ಅದೃಶ್ಯತ್ವಾಧಿಕರಣದಲ್ಲಿ ಅದೃಶ್ಯತ್ವಾದಿ ಗುಣಗಳನ್ನು ವಿಷ್ಣುವಿಗೆ ಹೇಳಿರುವುದು ಅಯುಕ್ತ.

**ಆ.** ಪ್ರಕೃತಿಯೂ ಲೋಕಾಶ್ರಯವಾಗಬಹುದು. ಎಲ್ಲ ಲೋಕಗಳೂ ಪ್ರಾಕೃತಗಳು.

'ಯದ್ ಭೂತಂ ಚ ಭವಚ್ಚ ಭವಿಷ್ಯಚ್ಚೇತ್ಯಾಚಕ್ಷತೇ
ಆಕಾಶೇ ಏವ ತದೋತಂ ಚ ಪ್ರೋತಂ ಚ'

ಎಂಬ ಶ್ರುತಿಯಲ್ಲಿ ಆಕಾಶಶಬ್ದದಿಂದ ಪ್ರಕೃತಿಗೆ ಲೋಕಾಶ್ರಯತ್ವ ತಿಳಿಯುತ್ತದೆ.

**ಇ.** ಅಥವಾ ವಾಯುದೇವ ಲೋಕಾಧಾರನಾಗಬಹುದು. 'ವಾಯುನಾ ವಾ ಗೌತಮಸೂತ್ರೇಣ ಅಯಂ ಲೋಕಃ ಪರಶ್ಚ ಲೋಕಃ ಸರ್ವಾಣಿ ಭೂತಾನಿ ಸಂದೃಬ್ಧಾನಿ ಭವಂತಿ' ಇತ್ಯಾದಿ ಶ್ರುತಿಯಿಂದ ಅವನಿಗೂ ಲೋಕಾಶ್ರಯತ್ವ ಸಿದ್ಧವಾಗುತ್ತದೆ.

**ಈ.** 'ಬಹುಧಾ ಜಾಯಮಾನಃ' ಎಂದು ಜೀವಾತ್ಮನಿಗೆ ಸಂಬಂಧಿಸಿರುವ ಧರ್ಮವನ್ನು ಹೇಳಿರುವುದರಿಂದ ಅವನೂ ಇಲ್ಲಿ ಪ್ರಸ್ತುತನಾಗಿದ್ದಾನೆ.

ಪರಬ್ರಹ್ಮನಿಗೆ 'ಜಾಯಮಾನಃ' ಎಂಬ ವಿಶೇಷಣ ಸಂಗತವಾಗುವುದಿಲ್ಲ. ಆದರೆ 'ಪರವಿದ್ಯಾವಿಷಯತ್ವ' ಎಂಬ ಬ್ರಹ್ಮಧರ್ಮ ಜೀವನಿಗೂ ಇದೆ. ಏಕೆಂದರೆ ಅವರಿಬ್ಬರೂ ಅಭಿನ್ನರು. ಆದರೂ ಜೀವನ ಧರ್ಮ ಈಶನಿಗಿಲ್ಲ. ಈಶನ ಧರ್ಮವನ್ನು ಜೀವನಿಗೆ ಹೇಳಬಹುದು. ಆದ್ದರಿಂದ ಜೀವಾತ್ಮನೇ ಇಲ್ಲಿ ಲೋಕಾಶ್ರಯನಾಗಿ ಹೇಳಲ್ಪಟ್ಟಿದ್ದಾನೆ.

**4. ಸಿದ್ಧಾಂತ :** ಲಿಂಗಕ್ಕಿಂತ ಶ್ರುತಿ ಪ್ರಬಲವಾದುದರಿಂದ 'ಆತ್ಮ' ಶ್ರುತಿ (ಶಬ್ದ) ಯಿಂದಾಗಿ ವಿಷ್ಣುವೇ ಲೋಕಾಧಾರ, ಪರವಿದ್ಯಾ ವಿಷಯ, ಅದೃಶ್ಯತ್ವಾದಿಗುಣಕ,

**ಶ್ರುತ್ಯರ್ಥ- ಅ.**

ಯಸ್ಮಿನ್ ದ್ಯೌಃ ಪೃಥಿವೀ ಚಾಂತರಿಕ್ಷಮೋತಂ ಮನಃ ಸಹ ಪ್ರಾಣೈಶ್ಚ ಸರ್ವೈಃ।
ತಮೇವೈಕಂ ಜಾನಥ ಆತ್ಮಾನಂ ಅನ್ಯಾ ವಾಚೋ ವಿಮುಂಚಥ ಅಮೃತಸ್ಯೈಷ ಸೇತುಃ॥

ಈ ಅಥರ್ವಣ ಮಂತ್ರ ಪ್ರಕೃತ ಅಧಿಕರಣದ ವಿಷಯವಾಕ್ಯ, ಇದರಲ್ಲಿ 'ತಮೇವ ಜಾನಥ, ಅನ್ಯಾ ವಾಚಃ ವಿಮುಂಚಥ. ಅವನನ್ನೇ ತಿಳಿಯಿರಿ. ಉಳಿದ ಮಾತುಗಳನ್ನು ಬಿಡಿ' 'ಅಮೃತಸ್ಯೈಷ ಸೇತುಃ- ಮೋಕ್ಷ ಕಾರಣವಾದ ಜ್ಞಾನಕ್ಕೆ ಅವನೇ ವಿಷಯ' ಹೀಗೆ ಆತ್ಮನ ಜ್ಞಾನ ಮೋಕ್ಷಕ್ಕೆ ಕಾರಣ ಎಂದಿದೆ. ಮೋಕ್ಷಕಾರಣವಾದ ಜ್ಞಾನವೇ ಪರವಿದ್ಯೆ. ಅದು ಯಾರ ಜ್ಞಾನ? 'ಯಾರಲ್ಲಿ ಈ ಸ್ವರ್ಗ, ಭೂಮಿ, ಆಕಾಶಗಳೂ ಇತರ ಇಂದ್ರಿಯಗಳೊಂದಿಗೆ ಮನಸ್ಸೂ ಆಶ್ರಯಿಸಿದೆಯೋ ಅವನ ಜ್ಞಾನ. ಅದೇ ಪರವಿದ್ಯೆ.

ಆ. ಪ್ರಾಣಾನಾಂ ಗ್ರಂಥಿರಸಿ ರುದ್ರೋ ಮಾऽವಿಶಾಂತಕಃ
ತೇನಾನ್ನೇನಾಪ್ಯಾಯಸ್ವ॥ ಇದು ನಾರಾಯಣೋಪನಿಷತ್ತಿನ ಮಂತ್ರ.

ರುದ್ರೋ ಮಾ ವಿಶಾಂತಕಃ - 'ರುದ್ರ- ಉ- ಮಾ- ಆವಿಶ- ಅಂತಕಃ' ಎಂದು ಪದಚ್ಛೇದ. ಹೇ ರುದ್ರ= ರುದ್ರನೇ, (ತ್ವಂ) ಪ್ರಾಣಾನಾಂ= ನೀನು ಇಂದ್ರಿಯಗಳಿಗೆ ಗ್ರಂಥಿಃ ಅಸಿ= ಆಶ್ರಯನಾಗಿದ್ದಿ. ಅಂತಕಃ= ನಾಶಕನೂ ಅಸಿ= ಆಗಿದ್ದಿ. ಅಂತಹ ನೀನು ಮಾ= ನನ್ನನ್ನು ಆವಿಶ= ಪ್ರವೇಶಿಸು. ತೇನ- ನಿನಗೆ ಆಹುತಿಯಾಗಿ ನೀಡಿರುವ ಅನ್ನೇನ= ಆಹಾರದಿಂದ ಆಪ್ಯಾಯಸ್ವ= ನನ್ನನ್ನು ಸುಖಿಯನ್ನಾಗಿಸು.

ಇ. ಯೋ ಬ್ರಹ್ಮ ಬ್ರಹ್ಮಣ ಉಜ್ಜಭಾರ ಪ್ರಾಣೇಶ್ವರಃ ಕೃತ್ತಿವಾಸಾಃ ಪಿನಾಕೀ।
ಈಶಾನೋ ದೇವಃ ಸ ನ ಆಯುರ್ದಧಾತು॥ (ಘೃತಸೂಕ್ತ)

ಯಃ= ಯಾರು ಬ್ರಹ್ಮಣೇ= ಚತುರ್ಮುಖನಿಗಾಗಿ ಬ್ರಹ್ಮ= ವೇದಗಳನ್ನು ಉಜ್ಜಭಾರ= ಉದ್ಧರಿಸಿದನೋ ಸಃ= ಅಂತಹ ಪ್ರಾಣೇಶ್ವರಃ= ಇಂದ್ರಿಯಾಧಿಪತಿಯಾದ ಕೃತ್ತಿವಾಸಾಃ= ಚರ್ಮಾಂಬರನಾದ ಪಿನಾಕೀ= ಪಿನಾಕ ಎಂಬ ಧನುರ್ಧಾರಿಯಾದ ಈಶಾನಃ= ರುದ್ರನು ಆಯುಃ= ಆಯುಷ್ಯವನ್ನು ದಧಾತು= ಹೆಚ್ಚಿಸಲಿ.

(ಸಿದ್ಧಾಂತದಂತೆ ಈ ವಾಕ್ಯವೂ ವಿಷ್ಣುಪರ. 'ಕೃತ್ತಿವಾಸಾಃ' ಎಂದರೆ ಚರ್ಮದ ನಮ್ಮ ಈ ದೇಹದಲ್ಲಿ ವಾಸಮಾಡುವವನು. 'ಪಿನಾಕೀ' (ನಾಕಂ= ಸುಖಂ ಪಿಬತಿ) ಸುಖಭೋಕ್ತೃಗಳಾದ ಮುಕ್ತರಿಗೆ ಆಶ್ರಯನಾದ ಶ್ರೀಹರಿ) ॥ 1 ॥

## ಓಂ ॥ ಮುಕ್ತೋಪಸೃಪ್ಯವ್ಯಪದೇಶಾತ್ ॥ ಓಂ

**'ಅಮೃತಸ್ಯೈಷ ಸೇತುಃ' ಇತಿ । ಬ್ರಹ್ಮವಿದಾಪ್ನೋತಿ ಪರಂ (ತೈ.2.1) ನಾರಾಯಣಂ ಮಹಾಜ್ಞೇಯಂ ವಿಶ್ವಾತ್ಮಾನಂ ಪರಾಯಣಂ (ಮಹಾನಾ 11) ಮುಕ್ತಾನಾಂ ಪರಮಾ ಗತಿಃ (ವಿಷ್ಣು.ಸ.) ಏತಮಾನಂದಮಯಮಾತ್ಮಾನಮುಪ ಸಂಕ್ರಾಮತಿ (ತೈ. 3.8)**

**ಇತ್ಯಾದಿನಾ ತಸ್ಯೈವ ಮುಕ್ತ-ಪ್ರಾಪ್ಯತ್ವ-ವ್ಯಪದೇಶಾತ್।**

**ಬಹುನಾತ್ರ ಕಿಮುಕ್ತೇನ ಯಾವತ್ಶ್ವೇತಂ ನ ಗಚ್ಛತಿ ।**

**ಯೋಗೀ ತಾವನ್ನ ಮುಕ್ತಃ ಸ್ಯಾದೇಷ ಶಾಸ್ತ್ರವಿನಿರ್ಣಯಃ ॥**

**ಇತಿ ಆದಿತ್ಯ ಪುರಾಣೇ ॥ 2 ॥**

'ಅಮೃತಸ್ಯ ಏಷಃ ಸೇತುಃ' ಎಂದು ಇಲ್ಲಿ ಮುಕ್ತರಿಂದ ಹೊಂದಲ್ಪಡುವವನಾಗಿ ಹೇಳಲ್ಪಟ್ಟಿರುವುದರಿಂದ ಆತ್ಮಶಬ್ದದ ಮುಖ್ಯಾರ್ಥವಾದ ಪರಮಾತ್ಮನೇ ವಿವಕ್ಷಿತ. ಆದ್ದರಿಂದ ಅವನೇ ದ್ಯುಭ್ವಾದ್ಯಾಯತನ.

'ಬ್ರಹ್ಮಜ್ಞಾನಿ ಪರಬ್ರಹ್ಮನನ್ನು ಹೊಂದುತ್ತಾನೆ'. 'ಈ ವಿಶ್ವವು ಪೂಜ್ಯನಾಗಿ ತಿಳಿಯಲ್ಪಡಬೇಕಾದ, ಜಗದೊಡೆಯನಾದ, ಮುಕ್ತ ಪ್ರಾಪ್ಯನಾದ ನಾರಾಯಣನನ್ನು ಉಪಜೀವಿಸಿಕೊಂಡಿದೆ'. 'ಮುಕ್ತರಿಗೆ ವಿಷ್ಣು ಪರಮಪ್ರಾಪ್ಯ' 'ಆನಂದಮಯನಾದ ಈ ಪರಮಾತ್ಮನ ಬಳಿಗೆ (ಜ್ಞಾನಿಯು) ಹೋಗುತ್ತಾನೆ' ಈ ಎಲ್ಲ ಪ್ರಮಾಣಗಳಿಂದ ಮುಕ್ತರಿಗೆ ಪ್ರಾಪ್ಯನಾದವನು ವಿಷ್ಣುವೆ.

ಹೆಚ್ಚು ಮಾತೇಕೆ, ಅಪರೋಕ್ಷ ಜ್ಞಾನಿಯು ಶ್ವೇತದ್ವೀಪವೆಂಬ ವಿಷ್ಣುವಿನ ಸ್ಥಾನಕ್ಕೆ ಹೋಗಿ ಅವನ ದರ್ಶನ ಪಡೆಯದ ಹೊರತು ಪರಮಾತ್ಮನ ಇಚ್ಛಾರೂಪವಾದ ಆವರಣವನ್ನು ಕಳೆದುಕೊಳ್ಳಲಾರ. (ನ ಮುಕ್ತಃ ಸ್ಯಾತ್) ಎಂದು ಆದಿತ್ಯ ಪುರಾಣದಲ್ಲಿದೆ.

**ವಿವರಣೆ :** ಸ್ವರ್ಗಾದಿ ಲೋಕಾಶ್ರಯ ಆತ್ಮ ಎಂದಿದೆ ಉಪನಿಷತ್ತಿನಲ್ಲಿ. ಆತ್ಮಶಬ್ದದ ಮುಖ್ಯಾರ್ಥ ವಿಷ್ಣು. ಅಮುಖ್ಯಾರ್ಥ ಇತರ ಜೀವರು. ಹಾಗಿದ್ದ ಮೇಲೆ ಹಿಂದೆ ಪೂರ್ವಪಕ್ಷದಲ್ಲಿ ಹೇಳಿದ ಯುಕ್ತಿಗಳ ಆಧಾರದಿಂದ ಇತರ ಜೀವರೂ ಏಕೆ ಲೋಕಾಶ್ರಯರಾಗಿರಬಾರದು? ಈ ಪ್ರಶ್ನೆಗೆ ಎರಡನೆಯ ಸೂತ್ರ ನೀಡಿದ ಸಮಾಧಾನ - ಅಥರ್ವಣ ಶ್ರುತಿಯಲ್ಲಿ ಲೋಕಾಶ್ರಯನಾದ ಆತ್ಮ 'ಮುಕ್ತರಿಗೆ ಗಮ್ಯ' ಎಂದಿದೆ. ಅದು ವಿಷ್ಣುವಿನ ಧರ್ಮ. ಆದ್ದರಿಂದ ಆತ್ಮಶಬ್ದಕ್ಕೆ ಅಮುಖ್ಯಾರ್ಥವನ್ನು ಮಾಡಬಾರದು. ॥ 2 ॥

## ಓಂ ॥ ನಾನುಮಾನಮತಚ್ಛಬ್ದಾತ್ ॥ ಓಂ

**ನಾನುಮಾನಾತ್ಮಕ-ಆಗಮ–ಪರಿಕಲ್ಪಿತರುದ್ರೋಽತ್ರ ವಾಚ್ಯಃ । ಭಸ್ಮಧರ-ಉಗ್ರತ್ವಾದಿ ತಚ್ಛಬ್ದಾಭಾವಾತ್ ।**

'ಸೋಽಂತಕಃ, ಸ ರುದ್ರಃ, ಸ ಪ್ರಾಣಭೃತ್, ಸ ಪ್ರಾಣನಾಯಕಃ, ಸ ಈಶೋ,
ಯೋ ಹರಿಃ, ಯೋಽನಂತಃ, ಯೋ ವಿಷ್ಣುಃ, ಯಃ ಪರೋವರೀಯಾನ್'

ಇತ್ಯಾದಿನಾ ಪ್ರಾಣಗ್ರಂಥಿರುದ್ರತ್ವಾದೇಃ ವಿಷ್ಣೋರೇವ ಉಕ್ತತ್ವಾತ್ ।

ಬ್ರಹ್ಮಾಂಡೇ ಚ-

ರುಜಂ ದ್ರಾವಯತೇ ಯಸ್ಮಾತ್ ರುದ್ರಸ್ತಸ್ಮಾಜ್ಜನಾರ್ದನಃ ।
ಈಶಾನಾದೇವ ಚೇಶಾನೋ ಮಹಾದೇವೋ ಮಹತ್ತ್ವತಃ ॥

ಪಿಬಂತಿ ಯೇ ನರಾ ನಾಕಂ ಮುಕ್ತಾಃ ಸಂಸಾರಸಾಗರಾತ್ ।
ತದಾಧಾರೋ ಯತೋ ವಿಷ್ಣುಃ ಪಿನಾಕೀತಿ ತತಃ ಸ್ಮೃತಃ ॥

ಶಿವಃ ಸುಖಾತ್ಮಕತ್ವೇನ ಶರ್ವಃ ಶಂರೋಧನಾದ್ ಹರಿಃ ।
ಕೃತ್ಯಾತ್ಮಕಮಿಮಂ ದೇಹಂ ಯತೋ ವಸ್ತೇ ಪ್ರವರ್ತಯನ್ ।
ಕೃತ್ತಿವಾಸಾಸ್ತತೋ ದೇವೋ ವಿರಿಂಚಶ್ಚ ವಿರೇಚನಾತ್ ।
ಬೃಂಹಣಾದ್ ಬ್ರಹ್ಮನಾಮಾಸೌ ಐಶ್ವರ್ಯಾದಿಂದ್ರ ಉಚ್ಯತೇ ॥

ಏವಂ ನಾನಾ ವಿಧೈಃ ಶಬ್ದೈಃ ಏಕ ಏವ ತ್ರಿವಿಕ್ರಮಃ ।
ವೇದೇಷು ಸಪುರಾಣೇಷು ಗೀಯತೇ ಪುರುಷೋತ್ತಮಃ ॥ ಇತಿ ।

ವಾಮನೇ ಚ,

ನ ತು ನಾರಾಯಣಾದೀನಾಂ ನಾಮ್ನಾಮನ್ಯತ್ರ ಸಂಭವಃ ।
ಅನ್ಯನಾಮ್ನಾಂ ಗತಿರ್ವಿಷ್ಣುಃ ಏಕ ಏವ ಪ್ರಕೀರ್ತಿತಃ ॥ ಇತಿ ।

ಸ್ಕಾಂದೇ ಚ,

ಋತೇ ನಾರಾಯಣಾದೀನಿ ನಾಮಾನಿ ಪುರುಷೋತ್ತಮಃ ।
ಪ್ರಾದಾದನ್ಯತ್ರ ಭಗವಾನ್ ರಾಜೇವರ್ತೇ ಸ್ವಕಂ ಪುರಮ್ ॥ ಇತಿ ।

ಚತುರ್ಮುಖಃ ಶತಾನಂದೋ ಬ್ರಹ್ಮಣಃ ಪದ್ಮಭೂರಿತಿ ।
ಉಗ್ರೋ ಭಸ್ಮಧರೋ ನಗ್ನಃ ಕಪಾಲೀತಿ ಶಿವಸ್ಯ ಚ ।
ವಿಶೇಷನಾಮಾನಿ ದದೌ ಸ್ವಕೀಯಾನ್ಯಪಿ ಕೇಶವಃ ॥

ಇತಿ ಚ ಪಾದ್ಮೇ ॥ 3 ॥

ಅನುಮಾನರೂಪವಾದ ಪಾಶುಪತ ಎಂಬ ಆಗಮದಿಂದ ಸರ್ವಾಶ್ರಯನೆಂದು ಸಿದ್ಧನಾಗುವ ರುದ್ರದೇವ ಅಥರ್ವಣ ಮಂತ್ರದಿಂದ ಪ್ರತಿಪಾದ್ಯನಲ್ಲ. ಏಕೆಂದರೆ, ಅವನಿಗೆ ಸಂಬಂಧಿಸಿರುವ 'ಭಸ್ಮಧರ' ಎಂಬ ಹೆಸರಾಗಲೀ 'ಉಗ್ರತ್ವ-ಕ್ರೂರತ್ವ' ರೂಪವಾದ ಲಿಂಗವಾಗಲೀ ಇಲ್ಲಿ ಇಲ್ಲ.

''ಯಾರು ಸಂಹಾರಕಾರಣನೆಂದು ಶ್ರುತಿಯಲ್ಲಿ ಹೇಳಲ್ಪಟ್ಟಿರುವನೋ ಅವನು ವಿಷ್ಣು, ಯಾರು ರುದ್ರನೆಂದು ಶ್ರುತನಾಗಿರುವನೋ ಅವನೂ ವಿಷ್ಣು, ಯಾರು ಪ್ರಾಣಾಧಾರನಾಗಿ 'ಪ್ರಾಣಾನಾಂ ಗ್ರಂಥಿಃ' ಎಂದು ಶ್ರುತಿಯಲ್ಲಿ ಉಲ್ಲೇಖಿಸಲ್ಪಟ್ಟಿರುವನೋ ಅವನೂ ವಿಷ್ಣು. ಯಾರು 'ಪ್ರಾಣೇಶ' ಎಂದು ಪ್ರಾಣನಾಯಕನಾಗಿ ಹೇಳಲ್ಪಟ್ಟಿರುವನೋ ಅವನು ವಿಷ್ಣು. 'ಈಶ'ನೆಂದು ಶ್ರುತನೂ ವಿಷ್ಣು. ಅನಂತಶಬ್ದದಿಂದ ವಾಚ್ಯನೂ, ರುದ್ರನಿಂದ ಉತ್ತಮಳಾದ ಸರಸ್ವತೀದೇವಿಗಿಂತ ಶ್ರೇಷ್ಠನಾದ ಬ್ರಹ್ಮನಿಗಿಂತ ಉತ್ತಮಳಾದ ಲಕ್ಷ್ಮೀದೇವಿಗಿಂತಲೂ ಉತ್ತಮನಾದುದರಿಂದ 'ಪರೋವರೀಯಾನ್' ಎನಿಸಿರುವವನೂ ವಿಷ್ಣು.'' ಈ ಪ್ರಮಾಣದಿಂದ 'ಪ್ರಾಣಗ್ರಂಥಿತ್ವ' 'ರುದ್ರತ್ವ' ಮುಂತಾದ ಧರ್ಮಗಳೂ ವಿಷ್ಣುವಿಗೇ ಹೇಳಲ್ಪಟ್ಟಿವೆ.

ಬ್ರಹ್ಮಾಂಡ ಪುರಾಣದಲ್ಲಿ ಹೀಗಿದೆ- ರೋಗವನ್ನು=ಸಂಸಾರದಲ್ಲಿ ಜನ್ಮವನ್ನು ನಾಶಮಾಡುವುದರಿಂದ ಜನಾರ್ದನನು 'ರುದ್ರ' ಎನಿಸಿದ್ದಾನೆ. ವಿಷ್ಣು ಜಗತ್ಪ್ರೇರಕನಾದುದರಿಂದ ಈಶಾನನೆನಿಸಿದ್ದಾನೆ. ಸರ್ವೋತ್ಕೃಷ್ಟನಾದುದರಿಂದ, ಪ್ರಕಾಶಮಾನನಾದುದರಿಂದ ಅವನು ಮಹಾದೇವ. ಸಂಸಾರ ಸಾಗರದಿಂದ ಮುಕ್ತರಾದವರು ಪರಮಸುಖವನ್ನು (ನಾಕಂ) ಅನುಭವಿಸುವುದರಿಂದ ಅವರು ಪಿನಾಕರು. (ನಾಕಂ ಪಿಬಂತಿ-ಪಿನಾಕಾಃ) ಅವರಿಗೆ ಆಧಾರನಾದುದರಿಂದ ವಿಷ್ಣು ಪಿನಾಕೀ. ಸುಖರೂಪನಾದುದರಿಂದ ಶಿವ. ಉತ್ತಮ ಜೀವರ ಸ್ವರೂಪಭೂತವಾದ ಸುಖವನ್ನು ಮೋಕ್ಷಪರ್ಯಂತ ಅನುಭವಕ್ಕೆ ಗೋಚರವಾಗದಂತೆ ತಡೆಹಿಡಿಯುವುದರಿಂದ ಶರ್ವ. ಚರ್ಮಮಯವಾದ ಈ ನಮ್ಮ ದೇಹದಲ್ಲಿ ಪ್ರೇರಿಸುತ್ತಾ ವಾಸಮಾಡುವುದರಿಂದ ಕೃತ್ತಿವಾಸ. ಜಗತ್ತಿನ ಸೃಷ್ಟಿಕರ್ತನಾದುದರಿಂದ ವಿರಿಂಚ. ಗುಣಪೂರ್ಣತೆಯನ್ನು ಹೊಂದಿರುವುದರಿಂದ ಬ್ರಹ್ಮ. ಐಶ್ವರ್ಯವುಳ್ಳವನಾದುದರಿಂದ ಇಂದ್ರ. ಹೀಗೆ ಅದ್ವಿತೀಯನಾದ ಸರ್ವೋತ್ತಮನಾದ ತ್ರಿವಿಕ್ರಮನೊಬ್ಬನೇ ಶ್ರುತಿ ಪುರಾಣಗಳಲ್ಲಿನಾನಾ ಶಬ್ದಗಳಿಂದ ಹೇಳಲ್ಪಡುತ್ತಾನೆ''

ವಾಮನ ಪುರಾಣದಲ್ಲಿ - ರುದ್ರಾದಿ ನಾಮಗಳಿಗೆ ವಿಷ್ಣುವಿನಲ್ಲಿ ಅವಕಾಶವಿದೆ. ಆದರೆ, ನಾರಾಯಣಾದಿ ಹೆಸರುಗಳು ಬೇರಾರಿಗೂ ಇಲ್ಲ.

ಸ್ಕಾಂದದಲ್ಲೂ - ರಾಜನು ತನ್ನ ಪಟ್ಟಣ ಬಿಟ್ಟು ಇತರ ಪ್ರದೇಶಗಳನ್ನು ಸಾಮಂತರಿಗೆ ಬಿಟ್ಟುಕೊಡುವಂತೆ ಪುರುಷೋತ್ತಮನು ನಾರಾಯಣಾದಿ ನಾಮಗಳನ್ನು ತನ್ನಲ್ಲೇ ಇಟ್ಟುಕೊಂಡು ಇತರ ತನ್ನ ನಾಮಗಳನ್ನು ದೇವತೆಗಳಿಗೆ ನೀಡಿದ.

ಬ್ರಹ್ಮನಿಗೆ ಚತುರ್ಮುಖ, ಶತಾನಂದ, ಪದ್ಮಭೂಃ ಎಂಬ ಹೆಸರನ್ನಿತ್ತ. ಶಿವನಿಗೆ ಉಗ್ರ, ಭಸ್ಮಧರ, ನಗ್ನ, ಕಪಾಲೀ ಈ ಹೆಸರುಗಳನ್ನು ಇಟ್ಟ. ಹೀಗೆ ತನ್ನವೇ ವಿಶಿಷ್ಟ ಹೆಸರುಗಳನ್ನು ಇತರರಿಗೆ ನೀಡಿದ, ಎಂದು ಪಾದ್ಮಪುರಾಣದಲ್ಲೂ ಇದೆ.

**ವಿವರಣೆ :** ಪಾಶುಪತಾಗಮಗಳಲ್ಲಿ ರುದ್ರನೂ ಲೋಕಾಧಾರನೆಂದು ಹೇಳಲಾಗಿದೆ.

ಅಲ್ಲದೆ ಇಂದ್ರಿಯಗಳ ಒಡೆತನ ಅವನ ಧರ್ಮ. ಅದರ ಉಲ್ಲೇಖವೂ ಉಪನಿಷತ್ತಿನಲ್ಲಿದೆ. ಆದ್ದರಿಂದ ಅವನು ಅಥರ್ವಣ ಶ್ರುತಿಯಿಂದ ಏಕೆ ಪ್ರತಿಪಾದ್ಯನಾಗಲಾರ? ಈ ಪ್ರಶ್ನೆಗೆ ಪ್ರಕೃತ ಸೂತ್ರ ಉತ್ತರ ನೀಡುತ್ತದೆ.

2. ಸೂತ್ರದಲ್ಲಿ 'ನ+ಆನುಮಾನಂ' ಎಂದು ಪದವಿಭಾಗ. ಆನುಮಾನ ಶಬ್ದಕ್ಕೆ ಶಾಂಕರ-ರಾಮಾನುಜಭಾಷ್ಯಕಾರರು 'ಪ್ರಕೃತಿ' ಎಂದು ಅರ್ಥವನ್ನು ಹೇಳುತ್ತಾರೆ. ಅನುಮಾನದಿಂದ ಸಾಧಿಸಲ್ಪಡುವುದರಿಂದ ಪ್ರಕೃತಿಗೆ ಆನುಮಾನ ಎಂದು ಹೆಸರು. ಆಚಾರ್ಯರು ಇಲ್ಲಿ ಆ ಶಬ್ದಕ್ಕೆ ಪಾಶುಪತಾಗಮ ಎಂಬ ಅರ್ಥವನ್ನು ಹೇಳಿದ್ದಾರೆ. ಆ ಆಗಮದಲ್ಲಿ ಹೇಳಿದ ಕೆಲವೊಂದು ಧಾರ್ಮಿಕ ಕ್ರಿಯೆಗಳಿಂದ ಲೌಕಿಕ ಫಲವು ಸಿಗುತ್ತದೆ. ಅದರಿಂದ ಅಂತಹ ಭಾಗಗಳು ಪ್ರಮಾಣವೆನಿಸುತ್ತವೆ. ಅವನ್ನು ದೃಷ್ಟಾಂತವನ್ನಾಗಿ ಮಾಡಿ ಸಮಗ್ರ ಆಗಮಕ್ಕೆ ಪ್ರಾಮಾಣ್ಯವನ್ನು ಸಾಧಿಸಲಾಗುತ್ತದೆ. ಹೀಗೆ ಆ ಆಗಮಕ್ಕೆ ಅನುಮಾನದ ಆಧಾರದಿಂದ ಪ್ರಾಮಾಣ್ಯ ಸಿದ್ಧಿಸುತ್ತದೆ. ವೇದದಂತೆ ಅಪೌರುಷೇಯವಾದುದರಿಂದ ಅಲ್ಲ. ಆದ್ದರಿಂದ ಪಾಶುಪತಾಗಮ ಆನುಮಾನ. ರಾಯರು ತಂತ್ರದೀಪಿಕೆಯಲ್ಲಿ ಅನುಮಾನಕ್ಕೆ ಪ್ರಾಶಸ್ತ್ಯನೀಡಿರುವುದರಿಂದ ಪಾಶುಪತಾಗಮ ಆನುಮಾನ ಎಂದಿದ್ದಾರೆ.

3. 'ಪ್ರಾಣಾನಾಂ ಗ್ರಂಥಿರಸಿ ರುದ್ರೋ ಮಾऽವಿಶಾಂತಕಃ' ಎಂಬ ಶ್ರುತಿಯಲ್ಲಿ ರುದ್ರಾದಿ ಶಬ್ದಗಳಿಂದ ವಿಷ್ಣುವನ್ನೇ ಹೆಸರಿಸಿ ಅವನಿಗೆ ಪ್ರಾಣಾಧಾರತ್ವವನ್ನು ಹೇಳಲಾಗಿದೆ. ಅಲ್ಲಿರುದ್ರದೇವ ಪ್ರತಿಪಾದ್ಯನಲ್ಲ ಎಂದು ಭಾಷ್ಯದ ಒಟ್ಟು ಅಭಿಪ್ರಾಯ. ॥ 3 ॥

## ಓಂ ॥ ಪ್ರಾಣಭೃಚ್ಚ ॥ ಓಂ

**ಏತೈರೇವ ಹೇತುಭಿಃ ನ ಜೀವೋ ವಾಯುಶ್ಚ ।**

**ಅಜಾಯಮಾನೋ ಬಹುಧಾ ವಿಜಾಯತೇ ॥ (ತೈ. ಆ. 3.13)**

**ಇತಿ ತಸ್ಯೈವ ಬಹುಧಾ ಜನ್ಮೋಕ್ತೇಃ ॥ 4 ॥**

ಈ ಕಾರಣಗಳಿಂದಲೇ ಜೀವನಾಗಲೀ ವಾಯುದೇವನಾಗಲೀ ದ್ಯುಭ್ವಾದ್ಯಾಯತನರಾಗಿ ವಿವಕ್ಷಿತರಲ್ಲ. 'ವಿಷ್ಣುವು ವಿಕಾರವಿಲ್ಲದೆಯೇ (ಅಜಾಯಮಾನಃ) ರಾಮಕೃಷ್ಣಾದಿ ಅನೇಕ ರೂಪಗಳಿಂದ ಅವತರಿಸುತ್ತಾನೆ' ಎಂದಿರುವುದರಿಂದ ಇಲ್ಲಿ 'ಬಹುಧಾ ಜಾಯಮಾನಃ' ಎಂದು ವಿಷ್ಣುವಿಗೆ ಬಹುವಿಧ ಜನ್ಮವನ್ನು (ಅವತಾರವನ್ನು) ಹೇಳಲಾಗಿದೆ.

**ವಿವರಣೆ :** ಹಿಂದಿನ, ಮೊದಲ ಸೂತ್ರದಲ್ಲಿ ಆತ್ಮಶಬ್ದವನ್ನು ಎರಡನೆಯ ಸೂತ್ರದಲ್ಲಿ ಮುಕ್ತಪ್ರಾಪ್ಯತ್ವವನ್ನೂ ಕಾರಣವನ್ನಾಗಿ ಹೇಳಿ ಆಥರ್ವಣದಲ್ಲಿ ಹೇಳಿರುವ ಲೋಕಗಳಿಗೆ ಆಶ್ರಯನಾಗಿ ಹೇಳಿರುವವನು ವಿಷ್ಣು, ರುದ್ರನಲ್ಲ ಎಂದು ಹೇಳಲಾಗಿದೆ. ಇದೇ ಕಾರಣದಿಂದ ಜೀವಾತ್ಮನಾಗಲೀ ವಾಯುದೇವನಾಗಲೀ ಇಲ್ಲಿ ಪ್ರತಿಪಾದ್ಯರಲ್ಲ. 'ಬಹುಧಾ

ಜಾಯಮಾನಃ' ಎಂಬ ಧರ್ಮ ಜೀವನಿಗಿರುವಂತೆ ವಿಷ್ಣುವಿಗೂ ಇದೆ. ಜೀವ ದೇಹಸಂಬಂಧಗಳಿಂದ ಹುಟ್ಟುತ್ತಾನೆ. ಪರಮಾತ್ಮ ರಾಮಕೃಷ್ಣಾದಿರೂಪಗಳಿಂದ ಅವತರಿಸುತ್ತಾನೆ. 'ವಾಯುನಾ ವೈ' ಎಂದು ಮುಂತಾಗಿ ಬೃಹದಾರಣ್ಯಕೋಪನಿಷತ್ತಿನಲ್ಲಿ ವಾಯುದೇವನಿಗೆ ಲೋಕಾಶ್ರಯತ್ವವನ್ನು ಹೇಳಲಾಗಿದ್ದರೂ ಅಲ್ಲಿ ವಾಯುಶಬ್ದದ ಮುಖ್ಯಾರ್ಥ ವಿಷ್ಣು. ಆದ್ದರಿಂದ ವಿಷ್ಣುವಿಗೆ ಮಾತ್ರ ಮುಖ್ಯವಾಗಿ ಲೋಕಾಶ್ರಯತ್ವ, ವಾಯು ಮೊದಲಾದ ಇತರ ದೇವತೆಗಳಿಗಿಲ್ಲ. || ಸೂತ್ರ 4 ||

## ಓಂ || ಭೇದವ್ಯಪದೇಶಾತ್|| ಓಂ

**ನ ಚ ಐಕ್ಯಂ ವಾಚ್ಯಂ।**

**ಜುಷ್ಟಂ ಯದಾ ಪಶ್ಯತ್ಯನ್ಯಮೀಶಮಸ್ಯ ಮಹಿಮಾನಮ್ (ಮುಂ.31.2)**

**ಇತಿ ಭೇದವ್ಯಪದೇಶಾತ್ || 5 ||**

ಈ ಪ್ರಕರಣದಲ್ಲಿ ಜೀವೇಶ್ವರರಿಗೆ ಐಕ್ಯವು ವಿವಕ್ಷಿತವಾಗಿದೆ ಎನ್ನುವುದು ಸರಿಯಲ್ಲ. 'ಬ್ರಹ್ಮಾದಿ ವಂದ್ಯನಾದ ತನಗಿಂತ ಭಿನ್ನನಾದ ಈಶನನ್ನೂ ಅವನ ಮಹತ್ವವನ್ನೂ ತಿಳಿದಾಗ (ಜೀವನು ಶೋಕಸಾಗರವನ್ನು ದಾಟುತ್ತಾನೆ). ಹೀಗೆ ಇಲ್ಲಿ ಜೀವೇಶರಿಗೆ ಭೇದವನ್ನು ಹೇಳಲಾಗಿದೆ.

**ವಿವರಣೆ :** 1. ಬ್ರಹ್ಮನಿಗೆ ಹೇಳಿದ ಅಸಾಧಾರಣ ಕಾರಣಗಳು ಬ್ರಹ್ಮಭಿನ್ನನಾದ ಜೀವನಿಗೂ ಹೊಂದುತ್ತದೆ. ಆದ್ದರಿಂದ 'ಬಹುಧಾ ವಿಜಾಯತೇ' ಎಂಬುದನ್ನು ಜೀವನಿಗೆ ಅನ್ವಯಿಸಿ ಅವನೇ ಇಲ್ಲಿ ಉಲ್ಲೇಖಿಸಲ್ಪಟ್ಟ ಲೋಕಾಶ್ರಯ ಎನ್ನಲು ತೊಂದರೆ ಏನು? ಈ ಪ್ರಶ್ನೆಗೆ ಉತ್ತರವಾಗಿ ಸೂತ್ರಕಾರರು ಜೀವೇಶ್ವರರಿಗೆ ಭೇದವನ್ನು ತೋರಿಸಿದ್ದಾರೆ.

2. 'ಅನ್ಯಂ ಈಶಂ' ಎಂದರೆ ಪ್ರಸಿದ್ಧನಾದ ರುದ್ರನಿಗಿಂತ ಭಿನ್ನನಾದ ಈಶ ಎಂದೂ ಅರ್ಥವನ್ನು ಹಿಂದೆ ಮಾಡಲಾಗಿದೆ. || ಸೂತ್ರ 5 ||

## ಓಂ || ಪ್ರಕರಣಾತ್ || ಓಂ

**'ದ್ವೇ ವಿದ್ಯೇ ವೇದಿತವ್ಯೇ' (ಮುಂ.1.1.4) ಇತಿ ತಸ್ಯ ಹ್ಯೇತತ್ ಪ್ರಕರಣಮ್ || 6 ||**

'ಪರ ಮತ್ತು ಅಪರ ಎಂದು ಎರಡು ವಿದ್ಯೆಗಳಿವೆ' ಎಂದು ಮುಂತಾಗಿ ಪ್ರಸ್ತುತವಾದ ಈ ಪ್ರಕರಣವು ಪರವಿದ್ಯಾವಿಷಯನಾದ ವಿಷ್ಣುವಿಗೆ ಸಂಬಂಧಿಸಿದೆ. ಆದ್ದರಿಂದ ಭೇದವನ್ನು ಹೇಳುವ ಇಲ್ಲಿರುವ 'ಅನ್ಯಮೀಶಂ' ಎಂಬ ವಾಕ್ಯದಲ್ಲಿ ಹೇಳಲ್ಪಟ್ಟ ಈಶ ವಿಷ್ಣು.

**ವಿವರಣೆ :** ಈ ಉಪನಿಷತ್ತು ಎರಡು ವಿದ್ಯೆಗಳನ್ನು ಉಲ್ಲೇಖಿಸಿ ಅವುಗಳಲ್ಲಿ ಪರವಿದ್ಯೆಗೆ ವಿಷಯನಾದವನು ಅಕ್ಷರಪದವಾಚ್ಯನಾದ ವಿಷ್ಣು ಎಂದಿದೆ. ಹೀಗೆ ಉಪನಿಷತ್ತಿನ ಪ್ರಾರಂಭದಲ್ಲಿ ವಿಷ್ಣುವಿನ ಪ್ರಸ್ತಾಪ ಮಾಡಿ ಮುಂದೆ ಅವನದೇ ವಿಷಯಗಳನ್ನು

ಹೇಳಿರುವುದರಿಂದ ಜೀವಾತ್ಮನ ಪ್ರತ್ಯಕ್ಷಕ್ಕೆ ಗೋಚರನಾಗಿ ಅವನ ಸಂಸಾರವನ್ನು ನೀಗಬಲ್ಲವನು ವಿಷ್ಣುವೇ. ಆದ್ದರಿಂದ 'ಅನ್ಯಮೀಶಂ' ಎಂದು ಅವನನ್ನೇ ಜೀವಭಿನ್ನನೆನ್ನಲಾಗಿದೆ. ॥ ಸೂತ್ರ 6 ॥

**ಓಂ ॥ ಸ್ಥಿತ್ಯದನಾಭ್ಯಾಂ ಚ ॥**

**ದ್ವಾಸುಪರ್ಣಾ ಸಯುಜಾ ಸಖಾಯಾ ಸಮಾನಂ ವೃಕ್ಷಂ ಪರಿಷಸ್ವಜಾತೇ।**

**ತಯೋರನ್ಯಃ ಪಿಪ್ಪಲಂ ಸ್ವಾದ್ವತ್ತಿ ಅನಶ್ನನ್ನನ್ಯೋ ಅಭಿ ಚಾಕಶೀತಿ ॥ (ಮು.3.1.1)**

**ಇತಿ ಈಶ ಜೀವಯೋಃ ಸ್ಥಿತ್ಯದನೋಕ್ತೇಃ ॥ 7 ॥**

**॥ ಇತಿ ದ್ಯುಭ್ವಾದ್ಯಧಿಕರಣಮ್ ॥**

''ಎರಡು ಹಕ್ಕಿಗಳು ಪರಸ್ಪರ ಉಪಕಾರ್ಯ ಉಪಕಾರಕರಾಗಿ, ಸ್ನೇಹಿತರಾಗಿ ಒಂದೇ ಮರವನ್ನು ಆಲಿಂಗಿಸಿದ್ದಾರೆ. ಅವರಿಬ್ಬರಲ್ಲಿ ಒಬ್ಬನು ಅಶ್ವತ್ಥಫಲವನ್ನು ರಸವತ್ತಾದುದೆಂದು ತಿಳಿದು ತಿನ್ನುತ್ತಿದ್ದಾನೆ. ತಿನ್ನದ ಮತ್ತೊಬ್ಬ ತೇಜಸ್ವಿಯಾಗಿದ್ದಾನೆ. ಹೀಗೆ ಇಲ್ಲಿ ಈಶ ಜೀವರಲ್ಲಿ ಒಬ್ಬನಿಗೆ ಭೋಗವಿಲ್ಲದೆ ಸ್ಥಿತಿ ಹಾಗೂ ಮತ್ತೊಬ್ಬನಿಗೆ ಭೋಗರೂಪವಾದ ವಿರುದ್ಧ ಧರ್ಮಗಳನ್ನು ಹೇಳಿರುವುದರಿಂದ ಅವರಿಗೆ ಐಕ್ಯವನ್ನು ಹೇಳಕೂಡದು.

**ವಿವರಣೆ :** ಆಥರ್ವಣೋಪನಿಷತ್ತಿನ ಈ ವಾಕ್ಯ ದೇಹವನ್ನು ಮರವನ್ನಾಗಿ ರೂಪಿಸಿ ಅದರಲ್ಲಿರುವ ಜೀವೇಶರನ್ನು ಹಕ್ಕಿಗಳನ್ನಾಗಿ ಪರಿಗಣಿಸಿದೆ. ಜೀವ ಈ ದೇಹದಲ್ಲಿದ್ದು ತನ್ನ ಕರ್ಮದ ಫಲವನ್ನು ಅನುಭವಿಸುತ್ತಾನೆ. ಅದೇ ಪರಮ ರಸಭರಿತ ಎಂದೂ ಭ್ರಮಿಸುತ್ತಾನೆ. ಆದರೆ ಈಶ್ವರ ಶುಭಕರ್ಮಗಳನ್ನು ಮಾತ್ರ ಸ್ವೀಕರಿಸಿ ತನ್ನ ಉಳಿವಿಗಾಗಿ ಅದನ್ನು ಅಪೇಕ್ಷಿಸದೆ ಸುಖವಾಗಿದ್ದಾನೆ. ಹೀಗೆ ಜೀವ ಮತ್ತು ಈಶರಿಗೆ ವಿರುದ್ಧ ಧರ್ಮಗಳನ್ನು ಹೇಳಿರುವಾಗ ಅವರಿಬ್ಬರಿಗೆ ಐಕ್ಯವು ವಿವಕ್ಷಿತ ಎಂದು ಹೇಳುವುದು ಹೇಗೆ? ॥ 7 ॥

## ದ್ವೈತದರ್ಶನದಲ್ಲಿ ಸೂತ್ರಗಳ ಅರ್ಥ

**1. ಓಂ ॥ ದ್ಯುಭ್ವಾದ್ಯಾಯತನಂ ಸ್ವಶಬ್ದಾತ್ ॥ ಓಂ**

'ಯಸ್ಮಿನ್ ದ್ಯೌಃ' ಎಂಬ ಆಥರ್ವಣ ಮಂತ್ರದಲ್ಲಿ ಹೇಳಿದ ಸ್ವರ್ಗಾದಿಲೋಕಗಳಿಗೆ ಆಧಾರನಾದವನು ವಿಷ್ಣು. ಏಕೆಂದರೆ, ಸ್ವಶಬ್ದಾತ್-ವಿಷ್ಣುವಿಗೆ ಮಾತ್ರ ವಾಚಕವಾದ ಆತ್ಮಶಬ್ದದಿಂದ ಅವನನ್ನು ಹೆಸರಿಸಲಾಗಿದೆ.

(ತತ್ತು ಇತ್ಯಸ್ತಿ। 'ಯಸ್ಮಿನ್ ದ್ಯೌಃ ಪೃಥಿವೀ ಚಾಂತರಿಕ್ಷಂ' ಇತ್ಯಾದಿನೋಕ್ತಂ ದ್ಯುಭ್ವಾದ್ಯಾಯತನಂ ತತ್ತು-ಬ್ರಹ್ಮೈವ। ನ ತು ಪ್ರಧಾನಂ। ವಾಯು ರುದ್ರಾದಿ ಜೀವಾ ವಾ। ಸ್ವಶಬ್ದಾತ್-ಶ್ರುತೌ ಸ್ವಶಬ್ದಾಭಾವಾತ್ ತತ್ಪರ್ಯಾಯ ಆತ್ಮಶಬ್ದೋ ಗ್ರಾಹ್ಯಃ । ಸಭಾ ರಾಜೇತ್ಯತ್ರ ಪಾಣಿನೀಯೇ ರಾಜಶಬ್ದವತ್ । 'ತಮೇವೈಕಂ ಜಾನಥ ಆತ್ಮಾನಂ' ಇತಿ

ಆತ್ಮಶಬ್ದಾತ್। ಆತ್ಮಶಬ್ದಾದಿತಿ ವಾಚ್ಯೇ ಸ್ವೇತ್ಯುಕ್ತಿಃ ಸ್ವಸ್ಯ=ಬ್ರಹ್ಮಣ ಏವ ಶಬ್ದಃ ಇತ್ಯಪಿ ವಿಗ್ರಹೇಣ ಅಸಾಧಾರಣ್ಯಂ ಜ್ಞಾಪಯಿತುಮ್।)

**2. ಓಂ ॥ ಮುಕ್ತೋಪಸೃಪ್ಯವ್ಯಪದೇಶಾತ್ ॥ ಓಂ**

'ಅಮೃತಸ್ಯೈಷ ಸೇತುಃ' ಎಂದು ಮುಕ್ತರಿಂದ ಸಾಕ್ಷಾತ್ ಪ್ರಾಪ್ಯ ಎಂದು ಇಲ್ಲಿ ಹೇಳಿರುವುದರಿಂದ ಆತ್ಮಶಬ್ದಕ್ಕೆ ಗೌಣಾತ್ಮವಾದ 'ಜೀವ' ಎಂಬ ಅರ್ಥವನ್ನು ಹೇಳಬಾರದು.

(ಭಾವಪ್ರಧಾನೋಽಯಂ, ಉಪಸೃಪ್ಯತ್ವಂ ಪ್ರಾಪ್ಯಾಂತರ ಶೂನ್ಯತ್ವೇ ಸತಿ ಪ್ರಾಪ್ಯತ್ವಂ। ತೇನ ಅಂತರಾ ಪ್ರಾಪ್ಯೇ (ಅರ್ಚಿರಾದೌ) ನ ವ್ಯಭಿಚಾರಃ। 'ಅಮೃತಸ್ಯೈಷ ಸೇತುಃ' ಇತಿ ಅಮೃತಶಬ್ದಿತ ಮುಕ್ತೋಪಸೃಪ್ಯತ್ವವ್ಯಪದೇಶಾತ್ ನಾತ್ಮಶಬ್ದೋಽಮುಖ್ಯಃ ಇತಿ ಯೋಜ್ಯಮ್।)

**3. ಓಂ ॥ ನಾನುಮಾನಂ ಅತಚ್ಛಬ್ದಾತ್ ॥ ಓಂ**

ಅನುಮಾನ ಪ್ರಧಾನವಾದ ಪಾಶುಪತ-ಸಾಂಖ್ಯದರ್ಶನಗಳಲ್ಲಿ ಉಲ್ಲೇಖಿಸಲ್ಪಟ್ಟ ರುದ್ರ-ಪ್ರಕೃತಿಗಳು ಲೋಕಾಶ್ರಯರಲ್ಲ. ಅವರಿಗೆ ಸಂಬಂಧಿಸಿದ ಶಬ್ದಗಳು ಈ ಪ್ರಕರಣದಲ್ಲಿ ಇಲ್ಲ.

(ದ್ಯುಭ್ವಾದ್ಯಾಯತನಂ ಇತ್ಯಸ್ತಿ। ಅನುಮಾನಶಬ್ದೇನ ಅನುಮಾನಪ್ರಧಾನ ಪಾಶುಪತ ಸಾಂಖ್ಯಸಿದ್ಧ ರುದ್ರ ಪ್ರಧಾನೇ ಗ್ರಾಹ್ಯೇ। ರುದ್ರಃ ಪ್ರಧಾನಂ ಚ ನ ದ್ಯುಭ್ವಾದ್ಯಾಯತನಂ। ಅತಚ್ಛಬ್ದಾತ್=ತಯೋಃ=ರುದ್ರಪ್ರಕೃತ್ಯೋಃ ಭಸ್ಮಧರೋಗ್ರತ್ವ- ತ್ರಿಗುಣತ್ವಾದಿ ಶಬ್ದಾನಾಂ ಅಭಾವಾತ್।)

**4. ಓಂ ॥ ಪ್ರಾಣಭೃಚ್ಚ ॥ ಓಂ**

'ನ' ಎಂಬ ಪದವನ್ನು ಹಿಂದಿನ ಸೂತ್ರದಿಂದ ಅನುವೃತ್ತಿ ಮಾಡಿಕೊಳ್ಳಬೇಕು. ಪ್ರಾಣಭೃತ್=ವಾಯು ಮತ್ತು ಜೀವರು, ಹಿಂದೆ ಹೇಳಿದಂತೆ ಆತ್ಮಶಬ್ದ ಮುಕ್ತಪ್ರಾಪ್ಯತ್ವ ಮೊದಲಾದ ಕಾರಣಗಳಿಂದ ಲೋಕಾಶ್ರಯರಾಗಿ ವಿವಕ್ಷಿತರಲ್ಲ.

(ಚ ಶಬ್ದಾತ್ ನೇತಿ, ಸ್ವಶಬ್ದಾದಿಹೇತವಶ್ಚ ಅನುಕೃಷ್ಯಂತೇ । ವಾಯುಶ್ಚ ಸಮುಚ್ಚೀಯತೇ । ಆತ್ಮಶಬ್ದ-ಮುಕ್ತೋಪಸೃಪ್ಯತ್ವ-ಅತಚ್ಛಬ್ದೇಭ್ಯಃ ಜೀವವಾಯೂ ನ ದ್ಯುಭ್ವಾದ್ಯಾಯತನಂ।)

**5. ಓಂ ॥ ಭೇದವ್ಯಪದೇಶಾತ್ ॥ ಓಂ**

ಈ ಪ್ರಕರಣದಲ್ಲಿ ಜೀವ-ಬ್ರಹ್ಮರಿಗೆ ಭೇದವನ್ನು 'ಜುಷ್ಟಂ ಯದಾ ಪಶ್ಯತ್ಯನ್ಯಮೀಶಂ' ಎಂದು ಹೇಳಿರುವುದರಿಂದ ಅವರಿಬ್ಬರಿಗೆ ಐಕ್ಯವನ್ನು ಹೇಳಬಾರದು.

('ಜುಷ್ಟಂ ಯದಾ ಪಶ್ಯತ್ಯನ್ಯಮೀಶಂ' ಇತಿ ಇಹೈವ ಜೀವಬ್ರಹ್ಮಭೇದವ್ಯಪದೇಶಾತ್ ನೈಕ್ಯಂ ಇತ್ಯರ್ಥಃ।)

**6. ಓಂ॥ ಪ್ರಕರಣಾತ್ ॥ ಓಂ**

'ದ್ವೇ ವಿದ್ಯೇ ವೇದಿತವ್ಯೇ' ಎಂದು ಪ್ರಾರಂಭವಾಗಿರುವುದರಿಂದ ಇದು ಬ್ರಹ್ಮ ಪ್ರಕರಣ. ಆದ್ದರಿಂದ ಇಲ್ಲಿ ಬ್ರಹ್ಮನೇ ಈಶ ಶಬ್ದದಿಂದ ಹೇಳಲ್ಪಡಬೇಕು.

('ದ್ವೇ ವಿದ್ಯೇ ವೇದಿತವ್ಯೇ' ಇತಿ ಪರವಿದ್ಯಾವಿಷಯವಸ್ತುನಃ ಆರಭ್ಯಾಧೀತತ್ವೇನ ಬ್ರಹ್ಮಪ್ರಕರಣಾತ್ ಈಶ ಶಬ್ದಾರ್ಥಃ ಬ್ರಹ್ಮ।)

**7. ಓಂ। ಸ್ಥಿತ್ಯದನಾಭ್ಯಾಂ ಚ ॥ ಓಂ**

ಕರ್ಮ ಫಲಭೋಗವಿಲ್ಲದೆ ಬ್ರಹ್ಮನ ಸ್ಥಿತಿ. ಅದನ್ನು ಅವಲಂಬಿಸಿ ಜೀವಾತ್ಮನ ಸ್ಥಿತಿ ಇವುಗಳನ್ನು ಹೇಳಿರುವುದರಿಂದಲೂ ಜೀವೇಶ್ವರರಿಗೆ ಭೇದವೇ ಇಲ್ಲಿ ವಿವಕ್ಷಿತ.

(ನೈಕ್ಯಂ ಇತ್ಯಸ್ತಿ। ಸ್ಥಿತಿಃ=ಕರ್ಮಫಲೋಪಜೀವನಂ ವಿನಾ ಅವಸ್ಥಾನಂ। ಅದನಂ= ತದುಪ ಜೀವನಂ। ತಾಭ್ಯಾಂ ಚ ಜೀವಬ್ರಹ್ಮಣೋಃ ನೈಕ್ಯಮ್॥

## ಅದ್ವೈತ ಭಾಷ್ಯದಲ್ಲಿ ಸೂತ್ರಗಳ ಅರ್ಥ

**1. ದ್ಯುಭ್ವಾದ್ಯಾಯತನಂ ಸ್ವಶಬ್ದಾತ್ - ಪೂರ್ವಪಕ್ಷ** - ಮುಂಡಕೋಪನಿಷತ್ತಿನ 'ಯಸ್ಮಿನ್ ದ್ಯೌಃ' ಇತ್ಯಾದಿ ಮಂತ್ರದಲ್ಲಿ ಹೇಳಿರುವ ಲೋಕಾಶ್ರಯನಾದವನು ಬ್ರಹ್ಮನಲ್ಲ. ಬ್ರಹ್ಮನು 'ಅನಂತಂ ಅಪಾರಂ' (ಬೃ.2.4.12) ಎಂದು ಎಲ್ಲೆ ಮೀರಿದವನು. ಆದರೆ ಇಲ್ಲಿ 'ಅಮೃತಸ್ಯ ಸೇತುಃ' ಎಂದು 'ಅಮೃತನಾದ ಬ್ರಹ್ಮನಿಗೆ ಸೇತು' ಎಂದು ಬ್ರಹ್ಮನಿಗಿಂತ ಭಿನ್ನವಾದ 'ಪರಿಮಿತ' (ಸೇತು) ತತ್ತ್ವವು ಲೋಕಾಶ್ರಯ ಎಂದು ತಿಳಿಯುತ್ತದೆ. ಆ ತತ್ತ್ವ ವಾಯು ಆಗಿರಬಹುದು. ಅವನಿಗೆ 'ವಾಯುರ್ವೈ ಗೌತಮ' ಇತ್ಯಾದಿ ಬೃಹದಾರಣ್ಯಕ ಮಂತ್ರ ಲೋಕಾಧಾರತ್ವವನ್ನು ತಿಳಿಸಿದೆ. ಜೀವನಿಗೆ ಈ ಜಗತ್ತೆಲ್ಲವೂ ಭೋಗಸಾಧನವಾದುದರಿಂದ ಭೋಕ್ತೃವಾದ ಜೀವ ಭೋಗ್ಯಪ್ರಪಂಚಕ್ಕೆ ಆಯತನನಾಗಬಹುದು. ಅಥವಾ ಲೋಕಗಳು ಪ್ರಕೃತಿಯ ವಿಕಾರಗಳಾದುದರಿಂದ ಪ್ರಕೃತಿಯೂ ಲೋಕಾಧಾರ ಆಗಬಹುದು.

**ಸಿದ್ಧಾಂತ :** 1. ಸ್ವಶಬ್ದಾತ್=ಆತ್ಮಶಬ್ದವಿರುವುದರಿಂದ ಲೋಕಾಶ್ರಯ ಬ್ರಹ್ಮ. ಅಲ್ಲದೆ ಛಾಂದೋಗ್ಯದಲ್ಲಿ ಸತ್ ಶಬ್ದವನ್ನು ಹೇಳಿ ಲೋಕಾಶ್ರಯತ್ವವನ್ನು ಹೇಳಲಾಗಿದೆ- 'ಸನ್ಮೂಲಾಃ ಸೋಮ್ಯ ಇಮಾಃ ಪ್ರಜಾಃ ಸದಾಯತನಾಃ' ಇಲ್ಲೂ 'ಪುರುಷ ಏವೇದಂ ವಿಶ್ವಂ ಕರ್ಮ ತಪೋ ಬ್ರಹ್ಮ ಪರಾಮೃತಂ' ಎಂದು ಬ್ರಹ್ಮಶಬ್ದವನ್ನು ಹೇಳಿ ಸರ್ವಾತ್ಮಕತ್ವವನ್ನು ತಿಳಿಸಲಾಗಿದೆ. ಬ್ರಹ್ಮತತ್ತ್ವದಲ್ಲಿ ಎಲ್ಲವೂ ಕಲ್ಪಿತವಾದುದರಿಂದ ಅವನು ಎಲ್ಲದಕ್ಕೂ ಆಯತನನಾಗುತ್ತಾನೆ. 'ಅಮೃತಸ್ಯ ಏಷ ಸೇತುಃ' ಎಂಬಲ್ಲಿ ಏಷಃ ಎಂದರೆ 'ತಮೇವೈಕಂ ಜಾನಥ' ಎಂದು ಹೇಳಿರುವ ಜ್ಞಾನ. ಅದು ಅಮೃತಸ್ಯ=ಮೋಕ್ಷಕ್ಕೆ ಸೇತುಃ=ಕಾರಣ ಎಂದರ್ಥ. ಆದ್ದರಿಂದ ಬ್ರಹ್ಮನೇ ಸ್ವರ್ಗಾದಿಗಳಿಗೆ ಆಶ್ರಯ.

**2. ಮುಕ್ತೋಪಸೃಪ್ಯವ್ಯಪದೇಶಾತ್** - ಲೋಕಾಧಾರನಾದವನು 'ಭಿದ್ಯತೇ ಹೃದಯಗ್ರಂಥಿಃ... ತಸ್ಮಿನ್ ದೃಷ್ಟೇ ಪರಾವರೇ' ಎಂದು ಹೇಳಿ 'ಪರಾತ್ ಪರಂ ಪುರುಷಮುಪೈತಿ ದಿವ್ಯಮ್' (3.2.8) ಎಂದು ಮುಕ್ತರಿಂದ ಪ್ರಾಪ್ಯನಾಗಿ ಹೇಳಲ್ಪಟ್ಟಿದ್ದಾನೆ. ಆದ್ದರಿಂದ ಬ್ರಹ್ಮನೇ ಲೋಕಾಧಾರ.

**3. ನಾನುಮಾನಂ ಅತಚ್ಛಬ್ದಾತ್-** ಪ್ರಧಾನವಾಚಕ ಶಬ್ದ ಇಲ್ಲದಿರುವುದರಿಂದ ಅದೂ ಇಲ್ಲಿ ಲೋಕಾಧಾರವಾಗಿ ಪ್ರಸ್ತುತವಲ್ಲ. ಅದರಲ್ಲಿಲ್ಲದ ಸರ್ವಜ್ಞತ್ವವನ್ನು ಹೇಳುವ 'ಯಃ ಸರ್ವಜ್ಞಃ' ಎಂಬ ಶಬ್ದವೂ ಇಲ್ಲಿದೆ.

**4. ಪ್ರಾಣಭೃಚ್ಚ** - ಸರ್ವಜ್ಞತ್ವ ಶ್ರುತವಾದುದರಿಂದಲೇ ಜೀವಾತ್ಮನೂ ಲೋಕಾಧಾರನಲ್ಲ.

**5. ಭೇದವ್ಯಪದೇಶಾತ್** - 'ತವೇವೈಕಂ ಜಾನಥ' ಎಂದು ಲೋಕಾಧಾರನನ್ನು ಜ್ಞೇಯನನ್ನಾಗಿಯೂ ಜೀವನನ್ನು ಜ್ಞಾತೃವನ್ನಾಗಿಯೂ ಹೇಳಿರುವುದರಿಂದ ಜೀವನು ಲೋಕಾಧಾರನಲ್ಲ.

**6. ಪ್ರಕರಣಾತ್** – 'ಕಸ್ಮಿನ್ನು ಭಗವೋ ವಿಜ್ಞಾತೇ ಸರ್ವಮಿದಂ ವಿಜ್ಞಾತಂ ಭವತಿ' ಎಂದು ಈ ಉಪನಿಷತ್ತು ಪ್ರಾರಂಭವಾಗುವುದರಿಂದ ಇಲ್ಲಿ ಲೋಕಾಧಾರನನ್ನಾಗಿ ಬ್ರಹ್ಮನನ್ನೇ ಹೇಳಲಾಗಿದೆ. ಅವನ ಜ್ಞಾನದಿಂದಲೇ ತಾನೆ ಎಲ್ಲದರ ಜ್ಞಾನ ಉಂಟಾಗುವುದು.

**7. ಸ್ಥಿತ್ಯದನಾಭ್ಯಾಂ ಚ** - 'ಪಿಪ್ಪಲಂ ಸ್ವಾದು ಅತ್ತಿ' ಎಂದು ಜೀವನಿಗೆ ಕರ್ಮಫಲ ಭೋಗ, 'ಅನಶ್ನನ್ನನ್ಯಃ' ಎಂದು ಬ್ರಹ್ಮನಿಗೆ ಅಭೋಗ, ಹೀಗೆ ಭೋಗಾಭೋಗ ರೂಪ ವಿರುದ್ಧ ಧರ್ಮಗಳನ್ನು ತಿಳಿಸಿ ಬ್ರಹ್ಮನಲ್ಲಿ ಜೀವನ ಭೇದವನ್ನು ಹೇಳಲಾಗಿದೆ. ಬ್ರಹ್ಮನು ಈ ಉಪನಿಷತ್ತಿನಲ್ಲಿ ಅಪ್ರಸ್ತುತನಾದರೆ ಅವನಲ್ಲಿ ಜೀವಾತ್ಮನ ಭೇದವನ್ನು ಹೇಳುವುದು ಅಸಂಗತ. ಆದ್ದರಿಂದ ಈ ಉಪನಿಷತ್ತಿನಲ್ಲಿ ಸ್ವರ್ಗಾದಿಲೋಕಗಳಿಗೆ ಆಶ್ರಯನಾಗಿ ಬ್ರಹ್ಮನೇ ಪ್ರಸ್ತುತ.

## ಚಂದ್ರಿಕಾದಲ್ಲಿ ಮಾಡಿರುವ ವಿಮರ್ಶೆ

1. ಅದ್ವೈತ ಸಿದ್ಧಾಂತದಲ್ಲಿ ನಿರ್ಗುಣಬ್ರಹ್ಮನಲ್ಲಿ ಈ ಲೋಕಗಳು ಕಲ್ಪಿತವಾಗಿವೆ. ಕಲ್ಪಿತವಾದ ಲೋಕಗಳಿಗೆ ಬ್ರಹ್ಮ ಅಧಿಷ್ಠಾನ ಎನಿಸಬಹುದು. ಆಯತನ ಎಂದು ಅದನ್ನು ಕರೆಯಲಾಗದು. ಹಗ್ಗವನ್ನು ಹಾವೆಂದು ತಿಳಿದಾಗ ಹಾವಿಗೆ ಹಗ್ಗ ಆಯತನ ಎನ್ನಲಾಗುವುದಿಲ್ಲ ತಾನೆ?

2. 'ಸ್ವಶಬ್ದಾತ್' ಎಂಬ ಹೇತುವೂ ಸರಿಯಲ್ಲ. ಲೋಕಾಧಿಷ್ಠಾನನಾದ ನಿರ್ಗುಣ ಬ್ರಹ್ಮ ಆತ್ಮಶಬ್ದವಾಚ್ಯನಲ್ಲ. ಲಕ್ಷ್ಯವೆನ್ನುವುದಾದರೆ ಅದು ಪ್ರಕೃತಿಗೂ ಸಮಾನ. ಅಂದಮೇಲೆ ಆತ್ಮಶಬ್ದದಿಂದ ಪ್ರಕೃತಿಯನ್ನು ನಿರಾಕರಿಸುವುದು ಹೇಗೆ?

3. 'ಮುಕ್ತೋಪಸೃಪ್ಯವ್ಯಪದೇಶಾತ್'- ಎಂಬಲ್ಲಿ ಮುಕ್ತಪದಕ್ಕೆ ರಾಗದ್ವೇಷಗಳಿಂದ

ಮುಕ್ತರಾದವರು ಎಂದೂ ಶಾಂಕರಭಾಷ್ಯದಲ್ಲಿ ಅರ್ಥ ಮಾಡಿ ಉಪಸೃಪ್ಯ ಎಂದರೆ 'ಅವರಿಂದ ಜ್ಞೇಯ' ಎಂದು ಅರ್ಥೈಸಲಾಗಿದೆ. ಇವೆರಡೂ ಅರ್ಥಗಳು ಆ ಶಬ್ದಗಳಿಂದ ಹೊರಡುವುದಿಲ್ಲ.

## ರಾಮಾನುಜ ಭಾಷ್ಯದ ವಿಮರ್ಶೆ

ರಾಮಾನುಜಭಾಷ್ಯದಲ್ಲೂ ಇದೇ ವಿಷಯವಾಕ್ಯದ ವಿಮರ್ಶೆಯನ್ನು ನಡೆಸಲಾಗಿದೆ. 'ನಾನುಮಾನಂ ಅತಚ್ಛಬ್ದಾತ್' ಎಂಬಲ್ಲೂ ಶಾಂಕರ ಭಾಷ್ಯದಂತೆ ಪ್ರಕೃತಿಯನ್ನೇ ಅನುಮಾನ ಶಬ್ದದಿಂದ ತೆಗೆದುಕೊಳ್ಳಲಾಗಿದೆ. ಆದರೆ ಲೋಕಾಶ್ರಯವಾದುದು ಪ್ರಕೃತಿ ಎಂದು ಪೂರ್ವಪಕ್ಷ ಮಾಡಲಾಗಿಲ್ಲ. 'ಗೌಣಶ್ಚೇತ್ ನಾತ್ಮಶಬ್ದಾತ್' ಎಂಬ ಈಕ್ಷತ್ಯಧಿಕರಣದ ಸೂತ್ರದಲ್ಲಿ ಪ್ರಕೃತಿಗೆ ಆತ್ಮಶಬ್ದವಾಚ್ಯತ್ವವನ್ನು ನಿರಾಕರಿಸಿರುವುದರಿಂದ ಪೂರ್ವಪಕ್ಷದಲ್ಲಿ ಪ್ರಕೃತಿಯನ್ನು ಸೇರಿಸುವಂತಿಲ್ಲ. ಹಾಗಿದ್ದ ಮೇಲೆ 'ನಾನುಮಾನಂ' ಎಂಬ ಸೂತ್ರದಲ್ಲಿ ಅದನ್ನು ನಿರಾಕರಿಸುವುದೂ ಅಸಂಗತ. ಆದ್ದರಿಂದ ಪ್ರಕೃತಿಯ ನಿರಾಕರಣೆ ದೃಷ್ಟಾಂತ ಮಾತ್ರ. ಹೇಗೆ ಪ್ರಕೃತಿಪ್ರಾಪಕ ಶಬ್ದಗಳು ಇಲ್ಲದಿರುವುದರಿಂದ, ಅದಕ್ಕೆ ಅಸಂಗತವಾಗುವ ಆತ್ಮಶಬ್ದ ವಿರುವುದರಿಂದ ಪ್ರಕೃತಿಯು ಲೋಕಾಧಾರ ಆಗಲಾರದೋ ಅದೇ ಕಾರಣದಿಂದ ಜೀವನೂ ಲೋಕಾಧಾರನಲ್ಲ ಎಂದು ಸೂತ್ರದ ತಾತ್ಪರ್ಯ.

ಹೀಗೆ ಅರ್ಥಮಾಡುವುದು ಅನಿವಾರ್ಯವಾದುದರಿಂದ ಆ ಭಾಷ್ಯದಂತೆ ಪ್ರಾಣಭೃಚ್ಚ ಎಂಬ ಸೂತ್ರಕ್ಕೆ ಪ್ರತ್ಯೇಕ ಅಸ್ತಿತ್ವವಿಲ್ಲ. 'ನಾನುಮಾನಮತಚ್ಛಬ್ದಾತ್ ಪ್ರಾಣಭೃಚ್ಚ' ಎಂದು ಅಖಂಡ ಸೂತ್ರ.

## ಚಂದ್ರಿಕಾದಲ್ಲಿ ಮಾಡಿರುವ ವಿಮರ್ಶೆ

ಚಂದ್ರಿಕಾದಲ್ಲಿ ರಾಮಾನುಜ ಮತದ ಪೂರ್ವಪಕ್ಷವನ್ನು ಹೀಗೆ ನಿರಾಕರಿಸಲಾಗಿದೆ - ಹೇಗೆ ಆತ್ಮಶಬ್ದವಿರುವುದರಿಂದ ಪ್ರಕೃತಿಗೆ ಪೂರ್ವಪಕ್ಷದಲ್ಲಿ ಪ್ರವೇಶವಿಲ್ಲವೋ ಹಾಗೆಯೇ ಮುಕ್ತಪ್ರಾಪ್ಯತ್ವ ಧರ್ಮವನ್ನು ಹೇಳಿರುವುದರಿಂದ ಜೀವನಿಗೂ ಪ್ರವೇಶವಿರಬಾರದು. ಪ್ರಕೃತಿಗೆ ಆತ್ಮಶಬ್ದವಾಚ್ಯತ್ವವನ್ನು ಸೂತ್ರದಲ್ಲಿ ನಿರಾಕರಿಸಲಾಗಿರುವಂತೆ ಜೀವನಿಗೂ ಮುಕ್ತಪ್ರಾಪ್ಯತ್ವವನ್ನು 'ಅಸ್ಮಿನ್ನಸ್ಯ ಚ ತದ್ಯೋಗಂ ಶಾಸ್ತಿ' ಎಂದು ಪರಮಾತ್ಮನಿಗೆ ಹೇಳುವ ಮೂಲಕ ಜೀವನಿಗೆ ನಿರಾಕರಿಸಲಾಗಿದೆ. ಆದ್ದರಿಂದ ಪ್ರಕೃತಿಯನ್ನು ಪೂರ್ವಪಕ್ಷದಲ್ಲಿ ಸೇರಿಸದೆ ಬಿಟ್ಟರೆ ಜೀವನನ್ನೂ ಬಿಡಬೇಕಾಗುತ್ತದೆ. ಹೀಗಾಗಿ ಈ ಅಧಿಕರಣಕ್ಕೆ ಪೂರ್ವಪಕ್ಷವೇ ಇಲ್ಲದಂತಾಗುತ್ತದೆ. ಆದ್ದರಿಂದ ಸಿದ್ಧಾಂತದಲ್ಲಿ ಬರುವ ಪರಿಹಾರಕ ಯುಕ್ತಿಗಳನ್ನು ಗಮನಿಸಿದರೆ ಪೂರ್ವಪಕ್ಷವನ್ನು ಮಾಡಿದಾಗ ಜೀವನಂತೆ ಪ್ರಕೃತಿಗೂ ಪೂರ್ವಪಕ್ಷದಲ್ಲಿ ಪ್ರವೇಶವನ್ನು ನೀಡಬೇಕಾಗುತ್ತದೆ.

**॥ ಇಲ್ಲಿಗೆ ದ್ಯುಭ್ವಾದ್ಯಧಿಕರಣ ಮುಗಿಯಿತು ॥**

# ಭೂಮಾಧಿಕರಣ - 2

**'ಪ್ರಾಣೋ ವಾ ಆಶಯಾಃ ಭೂಯಾನ್ ಇತ್ಯುಕ್ತ್ವಾ' 'ಯೋ ವೈ ಭೂಮಾ ತತ್ ಸುಖಂ' (ಛಾಂ.7-23) ಇತ್ಯುಕ್ತೇಃ ತಸ್ಯೈವ ಭೂಮತ್ವಪ್ರಾಪ್ತಿಃ। 'ಉತ್ಕ್ರಾಂತಪ್ರಾಣಾನ್ (ಛಾಂ.7.15.3) ಇತ್ಯಾದಿ ತಲ್ಲಿಂಗಾತ್ ಪ್ರಾಣಶಬ್ದಶ್ಚ ವಾಯುವಾಚೀ ಇತಿ। ಅತೋ ವಕ್ತಿ-**

**ಓಂ॥ ಭೂಮಾ ಸಂಪ್ರಸಾದಾತ್ ಅಧ್ಯುಪದೇಶಾತ್ ॥ ಓಂ**

**ಸಂಪ್ರಸಾದಾತ್=ಪೂರ್ಣಸುಖರೂಪತ್ವಾತ್, ಅಧ್ಯುಪದೇಶಾತ್=ಸರ್ವೇಷಾಂ ಉಪರಿ ಉಪದೇಶಾಚ್ಚ ವಿಷ್ಣುರೇವ ಭೂಮಾ।**

**ಸಹಸ್ರಶೀರ್ಷಂ ದೇವಂ ವಿಶ್ವಾಕ್ಷಂ ವಿಶ್ವಶಂಭುವಮ್।**
**ವಿಶ್ವಂ ನಾರಾಯಣಂ ದೇವಂ ಅಕ್ಷರಂ ಪರಮಂ ಪದಮ್॥**
**ವಿಶ್ವತಃ ಪರಮಾಂ ನಿತ್ಯಂ॥ (ಮಹಾನಾ.) ಇತಿ ಹಿ ಶ್ರುತಿಃ।**
**ತಮುತ್ಕ್ರಾಂತಂ ಪ್ರಾಣೋಽನೂತ್ಕ್ರಾಮತಿ॥ (ಬೃ.6.4.2)**

**ಇತ್ಯಾದಿನಾ ನೋತ್ಕ್ರಮಣಾದಿಲಿಂಗವಿರೋಧೋಽಪಿ॥ 8॥**

ಛಾಂದೋಗ್ಯೋಪನಿಷತ್ತಿನಲ್ಲಿ 'ಪ್ರಾಣನು ಭಾರತೀದೇವಿಗಿಂತ (ಗುಣದಲ್ಲಿ) ಉತ್ತಮ' ಎಂದು ಹೇಳಿ ಅನಂತರ, 'ಯಾರು ಗುಣಪೂರ್ಣನೋ ಅವನೇ ಸುಖಪೂರ್ಣ' ಎಂದು ಹೇಳಿರುವುದರಿಂದ (ಭೂಮಶಬ್ದದಿಂದ ಹೇಳಲಾದ) ಆನಂದಪೂರ್ಣತ್ವ ವಾಯುದೇವನಿಗೆಂದಾಯಿತು. ಹಿಂದಿನ ಮಂತ್ರದಲ್ಲಿ 'ಪ್ರಾಣ ನಿರ್ಗಮಿಸಿರುವ ತಂದೆ ಮೊದಲಾದ ಹಿರಿಯರನ್ನು' ಎಂದು ದೇಹದಿಂದ ನಿರ್ಗಮನರೂಪವಾದ ಪ್ರಾಣನ ಧರ್ಮವನ್ನು ಉಲ್ಲೇಖಿಸಿರುವುದರಿಂದ 'ಪ್ರಾಣೋ ವಾ ಆಶಾಯಾಃ ಭೂಯಾನ್' ಎಂಬ ವಾಕ್ಯದಲ್ಲಿರುವ ಪ್ರಾಣಶಬ್ದ ವಾಯು ವಾಚಕ. ಹೀಗೆ ಆಕ್ಷೇಪ ಬಂದಾಗ ಸೂತ್ರಕಾರರು ಈ ಸೂತ್ರವನ್ನು ಹೇಳಿದ್ದಾರೆ.

ಸಂಪ್ರಸಾದಾತ್=ಪೂರ್ಣಸುಖವನ್ನು ಉಲ್ಲೇಖಿಸಿರುವುದರಿಂದ, ಅಧ್ಯುಪದೇಶಾತ್=ಸರ್ವದೇವತೆಗಳಿಗಿಂತ ಉತ್ತಮನನ್ನಾಗಿ ಹೇಳಿರುವುದರಿಂದ ಇಲ್ಲಿ ಪ್ರಸ್ತುತನಾದ 'ಭೂಮ' ವಿಷ್ಣು. 'ಅನಂತ ಶಿರವುಳ್ಳ, ಪ್ರಕಾಶರೂಪನಾದ, ಸರ್ವತಃ ಚಕ್ಷುವಾದ, ಪೂರ್ಣ ಸುಖಾಶ್ರಯನಾದ, ಎಲ್ಲದರೊಳಗಿರುವುದರಿಂದ ಸರ್ವಾತ್ಮಕನಾದ, ಕ್ರೀಡಾದಿಗುಣವಿಶಿಷ್ಟನಾದ, ನಾಶರಹಿತನಾದ, ಪರಳೆನಿಸಿದ ಲಕ್ಷ್ಮೀದೇವಿಗಿಂತಲೂ

ಉತ್ತಮನಾದ, ಮುಕ್ತಪ್ರಾಪ್ಯನಾದ, ಸರ್ವೋತ್ತಮ ಹಾಗೂ ಅಕಾರವಾಚ್ಯನಾದ, ದೇಹತಃ ನಾಶರಹಿತನಾದ ನಾರಾಯಣನನ್ನು(ಎಲ್ಲರೂ ಉಪಜೀವಿಸಿದ್ದಾರೆ). ಶ್ರುತಿ ಹೀಗಿದೆ.

'ದೇಹದಿಂದ ಹೊರಟ ವಿಷ್ಣುವನ್ನು ಅನುಸರಿಸಿ ಪ್ರಾಣನೂ (ದೇಹದಿಂದ) ನಿರ್ಗಮಿಸುತ್ತಾನೆ' ಎಂದಿರುವುದರಿಂದ ದೇಹಪರಿತ್ಯಾಗವು ವಿಷ್ಣುವಿಗೆ ವಿರುದ್ಧವಾದ ಧರ್ಮವಲ್ಲ.

**ವಿವರಣೆ : 1.** ಈ ಅಧಿಕರಣದಲ್ಲಿ 'ಭೂಮಾ' ಎಂಬ ನಾಮವನ್ನು ಸಮನ್ವಯ ಮಾಡಲಾಗಿದೆ. 'ಪ್ರಾಣೋ ವಾ ಆಶಾಯಾಃ ಭೂಯಾನ್' ಎಂದು ಛಾಂದೋಗ್ಯದಲ್ಲಿ ಪ್ರಾಣನಿಗೂ 'ಭೂಮಾ' ಎಂಬ ಹೆಸರು ಇದೆ. 'ವಿಷ್ಣುರ್ವೈ ದೇವೇಭ್ಯೋ ಭೂಯಾನ್' ಎಂದು ವಿಷ್ಣುವಿಗೂ ಇದೆ. ಹೀಗೆ ಅದು ಉಭಯತ್ರ ಪ್ರಸಿದ್ಧವಾದ ನಾಮ ಶಬ್ದ.

**2.** 'ಬಹು' ಶಬ್ದದಿಂದ 'ಭೂಮಾ' ಶಬ್ದವು ನಿಷ್ಪನ್ನವಾಗಿದೆ. ಹೀಗೆ ಅದು ಧರ್ಮವಾಚಕ ಸಂಖ್ಯಾಶಬ್ದ. ಆದರೂ 'ಯೋ ವೈ ಭೂಮಾ' 'ಯೋ ವೈ ಭೂಮಾ ತದಮೃತಂ' ಎಂದು ಉಪನಿಷತ್ತುಗಳಲ್ಲಿ ಶ್ರೇಷ್ಠ ಎಂಬ ಅರ್ಥದಲ್ಲಿ ಧರ್ಮಿವಾಚಕವಾಗಿ ಪ್ರಯೋಗಿಸಲ್ಪಟ್ಟಿದೆ. 'ಪ್ರಾಣೋ ವಾ ಆಶಾಯಾಃ ಭೂಯಾನ್' ಎಂಬಲ್ಲೂ ಭೂಯಾನ್ ಎಂದರೆ ಗುಣದಿಂದ ಶ್ರೇಷ್ಠ ಎಂದೇ ಅರ್ಥ. ಹೀಗೆ 'ಭೂಮಾ' ಎನ್ನುವುದು ಧರ್ಮವಾಚಕ ನಾಮ. ಆ ನಾಮ ವಾಯುದೇವನದು. ಅದು ವಾಯುವಿನ ಹೆಸರಾದರೆ 'ಯೋ ವೈ ಭೂಮಾ ತತ್ಸುಖಂ' ಎಂದಿರುವುದರಿಂದ ಸುಖರೂಪನೂ ವಾಯುದೇವನಾದಾನು. ಆಗ ಆನಂದಮಯಾಧಿಕರಣದಲ್ಲಿ 'ವಿಷ್ಣು ಸುಖರೂಪ' ಎಂದುದು ತಪ್ಪಾಗುತ್ತದೆ. ಹೀಗೆ ಈ ಅಧಿಕರಣ ಆನಂದಮಯಾಧಿಕರಣದಲ್ಲಿ ಮಾಡಿರುವ ಸಿದ್ಧಾಂತವನ್ನು ಆಕ್ಷೇಪಿಸಿ ಸಮಾಧಾನ ನೀಡುತ್ತಿದೆ.

**3.** 'ಪ್ರಾಣೋ ವಾ ಆಶಾಯಾಃ ಭೂಯಾನ್' ಎಂದು ಹೇಳಿ ಪ್ರಾಣನಿಗಿಂತ ಉತ್ತಮನಾದ ಮತ್ತೊಬ್ಬನನ್ನು ಹೇಳಿಲ್ಲವಾದ ಕಾರಣ ಅವನೇ ನಿರವಧಿಕ ಪೂರ್ಣ. ಯಾರು ಗುಣಪೂರ್ಣರೋ ಅವರೇ ಆನಂದಪೂರ್ಣರು. 'ನಾಲ್ಪೇ ಸುಖಮಸ್ತಿ- ಅಪೂರ್ಣನಲ್ಲಿ ಪೂರ್ಣ ಸುಖವಿಲ್ಲ' ಆದ್ದರಿಂದ ಪ್ರಾಣನೇ ಆನಂದಮಯ.

ಹಿಂದೆ ಪ್ರಾಣಾಧಿಕರಣದಲ್ಲಿ ಪ್ರಾಣಶಬ್ದವನ್ನು ವಿಷ್ಣುವಾಚಕ ಎಂದು ಸಮರ್ಥನೆ ಮಾಡಲಾಗಿದೆ. ಆದರೆ ಇಲ್ಲಿರುವ ಪ್ರಾಣಶಬ್ದ ವಿಷ್ಣುವಾಚಕವಲ್ಲ 'ಉತ್ಕ್ರಾಂತಪ್ರಾಣಾನ್ ಶೂಲೇನ ಸಮಾಸಂ ವ್ಯತಿಷಂ ದಹೇತ್। ನೈನಂ ಬ್ರೂಯುಃ ಪಿತೃಹಾಸೀತಿ- ಪ್ರಾಣನು ಹೋದಮೇಲೆ ತಂದೆಯನ್ನು ಪೂರ್ಣ ಸುಟ್ಟರೂ ಅಂತಹವನನ್ನು ಪಿತೃಘಾತಕ ಎನ್ನುವುದಿಲ್ಲ' ಎಂದು ಇಲ್ಲಿ ದೇಹದಿಂದ ಪ್ರಾಣನ ನಿರ್ಗಮನವನ್ನು ಪ್ರಸ್ತುತಪಡಿಸಲಾಗಿದೆ. ದೇಹದಿಂದ ನಿರ್ಗಮಿಸುವ ಪ್ರಾಣ ವಾಯುದೇವ. ಆದ್ದರಿಂದ ಅವನೇ ಈ ಪ್ರಕರಣದಲ್ಲಿ ಪ್ರಸ್ತುತ.

**ಸಿದ್ಧಾಂತ :** ಸಂಪ್ರಸಾದಾತ್ - 'ಸಮ್ಯಕ್ ಪ್ರಸೀದತಿ ಅನೇನ ಇತಿ'। ನಾವು ಪ್ರಸನ್ನರಾಗಿರಲು ಕಾರಣವಾದುದು ಸಂಪ್ರಸಾದ. ಪೂರ್ಣಸುಖವೆಂದರ್ಥ. 'ತತ್ ಸುಖಂ' ಎಂಬ ಶ್ರುತಿಯಲ್ಲಿರುವ ನಿರುಪಪದವಾದ ಸುಖ ಶಬ್ದಕ್ಕೆ 'ಪೂರ್ಣಸುಖ' ಎಂದು ಅರ್ಥ. ಪೂರ್ಣಸುಖ ಪರಮಾತ್ಮನಿಗೆ ಮಾತ್ರ. ಇತರರು ಅಲ್ಪಸುಖರು. ಆದ್ದರಿಂದ ಅವರು 'ಭೂಮಾ' ಶಬ್ದದಿಂದ ವಾಚ್ಯರಲ್ಲ.

ಅಧ್ಯುಪದೇಶಾತ್-'ಅಧಿ' ಎಂದರೆ ಸರ್ವಾಧಿಕ. ಇಲ್ಲಿ ಪ್ರಾಣನನ್ನು ಸರ್ವೋತ್ತಮನನ್ನಾಗಿ ಹೇಳಲಾಗಿದೆ. ನಾರದರು ಸನತ್ಕುಮಾರರ ಬಳಿ ಬ್ರಹ್ಮೋಪದೇಶಕ್ಕಾಗಿ ಬಂದಾಗ ಸನತ್ಕುಮಾರರು ಮೊದಲು 'ನಾಮ ಬ್ರಹ್ಮೇತ್ಯುಪಾಸೀತ-ನಾಮಾಭಿಮಾನಿನಿಯಾದ ಉಷಾದೇವಿಯನ್ನು 'ಬ್ರಹ್ಮ=ಪೂರ್ಣಳು' ಎಂದು ಉಪಾಸನೆ ಮಾಡಬೇಕು ಎಂದು ಪ್ರಾರಂಭ ಮಾಡಿ ಭಾರತೀದೇವಿ (ಆಶಾ) ಯವರೆಗೆ ದೇವತಾತಾರತಮ್ಯಕ್ಕೆ ಅನುಗುಣವಾಗಿ ಉಪಾಸನೆಯನ್ನು ಹೇಳಿ ಕೊನೆಗೆ ಪ್ರಾಣನನ್ನು ಹೇಳಿದ್ದಾರೆ. ಪ್ರಾಣನಿಗಿಂತ ಉತ್ತಮನಾದ ಮತ್ತೊಬ್ಬನನ್ನು ಹೇಳಲಿಲ್ಲ. ಆದ್ದರಿಂದ ಸರ್ವೋತ್ತಮವ್ಯಕ್ತಿ ಪ್ರಾಣ ಎಂದು ತಿಳಿಯುತ್ತದೆ. ಇದರಿಂದ ಪ್ರಾಣನೆಂದರೆ ವಿಷ್ಣು ಎಂದು ನಿಶ್ಚಯಿಸಬಹುದಾಗಿದೆ. ಅದಕ್ಕೆ ಅಡ್ಡಿಯಾಗಿರುವ ಧರ್ಮ ದೇಹೋತ್ಕ್ರಮಣ. ಅದು ವಾಯುದೇವನಂತೆ ವಿಷ್ಣುವಿಗೂ ಇದೆ. ಈ ದೇಹದಲ್ಲಿ ವಾಯುದೇವ ವಿಷ್ಣುವಿನ ಜೊತೆಯಲ್ಲೇ ಇರುತ್ತಾನೆ. ಮೊದಲು ಈ ದೇಹಬಿಟ್ಟು ಹೋಗುವವನು ವಿಷ್ಣು. ಅವನ ಜೊತೆ ವಾಯುದೇವ ಹೊರಡುತ್ತಾನೆ. ಹೀಗೆ ದೇಹಪರಿತ್ಯಾಗ ವಿಷ್ಣುವಿಗೆ ಮುಖ್ಯವಾದುದು. ಆದ್ದರಿಂದ ಪ್ರಾಣನೆಂದರೂ ವಿಷ್ಣುವೇ. ಅವನೇ 'ಭೂಮಾ', ಅವನೇ ಸುಖರೂಪ.

**ಶ್ರುತ್ಯರ್ಥ : ಅ.** ವಿಶ್ವಶಂಭುವಂ-ವಿಶ್ವ=ಪೂರ್ಣವಾದ ಶಂ=ಸುಖಕ್ಕೆ ಭುವಂ=ಆಶ್ರಯ. ಈ ಶ್ರುತಿಯಿಂದ ಪೂರ್ಣಸುಖರೂಪನಾದವನು ವಿಷ್ಣು ಎಂದು ತಿಳಿಯುತ್ತದೆ.

**ಆ.** ಶ್ರುತಿಯಲ್ಲಿ ದೇವಶಬ್ದ ಎರಡಿದೆ. 'ದ್ಯುಪ್ರಕಾಶೇ' ಧಾತುವಿನಿಂದಾದ ದೇವಶಬ್ದಕ್ಕೆ ಪ್ರಕಾಶರೂಪ ಎಂದರ್ಥ. 'ದಿವು ಕ್ರೀಡಾಯಾಂ' ಧಾತುವಾದರೆ 'ಕ್ರೀಡಾದಿ ಗುಣಗಳುಳ್ಳವನು' ಎಂದರ್ಥ.

**ಇ.** ವಿಶ್ವತಃ ಪರಮಾಂ - 'ವಿಶ್ವತಃ ಪರಮಂ ಚ ತದ್ ಅಂಚ' (ತತ್ವಪ್ರದೀಪ) ವಿಶ್ವೋತ್ತಮ ಹಾಗೂ ಅಕಾರವಾಚ್ಯ.

'ವಿಶ್ವತಃ ಪರಮಂ' ಎಂದು ದ್ರಾವಿಡಪಾಠ. 'ಪರಮಾಂ' ಎಂದು ಆಂಧ್ರಪಾಠ.

|| ಸೂತ್ರ 8 ||

## ಓಂ ॥ ಧರ್ಮೋಪಪತ್ತೇಶ್ಚ ॥ ಓಂ

**ಸರ್ವಗತತ್ವಾದಿ ಧರ್ಮೋಪಪತ್ತೇಶ್ಚ ॥ 9 ॥**

## ॥ ಇತಿ ಭೂಮಾಧಿಕರಣಮ್ ॥

ಇಲ್ಲಿ ಹೇಳಿರುವ ಸರ್ವತ್ರ ವ್ಯಾಪ್ತಿಯು ವಿಷ್ಣುವಿನಲ್ಲೇ ಇರುವುದರಿಂದಲೂ 'ಭೂಮಾ' ಎಂದರೆ ಅವನೆ.

**ವಿವರಣೆ :** ಈ ಪ್ರಕರಣದಲ್ಲಿ ಭೂಮಪದವಾಚ್ಯನಿಗೆ ಎರಡು ಧರ್ಮಗಳನ್ನು ಹೇಳಲಾಗಿದೆ-

1) 'ಯತ್ರ ನಾನ್ಯತ್ ಪಶ್ಯತಿ, ನಾನ್ಯತ್ ಶ್ರುಣೋತಿ, ನಾನ್ಯದ್ ವಿಜಾನಾತಿ ಸ ಭೂಮಾ ಸ ಭಗವಃ ಕಸ್ಮಿನ್ ಪ್ರತಿಷ್ಠಿತಃ? ಸ್ವೇ ಮಹಿಮ್ನಿ'. ಇಲ್ಲಿ ಯತ್ರ ಅಂದರೆ ಯಾರ (ಹೊರತಾಗಿ) ಎಂದರ್ಥ. ಭೂಮನ ಅಧೀನವಾಗದೆ ಯಾವುದೂ ಇಲ್ಲ; ಆದರೆ ಅವನಿಗೆ ಯಾರೂ ಆಶ್ರಯರಾದವರಿಲ್ಲ. ಹೀಗೆ ಸ್ವಾತಂತ್ರ್ಯವನ್ನು ಇಲ್ಲಿ ಹೇಳಲಾಗಿದೆ.

2) 'ಸ ಏವ ಅಧಸ್ತಾದ್, ಸ ಉಪರಿಷ್ಟಾತ್, ಸ ಪಶ್ಚಾತ್, ಸ ಪುರಸ್ತಾತ್, ಸ ದಕ್ಷಿಣತಃ, ಸ ಉತ್ತರತಃ, ಸ ಏವೇದಂ ಸರ್ವಮ್' - ಇಲ್ಲಿ ಸರ್ವತ್ರ ವ್ಯಾಪ್ತಿಯು ತಿಳಿಯುತ್ತದೆ.

ಈ ಎರಡು ಗುಣಗಳಿಂದ ವಿಷ್ಣುವೇ 'ಭೂಮಾ'.

ನ್ಯಾಯವಿವರಣ ಮತ್ತು ಛಾಂದೋಗ್ಯಭಾಷ್ಯಗಳಲ್ಲಿ ಹೇಳಿರುವಂತೆ, ಇಲ್ಲಿರುವ ಪ್ರಾಣಶಬ್ದಕ್ಕೆ ಪೂರ್ವಪಕ್ಷದಂತೆ ಸಿದ್ಧಾಂತದಲ್ಲೂ ಮುಖ್ಯಪ್ರಾಣ ಎಂದೇ ಅರ್ಥ. ಆಗ ವಿಷ್ಣುವಿನ ಉಲ್ಲೇಖ ಇಲ್ಲದಂತಾಗುವುದರಿಂದ ಪ್ರಾಣನ ನಂತರ ಪ್ರಸ್ತುತವಾದ ಸತ್ಯಶಬ್ದ ವಿಷ್ಣುವಾಚಕ ಎಂದು ತಿಳಿಯಬೇಕು. ಅದಕ್ಕೆ ಸೂಚನೆ - 'ಏವಂ ವಿಜಾನನ್ನತಿವಾದೀ' ಎಂದು ಪ್ರಾಣಜ್ಞಾನಿಯನ್ನು 'ಅತಿವಾದಿ- ಅಧಿಕಜ್ಞಾನೀ' ಎಂದು ಹೇಳಿ 'ಏಷ ತು ವಾವ ಅತಿವದತಿ ಯಃ ಸತ್ಯೇನಾತಿವದತಿ' ಎಂದು ಸತ್ಯನಾಮಕ ಬ್ರಹ್ಮಜ್ಞಾನಿ 'ಅತ್ಯಧಿಕಜ್ಞಾನೀ' ಎಂಬುದನ್ನು 'ತು' ಶಬ್ದದಿಂದ ತಿಳಿಸಿರುವುದು. 'ತು' ಶಬ್ದ ವಿಶೇಷವಾಚಕವಾದುದರಿಂದ ಈ ಅರ್ಥ ತಿಳಿಯುತ್ತದೆ. ಹೀಗೆ ಸತ್ಯ ಶಬ್ದದಿಂದ ಸರ್ವೋತ್ತಮನಾದ ಬ್ರಹ್ಮನನ್ನು ಹೇಳಲಾಗಿದೆ.॥9॥

## ಮಾಧ್ವದರ್ಶನದಲ್ಲಿ ಸೂತ್ರಗಳ ಅರ್ಥ

**1. ಓಂ ॥ ಭೂಮಾ ಸಂಪ್ರಸಾದಾತ್ ಅಧ್ಯುಪದೇಶಾತ್ ॥ ಓಂ**

ಸಂಪ್ರಸಾದಾತ್=''ತತ್ಸುಖಂ' ಎಂದು ಭೂಮನನ್ನು ಪೂರ್ಣಸುಖರೂಪನನ್ನಾಗಿಯೂ ಅಧ್ಯುಪದೇಶಾತ್=ನಾಮಾಭಿಮಾನಿ ಉಷಾದೇವಿಯಿಂದಾರಂಭಿಸಿ ಭಾರತೀದೇವಿಪರ್ಯಂತ ಸಕಲ ದೇವತೆಗಳಿಗಿಂತ ಅಧಿಕನನ್ನಾಗಿಯೂ ಉಪದೇಶಿಸಿರುವುದರಿಂದಲೂ ಭೂಮಾ= ಭೂಮಪದವಾಚ್ಯನು ವಿಷ್ಣು

('ಯೋ ವೈ ಭೂಮಾ ತತ್ಸುಖಂ' ಇತ್ಯುಕ್ತೋ ಭೂಮಾ ತತ್ತು=ಬ್ರಹ್ಮೈವ। ನ ತು ಪ್ರಾಣಃ। ಕುತಃ? ಸಂಪ್ರಸಾದಾತ್='ತತ್ಸುಖಂ' ಇತಿ ಪೂರ್ಣ ಸುಖಾಭಿಧಾನಾತ್। ಅಧ್ಯುಪದೇಶಾತ್ ಅಧಿ= ಅಧಿಕತ್ವೇನ ನಾಮಾದೀನಾಂ ಸರ್ವೇಷಾಂ ಉಪರಿ ತದುತ್ತಮತ್ವೇನ ಉಪದೇಶಾಚ್ಚ। 'ಸಂಬಂಧ ಭೂಮಾ' ಇತ್ಯಸ್ಯ ಭಾವಾರ್ಥತ್ವೇಽಪಿ ಇಹ ಭಾವಭವಿತ್ರೋಃ ಅಭೇದಾತ್ ಪೂರ್ಣರೂಪಮಿತ್ಯರ್ಥತ್ವಂ ಬೋಧ್ಯಮ್।)

**2. ಓಂ॥ ಧರ್ಮೋಪಪತ್ತೇಶ್ಚ॥ ಓಂ**

ಈ ಪ್ರಕರಣದಲ್ಲಿ 'ಸ ಏವ ಅಧಸ್ತಾದ್' ಎಂದು ಮುಂತಾಗಿ ಹೇಳಿದ ಸರ್ವಗತತ್ವ-ಸ್ವತಂತ್ರತ್ವಧರ್ಮಗಳು ವಿಷ್ಣುವಿನಲ್ಲೇ ಇರುವುದರಿಂದಲೂ 'ಭೂಮಾ' ಅವನೇ.

('ಸ ಏವ ಅಧಸ್ತಾತ್ ಸ ಉಪರಿಷ್ಟಾತ್' ಇತ್ಯುಕ್ತ ಸರ್ವಗತತ್ವಾದಿ ಧರ್ಮಾಣಾಂ ಉಪಪತ್ತೇಶ್ಚ ಭೂಮಾ ಬ್ರಹ್ಮೈವ।)

## ಶಾಂಕರಭಾಷ್ಯದಲ್ಲಿ ಹೇಳಿದ ಸೂತ್ರಗಳ ಅರ್ಥ

**1. ಭೂಮಾ ಸಂಪ್ರಸಾದಾದಧ್ಯುಪದೇಶಾತ್**

**ಪೂರ್ವಪಕ್ಷ** - 'ಆತ್ಮಜ್ಞಾನಿಯು ದುಃಖವನ್ನು ದಾಟುತ್ತಾನೆ ಎಂದು ತಮ್ಮಂತಹವರಿಂದ ಕೇಳಿಯಷ್ಟೇ ತಿಳಿದಿದ್ದೇನೆ. ದಯವಿಟ್ಟು ನನ್ನನ್ನು ದುಃಖದ ತೀರಕ್ಕೆ ಮುಟ್ಟಿಸಿ' ಎಂದು ನಾರದರ ಜಿಜ್ಞಾಸೆಯಿಂದ ಈ ಪ್ರಕರಣ ಪ್ರಾರಂಭವಾಗಿದೆ. ಅವರಿಗೆ ಬ್ರಹ್ಮೋಪದೇಶವನ್ನು ಮಾಡುತ್ತಾ ಸನತ್ಕುಮಾರರು ಮೊದಲು 'ನಾಮ ಬ್ರಹ್ಮೇತಿ ಉಪಾಸೀತ' ಎನ್ನುತ್ತಾರೆ. ನಾರದರು 'ಅಸ್ತಿ ಭಗವಃ ನಾಮ್ನೋ ಭೂಯಃ-ಸ್ವಾಮಿ ನಾಮಕ್ಕಿಂತ ಮಿಗಿಲಾದುದೂ ಇದೆಯೆ?' ಎಂದು ಕೇಳುತ್ತಾರೆ. ಅದಕ್ಕೆ 'ವಾಗ್ ವಾವ ನಾಮ್ನೋ ಭೂಯಸೀ' ಎಂದು ಸನತ್ಕುಮಾರರ ಉತ್ತರ. ಹೀಗೆ ಹೇಳುತ್ತಾ ಹೋಗಿ ಈ ಪ್ರಶ್ನೋತ್ತರಗಳು ಪ್ರಾಣನಲ್ಲಿ ಕೊನೆಗೊಳ್ಳುತ್ತವೆ. ಅದೇ ಪ್ರಾಣನನ್ನು 'ಯೋ ವೈ ಭೂಮಾ ತತ್ಸುಖಂ' ಎನ್ನಲಾಗಿದೆ. ಇದರಿಂದ ಪ್ರಾಣನೇ ಭೂಮನೆಂದು ತಿಳಿಯುತ್ತದೆ. ಅಲ್ಲದೆ 'ಯತ್ರ ನಾನ್ಯತ್ ಪಶ್ಯತಿ' ಎಂದು ಮುಂತಾಗಿ ನಿದ್ರಾಕಾಲದಲ್ಲಿ ಉಳಿದೆಲ್ಲ ಇಂದ್ರಿಯಗಳ ವ್ಯಾಪಾರ ಇಲ್ಲದಿದ್ದರೂ ಪ್ರಾಣನಿರುತ್ತಾನೆ (ಉಸಿರಾಟ) ಎನ್ನುವ ಮಾತು ಪ್ರಾಣನಿಗೇ ಅನ್ವಯಿಸುತ್ತದೆ. ಆದ್ದರಿಂದ ಪ್ರಾಣನೇ ಭೂಮ.

**ಸಿದ್ಧಾಂತ : 1.** 'ಸಂಪ್ರಸಾದಾತ್ ಅಧಿ- ಉಪದೇಶಾತ್ ಭೂಮಾ ಪರಮಾತ್ಮೈವ' 'ಸಂಪ್ರಸಾದ' ಎಂದರೆ ನಿದ್ರಾವಸ್ಥೆ. ಬೃಹದಾರಣ್ಯಕದಲ್ಲಿ ಎಚ್ಚರಾದಿ ಅವಸ್ಥೆಗಳನ್ನು ಹೇಳಿ 'ಸ ಏಷ ಏತಸ್ಮಿನ್ ಸಂಪ್ರಸಾದೇ ರತ್ವಾ' ಎಂದು ನಿದ್ರಾವಸ್ಥೆಗೆ ಆ ಶಬ್ದವನ್ನು ಬಳಸಲಾಗಿದೆ. ಪ್ರಕೃತ, ಆ ನಿದ್ರಾವಸ್ಥೆಯಲ್ಲೂ ಕ್ರಿಯಾಶೀಲನಾದ ಪ್ರಾಣ ಸಂಪ್ರಸಾದ. ಅವನಿಗಿಂತ ಅಧಿ= ಅಧಿಕವಾಗಿ ಭೂಮನನ್ನು ಉಪದೇಶಾತ್= ಹೇಳಿರುವುದರಿಂದ ಭೂಮ ಬ್ರಹ್ಮ.

ಸನತ್ಕುಮಾರರು ಪ್ರಾಣಪರ್ಯಂತವಾಗಿ ಉಪಾಸನೆಯನ್ನು ಹೇಳಿದ ಮೇಲೆ ನಾರದರು ಸುಮ್ಮನಾದರು. ಆಮೇಲೆ ಸನತ್ಕುಮಾರರೇ 'ಏಷ ತು ವಾವ ಅತಿವದತಿ ಯಃ ಸತ್ಯೇನಾತಿವದತಿ' 'ಸತ್ಯವನ್ನು ಹೇಳಿದವನೇ ಅತಿವಾದಿ ಎನಿಸುತ್ತಾನೆ' ಎಂದರು. ಆಗ ನಾರದರು 'ಸೋಽಹಂ ಭಗವಃ ಸತ್ಯೇನ ಅತಿವದಾನಿ' ಎಂದರು. ಇಲ್ಲಿ ಸತ್ಯವೆಂದರೆ ಬ್ರಹ್ಮ. 'ಸತ್ಯಂ ಜ್ಞಾನಂ ಅನಂತಂ ಬ್ರಹ್ಮ' ಎಂದು ತೈತ್ತಿರೀಯ ಶ್ರುತಿ ಬ್ರಹ್ಮನೇ ಸತ್ಯ ಎನ್ನುತ್ತದೆ. ಅದನ್ನೇ 'ಯೋ ವೈ ಭೂಮಾ ತತ್ಸುಖಂ' ಎಂದು ಭೂಮನನ್ನಾಗಿ ಉಪದೇಶಿಸಲಾಗಿದೆ. ಆದ್ದರಿಂದ ಬ್ರಹ್ಮನೇ ಭೂಮ. ಹೀಗೆ ಹೇಳಿದಾಗಲೇ ನಾರದರ ಆತ್ಮನ ಕುರಿತ ಪ್ರಶ್ನೆಗೆ ಸಮಾಧಾನ ದೊರೆಯುತ್ತದೆ. ಪ್ರಾಣ ಆತ್ಮನಲ್ಲದ ಕಾರಣ ಅಲ್ಲೇ ಉತ್ತರವನ್ನು ನಿಲ್ಲಿಸಿದರೆ ನಾರದರ ಪ್ರಶ್ನೆಗೆ ಉತ್ತರವೇ ಸಿಗಲಾರದು.

**2. ಧರ್ಮೋಪಪತ್ತೇಶ್ಚ-** ಭೂಮತ್ವ ಪ್ರಾಪ್ತಿಯಾದಾಗ ಬ್ರಹ್ಮನೊಂದಿಗೆ ಐಕ್ಯಬಂದಾಗ 'ಯತ್ರ ನಾನ್ಯತ್ ಪಶ್ಯತಿ... ಸ ಭೂಮಾ' ಎಂಬ ವಿಶೇಷಣ ಭೂಮ ಆತ್ಮನಾದಾಗಲೇ ಹೊಂದುತ್ತದೆ. 'ಯತ್ರ ತ್ವಸ್ಯ ಸರ್ವಂ ಆತ್ಮೈವಾಭೂತ್ ತತ್ ಕೇನ ಕಂ ಪಶ್ಯೇತ್' (ಬೃ) ಎಂದು ಆತ್ಮನಿಗೇ ಇಂತಹ ಧರ್ಮಗಳು ಹೇಳಲ್ಪಟ್ಟಿವೆ. ಆದ್ದರಿಂದಲೂ 'ಭೂಮ'ನೆಂದರೆ ಪರಬ್ರಹ್ಮ.

## ಚಂದ್ರಿಕಾದಲ್ಲಿ ಮಾಡಿರುವ ವಿಮರ್ಶೆ

1. ಸೂತ್ರದಲ್ಲಿರುವ 'ಸಂಪ್ರಸಾದ ಶಬ್ದಕ್ಕೆ' ನಿದ್ರಾವಸ್ಥೆ ಎಂದು ಅರ್ಥವಾಗಬಹುದು. ಆದರೆ ಆ ಅವಸ್ಥೆಯಲ್ಲಿರುವ 'ಪಂಚ ಪ್ರಾಣಗಳು' ಎಂಬ ಅರ್ಥ ಆ ಶಬ್ದದಿಂದ ಬರುವುದಿಲ್ಲ.

2. ಪ್ರಕೃತ ಪ್ರಕರಣದಲ್ಲಿ ಪ್ರಾಣನ ಉಪದೇಶವಾದ ಅನಂತರ 'ಸತ್ಯ'ನಾಮಕ ಬ್ರಹ್ಮನ ಉಪದೇಶವಿರುವಂತೆ ಶ್ರದ್ಧಾದಿಗಳ ಉಪದೇಶವೂ ಇದೆ- 'ಸತ್ಯಂ ತ್ವೇವ ವಿಜಿಜ್ಞಾಸಿತವ್ಯಂ' 'ಮತಿಸ್ತ್ವೇವ ವಿಜಿಜ್ಞಾಸಿತವ್ಯಾ' 'ಶ್ರದ್ಧಾತ್ವೇವ ವಿಜಿಜ್ಞಾಸಿತವ್ಯಾ'. ಪ್ರಾಣನ ಅನಂತರ ಉಪದೇಶಿಸಿರುವ ಕಾರಣದಿಂದ ಸತ್ಯನು ಬ್ರಹ್ಮನಾಗುವುದಾದರೆ 'ಮತಿ' ಮುಂತಾದವುಗಳೂ ಬ್ರಹ್ಮನಾಗಬೇಕಾದೀತು. ಅಲ್ಲದೆ ತೈತ್ತಿರೀಯೋಪನಿಷತ್ತಿನಲ್ಲಿ 'ಪ್ರಾಣೋ ಬ್ರಹ್ಮೇತಿ ವ್ಯಜಾನಾತ್' ಎಂದು ಪ್ರಾಣನ ಉಪದೇಶದ ಅನಂತರ 'ಮನೋ ಬ್ರಹ್ಮೇತಿ...' ಎಂದು ಮನಸ್ಸಿನ ಉಪದೇಶವಿದೆ. ಅಂದಮಾತ್ರಕ್ಕೆ ಮನಸ್ಸು ಬ್ರಹ್ಮನೆಂದು ಒಪ್ಪಿಕೊಳ್ಳಲಾಗುವುದಿಲ್ಲ. ಆದ್ದರಿಂದ 'ಪ್ರಾಣಾನಂತರ ಉಪದೇಶ' ಬ್ರಹ್ಮತ್ವದ ನಿಶ್ಚಯಕ್ಕೆ ಕಾರಣವಾಗುವುದಿಲ್ಲ.

3. ಎರಡನೆಯ ಸೂತ್ರದಲ್ಲಿ ಹೇಳಿದ ಪ್ರಮೇಯವೂ ವಿಮರ್ಶನೀಯ- ಭೂಮಾ ಪ್ರಾಪ್ತಿಯ ಫಲವಾಗಿ 'ಯತ್ರ ನಾನ್ಯತ್ ಪಶ್ಯತಿ' ಎಂದು ಹೇಳಿರುವುದರ ಅರ್ಥ– 'ಅನ್ಯತ್=ಭೂಮನನ್ನು ಹೊರತು ಇತರವನ್ನು ನ ಪಶ್ಯತಿ=ತಿಳಿಯುವುದಿಲ್ಲ' ಎಂದು.

ಇದರಿಂದ, ಜ್ಞಾನಿಗೆ ಭೂಮರೂಪದ ಜ್ಞಾನವಿದೆ ಎಂದು ತಿಳಿಯುತ್ತದೆ. ಅಂದಮೇಲೆ ಇದು ಅದ್ವೈತ ಸಮ್ಮತವಾದ ಮೋಕ್ಷವಾಗದು. ಅಲ್ಲಿಗೆ ಭೂಮ ಪ್ರಾಪ್ತಿಯ ಅನಂತರವೂ 'ಏವಂ ಪಶ್ಯನ್ ಏವಂ ಮನ್ವಾನಃ' ಎಂದು ಜ್ಞಾನವನ್ನು ಹೇಳಲಾಗಿದೆ. ಆದ್ದರಿಂದ ಇಲ್ಲಿ ಹೇಳಿದ ಧರ್ಮದಿಂದ ಭೂಮನು ಅದ್ವೈತ ಸಮ್ಮತಬ್ರಹ್ಮ ಎನ್ನಲು ಬರುವುದಿಲ್ಲ.

## ರಾಮಾನುಜಭಾಷ್ಯದಲ್ಲಿ ಹೇಳಿದ ಸೂತ್ರಗಳ ಅರ್ಥ

### 1. ಭೂಮಾ ಸಂಪ್ರಸಾದಾದಧ್ಯುಪಪತ್ತೇಶ್ಚ

**ಪೂರ್ವಪಕ್ಷ-** ಈ ಪ್ರಕರಣದಲ್ಲಿ ಹೇಳಲ್ಪಟ್ಟ 'ಭೂಮ' ಜೀವಾತ್ಮ ಇಲ್ಲಿ ನಾಮಾದಿಗಳನ್ನು ಉಪದೇಶಿಸಿ ಕೊನೆಯಲ್ಲಿ ಪ್ರಾಣನ ಉಪದೇಶವಿದೆ. ಪ್ರಾಣನ ಸಂಬಂಧ ಜೀವನಿಗಿರುವುದರಿಂದ ಪ್ರಾಣನೆಂದರೆ ಜೀವಾತ್ಮ. ಅವನು ಮುಕ್ತನಾದಾಗ ಪೂರ್ಣಸುಖರೂಪನಾಗುವುದರಿಂದ 'ಭೂಮಾ ತತ್ ಸುಖಮ್' ಎನ್ನುವುದೂ ಯುಕ್ತವಾಗುತ್ತದೆ.

**ಸಿದ್ಧಾಂತ : 1.** ಪ್ರಾಣಶಬ್ದದಿಂದ ಪ್ರಸ್ತುತನಾದ ಜೀವನಿಗಿಂತಲೂ ಉತ್ತಮನನ್ನಾಗಿ ಬ್ರಹ್ಮತತ್ತ್ವದ ಉಲ್ಲೇಖವನ್ನು ಇಲ್ಲಿ ಸತ್ಯಶಬ್ದದಿಂದ ಮುಂದೆ ಮಾಡಲಾಗಿದೆ. ಪ್ರಾಣಜ್ಞಾನಿಯನ್ನು '...ಏವಂ ವಿಜಾನನ್ ಅತಿವಾದೀ ಭವತಿ' ಎಂದು ಹೇಳಿ 'ಏಷ ತು ವಾವ ಅತಿವದತಿ ಯಃ ಸತ್ಯೇನ ಅತಿವದತಿ' ಎಂದು ಸತ್ಯಪದದಿಂದ ಬ್ರಹ್ಮನ ಉಲ್ಲೇಖವಿದೆ. ಇಲ್ಲಿ ತು ಶಬ್ದವನ್ನು ಹೇಳಿರುವುದರಿಂದ ಪ್ರಾಣನಿಗಿಂತ ಬೇರೆಯಾದ ತತ್ತ್ವ 'ಸತ್ಯ' ಎಂದು ಸ್ಪಷ್ಟವಾಗಿದೆ. ಆದ್ದರಿಂದ ಸತ್ಯ ಶಬ್ದಾರ್ಥನಾದ ಬ್ರಹ್ಮನೇ ಭೂಮಾ.

**2. ಧರ್ಮೋಪಪತ್ತೇಶ್ಚ -** 'ಏತದಮೃತಮ್' 'ಸ ಏವ ಅಧಸ್ತಾತ್' ಎಂದು ಮೊದಲಾಗಿ ಈ ಪ್ರಕರಣದಲ್ಲಿ ಭೂಮನಿಗೆ ಹೇಳಿದ ಧರ್ಮಗಳು ಬ್ರಹ್ಮನಲ್ಲೇ ಇರುವುದರಿಂದ ಬ್ರಹ್ಮನೇ 'ಭೂಮಾ'.

ಭೂಮಾ ಶಬ್ದದ ನಿಷ್ಪತ್ತಿಯನ್ನು ರಾಮಾನುಜ ಭಾಷ್ಯ ಮತ್ತು ಶಾಂಕರಭಾಷ್ಯಗಳಲ್ಲಿ ಹೀಗೆ ತೋರಿಸಲಾಗಿದೆ- 'ಬಹು' ಎಂಬ ಶಬ್ದಕ್ಕೆ 'ಬಹೋರ್ಲೋಪೋ' ಭೂ ಚ ಬಹೋಃ' ಎಂಬ ಸೂತ್ರದಿಂದ 'ಇಮನಿಚ್' ಪ್ರತ್ಯಯ ಮತ್ತು ಭೂ ಆದೇಶ ಬಂದು 'ಭೂಮಾ' ಎಂದಾಗಿದೆ. ಅದು 'ಬಹುತ್ವ' ಎಂಬ ಧರ್ಮವನ್ನು ಹೇಳುತ್ತದೆ. ಹೀಗೆ ಅದು ಧರ್ಮವಾಚಕಶಬ್ದವಾದರೂ ರಾಮಾನುಜಭಾಷ್ಯವು ದ್ವೈತವಾದದಂತೆ ಅದನ್ನು ಧರ್ಮಿವಾಚಕ ಎಂದು ಸಾಧಿಸಿದೆ. ಈ ಪ್ರಕರಣದಲ್ಲಿ 'ನಾಲ್ಪೇ ಸುಖಮಸ್ತಿ' ಎಂದು ಅಲ್ಪ ಶಬ್ದಕ್ಕೆ ಪ್ರತಿದ್ವಂದ್ವಿಯಾಗಿ 'ಯೋ ವೈ ಭೂಮಾ ತತ್ ಸುಖಂ' ಎಂದು ಭೂಮಶಬ್ದವನ್ನು ಪ್ರಯೋಗಿಸಿರುವುದರಿಂದ ಅದೂ ಧರ್ಮಿವಾಚಕ ಶಬ್ದ ಎಂದು ಅದಕ್ಕೆ ಯುಕ್ತಿ.

ಸೂತ್ರದಲ್ಲಿರುವ 'ಸಂಪ್ರಸಾದ' ಶಬ್ದಕ್ಕೆ 'ಸುಷುಪ್ತಿ' ಎಂಬ ಅರ್ಥವನ್ನು ಶಾಂಕರಭಾಷ್ಯದಲ್ಲಿ ಹೇಳಿದ್ದಾರೆ. ರಾಮಾನುಜಭಾಷ್ಯದಲ್ಲಿ ಜೀವ ಎಂಬ ಅರ್ಥವನ್ನು

ಮಾಡಲಾಗಿದೆ. 'ಏಷಃ ಸಂಪ್ರಸಾದೋ ಅಸ್ಮಾತ್ ಶರೀರಾತ್ ಸಮುತ್ಥಾಯ' ಎಂದು ಛಾಂದೋಗ್ಯೋಪನಿಷತ್ತಿನಲ್ಲಿ 'ಸಂಪ್ರಸಾದ' ಶಬ್ದವನ್ನು ಜೀವಾತ್ಮನಲ್ಲಿ ಪ್ರಯೋಗಿಸಲಾಗಿದೆ. ದ್ವೈತದರ್ಶನದಲ್ಲಿ ಈ ಶಬ್ದ ಪೂರ್ಣಸುಖವಾಚಕವಾದ ಯೌಗಿಕ ಶಬ್ದ.

### ಚಂದ್ರಿಕಾದಲ್ಲಿ ಮೂಡಿರುವ ವಿಮರ್ಶೆ

ಛಾಂದೋಗ್ಯದಲ್ಲಿರುವ ಪ್ರಾಣ ಶಬ್ದಕ್ಕೆ ಪ್ರಸಿದ್ಧಾರ್ಥವನ್ನು ಬಿಟ್ಟು 'ಜೀವ' ಎಂಬ ಲಾಕ್ಷಣಿಕಾರ್ಥವನ್ನು ಮಾಡುವುದು ಸರಿಯಲ್ಲ. 'ಏಷ ಸಂಪ್ರಸಾದೋ ಅಸ್ಮಾತ್ ಶರೀರಾತ್' ಎಂಬಲ್ಲೂ ಸಂಪ್ರಸಾದನೆಂದರೆ ಪ್ರಾಣ, ಆ ಶ್ರುತಿಯಲ್ಲಿ 'ಶರೀರದಿಂದ ಉತ್ಕ್ರಮಣವನ್ನು' ಹೇಳಲಾಗಿದೆ. ಪ್ರಾಣೋತ್ಕ್ರಮಣವು ಪ್ರಸಿದ್ಧ ಜೀವೋತ್ಕ್ರಮಣವಲ್ಲ. ಆದ್ದರಿಂದ ಸಂಪ್ರಸಾದನೆಂದರೆ ಜೀವನಲ್ಲ, ಪ್ರಾಣ.

ಇಲ್ಲಿಗೆ ಭೂಮಾಧಿಕರಣ ಮುಗಿಯಿತು.

## ಅಕ್ಷರಾಧಿಕರಣ - 3

**ಅದೃಶ್ಯತ್ವಾದಿ ಗುಣಾಃ ವಿಷ್ಣೋಃ ಉಕ್ತಾಃ, 'ಅದೃಷ್ಟಂ ದ್ರಷ್ಟೃ ಅಶ್ರುತಂ ಶ್ರೋತೃ' (ಬೃ.5.8.11) ಇತ್ಯಾದಿನಾ, 'ಅಹಂ ಸೋಮಮಾಹನಸಂ ವಿಭರ್ಮಿ' (ಋ.10.124.2) ಇತ್ಯಾದೇಃ ತಸ್ಯಾಪಿ ಸಂಭವಾತ್, ಮಧ್ಯಮಾಕ್ಷರಸ್ಯೋಕ್ತಾ ಇತಿ । ಅತೋ ಬ್ರೂತೇ-**

**ಓಂ ॥ ಅಕ್ಷರಂ ಅಂಬರಾಂತಧೃತೇಃ ॥ ಓಂ**

**'ಏತಸ್ಮಿನ್ ಖಲ್ವಕ್ಷರೇ ಗಾರ್ಗಿ ಆಕಾಶ ಓತಶ್ಚ ಪ್ರೋತಶ್ಚ' (ಬೃ.5.8.11)**

**ಇತಿ ಅಂಬರಾಂತಸ್ಯ ಸರ್ವಸ್ಯ ಧೃತೇಃ ಬ್ರಹ್ಮೈವ ಅಕ್ಷರಮ್ ।**

**ಯ ಉ ತ್ರಿಧಾತು ಪೃಥಿವೀಮುತ ದ್ಯಾಂ**
**ಏಕೋ ದಾಧಾರ ಭುವನಾನಿ ವಿಶ್ವಾ ॥ (ಋ.1.154.4)**
**ಭರ್ತಾ ಸನ್ ಭ್ರಿಯಮಣೋ ಬಿಭರ್ತಿ ಏಕೋ ದೇವೋ ಬಹುಧಾ ನಿವಿಷ್ಟಃ ।**
**ಯದಾ ಭಾರಂ ತಂದ್ರಯತೇ ಸ ಭರ್ತುಂ ಪರಾಸ್ಯ ಭಾರಂ ಪುನರಸ್ತಮೇತಿ । (ತೈ.ಆ.3.14)**

**ಯಸ್ಮಿನ್ನಿದಂ ಸಂ ಚ ವಿ ಚೈಧಿ ಸರ್ವಂ ಯಸ್ಮಿನ್ ದೇವಾ ಅಧಿ ವಿಶ್ವೇ ನಿಷೇದುಃ ॥ ಇತ್ಯಾದಿಶ್ರುತೇಃ (ಮಹಾನಾ 1.2)**

**ಪೃಥಿವ್ಯಾದಿ ಪ್ರಕೃತ್ಯಂತಂ ಭೂತಂ ಭವ್ಯಂ ಭವಚ್ಚ ಯತ್ ।**
**ವಿಷ್ಣುರೇಕೋ ಬಿಭರ್ತೀದಂ ನಾನ್ಯಃ ತಸ್ಮಾತ್ ಕ್ಷಮೋ ಧೃತೌ ॥ ಇತಿ ಚ ಸ್ಕಾಂದೇ ॥ 10 ॥**

ಹಿಂದೆ ಅದೃಶ್ಯತ್ವಾದಿಗುಣಗಳನ್ನು ವಿಷ್ಣುವಿಗೆ ಹೇಳಲಾಗಿದೆ. ಆ ಗುಣಗಳು 'ಅದೃಷ್ಟಂ ದ್ರಷ್ಟೃ' ಇತ್ಯಾದಿ ಬೃಹದಾರಣ್ಯಕ ವಾಕ್ಯದಿಂದ ಅಕ್ಷರತತ್ತ್ವಕ್ಕಿವೆ ಎಂದು ತಿಳಿಯುತ್ತದೆ. (ಅಲ್ಲಿ ಅಕ್ಷರತತ್ತ್ವಕ್ಕೆ ಹೇಳಲಾದ ಸೂರ್ಯಚಂದ್ರರ ಧಾರಣಾಶಕ್ತಿ) 'ಅಹಂ ಸೋಮಮಾಹನಸಂ' ಎಂಬ ಶ್ರುತಿಯಲ್ಲಿ ಅಕ್ಷರಳೆನಿಸಿರುವ ಲಕ್ಷ್ಮೀದೇವಿಗೂ ಹೇಳಲಾಗಿದೆ. ಆದ್ದರಿಂದ ಅವಳೇ ಅದೃಶ್ಯತ್ವಾದಿ ಗುಣಗಳುಳ್ಳವಳು ಎಂದು ಸಂಶಯ ಬಂದರೆ ಸೂತ್ರಕಾರರು ಅದರ ಪರಿಹಾರಕ್ಕಾಗಿ ಈ ಸೂತ್ರವನ್ನು ರಚಿಸಿದ್ದಾರೆ.

'ಏತಸ್ಮಿನ್ ಖಲು' ಇತ್ಯಾದಿ ವಾಕ್ಯದಿಂದ ಆಕಾಶಾಂತವಾದ ಸಕಲ ಪದಾರ್ಥಗಳ ಧಾರಣ ಸಾಮರ್ಥ್ಯವನ್ನು ಅಕ್ಷರನಿಗೆ ಹೇಳಿರುವುದರಿಂದ ಬ್ರಹ್ಮನೇ ಅಕ್ಷರ.

'ಯಾವ ವಿಷ್ಣುವು ಪ್ರಕೃತಿ-ಪುರುಷ-ಕಾಲಗಳನ್ನು ಧರಿಸಿರುವನೋ ಅವನು ಭೂದೇವಿ-ಶ್ರೀದೇವಿಯರನ್ನೂ ಸಕಲ ಲೋಕಗಳನ್ನೂ ಧರಿಸಿದ್ದಾನೆ'

'ವಿಷ್ಣು ತಾನೇ ಹೊರುವವನಾಗಿ ತನ್ನನ್ನೂ ಹೊತ್ತಿದ್ದಾನೆ. ಏಕೆಂದರೆ, ಅವನು ಒಬ್ಬನೇ ಆದರೂ ಬಹುರೂಪನಾಗಿದ್ದಾನೆ. ಅವನು ಈ ಭಾರವನ್ನು ಕೆಳಗಿಳಿಸಿ (ಪರಾಸ್ಯ) ಮತ್ತೆ ಹೊರಲು ಬಯಸದಿದ್ದಾಗ ಆ ಭಾರವಾದ ಜಗತ್ತು ಪ್ರಲಯವಾಗುತ್ತದೆ'

'ಯಾವ ವಿಷ್ಣುವಿನಲ್ಲಿ ಈ ಜಗತ್ತು ಅನೇಕ ವಿಧವಾಗಿ ಹುಲುಸಾಗಿ ಬೆಳೆಯುತ್ತದೆಯೋ ಯಾರಲ್ಲಿ ಎಲ್ಲ ದೇವತೆಗಳೂ ಆಶ್ರಯ ಪಡೆದಿದ್ದಾರೋ ಅವನೇ ಈ ಜಗತ್ತಿನ ಸಂಹಾರಾದಿಕಾರಕ'.

ಈ ಮೊದಲಾದ ಶ್ರುತಿಗಳಿಂದ ವಿಷ್ಣುವೇ ಸರ್ವಾಧಾರನೆಂದು ತಿಳಿಯುತ್ತದೆ. ಸ್ಕಾಂದದಲ್ಲೂ ಹೀಗಿದೆ -''ಭೂಮಿಯಿಂದ ಪ್ರಕೃತಿಯವರೆಗಿನ ಭೂತ-ಭಾವಿ-ಭವಿಷ್ಯದ್ ವಸ್ತುಗಳನ್ನೂ ವಿಷ್ಣುವೇ ಧರಿಸಿದ್ದಾನೆ. ಇತರರಾರೂ ಅದನ್ನು ಧರಿಸಲು ಶಕ್ತರಾಗಲಾರರು''.

**ವಿವರಣೆ : 1.** 'ಅಕ್ಷರ' ಎಂಬ ನಾಮವನ್ನು ವಿಷ್ಣುವಿನಲ್ಲಿ ಸಮನ್ವಯ ಮಾಡುವುದು ಈ ಅಧಿಕರಣದ ವಿಷಯ. 'ಶರೀರನಾಶವಿಲ್ಲದುದು ಅಕ್ಷರ. ಲಕ್ಷ್ಮೀದೇವಿ ಮತ್ತು ವಿಷ್ಣು ಇವರಿಬ್ಬರದೂ ನಿತ್ಯದೇಹವಾದುದರಿಂದ ಅವರಿಗೆ ಶರೀರನಾಶವಿಲ್ಲ; ಹೀಗಾಗಿ ಅವರಿಬ್ಬರೂ ಅಕ್ಷರಶಬ್ದವಾಚ್ಯರು. ಆದ್ದರಿಂದ ಅಕ್ಷರಶಬ್ದ ಉಭಯತ್ರಪಸಿದ್ಧ ನಾಮಾತ್ಮಕವಾಗಿದೆ.

**2.** ಬೃಹದಾರಣ್ಯಕ ಉಪನಿಷತ್ತಿನಲ್ಲಿ 'ಯದೂರ್ಧ್ವಂ ಗಾರ್ಗಿ ದಿವೋ, ಯದರ್ವಾಕ್ ಪೃಥಿವ್ಯಾಃ ಯದಂತರಾ ದ್ಯಾವಾಪೃಥಿವೀ... ಆಕಾಶೇ ಏವ ತದೋತಂ ಚ ಪ್ರೋತಂ ಚ' (5.8.7) ಎಂದು ಯಾಜ್ಞವಲ್ಕ್ಯರು ಗಾರ್ಗಿಗೆ 'ಪೃಥಿವಿಯ ಕೆಳಗಿರುವ, ಸ್ವರ್ಗಲೋಕದ ಮೇಲಿರುವ ಪೃಥಿವೀ ಸ್ವರ್ಗಗಳ ಮಧ್ಯದಲ್ಲಿರುವ ಎಲ್ಲ ಲೋಕಗಳೂ ಆಕಾಶವನ್ನು ಆಶ್ರಯಿಸಿವೆ' ಎಂದು ಹೇಳಿದ್ದಾರೆ. ಅನಂತರ, ಅಂತಹ ಆಕಾಶವು 'ಏತಸ್ಮಿನ್ ಖಲು ಅಕ್ಷರೇ ಗಾರ್ಗಿ, ಆಕಾಶಃ ಓತಶ್ಚ ಪ್ರೋತಶ್ಚ' ಎಂದು ಅಕ್ಷರ ತತ್ತ್ವದಲ್ಲಿ ನೆಲೆಗೊಂಡಿದೆ

ಎನ್ನುತ್ತಾರೆ. ಈ ಅಕ್ಷರತತ್ತ್ವ ಲಕ್ಷ್ಮೀದೇವಿಯಾದರೆ ಅದಕ್ಕೆ ಹೇಳಿದ ಗುಣಗಳಲ್ಲಿ ಅದೃಶ್ಯತ್ವವೂ ಸೇರಿರುವುದರಿಂದ ಹಿಂದಿನ ಅದೃಶ್ಯತ್ವಾಧಿಕರಣದಲ್ಲಿ ಹೇಳಿದ ಲಕ್ಷಣ ಅವಳಲ್ಲಿ ಬಂದಂತಾಗುತ್ತದೆ. ಅದರಿಂದ ಆನಂದಮಯಳು ಲಕ್ಷ್ಮೀದೇವಿಯಾಗುತ್ತಾಳೆ. ಹೀಗೆ ಈ ಅಧಿಕರಣಕ್ಕೆ ಅದೃಶ್ಯತ್ವಾಧಿಕರಣದೊಂದಿಗೆ ನೇರವಾದ, ಆನಂದಮಯಾಧಿಕರಣದೊಂದಿಗೆ ಪಾರಂಪರಿಕವಾದ ಸಂಗತಿ ಇದೆ.

3. ಇಲ್ಲಿ ಹೇಳಿರುವ ಅಕ್ಷರತತ್ತ್ವ ಲಕ್ಷ್ಮೀದೇವಿ ಎಂದು ಪೂರ್ವಪಕ್ಷ. ಅದಕ್ಕೆ ಯುಕ್ತಿ 'ಸೂರ್ಯಚಂದ್ರರ ಧಾರಣೆ'. ಇಲ್ಲಿ ಅಕ್ಷರತತ್ವವು ಸೂರ್ಯಚಂದ್ರರನ್ನು ಧರಿಸಿದೆ, ಎಂದು ಹೇಳಲಾಗಿದೆ- 'ಏತಸ್ಯ ವಾ ಅಕ್ಷರಸ್ಯ ಪ್ರಶಾಸನೇ ಸೂರ್ಯಾಚಂದ್ರಮಸೌ ವಿಧೃತೌ ತಿಷ್ಠತಃ'. ಅದನ್ನು ಮಾಡುವವಳು ಲಕ್ಷ್ಮೀದೇವಿ ಎಂದು ಅಂಭ್ರಿಣೀ ಸೂಕ್ತದಲ್ಲಿದೆ. ಅವಳು, ಪ್ರಲಯಕಾಲದಲ್ಲಿ ಸೂಕ್ಷ್ಮರೂಪದ ಅದೃಶ್ಯವಾದ ಜಡಪ್ರಕೃತಿಗೆ ಅಭಿಮಾನಿನಿಯಾಗಿರುವುದರಿಂದ ಅವಳೂ ಅದೃಶ್ಯಳಾಗಿದ್ದಾಳೆ. ಯದ್ಯಪಿ, ಅಕ್ಷರ ಶಬ್ದ ಅದೃಶ್ಯತ್ವಗುಣ ಬ್ರಹ್ಮನಿಗೂ ಇದೆ. ಆದರೂ ಅವನು ಇಲ್ಲಿ ಅಕ್ಷರನಲ್ಲ. ಏಕೆಂದರೆ, 'ನ ತತ್ ಅಶ್ನಾತಿ ಕಿಂಚನ' ಎಂದು ಅಕ್ಷರತತ್ತ್ವಕ್ಕೆ ಭೋಗವೇ ಇಲ್ಲ ಎನ್ನಲಾಗಿದೆ. ಆದರೆ ವಿಷ್ಣು ಶುಭಕರ್ಮಫಲಭೋಕ್ತಾ. ಆದುದರಿಂದ ಲಕ್ಷ್ಮೀದೇವಿಯೇ ಅಕ್ಷರ ಎಂದು ಪೂರ್ವಪಕ್ಷ.

**ಸಿದ್ಧಾಂತ :** 4. ಪೃಥಿವಿಲೋಕದಿಂದ ಆಕಾಶದವರೆಗಿನ ಎಲ್ಲ ಲೋಕಗಳನ್ನೂ ಧರಿಸಿದವನನ್ನಾಗಿ ಅಕ್ಷರನನ್ನು ಹೇಳಿರುವುದರಿಂದ ಅಂತಹ ಅಕ್ಷರ ಬ್ರಹ್ಮನೆ. ಶ್ರುತಿ-ಸ್ಮೃತಿಗಳಲ್ಲಿ ಅಂತಹ ಸಾಮರ್ಥ್ಯ ವಿಷ್ಣುವಿಗೆ ಮಾತ್ರವಿದೆ ಎಂದು ತಿಳಿಯುತ್ತದೆ. ಆದ್ದರಿಂದ ಅವನೇ ಅಕ್ಷರ.

5. ಭಾಷ್ಯದಲ್ಲಿ 'ಇತ್ಯಾದಿನಾ' ಎಂಬ ಪದಕ್ಕೆ 'ಮಧ್ಯಮಾಕ್ಷರಸ್ಯ ಉಕ್ತಾಃ' ಎಂಬ ಪದದೊಂದಿಗೆ ಅನ್ವಯ. 'ತೇ ಚ' ಪದವನ್ನು ಸೇರಿಸಿಕೊಳ್ಳಬೇಕು. 'ತೇ ಚ' 'ಅದೃಷ್ಟಂ ದ್ರಷ್ಟೃ...' ಇತ್ಯಾದಿನಾ ಮಧ್ಯಮಾಕ್ಷರಸ್ಯೋಕ್ತಾಃ' ಎಂದು ಅನ್ವಯ. 'ಆ ಅದೃಶ್ಯತ್ವಾದಿ ಗುಣಗಳು ಮಧ್ಯಮಾಕ್ಷರಕ್ಕೆ-ಲಕ್ಷ್ಮೀದೇವಿಗೆ ಹೇಳಲ್ಪಟ್ಟಿವೆ' ಎಂದರ್ಥ. ಅದು ಮಧ್ಯಮಾಕ್ಷರವೇ ಏಕೆ? ಅದಕ್ಕೆ ಉತ್ತರ- 'ಅಹಂ ಸೋಮಮಾ...' ಇತ್ಯಾದೇಃ ತಸ್ಯಾಪಿ ಸಂಭವಾತ್- 'ಅಹಂ ಸೋಮಂ' ಎಂದು ಅಂಭ್ರಿಣೀ ಸೂಕ್ತದಲ್ಲಿ ಹೇಳಿರುವುದರಿಂದ ಇಲ್ಲಿ ಹೇಳಲಾದ ಸೂರ್ಯ-ಚಂದ್ರರ ಧಾರಣೆ ಅವಳಲ್ಲಿ ಸಂಭವನೀಯವಾದುದರಿಂದ ಅವಳೂ ಅಕ್ಷರಶಬ್ದವಾಚ್ಯಳಾಗಬಹುದು' ಎಂದು.

**6. ಶ್ರುತ್ಯರ್ಥ :** 'ಅದೃಷ್ಟಂ ದ್ರಷ್ಟೃ' ಎಂಬ ಭಾಷ್ಯದಲ್ಲಿ ಉದಾಹೃತವಾದ ಶ್ರುತಿಯ ಪೂರ್ಣಪಾಠ ಹೀಗಿದೆ- ಅದೃಷ್ಟಂ ದ್ರಷ್ಟೃ, ಅಶ್ರುತಂ ಶ್ರೋತೃ, ಅಮತಂ ಮಂತೃ, ಅವಿಜ್ಞಾತಂ ವಿಜ್ಞಾತೃ, ನಾನ್ಯದತೋಽಸ್ತಿ ದ್ರಷ್ಟೃ, ನಾನ್ಯದತೋಽಸ್ತಿ ಶ್ರೋತೃ, ನಾನ್ಯದತೋಽಸ್ತಿ ಮಂತೃ, ನಾನ್ಯದತೋಽಸ್ತಿ ವಿಜ್ಞಾತೃ, ಏತಸ್ಮಿನ್ ಖಲು ಅಕ್ಷರೇ ಗಾರ್ಗಿ, ಆಕಾಶಃ ಓತಶ್ಚ ಪ್ರೋತಶ್ಚ।

ಅ. ಪೂರ್ವಪಕ್ಷದಲ್ಲಿ 'ಆಕಾಶ' ಎಂದರೆ ಜಡವಾದ ಆಕಾಶತತ್ತ್ವ. ಸಿದ್ಧಾಂತದಲ್ಲಿ 'ಆಕಾಶಃ- ಆ ಸಮಂತ್ತಾತ್ ಕಾಶತೇ' ಎಂಬ ಲಕ್ಷ್ಮೀದೇವಿ.

ಆ. ಓತಶ್ಚ-ಪ್ರೋತಶ್ಚ - ಸರ್ವರೀತಿಯಿಂದಲೂ ಆಶ್ರಯಿಸಿದೆ.

ಇ. ವಿಧೃತೌ ತಿಷ್ಠತಃ - ಧರಿಸಲ್ಪಟ್ಟವರಾಗಿ ಇರುವರು.

ಈ. ಅಹಂ ಸೋಮಮಾಹನಸಂ ಬಿಭರ್ಮಿ

ಅಹಂ ತ್ವಷ್ಟಾರಮುತ ಪೂಷಣಂ ಭಗಮ್ ॥

ಇದು ಅಂಭ್ರಿಣೀ ಸೂಕ್ತದಲ್ಲಿರುವ ಲಕ್ಷ್ಮೀದೇವಿಯ ಮಾತು. 'ಅಹಂ, ಸೋಮಂ ಆಹನಸಂ' ಎಂದು ಪದ ವಿಭಾಗ. ಅಹಂ=ನಾನು ಆಹನಸಂ=ತಾನು(ಚಂದ್ರನು) ಅಭಿಮಾನಿಯಾಗಿರುವ ಲತೆಯ ಮೂಲಕ ಯಜ್ಞದಲ್ಲಿ ಚೆನ್ನಾಗಿ ಹಿಂಡಲ್ಪಡುವ ಸೋಮಂ=ಸೋಮಲತೆಯ ಅಭಿಮಾನಿಯಾದ ಚಂದ್ರನನ್ನೂ ತ್ವಷ್ಟಾರಂ= ತ್ವಷ್ಟೃದೇವತೆಯನ್ನೂ, ಪೂಷಣಂ=ಪೂಷಣನನ್ನೂ ಭಗಂ=ಭಗ ಎಂಬ ದೇವತೆಯನ್ನೂ ಧರಿಸಿದ್ದೇನೆ.

'ಯೇ ತ್ವಕ್ಷರಮನಿರ್ದೇಶ್ಯಂ ಅವ್ಯಕ್ತಂ ಪರ್ಯುಪಾಸತೇ' (ಭ.ಗೀ.1.2.3) ಎಂದು ಭಗವದ್ಗೀತೆಯಲ್ಲಿ ಅಕ್ಷರಶಬ್ದವನ್ನು ಲಕ್ಷ್ಮೀದೇವಿಯಲ್ಲಿ ಪ್ರಯೋಗಿಸಿರುವುದರಿಂದ ಲಕ್ಷ್ಮೀದೇವಿಯಲ್ಲೂ ಅಕ್ಷರಶಬ್ದವಾಚ್ಯತ್ವವಿದೆ ಎನ್ನುವುದು ಪೂರ್ವಪಕ್ಷಕ್ಕೆ ಮತ್ತೊಂದು ಯುಕ್ತಿ. ಜಡಪ್ರಕೃತಿ ಅಧಮಾಕ್ಷರ, ಲಕ್ಷ್ಮೀದೇವಿ ಮಧ್ಯಮಾಕ್ಷರ, ವಿಷ್ಣು ಉತ್ತಮಾಕ್ಷರ. ಹೀಗೆ ಮೂರು ಅಕ್ಷರ ತತ್ತ್ವಗಳಿವೆ.

ಉ. ಯಸ್ಮಿನ್ನಿದಂ ಸಂಚ ವಿಚೈಧಿ ಸರ್ವಂ- 'ಸಂ, ಚ, ವಿ, ಚ, ಏಧಿ' ಎಂದು ಪದವಿಭಾಗ. ಸಂ=ಚೆನ್ನಾಗಿ ವಿ=ವಿವಿಧ ರೂಪದಿಂದ ಏಧಿ=ವೃದ್ಧಿ ಹೊಂದಿದೆ. 'ತದೇವ ಬ್ರಹ್ಮ ಪರಮಂ' ಎಂಬ ವಾಕ್ಯದೊಂದಿಗೆ ಈ ವಾಕ್ಯವನ್ನು ಜೋಡಿಸಿಕೊಳ್ಳಬೇಕು.

ಊ. ಭರ್ತಾ ಸನ್-ಈ ಮಂತ್ರದಲ್ಲಿರುವ 'ಬಿಭರ್ತಿ' ಎಂಬ ಕ್ರಿಯಾಪದಕ್ಕೆ 'ದೇವಃ ಬಿಭರ್ತಿ' ಎಂದು ಹಿಂದಿನ ಮಂತ್ರದ ಪದದೊಂದಿಗೆ ಅನ್ವಯ. ॥ ಸೂತ್ರ 10 ॥

## ಓಂ ॥ ಸಾ ಚ ಪ್ರಶಾಸನಾತ್ ॥ ಓಂ

**ಸಾ ಚ ಧೃತಿಃ ಪ್ರಶಾಸನಾದುಚ್ಯತೇ**

**ಏತಸ್ಯ ವಾ ಅಕ್ಷರಸ್ಯ ಪ್ರಶಾಸನೇ ಗಾರ್ಗಿ,**

**ಸೂರ್ಯಾಚಂದ್ರಮಸೌ ವಿಧೃತೌ ತಿಷ್ಠತಃ। (ಬೃ. 5.8.9)**

**ಇತ್ಯಾದಿನಾ । ತಚ್ಚ ಪ್ರಶಾಸನಂ ವಿಷ್ಣೋರೇವ ।**

ಸಪ್ತಾರ್ಧಗರ್ಭಾ ಭುವನಸ್ಯ ರೇತೋ
ವಿಷ್ಣೋಸ್ತಿಷ್ಠಂತಿ ಪ್ರದಿಶಾ ವಿಧರ್ಮಣಿ॥ (ಋ.1.164.36)
ಚತುರ್ಭಿಃ ಸಾಕಂ ನವತಿಂ ಚ ನಾಮಭಿಃ ಚಕ್ರಂ ನ ವೃತ್ತಂ ವ್ಯತೀಂ ರವೀವಿತ್ ।
(ಋ. 1.155.6) ಇತ್ಯಾದಿ ಶ್ರುತೇಃ।

ಏಕಃ ಶಾಸ್ತಾ ನ ದ್ವಿತೀಯೋಽಸ್ತಿ ಶಾಸ್ತಾ
ಯೋ ಹೃಚ್ಛಯಃ ತಮಹಮಿಹ ಬ್ರವೀಮಿ। (ಮಹಾ.ಭಾ.)
ನ ಕೇವಲಂ ಮೇ ಭವತಶ್ಚ ರಾಜನ್ ಸ ವೈ ಬಲಂ ಬಲಿನಾಂ ಚಾಪರೇಷಾಮ್ ॥
(ಭಾಗ - 7) ಇತ್ಯಾದೇಶ್ಚ॥ 11 ॥

'ಏತಸ್ಯ ವಾ' ಇತ್ಯಾದಿ ವಾಕ್ಯದಿಂದ ಸೂರ್ಯಚಂದ್ರರ ಧೃತಿ ಆಜ್ಞಾಮಾತ್ರದಿಂದ ಎಂದು ಹೇಳಲಾಗಿದೆ. ಅಂತಹ ಆಜ್ಞೆನೀಡುವ ಸಾಮರ್ಥ್ಯ ವಿಷ್ಣುವಿಗೆ ಮಾತ್ರ-

ಆರ್ಧಗರ್ಭಾಃ-ಬ್ರಹ್ಮಾಂಡರೂಪವಾದ ದೃಢವಾದ ಆವರಣದೊಳಗಿರುವ ಭುವನಸ್ಯ=ವಿಷ್ಣುವಿನ ರೇತಃ(ರೇತಸಃ)=ರೇತಸ್ಸಿನ ಸ್ವರೂಪರಾಗಿರುವ ಸಪ್ತ=ಮಹತ್ತತ್ತ್ವ-ಅಹಂಕಾರತತ್ತ್ವ-ಪಂಚ ಮಹಾಭೂತಗಳು ಇವುಗಳ ಅಭಿಮಾನಿಗಳಾದ ಬ್ರಹ್ಮಾದಿ ಏಳು ದೇವತೆಗಳು ಪ್ರದಿಶಾ=ಆ ವಿಷ್ಣುವಿನ ಆಜ್ಞೆಯಿಂದ ವಿಧರ್ಮಣಿ=ವಿವಿಧ ಕರ್ತವ್ಯಗಳಲ್ಲಿ ತೊಡಗುತ್ತಾರೆ.

'ಆ ವಿಷ್ಣುವು ಹೆಸರಿನಿಂದಷ್ಟೇ ಭಿನ್ನಗಳಾದ ವಾಸುದೇವಾದಿ ನಾಲ್ಕು ರೂಪಗಳೊಂದಿಗೆ ತೊಂಭತ್ತು ದೇವತೆಗಳನ್ನು ವೃತ್ತಾಕಾರವಾದ ಚಕ್ರದಂತೆ ತಿರುಗಿಸುತ್ತಾನೆ'

ಈ ಮೊದಲಾದ ವೇದವಾಕ್ಯಗಳಿಂದ ವಿಷ್ಣು ತನ್ನ ಆಜ್ಞಾಮಾತ್ರದಿಂದ ಎಲ್ಲವನ್ನೂ ನಿಯಂತ್ರಿಸುತ್ತಾನೆ ಎಂದು ತಿಳಿಯುತ್ತದೆ.

'ಅವನೊಬ್ಬನೇ ಆಜ್ಞಾಕಾರಕ. ಅವನಂತೆ ಮತ್ತೊಬ್ಬ ಶಾಸಕನಿಲ್ಲ, ಅಂತಹ ನಮ್ಮ ಹೃದಯದೊಳಗಿರುವವನ ಕುರಿತು ಹೇಳುತ್ತೇನೆ'

'ರಾಜ ಹಿರಣ್ಯಕನೆ, ನನಗೆ ಮಾತ್ರವಲ್ಲ ನಿನಗೂ, ಇತರ ಬಲಶಾಲಿಗಳಿಗೂ ಅವನೇ ಬಲಪ್ರದ' ಇತ್ಯಾದಿ ವಾಕ್ಯಗಳಿಂದಲೂ ವಿಷ್ಣುವೇ ಶಾಸಕನೆಂದು ತಿಳಿಯುತ್ತದೆ.

**ವಿವರಣೆ** : ಹಿಂದಿನ ಸೂತ್ರದಲ್ಲಿ ಲೋಕಧಾರಕತ್ವ ಹೇತುವಿನಿಂದ ಅಕ್ಷರ ವಿಷ್ಣು ಎಂದು ಸಾಧಿಸಲಾಯಿತು. ಈ ಸೂತ್ರದಲ್ಲಿ ಮತ್ತೊಂದು ಕಾರಣವನ್ನು ಹೇಳಿ ಅಕ್ಷರ ಶ್ರುತಿ ವಿಷ್ಣುವಿನಲ್ಲೇ ನಿರವಕಾಶ ಎಂದು ಸಾಧಿಸಲಾಗಿದೆ. 'ಸೂರ್ಯ-ಚಂದ್ರರನ್ನು ವಿಷ್ಣು ತಾನು ಹೊತ್ತು ನಿಂತಿಲ್ಲ, ಆಜ್ಞಾಮಾತ್ರದಿಂದ ಅವುಗಳನ್ನು ಆಯಾಯಾ ಸ್ಥಾನದಲ್ಲಿ ಇರುವಂತೆ ಮಾಡಿದ್ದಾನೆ. ಈ ಅದ್ಭುತ ಸಾಮರ್ಥ್ಯ ವಿಷ್ಣುವಿಗಲ್ಲದೆ ಇತರರಿಗಿಲ್ಲ, ಆದ್ದರಿಂದ ವಿಷ್ಣುವೇ ಅಕ್ಷರ.

**ಶ್ರುತ್ಯರ್ಥ : ಅ.** ಸಪ್ತಾರ್ಧಗರ್ಭಾಃ-ಸಪ್ತ+ ಆ+ ಋದ್ಧಗರ್ಭಾಃ। ಸಪ್ತ= ಏಳುಮಂದಿ. ಪ್ರಕೃತಿಯಿಂದ ಮೊದಲು ವ್ಯಕ್ತವಾದ ಮಹತ್ತತ್ತ್ವ. ಅದಕ್ಕೆ ಬ್ರಹ್ಮದೇವ ಅಭಿಮಾನಿ. ಅನಂತರ ಅಹಂಕಾರತತ್ತ್ವ. ಅದು ರುದ್ರನಿಂದ ಅಭಿಮಾನ್ಯಮಾನವಾದುದು. ಮುಂದೆ ಪಂಚಭೂತಗಳು- ಅದರ ಅಭಿಮಾನಿದೇವತೆಗಳು. ಹೀಗೆ ಒಟ್ಟು ಏಳುಮಂದಿ ದೇವತೆಗಳು. ಅವರು ಬ್ರಹ್ಮಾಂಡದೊಳಗಿದ್ದಾರೆ. ಹೀಗಾಗಿ ಅವರಿಗೆ ಬ್ರಹ್ಮಾಂಡವೇ ಭದ್ರವಾದ ಗರ್ಭ. ಶ್ರುತಿಯಲ್ಲಿರುವ 'ರೇತಃ' ಶಬ್ದವನ್ನು 'ರೇತಸಃ' ಎಂದು ಬಹುವಚನಾಂತವನ್ನಾಗಿ ಇಟ್ಟುಕೊಳ್ಳಬೇಕು. ಸಮಗ್ರ ಬ್ರಹ್ಮಾಂಡ ಪರಮಾತ್ಮನ ರೇತಸ್ಸು.

ಆರ್ಧಗರ್ಭಾಃ ಎಂಬ ಪದಕ್ಕೆ ತತ್ತ್ವಪ್ರದೀಪಿಕಾದಲ್ಲಿ 'ಅಸಮಂತಾತ್ ಋದ್ಧಾಃ ಗರ್ಭಾಃ- ಗರಣೇನ ಭ್ರಿಯಂತ ಇತಿ' ಎಂದು ಅರ್ಥವನ್ನು ಹೇಳಲಾಗಿದೆ.

(ಈ ಶ್ರುತಿಗೆ ಅರ್ಥವನ್ನು ತಿಳಿಸುತ್ತಾ ಭಾಷ್ಯದೀಪಿಕಾದಲ್ಲಿ 'ವಿಶ್ವೇಶ್ವರತೀರ್ಥೀಯೇ ತು' ಎಂದು ಉಲ್ಲೇಖಿಸಲಾಗಿದೆ. ಇದರಿಂದ ಪೇಜಾವರ ಮಠದ ಆ ಯತಿಗಳೂ ಸೂತ್ರ ಭಾಷ್ಯ ತತ್ತ್ವಪ್ರಕಾಶಿಕಾಗಳಿಗೆ ವಿವರಣೆಯನ್ನು ನೀಡಿದ್ದಾರೆ ಎಂದು ತಿಳಿಯುತ್ತದೆ.)

**ಆ.** 'ಚತುರ್ಭಿಃ ಸಾಕಂ' ಎಂಬ ಶ್ರುತಿಯ ವಿವರಣೆಯನ್ನು ಜನ್ಮಾಧಿಕರಣದಲ್ಲಿ ಮಾಡಲಾಗಿದೆ.

**ಇ.** 'ಏಕಃ ಶಾಸ್ತಾ' ಎಂಬುದು ಮಹಾಭಾರತದ ಸಭಾಪರ್ವದ ಮಾತು.

**ಈ.** ನ ಕೇವಲಂ-ಎಂಬುದು, ಪ್ರಹ್ಲಾದರಾಜರು ಹಿರಣ್ಯಕಶಿಪುವಿನ 'ತಸ್ಯ ಮೇಽವಿನೀತಸ್ಯ ಶಾಸನಂ ಕಿಂ ಬಲೋಽತ್ಯಗಾಃ' ಎಂಬ ಪ್ರಶ್ನೆಗೆ ಉತ್ತರವಾಗಿ ಹೇಳಿದ ಮಾತು. ।। ಸೂತ್ರ 11 ।।

## ಓಂ ।। ಅನ್ಯಭಾವವ್ಯಾವೃತ್ತೇಶ್ಚ ।। ಓಂ

**'ಅಸ್ಥೂಲಮನಣು' (ಬೃ.5.8.8)**

**ಇತ್ಯಾದಿನಾ ಸ್ಥೂಲಾಣ್ವಾದೀನಾಂ ಅನ್ಯಭಾವಸ್ವಭಾವಾನಾಂ ವ್ಯಾವೃತ್ತೇಶ್ಚ।**

**ಅಸ್ಥೂಲೋ ಅನಣುಃ, ಅಮಧ್ಯಮೋ ಮಧ್ಯಮಃ, ಅವ್ಯಾಪಕೋ ವ್ಯಾಪಕಃ,**

**ಯೋಽಸೌ ಹರಿಃ ಆದಿಃ ಅನಾದಿಃ, ಅವಿಶ್ವೋ ವಿಶ್ವಃ, ಸಗುಣೋ ನಿರ್ಗುಣಃ'**

**ಇತ್ಯಾದೇಃ ವಿಷ್ಣೋರೇವ ತೇ ಧರ್ಮಾಃ।**

**ಅಸ್ಥೂಲೋಽನಣುರೂಪೋಽಸೌ ಅವಿಶ್ವೋ ವಿಶ್ವ ಏವ ಚ।**

**ವಿರುದ್ಧಧರ್ಮರೂಪೋಽಸೌ ಐಶ್ವರ್ಯಾತ್ ಪುರುಷೋತ್ತಮಃ।।**

**ಇತಿ ಚ ಬ್ರಾಹ್ಮೇ ।। 3 ।।**

## ।। ಇತಿ ಅಕ್ಷರಾಧಿಕರಣಮ್ ।।

ಇಲ್ಲಿ 'ಅಸ್ಥೂಲಂ ಅನಣು' ಎಂದು ಮುಂತಾಗಿ ಇತರ ವಸ್ತುಗಳಲ್ಲಿರುವ ಸ್ಥೂಲತ್ವ-ಅಣುತ್ವ ಮೊದಲಾದ ಗುಣಗಳು ಅಕ್ಷರನಲ್ಲಿ ಇಲ್ಲ ಎಂದು ಹೇಳಿರುವುದರಿಂದಲೂ ಅಕ್ಷರತತ್ತ್ವ ಬ್ರಹ್ಮ.

'ಈ ಶ್ರೀಹರಿಯು ಸ್ಥೂಲನೂ ಅಲ್ಲ, ಅಣುವೂ ಅಲ್ಲ; ಮಧ್ಯಮಪರಿಮಾಣದ ನಿಯತಿಯೂ ಅವನಿಗಿಲ್ಲ. (ಮಧ್ಯಮಃ) ಹೃದಯಮಧ್ಯದಲ್ಲಿ ಜ್ಞೇಯನಾದುದರಿಂದ ಅವನು ಮಧ್ಯಮ (ಮಧ್ಯೇ ಮೀಯಮಾನತ್ವಾತ್). ಅವನಂತೆ ವ್ಯಾಪಿಸಿದವರು ಮತ್ತೊಬ್ಬರಿಲ್ಲ, ಆದರಿಂದ ಅವನು ಅವ್ಯಾಪಕ. ಅವನು ಸರ್ವದೇಶ-ಕಾಲಗಳಲ್ಲೂ ವ್ಯಾಪ್ತ ಹೀಗಾಗಿ ವ್ಯಾಪಕ. ಅವನಿಗೊಂದು ಕಾರಣವಿಲ್ಲ-ಅನಾದಿ (ಆದಿ=ಕಾರಣ), ಅವನಿಗಿಂತ ಪೂರ್ಣರು ಇನ್ನೊಬ್ಬರಿಲ್ಲ (ನ ವಿದ್ಯತೇ ವಿಶ್ವಃ ಯಸ್ಮಾತ್ ಸಃ). ಆದರೆ ಜಗತ್ತಿನೊಳಗೆಲ್ಲಾ ಅವನಿದ್ದಾನೆ (ವಿಶತೀತಿ=ವಿಶ್ವಃ). ಅಪ್ರಾಕೃತ ಜ್ಞಾನಾನಂದಾದಿ ಗುಣವಿರುವುದರಿಂದ ಅವನು ಸಗುಣ. ಪ್ರಾಕೃತ ಗುಣಗಳು ಇಲ್ಲವಾದುದರಿಂದ ನಿರ್ಗುಣ'. ಇತ್ಯಾದಿ ಪ್ರಮಾಣಗಳಿಂದ ಲೌಕಿಕ ಗುಣಸ್ವಭಾವಗಳಿಲ್ಲದಿರುವುದು ವಿಷ್ಣುವಿನದೇ ಧರ್ಮ.

''ಅವನು ಸ್ಥೂಲನೂ ಅಲ್ಲ, ಅಣುವೂ ಅಲ್ಲ. ಲೋಕಬಹಿರ್ಭೂತನೂ ಹೌದು. ಲೋಕಾಂತರ್ಗತನೂ ಹೌದು. ಹೀಗೆ ತನ್ನ ಅದ್ಭುತ ಸಾಮರ್ಥ್ಯದಿಂದ ಅವನು ವಿರುದ್ಧ ಧರ್ಮರೂಪನಾಗಿದ್ದಾನೆ'' ಎಂದು ಬ್ರಾಹ್ಮಪುರಾಣದಲ್ಲಿದೆ.

**ವಿವರಣೆ :** ಇಲ್ಲಿ ಅಕ್ಷರ ತತ್ತ್ವವನ್ನು ಹೀಗೆ ನಿರೂಪಿಸಲಾಗಿದೆ- 'ಅಸ್ಥೂಲಂ ಅನಣು, ಅಹ್ರಸ್ವಂ ಅದೀರ್ಘಂ, ಅಲೋಹಿತಂ, ಅಸ್ನೇಹಂ, ಅಚ್ಛಾಯಂ, ಅತಮಃ, ಅವಾಯುಃ, ಅನಾಕಾಶಂ' ಎಂದು. ಅವನು ಸ್ಥೂಲನೂ ಹೌದು, ಅಣುವೂ ಹೌದು. ಆದರೂ ಅಸ್ಥೂಲ ಅನಣು. ಏಕೆ? ಲೌಕಿಕವಾದ ವಸ್ತುಗಳಲ್ಲಿ ಪ್ರಾಕೃತ ಗಾತ್ರ, ಆಕಾರ, ಪರಿಮಾಣಗಳಿರುತ್ತವೆ. ಅಂತಹ ಪ್ರಾಕೃತವಾದ ಯಾವುದೇ ಗುಣಗಳು ಅವನಲ್ಲಿ ಇಲ್ಲ, ಅವನ ಧರ್ಮಗಳೆಲ್ಲವೂ ಅಲೌಕಿಕವಾದವುಗಳು. ಹೀಗೆ ಲೌಕಿಕ ಧರ್ಮರಾಹಿತ್ಯ ವಿಷ್ಣುವಿನ ಅಸಾಧಾರಣ ಗುಣ. ಅದನ್ನು ಅಕ್ಷರನಿಗೆ ಹೇಳಿರುವುದರಿಂದ ಅಕ್ಷರ ವಿಷ್ಣು॥ ಸೂತ್ರ 12 ॥

## ದ್ವೈತದರ್ಶನದಲ್ಲಿ ಸೂತ್ರಗಳ ಅರ್ಥ

### 1. ಓಂ ॥ ಅಕ್ಷರಂ ಅಂಬರಾಂತ ಧೃತೇಃ ॥ ಓಂ

ಆಕಾಶ ಪದವಾಚ್ಯಳಾದ ಲಕ್ಷ್ಮೀದೇವಿ ಪರ್ಯಂತವಾದ ಎಲ್ಲ ವಸ್ತುಗಳ ಧಾರಕನಾಗಿ ಪ್ರಸ್ತುತನಾದುದರಿಂದ 'ಏತಸ್ಯ ವಾ ಅಕ್ಷರಸ್ಯ' ಎಂಬ ಛಾಂದೋಗ್ಯ ಮಂತ್ರದಲ್ಲಿ ಹೇಳಿರುವ ಅಕ್ಷರ ಬ್ರಹ್ಮನೇ ಆಗಿದ್ದಾನೆ.

('ಏತದ್ವೈ ತದಕ್ಷರಂ ಗಾರ್ಗಿ' ಇತ್ಯುಕ್ತಂ ಅಕ್ಷರಂ ತತ್ತು=ಬ್ರಹ್ಮೈವ। ನ ಶ್ರೀತತ್ತ್ವಮ್। ಅಂಬರಾಂತಧೃತೇಃ। ಅಂಬರಂ=ಆಕಾಶ ಶಬ್ದಿತಂ ಶ್ರೀತತ್ತ್ವಂ, ಅಂತೇ ಯಸ್ಯ ಸರ್ವಸ್ಯ

ತತ್-ಅಂಬರಾಂತಂ । ತಸ್ಯ ಧೃತೇಃ=ಧಾರಣಾತ್ । ಶ್ರುತೌ ಆಕಾಶಾಖ್ಯ-ಚಿತ್ ಪ್ರಕೃತೇಃ ಸರ್ವಾಧಾರತ್ವಂ ಉಕ್ತ್ವಾ 'ಏತಸ್ಮಿನ್ ಖಲು ಅಕ್ಷರೇ ಗಾರ್ಗಿ ಆಕಾಶಃ ಓತಶ್ಚ ಪ್ರೋತಶ್ಚ' ಇತಿ ಅಕ್ಷರಸ್ಯ ತದಾಧಾರತ್ವ ಶ್ರವಣಾತ್।)

**2. ಓಂ॥ ಸಾ ಚ ಪ್ರಶಾಸನಾತ್ ॥ ಓಂ**

ಸಾ=ಸರ್ವಧಾರಕತ್ವವು ಪ್ರಶಾಸನಾತ್=ಕೇವಲ ಆಜ್ಞಾಮಾತ್ರದಿಂದ ಎಂದಿರುವುದರಿಂದ ಇಲ್ಲಿ ಹೇಳಿದ ಅಕ್ಷರ ವಿಷ್ಣು.

(ಉಚ್ಯತೇ ಇತಿ ಶೇಷಃ। ಸಾ=ಧೃತಿಃ, ಪ್ರಶಾಸನಾತ್=ಅಕ್ಷರಸ್ಯ ಆಜ್ಞಾಮಾತ್ರಾದುಚ್ಯತೇ-'ಏತಸ್ಯ ವಾ ಅಕ್ಷರಸ್ಯ ಪ್ರಶಾಸನೇ ಗಾರ್ಗಿ' ಇತ್ಯಾದೌ। ಅತಶ್ಚ ಅಕ್ಷರಂ ಬ್ರಹ್ಮೈವ।)

**3. ಓಂ॥ ಅನ್ಯ ಭಾವವ್ಯಾವೃತ್ತೇಶ್ಚ॥ ಓಂ**

ಅನ್ಯ=ಇತರ ವಸ್ತುಗಳ ಭಾವ=ಧರ್ಮಗಳ ವ್ಯಾವೃತ್ತೇಃ=ಅಭಾವವನ್ನು ಹೇಳಿರುವುದರಿಂದಲೂ ಅಕ್ಷರ ಬ್ರಹ್ಮ.

(ಅನ್ಯೇಷಾಂ ವಸ್ತೂನಾಂ ಭಾವಾನಾಂ=ಸ್ಥೌಲ್ಯಾದಿ ಧರ್ಮಾಣಾಂ ವ್ಯಾವೃತ್ತೇಃ='ಅಸ್ಥೂಲಮನಣು' ಇತ್ಯಾದಿನಾ ಅಕ್ಷರೇ ವ್ಯಾವೃತ್ತ್ಯುಕ್ತೇಶ್ಚ ಅಕ್ಷರಂ ಬ್ರಹ್ಮೈವ। ಯದ್ವಾ ಸುಧಾರೀತ್ಯಾ 'ಅಸ್ಥೂಲಮನಣು' ಇತ್ಯಾದಿನಾ ಸ್ಥೌಲ್ಯಾದಿ ವಿರುದ್ಧ ಅಣುತ್ವ, ಮಹತ್ವಾದಿಮತ್ವಾಚ್ಚ ಇತಿ ಚಶಬ್ದೇನ ಸಮುಚ್ಚೀಯತೇ॥)

**ಶಾಂಕರ ಭಾಷ್ಯದಂತೆ ಸೂತ್ರಗಳ ಅರ್ಥ**

**1. ಅಕ್ಷರಮಂಬರಾಂತ ಧೃತೇಃ -** ಛಾಂದೋಗ್ಯದಲ್ಲಿ ಹೇಳಿರುವ ಅಕ್ಷರ ಎಂದರೆ ವರ್ಣಮಾಲೆ. 'ಓಂಕಾರ ಏವ ಇ[illegible] ಸರ್ವಂ' ಎಂದು ಉಪನಿಷತ್ತುಗಳಲ್ಲಿ ವರ್ಣಗಳನ್ನೂ ಉಪಾಸನೆಗಾಗಿ ಹೇಳುವುದಿದೆ. [illegible]ದ್ದರಿಂದ ವರ್ಣಸಮೂಹರೂಪವಾದ ಅಕ್ಷರವೇ ಆ ಪ್ರಕರಣದ ವಿಷಯ ಎಂದು ಪೂರ್ವಪಕ್ಷ. 'ಆಕಾಶೇ ಏವ ತದೋತಂ ಚ ಪ್ರೋತಂ ಚ' ಎಂದು ಪೃಥಿವ್ಯಾದಿ ಸಕಲ ಕಾರ್ಯಪ್ರಪಂಚವೂ ಆಕಾಶವನ್ನು ಆಶ್ರಯಿಸಿದೆ ಎಂದು ಯಾಜ್ಞವಲ್ಕ್ಯರು ಹೇಳಿದಾಗ ಮೈತ್ರೇಯಿ ಕೇಳುತ್ತಾಳೆ- 'ಕಸ್ಮಿನ್ನು ಖಲು ಆಕಾಶಃ ಓತಶ್ಚ ಪ್ರೋತಶ್ಚ' ಅಂತಹ ಆಕಾಶಕ್ಕೆ ಆಶ್ರಯವಾದುದು ಯಾವುದು? ಎಂದುದಕ್ಕೆ ಯಾಜ್ಞವಲ್ಕ್ಯರ ಉತ್ತರ- 'ಏತಸ್ಮಿನ್ ಖಲು ಅಕ್ಷರೇ ಗಾರ್ಗಿ ಆಕಾಶಃ ಓತಶ್ಚ ಪ್ರೋತಶ್ಚ' ಎಂದು. ಹೀಗೆ ಅಕ್ಷರವು ಪೃಥಿವಿಯಿಂದ ಆಕಾಶದವರೆಗಿನ ಎಲ್ಲ ಕಾರ್ಯವಸ್ತುಗಳಿಗೂ ಮೂಲಕಾರಣವೆಂದು ತಿಳಿಯುವುದರಿಂದ ಅಂತಹ ಅಕ್ಷರ ಬ್ರಹ್ಮನೇ, ವರ್ಣಮಾಲೆಯಲ್ಲ ಎಂದು ಸಿದ್ಧಾಂತ.

ಎಲ್ಲವೂ ಪ್ರಕೃತಿಯ ವಿಕಾರವಾದುದರಿಂದ ಅದು ಅಕ್ಷರವೆನಿಸಬಹುದಲ್ಲವೆ? ಇಲ್ಲ - ಸಾ ಚ ಪ್ರಶಾಸನಾತ್ - 'ಏತಸ್ಯ ಖಲು ಅಕ್ಷರಸ್ಯ ಪ್ರಶಾಸನೇ' ಎಂದು ಅಕ್ಷರದ ಆಜ್ಞೆಯಿಂದ ಕಾರ್ಯಪ್ರಪಂಚದ ಸ್ಥಿತಿಯನ್ನು ಹೇಳಲಾಗಿದೆ. ಪ್ರಕೃತಿ ಜಡ. ಅದು ಆಜ್ಞೆಮಾಡಲಾರದು. ಆದ್ದರಿಂದ ಅದು ಅಕ್ಷರವಲ್ಲ. ದ್ರಷ್ಟೃತ್ವಧರ್ಮವನ್ನು ಹೇಳಿರುವುದರಿಂದಲೂ ಅಚೇತನವಾದ ಪ್ರಕೃತಿ ಅಕ್ಷರವಲ್ಲ ಎನ್ನುವುದನ್ನು 'ಅನ್ಯಭಾವವ್ಯಾವೃತ್ತೇಶ್ಚ' ಎಂಬ ಮೂರನೆಯ ಸೂತ್ರ ಹೇಳಿದೆ.

## ಚಂದ್ರಿಕಾದಲ್ಲಿ ಮಾಡಿರುವ ವಿಮರ್ಶೆ

ಅಕ್ಷರಗಳು ಜಡಗಳಾದುದರಿಂದ ಅವುಗಳಲ್ಲಿ ಇಲ್ಲಿ ಹೇಳಿದ ದ್ರಷ್ಟೃತ್ವಾದಿ ಚೇತನ ಧರ್ಮಗಳು ಇರಲು ಸಾಧ್ಯವಿಲ್ಲ. ಹಾಗಿದ್ದ ಮೇಲೆ ವರ್ಣಮಾಲೆಯೇ ಇಲ್ಲಿ ಹೇಳಲಾದ ಅಕ್ಷರ ಎಂಬ ಪೂರ್ವಪಕ್ಷ ಅತ್ಯಂತ ದುರ್ಬಲವಾಗುತ್ತದೆ.

ಸಿದ್ಧಾಂತವೂ ಸಮಂಜಸವಲ್ಲ- ಬ್ರಹ್ಮನು ಹಾವಿಗೆ ಹಗ್ಗದಂತೆ ಜಗತ್ತಿಗೆ ಅಧಿಷ್ಠಾನನಾದುದರಿಂದ ಜಗತ್ತು ಅವನನ್ನು ಆಶ್ರಯಿಸಿದೆ ಎಂದಾಗಲೀ, ಅವನ ಶಾಸನದಿಂದ ನಡೆಯುತ್ತಿದೆ ಎಂದಾಗಲೀ ಮಾಯಾವಾದದಲ್ಲಿ ಹೇಳಲಾಗದು.

## ರಾಮಾನುಜ ಭಾಷ್ಯದಲ್ಲಿ ಸೂತ್ರಗಳ ಅರ್ಥ

ರಾಮಾನುಜ ಭಾಷ್ಯದಲ್ಲಿ ಇದೇ ವಾಕ್ಯದ ವಿಚಾರವನ್ನು ಮಾಡಲಾಗಿದೆ. ಆದರೆ ಅವರಲ್ಲಿ ಅಕ್ಷರ ಎಂದರೆ ಪ್ರಕೃತಿ ಎಂದು ಪೂರ್ವಪಕ್ಷ. ಕಾರ್ಯವಸ್ತುಗಳಿಗೆ ಉಪಾದಾನಕಾರಣವಾದುದರಿಂದ ಅದು ಎಲ್ಲದಕ್ಕೂ ಆಧಾರವಾಗಬಹುದು ಎಂದು ಪೂರ್ವಪಕ್ಷದ ಆಕ್ಷೇಪ. ಬ್ರಹ್ಮನೇ ಅಕ್ಷರ ಎಂದು ಸಿದ್ಧಾಂತ. ಆದರೆ ಅಂಬರಾಂತ ಪದಕ್ಕೆ ಎರಡೂ ಭಾಷ್ಯಗಳಿಗಿಂತ ಬೇರೆಯಾದ ಅಭಿಪ್ರಾಯವನ್ನು ಈ ಭಾಷ್ಯದಲ್ಲಿ ಹೇಳಲಾಗಿದೆ. ಭೂತಾಕಾಶವು ಪೃಥಿವ್ಯಾದಿಗಳಂತೆ ಜನ್ಯತತ್ತ್ವವಾದುದರಿಂದ ಅದು ಪ್ರಪಂಚಕ್ಕೆ ಆಧಾರವಲ್ಲ. ಅಜನ್ಯವಾದ ಅವ್ಯಾಕೃತಾಕಾಶ ಅಂದರೆ ಭೂತಸೂಕ್ಷ್ಮಗಳು ಈ ಕಾರ್ಯ ಪ್ರಪಂಚಕ್ಕೆ ಮೂಲ. ಅದಕ್ಕೂ ಆಧಾರನಾದವನು ಅಕ್ಷರ- ಬ್ರಹ್ಮ ಎಂದು ಅದರ ಭಾವ. ಆದ್ದರಿಂದ 'ಅಂಬರಸ್ಯ ಅಂತಃ- ಅವಧಿಃ- ಕಾರಣಂ' ಎಂದು ಅಂಬರಾಂತಪದಕ್ಕೆ ಅರ್ಥ. ಅಂಬರವೆಂದರೆ ಭೂತಾಕಾಶ. ಆದಕ್ಕೆ ಅಂತ- ಕಾರಣವಾದುದು ಪ್ರಕೃತಿ- ಭೂತಸೂಕ್ಷ್ಮ.

'ಸಾ ಚ ಪ್ರಶಾಸನಾತ್' ಎಂಬ ಸೂತ್ರಕ್ಕೆ ಶಾಂಕರಭಾಷ್ಯದಂತೆಯೇ ಅರ್ಥ. 'ಅನ್ಯಭಾವವ್ಯಾವೃತ್ತೇಶ್ಚ' ಎಂಬ ಸೂತ್ರದಲ್ಲಿ ಅನ್ಯಭಾವ ಎಂದರೆ ಅನ್ಯತ್ವಂ- ಪ್ರಧಾನಾದಿಭಾವಃ।' ಅಕ್ಷರವು ಬ್ರಹ್ಮೇತರ ಅಲ್ಲ ಎಂದು 'ಅದೃಷ್ಟಂ, ದ್ರಷ್ಟೃ' ಎಂಬ ವಿಶೇಷಣಗಳಿಂದ ತಿಳಿಸಲಾಗಿದೆ ಎಂದು ಆ ಸೂತ್ರದ ಭಾವ. ಅಥವಾ ಅನ್ಯಭಾವಃ- ಅನ್ಯಸ್ಯ ಸದ್ಭಾವಃ. ಇತರ ವಸ್ತುಗಳು ಇರಲಿಲ್ಲ ಎಂದು ಇಲ್ಲಿ ಹೇಳಲಾಗಿದೆ -'ನಾನ್ಯತೋ ಅಸ್ತಿ ದ್ರಷ್ಟಾ'. ಆದ್ದರಿಂದಲೂ ಬ್ರಹ್ಮನೇ ಅಕ್ಷರ.

## ಚಂದ್ರಿಕಾದಲ್ಲಿ ಮಾಡಿರುವ ವಿಮರ್ಶೆ

ಬೃಹದಾರಣ್ಯಕ ಶ್ರುತಿಯಲ್ಲಿ ಆಕಾಶಪದಕ್ಕೆ ಭೂತಾಕಾಶವೆಂದೇ ಅರ್ಥ. ಅದಕ್ಕೆ ಅನುಗುಣವಾಗಿ ಸೂತ್ರದಲ್ಲೂ 'ಅಂಬರಾಂತಧೃತೇಃ- ಅಂಬರಂ ಅಂತಃ ಯಸ್ಯ' ಎಂದು ಸಮಾಸ ಮಾಡಿ 'ಪೃಥಿವಿಯಿಂದ ಆಕಾಶಗಳವರೆಗಿನ ಲೋಕಗಳು' ಎಂದು ಅರ್ಥ ಹೇಳಿದರೆ ಸೂತ್ರವು ಶ್ರುತಿಗೆ ಅನುಗುಣವಾಗುತ್ತದೆ. 'ಅಂಬರಸ್ಯ ಅಂತಃ' ಎಂದು ಅರ್ಥ ಮಾಡಿದರೆ ಶ್ರುತಿಯಲ್ಲಿ ಹೇಳದ ಪ್ರಕೃತಿಯನ್ನು ಸೂತ್ರದಲ್ಲಿ ಹೇಳಿದಂತಾಗುತ್ತದೆ. ಆಗ ಸೂತ್ರ ಶ್ರುತ್ಯನುಸಾರಿಯಾಗುವುದಿಲ್ಲ.

**ಇಲ್ಲಿಗೆ ಅಕ್ಷರಾಧಿಕರಣ ಮುಗಿಯಿತು.**

# ಸದಧಿಕರಣ - 4

**'ಸದೇವ ಸೋಮ್ಯ ಇದಮಗ್ರ ಆಸೀತ್' (ಛಾಂ.6.2.1) ಇತ್ಯಾದಿನಾ ಸತಃ ಸ್ರಷ್ಟೃತ್ವಂ ಉಚ್ಯತೇ । ತಚ್ಚ ಸತ್, 'ಬಹುಸ್ಯಾಂ ಪ್ರಜಾಯೇಯ (ಛಾಂ.6.2.3)' ಇತಿ ಪರಿಣಾಮ ಪ್ರತೀತೇಃ ನ ವಿಷ್ಣುಃ। 'ಸ ಹಿ ಅವಿಕಾರಃ ಸದಾ ಶುದ್ಧೋ ನಿತ್ಯ ಆತ್ಮಾ ಸದಾ ಹರಿಃ।' ಇತ್ಯಾದಿನಾ ಅವಿಕಾರಃ ಪ್ರಸಿದ್ಧಃ ಇತಿ। ಅತೋ ಬ್ರವೀತಿ-**

**ಓಂ ॥ ಈಕ್ಷತಿಕರ್ಮ ವ್ಯಪದೇಶಾತ್ ಸಃ ॥ ಓಂ**

**'ತದೈಕ್ಷತ' ಇತಿ ಈಕ್ಷತಿಕರ್ಮವ್ಯಪದೇಶಾತ್ ಸ ಏವ ವಿಷ್ಣುಃ ಅತ್ರೋಚ್ಯತೇ। 'ನಾನ್ಯೋಽತೋಽಸ್ತಿ ದ್ರಷ್ಟಾ' (ಬೃ.5.7.23) 'ನಾನ್ಯದತೋಽಸ್ತಿ ದ್ರಷ್ಟೃ'(ಬೃ.5.8.11)**

**ಇತ್ಯಾದಿನಾ ತಸ್ಯೈವ ಹಿ ತಲ್ಲಕ್ಷಣಮ್।**

**ಬಹುತ್ವಂ ಚ ಅವಿಕಾರೇಣೈವ ಉಕ್ತಂ 'ಅಜಾಯಮಾನೋ ಬಹುಧಾ ವಿಜಾಯತೇ । (ತೈ.ಆ.3.13.1)' ಇತಿ ॥ 13 ॥**

**॥ ಇತಿ ಸದಧಿಕರಣಮ್ ॥**

'ಸದೇವ ಸೋಮ್ಯ' ಇತ್ಯಾದಿ ಛಾಂದೋಗ್ಯ ಶ್ರುತಿಯಲ್ಲಿ 'ಸತ್' ಎಂಬ ತತ್ತ್ವವು ಜಗತ್ತಿನ ಸೃಷ್ಟಿಯನ್ನು ಮಾಡುತ್ತದೆ ಎಂದು ತಿಳಿಯುತ್ತದೆ. ಆ ಸತ್ ಬ್ರಹ್ಮನಲ್ಲ. ಏಕೆಂದರೆ

'ನಾನು ಬಹುರೂಪವಾಗಿ ಹುಟ್ಟುತ್ತೇನೆ' ಎಂದು ಸಂಕಲ್ಪಿಸಿ ಆ ಸತ್‌ಪದಾರ್ಥವು ಪ್ರಪಂಚರೂಪದಿಂದ ವಿಕಾರಹೊಂದಿರುವುದಾಗಿ ಶ್ರುತಿ ಹೇಳಿದೆ. ವಿಷ್ಣು 'ಅವಿಕಾರಃ ಸದಾ ಶುದ್ಧಃ' ಎಂಬ ಪ್ರಮಾಣದಿಂದ ವಿಕಾರವಿಲ್ಲದವನು ಎಂದು ಪ್ರಸಿದ್ಧನಾಗಿದ್ದಾನೆ. ಅದಕ್ಕಾಗಿ ಸೂತ್ರಕಾರರು ಈ ಸೂತ್ರವನ್ನು ರಚಿಸಿದ್ದಾರೆ.

ಇಲ್ಲಿ 'ತದೈಕ್ಷತ - ಅದು ತಿಳಿಯಿತು' ಎಂದು ಜ್ಞಾನರೂಪ ಕ್ರಿಯೆಯನ್ನು ಹೇಳಿರುವುದರಿಂದ ಸತ್‌ಪದದಿಂದ ವಿಷ್ಣುವೇ ವಾಚ್ಯನಾಗಿದ್ದಾನೆ. 'ಅವನಲ್ಲದೆ ಇತರ ದ್ರಷ್ಟೃಗಳೇ ಇಲ್ಲ' ಎಂದು ಬೃಹದಾರಣ್ಯಕದಲ್ಲಿ ಅನೇಕಬಾರಿ ಹೇಳಿರುವುದರಿಂದ ಸ್ವತಂತ್ರದ್ರಷ್ಟೃತ್ವ ಅವನದೇ ಅಸಾಧಾರಣ ಗುಣ. 'ಬಹುಸ್ಯಾಂ' ಎಂದು ಇಲ್ಲಿ ಹೇಳಿರುವ ಬಹುತ್ವವಾದರೂ ವಿಕಾರವಿಲ್ಲದೆಯೇ ಅವನಿಗೂ ಇದೆ-'ಅಜಾಯಮಾನೋ ಬಹುಧಾ ವಿಜಾಯತೇ- ವಿಕಾರವಿಲ್ಲದೆ ಅನೇಕ ರೂಪ ತಾಳುತ್ತಾನೆ' ಎಂದಿದೆ ಶ್ರುತಿ.

**ವಿವರಣೆ : 1.** ಈ ಅಧಿಕರಣದಲ್ಲಿ ಸ್ಥಾನವನ್ನು ವಿಷ್ಣುಪರ ಎಂದು ಸಮರ್ಥಿಸಲಾಗಿದೆ. ಅನೇಕ ವಾಕ್ಯಗಳ ಗುಂಪು ಒಂದು ಪ್ರಕರಣ. ಅನೇಕ ಪ್ರಕರಣಗಳು ಸೇರಿ ಒಂದು ಸ್ಥಾನ. ಛಾಂದೋಗ್ಯದ 'ಸದೇವ ಸೋಮ್ಯ' ಎಂದು ಆರಂಭವಾಗುವ ಒಂಭತ್ತು ಪ್ರಕರಣಗಳು ಸೇರಿ ಒಂದು ಸ್ಥಾನ. ಅದರಲ್ಲಿ ಸತ್‌ಪದ ಮತ್ತೆ ಮತ್ತೆ ಪ್ರಯೋಗಿಸಲ್ಪಡುವುದರಿಂದ ಅದನ್ನು ವಿಷ್ಣುವಿನಲ್ಲಿ ಸಮನ್ವಯ ಮಾಡಿದರೆ ಎಲ್ಲ ಪ್ರಕರಣಗಳೂ ವಿಷ್ಣು ಪ್ರತಿಪಾದಕಗಳು ಎಂದು ಸಿದ್ಧವಾಗುತ್ತದೆ. ಅದಕ್ಕಾಗಿ ಈ ಸೂತ್ರದಲ್ಲಿ ಸತ್‌ಪದವನ್ನು ಬ್ರಹ್ಮವಾಚಕ ಎಂದು ಸಾಧಿಸಲಾಗಿದೆ.

2. ''ಸದೇವ ಸೋಮ್ಯ ಇದಮಗ್ರ ಆಸೀತ್ ಏಕಮೇವಾದ್ವಿತೀಯಂ।

ತದೈಕ್ಷತ- ಬಹುಸ್ಯಾಂ ಪ್ರಜಾಯೇಯೇತಿ। ತತ್ತೇಜೋಽಸೃಜತ ॥'

ಇದು ಪ್ರಕೃತ ವಿಷಯವಾಕ್ಯದ ಪೂರ್ಣಪಾಠ. ಉದ್ದಾಲಕರು ಶ್ವೇತಕೇತುವಿಗೆ ಮಾಡುವ ಉಪದೇಶ ಇದು. ಇಲ್ಲಿ ಸತ್‌ವಸ್ತುವು ಸೃಷ್ಟ್ಯಾದಿ ಕ್ರಿಯೆಗಳನ್ನು ನಡೆಸುತ್ತದೆ ಎಂದಿದೆ. ಅದು ಪ್ರಧಾನ ಪ್ರಕೃತಿ ಎಂದಾದರೆ, ಈ ಜಗತ್ತಿನ ರೂಪದಿಂದ ಅದು ಪರಿಣಾಮಗೊಳ್ಳುವುದರಿಂದ 'ಬಹುಸ್ಯಾಂ' ಎನ್ನುವ ಸಂಕಲ್ಪ ಅನ್ವರ್ಥವಾಗುತ್ತದೆ. ಪರಮಾತ್ಮನಿಗೆ ವಿಕಾರ ಇಲ್ಲವಾದುದರಿಂದ ಅವನಿಗೆ ಅದು ಅನ್ವಯಿಸುವುದಿಲ್ಲ, ಎಂದು ಪೂರ್ವಪಕ್ಷ.

ಬಹುಭಾವವನ್ನಾದರೂ ಪರಮಾತ್ಮನಲ್ಲಿ ಹೇಳಬಹುದು. ಅವನು ಜಗತ್ತನ್ನು ಸೃಷ್ಟಿಮಾಡಿ, ತಾನೂ ಅನೇಕ ರೂಪಗಳನ್ನು ತಾಳಿ ಜಗತ್ತಿನೊಳಗೆ ಪ್ರವೇಶಮಾಡುತ್ತಾನೆ. ಆದರೆ, ಪ್ರಕೃತಿಗೆ 'ಐಕ್ಷತ' ಎಂದು ಹೇಳಿದ 'ಜ್ಞಾನಕ್ರಿಯೆ' ಸರ್ವಥಾ ಅನ್ವಯಿಸುವುದಿಲ್ಲ. ಆದ್ದರಿಂದ ಸತ್ ಎಂದರೆ ಬ್ರಹ್ಮನೇ, ಎಂದು ಸಿದ್ಧಾಂತ.

**3. ಶ್ರುತ್ಯರ್ಥ : ಅ.** ಶ್ರುತಿಯಲ್ಲಿ 'ಸೋಮ್ಯ' ಎಂದು ಉದ್ದಾಲಕರು ಶ್ವೇತಕೇತುವನ್ನು

ಸಂಬೋಧಿಸಿದ್ದಾರೆ. 'ಸೋಮಪಾನಕ್ಕೆ ಅರ್ಹ' ಎಂದು ಅದರ ಅರ್ಥ. ಪ್ರಕೃತ ಸೋಮ ಎಂದರೆ ಜ್ಞಾನಭಕ್ತ್ಯಾದಿಗಳು.

ಆ. 'ಇದಮಗ್ರೇ' - 'ಇದಂ(ಅಸ್ಯ) ಈ ಜಗತ್ತಿನ ಅಗ್ರೇ=ಪ್ರಾರಂಭದಲ್ಲಿ.

## ದ್ವೈತದರ್ಶನದಲ್ಲಿ ಸೂತ್ರದ ಅರ್ಥ

**ಓಂ || ಈಕ್ಷತಿಕರ್ಮವ್ಯಪದೇಶಾತ್ ಸಃ || ಓಂ**

ಸೂತ್ರದಲ್ಲಿ 'ಈಕ್ಷತಿಕರ್ಮ' ಪದಕ್ಕೆ 'ಈಕ್ಷತಿಪೂರ್ವಕ ಕ್ರಿಯಾ' ಎಂದು ಅರ್ಥ. ಈಕ್ಷತಿ ಎಂದರೆ ಜ್ಞಾನ.

ಶ್ರುತಿಯಲ್ಲಿ 'ತದೈಕ್ಷತ ತತ್ ತೇಜೋ ಅಸೃಜತ' ಎಂದು 'ಸತ್‌ವಸ್ತುವು ಮೊದಲು ತಿಳಿಯಿತು. ಆಮೇಲೆ ಸೃಷ್ಟಿಮಾಡಿತು' ಎನ್ನಲಾಗಿದೆ. ಹೀಗೆ ಜ್ಞಾನಪೂರ್ವಕ ಸೃಷ್ಟಿಕ್ರಿಯೆ ಪರಿಣಾಮಗೊಳ್ಳುವ ಜಡವಾದ ಪ್ರಕೃತಿಗೆ ಇಲ್ಲ. ಆದುದರಿಂದ ಸತ್‌ಪದಕ್ಕೆ ವಿಷ್ಣು ಎಂದೇ ಅರ್ಥ.

ತತ್ತ್ವಪ್ರದೀಪ ಮತ್ತು ಚಂದ್ರಿಕಾ ಗ್ರಂಥದ ರೀತಿಯಿಂದ - 'ಈಕ್ಷತಿಶ್ಚ ಕರ್ಮ ಚ - ಈಕ್ಷತಿಕರ್ಮ - ಜ್ಞಾನ ಮತ್ತು ಕ್ರಿಯೆಗಳು' ಎಂದು ಅರ್ಥ. ರಾಯರು 'ಈಕ್ಷತಿರೂಪವಾದ ಕ್ರಿಯೆ' ಎಂದೂ ಅರ್ಥಮಾಡಿದ್ದಾರೆ. ಜ್ಞಾನ ಸ್ವರೂಪನಾದ ಪರಮಾತ್ಮನಿಗೆ 'ಈಕ್ಷತೇ' ಎಂದು ಜ್ಞಾನಾಶ್ರಯತ್ವವನ್ನು ಹೇಳಿರುವುದು 'ವಿಶೇಷ' ಬಲದಿಂದ ಎಂದು ಸೂಚಿಸಲು 'ಕರ್ಮ' ಎಂಬ ಪದವನ್ನು ಪ್ರಯೋಗಿಸಲಾಗಿದೆ.

(ಯೋಗ್ಯತಯಾ ಸದಿತಿ ಅನ್ವೇತಿ । ಸಃ ಇತ್ಯನೇನ ತತ್ತು ಇತಿ ತುರನ್ವೇತಿ । ಸದೇವ ಇತ್ಯಾದೌ ಶ್ರುತಂ ಸತ್ ಸ ಏವ=ವಿಷ್ಣುರೇವ । ನ ಪ್ರಧಾನಂ । ಈಕ್ಷತಿ ರೂಪಂ ಚ ತತ್ ಕರ್ಮ ಚ, ತಸ್ಯ ವ್ಯಪದೇಶಾತ್ ।)

## ಶಾಂಕರಭಾಷ್ಯದಲ್ಲಿ ಹೇಳಿದ ಸೂತ್ರದ ಅರ್ಥ

ಶಾಂಕರಭಾಷ್ಯ ಪ್ರಶ್ನೋಪನಿಷತ್ತಿನ 'ಸ ಪುನರೇತಂ ತ್ರಿಮಾತ್ರೇಣ ಓಮಿತ್ಯನೇನೈವ ಅಕ್ಷರೇಣ ಪರಂ ಪುರುಷಂ ಅಭಿಧ್ಯಾಯೀತ (5,2,5)' ಎಂಬುದನ್ನು ವಿಷಯವಾಕ್ಯವನ್ನಾಗಿ ಪರಿಗಣಿಸಿದೆ. ಇಲ್ಲಿ 'ಅಭಿಧ್ಯಾಯೀತ' ಎಂದು ಧ್ಯಾನಕ್ಕೆ ವಿಷಯನಾಗಿ ಹೇಳಲ್ಪಟ್ಟವನು ಅಪರಬ್ರಹ್ಮ. (ಸೂತ್ರನಾಮಕ ಚತುರ್ಮುಖ) ಏಕೆಂದರೆ, ಇದರಿಂದ ದೊರಕುವ ಫಲ 'ಸ ತೇಜಸಿ ಸೂರ್ಯೇ ಸಂಪನ್ನಃ' 'ಸ ಸಾಮಭಿರುನ್ನೀಯತೇ ಬ್ರಹ್ಮಲೋಕಂ' ಎಂದು ಸೂರ್ಯನ ಮೂಲಕ ಬ್ರಹ್ಮಲೋಕದ ಪ್ರಾಪ್ತಿ. ಅಪರಿಚ್ಛಿನ್ನ ಬ್ರಹ್ಮನ ಧ್ಯಾನದಿಂದ ಪರಿಚ್ಛಿನ್ನ ಲೋಕದ ಪ್ರಾಪ್ತಿ ಉಚಿತವಲ್ಲ. ಆದ್ದರಿಂದ ಈ ವಾಕ್ಯದಲ್ಲಿ ಧ್ಯೇಯನಾಗಿ ಹೇಳಲ್ಪಟ್ಟವನು ಅಪರ ಬ್ರಹ್ಮ (ಚತುರ್ಮುಖ) ಎಂದು ಪೂರ್ವಪಕ್ಷ.

ಈ ಧ್ಯಾನದಿಂದ 'ಸ ಏತಸ್ಮಾತ್ ಜೀವಘನಾತ್ ಪರಾತ್ ಪರಂ ಪುರಿಷಯಂ ಪುರುಷಂ ಈಕ್ಷತೇ' ಎಂದು ಪರಾತ್‌ಪರ ಪುರುಷನ ದರ್ಶನವನ್ನು ಹೇಳಲಾಗಿದೆ. ಧ್ಯಾನಕ್ಕೆ ಕಲ್ಪಿತವಸ್ತುವೂ ವಿಷಯವಾಗಬಹುದು. ಆದರೆ, 'ದರ್ಶನ'ಕ್ಕೆ ಸತ್ಯವೇ ವಿಷಯ. ಹೀಗಾಗಿ ದರ್ಶನ ವಿಷಯವಾಗಿ ಹೇಳಲ್ಪಟ್ಟವನು ಪರಬ್ರಹ್ಮನಾದುದರಿಂದ ಧ್ಯಾನಕ್ಕೂ ಅವನೇ ವಿಷಯ. ಆದ್ದರಿಂದ ಆ ವಾಕ್ಯದಲ್ಲಿ ಉಲ್ಲೇಖಿಸಲ್ಪಟ್ಟವನು ಪರಬ್ರಹ್ಮನೇ. ತ್ರಿಮಾತ್ರಕವಾದ ಪ್ರಣವವೆಂಬ ಪ್ರತೀಕದಲ್ಲಿ ಪರಬ್ರಹ್ಮನನ್ನು ಧ್ಯಾನಿಸಿದರೆ ಬ್ರಹ್ಮಲೋಕ ಪ್ರಾಪ್ತಿಯಾಗುತ್ತದೆ. ಅಲ್ಲಿ ಬ್ರಹ್ಮದರ್ಶನವಾಗಿ ಬ್ರಹ್ಮಪ್ರಾಪ್ತಿ- ಹೀಗೆ ಕ್ರಮವಾಗಿ ಪ್ರಣವೋಪಾಸಕನಿಗೆ ಮೋಕ್ಷವಾಗುತ್ತದೆ. 'ಈಕ್ಷತೇಃ ಕರ್ಮ - ಈಕ್ಷತಿಕರ್ಮ' ಎಂದು ಸೂತ್ರದಲ್ಲಿ ಸಮಾಸ. ಜ್ಞಾನಕ್ಕೆ ಕರ್ಮನನ್ನಾಗಿ ಹೇಳಿರುವುದರಿಂದ ಎಂದು ಅರ್ಥ.

## ಚಂದ್ರಿಕಾದಲ್ಲಿ ಮಾಡಿರುವ ವಿಮರ್ಶೆ

1. ''ಈಕ್ಷಣಧ್ಯಾನಯೋರೇಕಃ ಕಾರ್ಯಕಾರಣಭೂತಯೋಃ ॥'' ಎಂದು ಭಾಮತೀವಾಕ್ಯ ಧ್ಯಾನವು ಕಾರಣ. ಪ್ರತ್ಯಕ್ಷ ಕಾರ್ಯ. ಧ್ಯಾನದಿಂದ ಪ್ರತ್ಯಕ್ಷ ಸಿದ್ಧಿಸುತ್ತದೆ. ಪ್ರತ್ಯಕ್ಷಕ್ಕೆ ಅಪರಿಚ್ಛಿನ್ನ ಬ್ರಹ್ಮ ವಿಷಯನಾದುದರಿಂದ ಧ್ಯಾನಕ್ಕೂ ಅವನೇವಿಷಯ ಎಂದು ಒಂದೆಡೆ ಭಾಷ್ಯದ ಭಾವ.

ಪ್ರವಣಪ್ರತೀಕದಲ್ಲಿ ಬ್ರಹ್ಮನ ಧ್ಯಾನದಿಂದ ಬ್ರಹ್ಮಲೋಕ ಪ್ರಾಪ್ತಿರೂಪವಾದ ಫಲ ಸಿದ್ಧಿಸುತ್ತದೆ. ಫಲ ಪರಿಚ್ಛಿನ್ನಲೋಕದ ಪ್ರಾಪ್ತಿಯಾದುದರಿಂದ ಧ್ಯಾನಕ್ಕೂ ಪರಿಚ್ಛಿನ್ನ ಬ್ರಹ್ಮನೇ ವಿಷಯ ಎಂದು ಮೊದಲು ಹೇಳಿದ ಅಭಿಪ್ರಾಯಕ್ಕೆ ವಿರುದ್ಧವಾದ ಮತ್ತೊಂದು ಅಭಿಪ್ರಾಯ. ಹೀಗೆ ವ್ಯಾಹತವಾದ ಅಭಿಪ್ರಾಯವನ್ನು ಇಲ್ಲಿ ತಿಳಿಸಲಾಗಿದೆ.

2. ಪ್ರತ್ಯಕ್ಷಕ್ಕೆ ತಾತ್ವಿಕ ವಸ್ತುವೇ ವಿಷಯ ಎನ್ನುವುದೂ ಸರಿಯಲ್ಲ. 'ಯದಾ ಪಶ್ಯಃ ಪಶ್ಯತೇ ರುಕ್ಮವರ್ಣಂ' ಎಂದು ಆಥರ್ವಣೋಪನಿಷತ್ತು ರುಕ್ಮವರ್ಣದ ಪರಿಚ್ಛಿನ್ನನಾದ ಆತ್ಮನ ಅಪರೋಕ್ಷವನ್ನು ಹೇಳಿದೆ. ಮಾಯಾವಾದದಲ್ಲಿ ಅದು ಕಲ್ಪಿತ ತತ್ತ್ವ. ಆದರೂ ಅದು ಅಪರೋಕ್ಷ ವಿಷಯವಾಗಿ ಹೇಳಲ್ಪಟ್ಟಿದೆ.

## ರಾಮಾನುಜ ಭಾಷ್ಯದಲ್ಲಿ ಹೇಳಿದ ಅರ್ಥ

ರಾಮಾನುಜ ಭಾಷ್ಯದಲ್ಲಿ ಷಟ್‌ಪ್ರಶ್ನದ ಇದೇ ವಾಕ್ಯವನ್ನು ಈ ಅಧಿಕರಣದಲ್ಲಿ ವಿಚಾರ ಮಾಡಲಾಗಿದೆ- 'ಪರಂ ಪುರುಷಂ ಅಭಿಧ್ಯಾಯೀತ' ಎಂದು ಧ್ಯಾನಕ್ಕೆ ವಿಷಯನಾಗಿ ಹೇಳಲ್ಪಟ್ಟ ಪುರುಷ ಚತುರ್ಮುಖ. ಏಕೆಂದರೆ, ಪ್ರಣವದ ಒಂದಕ್ಷರದ ಧ್ಯಾನದಿಂದ ಮನುಷ್ಯಲೋಕಪ್ರಾಪ್ತಿ, ಎರಡು ಅಕ್ಷರಗಳ ಧ್ಯಾನದಿಂದ ಅಂತರಿಕ್ಷಲೋಕದ ಪ್ರಾಪ್ತಿ ಮೂರು ಅಕ್ಷರಗಳ ಧ್ಯಾನದಿಂದ ಬ್ರಹ್ಮಲೋಕದ ಪ್ರಾಪ್ತಿ. ಹೀಗೆ ಇಲ್ಲಿ ಪ್ರಣವೋಪಾಸನೆಯ

ಫಲವನ್ನು ಹೇಳಲಾಗಿದೆ. ಬ್ರಹ್ಮಲೋಕಾಧಿಪತಿ ಚತುರ್ಮುಖ. ಹೀಗಾಗಿ ಅವನೇ ಧ್ಯಾನಕ್ಕೆ ವಿಷಯನಾಗಿ ಇಲ್ಲಿ ಹೇಳಲ್ಪಟ್ಟಿದ್ದಾನೆ ಎಂದು ಪೂವಪಕ್ಷ.

ಇಲ್ಲಿ 'ಪರಂ, ಶಾಂತಂ, ಅಭಯಂ, ಅಮೃತಂ' ಎಂದು ಮುಂತಾಗಿ ಉಲ್ಲೇಖಗಳಿವೆ. ಇವು ಪರಬ್ರಹ್ಮನ ರೂಪಗಳು. ಆದ್ದರಿಂದ 'ಪುರುಷಂ ಈಕ್ಷತೇ ।' ಎಂದು ಅಪರೋಕ್ಷ ಜ್ಞಾನಕ್ಕೆ ವಿಷಯನಾಗಿ ಹೇಳಲ್ಪಡುವವನು ಪರಬ್ರಹ್ಮನೇ. ಜ್ಞಾನ-ಧ್ಯಾನಗಳು ಸಮಾನ ವಿಷಯಕಗಳಾದುದರಿಂದ ಧ್ಯಾನಕ್ಕೆ ವಿಷಯನಾದವನೂ ಪರಬ್ರಹ್ಮ ಎಂದು ಸಿದ್ಧಾಂತ.

'ಈಕ್ಷತಿ ಕರ್ಮ ಸಃ=ಪರಮಾತ್ಮೈವ । ವ್ಯಪದೇಶಾತ್=ಪರಮಾತ್ಮತ್ವೇನ ವ್ಯಪದೇಶಾತ್' ಎಂದು ಸೂತ್ರಕ್ಕೆ ಅರ್ಥ.

## ಚಂದ್ರಿಕಾದಲ್ಲಿ ಮಾಡಿರುವ ವಿಮರ್ಶೆ

ಶಾಂಕರ-ಮಾಧ್ವ ಭಾಷ್ಯಗಳಲ್ಲಿ ಹೇತುವಾಚಕವಾಗಿ ಪರಿಗಣಿಸಿರುವ ಸೂತ್ರದ ಪದವನ್ನು ರಾಮಾನುಜಭಾಷ್ಯ ವಿಭಾಗ ಮಾಡಿ ಒಂದಂಶವನ್ನು ಸಾಧ್ಯವನ್ನಾಗಿಯೂ ಮತ್ತೊಂದಂಶವನ್ನು ಹೇತುವನ್ನಾಗಿಯೂ ವ್ಯಾಖ್ಯಾನ ಮಾಡಿರುವುದು ಈ ಭಾಷ್ಯದ ವಿಶೇಷ. ಆದರೆ, ಹಿಂದಿನ ಸೂತ್ರಗಳಲ್ಲಿ '(ಅಂತಃ) ತದ್ಧರ್ಮೋಽಪದೇಶಾತ್' 'ಭೇದವ್ಯಪದೇಶಾಚ್ಚ (ಅನ್ಯಃ)' ಎಂದು ಬರೇ 'ವ್ಯಪದೇಶಾತ್' ಎಂದಿಷ್ಟೇ ಹೇಳದೆ ಆ ವ್ಯಪದೇಶ ಯಾವ ರೂಪವಾದುದು ಎನ್ನುವುದನ್ನು ತಿಳಿಸಲಾಗಿದೆ. ಪ್ರಕೃತ ಸೂತ್ರದಲ್ಲೂ ಅದರಂತೆ 'ಈಕ್ಷತಿ ಕರ್ಮವ್ಯಪದೇಶಾತ್' ಎಂದು ಸೂತ್ರಕಾರರು ಹೇಳಿರುವಾಗ ಆ ವ್ಯಪದೇಶದ ವಿವರವನ್ನು ಹೇಳುವುದಾಗಿ ಸ್ಪಷ್ಟ ಕಾಣುವ 'ಈಕ್ಷತಿಕರ್ಮ' ಎಂಬ ಅಂಶವನ್ನು ಪ್ರತ್ಯೇಕಗೊಳಿಸುವುದು ಸೂತ್ರಕಾರರಿಗೆ ಸಮ್ಮತವೆನಿಸುವ ವ್ಯಾಖ್ಯಾನವಾಗಲಾದು. ॥ ಸೂತ್ರ 13 ॥

**ಇಲ್ಲಿಗೆ ಸದಧಿಕರಣ ಮುಗಿಯಿತು.**

# ದಹರಾಧಿಕರಣ - 5

**ಚಂದ್ರಾದಿತ್ಯಾಧಾರತ್ವಂ ವಿಷ್ಣೋರುಕ್ತಮ್। ತಚ್ಚ,**

**ಅಥ ಯದಿದಮಸ್ಮಿನ್ ಬ್ರಹ್ಮಪುರೇ ದಹರಂ ಪುಂಡರೀಕಂ ವೇಶ್ಮ ದಹರೋಽಸ್ಮಿನ್ ಅಂತರ ಆಕಾಶಃ ಕಿಂ ತದತ್ರ ವಿದ್ಯತೇ...' (ಛಾಂ.8.1.2) 'ಉಭೇ ಅಸ್ಮಿನ್ ದ್ಯಾವಾಪೃಥಿವೀ ಅಂತರೇವ ಸಮಾಹಿತೇ । ಉಭಾವಗ್ನಿಶ್ಚ ವಾಯುಶ್ಚ ಸೂರ್ಯಾಚಂದ್ರಮಸೌ ಉಭೌ ವಿದ್ಯುನ್ನಕ್ಷತ್ರಾಣಿ' (ಛಾಂ. 8.1.3)**

**ಇತ್ಯಾದಿನಾ ಆಕಾಶಸ್ಯ ಪ್ರತೀಯತೇ। ಸ ಚ ಆಕಾಶೋ ನ ವಿಷ್ಣುಃ।**

'ತಸ್ಯಾಂತೇ ಸುಷಿರಂ ಸೂಕ್ಷ್ಮಂ ತಸ್ಮಿನ್ ಸರ್ವಂ ಪ್ರತಿಷ್ಠಿತಮ್ ॥'
(ಮಹಾ.ನಾ.11) ಇತಿ ಶ್ರುತೇಃ ಇತಿ । ಅತ ಆಹ-

**ಓಂ ॥ ದಹರ ಉತ್ತರೇಭ್ಯಃ ॥ ಓಂ**

'ಯ ಆತ್ಮಾ ಅಪಹತಪಾಪ್ಮಾ ವಿಜರೋ ವಿಮೃತ್ಯುಃ ವಿಶೋಕೋಽವಿಜಿಘತ್ಸಃ,
ಅಪಿಪಾಸಃ, ಸತ್ಯಕಾಮಃ, ಸತ್ಯಸಂಕಲ್ಪಃ ಸೋಽನ್ವೇಷ್ಟವ್ಯಃ ಸ ವಿಜಿಜ್ಞಾಸಿತವ್ಯಃ'
(ಛಾಂ.8.7.3)

ಇತ್ಯಾದಿಭ್ಯಃ ಉತ್ತರೇಭ್ಯೋ ಗುಣೇಭ್ಯೋ ದಹರೇ ವಿಷ್ಣುರೇವ ।

'ಯೋಽಶನಾಯಾ ಪಿಪಾಸೇ ಶೋಕಂ ಮೋಹಂ ಜರಾಂ ಮೃತ್ಯುಂ ಅತ್ಯೇತಿ'
(ಬೃ.5.5)

'ಸ ಏಷ ಸರ್ವೇಭ್ಯಃ ಪಾಪ್ಮಭ್ಯಃ ಉದಿತಃ' ಇತ್ಯಾದಿನಾ ವಿಷ್ಣೋರೇವ ಹಿ ತೇ ಗುಣಾಃ ।

ನಿತ್ಯತೀರ್ಣಾಶನಾಯಾದಿಃ ಏಕ ಏವ ಹರಿಃ ಸ್ವತಃ ।
ಅಶನಾಯಾದಿಕಾನನ್ಯೇ ತತ್ ಪ್ರಸಾದಾತ್ ತರಂತಿ ಹಿ ॥

ಇತಿ ಪಾದ್ಮೇ ।

ಸಾಪೇಕ್ಷ-ನಿರಪೇಕ್ಷಯೋಶ್ಚ ನಿರಪೇಕ್ಷಂ ಸ್ವೀಕರ್ತವ್ಯಂ ।

ಸತ್ಯಕಾಮಃ ಪರೋ ನಾಸ್ತಿ ತಮೃತೇ ವಿಷ್ಣುಮವ್ಯಯಂ ।
ಸತ್ಯಕಾಮತ್ವಮನ್ಯೇಷಾಂ ಭವೇತ್ ತತ್ಕಾಮ್ಯಕಾಮಿತಾ ॥

ಇತಿ ಸ್ಕಾಂದೇ ॥ 14 ॥

ಹಿಂದೆ ಅಕ್ಷರಾಧಿಕರಣದಲ್ಲಿ ವಿಷ್ಣು ಚಂದ್ರ-ಸೂರ್ಯ-ಸ್ವರ್ಗ ಭೂಮಿಗಳಿಗೆ ಆಧಾರ ಎನ್ನಲಾಗಿದೆ. ಆ ಸೂರ್ಯ-ಚಂದ್ರಾದಿ ಆಧಾರತ್ವವು 'ಅಥ ಯದೇತಸ್ಮಿನ್...' ಇತ್ಯಾದಿ ಛಾಂದೋಗ್ಯಶ್ರುತಿಯಲ್ಲಿ ಆಕಾಶಕ್ಕೆ ತಿಳಿಯುತ್ತಿದೆ. ಅಲ್ಲಿ ಹೇಳಿದ ಆಕಾಶವಾದರೂ ವಿಷ್ಣು ಅಲ್ಲ. ನಾರಾಯಣೋಪನಿಷತ್ತಿನಲ್ಲಿ 'ಹೃದಯದಲ್ಲಿ ಸೂಕ್ಷ್ಮವಾದ ಆಕಾಶವಿದೆ (ಸುಷಿರಂ). ಅದರಲ್ಲಿ ಎಲ್ಲವೂ ನೆಲೆಗೊಂಡಿವೆ' ಎಂದು ಹೃದಯದಲ್ಲಿರುವ ಪ್ರಸಿದ್ಧವಾದ, ಜಡವಾದ ಆಕಾಶವೇ ಸರ್ವಾಧಾರ ಎನ್ನಲಾಗಿದೆ. ಹೀಗೆ ಆಕಾಶವೇ ಸೂರ್ಯಾದಿ ಸಕಲಕ್ಕೂ ಆಧಾರ ಎಂಬ ಆಕ್ಷೇಪ ಬಂದಾಗ ಸೂತ್ರಕಾರರು ಈ ಸೂತ್ರವನ್ನು ಹೇಳಿದ್ದಾರೆ.

'ಯ ಆತ್ಮಾ...' ಮುಂದಿನ ಈ ವಾಕ್ಯದಲ್ಲಿ ಹೇಳಲಾಗಿರುವ ಪಾಪಲೇಪರಾಹಿತ್ಯಾದಿ ಗುಣಗಳಿಂದ ದಹರಾಕಾಶದಲ್ಲಿರುವವನು ವಿಷ್ಣುವೇ ಎಂದು ತಿಳಿಯಬಹುದು.

'ವಿಷ್ಣುವು ಹಸಿವು-ನೀರಡಿಕೆಗಳನ್ನೂ ದುಃಖ-ಮೋಹ-ಮುಪ್ಪು-ಮರಣ ಈ

ಎಲ್ಲವನ್ನೂ ಗೆದ್ದಿದ್ದಾನೆ' 'ಇವನು ಎಲ್ಲ ಪಾಪಗಳಿಂದ ದೂರನು' ಈ ಮೊದಲಾದ ಪ್ರಮಾಣಗಳಿಂದ ಪಾಪರಾಹಿತ್ಯಾದಿ ಗುಣಗಳು ವಿಷ್ಣುವಿಗೆ ಮಾತ್ರ ಇವೆ ಎಂದು ತಿಳಿಯುತ್ತದೆ. ಪಾದ್ಮವಚನವೂ ಹೀಗಿದೆ- ''ಎಂದೆಂದಿಗೂ ಹಸಿವು ನೀರಡಿಕೆಗಳನ್ನು ಗೆದ್ದವನು ಹರಿಯೊಬ್ಬನೇ. ಅವನ ಅನುಗ್ರಹದಿಂದ ಇತರರೂ ಹಸಿವು ಮೊದಲಾದುವನ್ನು ಗೆಲ್ಲುತ್ತಾರೆ'

(ಹೀಗೆ ಶ್ರೀಹರಿಗೆ ಈ ಗುಣ ಸಹಜವಾದುದು. ಇತರರಿಗೆ ಶ್ರೀಹರಿಯ ಅಪೇಕ್ಷೆಯಿಂದ ಬರುವುದು) ಸಾಪೇಕ್ಷ-ನಿರಪೇಕ್ಷಗಳಲ್ಲಿ ನಿರಪೇಕ್ಷವಾದುದನ್ನೇ ತೆಗೆದುಕೊಳ್ಳಬೇಕು. (ಆದ್ದರಿಂದ ಛಾಂದೋಗ್ಯದಲ್ಲಿ ದಹರಸ್ಥನಿಗೆ ಹೇಳಿರುವ 'ಹಸಿವು ನೀರಡಿಕೆಗಳನ್ನು ಮೀರಿರುವ ಗುಣ' ಎಂದರೆ ನಿರಪೇಕ್ಷವಾದ ಅಂತಹ ಗುಣಗಳನ್ನೇ ಹೇಳಬೇಕು. ಆದ್ದರಿಂದ ಅವನೇ ದಹರಸ್ಥ.)

ಸ್ಕಾಂದದಲ್ಲಿ ಹೀಗಿದೆ- 'ನಾಶರಹಿತನಾದ ವಿಷ್ಣುವಿನ ಹೊರತು ಇತರರು ಯಾರೂ ಸತ್ಯಸಂಕಲ್ಪರಲ್ಲ. ಲಕ್ಷ್ಮ್ಯಾದಿಗಳಲ್ಲಿ ಹೇಳಲಾಗಿರುವ ಸತ್ಯಸಂಕಲ್ಪವೆಂದರೆ ವಿಷ್ಣುವಿನ ಸಂಕಲ್ಪಾನುಸಾರಿಯಾದ ಸಂಕಲ್ಪ.'' (ದಹರಸ್ಥನಿಗೆ ಸತ್ಯಸಂಕಲ್ಪತ್ವವನ್ನು ಹೇಳಲಾಗಿದೆ. ಮೇಲಿನ ಸ್ಕಾಂದವಚನದಿಂದ ಅದು ಇತರರಿಗಿಲ್ಲ. ಆದ್ದರಿಂದ ವಿಷ್ಣುವೇ ದಹರಸ್ಥ.)

**ವಿವರಣೆ : 1.** ಈ ಅಧಿಕರಣಕ್ಕೆ ದಹರಾಧಿಕರಣ ಎಂದು ಹೆಸರು. ದಹರ ಎಂದರೆ ಹೃದಯದಲ್ಲಿರುವ ಆಕಾಶ. ಆ ಆಕಾಶದಲ್ಲಿರುವ ವಹ್ನಿಮಂಡಲದಲ್ಲಿ ಪರಮಾತ್ಮ ಸನ್ನಿಹಿತನಾಗಿದ್ದಾನೆ.

ಈ ಅಧಿಕರಣದಲ್ಲಿ 'ಹೃತ್‌ಪದ್ಮಸ್ಥತ್ವ' ಧರ್ಮವನ್ನು ಸಮನ್ವಯ ಮಾಡಲಾಗಿದೆ. ಈ ಧರ್ಮವು ಬ್ರಹ್ಮ, ಆಕಾಶ, ಜೀವ ಈ ಮೂವರಿಗೂ ಸಂಬಂಧಿಸಿದೆ. 'ಯೋ ವೇದ ನಿಹಿತಂ ಗುಹಾಯಾಂ' ಎಂದು ಬ್ರಹ್ಮನೂ ಹೃದಯದಲ್ಲಿದ್ದಾನೆಂದು ತೈತ್ತಿರೀಯೋಪನಿಷತ್ತಿನಲ್ಲಿ ಉಲ್ಲೇಖವಿದೆ. 'ತಸ್ಯಾಂತೇ ಸುಷಿರಂ ಸೂಕ್ಷ್ಮಂ' ಎಂದು ಸುಷಿರಶಬ್ದದಿಂದ ಆಕಾಶವೂ ಹೃದಯಪದ್ಮದಲ್ಲಿದೆ ಎಂದು ಹೇಳಿದೆ. ''ಹೃದಿ ಹ್ಯೇಷ ಆತ್ಮಾ'' ಎಂದು ಜೀವನಿಗೂ ಹೃದಯಸ್ಥಾನದಲ್ಲಿ ಸ್ಥಿತಿ ತಿಳಿಯುತ್ತದೆ. ಹೀಗೆ ಈ ಧರ್ಮವು ಬ್ರಹ್ಮ ಮತ್ತು ಬ್ರಹ್ಮೇತರದಲ್ಲಿ ಪ್ರಸಿದ್ಧವಾಗಿ ಉಭಯತ್ರ ಪ್ರಸಿದ್ಧವೆನಿಸಿದೆ.

**2.** ಹೃತ್‌ಪದ್ಮದಲ್ಲಿರುವುದು ಆಕಾಶವಾದರೆ, ಅದೇ ಸ್ವರ್ಗ-ಪೃಥಿವೀ ಲೋಕಗಳಿಗೆ ಆಶ್ರಯವಾಗಿದೆ ಎಂದು ಇಲ್ಲಿ ಹೇಳಿರುವುದರಿಂದ ಅಕ್ಷರಾಧಿಕರಣದಲ್ಲಿ ಹೇಳಿದ ಸಿದ್ಧಾಂತಕ್ಕೆ ಚ್ಯುತಿ ಬಂದಂತಾಗುತ್ತದೆ. ಹೀಗೆ ಅಕ್ಷರಾಧಿಕರಣದೊಂದಿಗೆ ಈ ಅಧಿಕರಣಕ್ಕೆ ಸಂಗತಿಯನ್ನು ಭಾಷ್ಯದಲ್ಲಿ ಸೂಚಿಸಲಾಗಿದೆ. ಇದಲ್ಲದೆ ಸಮನ್ವಯಾಧಿಕರಣದೊಂದಿಗೂ ಈ ಅಧಿಕರಣಕ್ಕೆ ಸಂಗತಿ ಇದೆ.

**3.** 'ಅಥ ಯದಿದಮಸ್ಮಿನ್ ಬ್ರಹ್ಮಪುರೇ ದಹರಂ ಪುಂಡರೀಕಂ ವೇಶ್ಮ

ದಹರೋಽಸ್ಮಿನ್ ಅಂತರ ಆಕಾಶಃ। ತಸ್ಮಿನ್ ಯದಂತಃ ತದನ್ವೇಷ್ಟವ್ಯಂ, ತದ್ವಾವ ವಿಜಿಜ್ಞಾಸಿತವ್ಯಮ್ ಇತಿ। ತಂ ಚೇದ್ ಭ್ರೂಯುಃ ಯದಿದಮಸ್ಮಿನ್ ಬ್ರಹ್ಮಪುರೇ ದಹರಂ ಪುಂಡರೀಕಂ ವೇಶ್ಮ ದಹರೋಽಸ್ಮಿನ್ನಂತರ ಆಕಾಶಃ ಕಿಂ ತದತ್ರ ವಿದ್ಯತೇ ಯದನ್ವೇಷ್ಟವ್ಯಂ? ಯದ್ವಾವ ವಿಜಿಜ್ಞಾಸಿತವ್ಯಮಿತಿ? ಸ ಬ್ರೂಯಾತ್ ಯಾವಾನ್ವಾ ಅಯಮಾಕಾಶಃ ತಾವಾನೇಷೋ ಅಂತರ್ ಹೃದಯ ಆಕಾಶಃ।

ಉಭೇ ಅಸ್ಮಿನ್ ದ್ಯಾವಾಪೃಥಿವೀ ಅಂತರೇವ ಸಮಾಹಿತೇ।

ಉಭಾವಗ್ನಿಶ್ಚ ವಾಯುಶ್ಚ ಸೂರ್ಯಚಂದ್ರಮಾಸಾವುಭೌ ॥

ಛಾಂದ್ಯೋಗ್ಯೋಪನಿಷತ್ತಿನ ಎಂಟನೇ ಅಧ್ಯಾಯದಲ್ಲಿ ಬರುವ ಈ ವಾಕ್ಯ ಪ್ರಕೃತ ಅಧಿಕರಣದ ವಿಷಯವಾಕ್ಯ.

'ಈ ಶರೀರ ಬ್ರಹ್ಮನ ಪಟ್ಟಣ. ಅದರಲ್ಲಿ ಒಂದು ಪುಟ್ಟಕಮಲವಿದೆ. ಆದರಲ್ಲೊಂದು ಕಿರಿದಾದ ಆಕಾಶ. ಅದರೊಳಗೇನಿದೆಯೋ ಅದನ್ನು ಧ್ಯಾನಿಸಬೇಕು' 'ಈ ಬ್ರಹ್ಮಪಟ್ಟಣದಲ್ಲಿ ಪುಟ್ಟಕಮಲ. ಅದರಲ್ಲಿ ಚಿಕ್ಕ ಆಕಾಶ. ಅದರೊಳಗೆ ಧ್ಯೇಯವಾದ ವಸ್ತು ಯಾವುದು?'' ಎಂದು ಶಿಷ್ಯ ಕೇಳಿದರೆ 'ಈ ಹೊರಗಿನ ಆಕಾಶವೇನಿದೆಯೋ ಅಷ್ಟೇ ವಿಸ್ತಾರವಾದ ಆಕಾಶ ಹೃದಯದೊಳಗಿದೆ. ಅದರಲ್ಲಿ ಸ್ವರ್ಗ-ಪೃಥಿವೀಲೋಕಗಳೂ, ಅಗ್ನಿ-ವಾಯುಗಳೂ, ಸೂರ್ಯಚಂದ್ರರೂ ಇದ್ದಾರೆ' ಇದು ಶ್ರುತಿಗೆ ಆಪಾತತಃ ತೋರುವ ಅರ್ಥ.

**4. ಪೂರ್ವಪಕ್ಷ- ಅ.** ಹೃದಯಕಮಲದಲ್ಲಿರುವ ತತ್ತ್ವ ಭೂತಾಕಾಶ, ಬ್ರಹ್ಮನಲ್ಲ 'ದಹರೋಽಸ್ಮಿನ್ನಂತರ ಆಕಾಶಃ' ಎಂದು ಸ್ಪಷ್ಟವಾಗಿ ಆಕಾಶವನ್ನೇ ಹೃದಯದಲ್ಲಿದೆ (ಅಸ್ಮಿನ್) ಎಂದು ಹೇಳಲಾಗಿದೆ. ಮಹಾನಾರಾಯಣೋಪನಿಷತ್ತಿನಲ್ಲೂ-

ತಸ್ಯಾಂತೇ ಸುಷಿರಂ ಸೂಕ್ಷ್ಮಂ ತಸ್ಮಿನ್ ಸರ್ವಂ ಪ್ರತಿಷ್ಠಿತಮ್ ॥

ಎಂದು ಹೃದಯದಲ್ಲಿ ಸುಷಿರ- ಛಿದ್ರ- ಅರ್ಥಾತ್ ಆಕಾಶವಿದೆ, ಎಂದು ಹೇಳಲಾಗಿದೆ. ಅಲ್ಲಿ 'ಸುಷಿರ' ಪದಕ್ಕೆ ಬ್ರಹ್ಮ ಎಂದು ಅರ್ಥವನ್ನು ಹೇಳಲಾಗದು. ಏಕೆಂದರೆ ಮುಂದೆ,

ತಸ್ಯ ಮಧ್ಯೇ ವಹ್ನಿಶಿಖಾ ಅಣೀಯೋರ್ಧ್ವಾ ವ್ಯವಸ್ಥಿತಃ।

ತಸ್ಯಾ ಶಿಖಾಯಾ ಮಧ್ಯೇ ಪರಮಾತ್ಮಾ ವ್ಯವಸ್ಥಿತಃ॥

ಎಂದು ಹೃದಯಾಕಾಶದ ಮಧ್ಯದಲ್ಲಿರುವ ಅಗ್ನಿಯ ಮೇಲ್ಭಾಗದಲ್ಲಿ ಪರಮಾತ್ಮನಿದ್ದಾನೆ ಎಂದಿದೆ. ಹೀಗೆ ಪರಮಾತ್ಮನ ಉಲ್ಲೇಖವನ್ನು ಮುಂದೆ ಮಾಡಿರುವುದರಿಂದ ಅವನಿಗೆ ಆಧಾರವಾಗಿ ಹೇಳಲ್ಪಟ್ಟ ಆಕಾಶ ಅಥವಾ ಸುಷಿರ ಪರಮಾತ್ಮನಲ್ಲ, ಆದರೆ, ಅಂತಹ ಆಕಾಶವನ್ನೇ 'ಉಭೇ ಅಸ್ಮಿನ್ ದ್ಯಾವಾಪೃಥಿವೀ' ಎಂದು ಹೇಳಿರುವುದರಿಂದ ಸ್ವರ್ಗಾದಿ ಲೋಕಾಧಾರ ಆಕಾಶವೆಂದಂತಾಯಿತು. ಇದು ಅಕ್ಷರಾಧಿಕರಣದ ಸಿದ್ಧಾಂತಕ್ಕೆ ವಿರುದ್ಧ.

**ಆ.** ಅಥವಾ; ಹೀಗೂ ಪೂರ್ವಪಕ್ಷ ಮಾಡಬಹುದು- ಶಿಷ್ಯನ ಪ್ರಶ್ನೆಯಲ್ಲಿ

'ಯಾವಾನ್ವಾ ಅಯಂ ಆಕಾಶಃ' ಎಂಬ ವಾಕ್ಯದಲ್ಲಿರುವ ಆಕಾಶಪದಕ್ಕೆ ಏನು ಅರ್ಥ? ವಿಷ್ಣು ಎನ್ನಲಾಗದು. 'ಕಿಂ ತದತ್ರ ವಿದ್ಯತೇ' ಎಂದು ಶಿಷ್ಯ 'ಹೃದಪದ್ಮದಲ್ಲಿರುವ ದಹರಾಕಾಶದಲ್ಲಿ ಏನಿದೆ?' ಎಂದು ಕೇಳಿದಾಗ 'ಬ್ರಹ್ಮ ವಿದ್ಯತೇ' ಎಂದು ಪರಿಹಾರವನ್ನು ಹೇಳಬೇಕು. ಅದನ್ನು ಬಿಟ್ಟು 'ಹೊರಗಿನ ಆಕಾಶದಷ್ಟೇ ವಿಶಾಲವಾದುದು ಒಳಗಿನ ಆಕಾಶ' ಎಂದು ಆಧಾರವಾದ ಆಕಾಶದ ವರ್ಣನೆ ಅಸಂಗತ. ಆಕಾಶಶಬ್ದಕ್ಕೆ ಭೂತಾಕಾಶ ಎಂದು ಅರ್ಥಮಾಡಿದರೆ 'ಉಭೇ ಅಸ್ಮಿನ್ ದ್ಯಾವಾಪೃಥಿವೀ' ಎಂದು ಹೇಳಿದ ಉತ್ತರ ಸಮಂಜಸವಾಗುತ್ತದೆ- 'ಆಕಾಶದಲ್ಲಿ ಸ್ವರ್ಗಾದಿ ಲೋಕಗಳೂ, ಸೂರ್ಯಚಂದ್ರರೂ ಇದ್ದಾರೆ' ಎಂದು ಉತ್ತರದ ಅಭಿಪ್ರಾಯ. ಆ ಪುಟ್ಟ ಆಕಾಶದಲ್ಲಿ ಇಷ್ಟೆಲ್ಲ ಇರುವುದು ಹೇಗೆ? ಎಂಬ ಜಿಜ್ಞಾಸೆಗೆ ಉತ್ತರವಾಗಿ 'ಯಾವಾನ್ವಾ ಅಯಂ ಆಕಾಶಃ' ಎಂದು ಆಧಾರವಾದ ಆಕಾಶದ ಮಹಿಮೆಯನ್ನು ಹೇಳುವುದೂ ಸಂಗತವಾಗುತ್ತದೆ. ಆದ್ದರಿಂದ ಹೃಕ್ ಪದ್ಮಸ್ಥವಾದುದು ಭೂತಾಕಾಶ. ಅದನ್ನೇ 'ಅನ್ವೇಷ್ಟವ್ಯಃ ವಿಜಿಜ್ಞಾಸಿತವ್ಯಃ' ಎಂದು ಹೇಳಿರುವುದರಿಂದ ಅದೇ ಜಿಜ್ಞಾಸ್ಯ, ಬ್ರಹ್ಮನಲ್ಲ. ಆದ್ದರಿಂದ ಮೊದಲ ಸೂತ್ರದಲ್ಲಿ ಬ್ರಹ್ಮನ ಜಿಜ್ಞಾಸೆ ನಡೆಸಬೇಕು ಎಂದಿರುವುದು ಸರಿಯಲ್ಲ.

ಈ ಎರಡೂ ಪೂರ್ವಪಕ್ಷಗಳಲ್ಲಿ 'ತಸ್ಮಿನ್ ಯದಂತಃ' ಎಂಬಲ್ಲಿ ತತ್‌ಪದಕ್ಕೆ 'ಹೃದಯಪದ್ಮ' ಎಂದು ಅರ್ಥ. ಹೊರತು ಹೃದಯಸ್ಥ ಆಕಾಶ ಎಂದು ಅರ್ಥವಲ್ಲ. ಹೃದಯಪದ್ಮದಲ್ಲಿ ಇರುವುದನ್ನು ಉಪಾಸನೆ ಮಾಡಬೇಕು ಎಂದು ಭಾವಾರ್ಥ.

ಇ. ಅಥವಾ 'ತಸ್ಮಿನ್ ಯದಂತಃ' ಎಂಬಲ್ಲಿ ತಸ್ಮಿನ್ ಎಂದರೆ 'ಹೃದಯಪದ್ಮದಲ್ಲಿರುವ ಆಕಾಶದಲ್ಲಿ' ಎಂದೇ ಅರ್ಥ. ಅಂತಹ ಆಕಾಶದಲ್ಲಿರುವವನು ಜೀವನಾಗಬಹುದು. ಇದೇ ಅಧ್ಯಾಯದಲ್ಲಿ ''ಏಷ ಸಂಪ್ರಸಾದೋ ಅಸ್ಮಾತ್ ಶರೀರಾತ್ ಸಮುತ್ಥಾಯ ಪರಂ ಜ್ಯೋತಿರುಪಸಂಪದ್ಯ ಸ್ವೇನ ರೂಪೇಣ ಅಭಿನಿಷ್ಪದ್ಯತೇ। ಏಷ ಆತ್ಮಾ' ಎಂದು ಸಂಪ್ರಸಾದ ಶಬ್ದದಿಂದ ಜೀವನನ್ನು ಉಲ್ಲೇಖಿಸಿ ಅವನಿಗೆ ಈ ದೇಹಪರಿತ್ಯಾಗ ಮೋಕ್ಷಗಳನ್ನು ಹೇಳಿ 'ಏಷ ಆತ್ಮಾ' ಎಂದು ಅವನನ್ನು ಪರಿಚಯಿಸಲಾಗಿದೆ. ಅಲ್ಲಿ 'ಏಷಃ' ಎಂದು ಹಿಂದೆ 'ಯ ಆತ್ಮಾ ಅಪಹತಪಾಪ್ಮಾ' ಹೀಗೆ ಹೃತ್ಪದ್ಮಸ್ಥನನ್ನಾಗಿ ಹೇಳಿರುವ ಆತ್ಮನನ್ನೇ ಪರಾಮರ್ಶ ಮಾಡಲಾಗಿದೆ. ಇದರಿಂದ ಜೀವಾತ್ಮನೂ ಹೃತ್‌ಪದ್ಮಸ್ಥನಾಗಬಹುದು ಎಂದು ತಿಳಿಯುತ್ತದೆ.

5. ಮೊದಲ ಎರಡು ಪೂರ್ವಪಕ್ಷಗಳಂತೆ ಹೃತ್ ಪದ್ಮಸ್ಥವಾದುದು ಆಕಾಶವಾದರೂ ಆ ಆಕಾಶದಲ್ಲಿ ಇರುವವನು ವಿಷ್ಣು ಏಕಾಗಬಾರದು? 'ತಸ್ಮಿನ್ ಯದಂತಃ ತದುಪಾಸಿತವ್ಯಂ' ಎಂದು ಹೃತ್ಪದ್ಮಸ್ಥ ಆಕಾಶಗತವಾದ ತತ್ತ್ವವನ್ನೇ ಉಪಾಸ್ಯವಾಗಿ ಹೇಳಲಾಗಿದೆಯಲ್ಲವೆ?'' ಎನ್ನುವ ಆಕ್ಷೇಪ ಸರಿಯಲ್ಲ. ಹೃತ್‌ಪದ್ಮಸ್ಥ ಆಕಾಶದಲ್ಲಿ ಬ್ರಹ್ಮನಿದ್ದರೆ 'ಕಿಂ ತದತ್ರ ವಿದ್ಯತೇ' ಎಂಬ ಪ್ರಶ್ನೆಗೆ 'ಬ್ರಹ್ಮ ವಿದ್ಯತೇ' ಎಂದು ನೇರವಾಗಿ ಉತ್ತರಿಸಬೇಕು. ಅದನ್ನು ಬಿಟ್ಟು

'ಯಾವಾನ್ವಾ ಅಯಂ ಆಕಾಶಃ' ಎಂದು ಅಧಿಕರಣವಾದ ಆಕಾಶದ ವರ್ಣನೆ ಅಸಮಂಜಸ. ಭೂತಾಕಾಶವಾದಾಗ ಮಾತ್ರ ಅಧಿಕರಣವಾದ ಅದನ್ನು ವರ್ಣಿಸಿ ಅದು ಚಿಕ್ಕದಾದರೂ ಬಾಹ್ಯಾಕಾಶದಂತೆ ಅದೂ ಚಂದ್ರಾದಿಗಳಿಗೆ ಆಧಾರ ಎಂದು ಹೇಳುವುದು ಸಮಂಜಸವಾಗುತ್ತದೆ. 'ಕಿಂ ತದತ್ರ ವಿದ್ಯತೇ' ಎಂಬ ಪ್ರಶ್ನೆಗೆ 'ಉಭೇ ಅಸ್ಮಿನ್ ದ್ಯಾವಾ ಪೃಥಿವೀ' ಎಂಬ ಉತ್ತರವೂ ದೊರೆಯುತ್ತದೆ. ಆದ್ದರಿಂದ ಹೃದಯಸ್ಥ ಆಕಾಶದಲ್ಲಿ ವಿಷ್ಣು ಧ್ಯೇಯನಾಗಿದ್ದಾನೆ ಎಂದೂ ಈ ಪ್ರಕರಣದಲ್ಲಿ ವಿವಕ್ಷಿತವಲ್ಲ. ಇಷ್ಟೇ ಅಲ್ಲದೆ ನಾರಾಯಣೋಪನಿಷತ್ತಿನಲ್ಲಿ 'ತಸ್ಯಾಂತೇ ಸುಷಿರಂ ಸೂಕ್ಷ್ಮಂ ತಸ್ಮಿನ್ ಸರ್ವಂ ಪ್ರತಿಷ್ಠಿತಂ' ಎಂದು ನೇರವಾಗಿ ಸುಷಿರವೇ ಸರ್ವಾಧಾರ ಎಂದಿದೆ. ಸುಷಿರವೆಂದರೆ ಆಕಾಶ. ಅದಕ್ಕೆ ವಿರುದ್ಧವಾಗಿ ಇಲ್ಲಿ ಆಕಾಶಸ್ಥ ವಿಷ್ಣು ಸರ್ವಾಧಾರ ಎಂದು ಹೇಳಬಾರದು.

**6. ಸಿದ್ಧಾಂತ :** ಹೃದಯಕಮಲದಲ್ಲಿರುವ ದಹರಾಕಾಶದಲ್ಲಿ (ಅಲ್ಪಾಕಾಶ) ಇರುವ ಆತ್ಮನನ್ನು ಉಪನಿಷತ್ತು 'ಯ ಆತ್ಮಾ ಅಪಹತಪಾಪ್ಮಾ ವಿಜರಃ ವಿಮೃತ್ಯುಃ' ಎಂದು ಮುಂತಾಗಿ ಪ್ರಶಂಸೆ ಮಾಡಿದೆ. ಅಲ್ಲಿ ಹೇಳಿರುವ ಸತ್ಯಸಂಕಲ್ಪತ್ವ, ಅಪಹತಪಾಪ್ಮತ್ವ ಎಂಬ ವಿಶೇಷಗುಣಗಳು ಪರಮಾತ್ಮನಿಗೇ ಮೀಸಲಾದವುಗಳು. ಲಕ್ಷ್ಮೀದೇವಿಯ ಸಂಕಲ್ಪವೂ ಪರಮಾತ್ಮನ ಸಂಕಲ್ಪಕ್ಕೆ ಅನುಸಾರವಾಗಿರುವುದರಿಂದಷ್ಟೇ ಅವಳೂ ಸತ್ಯಸಂಕಲ್ಪಳಾಗಿದ್ದಾಳೆ. ಇತರ ಬ್ರಹ್ಮಾದಿ ಜೀವರಂತೂ ಸತ್ಯಸಂಕಲ್ಪರಲ್ಲ. ಅವರು ಬಯಸಿದ್ದೆಲ್ಲ ಕೈಗೂಡುವುದಿಲ್ಲ. ಆದ್ದರಿಂದ ಇಂತಹ ಅಸಾಧಾರಣಗುಣಗಳನ್ನು ಹೇಳಿರುವುದರಿಂದ ಹೃದಯಾಕಾಶಸ್ಥನಾದವನು ವಿಷ್ಣು. ಇದಕ್ಕೆ ಬಾಧಕವಾದ ಪೂರ್ವಪಕ್ಷದ ಆಕ್ಷೇಪಗಳಿಗೆ 'ಪ್ರಸಿದ್ಧೇಶ್ಚ' ಎಂಬ ಈ ಅಧಿಕರಣದ ನಾಲ್ಕನೆಯ ಸೂತ್ರದಲ್ಲಿ ಪರಿಹಾರ ನೀಡಲಾಗಿದೆ.

ದಹರಸ್ಥನಿಗೆ ಇಲ್ಲಿ ಹೇಳಿದ ಮತ್ತೊಂದು ಗುಣ- ಅಪಹತಪಾಪ್ಮತ್ವ- ಪಾಪರಾಹಿತ್ಯ. ಇದು ಜೀವನಿಗೆ ಮುಕ್ತ್ಯವಸ್ಥೆಯಲ್ಲಿ ಇದೆ. ಆದರೆ, ಆಗ ಅವನಿಗೆ ಶರೀರವೇ ಇಲ್ಲದಿರುವುದರಿಂದ ಹೃತ್‌ಪದ್ಮಸ್ಥತ್ವ ಇರಲು ಸಾಧ್ಯವಿಲ್ಲ. ಸಂಸಾರಾವಸ್ಥೆಯಲ್ಲಿ ಹೃತ್ ಪದ್ಮಸ್ಥತ್ವ ಇದ್ದರೂ ಅಪಹತಪಾಪ್ಮತ್ವ ಇಲ್ಲ. ಇನ್ನು ಜಡವಸ್ತುವಾದ ಆಕಾಶಕ್ಕೆ ಪಾಪದ ಪ್ರಸಕ್ತಿಯೇ ಇಲ್ಲ. ಹೀಗಾಗಿ 'ಪಾಪರಹಿತ' ಎಂಬ ವಿಶೇಷಣ ಅದಕ್ಕೆ ಹೊಂದುವುದಿಲ್ಲ. ಬ್ರಹ್ಮನಾದರೆ, ಚೇತನನಾದುದರಿಂದ ಜೀವನಂತೆ ಅವನಲ್ಲೂ ಪಾಪದ ಸಂದೇಹ ಬರಬಹುದು. ಅದನ್ನು 'ಅಪಹತಪಾಪ್ಮಾ' ಎಂದು ನಿವಾರಣೆ ಮಾಡುವುದು ಸಂಗತವಾಗುತ್ತದೆ. ಅಲ್ಲದೆ ಪರಮಾತ್ಮನಿಗೆ ಈ ಗುಣಗಳು ಅನ್ಯರ ಅನುಗ್ರಹದಿಂದ ಬಂದುದಲ್ಲ. ಜೀವರಿಗೆ ಪರಮಾತ್ಮನ ಅನುಗ್ರಹದಿಂದ ಬಂದಿವೆ. ಹೀಗಾಗಿ ಜೀವನ ಆ ಗುಣಗಳು ಸಾಪೇಕ್ಷ, ಪರಮಾತ್ಮನ ಗುಣ ನಿರಪೇಕ್ಷ. ಸಾಪೇಕ್ಷ ನಿರಪೇಕ್ಷಗಳಲ್ಲಿ ನಿರಪೇಕ್ಷವೇ ಪ್ರಧಾನ. ಆದ್ದರಿಂದ ಅಂತಹ ಗುಣಗಳಿಂದ ಪರಮಾತ್ಮನೇ ಇಲ್ಲಿ ಪ್ರಸಕ್ತ.

7. 'ಕಿಂ ತದತ್ರ ವಿದ್ಯತೇ' ಎಂಬ ಶಿಷ್ಯನ ಪ್ರಶ್ನೆಗೆ 'ಆ ಆಕಾಶದಲ್ಲಿ ಏನಿದೆ?' ಎಂದು

ಅರ್ಥವಲ್ಲ. ಹೃದಯಕಮಲವನ್ನು 'ಬ್ರಹ್ಮಪುರ' ಎಂದು ಕರೆದಿರುವುದರಿಂದಲೇ ಕಮಲದಲ್ಲಿ ಏನಿದೆ ಎಂದು ಶಿಷ್ಯ ತಿಳಿಯುತ್ತಾನೆ. ಆದ್ದರಿಂದ 'ಕಿಂ ತದತ್ರ ವಿದ್ಯತೇ' ಎಂದರೆ 'ಅಲ್ಲಿರುವ ಬ್ರಹ್ಮ ಎಂತಹವನು?' ಎಂದು ಅಭಿಪ್ರಾಯ. ಅದಕ್ಕೆ ಉತ್ತರ -

'ಯಾವಾನ್ವಾಯಮಾಕಾಶಃ ತಾವಾನೇಷೋಽಂತರ್ಹೃದಯ ಆಕಾಶಃ।
ಉಭೇ ಅಸ್ಮಿನ್ ದ್ಯಾವಾಪೃಥಿವೀ ಅಂತರೇವ ಸಮಾಹಿತೇ।'

'ವಿಸ್ತಾರವಾದ ಈ ಆಕಾಶವೆಲ್ಲವೂ ಆ ಹೃದಯಸ್ಥನಾದ ಬ್ರಹ್ಮನೊಳಗಿದೆ. ಸ್ವರ್ಗಲೋಕ-ಪೃಥಿವೀಲೋಕಗಳೂ ಅವನೊಳಗಿವೆ'. ಇದು ಆ ಬ್ರಹ್ಮನ ಮಹಿಮೆ.

ಪ್ರಶ್ನೆಯಲ್ಲಿರುವ 'ಕಿಂ' (ಎಂತಹುದು) ಎಂಬ ಪ್ರಥಮಾಂತ ಪದಕ್ಕೆ 'ಅಸ್ಮಿನ್' ಎಂದು ಸಪ್ತಮ್ಯಂತವಾದ ಉತ್ತರ.

ಅಥವಾ, 'ಕಿಂ ತದತ್ರ' ಎಂಬ ಪ್ರಶ್ನೆಗೆ 'ಹೃದಯಾಕಾಶದಲ್ಲಿ ಏನಿದೆ?' ಎಂದೇ ಅರ್ಥ. 'ಅಯಂ ಆಕಾಶಃ' ಎಂದು ಪ್ರಥಮಾಂತವಾದ ಉತ್ತರ. ಆದರೆ ಆಕಾಶ ಎಂದರೆ ಭೂತಾಕಾಶವಲ್ಲ, ವಿಷ್ಣು. ಹೃದಯದ ಹೊರಗೆ ಅವನು ಎಷ್ಟು ವ್ಯಾಪ್ತನೋ ಒಳಗೂ ಅಷ್ಟೇ ವ್ಯಾಪಿಸಿದ್ದಾನೆ ಎಂದು ಅರ್ಥ. 'ಅವನಲ್ಲಿ ದ್ಯಾವಾಪೃಥಿವಿಗಳು ಇವೆ' ಎಂದು ಮುಂತಾದ ವಿವರಗಳನ್ನು ಅವನ ಮಹಿಮೆಯನ್ನು ತಿಳಿಸಲು ಹೇಳಲಾಗಿದೆ. 'ಈ ಮನೆಯಲ್ಲಿ ಯಾರಿದ್ದಾರೆ' ಎಂದಿಷ್ಟೇ ಪ್ರಶ್ನೆ ಮಾಡಿದರೂ 'ಇಲ್ಲಿ ರಾಮನಿದ್ದಾನೆ. ಅವನು ಇಂತಹವನು' ಎನ್ನುವುದಿಲ್ಲವೆ? ಅದರಂತೆ.

ಈಗ ಪ್ರಥಮಾಂತ ಪ್ರಶ್ನೆಗೆ ಪ್ರಥಮಾಂತವಾದ ಉತ್ತರ ಸರಿಹೊಂದುತ್ತದೆ.

**8. ಶ್ರುತ್ಯರ್ಥ :** 'ಯ ಆತ್ಮಾ ಅಪಹತಪಾಪ್ಮಾ...' ಈ ಶ್ರುತಿಯಲ್ಲಿ 'ಅವಿಜಿಘತ್ಸಃ' ಎಂದರೆ 'ವಿಶೇಷೇಣ ಜಗ್ಧುಂ=ಭಕ್ಷಿತುಂ ಇಚ್ಛಾ- ವಿಜಿಘತ್ಸಾ' 'ತಿನ್ನುವ ಬಯಕೆಯೇ ಜಿಘತ್ಸಾ'. ಅದು ಆಪ್ತಕಾಮನಾದ ಬ್ರಹ್ಮನಿಗೆ ಇಲ್ಲ. ಆದ್ದರಿಂದ ಅವನು 'ಅವಿಜಿಘತ್ಸಃ' ॥ ಸೂತ್ರ 14 ॥

## ಓಂ ॥ ಗತಿ ಶಬ್ದಾಭ್ಯಾಂ ತಥಾ ಹಿ ದೃಷ್ಟಂ ಲಿಂಗಂ ಚ ॥ ಓಂ

**'ಅಹರಹಃ ಗಚ್ಛಂತ್ಯ ಏತಂ ಬ್ರಹ್ಮಲೋಕಂ ನ ವಿಂದಂತಿ' (ಛಾ.8.3.2)**

**ಇತಿ ಸುಪ್ತಸ್ಯ ತದ್ಗತಿಃ ಬ್ರಹ್ಮಶಬ್ದಶ್ಚ ಉಚ್ಯತೇ।**

**'ಸತಾ ಸೋಮ್ಯ ತದಾ ಸಂಪನ್ನೋ ಭವತಿ' (ಛಾಂ. 6.8.1)**

**ಇತಿ ಶ್ರುತೇಃ ತಂ ಹಿ ಸುಪ್ತೋ ಗಚ್ಛತಿ।**

**'ಅರಶ್ಚ ಹ ವೈ ಣ್ಯಶ್ಚ ಅರ್ಣವೌ ಬ್ರಹ್ಮಲೋಕೇ' (ಛಾಂ.8.5.3)**

**ಇತಿ ಲಿಂಗಂ ಚ ತಥಾ ದೃಷ್ಟಮ್।**

**ಅರಶ್ಚವೈ ಣ್ಯಶ್ಚ ಸುಧಾಸಮುದ್ರೌ ತತ್ರೈವ ಸರ್ವಾಭಿಮತಪ್ರದೌ ದ್ವೌ।**
**ಇತ್ಯಾದಿನಾ ತಸ್ಯೈವ ಹಿ ತಲ್ಲಕ್ಷಣತ್ವೇನ ಉಚ್ಯತೇ ॥ 15 ॥**

'ಜೀವರು ಪ್ರತಿದಿನವೂ (ನಿದ್ರಾಕಾಲದಲ್ಲಿ) ಈ ಬ್ರಹ್ಮಲೋಕಕ್ಕೆ ಹೋಗುತ್ತಿದ್ದರೂ ಅದನ್ನು ತಿಳಿಯಲಾರರು' ಹೀಗೆ ಸುಪ್ತರಿಂದ ಪ್ರಾಪ್ತಿ ಮತ್ತು ಬ್ರಹ್ಮಶಬ್ದವನ್ನು ಹೇಳಲಾಗಿದೆ. 'ಜೀವನು ನಿದ್ರಾಕಾಲದಲ್ಲಿ ಸತ್ ಶಬ್ದವಾಚ್ಯನಾದ ಬ್ರಹ್ಮನೊಂದಿಗೆ ಸೇರುತ್ತಾನೆ' ಎಂದು ಶ್ರುತಿ ಇರುವುದರಿಂದ ಸುಪ್ತನಾದ ಜೀವ ಅವನೆಡೆಗೆ ತಾನೇ ತೆರಳುತ್ತಾನೆ. 'ಬ್ರಹ್ಮಲೋಕದಲ್ಲಿ ಅರ ಮತ್ತು ಣ್ಯ ಎಂಬ ಎರಡು ಕ್ಷೀರಸಾಗರಗಳಿವೆ' ಎಂದಿರುವುದರಿಂದ ಬ್ರಹ್ಮಲೋಕರೂಪ ಅಸಾಧಾರಣ ಧರ್ಮವೂ, ಹೃತ್ಪದ್ಮಸ್ಥನು ಬ್ರಹ್ಮ ಎಂದು ನಿಶ್ಚಯಿಸಲು ಕಾರಣವಾಗುತ್ತದೆ. ಅರ ಮತ್ತು ಣ್ಯ ಎಂಬ ಸರ್ವಾಭೀಷ್ಟದಾಯಕವಾದ ಎರಡು ಕ್ಷೀರಸಾಗರಗಳು ಆ ವಿಷ್ಣುಲೋಕದಲ್ಲೇ ಇವೆ. ಈ ಮೊದಲಾದ ಪ್ರಮಾಣಗಳಿಂದ ಕ್ಷೀರಸಾಗರವುಳ್ಳ ಲೋಕವು ವಿಷ್ಣುವಿನದೇ ಲಕ್ಷಣ ಎಂದು ತಿಳಿಯುತ್ತದೆ.

**ವಿವರಣೆ : 1.** ಹೃದಯಕಮಲದಲ್ಲಿ ಇರುವವನು ಬ್ರಹ್ಮ ಎನ್ನಲು ಇಲ್ಲಿ ಮೂರು ಕಾರಣಗಳನ್ನು ಹೇಳಲಾಗಿದೆ.

**ಅ.** ಸುಪ್ತಪ್ರಾಪ್ಯತ್ವ - ಜೀವನಿಗೆ ಎಚ್ಚರ, ಸ್ವಪ್ನ, ನಿದ್ರೆ ಎಂದು ಮೂರು ಅವಸ್ಥೆಗಳಿವೆ. ಮೂರೂ ಅವಸ್ಥೆಗಳಲ್ಲೂ ಅವನು ಒಂದೊಂದು ಭಗವದ್ರೂಪದ ಜೊತೆಯಲ್ಲಿ ಇರುತ್ತಾನೆ. ನಿದ್ರಾವಸ್ಥೆಯಲ್ಲಿ ಅವನು ಸೇರುವ ರೂಪ ಪ್ರಾಜ್ಞನಾಮಕನಾದ ಪರಮಾತ್ಮ. ಆಗ ಹೃದಯಕಮಲದಲ್ಲಿರುವ ಆ ರೂಪದೊಂದಿಗೆ ಅವನು ಪ್ರಪಂಚವನ್ನು ಮರೆತು ಇರುತ್ತಾನೆ. ಪ್ರಾಜ್ಞನ ತಾಣ ಹೃದಯಕಮಲ. ಆದ್ದರಿಂದಾಗಿಯೇ ಹೃದಯಕ್ಕೆ ಬ್ರಹ್ಮಪುರ ಎಂದು ಹೆಸರು. ಹೀಗೆ ಸುಪ್ತನಿಂದ ಪ್ರಾಪ್ತಿಯನ್ನು ಹೃದಯಸ್ಥನಿಗೆ ಹೇಳಿರುವುದರಿಂದ ಹೃದಯಸ್ಥ ಪರಬ್ರಹ್ಮ.

**ಆ.** ಹೃದಯಕಮಲವನ್ನು ಬ್ರಹ್ಮಲೋಕ ಎಂದು ಇಲ್ಲಿ ಕರೆಯಲಾಗಿದೆ. ಬ್ರಹ್ಮನಿರುವ ಲೋಕ ಬ್ರಹ್ಮಲೋಕ. ಇದರಿಂದ ಹೃದಯಸ್ಥನಾದವನು ಬ್ರಹ್ಮಪದದಿಂದ ವಾಚ್ಯನೆಂದು ಹೇಳಿದಂತಾಯಿತು. ಆದ್ದರಿಂದ ಅವನು ಪರಮಾತ್ಮ. ಅಥವಾ ಬ್ರಹ್ಮನೇ ಸರ್ವಾಶ್ರಯನಾದುದರಿಂದ ಲೋಕನೆನಿಸಿದ್ದಾನೆ. ಹೀಗೆ ಬ್ರಹ್ಮಲೋಕ ಎಂಬ ಪದ ಹೃತ್‌ಪದ್ಮಸ್ಥನಿಗೇ ಅನ್ವಯಿಸುತ್ತದೆ.

**ಇ.** ಅರ ಮತ್ತು ಣ್ಯ ಎಂಬ ಎರಡು ಕ್ಷೀರಸಾಗರಗಳಿರುವ ಲೋಕ ಬ್ರಹ್ಮಲೋಕ ಎಂದಿದೆ ಉಪನಿಷತ್ತು. ಇದರಿಂದ 'ಬ್ರಹ್ಮಲೋಕ' ಎಂಬ ಶಬ್ದ ಬ್ರಹ್ಮನ ವಾಸಸ್ಥಾನದ ಹೆಸರು ಎಂದು ತಿಳಿಯುತ್ತದೆ. ಅಂತಹ ನಾಮವನ್ನು ಪ್ರಕೃತ ಹೃದಯಕಮಲಕ್ಕೆ ಇಡಲಾಗಿದೆ. ಇದರಿಂದ ಆ ಸ್ಥಾನದಲ್ಲಿರುವವನು ಬ್ರಹ್ಮನೆಂದು ತಿಳಿಯುತ್ತದೆ. ಹೀಗೆ 'ಅರ ಮತ್ತು ಣ್ಯ ಎಂಬ ಕ್ಷೀರಸಮುದ್ರವುಳ್ಳ ಲೋಕವಾಸಿಯಾದವನು ಹೃದಯಸ್ಥ' ಎಂದು ತಿಳಿಯುವುದರಿಂದ ಹೃದಯಸ್ಥನಾದವನು ವಿಷ್ಣು.

**2.** ಸೂತ್ರದಲ್ಲಿರುವ ಗತಿ ಮತ್ತು ಶಬ್ದಗಳು ಸಾಕ್ಷಾತ್ ವಿಷ್ಣುತ್ವ–ಸಾಧಕವನ್ನು ಹೇಳುತ್ತದೆ. ಗತಿ ಎಂದರೆ ಪ್ರಾಪ್ತಿ-ಸುಪ್ತಜೀವರಿಂದ ಪ್ರಾಪ್ತಿ. ಶಬ್ದವೆಂದರೆ ಬ್ರಹ್ಮನೆಂಬ ಹೆಸರು. ಅರಣ್ಯಾಶ್ರಯಲೋಕವತ್ವ ಲಿಂಗ ಮೂರನೆಯ ಸಾಧಕ. ಹಿಂದಿನ ಎರಡು ಕಾರಣಗಳಂತೆ ಇದು ಸಾಕ್ಷಾತ್ ವಿಷ್ಣುತ್ವಸಾಧಕವಲ್ಲ. ಅರ ಮತ್ತು ಣ್ಯ ಎಂಬ ಎರಡು ಸಮುದ್ರಗಳಿರುವುದರಿಂದ ಬ್ರಹ್ಮಲೋಕಪದವು ವಿಷ್ಣುಲೋಕಕ್ಕೆ ವಾಚಕ ಎಂದು ನಿರ್ಧರಿಸಿ ಅಂತಹ ಪದವನ್ನು ಹೃದಯಪದ್ಮದಲ್ಲಿ ಪ್ರಯೋಗಿಸಿರುವುದರಿಂದ ಅದರೊಳಗಿರುವವನು ವಿಷ್ಣು ಎಂದು ನಿಶ್ಚಯಿಸಬೇಕು. ಅದಕ್ಕಾಗಿ ಸೂತ್ರಕಾರರು 'ಗತಿಶಬ್ದಲಿಂಗೇಭ್ಯಃ' ಎಂದು ಒಂದೇ ಪದದ ಸೂತ್ರವನ್ನು ರಚಿಸದೆ 'ಗತಿಶಬ್ದಾಭ್ಯಾಂ ಲಿಂಗಂ ಚ' ಎಂದು ಭಿನ್ನಪದಗಳನ್ನು ಸೂತ್ರದಲ್ಲಿ ಬಳಸಿದ್ದಾರೆ.

**3.** ಸೂತ್ರದಲ್ಲಿರುವ 'ತಥಾ' ಎಂಬ ಶಬ್ದ ಉಪಮಾರ್ಥಕ. 'ಹೇಗೆ ಗತಿ ಮತ್ತು ಶಬ್ದಗಳು ವಿಷ್ಣು ಎಂಬ ನಿಶ್ಚಯಕ್ಕೆ ಕಾರಣಗಳೋ ಹಾಗೆಯೇ ಲಿಂಗವೂ ವಿಷ್ಣುತ್ವನಿಶ್ಚಯಕ್ಕೆ ಕಾರಣ' ಎಂದು ಅವರ ಭಾವ. 'ಹಿ' ಎಂಬುದು ಇಂತಹ ಲೋಕ ವಿಷ್ಣುವಿನದು ಎಂಬುದು ಪ್ರಸಿದ್ಧ ಎಂದು ಸೂಚಿಸುತ್ತದೆ. ll ಸೂತ್ರ 15 ll

### ಓಂ ll ಧೃತೇಶ್ಚ ಮಹಿಮ್ನಃ ಅಸ್ಯ ಅಸ್ಮಿನ್ನುಪಲಬ್ಧೇಃ ll ಓಂ

**'ಏಷ ಸೇತುರ್ವಿಧೃತಿಃ' (ಛಾಂ. 8.4.1.) ಇತಿ ಧೃತೇಃ, 'ಏಷ ಭೂತಾಧಿಪತಿರೇಷ ಭೂತಪಾಲಃ' (ಬೃ.6.4.21) ಇತ್ಯಾದಿ ಅಸ್ಯ ಮಹಿಮ್ನಃ ಅಸ್ಮಿನ್ ಉಪಲಬ್ಧೇಃ ।**

**'ಏತಸ್ಮಿನ್ ಖಲು ಅಕ್ಷರೇ ಗಾರ್ಗಿ, ಆಕಾಶಃ ಓತಶ್ಚ' (ಬೃ.5.8.11) 'ಏತಸ್ಯ ವಾ ಅಕ್ಷರಸ್ಯ ಪ್ರಶಾಸನೇ ಗಾರ್ಗಿ' (5.8.9) 'ಸ ಹಿ ಸರ್ವಾಧಿಪತಿಃ ಸ ಹಿ ಸರ್ವಪಾಲಃ, ಸ ಈಶಃ ಸ ವಿಷ್ಣುಃ' 'ಪತಿಂ ವಿಶ್ವಸ್ಯಾತ್ಮೇಶ್ವರಮ್' (ಮಹಾನಾ.) ಇತ್ಯಾದಿ ಶ್ರುತಿಭ್ಯಃ ತಸ್ಯ ಹ್ಯೇಷ ಮಹಿಮಾ ।**

**ಸರ್ವೇಷೋ ವಿಷ್ಣುರೇವೈಕೋ ನಾನ್ಯೋऽಸ್ತಿ ಜಗತಃ ಪತಿಃ ।**

**ಇತಿ ಚ ಸ್ಕಾಂದೇ ll 16 ll**

'ಹೃದಯಸ್ಥನಾದವನು ಧಾರಣಸಮರ್ಥನಾದುದರಿಂದ 'ಸೇತು' ಎನಿಸಿದ್ದಾನೆ' ಎಂದು ಇಲ್ಲಿ ಧಾರಕತ್ವ ಗುಣವನ್ನೂ, ಬೃಹದಾರಣ್ಯಕದಲ್ಲಿ ಧಾರಕತ್ವ ಗುಣದೊಂದಿಗೆ 'ಏಷ ಭೂತಾಧಿಪತಿಃ ಏಷ ಭೂತಪಾಲಃ' ಎಂದು ಮುಂತಾಗಿ ಹೃದಯಸ್ಥನಲ್ಲಿ ಚೇತನರ ಒಡೆತನವೇ ಮೊದಲಾದ ವಿಷ್ಣುವಿನ ಮಹಿಮೆಗಳನ್ನೂ ಹೇಳಿರುವುದರಿಂದ ಅದರ ಸಮಾಖ್ಯಾದಿಂದ ಛಾಂದೋಗ್ಯದಲ್ಲೂ ವಿಷ್ಣುವೇ ಹೃದಯಕಮಲಸ್ಥ.

'ಈ ಅಕ್ಷರತತ್ತ್ವದಲ್ಲಿ, ಗಾರ್ಗಿಯೇ, ಆಕಾಶವು ಸರ್ವಾತ್ಮನಾ ಆಶ್ರಯ ಪಡೆದಿದೆ'

'ಗಾರ್ಗಿಯೆ, ಈ ಅಕ್ಷರತತ್ತ್ವದ ಆಜ್ಞೆಯಿಂದಲೇ ಸೂರ್ಯಚಂದ್ರರು ತಮ್ಮ ತಮ್ಮ ಸ್ಥಾನಗಳಲ್ಲಿ ನೆಲೆಗೊಂಡಿದ್ದಾರೆ' 'ಅವನು ಸರ್ವಪಾಲಕ, ಅವನೇ ಸರ್ವಾಧಿಪತಿ, ಅವನು ಸ್ವಾಮಿ, ಅಂತಹವನೇ ವಿಷ್ಣು' '(ವಿಶ್ವಸ್ಯ) ಅಚೇತನ ವರ್ಗಕ್ಕೆ (ಪತಿಂ) ಒಡೆಯನಾದ ಚೇತನಕ್ಕೂ ಸ್ವಾಮಿಯಾದ (ಆತ್ಮೇಶ್ವರಂ) (ಆ ನಾರಾಯಣನನ್ನು ಜಗತ್ತು ಅವಲಂಬಿಸಿದೆ.) ಇತ್ಯಾದಿ ಶ್ರುತಿಗಳಿಂದ ಲೋಕಧಾರಕತ್ವಾದಿಗಳು ಅವನದೇ ಮಹಿಮೆಗಳು. ಸ್ಕಾಂದದಲ್ಲೂ ಹೀಗಿದೆ- 'ಸರ್ವೇಶ್ವರ ವಿಷ್ಣು ಒಬ್ಬನೇ ಈ ಜಗತ್ತಿಗೆ, ಅವನನ್ನು ಬಿಟ್ಟು ಮತ್ತೊಬ್ಬರು ಒಡೆಯರಿಲ್ಲ'' ॥ 16 ॥

**ವಿವರಣೆ : 1. ಅ.** ಛಾಂದೋಗ್ಯ ಶ್ರುತಿಯು ಹೃದಯಸ್ಥನನ್ನು ಹೀಗೆ ಬಣ್ಣಿಸುತ್ತದೆ-

'ಅಥ ಯ ಆತ್ಮಾ ಸ ಸೇತುರ್ವಿಧೃತಿಃ ಏಷಃ ಲೋಕಾನಾಂ ಅಸಂಭೇದಾಯ।

ಅಪಹತಪಾಪ್ಮಾ ಹ್ಯೇಷ ಬ್ರಹ್ಮಲೋಕಃ'

ಎಂದು. ಈ ಪೃಥಿವ್ಯಾದಿಲೋಕಗಳಲ್ಲಿ ಒಂದಕ್ಕೊಂದು ಘರ್ಷಣೆಯಾಗದಂತೆ ಅವುಗಳನ್ನು ಸ್ಥಿರಕಕ್ಷೆಯಲ್ಲಿ ಇರಿಸಿರುವುದರಿಂದ ಅವನು 'ಸೇತು' ಎನಿಸುತ್ತಾನೆ. ಹೀಗೆ ಹೃದಯಸ್ಥನನ್ನು ಧಾರಕನನ್ನಾಗಿ ಇಲ್ಲಿ ಹೇಳಲಾಗಿದೆ. ಈ ಸಾಮರ್ಥ್ಯ ವಿಷ್ಣುವಿನದು. ಆದ್ದರಿಂದ ಹೃದಯಸ್ಥನಾದವನು ವಿಷ್ಣು. ಇದು ಸೂತ್ರದ 'ಧೃತೇಶ್ಚ' ಎಂಬುದರ ಅರ್ಥ.

**ಆ.** ಸಮಾಖ್ಯೆಯಿಂದಲೂ ಹೃದಯಸ್ಥ ವಿಷ್ಣು ಎಂದು ತಿಳಿಯಬಹುದು. ಬೃಹದಾರಣ್ಯಕದಲ್ಲಿ ಹೀಗಿದೆ- 'ಯ ಏಷ ಅಂತರ್ಹೃದಯ ಆಕಾಶಃ ತಸ್ಮಿನ್ ಶೇತೇ ಸರ್ವಸ್ಯ ವಶೀ' (6.4.21) ಎಂದು ಹೃದಯಸ್ಥನನ್ನು ಉಲ್ಲೇಖಿಸಿ–

'ಏಷ ಸರ್ವೇಶ್ವರಃ ಏಷ ಭೂತಾಧಿಪತಿಃ ಏಷ ಭೂತಪಾಲಃ ಏಷ
ಸೇತುರ್ವಿಧಾರಣಃ ಏಷಾಂ ಲೋಕಾನಾಂ ಅಸಂಭೇದಾಯ' (6.4.21)

ಎಂದು ಹೇಳಲಾಗಿದೆ. ಅಲ್ಲಿ 'ಸರ್ವಾಧಿಪತಿತ್ವ' ಮೊದಲಾದ ವಿಷ್ಣುಧರ್ಮಗಳನ್ನು ಹೇಳಿರುವುದರಿಂದ ವಿಷ್ಣುವೇ ಹೃದಯಸ್ಥನೆಂದು ತಿಳಿಯುತ್ತದೆ. ಅದೇ ಆನುಪೂರ್ವೀ ಛಾಂದೋಗ್ಯದಲ್ಲೂ ಇರುವುದರಿಂದ ಇಲ್ಲೂ ಹೃದಯಸ್ಥನಾದವನು ವಿಷ್ಣು.

'ಧೃತೇಃ' ಎಂಬ ಶಬ್ದವನ್ನು ಸೇರಿಸಿ ಸಮಗ್ರಸೂತ್ರದಿಂದ ಈ ಅರ್ಥವು ತಿಳಿಯುತ್ತದೆ. 'ಧೃತೇಃ' ಎಂದರೆ ಧೃತಿ ಎಂಬ ಶಬ್ದವಿರುವ ವಾಕ್ಯ. ಅದು ಬೃಹದಾರಣ್ಯಕದಲ್ಲಿದೆ. ಅಲ್ಲಿಯೂ ವಿಷ್ಣುವೇ ಏಕೆ ವಾಚ್ಯ? ಅದಕ್ಕುತ್ತರ- ಅಸ್ಯ= ವಿಷ್ಣುವಿನ ಮಹಿಮ್ನಃ= ಮಹಿಮೆಯು ಅಸ್ಮಿನ್= ಬೃಹದಾರಣ್ಯಕದಲ್ಲಿ ಉಪಲಬ್ಧೇಃ= ತಿಳಿಯುವುದರಿಂದ. ಆದ್ದರಿಂದ ಬೃಹದಾರಣ್ಯಕ ವಾಕ್ಯಕ್ಕೆ ಅನುಗುಣವಾಗಿ ಛಾಂದೋಗ್ಯದಲ್ಲೂ ಹೃದಯಸ್ಥ ವಿಷ್ಣು.

ಭಾಷ್ಯದಲ್ಲಿರುವ 'ಧೃತೇಃ' ಎಂಬ ಶಬ್ದವನ್ನೂ ಎರಡೂ ಕಡೆ ಅನ್ವಯಿಸಿಕೊಳ್ಳಬೇಕು.

'ಧೃತೇಃ' ಹೃತ್‌ಪದ್ಮಸ್ಥೋ ವಿಷ್ಣುರೇವ' 'ಧೃತೇಃ ಮಹಿಮ್ನಃ...ಹೃತ್‌ಪದ್ಮಸ್ಥೋ ವಿಷ್ಣುರೇವ।' 'ಧೃತೇಃ= ಧೃತಿಯುಕ್ತಾಯಾಃ= ತದ್ಬೋಧಿಕಾಯಾಃ ಸಮಾಖ್ಯಾಯಾಃ ಸತ್ವಾತ್ ಹೃತ್‌ಪದ್ಮಸ್ಥೋ ವಿಷ್ಣುರೇವ।'

'ಧಾರಕತ್ವ ಎಂಬ ಗುಣವನ್ನು ಹೃದಯಸ್ಥನಿಗೆ ಹೇಳಿರುವುದರಿಂದ ಅವನು ವಿಷ್ಣು' ಎಂದು ಒಂದರ್ಥ. ''ಧಾರಕತ್ವ ಧರ್ಮ ಸಹಿತವಾಗಿ ಇತರ ಅಸಾಧಾರಣಗುಣಗಳೊಂದಿಗೆ ಹೃತ್‌ಪದ್ಮಸ್ಥನಾದ ವಿಷ್ಣುವನ್ನು ತಿಳಿಸುವ ಬೃಹದಾರಣ್ಯಕದ ಸಮಾಖ್ಯೆ ಇರುವುದರಿಂದಲೂ ಛಾಂದೋಗ್ಯದಲ್ಲಿ ಹೇಳಿರುವ ಹೃದಯಸ್ಥನೂ ವಿಷ್ಣು'' ಇದು ಸಮಗ್ರ ಸೂತ್ರದ ಮತ್ತೊಂದು ಅರ್ಥ.

**2.** 'ಸ ಸೇತುಃ ವಿಧೃತಿಃ' ಎಂದು ಛಾಂದೋಗ್ಯದ ಪಾಠ. ಆದರೆ ಆಚಾರ್ಯರು 'ಏಷ ಸೇತುಃ' ಎಂದು ಉಲ್ಲೇಖಿಸಿದ್ದಾರೆ. ಇದಕ್ಕೆ ತ್ರಿವಿಕ್ರಮ ಪಂಡಿತರ ವಿವರಣೆ ಹೀಗಿದೆ- ಆಚಾರ್ಯರು ಈ ಅಧಿಕರಣದ ಆರಂಭದಲ್ಲಿ 'ಅಸ್ಮಿನ್ ಬ್ರಹ್ಮಪುರೇ' ಎನ್ನುವ ಬದಲು 'ಏತಸ್ಮಿನ್ ಬ್ರಹ್ಮಪುರೇ' ಎಂದಿದ್ದಾರೆ. ಗಾಯತ್ರೀ- ಅಧಿಕರಣದಲ್ಲೂ 'ಗಾಯತಿ ಚ ತ್ರಾಯತಿ ಚ' ಎಂಬ ಶ್ರುತಿಯನ್ನು 'ಗಾಯತಿ ತ್ರಾಯತಿ ಚ' ಎಂದೂ ಉಲ್ಲೇಖಿಸಿದ್ದಾರೆ. ಇದರಿಂದ ಒಂದೇ ವಿಧದ ವಾಕ್ಯಗಳು ಅನೇಕ ಶಾಖೆಗಳಲ್ಲಿ ಇರುವುದರಿಂದ ತಮಗೆ ತಿಳಿದ ಬೇರೆ ಶಾಖೆಗಳಿಂದ ಅವರು ಅವುಗಳನ್ನು ಉದಾಹರಿಸಿದ್ದಾರೆ. ಹೀಗೆ ಮಾಡಿ ಒಂದು ಸೂತ್ರದಿಂದ ಅನೇಕ ಶಾಖೆಗಳ ಅರ್ಥ ನಿರ್ಣಯವಾಗುತ್ತದೆ ಎಂದು ಸೂಚಿಸುತ್ತಾರೆ. ಇನ್ನು ಮುಂದೆಯೂ ಶ್ರುತಿಯ ಉಲ್ಲೇಖಗಳಲ್ಲಿ ವ್ಯತ್ಯಾಸ ಕಂಡುಬಂದರೆ ಹೀಗೆಯೇ ತಿಳಿಯಬೇಕು. ॥ ಸೂತ್ರ 16 ॥

## ಓಂ ॥ ಪ್ರಸಿದ್ಧೇಶ್ಚ ॥ ಓಂ

**''ತತ್ರಾಪಿ ದಹ್ರಂ ಗಗನಂ ವಿಶೋಕಃ ತಸ್ಮಿನ್ ಯದಂತಃ ತದುಪಾಸಿತವ್ಯಮ್''**

**(ಮಹಾನಾ.10.7)**

**ಇತಿ ಪ್ರಸಿದ್ಧೇಶ್ಚ। ತದಂತಸ್ಥತ್ವಾಪೇಕ್ಷತ್ವಾತ್ ನ ಸುಷಿರ ಶ್ರುತಿವಿರೋಧಃ ॥ 17 ॥**

'ತತ್ರಾಪಿ ದಹ್ರಂ' ಇತ್ಯಾದಿ ಶ್ರುತಿಯಲ್ಲಿ ದಹರಾಕಾಶಸ್ಥನು ವಿಷ್ಣು ಎಂಬುದು ಪ್ರಸಿದ್ಧನಾದುದರಿಂದ ಇಲ್ಲಿಯೂ ದಹರಸ್ಥ ವಿಷ್ಣು.

ಸುಷಿರಾಂತರ್ಗತನಾದ ವಿಷ್ಣುವನ್ನು ದೃಷ್ಟಿಯಲ್ಲಿಟ್ಟುಕೊಂಡಿರುವುದರಿಂದ ಸುಷಿರ ಶ್ರುತಿಯ ವಿರೋಧವೂ ಇಲ್ಲ.

**ವಿವರಣೆ : 1.** ದಹ್ರಂ ವಿಪಾಪ್ಮಂ ಪರಮೇಶ್ಮಭೂತಂ

ಯತ್ ಪುಂಡರೀಕಂ ಪುರಮಧ್ಯಸಂಸ್ಥಂ ।

ತತ್ರಾಪಿ ದಹ್ರಂ ಗಗನಂ ವಿಶೋಕಃ
ತಸ್ಮಿನ್ ಯದಂತಃ ತದುಪಾಸಿತವ್ಯಮ್ ॥

ಎಂದು ನಾರಾಯಣೋಪನಿಷತ್ತಿನ ಪಾಠ. ''ಹೃದಯಪುರದ ಮಧ್ಯದಲ್ಲಿ ಕಿರು ಕಮಲ. ಅದು ಭಗವಂತನ ಮನೆ. ಅದರಲ್ಲೂ ಕಿರಿದಾದ ಆಕಾಶ. ಅದರೊಳಗೆ ಇರುವವನನ್ನು ಧ್ಯಾನಿಸಬೇಕು.'' ಇಲ್ಲಿ ಸ್ಪಷ್ಟವಾಗಿ ಹೃದಯಸ್ಥಾಕಾಶದಲ್ಲಿ ವಿಷ್ಣುವಿನ ರೂಪವಿದೆ ಎಂದು ಹೇಳಲಾಗಿದೆ.

ಅ. ಹೃದಯ ಪದ್ಮದಲ್ಲಿರುವವನು ವಿಷ್ಣು ಎಂದಾದರೆ 'ತಸ್ಯಾಂತೇ ಸುಷಿರಂ' ಎಂಬ ಶ್ರುತಿಯ ವಿರೋಧ ಬರುತ್ತದೆ. ಆ ಶ್ರುತಿಯಲ್ಲಿ ಹೃದಯಪದ್ಮದಲ್ಲಿ ಆಕಾಶವಿದೆ ಎಂದಿದೆ.

ಆ. ಪದ್ಮದಲ್ಲಿರುವ ಆಕಾಶವೇ ವಿಷ್ಣು ಎಂದರೂ ಅದೇ ಶ್ರುತಿಯ ವಿರೋಧ. ಆ ಶ್ರುತಿ ಪದ್ಮದಲ್ಲಿ 'ಸುಷಿರ' ಎನ್ನುತ್ತದೆ. 'ಸುಷಿರ' ಎಂದರೆ ತೂತು ಅಂದರೆ, ಆಕಾಶ, ಹೀಗೆ ಪದ್ಮದಲ್ಲಿ ಆಕಾಶವಿದೆ, ವಿಷ್ಣುವಲ್ಲ.

ಇ. ಹೃದಯ ಪದ್ಮ, ಅದರಲ್ಲಿ ಆಕಾಶ, ಅದರಲ್ಲಿ ವಿಷ್ಣು ಎಂದರೂ ತಪ್ಪು. ಸುಷಿರ ಶ್ರುತಿಯಲ್ಲಿ-

'ತಸ್ಯಾಂತೇ ಸುಷಿರಂ ಸೂಕ್ಷ್ಮಂ ತಸ್ಮಿನ್ ಸರ್ವಂ ಪ್ರತಿಷ್ಠಿತಂ'

ಎಂದು ಆಕಾಶವೇ ಸರ್ವಾಧಾರವೆನ್ನಲಾಗಿದೆ. ಅದಕ್ಕೆ ವಿರುದ್ಧವಾಗಿ ಆಕಾಶಸ್ಥ ವಿಷ್ಣು ಸರ್ವಾಧಾರ ಎನ್ನಬಾರದು.

ಈ ಪ್ರಶ್ನೆಗಳಿಗೆ ಆಚಾರ್ಯರಿತ್ತ ಸಮಾಧಾನ- ಹೃದಯ ಕಮಲ, ಅದರಲ್ಲಿ ಆಕಾಶ, ಅದರಲ್ಲಿ ವಿಷ್ಣು, ಅವನಲ್ಲಿ ಲೋಕ, ಸೂರ್ಯಚಂದ್ರರು. ಇದೇ ಸರಿಯಾದ ಕ್ರಮ. ಹಾಗಾದರೆ 'ಸುಷಿರದಲ್ಲೇ ಸರ್ವವೂ ಇದೆ' ಎಂದುದು ಹೇಗೆ? ಮನೆಯ ಒಳಗಿನ ಪೆಟ್ಟಿಗೆಯಲ್ಲಿ ಒಡವೆ ಇದ್ದರೂ 'ಮನೆಯಲ್ಲಿ ಒಡವೆಗಳಿವೆ' ಎನ್ನುವುದಿಲ್ಲವೇ? ಹಾಗೆ, ಹೃದಯದಲ್ಲಿರುವ ದಹರಾಕಾಶದೊಳಗೆ ಇರುವ ವಿಷ್ಣುವಿನಲ್ಲಿ ಸರ್ವವೂ ಇದ್ದರೂ ಆಕಾಶದಲ್ಲಿ ಸರ್ವವೂ ಇದೆ ಎನ್ನುತ್ತದೆ ಶ್ರುತಿ. ಆದ್ದರಿಂದ ಸುಷಿರಶ್ರುತಿಯ ವಿರೋಧವಿಲ್ಲ.

**2. ತದಂತಸ್ಥಾಪೇಕ್ಷತ್ವಾತ್...** ಎಂಬ ಭಾಷ್ಯವಾಕ್ಯಕ್ಕೆ ಹೀಗೆ ಅರ್ಥ- 'ಸುಷಿರ ಶ್ರುತೇಃ ತದಂತಸ್ಥಾಪೇಕ್ಷಯಾ ಪ್ರವೃತ್ತತ್ವಾತ್ ಅಸ್ಮದಭ್ಯುಪಗಮಸ್ಯ ನ ಸುಶಿರ ಶ್ರುತಿ ವಿರೋಧಃ- 'ತಸ್ಮಿನ್ ಸರ್ವಂ ಪ್ರತಿಷ್ಠಿತಂ' ಎಂದು ಸುಷಿರವು ಸರ್ವಾಧಾರ ಎಂಬ ಶ್ರುತಿಗೆ 'ಸುಷಿರಾಂತಸ್ಥ ಪರಮಾತ್ಮನು ಸರ್ವಾಧಾರ' ಎಂಬ ಅಭಿಪ್ರಾಯವಾದುದರಿಂದ ನಾವು ಹೇಳಿದ ಸಿದ್ಧಾಂತಕ್ಕೆ ಆ ಶ್ರುತಿಯ ವಿರೋಧವಿಲ್ಲ. ॥ ಸೂತ್ರ 17 ॥

**ಓಂ ॥ ಇತರಪರಾಮರ್ಶಾತ್ ಸ ಇತಿ ಚೇನ್ನ ಅಸಂಭವಾತ್ ॥ ಓಂ**

**'ಪರಂಜ್ಯೋತಿರುಪಸಂಪದ್ಯ ಸ್ವೇನ ರೂಪೇಣಾಭಿನಿಷ್ಪದ್ಯತೇ ।**
**ಏಷ ಆತ್ಮೇತಿ ಹೋವಾಚ' (ಛಾಂ.8.1.7)**

**ಇತಿ ಜೀವಪರಾಮರ್ಶಾತ್ ಸ ಇತಿ ಚೇತ್ ನ । ತಸ್ಯ ಸ್ವತೋ ಅಪಹತಪಾಪ್ಮತ್ವಾದ್ಯಸಂಭವಾತ್ ॥ 18 ॥**

'ಪರಮಜ್ಯೋತಿರೂಪನಾದ ಪರಮಾತ್ಮನನ್ನು ಹೊಂದಿ ತನ್ನ ನೈಜರೂಪದಿಂದ ಪ್ರಕಟಗೊಳ್ಳುತ್ತಾನೆ. ಇವನೇ ಜೀವಾತ್ಮನೆಂದು ಹೇಳಿದನು' ಹೀಗೆ 'ಯ ಆತ್ಮಾ ಅಪಹತಪಾಪ್ಮಾ' ಎಂದು ಹಿಂದೆ ಹೃದಯಸ್ಥನಾದ ಆತ್ಮನನ್ನು 'ಏಷ ಆತ್ಮಾ' ಎಂಬ ಈ ಶ್ರುತಿಯಲ್ಲಿ ಪರಾಮರ್ಶಮಾಡಿರುವುದರಿಂದ ಜೀವಾತ್ಮನೇ ಹೃದಯಕಮಲಸ್ಥ ಎನ್ನುವುದು ಸರಿಯಲ್ಲ. ಏಕೆಂದರೆ ಜೀವನು ಈಶ್ವರನ ಅಪೇಕ್ಷೆ ಇಲ್ಲದೆ ಪಾಪರಹಿತನಾಗಲಾರ.

**ವಿವರಣೆ :** ಛಾಂದೋಗ್ಯದ 8ನೆಯ ಅಧ್ಯಾಯದ ಮೊದಲ ಖಂಡದಲ್ಲಿ ಹೃದಯಸ್ಥನಾದವನನ್ನು 'ಏಷ ಆತ್ಮಾ ಅಪಹತಪಾಪ್ಮಾ ವಿಜರಃ' ಎಂದು ಮುಂತಾಗಿ ಹೇಳಿ ಅದೇ ಖಂಡದ ಏಳನೆಯ ಮಂತ್ರದಲ್ಲಿ 'ಏಷ ಆತ್ಮೇತಿ ಹೋವಾಚ' ಎಂದು ಹಿಂದೆ ಪ್ರಸ್ತುತನಾದ ಆತ್ಮ ಜೀವ ಎಂದು ಸ್ಪಷ್ಟಪಡಿಸಲಾಗಿದೆ. ಏಳನೆಯ ಮಂತ್ರದಲ್ಲಿ ಹೇಳಿದ ಆತ್ಮ ಜೀವ ಎನ್ನಲು ಸಂಶಯಪಡಬೇಕಿಲ್ಲ. ಏಕೆಂದರೆ, ಅದರಲ್ಲಿ ಶರೀರದ ತ್ಯಾಗ, ಬ್ರಹ್ಮಪ್ರಾಪ್ತಿ ಸ್ವರೂಪದ ಅಭಿವ್ಯಕ್ತಿಗಳನ್ನು ಹೇಳಲಾಗಿದೆ. ಹೀಗೆ ಜೀವಾತ್ಮನೇ ಹೃದಯಸ್ಥನೆನ್ನಬಹುದು ಎಂಬ ಪ್ರಶ್ನೆಗೆ ಉತ್ತರವನ್ನು ಈ ಸೂತ್ರದಲ್ಲಿ ಹೇಳಲಾಗಿದೆ. ಹೃದಯಸ್ಥನ ಧರ್ಮವಾಗಿ ಹೇಳಿರುವ 'ಅಪಹತಪಾಪ್ಮತ್ವ' ಜೀವನಲ್ಲಿ ಸ್ವಾಭಾವಿಕವಲ್ಲ, ಅದು ಪರಮಾತ್ಮನ ಅನುಗ್ರಹದಿಂದ ಮೋಕ್ಷದಲ್ಲಿ ಬರುತ್ತದೆ. ಪರಮಾತ್ಮನಲ್ಲಿ ಅನಾದಿ ನಿತ್ಯವಾದ ಧರ್ಮ ಅದು. ಮುಖ್ಯವಾದ 'ಪಾಪರಾಹಿತ್ಯ'ವೇ ಶ್ರುತಿಯಲ್ಲಿ ವಿವಕ್ಷಿತ. ಆದ್ದರಿಂದ ಪರಮಾತ್ಮನೇ ಹೃದಯಸ್ಥ ಎಂದು ಉತ್ತರ. ॥ ಸೂತ್ರ 18 ॥

### ಓಂ ॥ ಉತ್ತರಾಚ್ಚೇದಾವಿರ್ಭೂತಸ್ವರೂಪಸ್ತು ॥ ಓಂ

**'ಸ ತತ್ರ ಪರ್ಯೇತಿ ಜಕ್ಷನ್ ಕ್ರೀಡನ್ ರಮಮಾಣಃ (ಛಾಂ.8.12.3)' ಇತ್ಯಾದ್ಯುತ್ತರ ವಚನಾತ್ ಜೀವ ಏವ ಇತಿ ಚೇತ್ ನ । ತತ್ರ ಹಿ ಪರಮೇಶ್ವರಪ್ರಸಾದಾತ್ ಆವಿರ್ಭೂತಸ್ವರೂಪಃ ಮುಕ್ತಃ ಉಚ್ಯತೇ। ಯತ್ ಪ್ರಸಾದಾತ್ ಸಃ ಮುಕ್ತೋ ಭವತಿ ಸ ಭಗವಾನ್ ಪೂರ್ವೋಕ್ತ ಇತಿ ॥ 19 ॥**

'ಮುಕ್ತ ಜೀವನು ಭಗವಂತನ ಲೋಕದಲ್ಲಿ ತಿನ್ನುತ್ತಾ ಆಡುತ್ತಾ ಸಂಚರಿಸುವನು' ಎಂದು ಮುಂದಿನ ನಾಲ್ಕನೆಯ ಖಂಡದಲ್ಲಿ ಹೇಳಿರುವುದರಿಂದ ಜೀವನೇ ಹೃದಯಸ್ಥ ಎನ್ನುವುದೂ ಸರಿಯಲ್ಲ. ಈ ವಾಕ್ಯವು ಪರಮಾತ್ಮನ ಅನುಗ್ರಹದಿಂದ ಸ್ವರೂಪದ ಅಭಿವ್ಯಕ್ತಿಯನ್ನು ಪಡೆದ ಮುಕ್ತನನ್ನು ವರ್ಣಿಸುತ್ತದೆ. 'ಯಾರ ಅನುಗ್ರಹದಿಂದ ಜೀವನು ಮುಕ್ತನಾಗಿರುವನೋ ಅಂತಹವನು ಪರಮಾತ್ಮ', ಇದೇ 'ಪರಂಜ್ಯೋತಿಃ' ಎಂಬ ಹಿಂದಿನ ವಾಕ್ಯದ ಅಭಿಪ್ರಾಯ.

**ವಿವರಣೆ : 1.** ಜೀವನಲ್ಲಿ ಪಾಪರಾಹಿತ್ಯವು ಅಸಂಭಾವಿತ ಎಂದು ಐದನೆಯ ಸೂತ್ರದಲ್ಲಿ ಹೇಳಿರುವುದು ಸರಿಯಲ್ಲ. ಇದೇ ಪ್ರಕರಣದಲ್ಲಿ 'ಜೀವನು ಭಗವಂತನ ಲೋಕದಲ್ಲಿ ಯಥೇಚ್ಛವಾಗಿ ಸುತ್ತುತ್ತಾನೆ' ಎಂದು ಹೇಳಲಾಗಿದೆ. ಇದರಿಂದ ಅವನು ಸತ್ಯಸಂಕಲ್ಪನಾಗಿದ್ದಾನೆಂದು ತಿಳಿಯಬಹುದಾಗಿದೆ. ಅಂದಮೇಲೆ ಅವನಿಗೆ ದುಃಖವಿಲ್ಲ, ಅದರಿಂದಾಗಿಯೇ ಪಾಪವೂ ಇಲ್ಲ. ಹೀಗೆ ಈ ಪ್ರಕರಣದಲ್ಲಿ ಜೀವನಿಗೂ 'ಅಪಹತಪಾಪ್ಮತ್ವ' ವಿಶೇಷಣವನ್ನು ಹೇಳಲಾಗಿದೆ. ಆದ್ದರಿಂದ, ಅವನೂ ಹೃತ್‌ಪದ್ಮಸ್ಥನಾಗಬಹುದು ಎಂದು ಆಕ್ಷೇಪ.

'ಸ ತತ್ರ ಪರ್ಯೇತಿ' ಎಂದು ಹೇಳಿರುವುದು ಮುಕ್ತಾತ್ಮನನ್ನು. ಆದ್ದರಿಂದ ಆಗ ಅವನು ಹೃತ್ ಪದ್ಮಸ್ಥನಲ್ಲ. ಏಕೆಂದರೆ ಆಗ ಅವನಿಗೆ ಹೃದಯವೇ ಇಲ್ಲ.

ಜೀವ ಸಂಸಾರದಲ್ಲಿ ಹೃತ್ ಪದ್ಮಸ್ಥ, ಮೋಕ್ಷಾವಸ್ಥೆಯಲ್ಲಿ 'ಪಾಪರಹಿತ'. ಆದುದರಿಂದ ಮುಂದೆ ಪಾಪರಹಿತನಾಗುವ ಜೀವ ಈಗ ಹೃದಯಪದ್ಮದಲ್ಲಿದ್ದಾನೆ ಎನ್ನಬಹುದಲ್ಲವೆ?

ಅದೂ ಸರಿಯಲ್ಲ, ಆ ಪಾಪರಾಹಿತ್ಯವು ಜೀವನಿಗೆ ಬಂದಿರುವುದು ಪರಮಾತ್ಮನ ಅನುಗ್ರಹದಿಂದ. ಹೀಗಾಗಿ ಗೌಣವಾದ ಆ ಗುಣ ಜೀವನಲ್ಲಿದೆ. ಆ ಗುಣವನ್ನು ನೀಡಿರುವವನು ಪರಮಾತ್ಮ. ದಾತೃ-ಸ್ವೀಕರ್ತೃಗಳಲ್ಲಿ ಸ್ವೀಕಾರ ಮಾಡುವವನು ಗೌಣ. ಆದ್ದರಿಂದ 'ಪಾಪರಹಿತ'ನೆಂದರೆ ಪ್ರಧಾನವಾಗಿ ವಿಷ್ಣುವೇ, ಅವನೇ ಹೃದಯಸ್ಥ.

**2.** 'ಯತ್‌ಪ್ರಸಾದಾತ್' ಎಂಬ ಭಾಷ್ಯವಾಕ್ಯ ಜೀವನ ಗುಣ ಪರಮಾತ್ಮನ ಅಧೀನ ವೆಂದು ಸಮರ್ಥಿಸುತ್ತಿದೆ. 'ಪರಂಜ್ಯೋತಿಃ ಉಪಸಂಪದ್ಯ' ಎಂಬ ವಾಕ್ಯದ ಅಭಿಪ್ರಾಯ- ಯಾವ ಪರಮಜ್ಯೋತಿಯಾದ ಪರಮಾತ್ಮನ ಪ್ರಸಾದದಿಂದಲೇ ಜೀವನಿಗೆ ಸ್ವರೂಪಾಭಿವ್ಯಕ್ತಿ ಆಗುವುದೋ ಅಂತಹ ಪರಮಾತ್ಮನೇ ಅಪಹತಪಾಪ್ಮ ಎಂದು. ಇದರಿಂದ ಜೀವನ ಪಾಪರಾಹಿತ್ಯಗುಣ ಪರಮಾತ್ಮನ ಕೃಪೆಯಿಂದ ಬಂದಿದೆ ಎಂದು ತಿಳಿಯುತ್ತದೆ. ॥ ಸೂತ್ರ 19 ॥

### ಓಂ ॥ ಅನ್ಯಾರ್ಥಶ್ಚ ಪರಾಮರ್ಶಃ ॥ ಓಂ

**ಯಂ ಪ್ರಾಪ್ಯ ಸ್ವೇನ ರೂಪೇಣ ಜೀವೋ ಅಭಿನಿಷ್ಪದ್ಯತೇ ಸ ಏಷ ಆತ್ಮಾ ಇತಿ ಪರಮಾತ್ಮಾರ್ಥಶ್ಚ ಪರಾಮರ್ಶಃ ॥ 20 ॥**

''ಜೀವನು ಯಾರನ್ನು ಹೊಂದಿ ತನ್ನ ನೈಜರೂಪವನ್ನು ಪಡೆಯುವನೋ ಅಂತಹವನು ಹೃದಯಸ್ಥನಾದ ಈ ಪರಮಾತ್ಮ'' ಹೀಗೆ 'ಏಷ ಆತ್ಮಾ' ಎಂದು ಪರಾಮರ್ಶ ಮಾಡಿರುವುದು ಪರಮಾತ್ಮನನ್ನೇ ಹೊರತು ಜೀವನನ್ನಲ್ಲ.

**ವಿವರಣೆ :** ಛಾಂದೋಗ್ಯದಲ್ಲಿ ಜೀವನ ಮುಕ್ತ್ಯವಸ್ಥೆಯನ್ನು ನಿರೂಪಿಸುವ ಸಂದರ್ಭದ ವಾಕ್ಯ ಹೀಗೆ ಇದೆ–

'ಏಷಃ ಸಂಪ್ರಸಾದಃ ಅಸ್ಮಾತ್ ಶರೀರಾತ್ ಸಮುತ್ಥಾಯ ಪರಂಜ್ಯೋತಿರುಪಸಂಪದ್ಯ ಸ್ವೇನ ರೂಪೇಣಾಭಿ ನಿಷ್ಪದ್ಯತೇ। ಏಷ ಆತ್ಮೇತಿ ಹೋವಾಚ'

ಎಂದು ಇಲ್ಲಿ ಸಂಪ್ರಸಾದನೆಂದರೆ ಜೀವ.

ಯಸ್ಯ ಸಮ್ಯಕ್ ಪ್ರಸಾದೋಽಸ್ತಿ ವಿಷ್ಣೋರೇವ ಸ ಉಚ್ಯತೇ।
ಸಂಪ್ರಸಾದಃ ಸ ಉತ್ಥಾಯ ಶರೀರಾತ್ ಪ್ರಾಪ್ಯ ಕೇಶವಂ॥

ಜೀವನನ್ನು ಈ ಶ್ರುತಿಕೊನೆಯಲ್ಲಿ 'ಏಷಃ' ಎಂದಿದೆ. 'ಇವನು' ಎಂದು ಅರ್ಥ. ಇವನು ಎಂದರೆ 'ಯ ಆತ್ಮಾ ಅಪಹತಪಾಪ್ಮಾ' ಎಂದು ಹಿಂದೆ ಹೇಳಿದ 'ಹೃದಯಪದ್ಮದಲ್ಲಿರುವವನು' ಎಂದು ಸಂದರ್ಭಕ್ಕೆ ಅನುಗುಣವಾಗಿ ಅಭಿಪ್ರಾಯವಾಗುತ್ತದೆ. ಇದರಿಂದ ಪಾಪರಾಹಿತ್ಯಗುಣ ಜೀವನಿಗೆ ಅಮುಖ್ಯವಾದರೂ ಅವನೇ ಹೃದಯಪದ್ಮಸ್ಥಿತನೆಂದು ಏಕೆ ಹೇಳಬಾರದು? ಎಂದು ಪ್ರಶ್ನೆ.

'ಏಷಃ' ಎಂದು ಉಪನಿಷತ್ತು 'ಪರಂಜ್ಯೋತಿಃ' ಎಂದು ಇದೇ ವಾಕ್ಯದಲ್ಲಿ ಪ್ರಸ್ತುತನಾದ ಪರಮಾತ್ಮನನ್ನು ಹೇಳಿ ಅವನಿಗೆ 'ಆತ್ಮಾ' ಎಂದು ವಿಶೇಷಣ ನೀಡಿದೆ. 'ಯಾರ ಅನುಗ್ರಹದಿಂದ ಜೀವನು ಮೋಕ್ಷ ಪಡೆದು ಕ್ರೀಡಿಸುವನೋ ಅಂತಹವನು (ಪರಂಜ್ಯೋತಿಃ) ಹೃದಯಸ್ಥನಾದ ಪರಮಾತ್ಮ' ಎಂದು ಅರ್ಥ. ಹೀಗೆ ಇಲ್ಲಿಯೂ ಜೀವನನ್ನು ಹೇಳುವ ಅಭಿಪ್ರಾಯ ಶ್ರುತಿಗಿಲ್ಲ. ಆದ್ದರಿಂದ ವಿಷ್ಣುವೇ ಹೃದಯಪದ್ಮಸ್ಥ.

**2.** ಎಂಟನೆಯ ಅಧ್ಯಾಯದ ಪ್ರಥಮ ಖಂಡ ಹಾಗೂ ನಾಲ್ಕನೆಯ ಖಂಡಗಳಲ್ಲಿ 'ಏಷಃ ಸಂಪ್ರಸಾದಃ' ಎಂಬ ವಾಕ್ಯವಿದೆ. ನಾಲ್ಕನೆಯ ಖಂಡದಲ್ಲಿರುವ ಈ ವಾಕ್ಯದ ಕೊನೆಯಲ್ಲಿ 'ಸ ಉತ್ತಮಃ ಪುರುಷಃ' ಎಂದಿದೆ. ಪ್ರಥಮ ಖಂಡದ ವಾಕ್ಯದ ಕೊನೆಯಲ್ಲಿ 'ಏಷ ಆತ್ಮೇತಿ ಹೋವಾಚ' ಎಂದಿದೆ. ಈ ಮೊದಲ ವಾಕ್ಯವನ್ನೇ ಸೂತ್ರ ದೃಷ್ಟಿಯಲ್ಲಿಟ್ಟುಕೊಂಡಿದೆ. ತತ್ವಪ್ರದೀಪ, ತತ್ತ್ವಪ್ರಕಾಶಿಕಾ, ತಂತ್ರದೀಪಿಕೆಗಳಲ್ಲಿ ಅದು ಸ್ಪಷ್ಟವಾಗಿದೆ. ॥ ಸೂತ್ರ 20 ॥

## ಓಂ॥ ಅಲ್ಪಶ್ರುತೇರಿತಿ ಚೇತ್ ತದುಕ್ತಮ್ ॥ ಓಂ

**'ದಹರಃ' ಇತಿ ಅಲ್ಪಶ್ರುತೇಃ ನೇತಿ ಚೇತ್, ನ, 'ನಿಚಾಯ್ಯತ್ವಾದೇವಂ ವ್ಯೋಮವಚ್ಚ' ಇತ್ಯುಕ್ತತ್ವಾತ್ ।**

**ಏಷ ಮೇ ಆತ್ಮಾ ಅಂತರ್ಹೃದಯೇ ಜ್ಯಾಯಾನ್ (ಛಾಂ.3.14.3)**

**ಇತಿ ಶ್ರುತ್ಯುಕ್ತತ್ವಾಚ್ಚ॥ 31 ॥**

**॥ ಇತಿ ದಹರಾಧಿಕರಣಮ್ ॥**

'ದಹರಃ=ಹೃದಯಾಕಾಶವು ಸೂಕ್ಷ್ಮವಾದುದು' ಎಂದಿರುವುದರಿಂದ ಅಲ್ಲಿರುವವನು ವಿಷ್ಣುವಲ್ಲ ಎನ್ನಕೂಡದು. 'ನಿಚಾಯ್ಯತ್ವಾದೇವಂ ವ್ಯೋಮವಚ್ಚ' ಎಂದು ಹಿಂದೆಯೇ ಇದಕ್ಕೆ ಸಮಾಧಾನ ನೀಡಲಾಗಿದೆ.

**ವಿವರಣೆ :** ಛಾಂದೋಗ್ಯ ಶ್ರುತಿಯಲ್ಲಿ 'ದಹರೋऽಸ್ಮಿನ್ ಅಂತರ ಆಕಾಶಃ' ಎಂದು ಹೃದಯಾಕಾಶ ಅತ್ಯಂತ ಸೂಕ್ಷ್ಮವಾದುದು ಎನ್ನಲಾಗಿದೆ. ವ್ಯಾಪ್ತನಾದ ಬ್ರಹ್ಮ ಅದರಲ್ಲಿ ಇರುವುದು ಹೇಗೆ? ಎಂದು ಪ್ರಶ್ನೆ. ವ್ಯಾಪ್ತನಾದರೂ ಪರಮಾತ್ಮ ನಮ್ಮ ಹೃದಯದ ಅಲ್ಪದೇಶದಲ್ಲಿ ಅಣುರೂಪದಿಂದಲೂ ಇದ್ದಾನೆ ಎಂದು ಧ್ಯಾನಮಾಡಬೇಕು. ಅದಕ್ಕಾಗಿಯೇ ಅವನು ತನ್ನ ಅಚಿಂತ್ಯಶಕ್ತಿಯಿಂದ ಅಣುರೂಪವನ್ನು ಸ್ವೀಕರಿಸಿದ್ದಾನೆ ಎಂದು ಉತ್ತರ. ಇದನ್ನು ಹಿಂದಿನ ಪಾದದ ಏಳನೆಯ ಸೂತ್ರದಲ್ಲಿ ಹೇಳಲಾಗಿದೆ. ॥ ಸೂತ್ರ 21 ॥

## ಮಾಧ್ವದರ್ಶನದಲ್ಲಿ ಸೂತ್ರಗಳ ಅರ್ಥ

**1. ಓಂ ॥ ದಹರ ಉತ್ತರೇಭ್ಯಃ ॥ ಓಂ**

ಈ ಅಧಿಕರಣದಲ್ಲಿ 'ಹೃದಯ ಪದ್ಮಸ್ಥಿತಿ' ಎಂಬ ಲಿಂಗವನ್ನು ವಿಷ್ಣುವಿನಲ್ಲಿ ಸಮನ್ವಯ ಮಾಡಲಾಗಿದೆ.

'ತತ್ತು' ಎಂದು ಅನುವೃತ್ತಿ ಮಾಡಿಕೊಳ್ಳಬೇಕು. 'ದ್ಯುಭ್ವಾದ್ಯಾಯತನಂ' ಎಂಬುದನ್ನೂ 'ಸತ್' ಎಂಬುದನ್ನೂ ಇಲ್ಲಿ ಸೇರಿಸಿಕೊಳ್ಳಬೇಕು. 'ಉಭೇ ಅಸ್ಮಿನ್ ದ್ಯಾವಾಪೃಥಿವೀ' ಎಂದು ಸ್ವರ್ಗಾದಿಲೋಕಗಳಿಗೆ ಆಶ್ರಯನಾಗಿ 'ದಹರಂ ಪುಂಡರೀಕಂ ವೇಶ್ಮ' ಎಂದಿರುವ ದಹರಾಕಾಶದಲ್ಲಿರುವ ಸತ್‌ವಸ್ತು ತತ್ತು=ಬ್ರಹ್ಮನೇ, ಜೀವಾದಿಗಳಲ್ಲ. ಏಕೆಂದರೆ 'ಯ ಆತ್ಮಾ ಅಪಹತಪಾಪ್ಮಾ' ಎಂದು ಮುಂತಾಗಿ ಮುಂದೆ ದಹರಸ್ಥನಿಗೆ 'ಅಪಹತ ಪಾಪ್ಮಾದಿ' ಗುಣಗಳನ್ನು ಹೇಳಲಾಗಿದೆ.

(ದ್ಯುಭ್ವಾದ್ಯಾಯತನಂ ಇತಿ ಮಂಡೂಕಪ್ಲುತ್ಯಾ ಅನ್ವೇತಿ। ಪೂರ್ವಸ್ಮಾತ್ ಸದಿತಿ ಚ। 'ಉಭೇ ಅಸ್ಮಿನ್ ದ್ಯಾವಾಪೃಥಿವೀ' ಇತ್ಯಾದಿನೋಕ್ತಂ ದ್ಯುಭ್ವಾದ್ಯಾಯತನಂ ಸತ್ ದಹರೇ='ದಹರಂ ಪುಂಡರೀಕಂ ವೇಶ್ಮ' ಇತ್ಯಾದ್ಯುಕ್ತದಹರೇ, ಹೃತ್‌ಪದ್ಮೇ ತತ್ತು=ಬ್ರಹ್ಮೈವ, ನ ಜೀವಾದಿಃ। ಉತ್ತರೇಭ್ಯಃ='ಯ ಆತ್ಮಾ ಅಪಹತಪಾಪ್ಮಾ' ಇತ್ಯಾದ್ಯುತ್ತರವಾಕ್ಯಸ್ಥ- ಅಪಹತ ಪಾಪ್ಮತ್ವಾದಿ ಧರ್ಮೇಭ್ಯಃ॥

**2. ಓಂ ॥ ಗತಿಶಬ್ದಾಭ್ಯಾಂ ತಥಾ ಹಿ ದೃಷ್ಟಂ ಲಿಂಗಂ ಚ ॥ ಓಂ**

ಗತಿಶಬ್ದಾಭ್ಯಾಂ, ಗತಿ=ಸುಪ್ತನಿಂದ ಪ್ರಾಪ್ತಿ ಶಬ್ದ='ಬ್ರಹ್ಮಲೋಕಂ' ಎಂದು ಬ್ರಹ್ಮ ಶಬ್ದ ಇವುಗಳಿಂದಲೂ ದಹರಸ್ಥ ವಿಷ್ಣು, ತಥಾ ಎಂದು ಸೂತ್ರದಲ್ಲಿ ಇರುವುದರಿಂದ 'ಯಥಾ' ಶಬ್ದವನ್ನು ಅಧ್ಯಾಹಾರ ಮಾಡಿಕೊಳ್ಳಬೇಕು. ಯಥಾ=ಹೇಗೆ ಗತಿ ಮತ್ತು ಶಬ್ದಗಳು ಹೃದಯ ಪದ್ಮಸ್ಥನಲ್ಲಿ ಇವೆಯೋ ತಥಾ=ಹಾಗೆಯೇ ಲಿಂಗಂ ಚ=ಅರ ಮತ್ತು ಣ್ಯ ಎಂಬ

ಸುಧಾಸಮುದ್ರಾಶ್ರಯವಾದ ಲೋಕರೂಪವಾದ ಲಿಂಗವೂ ಅವನಲ್ಲಿದೆ. ಆದ್ದರಿಂದಲೂ ಹೃತ್ ಪದ್ಮಸ್ಥ ವಿಷ್ಣು.

(ದಹರೇ ತತ್ತು ಇತ್ಯಸ್ತಿ। ಗತಿಃ ಸುಪ್ತಪ್ರಾಪ್ತಿಃ। ಶಬ್ದಃ ಬ್ರಹ್ಮಶಬ್ದಃ। ತಾಭ್ಯಾಂ ಉಕ್ತರೂಪ ದಹರಸ್ಥಂ ಬ್ರಹ್ಮೈವ । 'ಅಹರಹಃ ಗಚ್ಛಂತ್ಯ ಏತಂ ಬ್ರಹ್ಮಲೋಕಂ ನ ವಿಂದಂತಿ' ಇತಿ ಹೃತ್ ಪದ್ಮಸ್ಥಸ್ಯ ಸುಪ್ತಪ್ರಜಾಪ್ರಾಪ್ಯತ್ವೋಕ್ತ್ಯಾ, ಬ್ರಹ್ಮಣೋ ಲೋಕಮಿತಿ ಬ್ರಹ್ಮಲೋಕತ್ವೋಕ್ತ್ಯಾ ಚ ತತ್ ಸ್ಥಸ್ಯ ಸುಪ್ತಪ್ರಾಪ್ಯತ್ವಂ, ಬ್ರಹ್ಮ ಶಬ್ದವಾಚ್ಯತ್ವಂ ಚ ಸಿದ್ಧಮಿತಿ ಭಾವಃ। ಇತಶ್ಚೈವಮಿತ್ಯಾಹ ತಥಾ ಹೀತ್ಯಾದಿನಾ। ಯಥಾ ಗತಿಶಬ್ದೌ ಹೃತ್ ಪದ್ಮಸ್ಥಗೌ ತಥಾ ಲಿಂಗಂ ಚ=ಅರಣ್ಯಾಖ್ಯ ಸುಧಾ ಸಮುದ್ರಾಶ್ರಯ ಲೋಕವತ್ವರೂಪಂ ಲಿಂಗಂ ಚ ಹೃತ್ ಪದ್ಮಸ್ಥಗಂ ದೃಷ್ಟಂ ಯತಃ ಅತೋಽಪಿ ದಹರಸ್ಥಂ ಬ್ರಹ್ಮೇತ್ಯರ್ಥಃ । ಏತಲ್ಲೋಕವತ್ವಂ ಚ ವಿಷ್ಣೌ ಪ್ರಸಿದ್ಧಮಿತಿ ಹೇರರ್ಥಃ।)

**3. ಓಂ॥ ಧೃತೇಶ್ಚ ಮಹಿಮ್ನೋ ಅಸ್ಯಾಸ್ಮಿನ್ ಉಪಲಬ್ಧೇಃ॥ ಓಂ**

ಧೃತೇಶ್ಚ=ಸರ್ವಧಾರಕತ್ವ ಧರ್ಮವು ಹೇಳಲ್ಪಟ್ಟಿರುವುದರಿಂದಲೂ ದಹರಸ್ಥ ವಿಷ್ಣು. ಸರ್ವಧಾರಕತ್ವವನ್ನು ಹೃತ್ ಪದ್ಮಸ್ಥನಲ್ಲೇ ಹೇಳಲಾಗಿದೆ ಎನ್ನಲು ಏನು ಆಧಾರ? ಅದಕ್ಕೆ 'ಅಸ್ಯಾಸ್ಮಿನ್ನುಪಲಬ್ಧೇಃ' ಎಂದು ಉತ್ತರ. ಅಸ್ಯ=ಹೃದಯಸ್ಥನ ಮಹಿಮ್ನಃ=ಮಹತ್ವಗುಣವಾದ 'ಪಾಪರಾಹಿತ್ಯವು' ಅಸ್ಮಿನ್=ಸರ್ವಾಧಾರತ್ವವನ್ನು ಹೇಳುವ 'ಯ ಆತ್ಮಾ, ಸ ಸೇತುಃ ವಿಧೃತಿಃ...ಅಪಹತಪಾಪ್ಮಾ, ಏಷ ಬ್ರಹ್ಮಲೋಕಃ' ವಾಕ್ಯದಲ್ಲಿ ಉಪಲಬ್ಧೇಃ= ಹೇಳಲ್ಪಟ್ಟಿರುವುದರಿಂದ, ಸರ್ವಾಧಾರತ್ವವು ಹೃದಯಸ್ಥನ ಧರ್ಮ.

ಇನ್ನೊಂದು ಅರ್ಥ - 'ಧೃತಿ' ಪದಕ್ಕೆ 'ಧೃತಿಯನ್ನು ಹೇಳುವ ವಾಕ್ಯ ಎಂದು ಅರ್ಥ. ಧೃತೇಃ= ಧಾರಕತ್ವವನ್ನು ಹೇಳುವ ಬೃಹದಾರಣ್ಯಕ ವಾಕ್ಯದ ಸಮಾಖ್ಯಾ ಇರುವುದರಿಂದಲೂ ಛಾಂದೋಗ್ಯದಲ್ಲಿ ಹೇಳಿರುವ ಹೃದಯಪದ್ಮಸ್ಥ ವಿಷ್ಣು. ಬೃಹದಾರಣ್ಯಕ ವಾಕ್ಯದಲ್ಲಾದರೂ ಬ್ರಹ್ಮನು ಪ್ರತಿಪಾದ್ಯ ಎನ್ನಲು ಏನು ಆಧಾರ? ಅದಕ್ಕುತ್ತರ- ಅಸ್ಯ=ವಿಷ್ಣುವಿನ ಮಹಿಮ್ನಃ=ಸರ್ವಾಧಿಪತಿತ್ವ ಮಹಿಮೆಯು ಅಸ್ಮಿನ್=ಬೃಹದಾರಣ್ಯಕ ವಾಕ್ಯದಲ್ಲಿ ಉಪಲಬ್ಧೇಃ=ತಿಳಿಯುತ್ತಿರುವುದರಿಂದ. ಅಲ್ಲಿನ ವಾಕ್ಯದಲ್ಲಿ 'ಏಷ ಸೇತುಃ ವಿಧಾರಣಃ' 'ಏಷ ಸರ್ವೇಶ್ವರಃ ಏಷ ಭೂತಪಾಲಃ' ಎಂದು ಸರ್ವೇಶ್ವರತ್ವಧರ್ಮವನ್ನು ಉಲ್ಲೇಖಿಸಿರುವುದರಿಂದ ಅದು ಬ್ರಹ್ಮಪರ. ಅದರಂತೆಯೇ ಇಲ್ಲಿನ ವಾಕ್ಯವಿರುವುದರಿಂದ ಇದೂ ಬ್ರಹ್ಮಪರ, ಎಂದು ಭಾವ.

(ಧೃತೇಃ= ಧಾರಣಾಚ್ಚ 'ಯ ಆತ್ಮಾ ಸ ಸೇತುರ್ವಿಧೃತಿಃ' ಇತಿ ಸರ್ವಧಾರಕತ್ವಲಿಂಗ ಶ್ರವಣಾಚ್ಚ ದಹರೇ ಬ್ರಹ್ಮೈವ। ಏತಲ್ಲಿಂಗಂ ಹೃತ್ ಪದ್ಮಸ್ಥಗಮಿತಿ ಕುತಃ? ಅಸ್ಯ=ಹೃತ್ ಪದ್ಮಸ್ಥಸ್ಯ ಮಹಿಮ್ನಃ ಅಪಹತಪಾಪ್ಮತ್ವಾದೇಃ ಅಸ್ಮಿನ್=ವಾಕ್ಯೇ ಉಪಲಬ್ಧೇಃ ಇತಿ ಏಕೋಽರ್ಥಃ। ಅನ್ಯಸ್ತು ಧೃತಿಶಬ್ದೇನ ಧೃತಿಯುಕ್ತಂ ವಾಕ್ಯಂ ಗೃಹ್ಯತೇ । ಅಸ್ಮಿನ್ನಿತಿ ಚ ತಂತ್ರಂ । ಚ ಶಬ್ದಃ

ಉಪಲಬ್ಧೇಶ್ಚ ಇತ್ಯಸ್ವೇತಿ । ಧೃತೇಃ=ಧೃತಿಪ್ರತಿಪಾದಕಾತ್ 'ಏಷ ಸೇತುಃ ವಿಧಾರಣಃ' ಇತಿ ವಾಕ್ಯಾತ್ ವಾಜಸನೇಯ ಸಮಾಖ್ಯಾನಾತ್ ದಹರೇ ಬ್ರಹ್ಮೈವ ಇತಿ ಯಾವತ್। ತತ್ರಾಪಿ ಬ್ರಹ್ಮೇತಿ ಕುತಃ? ಅಸ್ಯ=ವಿಷ್ಣೋಃ ಮಹಿಮ್ನಃ=ಸರ್ವಾಧಿಪತಿತ್ವಾದೇಃ ಅಸ್ಮಿನ್=ಹೃತ್‌ಪದ್ಮಸ್ಥೇ, ಅಸ್ಮಿನ್=ವಾಜಸನೇಯೇ ಉಪಲಬ್ಧೇಶ್ಚ।)

**4. ಓಂ॥ ಪ್ರಸಿದ್ಧೇಶ್ಚ॥ ಓಂ**

'ದಹ್ರಂ ವಿಪಾಪ್ಮಂ' ಎಂದು ತೈತ್ತಿರೀಯ ಉಪನಿಷತ್ತಿನಲ್ಲಿ ವಿಷ್ಣುವೇ ಹೃದಯಪದ್ಮದಲ್ಲಿದ್ದಾನೆಂಬುದು ಪ್ರಸಿದ್ಧವಾದುದರಿಂದಲೂ ಛಾಂದೋಗ್ಯದಲ್ಲೂ ಅವನೇ ಹೃತ್‌ಪದ್ಮಸ್ಥನಾಗಿ ಹೇಳಲ್ಪಟ್ಟಿದ್ದಾನೆ. ('ದಹ್ರಂ ವಿಪಾಪ್ಮಂ' ಇತ್ಯಾದಿ ತೈತ್ತಿರೀಯೇ ವಿಷ್ಣೋಃ ಹೃತ್ ಪದ್ಮಸ್ಥತ್ವ ಪ್ರಸಿದ್ಧೇಶ್ಚತತ್ ಸಮಾಖ್ಯಾನಾತ್ ದಹರೇ ಬ್ರಹ್ಮೈವ।)

**5. ಓಂ॥ ಇತರಪರಾಮರ್ಶಾತ್ ಸ ಇತಿ ಚೇನ್ನ ಅಸಂಭವಾತ್ ॥ ಓಂ**

'ಪರಂ ಜ್ಯೋತಿಃ ಉಪಸಂಪದ್ಯ' ಎಂದು ಪ್ರಕೃತನಾದ ಇತರಸ್ಯ=ಬ್ರಹ್ಮೇತರನಾದ 'ಯ ಆತ್ಮಾ ಅಪಹತಪಾಪ್ಮಾ' ಎಂದು ಹೃದಯಸ್ಥನಾಗಿ ಹೇಳಲ್ಪಟ್ಟ ಜೀವನನ್ನು ಪರಾಮರ್ಶಾತ್='ಏಷ ಆತ್ಮಾ' ಎಂದು ಈ ಪ್ರಕರಣದಲ್ಲಿ ಪರಮಾರ್ಶ ಮಾಡಿರುವುದರಿಂದ ಜೀವನೇ ಹೃದಯಪದ್ಮಸ್ಥ ಎಂದರೆ ಅದು ಸರಿಯಲ್ಲ. ಅಸಂಭವಾತ್=ಅವನಿಗೆ ಇಲ್ಲಿ ಹೇಳಿರುವ 'ಪಾಪಲೇಪರಾಹಿತ್ಯ' ಅಸಂಭಾವಿತವಾಗಿದೆ.

'ಯಃ ಆತ್ಮಾ ಅಪಹತಪಾಪ್ಮಾ' ಎಂದು ಹೃದಯಸ್ಥನನ್ನು ಮೊದಲ ಖಂಡದಲ್ಲಿ ಹೇಳಲಾಗಿದೆ. ಆ ಆತ್ಮ ಯಾರೆಂದು ಅಲ್ಲಿ ಹೇಳಿಲ್ಲ. ಅದೇ ಖಂಡದಲ್ಲಿ ಮುಂದೆ 'ಏಷ ಆತ್ಮಾ' ಎಂದು ಹಿಂದೆ ಹೇಳಿದ ಆತ್ಮನನ್ನು ಪರಾಮರ್ಶೆ ಮಾಡಲಾಗಿದೆ. 'ಏಷ ಆತ್ಮಾ' ಎಂಬಲ್ಲಿ ಆತ್ಮನೆಂದರೆ ಜೀವ. ಏಕೆಂದರೆ, ಅಲ್ಲಿ 'ಪರಂಜ್ಯೋತಿಃ ಉಪಸಂಪದ್ಯ' ಎಂದು ಪರಮಪುರುಷನನ್ನು ಹೊಂದಿದವನಾಗಿ ಉಲ್ಲೇಖವಿದೆ. ಹೊಂದುವವನು ಜೀವ ಎನ್ನುವಲ್ಲಿ ವಿವಾದವಿಲ್ಲ. ಹೀಗೆ ಹೃದಯಸ್ಥ ಜೀವ ಎಂದು ಪೂರ್ವಪಕ್ಷ. ಅವನಿಗೆ ಪಾಪಲೇಪರಾಹಿತ್ಯವಿಲ್ಲವಾದುದರಿಂದ ಅವನಾಗಲು ಸಾಧ್ಯವಿಲ್ಲ ಎಂದು ಸಿದ್ಧಾಂತ.

('ಪರಂಜ್ಯೋತಿರುಪಸಂದಪ್ಯ' ಇತಿ ಪ್ರಕೃತಸ್ಯ ಇತರಸ್ಯ ಜೀವಸ್ಯ ಪರಾಮರ್ಶಾತ್ 'ಏಷ ಆತ್ಮಾ' ಇತಿ ಏತತ್-ಶಬ್ದೇನ 'ಯ ಆತ್ಮಾ ಅಪಹತಪಾಪ್ಮಾ' ಇತ್ಯಾದಿನಾ ಉಕ್ತಸ್ಯ ಆತ್ಮತ್ವವಿಧಾನಾತ್ ದಹರೇ ಜೀವ ಏವ ಇತಿ ಚೇನ್ನ । ಅಸಂಭವಾತ್ । ಅಪಹತಪಾಪ್ಮತ್ವಾದಿಧರ್ಮಾಣಾಂ ಹೃತ್‌ಪದ್ಮಸ್ಥೇ ಶ್ರುತಾನಾಂ ಜೀವೇ ಅಸಂಭವಾತ್।)

**6. ಓಂ॥ ಉತ್ತರಾಚ್ಚೇತ್ ಆವಿರ್ಭೂತಸ್ವರೂಪಸ್ತು॥ ಓಂ**

ಉತ್ತರಾತ್=ಮುಂದಿನ 'ಸ ತತ್ರ ಪರ್ಯೇತಿ' ಎಂಬ ವಾಕ್ಯದಿಂದ ಜೀವನಿಗೆ

ಸತ್ಯಕಾಮತ್ವ, ಆದರಿಂದ 'ಪಾಪಲೇಪಾಭಾವ' ತಿಳಿಯುವುದರಿಂದ ಅವನೇ ಹೃದಯಸ್ಥ ಎನ್ನಕೂಡದು. ಆವಿರ್ಭೂತಸ್ವರೂಪಸ್ತು= ಆ ವಾಕ್ಯದಲ್ಲಿ ಸ್ವರೂಪಾಭಿವ್ಯಕ್ತಿ ಪಡೆದ ಮುಕ್ತನ ಉಲ್ಲೇಖವಿದೆ. ಹೃದಯದೊಳಗಿರುವ ಜೀವನದ್ದಲ್ಲ. ಮುಕ್ತನಾದಾಗ ಪಾಪರಹಿತನಾದರೂ ಹೃದಯದಲ್ಲಿರುವಾಗ ಸಂಸಾರ ದೆಸೆಯಲ್ಲಿ ಪಾಪರಹಿತನಲ್ಲ ಎಂದು ಭಾವ.

(ತುರೇವ, ಸ ಇತಿ ದಹರ ಇತಿ ಚಾಸ್ತಿ। ನೇತಿ ಶೇಷಃ। ಉತ್ತರಾತ್ ಜೀವಸ್ಯ ಸತ್ಯಕಾಮತ್ವ ಪ್ರತಿಪಾದಕಾತ್ 'ಸ ತತ್ರ ಪರ್ಯೇತಿ' ಇತ್ಯಾದಿ ಉತ್ತರವಾಕ್ಯಾತ್। ತತ ಏವ ಅಪಹತಪಾಪ್ಮಾದಿ ಸಂಭವೇನ ದಹರೇ ಜೀವಃ ಇತಿ ಚೇನ್ನ। ಆವಿರ್ಭೂತ-ಸ್ವರೂಪಸ್ತು=ಮುಕ್ತ ಏವೋಚ್ಯತೇ ಸತ್ಯಕಾಮತ್ವೇನ ತತ್ರ। ಹೃತ್ಪದ್ಮಸ್ಥಸ್ಯ ದೇಹಾಂತರ್ವರ್ತಿತಯಾ ಮುಕ್ತತ್ವಾಯೋಗಾತ್ ಇತಿ ಭಾವಃ।)

**7. ಓಂ ॥ ಅನ್ಯಾರ್ಥಶ್ಚ ಪರಮಾರ್ಶಃ ॥ ಓಂ**

ಪರಾಮರ್ಶಃ='ಏಷ ಆತ್ಮಾ' ಎಂದು ಪರಾಮರ್ಶ ಮಾಡಿರುವುದು ಅನ್ಯಾರ್ಥಃ=ಜ್ಯೋತಿಃ ಉಪಸಂಪದ್ಯ' ಎಂಬ ಅದೇ ವಾಕ್ಯದಲ್ಲಿ ಪ್ರಸ್ತುತನಾದ ಜ್ಯೋತಿರೂಪನಾದ ಬ್ರಹ್ಮನನ್ನು, ಜೀವನನ್ನಲ್ಲ. (ಚ ಏವ, ಅನ್ಯಃ ಅರ್ಥಃ ವಿಷಯಃ ಯಸ್ಯ ಸಃ। ಪರಂ ಜ್ಯೋತಿಃ ಇತ್ಯುಕ್ತ ಜ್ಯೋತೀರೂಪ ಬ್ರಹ್ಮ ವಿಷಯ ಏವ ಪರಾಮರ್ಶಃ। ಪರಾಮೃಶ್ಯ ಆತ್ಮತ್ವವಿಧಾನಂ ಇತ್ಯರ್ಥಃ।)

**8. ಓಂ ॥ ಅಲ್ಪಶ್ರುತೇರಿತಿ ಚೇತ್ ತದುಕ್ತಮ್ ॥ ಓಂ**

ಅಲ್ಪಶ್ರುತೇಃ= ದಹರಂ ಎಂದು ಅಲ್ಪಾಕಾಶ ಸ್ಥಿತಿ ಹೇಳಲ್ಪಟ್ಟಿರುವುದರಿಂದ ಹೃದಯಸ್ಥ ಬ್ರಹ್ಮನಲ್ಲ ಇತಿ ಚೇತ್=ಹೀಗೆಂದರೆ ನ=ಅದು ಸರಿಯಲ್ಲ. ತತ್=ಅಲ್ಪದೇಶ ಸ್ಥಿತಿಯು ಉಕ್ತಂ='ನಿಚಾಯ್ಯತ್ವಾತ್' ಎಂದು ಹಿಂದೆಯೇ 'ಬ್ರಹ್ಮನಿಗೆ ಉಪಾಸನಾರ್ಥವಾಗಿ ಹೇಳಲ್ಪಟ್ಟಿದೆ ಎಂದು ಸಮಾಧಾನಿಸಲಾಗಿದೆ.

('ದಹರಂ ಪುಂಡರೀಕಂ' ಇತ್ಯಾದಿನಾ ಅಲ್ಪಸ್ಯ ಸ್ಥಾನಸ್ಯ ಶ್ರವಣಾತ್ ದಹರೇ ಸಃ ನ ಬ್ರಹ್ಮ ಇತಿ ಚೇತ್ ನೇತಿ ಶೇಷಃ। ತತ್=ಅಲ್ಪಸ್ಥಾನಸ್ಥತ್ವಂ ಉಕ್ತಂ=ನಿಚಾಯ್ಯತ್ವಾದಿತ್ಯಾದಿನಾ ಸಮಾಹಿತಂ ಇತ್ಯರ್ಥಃ।)

## ಶಾಂಕರ ಭಾಷ್ಯದಲ್ಲಿ ಹೇಳಿರುವ ಸೂತ್ರಗಳ ಅರ್ಥ

**1. ದಹರ ಉತ್ತರೇಭ್ಯಃ** – ಛಾಂದೋಗ್ಯದ ಎಂಟನೆಯ ಅಧ್ಯಾಯದ ಪ್ರಥಮಮಂತ್ರ 'ಅಥ ಯದಿದಂ ಅಸ್ಮಿನ್ ಬ್ರಹ್ಮಪುರೇ ದಹರಂ ಪುಂಡರೀಕಂ ದಹರೋಸ್ಮಿನ್ ಅಂತರಃ ಆಕಾಶಃ' ಎಂದಿದೆ. ಇಲ್ಲಿ ಹೃದಯಪದ್ಮದಲ್ಲಿ ಹೇಳಲಾಗಿರುವ 'ಅಂತರ ಆಕಾಶ' ಭೂತಾಕಾಶ. ಆಕಾಶ ಶಬ್ದದ ಪ್ರಸಿದ್ಧ ಪ್ರಯೋಗ ಭೂತಾಕಾಶದಲ್ಲೇ ಇದೆ. ಅಥವಾ, 'ಬ್ರಹ್ಮಪುರೇ' ಎಂದು

ಈ ದೇಹವನ್ನು ಕರೆದಿರುವುದರಿಂದ ಜೀವ ಹೃದಯಪದ್ಮಸ್ಥನಾಗಿರಬಹುದು. ಬ್ರಹ್ಮಶಬ್ದಕ್ಕೆ ಜೀವ ಎಂದು ಅರ್ಥವಿದೆ. ಅವನ ಕರ್ಮದಿಂದ ನಿರ್ಮಿತವಾದುದರಿಂದ ಈ ದೇಹ ಬ್ರಹ್ಮಪುರ. ಅವನು ಈ ಶರೀರದ ಒಡೆಯನಾದುದರಿಂದ ರಾಜನಂತೆ ಶರೀರದ ಹೃದಯಭಾಗದಲ್ಲಿ ಇರುತ್ತಾನೆ. ಮನಸ್ಸು ಜೀವನಿಗೆ ಉಪಾಧಿ. ಅದು ಹೃದಯದಲ್ಲಿದೆ. ಆದ್ದರಿಂದ ಜೀವನೂ ಹೃದಯದಲ್ಲೇ ಇರುತ್ತಾನೆ. ಹೀಗೆ ಭೂತಾಕಾಶ ಅಥವಾ ಜೀವ ಹೃದಯಪದ್ಮಸ್ಥ ಎಂದು ಪೂರ್ವಪಕ್ಷ.

ಇಲ್ಲಿ ದಹರಾಕಾಶವನ್ನು 'ಯಾವನ್ವಾ ಅಯಮಾಕಾಶಃ ತಾವಾನ್ ಅಂತರ್ಹೃದಯ ಆಕಾಶಃ' ಎಂದು ಬಾಹ್ಯಾಕಾಶದೊಂದಿಗೆ ಹೋಲಿಸಲಾಗಿದೆ. ಹೃದಯಾಕಾಶ ಬಾಹ್ಯಾಕಾಶಗಳೆರಡೂ ಭೂತಾಕಾಶವಾದರೆ ಈ ಹೋಲಿಕೆ ಅಸಂಬದ್ಧವಾಗುತ್ತದೆ. ಆಕಾಶದಂತೆ ವ್ಯಾಪ್ತನಾದ ಬ್ರಹ್ಮನಿಗಾದರೆ ಈ ಹೋಲಿಕೆ ಹೊಂದುತ್ತದೆ. ಪರಿಮಿತನಾದ ಜೀವನಿಗೂ ಈ ಹೋಲಿಕೆ ಸಂಗತವಲ್ಲ. ಅಲ್ಲದೆ, ಮುಂದೆ ಹೇಳಿದ 'ಅಪಹತಪಾಪ್ಮತ್ವ' ಗುಣವಂತೂ ಇವರಿಬ್ಬರಲ್ಲೂ ಇಲ್ಲ. ಆದ್ದರಿಂದ ದಹರ ಬ್ರಹ್ಮ. ಬ್ರಹ್ಮನಿರುವುದರಿಂದ ಈ ದೇಹ ಬ್ರಹ್ಮಪುರ, ಎಂದು ಸಿದ್ಧಾಂತ. ದ್ವೈತದರ್ಶನದಲ್ಲಿ 'ದಹರೇ' ಎಂದು ಸೂತ್ರದಲ್ಲಿ ಪದವಿಭಾಗ. ಅದ್ವೈತದರ್ಶನದಲ್ಲಿ 'ದಹರಃ' ಎಂದು ಭೇದ. ಬ್ರಹ್ಮನು ದಹರಾಕಾಶದಲ್ಲಿದ್ದಾನೆಂದು ದ್ವೈತಭಾಷ್ಯದ ಅರ್ಥವಾದರೆ 'ಬ್ರಹ್ಮನೇ ದಹರಾಕಾಶ' ಎಂದು ಅದ್ವೈತಭಾಷ್ಯದ ಅರ್ಥ.

**2. ಗತಿಶಬ್ದಾಭ್ಯಾಂ ತಥಾಹಿ ದೃಷ್ಟಂ ಲಿಂಗಂ ಚ** – 'ಇಮಾಃ ಸರ್ವಾಃ ಪ್ರಜಾಃ ಅಹರಹಃ ಗಚ್ಛಂತ್ಯಃ ಏತಂ ಬ್ರಹ್ಮಲೋಕಂ' ಎಂದು ಸುಪ್ತಪ್ರಾಪ್ತಿ(ಗತಿ) 'ಬ್ರಹ್ಮಲೋಕ' ಎಂಬ ಪದ ಇವುಗಳಿಂದ ದಹರವು ಬ್ರಹ್ಮ ಎಂದೇ ತಿಳಿಯುತ್ತದೆ. ನಿದ್ರಾಕಾಲದಲ್ಲಿ ಜೀವ ಬ್ರಹ್ಮನಾಗಿರುತ್ತಾನೆಂದು ಲೋಕದಲ್ಲೂ ಪ್ರಸಿದ್ಧವಾದ ವಿಷಯ- 'ತಥಾ ಹಿ ದೃಷ್ಟಂ'. ಆಗ ಜೀವನು 'ಬ್ರಹ್ಮನ ಲೋಕವಾದ ಸತ್ಯಲೋಕಕ್ಕೆ' ಹೋಗುವುದಿಲ್ಲವಾದುದರಿಂದಲೇ 'ಬ್ರಹ್ಮಲೋಕವೆಂದರೆ ಬ್ರಹ್ಮನ ಲೋಕವಲ್ಲ, ಬ್ರಹ್ಮರೂಪವಾದ ಲೋಕ'. ಹೀಗೆ ಅರ್ಥಮಾಡಬೇಕೆಂದು ತಿಳಿಯುತ್ತದೆ.(ಇದು ಸೂತ್ರದಲ್ಲಿರುವ ಲಿಂಗಂ ಚ ಪದದ ಅರ್ಥ.)

**3. ಧೃತೇಶ್ಚ ಮಹಿಮ್ನೋ ಅಸ್ಯ ಅಸ್ಮಿನ್ನುಪಲಬ್ಧೇಃ** – 'ಏಷ ಸೇತುಃ ವಿಧೃತಿಃ ಏಷಾಂ ಲೋಕಾನಾಂ ಅಸಂಭೇದಾಯ' ಎಂದು ದಹರಾಕಾಶ ಸೇತುವೆಯಂತೆ ಧಾರಕ. ನೀರಿಗೆ ಅಡ್ಡಕಟ್ಟಿದ ಸೇತುವೆಯಿಂದ ಹೇಗೆ ಸಸ್ಯ ಸಂರಕ್ಷಣೆಯಾಗುತ್ತದೋ ಹಾಗೆ ಅವನಿರುವುದರಿಂದ ಲೋಕಗಳು, ಧರ್ಮಗಳು ಸುರಕ್ಷಿತವಾಗಿವೆ. ಈ ಮಹಿಮೆಯನ್ನು ದಹರನಲ್ಲಿ ಹೇಳಿರುವುದರಿಂದ ದಹರ ಬ್ರಹ್ಮ. ಇಂತಹ ಮಹಿಮೆ ಇತರ ಅನೇಕ ಶ್ರುತಿಗಳಲ್ಲಿ ಬ್ರಹ್ಮನಿಗೆ ಹೇಳಲ್ಪಟ್ಟಿವೆ ಕೂಡ - 'ಅಸ್ಯ ಅಸ್ಮಿನ್ ಉಪಲಬ್ಧೇಃ'

**4. ಪ್ರಸಿದ್ಧೇಶ್ಚ-** 'ಸರ್ವಾಣಿ ಹ ವಾ ಇಮಾನಿ ಭೂತಾನಿ ಆಕಾಶಾದೇವ ಸಮುತ್ಪದ್ಯಂತೇ' ಎಂದು ಅನೇಕ ಶ್ರುತಿಗಳಲ್ಲಿ 'ಆಕಾಶ' ಎಂಬ ಹೆಸರು ಬ್ರಹ್ಮನಿಗೆ ಪ್ರಸಿದ್ಧವೂ ಆಗಿದೆ.

**5. ಇತರ ಪರಾಮರ್ಶಾತ್ ಸ ಇತಿ ಚೇತ್ ನ ಅಸಂಭವಾತ್ -** ''ಏಷ ಸಂಪ್ರಸಾದಃ ಅಸ್ಮಾತ್ ಶರೀರಾತ್'' ಎಂದು ಜೀವಾತ್ಮನ ಉಲ್ಲೇಖವೂ ಈ ಪ್ರಕರಣದಲ್ಲಿ ಇರುವುದರಿಂದ ಲೋಕದಲ್ಲಿ ಅಪ್ರಸಿದ್ಧವಾದರೂ ವೈದಿಕ ಪ್ರಸಿದ್ಧಿಯಿಂದ ಆಕಾಶನಾಮವು ಬ್ರಹ್ಮನಿಗೆ ಇರುವಂತೆ ಜೀವನಿಗೂ ಅದು ಏಕೆ ಇರಬಾರದು? ಈ ಪ್ರಶ್ನೆ ಸರಿಯಲ್ಲ. ಅಣುವಾದ ಮನೋರೂಪ ಉಪಾಧಿಯಿಂದ ವಿಶಿಷ್ಟನಾದ ಜೀವನಿಗೆ 'ಯಾವಾನ್ವಾ ಅಯಮಾಕಾಶಃ' ಎಂದು ಹೇಳಿರುವ ಆಕಾಶದಂತೆ ವ್ಯಾಪ್ತಿಯಾಗಲೀ, ಪಾಪಠಾಹಿತ್ಯಾದಿ ಮಹತ್ವವಾಗಲೀ ಇಲ್ಲ.

**6. ಉತ್ತರಾಚ್ಚೇದಾವಿರ್ಭೂತಸ್ವರೂಪಸ್ತು -** ಈ ಹೃದಯಸ್ಥನಾದ ದಹರನನ್ನು ಉಲ್ಲೇಖಿಸಿ ಮುಂದೆ 'ತತ್ ಯತ್ರೈತತ್ ಸುಪ್ತಃ' ಎಂದು ಜೀವಧರ್ಮಗಳನ್ನು ಹೇಳಿ 'ಏತದಮೃತಂ ಅಭಯಂ' ಎಂದು ಬ್ರಹ್ಮನ ಮಹಿಮೆಯನ್ನು ಹೇಳಲಾಗಿದೆ. ಆದ್ದರಿಂದ ಅವನೂ ದಹರನಾಗಬಹುದು, ಎನ್ನುವುದು ಸರಿಯಲ್ಲ- ಜೀವನು ಉಪಾಧಿಯ ಸಂಬಂಧವನ್ನು ಕಳೆದುಕೊಂಡ ಮೇಲೆ ಇಂತಹ ಧರ್ಮಗಳು ಅವನಿಗೆ ಬರಬಹುದು. ಆಗ ಅವನು ಬ್ರಹ್ಮನೇ ಆಗುತ್ತಾನೆ. (ಆವಿರ್ಭೂತ ಸ್ವರೂಪಸ್ತು). ಜೀವನಾಗಿರುವಾಗ ಅವನಿಗೆ ಇಂತಹ ಗುಣಗಳು ಇರಲಾರವಾದ್ದರಿಂದ ಅವನು ದಹರನಲ್ಲ.

**7. ಅನ್ಯಾರ್ಥಶ್ಚ ಪರಾಮರ್ಶಃ -** 'ಏಷ ಸಂಪ್ರಸಾದಃ' ಎಂದು ಮುಂತಾಗಿ ಜೀವಾತ್ಮನ ಉಲ್ಲೇಖ ಪರಮಾತ್ಮನ ಉಪಾಸನೆಗಾಗಿ. ಎಚ್ಚರ, ಸ್ವಪ್ನಾವಸ್ಥೆಗಳಲ್ಲಿ ನಾನಾವಿಧ ದುಃಖವನ್ನು ಅನುಭವಿಸುವ ಜೀವನು ನಿದ್ರಾವಸ್ಥೆಯಲ್ಲಿ ಯಾವ 'ಪರಮಜ್ಯೋತಿಯನ್ನು' ಹೊಂದಿ ಸ್ವಸ್ವರೂಪವನ್ನು ಪಡೆದುಕೊಳ್ಳುವನೋ ಅಂತಹ ಪರಮಾತ್ಮನನ್ನು ಅಪಹತಪಾಪ್ಮನೆಂದು ಉಪಾಸನೆ ಮಾಡಬೇಕು, ಎಂದು ಜೀವಪ್ರಕರಣದ ತಾತ್ಪರ್ಯ. ಹೀಗೆ ಪರಮಾತ್ಮನ ಮಹಿಮೆಯನ್ನು ತಿಳಿಸಲೆಂದೇ ಜೀವನ ಉಲ್ಲೇಖ.

**8. ಅಲ್ಪಶ್ರುತೇರಿತಿ ತೇತ್ ತದುಕ್ತಂ -** ವ್ಯಾಪ್ತನಾದ ಬ್ರಹ್ಮ ಅಲ್ಪವಾದ ಹೃದಯದೇಶದಲ್ಲಿ ಇರುವುದು ಹೇಗೆ? ಎಂಬ ಪ್ರಶ್ನೆಗೆ 'ನಿಚಾಯ್ಯತ್ವಾತ್' ಎಂದು ಹಿಂದೆಯೇ ಉತ್ತರಿಸಲಾಗಿದೆ.

**ರಾಮಾನುಜ ಭಾಷ್ಯದಲ್ಲೂ** 'ದಹರ' ಎಂದರೆ ಬ್ರಹ್ಮ, ಭೂತಾಕಾಶವಲ್ಲ ಎಂದೇ ಈ ಅಧಿಕರಣದ ಸಿದ್ಧಾಂತ. 'ದಹರೋಽಸ್ಮಿನ್ ಅಂತರ ಆಕಾಶಃ, ತಸ್ಮಿನ್ ಯದಂತಃ ತದುಪಾಸಿತವ್ಯಮ್' ಎಂಬ ವಿಷಯವಾಕ್ಯದಲ್ಲಿ 'ತಸ್ಮಿನ್' ಎಂದರೆ ಹೃದಯಕಮಲದಲ್ಲಿ ಮತ್ತು ಅದರಲ್ಲಿರುವ ದಹರಾಕಾಶದಲ್ಲಿ ಎಂದು ಎರಡೂ ಅರ್ಥ. ಹೃದಯಕಮಲದಲ್ಲಿ

ದಹರಬ್ರಹ್ಮ, ಅವನಲ್ಲಿ ಅಪಹತಪಾಪ್ಮತ್ವಾದಿ ಗುಣಗಳು. ಇವುಗಳನ್ನು ಉಪಾಸನೆ ಮಾಡಬೇಕು ಎಂದು ಅರ್ಥ.

ಎರಡನೆಯ ಸೂತ್ರದಲ್ಲೂ 'ಲಿಂಗಂ ಚ' ಎಂಬ ಹೇತು 'ಬ್ರಹ್ಮಲೋಕ' ಎಂಬ ಪದವನ್ನು ದಹರನಿಗೆ ಪ್ರಯೋಗಿಸಿರುವುದರಿಂದಲೂ ದಹರ ಬ್ರಹ್ಮ. ಬ್ರಹ್ಮಲೋಕ ಶಬ್ದಕ್ಕೆ 'ನಿಷಾದಸ್ಥಪತಿನ್ಯಾಯ' ದಿಂದ ಕರ್ಮಧಾರಯಸಮಾಸವನ್ನೇ ಮಾಡಬೇಕು ಎಂದು ಲಿಂಗಂ ಚ ಪದವು ಸೂಚಿಸುತ್ತದೆ. ಆದ್ದರಿಂದ ಬ್ರಹ್ಮ ಚ ಅಸೌ ಲೋಕಶ್ಚ - ಬ್ರಹ್ಮರೂಪವಾದ ಲೋಕ ಎಂದರ್ಥ. (ದ್ವೈತದರ್ಶನದಲ್ಲಿ ಈ ಪದಕ್ಕೆ ತತ್ಪುರುಷ ಸಮಾಸ ಮಾಡಲಾಗುತ್ತದೆ). ಇತರ ಸೂತ್ರಗಳಿಗೆ ಶಾಂಕರಭಾಷ್ಯದಂತೆಯೇ ಅರ್ಥ. ಆದರೆ 'ಆವಿರ್ಭೂತ ಸ್ವರೂಪಸ್ತು-ಎಂಬ ಶಬ್ದಕ್ಕೆ ಜೀವನಿಗೆ ಬ್ರಹ್ಮೈಕ್ಯದ ಆವಿರ್ಭಾವ ಎಂದು ಅದ್ವೈತಸಿದ್ಧಾಂತ ಹೇಳಿದರೆ 'ಜೀವನಿಗೆ ಶರೀರದ ಸಂಪರ್ಕ ಕಳೆದು ಮುಕ್ತ್ಯವಸ್ಥೆಯ ಅಭಿವ್ಯಕ್ತಿ' ಎಂದು ವಿಶಿಷ್ಟಾದ್ವೈತ ಸಿದ್ಧಾಂತ ಹೇಳಿರುವ ಅರ್ಥ.

## ಚಂದ್ರಿಕಾದಲ್ಲಿ ಮಾಡಿರುವ ವಿಮರ್ಶೆ

**1.** ದಹರಾಕಾಶದಲ್ಲಿ ಬ್ರಹ್ಮನಿದ್ದಾನೆಂದು ದ್ವೈತಸಿದ್ಧಾಂತ. ದಹರಾಕಾಶವೇ ಬ್ರಹ್ಮ ಎಂದು ಇತರ ಸಿದ್ಧಾಂತ. ಇದು ಉಪನಿಷತ್ತಿಗೆ ಸಮ್ಮತವಲ್ಲ. 'ದಹರಂ ಪುಂಡರೀಕಂ, ದಹರೋಸ್ಮಿನ್ ಅಂತರ ಆಕಾಶಃ, ತಸ್ಮಿನ್ ಯದಂತಃ ತದುಪಾಸಿತವ್ಯಂ' ಎಂದು ಉಪನಿಷತ್ತಿನಲ್ಲಿ ಸ್ಪಷ್ಟವಾಗಿ ಹೃದಯಕಮಲ, ಅದರಲ್ಲಿ ಆಕಾಶ, ಅಲ್ಲಿರುವ ಬ್ರಹ್ಮನ ಉಪಾಸನೆ' ಎಂದು ಹೇಳಲಾಗಿದೆ. ಇಲ್ಲಿ 'ತಸ್ಮಿನ್ ಯದಂತಃ' ಎಂದರೆ ಹೃದಯಪದ್ಮದೊಳಗೆ ಎಂದು ಅರ್ಥಮಾಡಬಾರದು. ಏಕೆಂದರೆ, ಪದ್ಮ, ಆಕಾಶಗಳನ್ನು ಹೇಳಿ 'ತಸ್ಮಿನ್' ಎಂದು ಹೇಳಿರುವಾಗ 'ತತ್' ಪದಕ್ಕೆ ಹಿಂದೆ ಹೇಳಿದ ಆಕಾಶ ಎಂಬ ಅರ್ಥವೇ ಸ್ವರಸ. 'ತಸ್ಮಿನ್' ಎಂದರೆ ಹೃದಯಕಮಲ ಎಂದು ಅರ್ಥ ಮಾಡಿದರೂ 'ತಸ್ಮಿನ್ ಯತ್ ತತ್ ಉಪಾಸಿತವ್ಯಮ್' ಎಂಬ ನಪುಂಸಕಲಿಂಗ ಪ್ರಯೋಗ ಅಸಾಧು. ಆ ಕಮಲದಲ್ಲಿ ಆಕಾಶ ಇರುವುದರಿಂದ 'ಸಃ' ಎಂದು ಅದನ್ನು ಹೇಳಬೇಕು. ಅಲ್ಲದೆ, ಆಕಾಶಸ್ಥನಾದವನು ಬ್ರಹ್ಮ; ಆಕಾಶವೇ ಬ್ರಹ್ಮನಲ್ಲ, ಅದು ಪ್ರಮಾಣವಿರುದ್ಧ-

'ದಿವ್ಯೇ ಬ್ರಹ್ಮಪುರೇ ಹ್ಯೇಷಃ ವ್ಯೋಮ್ನ್ಯಾತ್ಮಾ ಸಂಪ್ರತಿಷ್ಠಿತಃ'

'ಯ ಏಷ ಅಂತರ್ಹೃದಯ ಆಕಾಶಃ ತಸ್ಮಿನ್ನಯಂ ಪುರುಷಃ'

ಇಲ್ಲಿ ಆಕಾಶದಲ್ಲಿ ಪುರುಷ ಎಂದೇ ಹೇಳಿದೆ. ಆಕಾಶವೇ ಪುರುಷ ಎಂದಿಲ್ಲ.

**2.** 'ಧೃತೇಶ್ಚ ಮಹಿಮ್ನಃ' ಎಂಬ ಮೂರನೆಯ ಸೂತ್ರದಲ್ಲಿ 'ಧೃತಿರೂಪವಾದ ಮಹಿಮೆ' ಎಂದು ಇಬ್ಬರೂ ಭಾಷ್ಯಕಾರರ ಅರ್ಥ. ಆದರೆ ಮಾಧ್ವಭಾಷ್ಯದಲ್ಲಿ 'ಧೃತಿ ಮತ್ತು ಇತರ ಮಹಿಮೆಗಳು' ಎಂದು ಅರ್ಥ. ಇತರ ಭಾಷ್ಯಕಾರರ ಅರ್ಥದಲ್ಲಿ ಮಹಿಮ್ನಃ ಎಂಬ

ಅಂಶ ವ್ಯರ್ಥ. 'ಅಂಬರಾಂತಧೃತೇಃ' ಎಂದು ಹಿಂದೆ ಹೇಳಿದಂತೆ ಇಲ್ಲೂ 'ಧೃತೇಃ' ಎಂದಿಷ್ಟೇ ಹೇಳಿದರೆ ಸಾಕು.

3. 'ಪ್ರಸಿದ್ಧೇಶ್ಚ' ಎಂಬ ಸೂತ್ರಕ್ಕೆ ಇಬ್ಬರು ಭಾಷ್ಯಕಾರರೂ ಆಕಾಶಶಬ್ದವು ಬ್ರಹ್ಮನಲ್ಲೇ ಪ್ರಸಿದ್ಧವಾಗಿದೆ ಎಂದು ಅರ್ಥಮಾಡಿದ್ದಾರೆ. ಆದರೆ, ಇಲ್ಲಿ ಸಮನ್ವಯ ಮಾಡುತ್ತಿರುವುದು ಆಕಾಶಶಬ್ದವನ್ನಲ್ಲ. ದಹರ ಶಬ್ದವನ್ನು. ಆದ್ದರಿಂದ ಹೀಗೆ ಸೂತ್ರವನ್ನು ವ್ಯಾಖ್ಯಾನಿಸುವುದು ಪ್ರಕೃತ ಸಂಗತವಾಗುವುದಿಲ್ಲ. || ಸೂತ್ರ 21 ||

**ಇಲ್ಲಿಗೆ ದಹರಾಧಿಕರಣ ಮುಗಿಯಿತು.**

# ಅನುಕೃತ್ಯಧಿಕರಣ – 6

**ಅದೃಶ್ಯತ್ವಾದಯಃ ಪರಮೇಶ್ವರಗುಣಾಃ ಉಕ್ತಾಃ।**

**'ತೇಷಾಂ ಸುಖಂ ಶಾಶ್ವತಂ ನೇತರೇಷಾಂ।'**

**'ತದೇತದಿತಿ ಮನ್ಯಂತೇ ಅನಿರ್ದೇಶ್ಯಂ ಪರಮಂ ಸುಖಮ್ ॥ (ಕಠ 5-12, 14)'**

**ಇತ್ಯಾದಿನಾ ಜ್ಞಾನಿಸುಖಸ್ಯಾಪಿ ಅನಿರ್ದೇಶ್ಯತ್ವಂ ಅಜ್ಞೇಯತ್ವಂ ಚ ಉಚ್ಯತೇ ಇತಿ । ಅತೋ ವಕ್ತಿ-**

**ಓಂ ॥ ಅನುಕೃತೇಃ ತಸ್ಯ ಚ ॥ ಓಂ**

**''ತಮೇವ ಭಾಂತಂ ಅನುಭಾತಿ ಸರ್ವಮ್'' ಇತಿ ಅನುಕೃತೇಃ, 'ತಸ್ಯ ಭಾಸಾ ಸರ್ವಮಿದಂ ವಿಭಾತಿ' (ಕಠ 5-15) ಇತಿ ವಚನಾಚ್ಚ ಪರಮಾತ್ಮೈವ ಅನಿರ್ದೇಶ್ಯಸುಖರೂಪಃ। ನ ಚ ಜ್ಞಾನಿಸುಖಂ ಅನುಭಾತಿ ಸರ್ವಂ, ನ ಚ ತದ್ಭಾಸಾ। 'ಅಹಂ ತತ್ತೇಜೋೇರಶ್ಮೀತ್' ಇತಿ ನಾರಾಯಣಭಾಸಾ ಹಿ ಸರ್ವಂ ಭಾತಿ ॥ 22 ॥**

ಆನಂದಮಯಾಧಿಕರಣದಲ್ಲಿ ಅದೃಶ್ಯತ್ವಾದಿ ಗುಣಗಳು ಬ್ರಹ್ಮನಿಗಿವೆ ಎಂದು ಹೇಳಲಾಗಿದೆ. ಆದರೆ, ಕಾಠಕದಲ್ಲಿ 'ಹೃದಯಸ್ಥಿತನಾದ ಪರಮಾತ್ಮನ ದರ್ಶನವನ್ನು ಪಡೆದ ಜ್ಞಾನಿಗಳಿಗೇ ಶಾಶ್ವತ ಸುಖದ ಲಾಭ, ಇತರರಿಗೆ ಇಲ್ಲ. ಅಂತಹ ಸುಖವನ್ನೇ ಶಬ್ದದಿಂದ ಹೇಳಲಾಗದ ಪರಮಸುಖವೆನ್ನುತ್ತಾರೆ'. ಈ ಮೊದಲಾದ ವಾಕ್ಯಗಳಿಂದ ಅದೃಶ್ಯತ್ವಾದಿಗಳಲ್ಲಿ ಸೇರಿರುವ ಅನಿರ್ದೇಶ್ಯತ್ವವನ್ನೂ ಅಜ್ಞೇಯತ್ವವನ್ನೂ ಜ್ಞಾನಿಸುಖಕ್ಕೆ ಹೇಳಲಾಗಿದೆ. ಅದಕ್ಕಾಗಿ ಸೂತ್ರಕಾರರು ಸೂತ್ರವನ್ನು ರಚಿಸಿದ್ದಾರೆ.

'ಅವನ ಇಚ್ಛಾಧೀನವಾಗಿ ಇವೆಲ್ಲ ಬೆಳಗುತ್ತವೆ' ಎಂದು 'ಅವನ ಪ್ರಕಾಶದಿಂದಲೇ

ಇವೆಲ್ಲವೂ ಬೆಳಗುತ್ತವೆ' ಎಂದಿರುವುದರಿಂದಲೂ ಕಾಠಕದಲ್ಲಿ ಹೇಳಿರುವ ಅನಿರ್ದೇಶ್ಯ ಸುಖರೂಪನಾದವನು ಪರಮಾತ್ಮ. ಜ್ಞಾನಿಸುಖವನ್ನು ಅನುಸರಿಸಿ ಜಗತ್ತು ಬೆಳಗುವುದೂ ಇಲ್ಲ; ಅಥವಾ ಆ ಸುಖದಿಂದಾಗಿಯೂ ಬೆಳಗುತ್ತಿಲ್ಲ. 'ಅಹಂ ತತ್ತೇಜೋ ರಶ್ಮೀತ್' ಎಂದಂತೆ ನಾರಾಯಣನ ಪ್ರಕಾಶದಿಂದಲೇ ಇದು ಬೆಳಗುತ್ತಿದೆ.

**ವಿವರಣೆ : 1.** ಈ ಅಧಿಕರಣದಲ್ಲಿ 'ಆನುಕೂಲ್ಯೇನ ಗೃಹ್ಯಮಾಣತ್ವ' ಲಿಂಗವನ್ನು ಸಮನ್ವಯ ಮಾಡಲಾಗಿದೆ ಎಂದು ನ್ಯಾಯವಿವರಣದಲ್ಲಿದೆ. ಜ್ಞಾನಕ್ಕಾಗಿ ಮಾಡುವ ಪ್ರಾರ್ಥನೆ 'ಆನುಕೂಲ್ಯೇನ ಗೃಹ್ಯಮಾಣತ್ವ' 'ಮಗನನ್ನು ಹೇಗೆ ಕಾಣಲಿ, ಅವನು ಬರುತ್ತಾನೋ ಇಲ್ಲವೋ?' ಎಂದಾಗ ಮಗನ ಆಗಮನವೇ ಮುಖ್ಯ ಗುರಿಯಲ್ಲ, ಅವನ ದರ್ಶನ ಮುಖ್ಯವಾದುದು. ಅದರ ನಿರೀಕ್ಷೆ ಪ್ರಧಾನ. ಅದರಂತೆ, ಪ್ರಕೃತದಲ್ಲಿ 'ಕಥಂ ನು ತದ್ವಿಜಾನೀಯಾಂ ಕಿಮು ಭಾತಿ ನ ಭಾತಿ ವಾ' ಎಂದು ಭಗವಂತನ ಆವಿರ್ಭಾವಕ್ಕಾಗಿ ಜಿಜ್ಞಾಸುವಿನಿಂದ ಅವನ ಜ್ಞಾನದ ಪ್ರಾರ್ಥನೆ. ಈ ಪ್ರಾರ್ಥನೆಗೆ ವಿಷಯನಾದವನು ಪರಮಾತ್ಮನೇ ಹೊರತು ಹೀಗೆ ಪ್ರಸ್ತುತವಾದ ಜ್ಞಾನಿಸುಖವಲ್ಲ ಎಂದು ಈ ಅಧಿಕರಣದ ಸಿದ್ಧಾಂತ. ಅಂತಹ ಪ್ರಾರ್ಥನೆಗೆ ಬ್ರಹ್ಮನನ್ನು ಬಿಟ್ಟು ಇತರವು ವಿಷಯವಾದರೆ 'ಅನಿರ್ದೇಶ್ಯಂ' ಎಂದು ಹೇಳಿರುವ ಅನಿರ್ದೇಶ್ಯತ್ವ ಗುಣವೂ ಬ್ರಹ್ಮನನ್ನು ಬಿಟ್ಟು ಇತರಕ್ಕೆ ಬಂದಂತಾಗುತ್ತದೆ. ಆಗ ಆನಂದಮಯಾಧಿಕರಣ ಸಿದ್ಧಾಂತಕ್ಕೆ ವಿರೋಧ ಬರುತ್ತದೆ. ಅದಕ್ಕಾಗಿ ಈ ವಿಷಯ ವಿಮರ್ಶನೀಯವಾಗಿದೆ.

**2.** 'ತದೇತದಿತಿ ಮನ್ಯಂತೇ ಅನಿರ್ದೇಶ್ಯಂ ಪರಮಂ ಸುಖಂ' ಇದು ಈ ಅಧಿಕರಣದ ವಿಷಯವಾಕ್ಯ. ಇದರಲ್ಲಿ ಹೇಳಿರುವುದು ಜ್ಞಾನಿಸುಖವೋ, ಅಥವಾ ಸುಖರೂಪನಾದ ಪರಮಾತ್ಮನೋ ಎಂದು ಸಂದೇಹ. ಜ್ಞಾನಿಸುಖ ಎಂದು ಪೂರ್ವಪಕ್ಷ. ಇದಕ್ಕಿಂತ ಹಿಂದಿನ ವಾಕ್ಯ–

ತಮಾತ್ಮಸ್ಥಂ ಯೇಽನು ಪಶ್ಯಂತಿ ಧೀರಾಃ। ತೇಷಾಂ ಸುಖಂ ಶಾಶ್ವತಂ ನೇತರೇಷಾಂ॥

ಎಂದಿದೆ. ಅದರಲ್ಲಿ ಪರಮಾತ್ಮನನ್ನು ಕಂಡ ಜ್ಞಾನಿಗಳಿಗೆ ಪರಮಸುಖವಿದೆ ಎನ್ನಲಾಗಿದೆ. ಆ ಸುಖವನ್ನೇ 'ತದೇತದಿತಿ ಮನ್ಯಂತೇ' ಎಂಬ ಮುಂದಿನ ಪದ್ಯದಲ್ಲಿ 'ತದೇತತ್' ಎಂದು ಪರಾಮರ್ಶೆ ಮಾಡಿ ಅನಿರ್ದೇಶ್ಯತ್ವವನ್ನು ಹೇಳಲಾಗಿದೆ. ಆದ್ದರಿಂದ ಜ್ಞಾನಿಸುಖವೇ ಶಬ್ದಾಗೋಚರವಾದುದು ಎಂದು ಪೂರ್ವಪಕ್ಷ.

**3.** 'ತದೇತದಿತಿ ಮನ್ಯಂತೇ... ಕಥಂ ನು ತದ್ವಿಜಾನೀಯಾಂ ಕಿ ಮು ಭಾತಿ ನ ಭಾತಿ ವಾ'' ಎಂಬ ಮಂತ್ರದ ಮುಂದಿನ ಮಂತ್ರ ಹೀಗಿದೆ-

ನ ತತ್ರ ಸೂರ್ಯೋ ಭಾತಿ ನ ಚಂದ್ರ ತಾರಕಂ।
ನೇ ಮಾ ವಿದ್ಯುತೋ ಭಾಂತಿ ಕುತೋಽಯಮಗ್ನಿಃ।

ತಮೇವಂ ಭಾಂತಂ ಅನುಭಾತಿ ಸರ್ವಂ

ತಸ್ಯ ಭಾಸಾ ಸರ್ವಮಿದಂ ವಿಭಾತಿ ॥

ಎಂದು. ಇದರಲ್ಲಿ 'ಅವನಿಂದಾಗಿ ಎಲ್ಲವೂ ಬೆಳಗುತ್ತಿದೆ, ಸೂರ್ಯನಲ್ಲಿ ಕಾಣುವ ಪ್ರಕಾಶವೂ ಅವನದೆ' ಎಂಬ ಎರಡು ಧರ್ಮಗಳನ್ನು ಹೇಳಲಾಗಿದೆ. ಅವೆರಡೂ ಜ್ಞಾನಿ ಸುಖದಲ್ಲಿ ಇರಲು ಸಾಧ್ಯವಿಲ್ಲ. ಅವು ಪರಮಾತ್ಮನದೇ ಧರ್ಮಗಳು. ಆದ್ದರಿಂದ ಅವನೇ ಅನಿರ್ದೇಶ್ಯ ಸುಖರೂಪ. ''ಯಾವ ಸುಖವನ್ನು ಜ್ಞಾನಿಗಳೂ 'ಹೇಗೆ ತಿಳಿಯಲಿ' ಎಂದು ಪ್ರಾರ್ಥಿಸುವರೋ ಅಂತಹ ಅನಿರ್ದೇಶ್ಯ ಸುಖವು ಪರಮಾತ್ಮನ ರೂಪ, ಎಂದು ಜ್ಞಾನಿಗಳು ತಿಳಿಯುತ್ತಾರೆ'' ಎಂದು 'ತದೇತದಿತಿ ಮನ್ಯಂತೇ' ಎಂಬ ವಿಷಯವಾಕ್ಯದ ಅಭಿಪ್ರಾಯ.

**4. ಶ್ರುತ್ಯರ್ಥ-** 'ಅಹಂ ತತ್ತೇಜಃ ರಶ್ಮೀತ್- ಅಹಂ=ನಾನೇ ತತ್ತೇಜಃ=ಜಗತ್ತಿನ ಪ್ರಕಾಶ. ಅಹಂ=ನಾನೇ ರಶ್ಮೀತ್=ಸೂರ್ಯಪ್ರಕಾಶಕ್ಕೆ ನಿಯಾಮಕ. ಪ್ರಕಾಶಮಾನವಾದ ವಸ್ತುಗಳಲ್ಲಿರುವ ಪ್ರಕಾಶ ಅವನ ಇಚ್ಛೆಯಿಂದಲೇ ಬಂದಿದೆ. ಅವೆಲ್ಲದರ ಪ್ರಕಾಶ ಅವನದೇ. ಅವನು ಪ್ರಕಾಶಕ ವಸ್ತುಗಳೊಳಗೆ ಪ್ರಕಾಶರೂಪನಾಗಿರುವುದರಿಂದ ಅವುಗಳು ಪ್ರಕಾಶಿಸುತ್ತವೆ. ಹೀಗೆ ಸೂತ್ರಸೂಚಿತ ಎರಡೂ ಲಿಂಗಗಳು ಈ ಶ್ರುತಿಯಲ್ಲಿವೆ. ಈ ಶ್ರುತಿಯ ಪೂರ್ಣಪಾಠ ಅಂತರಧಿಕರಣದಲ್ಲಿದೆ. ॥ ಸೂತ್ರ 22 ॥

## ಓಂ ॥ ಅಪಿ ಸ್ಮರ್ಯತೇ ॥ ಓಂ

**ಯದಾದಿತ್ಯಗತಂ ತೇಜಃ ಜಗದ್ ಭಾಸಯತೇಽಖಿಲಮ್ ।**

**ಯಚ್ಚಂದ್ರಮಸಿ ಯಚ್ಚಾಗ್ನೌ ತತ್ತೇಜೋ ವಿದ್ಧಿ ಮಾಮಕಮ್ ॥**

**(ಗೀ.15.12) ಇತಿ ।**

**ನ ತದ್ಭಾಸಯತೇ ಸೂರ್ಯೋ ನ ಶಶಾಂಕೋ ನ ಪಾವಕಃ ।**

**ಯದ್ ಗತ್ವಾ ನ ನಿವರ್ತಂತೇ ತದ್ಧಾಮ ಪರಮಂ ಮಮ ॥**

**(ಗೀ. 15.6) ಇತಿ ಚ ॥ 23 ॥**

## ॥ ಇತಿ ಅನುಕೃತ್ಯಧಿಕರಣಮ್ ॥

''ಸಮಗ್ರ ಜಗತ್ತನ್ನು ಬೆಳಗುವ ಸೂರ್ಯನಲ್ಲಿರುವ ಪ್ರಕಾಶ, ಚಂದ್ರ-ಅಗ್ನಿಗಳಲ್ಲಿರುವ ಪ್ರಕಾಶ ಇವೆಲ್ಲವೂ ನನ್ನದೇ ಎಂದು ತಿಳಿ'' ಎಂದೂ ''ಯಾವ ನನ್ನ ಸ್ವರೂಪವನ್ನು ಜ್ಞಾನಿಗಳು ಬಂದು ಸೇರಿದರೆ ಮತ್ತೆ ಹಿಂತಿರುಗಲಾರರೋ ಅಂತಹ ಸ್ವರೂಪವನ್ನು ಸೂರ್ಯ, ಚಂದ್ರ, ಅಗ್ನಿಗಳೂ ಬೆಳಗಲಾರವು'' ಎಂದೂ ಗೀತೆಯಲ್ಲಿ ಹೇಳಿರುವುದರಿಂದ ಸೂರ್ಯಾದಿಗಳು ಬೆಳಗಲಾರದ ಸ್ವರೂಪ ವಿಷ್ಣುವಿನದೇ ಆಗಿದೆ.

**ವಿವರಣೆ :** ಗೀತೆಯ ಮೊದಲನೆಯ ವಾಕ್ಯ ಸೂರ್ಯಾದಿಗಳಲ್ಲಿರುವ ಪ್ರಕಾಶ

'ಮಾಮಕಂ-ನನ್ನದೇ ಮತ್ತು ನನ್ನ ಅಧೀನ' ಎಂದು ಹೇಳುತ್ತದೆ. ಎರಡನೆಯ ವಾಕ್ಯ ಪರಮಾತ್ಮನನ್ನು ಯಾವ ಬೆಳಕಿನ ಆಗರಗಳೂ ಬೆಳಗುವುದಿಲ್ಲ ಎನ್ನುತ್ತದೆ. ॥ ಸೂತ್ರ 23 ॥

## ದ್ವೈತದರ್ಶನದಲ್ಲಿ ಸೂತ್ರಗಳ ಅರ್ಥ

**1. ಓಂ ॥ ಅನುಕೃತೇಃ ತಸ್ಯ ಚ ॥ ಓಂ**

ತಸ್ಯ=ಜ್ಞಾನಕ್ಕಾಗಿ ಪ್ರಾರ್ಥಿಸಲ್ಪಟ್ಟವನ ಅನುಕೃತೇಃ=ಇಚ್ಛೆಗೆ ಅಧೀನವಾಗಿ ಸೂರ್ಯಾದಿಗಳಲ್ಲಿ ಪ್ರಕಾಶನ ಕ್ರಿಯೆ ಹೇಳಲ್ಪಟ್ಟಿರುವುದರಿಂದ ವಿಷ್ಣುವೇ ಈ ಪ್ರಕರಣದಲ್ಲಿ ಜ್ಞಾನಾರ್ಥಿಯಿಂದ 'ಕಥಂ ನು ತದ್ವಿಜಾನೀಯಾಂ' ಎಂದು ಪ್ರಾರ್ಥಿತನಾಗಿದ್ದಾನೆ. ಅಥವಾ 'ತಸ್ಯ' ಎಂಬುದು ಅಂತಹ ಪದಘಟಿತವಾದ ವಾಕ್ಯಕ್ಕೆ ಸೂಚಕ. 'ತಸ್ಯಭಾಸಾ ಸರ್ವಮಿದಂ ವಿಭಾತಿ' ಎಂದಿರುವುದರಿಂದಲೂ ಕಾಠಕದ ಈ ಮಂತ್ರದಲ್ಲಿ ಪ್ರಾರ್ಥಿಸಲ್ಪಟ್ಟವನು ವಿಷ್ಣು.

(ಅನುಕೃತಿಪದೇನ ಅನುಭಾನಂ ಉಚ್ಯತೇ। ಆನೂಕೂಲ್ಯೇನ ಗೃಹ್ಯಮಾಣಂ ಇತಿ ಯೋಗ್ಯತಯಾ ಅನ್ವೇತಿ। ತಸ್ಯೇತಿ ತಂತ್ರಂ। 'ಕಥಂ ನು ತದ್ವಿಜಾನೀಯಾಂ ಕಿಮು ಭಾತಿ ನ ಭಾತಿ ವಾ' ಇತ್ಯುಕ್ತ ಆನುಕೂಲ್ಯೇನ ಗೃಹ್ಯಮಾಣಂ ತತ್ತು ಬ್ರಹ್ಮೈವ। ನ ತು ಜ್ಞಾನಿಸುಖಮ್। ಕುತಃ? ತಸ್ಯ=ಆನುಕೂಲ್ಯೇನ ಗೃಹ್ಯಮಾಣಸ್ಯ ಅನುಕೃತೇಃ=ಸೂಯಾದಿಭಿಃ ಅನುಭಾನಾತ್। 'ತಮೇವ ಭಾಂತಂ ಅನುಭಾತಿ ಸರ್ವಂ' ಇತಿ ತದಧೀನಭಾನಶ್ರವಣಾತ್ ಸೂರ್ಯಾದೇಃ ಇತಿ ಯಾವತ್। ಕಿಂಚ, ತಸ್ಯೇತಿ ವಾಕ್ಯ ಪ್ರತೀಕಂ ಚೈತತ್। 'ತಸ್ಯ ಭಾಸಾ ಸರ್ವಮಿದಂ ವಿಭಾತಿ' ಇತಿ ಸರ್ವಸ್ಯ ತತ್ ಪ್ರಕಾಶ್ಯತ್ವೋಕ್ತೇಃ ಇತ್ಯರ್ಥಃ। ಅನುಭಾನಾತ್ ಇತಿ ವಾಚ್ಯೇ ಅನುಕೃತೇಃ ಇತ್ಯುಕ್ತಿಃ ಸೂರ್ಯಾದಿಕೃತಂ ಅನ್ಯದಪಿ ತಪನಾದೀಶಾಧೀನಂ ಇತಿ ದರ್ಶಯಿತುಂ ಇತ್ಯುಕ್ತಂ ತತ್ತ್ವಪ್ರದೀಪಾದೌ।)

**2. ಓಂ ॥ ಅಪಿ ಸ್ಮರ್ಯತೇ ॥ ಓಂ**

ಅಪಿ ಪದದಿಂದ ಶ್ರುತಿಯನ್ನೂ ಉಲ್ಲೇಖಿಸಲಾಗಿದೆ. 'ಅಹಂ ತತ್ತೇಜೋ ರಶ್ಮೀತ್' ಎಂದು ಶ್ರುತಿಯಿಂದ ಹಾಗೂ 'ಯದಾದಿತ್ಯಗತಂ ತೇಜಃ...ಮಾಮಕಂ' ಎಂದು ಸ್ಮೃತಿಯಿಂದ ಸೂರ್ಯಾದಿಗಳ ತೇಜಸ್ಸು ಅವನ ಅಧೀನ ಮತ್ತು ಅವನದೇ, ಎಂದು ತಿಳಿಯುತ್ತದೆ. 'ನ ತದ್ಭಾಸಯತೇ' ಎಂಬ ಗೀತಾವಾಕ್ಯದಿಂದ ಸೂರ್ಯಾದಿಗಳು ವಿಷ್ಣುವನ್ನು ಪ್ರಕಾಶಿಸಲಾರರು ಎಂದೂ ತಿಳಿಯುತ್ತದೆ. ಹೀಗೆ ಹಿಂದೆ ಹೇಳಿದ ಮೂರು ಧರ್ಮಗಳೂ ವಿಷ್ಣುವಿನ ಅಸಾಧಾರಣ ಗುಣಗಳು.

(ಅಪಿಃ 'ಶ್ರೂಯತೇ' ಇತಿ ಸಮುಚ್ಚಿನೋತಿ। 'ಅಹಂ ತತ್ತೇಜೋ ರಶ್ಮೀತ್' ಇತ್ಯತ್ರ ತೇಜ ಇತಿ ಸರ್ವಪ್ರಕಾಶಕತ್ವಂ ರಶ್ಮೀತ್ ಇತಿ ಸೂರ್ಯಾದಿ ತೇಜೋನಿಯಂತೃತ್ವಂ ಶ್ರೂಯತೇ। 'ಯದಾದಿತ್ಯಗತಂ ತೇಜಃ' ಇತಿ ಸ್ಮೃತೌ 'ಮಾಮಕಂ' ಇತ್ಯನೇನ ತದ್ವಯಂ

ಸ್ಮರ್ಯತೇ। ಮಾಮಕಂ=ಮದಧೀನಂ, ಮದೀಯಂ ಚ ಇತ್ಯರ್ಥಾತ್। 'ನ ತದ್ಭಾಸಯತೇ ಸೂರ್ಯಃ' ಇತಿ ತೃತೀಯಂ ಸ್ಮರ್ಯತೇ ಇತ್ಯರ್ಥಃ।)

## ಶಾಂಕರ ಭಾಷ್ಯದಲ್ಲಿ ಹೇಳಿದ ಸೂತ್ರಗಳ ಅರ್ಥ

**1. ಅನುಕೃತೇಃ ತಸ್ಯ ಚ** - ಮುಂಡಕೋಪನಿಷತ್ತಿನಲ್ಲಿ ''ತಸ್ಯ ಭಾಸಾ ಸರ್ವಮಿದಂ ವಿಭಾತಿ'' ಎಂದಿದೆ. ಸೂರ್ಯನು 'ಅವನ' ಬೆಳಕಿನಿಂದಲೇ ಬೆಳಗುತ್ತಾನೆ ಎಂದರ್ಥ. ಅವನ ಬೆಳಕಿನಿಂದ ಸೂರ್ಯಮುಚ್ಚಿ ಹೋಗಿದ್ದಾನೆ ಎಂದು ಭಾವ. ಇಲ್ಲಿ ಅವನ ಎಂದರೆ ಯಾರ? ಚಂದ್ರ ನಕ್ಷತ್ರಗಳ ಬೆಳಕು ಸೂರ್ಯನ ಬೆಳಕಿನಿಂದ ಮುಚ್ಚಿಹೋಗುವಂತೆ ಸೂರ್ಯನ ಬೆಳಕೂ ಇನ್ನೊಂಡು ಜಡವಾದ ತೇಜೋಮೂಲದ ಬೆಳಕಿನಿಂದಲೇ ಮುಚ್ಚಿರಬೇಕು, ಎಂದು ಪೂರ್ವಪಕ್ಷ. ಸಣ್ಣದೀಪವು ದೊಡ್ಡ ದೀಪ ಬಂದಾಗಲೂ ಬೆಳಗುತ್ತಲೇ ಇರುತ್ತದೆ. ಆದರೆ ಅದರ ಪ್ರಕಾಶ ಅಡಗಿಹೋಗುತ್ತದೆ. ಅಂದಮಾತ್ರಕ್ಕೆ ಸಣ್ಣದೀಪ ದೊಡ್ಡದೀಪವನ್ನು ಅನುಸರಿಸಿ ಬೆಳಗುತ್ತದೆ ಎನ್ನಲಾಗದು. ಪ್ರಕೃತ ಸೂರ್ಯಾದಿಗಳು ಮತ್ತೊಬ್ಬರ ಪ್ರಕಾಶವನ್ನು ಅನುಸರಿಸಿ, ಅರ್ಥಾತ್ ಅವರಿಂದಾಗಿಯೇ ಬೆಳಗುತ್ತಾರೆ ಎಂದಿದೆ. ಬ್ರಹ್ಮನು 'ಸತ್ಯ ಸಂಕಲ್ಪಃ, ಭಾರೂಪಃ' ಎಂದು ಶ್ರುತಿಯಿಂದ ತೇಜೋರೂಪನೆಂದು ಸಿದ್ಧನಾಗಿದ್ದಾನೆ. ಅಂದಮೇಲೆ ಅವನ ಪ್ರಕಾಶವನ್ನೇ ಸೂರ್ಯಾದಿಗಳು ಅನುಕರಿಸುತ್ತಾರೆ ಎನ್ನಬಹುದು. ಇದು ಸಿದ್ಧಾಂತ.

**2. ಅಪಿ ಸ್ಮರ್ಯತೇ** - ಭಗವದ್ಗೀತೆಯ 'ನ ತದ್ಭಾಸಯತೇ ಸೂರ್ಯೋ' ಎಂದು ಮೊದಲಾದ ಶ್ಲೋಕಗಳೂ ಪರಮಾತ್ಮನ ಭಾನವನ್ನೇ ಈ ಜಗತ್ತು ಅನುಸರಿಸಿದೆ ಎನ್ನುತ್ತದೆ.

ಇಲ್ಲಿ ಶಾಂಕರ ಸಿದ್ಧಾಂತ ಹೀಗಿದೆ- ಆತ್ಮ ಜ್ಞಾನರೂಪ. ಎಲ್ಲೆಡೆ ತೋರುವುದು ಅದೊಂದೇ. ಆದರೆ ಅದನ್ನು ತಪ್ಪಾಗಿ 'ಇದು ಮಡಿಕೆ, ಕುಡಿಕೆ' ಎಂದೆಲ್ಲಾ ನಾವು ತಿಳಿಯುತ್ತೇವೆ - ಹಗ್ಗವನ್ನು ಹಾವೆಂದು ತಿಳಿದಂತೆ. ಹೀಗೆ ಆತ್ಮನಲ್ಲಿರುವ ಭಾನರೂಪ ಗುಣವನ್ನು ಈ ಜಗತ್ತಿನಲ್ಲಿ ಆರೋಪಿಸಲಾಗಿದೆ ಎಂದರ್ಥ.

## ಚಂದ್ರಿಕಾದಲ್ಲಿ ಮಾಡಿರುವ ವಿಮರ್ಶೆ

1. ಈ ಅಧಿಕರಣಕ್ಕೆ ದ್ವೈತ-ಅದ್ವೈತ ಉಭಯ ದರ್ಶನಗಳಲ್ಲೂ ವಿಷಯವಾಕ್ಯ ಸಮಾನವಾದುದು. ಆದರೆ ದ್ವೈತದರ್ಶನದಲ್ಲಿ ಕಾಠಕದಲ್ಲಿರುವ ವಾಕ್ಯ ವಿಷಯ. ಅದ್ವೈತದರ್ಶನದಲ್ಲಿ ಆಥರ್ವಣೋಪನಿಷತ್ತಿನಲ್ಲಿರುವ ಅದೇ ವಾಕ್ಯ ವಿಷಯ. ಆಥರ್ವಣದ ವಾಕ್ಯವನ್ನು ಇಲ್ಲಿ ವಿಷಯ ವಾಕ್ಯವನ್ನಾಗಿ ಪರಿಗಣಿಸುವುದು ಸರಿಯಲ್ಲ, ಏಕೆಂದರೆ ಅಲ್ಲಿರುವ ಈ ವಾಕ್ಯ 'ಯಸ್ಮಿನ್ ದ್ಯೌಃ (2.1.6)' ಇತ್ಯಾದಿ ಮಂತ್ರ ಹಾಗೂ 'ಅನಶ್ನನ್ನನ್ಯಃ' (3.1.1) ಎಂಬ ಪದ ಘಟಿತ ಮಂತ್ರಗಳ (2.1.12) ಮಧ್ಯದಲ್ಲಿ ಇದೆ. ಆ ಎರಡು ಮಂತ್ರಗಳನ್ನು ಬ್ರಹ್ಮಪರವೆಂದು ದ್ಯುಭ್ವಾದಿಸೂತ್ರ, ಸ್ಥಿತ್ಯದನ (1.3.1) ಸೂತ್ರಗಳಲ್ಲಿ ನಿರ್ಣಯಿಸಲಾಗಿದೆ. ಬ್ರಹ್ಮ ಪರವಾಗಿ ನಿರ್ಣೀತವಾದ ಮಂತ್ರಗಳ ಮಧ್ಯದಲ್ಲಿರುವ ಈ

ಮಂತ್ರವೂ ಬ್ರಹ್ಮಪರವಾಗಿರಲೇಬೇಕು. ಅಷ್ಟೇ ಅಲ್ಲ, ಈ ವಾಕ್ಯದ ಮೊದಲು 'ವಿರಜಂ ಬ್ರಹ್ಮ ನಿಷ್ಕಲಂ' ಎಂದೂ ಅನಂತರ 'ಬ್ರಹ್ಮೈವೇದಂ ಅಮೃತಂ ಪುರಸ್ತಾತ್' ಎಂದೂ ಬ್ರಹ್ಮಶಬ್ದದ ಉಲ್ಲೇಖವಿದೆ. ಹೀಗೆ ಈ ವಾಕ್ಯ ಬ್ರಹ್ಮಪರವೆನ್ನಲು ಸಾಕಷ್ಟು ಆಧಾರಗಳಿವೆ. ಅಂತಹ ವಾಕ್ಯವನ್ನು ಮತ್ತೆ ವಿಚಾರ ಮಾಡುವುದು ಅನಾವಶ್ಯಕ. ಕಾಠಕದಲ್ಲಿರುವ ಇದೇ ವಾಕ್ಯದಲ್ಲಿ ಈ ಸಮಸ್ಯೆ ಇಲ್ಲ, ಸಂಶಯಕ್ಕೆ ಕಾರಣವಾದ ಉಲ್ಲೇಖವೂ ಇದೆ. ಆದ್ದರಿಂದ ಅಥರ್ವಣದ ವಾಕ್ಯವನ್ನು ವಿಚಾರ್ಯವನ್ನಾಗಿ ಉಲ್ಲೇಖಿಸುವುದು ಸರಿಯಲ್ಲ. ಅದಕ್ಕಾಗಿಯೇ ಆಚಾರ್ಯರು ಕಾಠಕದ ಮಂತ್ರವನ್ನು ವಿಷಯವಾಕ್ಯವನ್ನಾಗಿ ತೆಗೆದುಕೊಂಡಿದ್ದಾರೆ.

**2.** 'ತಸ್ಯ ಭಾಸಾ ಸರ್ವಮಿದಂ ವಿಭಾತಿ' ಎಂದು ವಿಷಯವಾಕ್ಯದಲ್ಲಿರುವ ಅದ್ವೈತ ಭಾಷ್ಯಾಭಿಪ್ರೇತವಾದ, ಬ್ರಹ್ಮಸಾಧಕ ಲಿಂಗ 'ಎಲ್ಲವೂ ಬ್ರಹ್ಮರೂಪವಾದ ಜ್ಞಾನಕ್ಕೆ ಮಾತ್ರ ಗೋಚರ. ನಮಗೆ ಬರುವ ಜ್ಞಾನಗಳೆಲ್ಲವೂ ಬ್ರಹ್ಮರೂಪವಾದ ಜ್ಞಾನ' ಎಂದು. ಈ ಧರ್ಮವನ್ನು 'ನ ತದ್ಭಾಸಯತೇ ಸೂರ್ಯಃ' ಎಂಬ ಗೀತಾವಾಕ್ಯವಾಗಲೀ 'ಯದಾದಿತ್ಯಗತಂ ತೇಜಃ' ಎಂಬ ಗೀತಾವಾಕ್ಯವಾಗಲೀ ಹೇಳುತ್ತಿಲ್ಲ. ಅಂದಮೇಲೆ ಸಿದ್ಧಾಂತ ಸಮರ್ಥಕವಾದ ಲಿಂಗಕ್ಕೆ ಸಾಧಕವಾಗಿ 'ಅಪಿ ಸ್ಮರ್ಯತೇ' ಎಂಬ ಸೂತ್ರದಲ್ಲಿ ಈ ಎರಡು ವಾಕ್ಯಗಳನ್ನು ಉದಾಹರಿಸುವುದು ಅಸಂಗತ.

## ರಾಮಾನುಜ ಭಾಷ್ಯದಲ್ಲಿ ಹೇಳಿರುವ ಸೂತ್ರಾರ್ಥ

ರಾಮಾನುಜ ಭಾಷ್ಯದಲ್ಲಿ ಈ ಎರಡು ಸೂತ್ರಗಳನ್ನೂ ಹಿಂದಿನ ದಹರಾಧಿಕರಣದಲ್ಲೇ ಸೇರಿಸಲಾಗಿದೆ. ಛಾಂದೋಗ್ಯದ ಎಂಟನೆಯ ಅಧ್ಯಾಯದ ಮೊದಲ ಖಂಡ ದಹರವಿದ್ಯೆಯನ್ನು ಹೇಳುತ್ತದೆ. ಎರಡನೆಯ ಖಂಡದಲ್ಲಿ ಇಂದ್ರ ಮತ್ತು ಪುರೋಚನರೊಂದಿಗೆ ಬ್ರಹ್ಮ ನಡೆಸಿದ ಸಂವಾದವಿದೆ. ಅಲ್ಲಿ 'ಏಷಃ ಸಂಪ್ರಸಾದಃ' ಎಂದು ಜೀವನೇ ಪ್ರತಿಪಾದ್ಯ ದಹರ ಬ್ರಹ್ಮನಲ್ಲ. ಆದರೆ, ಆ ಪ್ರಕರಣದಲ್ಲೂ ದಹರಾತ್ಮನಿಗೆ ಹೇಳಿದ ಅಮೃತತ್ವಾದಿಗುಣಗಳ ಉಲ್ಲೇಖವಿದೆ. ಆದ್ದರಿಂದ ಅಲ್ಲಿ ಹೇಳಿದ ಆತ್ಮನೂ ದಹರಾತ್ಮನಾಗಿರಬಹುದು ಎಂಬ ಸಂಶಯವನ್ನು 'ಉತ್ತರಾತ್ ಚೇತ್ ಆವಿರ್ಭೂತಸ್ವರೂಪಸ್ತು' ಎಂಬ ಸೂತ್ರ ಪರಿಹರಿಸಿದೆ. ಆ ಪ್ರಕರಣದಲ್ಲಿ ಸ್ವರೂಪಾವಿರ್ಭಾವವನ್ನು ಪಡೆದ ಜೀವನೇ ಪ್ರತಿಪಾದ್ಯ, ದಹರ ಬ್ರಹ್ಮನಲ್ಲ ಎಂದು ಅದರ ತಾತ್ಪರ್ಯ. 'ಅನುಕೃತೇಃ ತಸ್ಯ ಚ' ಎಂಬ ಸೂತ್ರ ಜೀವನಿಗೆ ಮುಕ್ತಿಯಲ್ಲಿ ಬ್ರಹ್ಮಸಾದೃಶ್ಯವನ್ನು ಹೇಳಿದೆ. ಅನುಕೃತಿ ಎಂದರೆ ಸಾದೃಶ್ಯ. ಪ್ರಜಾಪತಿಸಂವಾದಪ್ರಕರಣದಲ್ಲಿ ಬ್ರಹ್ಮನ ಸಾದೃಶ್ಯವನ್ನು ಪಡೆದ ಮುಕ್ತಜೀವ ಪ್ರತಿಪಾದ್ಯ, ಅದಕ್ಕಿಂತ ಹಿಂದಿನ ದಹರಪ್ರಕರಣದಲ್ಲಿ ಬ್ರಹ್ಮ ಪ್ರತಿಪಾದ್ಯ. ಜೀವನಿಗೆ ಬ್ರಹ್ಮಸಾದೃಶ್ಯವನ್ನು ಹೇಳುವ,

ಇದಂ ಜ್ಞಾನಮುಪಾಶ್ರಿತ್ಯ ಮಮ ಸಾಧರ್ಮ್ಯಮಾಗತಾಃ।

ಎಂಬ ಭಗವದ್ಗೀತೆಯನ್ನು 'ಅಪಿ ಸ್ಮರ್ಯತೇ' ಎಂಬ ಸೂತ್ರ ತಿಳಿಸುತ್ತದೆ. ಇದು ರಾಮಾನುಜ ಭಾಷ್ಯದ ವ್ಯಾಖ್ಯಾನ.

## ಚಂದ್ರಿಕಾದಲ್ಲಿ ಮಾಡಿರುವ ವಿಮರ್ಶೆ

ಪ್ರಜಾಪತಿ ಸಂವಾದ ಪ್ರಕರಣ ಜೀವ ಪರ ಎನ್ನುವುದು ಸರಿಯಲ್ಲ. ಇಂದ್ರ 'ಯಃ ಅಪಹತಪಾಪ್ಮಾ...ಸೋಽನ್ವೇಷ್ಟವ್ಯಃ...ತಂ ಇಚ್ಛಂತೌ ಆವಾತ್ಸ್ವ' ಎಂದು ದಹರಾತ್ಮನಿಗೆ ಹೇಳಿದ ಗುಣಗಳುಳ್ಳ ಆತ್ಮನ ಕುರಿತು ಪ್ರಜಾಪತಿಯಲ್ಲಿ ಕೇಳಿದ್ದಾನೆ. ಅದಕ್ಕೆ ಜೀವಾತ್ಮನ ಬಗ್ಗೆ ಉತ್ತರಿಸಿದರೆ ಅಸಂಗತವಲ್ಲವೆ?

ಈ ಪ್ರಕರಣದಲ್ಲಿ 'ಸ್ವೇನ ರೂಪೇಣ ಅಭಿನಿಷ್ಪದ್ಯತೇ' ಎಂದಂತೆ ಮೊದಲಿನ ದಹರ ಪ್ರಕರಣದಲ್ಲಿ ಇದೇ ವಾಕ್ಯವಿದೆ. ಅಲ್ಲಿ 'ಯಾರ ಅನುಗ್ರಹದಿಂದ ಜೀವನು ಸ್ವಸ್ವರೂಪವನ್ನು ಪಡೆವನೋ ಅಂತಹ ದಹರ ಬ್ರಹ್ಮ' ಎಂದು ಅಭಿಪ್ರಾಯ ಹೇಳುವುದಾದರೆ ಇಲ್ಲೂ ಆ ವಾಕ್ಯಕ್ಕೆ ಅದೇ ಅಭಿಪ್ರಾಯವನ್ನು ಏಕೆ ಹೇಳಬಾರದು?

**॥ ಇಲ್ಲಿಗೆ ಅನುಕೃತ್ಯಧಿಕರಣ ಮುಗಿಯಿತು ॥**

# ವಾಮನಾಧಿಕರಣ - 7

**ವಿಷ್ಣುರೇವ ವಿಜಿಜ್ಞಾಸ್ಯ ಇತ್ಯುಕ್ತಮ್ । ತತ್ರ-**

**ಊರ್ಧ್ವಂ ಪ್ರಾಣಮುನ್ನಯತಿ ಅಪಾನಂ ಪ್ರತ್ಯಗಸ್ಯತಿ ।**

**ಮಧ್ಯೇ ವಾಮನಮಾಸೀನಂ ವಿಶ್ವೇದೇವಾ ಉಪಾಸತೇ ॥ (ಕಠ 5.3)**

**ಇತಿ ಸರ್ವದೇವೋಪಾಸ್ಯಃ ಕಶ್ಚಿತ್ ಪ್ರತೀಯತೇ । ಸ ಚ,**

**ಏವಮೇವೈಷ ಪ್ರಾಣಃ ಇತರಾನ್ ಪ್ರಾಣಾನ್ ಪೃಥಕ್ ಪೃಥಗೇವ ಸನ್ನಿಧತ್ತೇ ।**

**(ಪ್ರಶ್ನ 3.4)**

**ಯೋಽಯಂ ಮಧ್ಯಮಃ ಪ್ರಾಣಃ (ಬೃ.3.5.21)**

**ಕುವಿದಂಗ....(ಋ.7.91.1)**

**ಇತ್ಯಾದಿನಾ ಪ್ರಾಣವ್ಯವಸ್ಥಾಪಕತ್ವಾತ್, ಮಧ್ಯಮತ್ವಾತ್, ಸರ್ವದೇವೋಪಾಸ್ಯತ್ವಾಚ್ಚ ವಾಯುರೇವೇತಿ ಪ್ರತೀಯತೇ । ಅತೋಽಬ್ರವೀತ್,**

**ಓಂ ॥ ಶಬ್ದಾದೇವ ಪ್ರಮಿತಃ ॥ ಓಂ**

**ವಾಮನಶಬ್ದಾದೇವ ವಿಷ್ಣುರಿತಿ ಪ್ರಮಿತಃ । ನ ಹಿ ಶ್ರುತೇಃ ಲಿಂಗಂ ಬಲವತ್ ।**

**ಶ್ರುತಿರ್ಲಿಂಗಂ ಸಮಾಖ್ಯಾ ಚ ವಾಕ್ಯಂ ಪ್ರಕರಣಂ ತಥಾ ।**
**ಪೂರ್ವಂ ಪೂರ್ವಂ ಬಲೀಯಃ ಸ್ಯಾತ್ ಏವಮಾಗಮನಿರ್ಣಯಃ ॥**

**ಇತಿ ಸ್ಕಾಂದೇ ।**

**ತಚ್ಚ ಲಿಂಗಂ ವಿಷ್ಣೋರೇವ । ತಸ್ಯೈವ ಪ್ರಾಣತ್ವೋಕ್ತೇಃ -**
**'ತದ್ವೈ ತ್ವಂ ಪ್ರಾಣೋ ಅಭವಃ' ಇತಿ ॥ 24 ॥**

ಪ್ರಥಮ ಸೂತ್ರದಲ್ಲಿ ವಿಷ್ಣುವನ್ನೇ ಜಿಜ್ಞಾಸೆ ಮಾಡಬೇಕು ಎನ್ನಲಾಗಿದೆ. ಆ ಜಿಜ್ಞಾಸೆಗೆ ವಿಷಯನಾಗಿ (ತತ್ರ) 'ಊರ್ಧ್ವಂ ಪ್ರಾಣಂ ಉನ್ನಯತಿ' ಎಂದು ಸರ್ವದೇವತೆಗಳಿಂದ ಉಪಾಸ್ಯನಾದವನೊಬ್ಬ ತಿಳಿಯಲ್ಪಟ್ಟಿದ್ದಾನೆ. ಅವನಾದರೋ 'ಏವಮೇವೈಷಃ' ಎಂಬ ಶ್ರುತಿವಾಕ್ಯ ಹೇಳಿದ ಪ್ರಾಣಾಪಾನಾದಿವಾಯುಗಳ ವ್ಯವಸ್ಥಾಪಕತ್ವ, 'ಯೋಽಯಂ ಮಧ್ಯಮಃ ಪ್ರಾಣಃ' ಎಂದು ಹೇಳಿರುವ ಮಧ್ಯಮತ್ವ, 'ಕುವಿದಂಗ' ಎಂದು ಹೇಳಿರುವ ಸರ್ವದೇವೋಪಾಸ್ಯತ್ವ ಈ ಮೂರು ಧರ್ಮಗಳಿಂದ ವಾಯುದೇವನೇ ಎಂದು ತಿಳಿಯುತ್ತದೆ. ಅದಕ್ಕಾಗಿ ಸೂತ್ರಕಾರರು ಈ ಸೂತ್ರವನ್ನು ಹೇಳಿದರು.

ಕಾಠಕಶ್ರುತಿಯಲ್ಲಿ 'ವಾಮನ' ಎಂಬ ಶಬ್ದವಿರುವುದರಿಂದಾಗಿ ಸರ್ವದೇವೋಪಾಸ್ಯನಾದವನು ವಿಷ್ಣುವೇ, ಎಂದು ತಿಳಿಯಬಹುದು. ಶ್ರುತಿಗಿಂತ ಲಿಂಗ ಎಂದೂ ಪ್ರಬಲವಾಗದು ತಾನೆ. ''ಶ್ರುತಿ, ಲಿಂಗ, ಸಮಾಖ್ಯಾ, ವಾಕ್ಯ, ಪ್ರಕರಣ, ಇವುಗಳಲ್ಲಿ ಮೊದಮೊದಲನೆಯದು ಪ್ರಬಲ. ಇವುಗಳ ಪ್ರಾಬಲ್ಯ ದೌರ್ಬಲ್ಯಗಳಿಂದ ಆಗಮಗಳ ಅರ್ಥವು ನಿಶ್ಚಯಿಸಲ್ಪಡುತ್ತದೆ'' ಎಂದು ಸ್ಕಾಂದಪುರಾಣದಲ್ಲಿದೆ. ವಾಯುದೇವನಿಗೆ ಹೇಳಿರುವ ಧರ್ಮಗಳೂ ವಿಷ್ಣುವಿನವೇ. 'ತದ್ವೈ ತ್ವಂ ಪ್ರಾಣೋ ಅಭವಃ' ಅವನೇ ಪ್ರಾಣನೆಂದೂ ಪ್ರಾಣಾಧಿಕರಣದಲ್ಲಿ ಹೇಳಲಾಗಿದೆ. ॥ 24 ॥

**ವಿವರಣೆ : 1.** ಈ ಅಧಿಕರಣದಲ್ಲಿ ಈಶಾನಶಬ್ದದ ಸಮನ್ವಯವನ್ನು ಮಾಡಲಾಗಿದೆ. ಆ ಶಬ್ದದಿಂದ ರುದ್ರದೇವ ವಾಚ್ಯನಾದರೂ ಅವನಿಗೆ ಇಲ್ಲಿ ಹೇಳಲಾದ ಪ್ರಾಣಾಪಾನಾದಿ ವಾಯುನಿಯಾಮಕತ್ವ ಇಲ್ಲವಾದುದರಿಂದ ವಾಯುದೇವನೇ ಈಶಾನ ಶಬ್ದದ ಅರ್ಥ, ಎಂದು ಪೂರ್ವಪಕ್ಷ. ಅವನು ಈಶಾನಶಬ್ದವಾಚ್ಯನಾದರೆ ಇಲ್ಲಿ ಹೇಳಿದ 'ವಿಶ್ವೇದೇವಾ ಉಪಾಸತೇ' ಎಂಬ ಸರ್ವದೇವೋಪಾಸ್ಯತ್ವ-ಅರ್ಥಾತ್ ಜಿಜ್ಞಾಸ್ಯತ್ವ ಅವನಿಗೆ ಬಂದಂತಾಗುತ್ತದೆ. ಅವನು ಜಿಜ್ಞಾಸ್ಯನಾದರೆ ಪ್ರಥಮಸೂತ್ರದಲ್ಲಿ ವಿಷ್ಣುವೇ ಜಿಜ್ಞಾಸ್ಯ, ಎಂದು ಹೇಳಿದ ಪ್ರಮೇಯ ತಪ್ಪಾಗುತ್ತದೆ. ಆದ್ದರಿಂದ ಈ ವಿಷಯ ವಿಚಾರಣೀಯವೆನಿಸಿದ್ದು ಪ್ರಕೃತ ಸಂಗತವಾಗಿದೆ.

**2. ಪೂರ್ವಪಕ್ಷ**- ಕಾಠಕದಲ್ಲಿ-

ಊರ್ಧ್ವಂ ಪ್ರಾಣಂ ಉನ್ನಯತಿ ಅಪಾನಂ ಪ್ರತ್ಯಗಸ್ಯತಿ ।
ಮಧ್ಯೇ ವಾಮನಮಾಸೀನಂ ವಿಶ್ವೇದೇವಾ ಉಪಾಸತೇ ॥

ಎಂದಿದೆ. ''ತಾನು ಮಧ್ಯದಲ್ಲಿದ್ದು ಪ್ರಾಣನನ್ನು ಮೇಲ್ಮುಖನನ್ನಾಗಿಯೂ ಅಪಾನನನ್ನು ಕೆಳಮುಖನನ್ನಾಗಿಯೂ ನಿಯಂತ್ರಿಸುವ ವಾಮನನನ್ನು ಎಲ್ಲ ದೇವತೆಗಳೂ ಉಪಾಸನೆ ಮಾಡುತ್ತಾರೆ'' ಎಂದು ಅದರ ಅರ್ಥ. ಇದರ ಹಿಂದಿನ ವಾಕ್ಯದಲ್ಲಿ 'ಈಶಾನೋ ಭೂತಭವ್ಯಸ್ಯ - ಹಿಂದಿನ-ಮುಂದಿನ ವಸ್ತುಗಳಿಗೆಲ್ಲ ಅವನು ಒಡೆಯ' ಎಂದು 'ಈಶಾನ' ಎಂಬ ನಾಮದ ಉಲ್ಲೇಖವಿದೆ. ಇದರಿಂದ ಪ್ರಾಣಾದಿ ನಿಯಂತ್ರಕ ಈಶಾನನೆಂದು ತಿಳಿಯಬಹುದು. ಹೀಗೆ ಪ್ರಾಣಾದಿಗಳನ್ನು ನಿಯಂತ್ರಿಸುವ ಈ ಈಶಾನ ವಾಯುದೇವ. ಏಕೆಂದರೆ, ಈ ಮಂತ್ರದಲ್ಲಿ ಮೂರು ಗಮಕಗಳಿವೆ ಅ. ಪ್ರಾಣ ವ್ಯವಸ್ಥಾಪಕತ್ವ ಆ. ಮಧ್ಯಮತ್ವ ಇ. ಸರ್ವದೇವೋಪಾಸ್ಯತ್ವ. ಇವು ಮೂರೂ ಮುಖ್ಯಪ್ರಾಣನ ಧರ್ಮಗಳು.

**ಅ. ಪ್ರಾಣವ್ಯವಸ್ಥಾಪಕತ್ವ**-ಪ್ರಶ್ನೋಪನಿಷತ್ತಿನಲ್ಲಿ ಉದಾಹರಣಪೂರ್ವಕವಾಗಿ ಇದನ್ನು ಸಮರ್ಥಿಸಲಾಗಿದೆ. ಚಕ್ರವರ್ತಿ ತನ್ನ ವಿಶಾಲಸಾಮ್ರಾಜ್ಯದ ಒಂದೊಂದು ಭಾಗವನ್ನು ಆಡಳಿತದ ಸುವ್ಯವಸ್ಥೆಗಾಗಿ ಹಂಚಿಕೊಡುವಂತೆ ಇವನೂ ಪ್ರಾಣ-ಅಪಾನ ಮೊದಲಾದ ಐದು ವಾಯುಗಳಿಗೆ ಪ್ರತ್ಯೇಕ ಕೆಲಸಗಳನ್ನು ನೀಡಿ ನಮ್ಮ ದೇಹದ ಅಂಗಾಂಗಗಳಲ್ಲಿ ಅವರನ್ನು ವ್ಯವಸ್ಥೆಗೊಳಿಸಿದ್ದಾನೆ - ಹೃದಯದಲ್ಲಿ ಪ್ರಾಣ, ಅಧೋದೇಶದಲ್ಲಿ ಅಪಾನ ಹೀಗೆ. ಇವನು ಯಾರು? ಇದರ ಹಿಂದಿನ ಮಂತ್ರದಲ್ಲಿ ಅದು ಸ್ಪಷ್ಟವಾಗಿದೆ - ಆತ್ಮತ ಏಷ ಪ್ರಾಣೋ ಜಾಯತೇ - ಆತ್ಮನಿಂದ = ಪರಮಾತ್ಮನಿಂದ ಜನಿಸಿದ ಪ್ರಾಣ ಅವನು. ಹೀಗೆ ಪ್ರಾಣ ವ್ಯವಸ್ಥಾಪಕತ್ವ ಮುಖ್ಯಪ್ರಾಣನ ಕೆಲಸ ಎಂದು ಪ್ರಶ್ನೋಪನಿಷತ್ತಿನಲ್ಲಿದೆ.

**ಆ. ಬೃಹದಾರಣ್ಯಕದಲ್ಲಿ**-'ಯೋಽಯಂ ಮಧ್ಯಮಃ ಪ್ರಾಣಃ' ಎಂದು ಮುಖ್ಯಪ್ರಾಣ ಮಧ್ಯಮ ಎನ್ನಲಾಗಿದೆ. ಅಲ್ಲಿ ವಾಗಾದಿ ಅಭಿಮಾನಿ ದೇವತೆಗಳು ಮೃತ್ಯುಗ್ರಸ್ತರು ಎಂದು ಹೇಳಿ 'ಅಥೈನಂ ನಾಪ್ನೋತ್ ಯೋಽಯಂ ಮಧ್ಯಮಃ ಪ್ರಾಣಃ' ಎಂದು ಹೇಳಿದೆ. ಜೀವಿಸಿರುವವರೆಲ್ಲ ಪ್ರಾಣರು. ಅವರಲ್ಲಿ ಮೃತ್ಯುಭಯವಿರುವ ಪ್ರಾಣರು ಅಧಮರು. ವಾಯುದೇವರು ಮತ್ತು ವಿಷ್ಣು ಇವರಿಬ್ಬರು ಮರಣಭಯವಿಲ್ಲದ ಪ್ರಾಣರು. ಅವರಿಬ್ಬರಲ್ಲಿ ವಿಷ್ಣು ಸರ್ವೋತ್ತಮ, ವಾಯು ಮಧ್ಯಮ. ಹೀಗೆ 'ಮಧ್ಯೇ ವಾಮನಮಾಸೀನಂ' ಎಂದು ಹೇಳಿರುವ ಮಧ್ಯಮತ್ವ ಮುಖ್ಯಪ್ರಾಣನ ಧರ್ಮ.

ಬೃಹದಾರಣ್ಯಕದ ನಾಲ್ಕನೆಯ ಅಧ್ಯಾಯದಲ್ಲೂ

'ಅಯಂ ವಾವ ಶಿಶುಃ ಯೋಽಯಂ ಮಧ್ಯಮಃ ಪ್ರಾಣಃ'

ಎಂದು ವಾಯುದೇವನನ್ನು ಮಧ್ಯಮನೆಂದು ಹೇಳಲಾಗಿದೆ. ಈ ಸ್ಥೂಲದೇಹದೊಳಗೆ ಲಿಂಗದೇಹ. ಅದರಲ್ಲಿ ಪರಮಾತ್ಮನೆಂಬ ಗೂಟಕ್ಕೆ ಲಕ್ಷ್ಮೀದೇವಿಯೆಂಬ ಹಗ್ಗದಿಂದ ಕಟ್ಟಲ್ಪಟ್ಟ ಮಗು ವಾಯುದೇವ, ಮಧ್ಯಮ ಪ್ರಾಣ.

**ಇ. ಸರ್ವದೇವೋಪಾಸ್ಯತ್ವ**- ಋಗ್ವೇದ ಮಂತ್ರ ಇದನ್ನು ತಿಳಿಸುತ್ತದೆ,

ಕುವಿದಂಗ ನಮಸಾ ಯೇ ವೃಧಾಸಃ ಪುರಾ ದೇವಾ ಅನವದ್ಯಾಸ ಆಸನ್ ।
ತೇ ವಾಯವೇ ಮನವೇ ಬಾಧಿತಾಯ ಆವಾಸಯನ್ ಉಷಸಂ ಸೂರ್ಯೇಣ ॥

ಅಂಗ= ಪ್ರಿಯನೆ, ಯೇ= ಯಾವ ದೇವತೆಗಳು ನಮಸಾ= ನಮಸ್ಕಾರವೇ ಮುಂತಾದ ಸೇವೆಗಳಿಂದ ವೃಧಾಸಃ= ಜ್ಞಾನಾದಿ ಗುಣಗಳಿಂದ ಸಂಪನ್ನರಾಗಿ, ಅನವದ್ಯಾಸಃ= ಅಜ್ಞಾನಾದಿ ದೋಷಗಳಿಂದ ರಹಿತರಾಗಿ ಪುರಾ= ಮೊದಲೇ ಆಸನ್= ಆಗಿದ್ದರೋ ಅಂತಹ ದೇವತೆಗಳು ಸೂರ್ಯೇಣ ಸಹ= ಸೂರ್ಯನೊಂದಿಗೆ ಕ್ವಚಿತ್= ರಹಸ್ಯ ಸ್ಥಳದಲ್ಲಿ ಮನವೇ= ಜ್ಞಾನಿಯಾದ ಬಾಧಿತಾಯ (ಬಾಧ್ಭಿಃ ಇತಾಯ) ಸಂಸಾರಬಾಧಿತರಿಂದ ಶರಣಾಗತನಾದ ವಾಯವೇ= ವಾಯುದೇವನನ್ನು ಉದ್ದೇಶಿಸಿ ಉಷಸಂ= ತಮ್ಮ ಬುದ್ಧಿಯನ್ನು ಆವಾಸಯನ್= ನೆಲೆಗೊಳಿಸಿದರು.

ಈ ಶ್ರುತಿಯಲ್ಲಿ 'ಬುದ್ಧಿಂ= ಧ್ಯಾನಾಖ್ಯಾಂ' ಎಂದು ಸತ್ತರ್ಕದೀಪಾವಲಿಯಲ್ಲಿ ಶ್ರೀಪದ್ಮನಾಭತೀರ್ಥರು ಅರ್ಥವನ್ನು ಹೇಳಿದ್ದಾರೆ. ಇದರಿಂದ ದೇವತೆಗಳು ಜ್ಞಾನಕ್ಕಾಗಿ ವಾಯುದೇವನನ್ನು ಧ್ಯಾನಮಾಡಿದರು ಎಂದು ತಿಳಿಯುತ್ತದೆ. ಹೀಗೆ 'ವಿಶ್ವೇದೇವಾ ಉಪಾಸತೇ' ಎಂದು ಕಾಠಕಮಂತ್ರದಲ್ಲಿ ಹೇಳಿರುವ ಗುಣ ವಾಯುದೇವನಲ್ಲಿ ಇದೆ ಎಂದು ಋಗ್ವೇದದ ಈ ಮಂತ್ರ ತಿಳಿಸುತ್ತದೆ.

ಈ ಮೂರು ಕಾರಣಗಳಿಂದ ಈಶಾನ ವಾಯುದೇವ ಎಂದು ಪೂರ್ವಪಕ್ಷ.

**3.** 'ಈಶಾನೋ ಭೂತಭವ್ಯಸ್ಯ' ಎಂಬ ಕಾಠಕ ಮಂತ್ರದಲ್ಲಿ ಹೇಳಲ್ಪಟ್ಟ ಈಶಾನ ವಿಷ್ಣು. ಕಾರಣ, ಅದರ ಮುಂದಿನ ಮಂತ್ರದಲ್ಲಿ 'ಮಧ್ಯೇ ವಾಮನಮಾಸೀನಂ' ಎಂದು 'ವಾಮನ' ನಾಮವನ್ನು ಅವನಲ್ಲಿ ಪ್ರಯೋಗಿಸಲಾಗಿದೆ. ಅದು ವಿಷ್ಣುನಾಮ, ವಾಯುದೇವನಿಗೆ ಆ ಹೆಸರಿಲ್ಲ. ಪೂರ್ವಪಕ್ಷಕ್ಕೆ ಸಾಧಕವಾದುದು ಲಿಂಗ. ಸಿದ್ಧಾಂತ ಸಾಧಕ ಶ್ರುತಿ. ಇವೆರಡರಲ್ಲಿ ಶ್ರುತಿಯೇ ಪ್ರಬಲ. ಆದ್ದರಿಂದ ಈಶಾನ ವಿಷ್ಣು ಎನ್ನುವುದೇ ಸಮಂಜಸ.

**4.** ಶ್ರುತ್ಯಾದಿಗಳು ವೇದದ ಅರ್ಥನಿಶ್ಚಾಯಕಗಳು. ಅವುಗಳ ಸ್ವರೂಪವನ್ನು ತ್ರಿವಿಕ್ರಮಪಂಡಿತಾಚಾರ್ಯರು ಹೀಗೆ ಹೇಳಿದ್ದಾರೆ,

ಶ್ರುತಿರ್ನಾಮ ಸಮುದ್ದಿಷ್ಟಂ ಲಿಂಗಂ ತಲ್ಲಕ್ಷಣಂ ಸ್ಮೃತಮ್ ।
ಪದಾನಿ ನಿರಪೇಕ್ಷಾಣಿ ವಾಕ್ಯಂ ಪ್ರಕರಣಂ ತಥಾ ॥
ಏಕಸ್ಯ ಪ್ರತಿಪತ್ತ್ಯಂಗವಚನಂ ಸ್ಥಾನಮುಚ್ಯತೇ ।
ಅನ್ಯತ್ರ ತತ್ ಸಮೋಕ್ತಿಸ್ತು ಸಮಾಖ್ಯಾ ಸ್ಥಾನಮೇವ ಚ ।
ಅಧ್ಯಾಯಾದಿ ಪ್ರಬಂದಾಸ್ತು ಪ್ರಭೇದಾ ಆಗಮಸ್ಯ ಚ ॥
(ಇತಿ ಸಂಪ್ರದಾಯ ವಿದ್ವದ್ವಚನಾತ್)

ಇವುಗಳ ಸ್ವರೂಪವನ್ನು ಸಮನ್ವಯಾಧಿಕರಣದಲ್ಲಿ (1-1-4) ತಿಳಿಸಲಾಗಿದೆ.

ಇವುಗಳಲ್ಲಿ ಪರಸ್ಪರ ವಿರೋಧ ಬಂದಾಗ ಮುಂದಿನದು ಪ್ರಬಲ, ಹಿಂದಿನದು ದುರ್ಬಲ. ಉದಾಹರಣೆಗೆ- ಶ್ರುತಿಗೂ ಲಿಂಗಕ್ಕೂ ವಿರೋಧ ಬಂದರೆ ಶ್ರುತಿ ಪ್ರಬಲ. ಪ್ರಕೃತ ವಾಮನಾಧಿಕರಣದಲ್ಲಿ ಈಶಾನಶಬ್ದ ವಾಯುವಾಚಕ ಎಂದು ಸಾಧಿಸಲು 'ಪ್ರಾಣವ್ಯವಸ್ಥಾಪಕತ್ವ' ಲಿಂಗ. ವಿಷ್ಣು ಎನ್ನಲು ವಾಮನ ಶ್ರುತಿ ಆಧಾರ. ಹೀಗೆ ಶ್ರುತಿಯಿಂದ ಒಂದು ನಿರ್ಧಾರವಾದರೆ ಲಿಂಗದಿಂದ ಮತ್ತೊಂದು ನಿರ್ಧಾರ ಮಾಡಬಹುದಾದ ಪ್ರಸಂಗ. ಆಗ ಶ್ರುತಿ ಇರುವ ಪಕ್ಷವನ್ನು ಒಪ್ಪಿಕೊಂಡು ಲಿಂಗಕ್ಕೆ ಶ್ರುತಿಗೆ ಹೊಂದುವ ಅರ್ಥಾಂತರವನ್ನು ಮಾಡಬೇಕು.

**ಆ.** ವಾಕ್ಯಕ್ಕಿಂತ ಲಿಂಗ ಪ್ರಬಲ- 'ಕಿಂ ತದತ್ರ ವಿದ್ಯತೇ... ಉಭೇ ಅಸ್ಮಿನ್ ದ್ಯಾವಾ ಪೃಥಿವೀ' ಈ ವಾಕ್ಯದಿಂದ ದಹರಸ್ಥವಾದುದು ಆಕಾಶ ಎಂದು ತಿಳಿಯುತ್ತದೆ. 'ಪಾಪರಾಹಿತ್ಯ' ಲಿಂಗದಿಂದ ದಹರಸ್ಥ ವಿಷ್ಣು ಎಂದು ತಿಳಿಯುತ್ತದೆ. ಇವೆರಡರಲ್ಲಿ ಲಿಂಗವೇ ಪ್ರಬಲವಾದುದರಿಂದ ಲಿಂಗವನ್ನು ಆಧರಿಸಿ ದಹರಸ್ಥ ವಿಷ್ಣು ಎಂದೇ ನಿರ್ಧರಿಸಲಾಗಿದೆ.

**ಇ.** ಪ್ರಕರಣಕ್ಕಿಂತ ವಾಕ್ಯ ಪ್ರಬಲ - ಬೃಹದಾರಣ್ಯಕೋಪನಿಷತ್ತಿನ 'ಯೋಽಯಂ ವಿಜ್ಞಾನಮಯಃ ಪ್ರಾಣೇಷು ಹೃದ್ಯಂತಃ ಜ್ಯೋತಿಃ ಪುರುಷಃ' ಎಂದು ಪ್ರಾರಂಭದ ವಾಕ್ಯದಲ್ಲಿ ಜೀವಾತ್ಮನೇ ಪ್ರತಿಪಾದ್ಯ. 'ಕಿಂ ಜ್ಯೋತಿರಯಂ ಪುರುಷಃ' ಎಂದು ಜನಕನ ಪ್ರಶ್ನೆ ಜೀವನನ್ನು ಕುರಿತಾಗಿದೆ. ಅದಕ್ಕೆ ಯಾಜ್ಞವಲ್ಕ್ಯರು ಉತ್ತರಿಸುವ ಪ್ರಕರಣ ಇದು. ಹೀಗೆ ಜೀವಾತ್ಮನ ಕುರಿತ ಪ್ರಶ್ನೋತ್ತರ ರೂಪದಲ್ಲಿರುವುದರಿಂದ ಇದು ಜೀವ ಪ್ರಕರಣ. ಇಲ್ಲಿರುವ 'ಕತಮ ಆತ್ಮಾ' ಎಂದು ಆತ್ಮ ಶಬ್ದ ಘಟಿತವಾದ ವಾಕ್ಯದಿಂದ ಇಲ್ಲಿ ಹೇಳಿದ ಜ್ಯೋತಿ ಆತ್ಮ ಶಬ್ದವಾಚ್ಯನಾದ ವಿಷ್ಣು ಎಂದೂ ಹೇಳಬಹುದು. ಪ್ರಕರಣಕ್ಕಿಂತ ವಾಕ್ಯ ಪ್ರಬಲ. ಆದ್ದರಿಂದ ಜ್ಯೋತಿ ವಿಷ್ಣು ಎಂದೇ ನಿರ್ಧಾರವಾಗುತ್ತದೆ. (ಜ್ಯೋತಿರ್ದರ್ಶನಾತ್ 1.3.40)

**ಈ.** ಸ್ಥಾನಕ್ಕಿಂತ ಪ್ರಕರಣ ಪ್ರಬಲ - ಸಮಗ್ರ ಷಟ್ ಪ್ರಶ್ನೋಪನಿಷತ್ತು ಅನೇಕ ಪ್ರಕರಣಗಳಿರುವ ಸ್ಥಾನ. ಅದರ ಒಂದು ಪ್ರಕರಣ ಆ ಉಪನಿಷತ್ತಿನ ಮೂರನೆಯ ಪ್ರಶ್ನೆಯ ಭಾಗ.

'ಆತ್ಮತ ಏಷ ಪ್ರಾಣೋ ಜಾಯತೇ' ಎಂದು ಪ್ರಾಣನ ಉಲ್ಲೇಖದಿಂದ ಪ್ರಾರಂಭವಾಗುವ ಈ ಪ್ರಕರಣದ ಆಧಾರದಿಂದ ಸ್ಥಾನವನ್ನು ಗೌಣವಾಗಿಸಿ ಇಲ್ಲಿ ಪ್ರಾಣನೇ ಪ್ರತಿಪಾದ್ಯ ಎಂದು ನಿರ್ಧರಿಸಲಾಗುತ್ತದೆ.

**ಉ.** ಸ್ಥಾನವು ಸಮಾಖ್ಯೆಗಿಂತ ಪ್ರಬಲ - 'ಅನ್ನಮಯ-ಪ್ರಾಣಮಯ ಮನೋಮಯ-ವಿಜ್ಞಾನಮಯ-ಆನಂದಮಯಾ ಮೇ ಶುದ್ಧ್ಯಂತಾಂ' ಎಂಬ ನಾರಾಯಣೋಪನಿಷತ್ತಿನ ಸಮಾಖ್ಯೆಯಿಂದ ತೈತ್ತಿರೀಯದಲ್ಲಿ ಪ್ರಾಣಮಯಾದಿಗಳು ಕೋಶವಾಚಕ ಶಬ್ದಗಳು ಎನ್ನಬಹುದು. ಬ್ರಹ್ಮಶಬ್ದದ ಉಲ್ಲೇಖವಿರುವ ಪ್ರಕರಣದಲ್ಲಿ ಹೇಳಿರುವುದರಿಂದ ಅನ್ನಮಯಾದಿಗಳು ಬ್ರಹ್ಮವಾಚಕ ಶಬ್ದಗಳು ಎಂದೂ ಹೇಳಬಹುದು.

ಅನ್ನಮಯಾದಿಗಳು
ಬ್ರಹ್ಮವಾಚಕಗಳು ಎಂದೇ ಸಿದ್ಧಾಂತ.

ಹಿಂದೆ ಹೇಳಿದಂತೆ ಶ್ರುತಿಯು ಲಿಂಗಕ್ಕಿಂತ ಸ್ವಭಾವತಃ ಪ್ರಬಲವಾದರೂ ಲಿಂಗವು ನಿರವಕಾಶವಾದರೆ ಶ್ರುತಿಗಿಂತ ಅದೇ ಪ್ರಬಲವಾಗುತ್ತದೆ. || ಸೂತ್ರ 24 ||

## ಓಂ || ಹೃದ್ಯಪೇಕ್ಷಯಾ ತು ಮನುಷ್ಯಾಧಿಕಾರತ್ವಾತ್ ||

**ಸರ್ವಗತಸ್ಯಾಪಿ ತಸ್ಯ ಅಂಗುಷ್ಠಮಾತ್ರತ್ವಂ ಹೃದ್ಯವಕಾಶಾಪೇಕ್ಷಯಾ ಯುಜ್ಯತೇ । ಇತರ ಪ್ರಾಣಿನಾಂ ಅಂಗುಷ್ಠಾಭಾವೇಽಪಿ ಮನುಷ್ಯಾಧಿಕಾರತ್ವಾತ್ ನ ವಿರೋಧಃ || 25 ||**

## || ಇತಿ ವಾಮನಾಧಿಕರಣಮ್ ||

ವಿಷ್ಣುವು ಸರ್ವತ್ರ ವ್ಯಾಪ್ತನಾದರೂ ನಮ್ಮ ಹೃದಯದಲ್ಲಿರುವ ಆಕಾಶದ ಪರಿಮಿತಿಯ ದೃಷ್ಟಿಯಿಂದ ಅವನಿಗೆ ಅಂಗುಷ್ಠ ಪರಿಮಿತಿಯು ಯುಕ್ತವಾಗುತ್ತದೆ. ಉಪನಿಷತ್ತಿನಲ್ಲಿ ಹೇಳಿರುವ ಉಪಾಸನೆಗೆ ಮನುಷ್ಯರಷ್ಟೇ ಅಧಿಕಾರಿಗಳಾದುದರಿಂದ ಮನುಷ್ಯೇತರ ಪ್ರಾಣಿಗಳಿಗೆ ಅಂಗುಷ್ಠವಿಲ್ಲದಿದ್ದರೂ ವಿರೋಧವೇನಿಲ್ಲ.

**ವಿವರಣೆ : 1.** ಈ ಅಧಿಕರಣಕ್ಕೆ ವಿಷಯವಾಕ್ಯದಲ್ಲಿ 'ಅಂಗುಷ್ಠಮಾತ್ರಃ ಪುರುಷಃ' ಎಂದು ಈಶಾನನ ಗಾತ್ರ ಅಂಗುಷ್ಠದಷ್ಟು ಮಾತ್ರ ಎಂದಿದೆ. ಈಶಾನ ವಿಷ್ಣುವಾದರೆ ಈ ಕಿರಿದಾದ ಗಾತ್ರ ವಿರುದ್ಧವಾಗುತ್ತದೆ, ಎಂದು ಆಕ್ಷೇಪ. ಎಲ್ಲರ ದೇಹದಲ್ಲೂ ಅವರವರ ಅಂಗುಷ್ಠದಷ್ಟೇ ಪರಿಮಿತವಾದ ಪ್ರದೇಶವಿರುತ್ತದೆ. ಅಲ್ಲಿ, ಪರಮಾತ್ಮ ವ್ಯಾಪ್ತನಾದರೂ, ಆ ಸ್ಥಾನಕ್ಕೆ ಅನುಗುಣವಾದ ಆಕಾರವನ್ನು ತಾಳಿ ಸನ್ನಿಹಿತನಾಗಿರುತ್ತಾನೆ. ಆದ್ದರಿಂದಲೇ 'ಅಂಗುಷ್ಠಾಗ್ರಪ್ರಮಾಣಕಃ' ಎಂದು ಹೃದಯಸ್ಥ ಭಗವದ್ರೂಪದ ನಿರೂಪಣೆ ಇದೆ.

ಹೃದಯಪ್ರದೇಶ ಸಂಕುಚಿತವಾದ ನಿಮಿತ್ತದಿಂದ ಭಗವಂತನಿಗೆ 'ಅಂಗುಷ್ಠದಷ್ಟು ಗಾತ್ರ' ಎಂದಾಗ ಭಗವಂತನಿಗೆ ಆ ಗಾತ್ರವೇ ಇಲ್ಲ, ದೇಶಪರಿಮಿತಿಯಿಂದಷ್ಟೇ ಅವನನ್ನು 'ಅಂಗುಷ್ಠಪರಿಮಿತ' ಎನ್ನಲಾಗುತ್ತದೆ, ಎಂದು ಭಾವಿಸಬಾರದು. ದ್ವೈತದರ್ಶನದಲ್ಲಿ ಅಸದುಪಾಸೆ ಇಲ್ಲವಾದುದರಿಂದ ಆ ಗಾತ್ರ ಪರಮಾತ್ಮನಿಗೆ ಇಲ್ಲದಿದ್ದರೆ ಜೀವರಿಂದ ಅವನು ಅಂಗುಷ್ಠ ಮಾತ್ರನೆಂದು ಉಪಾಸ್ಯನೇ ಆಗಲಿಕ್ಕಿಲ್ಲ, ಹೃದಯದೇಶದ ಪರಿಮಿತಿಯೂ 'ಅಂಗುಷ್ಠ ಮಾತ್ರ' ಎಂದು ಹೇಳಲು ಕಾರಣವಾಗಬಹುದು.

**2.** ಪ್ರಾಣಿಗಳಿಗೆ ಅಂಗುಷ್ಠವಿಲ್ಲ, ಆದುದರಿಂದ ಅವುಗಳ ಹೃದಯದಲ್ಲಿ ಪರಮಾತ್ಮ ಪಶುಗಳ ಆಕಾರದಲ್ಲೇ ಇರುತ್ತಾನೆ-

ನಾರಾಯಣಾನಿರುದ್ಧೌ ತು ಪಶ್ವಾಕಾರೌ ಪಶುಸ್ಥಿತೌ || (ಐತರೇಯಭಾಷ್ಯ)

**3.** ಮನುಷ್ಯಾಧಿಕಾರತ್ವಾತ್- ಅಧಿಕ್ರಿಯತೆ ಅತ್ರ ಇತಿ - ಅಧಿಕಾರಃ ಉಪಾಸನಂ। ಮನುಷ್ಯಾಣಾಂ ಅಧಿಕಾರಃ । ಅಧಿಕಾರವೆಂದರೆ ಉಪಾಸನೆ. ಮನುಷ್ಯರಿಗೆ ಅರ್ಹವಾದ ಉಪಾಸನೆ 'ಮನುಷ್ಯಾಧಿಕಾರ'. ಮನುಷ್ಯಾಧಿಕಾರತ್ವಾತ್ ಎಂದೂ ಕೆಲವೆಡೆ ಪಾಠವಿದೆ.

**4.** ಇಲ್ಲಿ ತತ್ತ್ವಪ್ರದೀಪದಲ್ಲಿ 'ಭಾಷ್ಯಂ ಸ್ಪಷ್ಟಾರ್ಥಂ' ಎಂದು ಹೇಳಿ 'ಅಸ್ಮದ್ವಿವಕ್ಷಿತಸ್ಯ ಅರ್ಥಲೇಶಸ್ಯ ಮುಖತಃ ಪ್ರತೀತೇಃ ಸ್ಪಷ್ಟತ್ವಮುಚ್ಯತೇ। ನ ಪುನಃ ಸರ್ವೇಷಾಂ ಭಾಷ್ಯಾರ್ಥಾನಾಂ ಸ್ಪಷ್ಟತ್ವಂ ಪ್ರತಿಜ್ಞಾಯತೇ' ಎಂದು ಭಾಷ್ಯದ ಗಂಭೀರಾರ್ಥತ್ವವನ್ನು ಭಾವಪೂರ್ಣವಾಗಿ ವರ್ಣಿಸಲಾಗಿದೆ.

## ದ್ವೈತದರ್ಶನದಲ್ಲಿ ಸೂತ್ರಗಳ ಅರ್ಥ

**1. ಓಂ ॥ ಶಬ್ದಾದೇವ ಪ್ರಮಿತಃ ॥ ಓಂ**

'ಈಶಾನೋ ಭೂತಭವ್ಯಸ್ಯ' ಎಂಬ ಕಾಠಕವಾಕ್ಯದಲ್ಲಿ ಹೇಳಲ್ಪಟ್ಟ ಈಶಾನನು ಬ್ರಹ್ಮನೆಂದು 'ಮಧ್ಯೇ ವಾಮನಮಾಸೀನಂ' ಎಂದು ಮುಂದಿನ ವಾಕ್ಯದಲ್ಲಿರುವ ಶಬ್ದಾದೇವ=ವಾಮನ ಶಬ್ದದಿಂದಲೇ ಪ್ರಮಿತಃ=ನಿಶ್ಚಯಿಸಲ್ಪಡುತ್ತಾನೆ.

(ಅತ್ರ ನಯೇ-ಈಶಾನನಾಮ ಸಮನ್ವೀಯತೇ । ತಚ್ಚ ಯೋಗ್ಯತಯಾ ಅನ್ವೇತಿ । ತತ್ತು ಇತಿ ಅಸ್ತಿ। 'ಈಶಾನೋ ಭೂತಭವ್ಯಸ್ಯ ಇತ್ಯುಕ್ತಃ ಇಶಾನಃ ಬ್ರಹ್ಮೈವ ಪ್ರಮಿತಃ। 'ಮಧ್ಯೇ ವಾಮನಮಾಸೀನಂ' ಇತಿ ವಾಮನಶಬ್ದಾದೇವ।)

**2. ಓಂ ॥ ಹೃದ್ಯಪೇಕ್ಷಯಾ ತು ಮನುಷ್ಯಾಧಿಕಾರತ್ವಾತ್ ॥ ಓಂ**

ಹೃದ್ಯಪೇಕ್ಷಯಾ ತು=ಹೃದಯಗತ ಆಕಾಶದ ದೃಷ್ಟಿಯಿಂದಲೇ ಅಂಗುಷ್ಠಪರಿಮಿತಿ ವಿಷ್ಣುವಿಗೆ ಹೇಳಲ್ಪಟ್ಟಿದೆ. 'ಅಂಗುಷ್ಠಮಾತ್ರಃ' ಎಂಬ ವಿದ್ಯೆಗೆ ಮನುಷ್ಯಾಧಿಕಾರತ್ವಾತ್=ಮನುಷ್ಯರೇ ಅಧಿಕಾರಿಗಳಾದುದರಿಂದ ಪಶುಗಳಿಗೆ ಅಂಗುಷ್ಠವಿಲ್ಲದಿದ್ದರೂ ಬಾಧಕವಿಲ್ಲ. ಪಶುಗಳಲ್ಲಿರುವ ಪರಮಾತ್ಮನನ್ನು ಅಂಗುಷ್ಠಮಾತ್ರ ಎಂದು ಶ್ರುತಿ ಹೇಳುತ್ತಿಲ್ಲ. ಉಪಾಸನೆ ಮಾಡಲು ಅರ್ಹರಾದ ಮನುಷ್ಯರ ದೃಷ್ಟಿಯಲ್ಲೇ ಹಾಗೆ ಹೇಳಲಾಗಿದೆ.

(ಅಂಗುಷ್ಠಮಾತ್ರ ಇತಿ ಯೋಗ್ಯತಯಾ ಅನ್ವೇತಿ । ತತ್ತು ಇತಿ ಅಸ್ತಿ। ತುರೇವ । ಅಪ್ಯರ್ಥೇ ಚ। ಹೃದೀತಿ ತತ್ಸ್ಥಆಕಾಶ ಉಚ್ಯತೇ। ಹೃದಯಸ್ಥಾಕಾಶಾಪೇಕ್ಷಯೈವ ಬ್ರಹ್ಮಾಖ್ಯ ಪುರುಷಃ ಅಂಗುಷ್ಠಮಾತ್ರ ಉಚ್ಯತೇ। ನತು ಸ್ವತಃ। ಹೃದಯಾಕಾಶರೂಪ ಸ್ಥಾನಗತಂ ತದ್ಗತೇ ಉಪಚರ್ಯತೇ ಇತಿ ಭಾವಃ । ತನ್ಮಾತ್ರಪರಿಮಾಣತಯಾ ವ್ಯಕ್ತಹೃತ್‌ಸ್ಥರೂಪಾಪೇಕ್ಷಯಾ ಇತ್ಯಪಿ ಮುಖ್ಯೋಽರ್ಥಃ ಟೀಕಾತೋ ಭಾತಿ । ಪಶ್ವಾದೀನಾಂ ಅಂಗುಷ್ಠಾಭಾವೇಽಪಿ ಅಂಗುಷ್ಠ ಮಾತ್ರ ಇತಿ ವಿದ್ಯಾಯಾಃ ಮನುಷ್ಯಾಧಿಕಾರತ್ವಾತ್ 'ಅಂಗುಷ್ಠಮಾತ್ರಃ ಪುರುಷಃ' ಇತಿ ಯುಕ್ತಮ್ ।)

## ಶಾಂಕರಭಾಷ್ಯದಲ್ಲಿ ಹೇಳಿದ ಸೂತ್ರಗಳ ಅರ್ಥ

**ಶಬ್ದಾದೇವ ಪ್ರಮಿತಃ-** 'ಅಂಗುಷ್ಠ ಮಾತ್ರಃ ಪುರುಷಃ' ಎಂಬ ಕಾಠಕವಾಕ್ಯದಲ್ಲಿ ಹೇಳಲ್ಪಟ್ಟ ಪುರುಷ ಜೀವ. ಅಣುವಾದ ಅಂತಃಕರಣದಿಂದ ವಿಶಿಷ್ಟನಾದ ಆತ್ಮನೇ ಜೀವನಾದುದರಿಂದ ಅವನಿಗೆ 'ಅಂಗುಷ್ಠಮಾತ್ರಃ' ಎಂಬ ಪರಿಮಿತಿ ಯುಕ್ತವಾಗುತ್ತದೆ ಎಂದು ಪೂರ್ವಪಕ್ಷ. ಆದರೆ, 'ಈಶಾನೋ ಭೂತಭವ್ಯಸ್ಯ' ಎಂದು ಆ ಪುರುಷನಿಗೆ ಹೇಳಲಾದ ಭೂತಭವಿಷ್ಯದ್ವಸ್ತುಗಳ ಒಡೆತನ ಜೀವನಲ್ಲಿ ಇರಲು ಸಾಧ್ಯವಿಲ್ಲ. ಹೀಗೆ 'ಈಶಾನ' ಎಂಬ ಶಬ್ದದಿಂದಲೇ ಆ ಪುರುಷ ಬ್ರಹ್ಮನೆಂದು ಸಿದ್ಧವಾಗುತ್ತದೆ.

ಎರಡನೆಯ ಸೂತ್ರಕ್ಕೆ ಮಧ್ವಭಾಷ್ಯದಂತೆಯೇ ಅರ್ಥ. ಜೀವಬ್ರಹ್ಮರಿಗೆ 'ಅಭೇದವಿರುವುದರಿಂದಲೂ 'ಅಂಗುಷ್ಠಮಾತ್ರಃ' ಎಂಬುದು ಬ್ರಹ್ಮನಿಗೂ ಅನ್ವಯಿಸುತ್ತದೆ ಎಂದೂ ಅದರ ಅರ್ಥ. ರಾಮಾನುಜಭಾಷ್ಯ ಇದನ್ನು 'ಪ್ರಮಿತಾಧಿಕರಣ' ಎಂದು ಹೆಸರಿಸಿ ಇದರ ಗರ್ಭಾಧಿಕರಣವನ್ನಾಗಿ (ಇದರಲ್ಲೇ ಸೇರಿದ ಒಂದು ಭಾಗ) ಮುಂದಿನ ದೇವತಾಧಿ ಕರಣವನ್ನು ಪರಿಗಣಿಸಿದೆ.

## ಚಂದ್ರಿಕಾದಲ್ಲಿ ಮಾಡಿರುವ ವಿಮರ್ಶೆ

**1.** ವ್ಯಾಪ್ತನಾದ ಬ್ರಹ್ಮನಿಗೆ ಅಣುತ್ವವ್ಯಪದೇಶವನ್ನು ದಹರಾಧಿಕರಣದಲ್ಲಿ 'ಅಲ್ಪ-ಶ್ರುತೇರಿತಿ ಚೇತ್ ತದುಕ್ತಂ' ಎಂದು ಸಮರ್ಥಿಸಲಾಗಿದೆ. ಆದರೂ ಅಲ್ಲಿಯ ಶ್ರುತಿಯಲ್ಲಿ 'ದಹರಂ ಪುಂಡರೀಕಂ' ಎಂದು ಬ್ರಹ್ಮನ 'ಅಲ್ಪತ್ವ' ವ್ಯವಹಾರಕ್ಕೆ ಕಾರಣವಾದ ಹೃದಯಸ್ಥಾನವನ್ನು ಹೇಳಲಾಗಿದೆ. ಇಲ್ಲಿ ಸ್ಥಾನವನ್ನು ಹೇಳಿಲ್ಲವಾದುದರಿಂದ ಸ್ಥಾನಾಪೇಕ್ಷಯಾ ಅಂಗುಷ್ಠ ಪರಿಮಿತಿಯನ್ನು ಹೇಳಲಾಗದು, ಎಂದು ಶಾಂಕರಭಾಷ್ಯದಲ್ಲಿ ಉತ್ತರಿಸಲಾಗಿದೆ. ಇದು ಸರಿಯಲ್ಲ. ಇಲ್ಲಿಯೂ 'ಅಂಗುಷ್ಠಮಾತ್ರಃ ಪುರುಷಃ ಅಂತರಾತ್ಮಾ ಸದಾ ಜನಾನಾಂ ಹೃದಯೇ ಸನ್ನಿವಿಷ್ಟಃ।' ಎಂದು ಹೃದಯಸ್ಥಾನದ ನಿರ್ದೇಶವಿದೆ.

**2.** ನಚಿಕೇತನು 'ಅನ್ಯತ್ರ ಧರ್ಮಾತ್' ಎಂದು ಮುಂತಾಗಿ ಬ್ರಹ್ಮನ ಬಗ್ಗೆ ಕೇಳಿದಾಗ ಯಮದೇವ ನೀಡಿದ ಉತ್ತರ ಇದು. ಹೀಗೆ ಬ್ರಹ್ಮ ಪ್ರಕರಣವಾದುದರಿಂದ ಇಲ್ಲಿ ಹೇಳಿದ ಈಶಾನ ಬ್ರಹ್ಮ ಎಂದೂ ಕಾರಣವನ್ನು ಹೇಳಲಾಗಿದೆ. ಆದರೆ ಕಾಠಕೋಪನಿಷತ್ತಿನ ಅದ್ವೈತಭಾಷ್ಯ ''ಯೇಽಯಂ ಪ್ರೇತೇ ವಿಚಿಕಿತ್ಸಾ ಮನುಷ್ಯೇ' ಎಂಬ ನಚಿಕೇತನ ಪ್ರಶ್ನೆ ಜೀವಾತ್ಮನ ಕುರಿತಾಗಿದೆ ಎಂದೂ ಹೇಳುತ್ತದೆ. ಅಂದಮೇಲೆ ಇದು ಜೀವಾತ್ಮನ ಪ್ರಕರಣ ಏಕಾಗಬಾರದು? ॥ ಸೂತ್ರ 25 ॥

**ಇಲ್ಲಿಗೆ ವಾಮನಾಧಿಕರಣ ಮುಗಿಯಿತು.**

# ದೇವತಾಧಿಕರಣ - 8

**ಮನುಷ್ಯಾಣಾಮೇವ ವೇದವಿದ್ಯಾಧಿಕಾರಃ ಇತ್ಯುಕ್ತಮ್ । ತಿರ್ಯಗಾದ್ಯಪೇಕ್ಷಯೈವ ಮನುಷ್ಯತ್ವವಿಶೇಷಣಂ ಉಕ್ತಮ್ । ನ ತು ದೇವಾದ್ಯಪೇಕ್ಷಯಾ ಇತ್ಯಾಹ -**

**ಓಂ ॥ ತದುಪರ್ಯಪಿ ಬಾದರಾಯಣಃ ಸಂಭವಾತ್ ॥ ಓಂ**

**ತದುಪರಿ=ಮನುಷ್ಯಾಣಾಂ ಸತಾಂ ದೇವಾದಿತ್ವಪ್ರಾಪ್ತ್ಯುಪರಿ । ಸಂಭವತಿ ಹಿ ತೇಷಾಂ ವಿಶಿಷ್ಟಬುದ್ಧ್ಯಾದಿಭಾವಾತ್ । ತಿರ್ಯಗಾದೀನಾಂ ತದಭಾವಾದಭಾವಃ । ತೇಷಾಮಪಿ ಯತ್ರ ವಿಶಿಷ್ಟಬುದ್ಧ್ಯಾದಿಭಾವಃ ತತ್ರ ಅವಿರೋಧಃ, ನಿಷೇಧಾಭಾವಾತ್ । ದೃಶ್ಯಂತೇ ಹಿ ಜರಿತಾರ್ಯಾದಯಃ ॥ 26 ॥**

ಹಿಂದಿನ ಸೂತ್ರದಲ್ಲಿ ಮನುಷ್ಯರಿಗೆ ಮಾತ್ರ ವೇದವಿದ್ಯೆಯಲ್ಲಿ ಅಧಿಕಾರ ಎನ್ನಲಾಯಿತು. ಆದರೆ 'ಮನುಷ್ಯಾಧಿಕಾರತ್ವಾತ್' ಎಂದು ಹಿಂದಿನ ಸೂತ್ರದಲ್ಲಿ 'ಪ್ರಾಣಿಗಳನ್ನು ಬಿಟ್ಟು ಇತರರು' ಎಂಬ ದೃಷ್ಟಿಯಿಂದಲೇ ಅಧಿಕಾರ ಪದಕ್ಕೆ ಮನುಷ್ಯ ಎಂಬ ವಿಶೇಷಣವನ್ನು ಕೊಡಲಾಗಿದೆ. ಹೊರತು, ದೇವತೆಗಳನ್ನು ಹೊರತುಪಡಿಸುವ ಉದ್ದೇಶದಿಂದಲ್ಲ. ಈ ವಿಷಯವನ್ನು ಸೂತ್ರಕಾರರು ಈ ಸೂತ್ರದಲ್ಲಿ ಹೇಳಿದ್ದಾರೆ.

ಸೂತ್ರದ ತದುಪರಿ ಎಂಬ ಶಬ್ದಕ್ಕೆ ಮನುಷ್ಯರಾಗಿದ್ದು ದೇವತಾಪದವಿ ಪ್ರಾಪ್ತಿಯ ಅನಂತರ ಎಂದರ್ಥ. ಅವರಿಗೂ (ದೇವತೆಗಳಿಗೂ) ವೇದದಲ್ಲಿ ಹೇಳಿರುವ ಅರ್ಥವನ್ನು ಗ್ರಹಿಸಿ ಅನುಷ್ಠಾನ ಮಾಡುವ ವಿಶಿಷ್ಟ ಬೌದ್ಧಿಕ ಸಾಮರ್ಥ್ಯವಿರುವುದರಿಂದ ವೇದವಿದ್ಯೆಯಲ್ಲಿ ಅಧಿಕಾರ ಇದ್ದೇ ಇದೆ. ಪ್ರಾಣಿಗಳಿಗಾದರೆ ಇಂತಹ ಬುದ್ಧಿ ಸಾಮರ್ಥ್ಯ ಇಲ್ಲದಿರುವುದರಿಂದ ಅಧಿಕಾರವಿಲ್ಲ. ಪ್ರಾಣಿಗಳಲ್ಲೂ ಅಂತಹ ವಿಶಿಷ್ಟಬೌದ್ಧಿಕ ಸಾಮರ್ಥ್ಯವಿದ್ದರೆ ವೇದವಿದ್ಯಾಧಿಕಾರ ಇರಲು ವಿರೋಧವೇನೂ ಇಲ್ಲ. ಏಕೆಂದರೆ ಶಾಸ್ತ್ರಗಳಲ್ಲಿ ಅದಕ್ಕೇನೂ ನಿಷೇಧವಿಲ್ಲ. ಜರಿತಾರಿ ಮೊದಲಾದ ಪಕ್ಷಿಗಳಿಗೆ ವೇದವಿದ್ಯೆಯಲ್ಲಿ ಅಧಿಕಾರವು ಇತಿಹಾಸದಲ್ಲಿ ಕಂಡಿದೆ.

**ವಿವರಣೆ : 1.** ಅಧಿಕರಣದಲ್ಲಿ ದೇವತೆಗಳಿಗೂ ವೇದವಿದ್ಯೆಯಲ್ಲಿ ಅಧಿಕಾರ ಇದೆ ಎಂದು ಸಮರ್ಥಿಸಲಾಗಿದೆ. ಹಿಂದಿನ ಅಧಿಕರಣದಲ್ಲಿ ವಿಷ್ಣುವಿಗೆ ಅಂಗುಷ್ಠಪರಿಮಿತಿಯನ್ನು ಸಮರ್ಥಿಸಲು 'ಮನುಷ್ಯರ ಉಪಾಸನೆಗಾಗಿ ಆ ಅಣುರೂಪವನ್ನು ಹೇಳಲಾಗಿದೆ' ಎಂದಾಗ, ಹಾಗಾದರೆ ಮನುಷ್ಯರಷ್ಟೇ ಶ್ರುತಿಗಳಲ್ಲಿ ಹೇಳಿದ ಉಪಾಸನೆಗೆ ಅರ್ಹರೇ? ಎಂಬ ಸಂಶಯಕ್ಕೆ ಅವಕಾಶವಿದೆ. ಅದನ್ನು ಇಲ್ಲಿ ಪರಿಹರಿಸಲಾಗಿದೆ. ಹೀಗೆ ಇದು ಆನುಷಂಗಿಕವಾದ ವಿಚಾರ. ಇಲ್ಲಿ ಯಾವ ಸಮನ್ವಯವನ್ನೂ ಮಾಡಲಾಗಿಲ್ಲ.

**2.** 'ಮನುಷ್ಯಾಧಿಕಾರತ್ವಾತ್' ಎಂದಿರುವುದರ ಅಭಿಪ್ರಾಯ 'ಬುದ್ಧಿ ಇಲ್ಲದ

ಪಶುಪಕ್ಷಿಗಳಿಗೆ ವೇದದಲ್ಲಿ ಅಧಿಕಾರವಿಲ್ಲ' ಎಂದು. ಹೊರತು ದೇವತೆಗಳಿಗೂ ಅಧಿಕಾರವಿಲ್ಲ ಎಂದು ಅದರ ತಾತ್ಪರ್ಯವಲ್ಲ. ಅರ್ಥ ಮಾಡಿಕೊಳ್ಳುವ ಸಾಮರ್ಥ್ಯ, ಮೋಕ್ಷದ ಅಭಿಲಾಷೆ, ವೈರಾಗ್ಯಾದಿ ಸಂಪತ್ತುಗಳು ಇರುವ ಎಲ್ಲರಿಗೂ ಅದರಲ್ಲಿ ಅಧಿಕಾರವಿದೆ. ಆದರೆ ಸ್ತ್ರೀ ಶೂದ್ರಾದಿಗಳಿಗೆ ನಿಷೇಧ ಮಾಡಿರುವುದರಿಂದ ಅಧಿಕಾರವಿಲ್ಲ.

**3.** ಖಾಂಡವ ದಹನದ ಸಂದರ್ಭದಲ್ಲಿ ಜರಿತಾರಿ ಎಂಬ ಪಕ್ಷಿಯು 'ಅಯಮಗ್ನೇ ಜರಿತಾ' ಎಂದು ಮುಂತಾದ ವೈದಿಕ ಸೂಕ್ತದಿಂದ ಅಗ್ನಿಯನ್ನು ಸ್ತೋತ್ರಮಾಡಿ ವರಪಡೆದಿದೆ. ಆದ್ದರಿಂದ ಪಕ್ಷಿಗಳಿಗೂ ವಿಶಿಷ್ಟ ಬುದ್ಧಿಶಕ್ತಿ ಇದ್ದರೆ ವೇದದಲ್ಲಿ ಅಧಿಕಾರವಿದೆ. ಇದು ಸೂತ್ರದಲ್ಲಿರುವ ಅಪಿ ಶಬ್ದದ ಅರ್ಥ.

**4.** ತತ್ತ್ವ ಪ್ರದೀಪದಲ್ಲಿ, ಆಚಾರ್ಯರು ಸೂತ್ರದಲ್ಲಿರುವ 'ಬಾದರಾಯಣಃ' ಎಂಬ ಪದಕ್ಕೆ ವಿವರಣೆಯನ್ನು ನೀಡದಿರಲು ಅದರ ಅರ್ಥ ಸ್ಪಷ್ಟವಾಗಿರುವುದೇ ಕಾರಣ ಎಂದು ಹೇಳಿ ಭಾಷ್ಯಕಾರರ ಮಹತ್ವವನ್ನು ಹೀಗೆ ತಿಳಿಸಲಾಗಿದೆ- 'ನ ಹಿ ಮಹತಾಂ ಅತಿ ಸ್ಪಷ್ಟಾರ್ಥವ್ಯಾಖ್ಯಾನ ಚಾಪಲಶೀಲತಾ' ॥ ಸೂತ್ರ 26 ॥

**ಓಂ ॥ ವಿರೋಧಃ ಕರ್ಮಣಿ ಇತಿ ಚೇನ್ನ ಅನೇಕ ಪ್ರತಿಪತ್ತೇಃ ದರ್ಶನಾತ್ ॥ ಓಂ**

**ಮನುಷ್ಯಾ ಏವ ದೇವಾದಯೋ ಭವಂತಿ ಇತಿ 'ತದುಪರಿ' ಇತ್ಯುಕ್ತಮ್– ತತ್ರ ಯದಿ ಮನುಷ್ಯಾಃ ಸಂತಃ ದೇವಾದಯಃ ಭವಂತಿ ತತ್‌ಪೂರ್ವಂ ದೇವತಾಭಾವಾತ್ ದೇವತೋದ್ದಿಷ್ಟಕರ್ಮಣಿ ವಿರೋಧ ಇತಿ ಚೇತ್, ನ । ಅನೇಕೇಷಾಂ ದೇವತಾಪದಪ್ರತಿಪತ್ತೇರ್ದರ್ಶನಾತ್ ।**

**'ತೇ ಹ ನಾಕಂ ಮಹಿಮಾನಃ ಸಂಚತೇ । ಯತ್ರ ಪೂರ್ವೇ ಸಾಧ್ಯಾಃ ಸಂತಿ ದೇವಾಃ ॥'**

**ಇತಿ ॥ 27 ॥**

ಹಿಂದಿನ ಸೂತ್ರದಲ್ಲಿರುವ 'ತದುಪರಿ' ಎಂಬ ಪದವು ಮನುಷ್ಯರೇ ಮುಂದೆ ದೇವತೆಗಳಾಗುತ್ತಾರೆ ಎನ್ನುತ್ತದೆ. ಮೊದಲು ಮನುಷ್ಯರಾಗಿದ್ದವರು ಆಮೇಲೆ ದೇವತೆಗಳಾಗುವುದಾದರೆ ಅವರು ದೇವತೆಗಳಾಗುವುದಕ್ಕೆ ಮೊದಲು ದೇವತೆಗಳೇ ಇಲ್ಲದಿರುವುದರಿಂದ ದೇವತೋದ್ದೇಶ್ಯಕವಾದ ಕರ್ಮ, ಅವರನ್ನು ಹೇಳುವ ವೇದಗಳೆಲ್ಲವೂ ವ್ಯರ್ಥವಾಗುವುದಿಲ್ಲವೇ? ಎಂದರೆ, ಇಲ್ಲ. ಅನೇಕರಿಗೆ ದೇವತಾಪದ ಪ್ರಾಪ್ತಿಯು ಶ್ರುತಿಯಲ್ಲಿ ಹೇಳಲ್ಪಟ್ಟಿದೆ. 'ಮಹಾಗುಣಶಾಲಿಗಳಾದ ದೇವತೆಗಳು, ಆಗಾಗಲೇ ಮೋಕ್ಷವನ್ನು ಹೊಂದಿರುವ 'ಸಾಧ್ಯ' ನಾಮಕರಾದ ದೇವತೆಗಳು ಇರುವ ಮೋಕ್ಷಸ್ಥಾನವನ್ನು ಹೊಂದಿದರು.'

**ವಿವರಣೆ : 1.** ಮನುಷ್ಯೋತ್ತಮರೇ ಸಾಧನಾನುಷ್ಠಾನಮಾಡಿ ದೇವತೆಗಳಾಗುವುದಾದರೆ ಅವರು ದೇವತೆಗಳಾಗುವುದಕ್ಕಿಂತ ಮೊದಲು ಸ್ವರ್ಗದಲ್ಲಿ ದೇವತೆಗಳಿರಲಿಲ್ಲವೆಂದಂತಾಯಿತು. ಆ ಸಮಯದಲ್ಲಿ ಈ ಮನುಷ್ಯೋತ್ತಮರು ಮಾಡಿದ ಯಜ್ಞಾದಿ

ಕರ್ಮಗಳಿಂದ ನೀಡಿದ ಆಹುತಿ ಯಾರಿಗೆ ಸೇರಬೇಕು? ದೇವತೆಗಳೇ ಇಲ್ಲವೆಂದಾದ ಮೇಲೆ ಆ ದೇವತೆಗಳ ಉದ್ದೇಶದಿಂದ ಮಾಡಿದ ಕರ್ಮಗಳೆಲ್ಲ ವ್ಯರ್ಥವಾಗಲಿಲ್ಲವೆ? ಅಗ್ನಿ, ಇಂದ್ರ, ವರುಣ ಮೊದಲಾದ ವೈದಿಕ ಶಬ್ದಗಳಿಗೆ, ಅವರನ್ನು ಸ್ತೋತ್ರಮಾಡುವ ಅಪೌರುಷೇಯ ವೇದಗಳಿಗೆ ಅರ್ಥವೇನು?

ಈ ಪ್ರಶ್ನೆಗಳಿಗೆ ಸೂತ್ರ ಉತ್ತರ ಹೇಳುತ್ತದೆ - ದೇವತಾ ಪದವಿಯಲ್ಲಿ ಒಬ್ಬರೇ ದೇವತೆಗಳು ಶಾಶ್ವತವಾಗಿ ಇರುವುದಿಲ್ಲ. ದೇವತಾಪದವಿ ಸಾಧನಾನುಷ್ಠಾನದಿಂದಲೇ ದೊರಕುತ್ತದೆ. ಆದರೆ, ಆ ದೇವತೆಗಳು ಬರುವುದಕ್ಕೆ ಮೊದಲು ಆ ಪದವಿ ಶೂನ್ಯವಾಗಿರುವುದಿಲ್ಲ. ಮತ್ತೊಬ್ಬ ದೇವತೆ ಅಲ್ಲಿರುತ್ತಾನೆ. ಭಾಷ್ಯದಲ್ಲಿ ಉದಾಹರಿಸಿದ ಪುರುಷಸೂಕ್ತದ ಮಂತ್ರ ''ಈಗಿನ ದೇವತೆಗಳು ಮೋಕ್ಷಕ್ಕೆ ಹೋದಾಗ ಅಲ್ಲಿ ಆಗಾಗಲೇ ಮುಕ್ತರಾದ ದೇವತೆಗಳು ಇದ್ದರು'' ಎನ್ನುತ್ತದೆ. ಇದರಿಂದ ದೇವತಾ ಪ್ರವಾಹ ಅನಾದಿ ಎಂದು ತಿಳಿಯುತ್ತದೆ. ಆದ್ದರಿಂದ ಎಂದೂ ಕರ್ಮಗಳು ನಿಷ್ಫಲವಲ್ಲ.

**2. ಶ್ರುತ್ಯರ್ಥ :** ಅ. ಪುರುಷಸೂಕ್ತದಲ್ಲಿ 'ಸಾಧ್ಯಾಃ ದೇವಾಃ' ಅಂದರೆ,

ಋಜವೋ ಬ್ರಹ್ಮಮುಖ್ಯಾ ಹಿ ಸುಪರ್ಣಃ ಶೇಷ ಏವ ಚ ।
ಸರಸ್ವತೀ ಸುಪರ್ಣೀ ಚ ವಾರುಣೀ ಸಾಧ್ಯನಾಮಕಾಃ ॥

ವಸು, ರುದ್ರ, ಆದಿತ್ಯ, ಮರುತ್, ಸಾಧ್ಯ ಎಂದು ದೇವತೆಗಳ ಗಣಗಳು. ಅದರಲ್ಲಿ ಮೇಲೆ ಹೇಳಿರುವ ದೇವತೆಗಳು ಸಾಧ್ಯಗಣದಲ್ಲಿ ಸೇರಿದ್ದಾರೆ.

ಆ. ನಾಕಂ-ನಾಕವೆಂದರೆ ಸ್ವರ್ಗವಲ್ಲ. ಏಕೆಂದರೆ, ಸ್ವರ್ಗದಲ್ಲಿ ಮುಕ್ತರಾದ ದೇವತೆಗಳು ಇರುವುದು ಸಾಧ್ಯವಿಲ್ಲ. ಆದ್ದರಿಂದ 'ಕಂ=ಸುಖ, ಅಕ=ದುಃಖ. ನ+ಅಕ=ದುಃಖದ ಸಂಬಂಧವೇ ಇಲ್ಲದ ಸುಖ-ಮೋಕ್ಷ' ಎಂದು ಅರ್ಥ. ॥ ಸೂತ್ರ 27 ॥

## ಓಂ ॥ ಶಬ್ದ ಇತಿ ಚೇನ್ನಾತಃ ಪ್ರಭವಾತ್ ಪ್ರತ್ಯಕ್ಷಾನುಮಾನಾಭ್ಯಾಂ ॥ ಓಂ

**'ವಾಚಾ ವಿರೂಪ ನಿತ್ಯಯಾ' (ಋ.8.64.6) ಇತ್ಯಾದಿಶ್ರುತೇಃ ಆಪ್ತಿ ಅನಿಶ್ಚಯಾತ್, ನಿತ್ಯತ್ವಾಪೇಕ್ಷತ್ವಾಚ್ಚ ಮೂಲಪ್ರಮಾಣಸ್ಯ, ಸ್ವತಃ ಪ್ರಾಮಾಣ್ಯ ಪ್ರಸಿದ್ಧೇಶ್ಚ ನಿತ್ಯತ್ವಾದ್ವೇದಸ್ಯ ತದುದಿತಾನಾಂ ದೇವಾನಾಂ ಅನಿತ್ಯತ್ವಾತ್, ಪುನಃ ಅನ್ಯಭಾವ ನಿಯಮಾಭಾವಾಚ್ಚ ಶಬ್ದೇ ವಿರೋಧಃ ಇತಿ ಚೇತ್, ನ ।**

**ಸೂರ್ಯಾಚಂದ್ರಮಸೌ ಧಾತಾ ಯಥಾ ಪೂರ್ವಮಕಲ್ಪಯತ್ ।**

**(ಮಹಾನಾ 5.7)**

**ಯಥೈವ ನಿಯಮಃ ಕಾಲೇ ಸುರಾದಿ ನಿಯಮಸ್ತಥಾ ।**
**ತಸ್ಮಾನ್ನಾನೀದೃಶಂ ಕ್ವಾಪಿ ವಿಶ್ವಮೇತದ್ ಭವಿಷ್ಯತಿ ॥**

**ಇತ್ಯಾದೇಃ, ಅತ ಏವ ಶಬ್ದಾತ್, ತೇಷಾಂ ಪ್ರಭವನಿಯಮಾತ್ ।**
**ಮಹತಾಂ ಪ್ರತ್ಯಕ್ಷಾತ್ ''ಯಥೇದಾನೀಂ ತಥಾ ಉಪರ್ಯಪಿ ದೇವಾ ಭವಿಷ್ಯಂತಿ'' ಇತಿ ಇತರೇಷಾಂ ಅನುಮಾನಾಚ್ಚ॥ 28 ॥**

'ವಾಚಾ ವಿರೂಪ, ನಿತ್ಯಯಾ' ಎಂಬ ಶ್ರುತಿ ಹೇಳಿದಂತೆ ವೇದವು ನಿತ್ಯ. ಅದು ಅನಿತ್ಯವಾದರೆ ಅದನ್ನು ರಚಿಸಿರುವ ವ್ಯಕ್ತಿ ಪ್ರಾಮಾಣಿಕ ಎಂದು ನಿಶ್ಚಯಿಸಲು ಸಾಧ್ಯವಿಲ್ಲ, ಅದರ ರಚನೆಗೆ ಮೂಲವಾದ ಪ್ರಮಾಣವೂ ನಿತ್ಯವೇ ಆಗಬೇಕಾಗುತ್ತದೆ. ಅಲ್ಲದೆ ವೇದದ ಪ್ರಾಮಾಣ್ಯವು ಅನ್ಯಾಪೇಕ್ಷೆ ಇಲ್ಲದೆ ಸಿದ್ಧವಾಗುತ್ತದೆ ಎಂದು ಪ್ರಸಿದ್ಧಿ ಇದೆ. ಆದ್ದರಿಂದ ವೇದಗಳು ನಿತ್ಯವಾಗಿವೆ. ಅವುಗಳಲ್ಲಿ ಹೇಳುವ ದೇವತೆಗಳು ಅನಿತ್ಯರಾದರೆ, ಅವರ ಸ್ಥಾನದಲ್ಲಿ ಮತ್ತೊಬ್ಬರು ಇರಲೇಬೇಕೆಂಬ ನಿಯಮವೂ ಇಲ್ಲವಾದ್ದರಿಂದ ವೇದರೂಪವಾದ ಶಬ್ದವು ಅಪ್ರಮಾಣವಾದೀತು ಎಂಬ ವಿರೋಧ ಬರುತ್ತದೆ. ಈ ವಾದ ಸರಿಯಲ್ಲ. 'ಪರಮಾತ್ಮನು ಸೂರ್ಯಚಂದ್ರರನ್ನು ಹಿಂದಿನ ಕಲ್ಪದಂತೆಯೇ ಸೃಜಿಸಿದನು' 'ಒಂದು ಯುಗ ಮುಗಿದರೆ ಮತ್ತೊಂದು ಯುಗ ಎಂದು ಕಾಲದಲ್ಲಿ ನಿಯಮವಿದ್ದಂತೆ ದೇವತೆಗಳಲ್ಲೂ ನಿಯಮವಿದೆ. ಒಬ್ಬ ದೇವತೆ ಮುಕ್ತನಾದರೆ ಆ ಸ್ಥಾನದಲ್ಲಿ ಮತ್ತೊಬ್ಬ ದೇವತೆ. ಆದ್ದರಿಂದ ಈ ವಿಶ್ವ ಎಂದೂ ಹೀಗಿಲ್ಲದಿರುವುದಿಲ್ಲ' ಈ ಮೊದಲಾದ ಶಬ್ದ ಪ್ರಮಾಣಗಳಿಂದ, ಮಹಾತ್ಮರಿಗೆ ಪ್ರತ್ಯಕ್ಷದಿಂದಲೂ, ಇತರರಿಗೆ 'ಈಗ ಇರುವಂತೆ ಮುಂದಿನ ಸಮಯದಲ್ಲೂ ದೇವತೆಗಳು ಇರುತ್ತಾರೆ' ಎಂಬ ಅನುಮಾನ ಪ್ರಮಾಣದಿಂದಲೂ ದೇವತೆಗಳ ಹುಟ್ಟು ನಿಶ್ಚಿತ.

**ವಿವರಣೆ : 1.** ದೇವತೆಗಳು ಅನಿತ್ಯರಾದರೆ ವೇದವು ಅಪ್ರಮಾಣವಾದೀತು ಎಂಬ ಸಂಶಯವನ್ನು ಇಲ್ಲಿ ಪರಿಹರಿಸಿರುತ್ತಾರೆ. ವೇದಗಳು ನಿತ್ಯ. ಅವುಗಳಿಗೆ ಆರಂಭ-ಅವಸಾನಗಳಿಲ್ಲ. 'ವಾಚಾ ವಿರೂಪ ನಿತ್ಯಯಾ' ಎಂಬ ಶ್ರುತಿಯೇ ವೇದವನ್ನು ನಿತ್ಯವೆನ್ನುತ್ತದೆ. ಅದಲ್ಲದೆ ಯುಕ್ತಿಯೂ ಇದೆ- ವೇದವೂ ಅನಿತ್ಯವಾದರೆ ಅದನ್ನೊಬ್ಬ ರಚಿಸಿದ್ದಾನೆ ಎನ್ನಬೇಕು. ವೇದವನ್ನು ರಚಿಸಿರುವ ವ್ಯಕ್ತಿಯ ಮೇಲೆ ನಂಬಿಕೆ ಹೇಗೆ? ನಮ್ಮಂತೆ ಅವನೂ ಅಲ್ಪಜ್ಞಾನಿಯಾಗಿರಬಹುದು. ಹೀಗೆ ಅವನ ಪ್ರಾಮಾಣಿಕತೆಯ ಬಗ್ಗೆ ಸಂದೇಹ ಬರುವುದರಿಂದ ಅವನು ರಚಿಸಿರುವ ವೇದದ ಬಗ್ಗೆಯೂ ಸಂದೇಹ ಬರುತ್ತದೆ. ಅಷ್ಟೇ ಅಲ್ಲದೆ, ಅದನ್ನು ರಚಿಸಿದ ವ್ಯಕ್ತಿ ತನ್ನ ಸ್ವಂತ ಬುದ್ಧಿಯಿಂದ ರಚಿಸಿಲ್ಲ, ತನಗೆ ದೊರೆತ ಗ್ರಂಥವೊಂದರ ಆಧಾರದಿಂದಲೇ ಅದನ್ನು ರಚಿಸಿದ್ದಾನೆ ಎಂದರೆ, ಅವನು ವೇದವನ್ನು ರಚಿಸಲು ಆಧಾರವಾಗಿ ಬಳಸಿದ ಗ್ರಂಥ ಪೌರುಷೇಯವಾದರೆ ಅದರ ಬಗ್ಗೆಯೂ ಮತ್ತೆ ಇದೇ ರೀತಿ ಸಂಶಯಬರುತ್ತದೆ. ಪೌರುಷೇಯವಲ್ಲ, ನಿತ್ಯವೆಂದಾದರೆ ಅಂತಹ ಗ್ರಂಥವೊಂದನ್ನು ಏಕೆ ಕಲ್ಪಿಸಬೇಕು? ಈಗಾಗಲೇ ವೇದವು, ತಾನು ನಿತ್ಯ - ಯಾರ ರಚನೆಯೂ ಅಲ್ಲ ಎಂದು ಹೇಳಿಕೊಂಡಿರುವಾಗ ಅದನ್ನೇ ಅಪೌರುಷೇಯ

ಎನ್ನಬಹುದಲ್ಲವೆ? ಆದ್ದರಿಂದ ವೇದವನ್ನು ಅಪೌರುಷೇಯ ಎಂದು ಹೇಳುವುದು ಅನಿವಾರ್ಯ.

ವೇದವು ಅಪೌರುಷೇಯ ಎಂದಾಗಲೂ [illegible] ಪ್ರಾಮಾಣಿಕವಾಗುವುದು ಇದನ್ನು ರಚಿಸಿರುವ ವ್ಯಕ್ತಿಯ ಪ್ರಾಮಾಣಿಕತೆಯ ಆಧಾ[illegible]. ವೇದವು ಅಪೌರುಷೇಯವಾದರೆ ಅದರ ರಚನೆಗೆ ಕಾರಣವಾದ ವ್ಯಕ್ತಿಯೇ ಇಲ್ಲ. ಅಂದಮೇಲೆ ಅದು ಪ್ರಮಾಣವಾಗುವುದು ಹೇಗೆ?

ಇದಕ್ಕೆ ಉತ್ತರ– 'ಪ್ರಾಮಾಣ್ಯಂ ಸ್ವತಃ' ಎಂದು ದ್ವೈತಸಿದ್ಧಾಂತ. ವಾಕ್ಯವು ಪ್ರಮಾಣವಾಗಬೇಕಾದರೆ ಅದಕ್ಕೊಂದು ಕಾರಣಬೇಕಾಗಿಲ್ಲ, ಅದು ಅಪ್ರಮಾಣವಾಗಬೇಕಾದರೆ ಅದಕ್ಕೆ ಕಾರಣ ಹೇಳಬೇಕು. ವೇದವು ಯಾವುದೇ ವ್ಯಕ್ತಿಯ ರಚನೆ ಅಲ್ಲವಾದುದರಿಂದ ಅದನ್ನು ಸುಳ್ಳು ಎಂದು ಅಲ್ಲಗೆಳೆಯಲು ಕಾರಣವೇ ಇಲ್ಲ. ವ್ಯಕ್ತಿಯ ರಚನೆಯಲ್ಲಿ ಅವನ ದೋಷದಿಂದ ದೋಷಗಳು-ತಪ್ಪುಗಳು ನುಸುಳುತ್ತವೆ. ವೇದ ಯಾರ ರಚನೆಯೂ ಅಲ್ಲ. ಅಂದಮೇಲೆ ಅದರಲ್ಲಿ ದೋಷದ ಸಂಶಯವೇ ಇಲ್ಲ. ಆದ್ದರಿಂದ ವೇದವನ್ನು ಅಪೌರುಷೇಯವೆಂದರೆ ಬಾಧಕವಿಲ್ಲ.

**2.** ಹೀಗೆ ವೇದಗಳು ನಿತ್ಯ, ಅದು ಹೇಳುವ ದೇವತೆಗಳು ಅನಿತ್ಯರಾದರೆ ವೇದ ಅಪ್ರಮಾಣವಾಗಬೇಕಾಗುತ್ತದೆ. ಒಬ್ಬ ದೇವತೆ ಹೋದ ಮೇಲೆ ಆ ಸ್ಥಾನದಲ್ಲಿ ಮತ್ತೆ ಅದೇ ರೀತಿಯ, ಅದೇ ಗುಣಗಳುಳ್ಳ ಮತ್ತೊಬ್ಬ ಬರುತ್ತಾನೆ ಎಂಬ ನಿಯಮವೇನಿಲ್ಲ. ಹೀಗೆ ವೇದ ಹೇಳುವ ಗುಣಗಳಿಂದ ಕೂಡಿದ ದೇವತೆ ಸಾರ್ವಕಾಲಿಕನಲ್ಲ ಎಂದಾದರೆ ವೇದವು ಅಪ್ರಮಾಣವಾದೀತು. ಇದು 'ಶಬ್ದ ಇತಿ ಚೇತ್' ಎಂಬ ಸೂತ್ರದ ಭಾವ. ಅದು ಸಪ್ತಮ್ಯಂತ ಪದ. ಹಿಂದಿನ ಸೂತ್ರದಿಂದ 'ವಿರೋಧಃ' ಎಂಬ ಪದವನ್ನು ಇಲ್ಲಿ ತಂದು ಇದರೊಂದಿಗೆ ಅನ್ವಯಿಸಬೇಕು. 'ಶಬ್ದೇ ವಿರೋಧಃ ಇತಿ ಚೇತ್' ಎಂದಾಗುತ್ತದೆ. 'ವೇದರೂಪವಾದ ಶಬ್ದದಲ್ಲಿ ಅಪ್ರಾಮಾಣ್ಯರೂಪವಾದ ವಿರೋಧ ಬಂದೀತು' ಎಂದು ಆಕ್ಷೇಪಾಂಶ.

ಇದಕ್ಕೆ ಉತ್ತರ-'ಅತಃ ಪ್ರಭವಾತ್' ಎಂದು. ಪ್ರಭವವೆಂದರೆ ಉತ್ಪತ್ತಿ. ಪ್ರಕೃತದಲ್ಲಿ 'ಪ್ರಭವನಿಯಮ-ಅವಗಮ' ಎಂದು ಅದರ ಅರ್ಥ. 'ನಿಯತವಾಗಿ ಕ್ರಮಕ್ಕೆ ವ್ಯತ್ಯಾಸವಿಲ್ಲದೆ ಪ್ರತಿಕಲ್ಪದಲ್ಲೂ ದೇವತೆಗಳ ಉತ್ಪತ್ತಿ ತಿಳಿಯುವುದರಿಂದ' ಎಂದು ಅದರ ಒಟ್ಟು ಅರ್ಥ. 'ಅತಃ' ಎಂದರೆ 'ಶಬ್ದಾತ್' ಎಂದರ್ಥ. ದೇವತೆಗಳು ಅದೇ ಕ್ರಮದಲ್ಲಿ ಹುಟ್ಟುತ್ತಾರೆ ಎಂದು ಹೇಳುವ ಆಗಮವೂ ಇದೆ ಎಂದು ಭಾವ. ಅಂತಹ ಆಗಮವನ್ನು ಭಾಷ್ಯದಲ್ಲಿ ಉದಾಹರಿಸಲಾಗಿದೆ. ಅಷ್ಟೇ ಅಲ್ಲದೆ ಜ್ಞಾನಿಗಳ ಪ್ರತ್ಯಕ್ಷ, ಅನುಮಾನ ಪ್ರಮಾಣಗಳೂ ಈ ವಿಷಯದಲ್ಲಿ ಆಧಾರವಾಗಿವೆ. 'ವರ್ತಮಾನ ಕಾಲದಲ್ಲಿ ದೇವತೆಗಳಿರುವಂತೆ ಮುಂದಿನ ಎಲ್ಲ ಕಾಲವೂ ಕಾಲವಾದುದರಿಂದ ಆಗಲೂ, ಸೃಷ್ಟಿಯ ಸಮಯದಲ್ಲಿ ದೇವತೆಗಳು ಇದ್ದೇ ಇರುತ್ತಾರೆ' ಎಂದು ಅನುಮಾನದ ರೀತಿ. ಹೀಗೆ

ದೇವತೆಗಳು ಸ್ವರೂಪತಃ ಆ ಸ್ಥಾನದಲ್ಲಿ ಅನಿತ್ಯರಾದರೂ ಪ್ರವಾಹತಃ ನಿತ್ಯರು. ಪ್ರತಿ ಸೃಷ್ಟಿಕಾಲದಲ್ಲೂ ಅದೇ ಹೆಸರು ಗುಣಗಳಿಂದ ಆಸ್ಥಾನದಲ್ಲಿ ದೇವತೆ ಇದ್ದೇ ತೀರುತ್ತಾನೆ. ಆದ್ದರಿಂದ ವೇದವು ಅಪ್ರಮಾಣವಾಗುವ ಸಂದರ್ಭವಿಲ್ಲ.

**3. ಶ್ರುತ್ಯರ್ಥ : ಅ.** 'ವಾಚಾ ವಿರೂಪ ನಿತ್ಯಯಾ' ಎಂಬ ಶ್ರುತಿಯ ಪೂರ್ಣಪಾಠ ಹೀಗಿದೆ-

ತಸ್ಮೈ ನೂನಮಭಿದ್ಯವೇ ವಾಚಾ ವಿರೂಪ ನಿತ್ಯಯಾ।

ವೃಷ್ಣೇ ಚೋದಸ್ವ ಸುಷ್ಟುತಿಮ್ ॥ (ಋ.8.64.6)

ಈ ಶ್ರುತಿಯಲ್ಲಿ 'ವಿರೂಪ'ನೆಂದರೆ ಒಬ್ಬ ಋಷಿ. ಅವನು ತಾನೇ ತನ್ನ ಅಂತರ್ಯಾಮಿಯಲ್ಲಿ ನಡೆಸುವ ಪ್ರಾರ್ಥನೆ ಇದು ಎನ್ನುತ್ತಾರೆ ತ್ರಿವಿಕ್ರಮ ಪಂಡಿತರು. ವಿಷ್ಣು ತತ್ವವಿನಿರ್ಣಯ ಟೀಕೆಯಲ್ಲಿ 'ವಿರೂಪ' ಎಂದು ಋಷಿಯ ಸಂಬೋಧನೆ ಎನ್ನಲಾಗಿದೆ. ಇದರಿಂದ ಈ ಮಂತ್ರ ವಿರೂಪನಿಗೆ ನೀಡುವ ಆದೇಶವೆಂದೂ ತಿಳಿಯುತ್ತದೆ.

'ಹೇ ವಿರೂಪ=ವಿರೂಪ ಋಷಿಯೆ, ಅಭಿದ್ಯವೇ=ಸರ್ವತಃ ಪ್ರಕಾಶರೂಪನಾದ ವೃಷ್ಣೇ=ಅತಿಸಮರ್ಥನಾದ ಭಗವಂತನನ್ನು ಉದ್ದೇಶಿಸಿ ನೂನಂ=ನಿಶ್ಚಿತವಾಗಿಯೂ ನಿತ್ಯಯಾ=ನಾಶವಿಲ್ಲದ ವಾಚಾ=ವೇದವಾಣಿಯಿಂದ ಸುಷ್ಟುತಿಂ=ಶೋಭನವಾದ ಸ್ತೋತ್ರವನ್ನು ಚೋದಸ್ವ=ಮಾಡು. ॥ ಸೂತ್ರ 28 ॥

## ಓಂ ॥ ಅತ ಏವ ಚ ನಿತ್ಯತ್ವಮ್ ॥ ಓಂ

**ಅತ ಏವ=ಶಬ್ದಸ್ಯ ನಿತ್ಯತ್ವಾದೇವ ಚ ದೇವ ಪ್ರವಾಹ ನಿತ್ಯತ್ವಂ ಯುಕ್ತಮ್ ॥ 29 ॥**

ವೇದವು ನಿತ್ಯವಾದುದರಿಂದಲೂ ದೇವತೆಗಳ ಪ್ರವಾಹವೂ ನಿತ್ಯವಾಗಿರುವುದು ಯುಕ್ತವಾಗಿದೆ.

**ವಿವರಣೆ :** ವೇದಗಳು ನಿತ್ಯಗಳೆಂದು ಪ್ರಮಾಣದಿಂದ ಸಿದ್ಧವಾಗಿದೆ. ನಿತ್ಯವಾದುದರಿಂದಲೇ ಅವುಗಳ ಅಪ್ರಮಾಣಗಳಲ್ಲ. ದೇವತೆಗಳು ಪ್ರತಿಕಲ್ಪದಲ್ಲೂ ತಮ್ಮ ತಮ್ಮ ಸ್ಥಾನಗಳಲ್ಲಿ ಇಲ್ಲದಿದ್ದರೆ ಅವರನ್ನು ಸ್ತುತಿಸುವ ವೇದಭಾಗಗಳು ಅರ್ಥಶೂನ್ಯವಾಗಿ ಅಪ್ರಮಾಣಗಳಾಗುತ್ತವೆ. ಒಬ್ಬ ದೇವತೆ ತನ್ನ ಸ್ಥಾನದಲ್ಲಿ ಎಂದೆಂದೂ ಸ್ಥಿರವಾಗಿರುತ್ತಾನೆ ಎನ್ನುವಂತೆಯೂ ಇಲ್ಲ. ಆಗ ಜಗತ್ತಿನ ಪ್ರಲಯ, ಮೋಕ್ಷ, ಹಿಂದಿನಂತೆಯೇ ಮತ್ತೆ ಸೃಷ್ಟಿ ಇವುಗಳನ್ನು ಹೇಳುವ ವೇದವಾಕ್ಯಗಳು ಅಪ್ರಮಾಣಗಳಾಗಬೇಕಾದೀತು. ಇದರಿಂದ ಅರ್ಥಾತ್ ದೇವತೆಗಳ ಪ್ರವಾಹ ನಿತ್ಯವಾದುದು ಎಂದೇ ಸಿದ್ಧವಾಗುತ್ತದೆ. ॥ ಸೂತ್ರ 29 ॥

## ಓಂ ॥ ಸಮಾನನಾಮ ರೂಪತ್ವಾಚ್ಚಾವೃತ್ತಾವಪಿ ಅವಿರೋಧಃ ದರ್ಶನಾತ್ ಸ್ಮೃತೇಶ್ಚ ॥ ಓಂ

**ಅತೀತಾನಾಗತಾನಾಂ ದೇವಾನಾಂ ಸಮಾನ-ನಾಮ-ರೂಪತ್ವಾತ್ ಪ್ರಾಪ್ತಪದಾನಾಂ ಮುಕ್ತ್ಯಾವೃತ್ತಾವಪಿ ಅವಿರೋಧಃ। 'ಯಥಾ ಪೂರ್ವಂ' ಇತಿ ದರ್ಶನಾತ್।**

**ಅನಾದಿನಿಧನಾ ನಿತ್ಯಾ ವಾಗುತ್ಸೃಷ್ಟಾ ಸ್ವಯಂಭುವಾ।**

**ಋಷೀಣಾಂ ನಾಮಧೇಯಾನಿ ಯಾಶ್ಚ ವೇದೇಷು ದೃಷ್ಟಯಃ।**

**ವೇದಶಬ್ದೇಭ್ಯ ಏವಾದೌ ನಿರ್ಮಮೇ ಸ ಮಹೇಶ್ವರಃ॥**

**ಇತಿ ಸ್ಮೃತೇಶ್ಚ॥ 30 ॥**

ಈ ಹಿಂದಿನ ಹಾಗೂ ವರ್ತಮಾನ-ಭವಿಷ್ಯತ್ ಕಾಲದ ದೇವತೆಗಳು ಮೋಕ್ಷ ಹೊಂದಿದ ಮೇಲೆ ತಮ್ಮ ಸ್ಥಾನದಲ್ಲಿ ಇಲ್ಲದಿದ್ದರೂ ಆಯಾಯ ಸ್ಥಾನದಲ್ಲಿ ನಿಯುಕ್ತರಾದ ಎಲ್ಲ ದೇವತೆಗಳಿಗೂ ಸಮಾನವಾದ ಹೆಸರು– ಆಕಾರ-ಕಾರ್ಯಗಳು ಇರುವುದರಿಂದ ವೇದವು ಅಪ್ರಮಾಣವೆನಿಸುವ ಸಂದರ್ಭವೇನೂ ಇಲ್ಲ. ಅವರಿಗೆ ಸಮಾನನಾಮರೂಪಗಳಿವೆ ಎನ್ನುವುದು ಶ್ರುತಿಯಿಂದ (ದರ್ಶನಾತ್) ಮತ್ತು 'ಅನಾದಿನಿಧನಾ' ಇತ್ಯಾದಿ ಸ್ಮೃತಿಯಿಂದ ಸಿದ್ಧವಾಗಿದೆ.

**ವಿವರಣೆ : 1.** ದೇವತಾಪದವಿ ಎಂದೂ ರಿಕ್ತವಾಗುವುದಿಲ್ಲವಾದರೂ ವೇದಕ್ಕೆ ಅಪ್ರಾಮಾಣ್ಯ ಪ್ರಸಂಗ ಇದ್ದೇ ಇದೆ. ಈ ಕಲ್ಪದಲ್ಲಿದ್ದ ದೇವತೆಗಳೇ ಮುಂದಿನ ಕಲ್ಪದಲ್ಲೂ ಇದ್ದಾರೆ ಎನ್ನುವಂತಿಲ್ಲ. ಅವರು ಮುಕ್ತಸ್ಥಾನಕ್ಕೆ ಹೋಗಿರುತ್ತಾರೆ. ಅಲ್ಲಿಂದ ಮತ್ತೆ ಈ ಪದವಿಗೆ ಬಂದರೆ ಮೋಕ್ಷಕ್ಕೆ ಪುನರಾವೃತ್ತಿ ಇಲ್ಲ ಎಂಬ ಪ್ರಮಾಣಕ್ಕೆ ವಿರೋಧ ಬರುತ್ತದೆ. ಬೇರೆಯವರು ಆ ಪದವಿಗೆ ಬಂದರೆ ಅವರಿಗೆ ಹೆಸರು, ಆಕಾರ, ಕಾರ್ಯಗಳು ಹಿಂದಿನ ದೇವತೆಗಳಂತೆಯೇ ಇರಬೇಕಾಗಿಲ್ಲವಾದುದರಿಂದ ಹಿಂದಿನ ದೇವತೆಯನ್ನು ಸ್ತೋತ್ರಮಾಡುವ ಮಂತ್ರಗಳು ಅಪ್ರಮಾಣಗಳಾಗುತ್ತವೆ. ದೇವತೆಗಳು ಬೇರೆಯಾದಂತೆ ಪ್ರತಿಕಲ್ಪದಲ್ಲೂ ಆ ಮಂತ್ರಗಳು ಬೇರೆ ಬೇರೆಯಾದರೆ ವೇದಕ್ಕೆ ನಿತ್ಯತ್ವ ಭಂಗವಾಗುತ್ತದೆ. ಆದ್ದರಿಂದ ನಿತ್ಯವಾದ ವೇದ ಒಂದೇ ರೀತಿಯಲ್ಲಿರುತ್ತದೆ. ಅದು ಸ್ತುತಿಸುವ ದೇವತಾಸ್ವರೂಪ ವಿಭಿನ್ನವಾಗಿರುತ್ತದೆ. ಇದರಿಂದ ವೇದಗಳಿಗೆ ಅಪ್ರಾಮಾಣ್ಯ ಅನಿವಾರ್ಯ ಎಂದು ಪ್ರಶ್ನೆ. ಅದಕ್ಕೆ ಉತ್ತರ-ಶ್ರುತಿ ಸ್ಮೃತಿಗಳಿಂದ ಪ್ರತಿಕಲ್ಪಗಳಲ್ಲೂ ದೇವತೆಗಳ ಹೆಸರು, ಸ್ವರೂಪ, ಕಾರ್ಯಗಳು ಒಂದೇ ರೀತಿಯದ್ದಾಗಿರುತ್ತವೆ, ಎಂದು ತಿಳಿಯುತ್ತಿರುವುದರಿಂದ ವೇದಗಳಿಗೆ ಸರ್ವಥಾ ಅಪ್ರಾಮಾಣ್ಯವಿಲ್ಲ.

**2.** ಭಾಷ್ಯದಲ್ಲಿರುವ 'ಮುಕ್ತ್ಯಾವೃತ್ತಾವಪಿ' ಎಂಬ ಪದವನ್ನು ಮುಕ್ತ್ಯಾ=ಮೋಕ್ಷವಾಗಿ ಅವೃತ್ತೌ ಅಪಿ=ತಮ್ಮ ಪದವಿಯಲ್ಲಿ ದೇವತೆಗಳು ಇಲ್ಲದಿದ್ದರೂ ಎಂದು ವಿಭಾಗಿಸಿ ತತ್ತ್ವಪ್ರಕಾಶಿಕಾದಲ್ಲಿ ವ್ಯಾಖ್ಯಾನಿಸಲಾಗಿದೆ. ಚಂದ್ರಿಕಾದಲ್ಲಿ ಅದನ್ನು ಒಂದೇ ಪದವನ್ನಾಗಿ ಪರಿಗಣಿಸಿಯೂ ವ್ಯಾಖ್ಯಾನ ಮಾಡಲಾಗಿದೆ. ತಮ್ಮ ಪದವಿಯನ್ನು ಹೊಂದಿದ ದೇವತೆಗಳಿಗೆ ಪ್ರತಿಕಲ್ಪದಲ್ಲೂ ಮೋಕ್ಷವು ಆವೃತ್ತಿಯಾಗುತ್ತಿದ್ದರೂ ವಿರೋಧವಿಲ್ಲ ಎಂದು ಅದರ ಭಾವ.

**3. ಸ್ಮೃತ್ಯರ್ಥ-** ಪರಮಾತ್ಮನಿಂದ ನಿಃಸೃತವಾದ ವೇದವಾಕ್ಯಕ್ಕೆ ಆದಿ-ಅಂತ್ಯಗಳು ಇಲ್ಲವಾದುದರಿಂದ ಅದು ನಿತ್ಯವಾಗಿದೆ. ಮಹೇಶ್ವರನಾದ ಆ ವಿಷ್ಣುವು ವೇದದಲ್ಲಿ ಹೇಳಿರುವ ಪದಗಳಿಂದಲೇ ಬ್ರಹ್ಮಾದಿ ಜ್ಞಾನಿಗಳಿಗೆ ಹೆಸರನ್ನು ವೇದದಲ್ಲಿ ಹೇಳಿರುವ ರೂಪಗಳನ್ನು ನೀಡಿದ. ॥ ಸೂತ್ರ 30 ॥

## ಓಂ ॥ ಮಧ್ವಾದಿಷು ಅಸಂಭವಾತ್ ಅನಧಿಕಾರಂ ಜೈಮಿನಿಃ ॥ ಓಂ

**'ವಸೂನಾಮೇವೈಕೊ ಭೂತ್ವಾ' (ಛಾಂ.3.6.2) ಇತ್ಯಾದಿನಾ ಪ್ರಾಪ್ಯಫಲತ್ವಾತ್ ಪ್ರಾಪ್ತಪದಾನಾಂ ದೇವಾನಾಂ ಮಧ್ವಾದಿವಿದ್ಯಾಸು ಅನಧಿಕಾರಂ ಜೈಮಿನಿಃ ಮನ್ಯತೇ ।**

**॥ 31 ॥**

ಮಧುವಿದ್ಯೆಯೇ ಮೊದಲಾದ ವಿದ್ಯೋಪಾಸನೆಯಿಂದ ಸಿಗುವ ಫಲಗಳು 'ವಸೂನಾಂ ಏವೈಕೋ ಭೂತ್ವಾ' ಎಂದು ಮುಂತಾದ ವಾಕ್ಯಗಳಿಂದ ಹೇಳಲ್ಪಟ್ಟಿರುವುದರಿಂದ, ಈಗಾಗಲೇ ಅಂತಹ ಪದವಿಗಳನ್ನು ಪಡೆದಿರುವ ದೇವತೆಗಳಿಗೆ ದೊರೆತಿರುವುದರಿಂದ ಮಧ್ವಾದಿವಿದ್ಯೆಗಳಲ್ಲಿ ಅಧಿಕಾರವಿಲ್ಲವೆಂದು ಜೈಮಿನಿ ಆಚಾರ್ಯನು ತಿಳಿಯುತ್ತಾನೆ.

**ವಿವರಣೆ : 1.** ದೇವತೆಗಳಿಗೂ ವೇದವಿದ್ಯೆಯಲ್ಲಿ ಅಧಿಕಾರವಿದೆ ಎಂದು 'ತದುಪರ್ಯಪಿ' ಇತ್ಯಾದಿ ಸೂತ್ರದಲ್ಲಿ ಹೇಳಲಾಗಿದೆ. ವೇದವಿದ್ಯೆ ಎಂದರೆ ವೇದದಲ್ಲಿ ಹೇಳಿರುವ ವಿವಿಧ ಉಪಾಸನೆಗಳು. ಉದಾಹರಣೆಗೆ ಛಾಂದೋಗ್ಯದಲ್ಲಿ 'ಅಸೌ ಆದಿತ್ಯೋ ದೇವ ಮಧು' ಎಂದು ಆರಂಭಿಸಿ ಮಧುವಿದ್ಯೆಯನ್ನು ಹೇಳಲಾಗಿದೆ. ಸೂರ್ಯನಲ್ಲಿರುವ ವಿಷ್ಣು ಪರಮಾನಂದರೂಪನಾದುದರಿಂದ ಮಧುನಾಮಕನಾಗಿದ್ದಾನೆ. ಸೂರ್ಯ ಮಂಡಲದ ಪೂರ್ವಾದಿ ದಿಕ್ಕುಗಳಲ್ಲಿ ಅವನ ವಾಸುದೇವಾದಿ ಪಂಚರೂಪಗಳು ಇವೆ. ಅವುಗಳನ್ನು ಉಪಾಸನೆ ಮಾಡಿದರೆ ಕ್ರಮವಾಗಿ ವಸು-ರುದ್ರ-ಆದಿತ್ಯ-ಮರುತ್-ಸಾಧ್ಯ ಎಂಬ ದೇವತಾ ಪದವಿಗಳು ಲಭಿಸುತ್ತವೆ ಎನ್ನಲಾಗಿದೆ. ಆದರೆ ಈಗಾಗಲೇ ಇಂತಹ ಪದವಿಗಳನ್ನು ಪಡೆದಿರುವುದರಿಂದ ಅಂತಹ ಪದವಿಗಳಲ್ಲಿ ಇರುವ ದೇವತೆಗಳಿಗೆ ಆ ವಿದ್ಯೆಯಲ್ಲಿ ಅಧಿಕಾರವಿಲ್ಲ. ಅಧಿಕಾರ ಲಕ್ಷಣದಲ್ಲಿ 'ಅರ್ಥೀ' ಎಂಬ ವಿಶೇಷಣವೂ ಸೇರಿದೆ. ದೇವತೆಗಳಿಗೆ ಪದವಿ ದೊರೆತಿರುವುದರಿಂದ ಅವರು ಆ ಪದವಿಯ ಅಭ್ಯರ್ಥಿಗಳೇ ಅಲ್ಲ. ಅದಕ್ಕಿಂತಲೂ ಉಚ್ಚವಾದ ಪದವಿಗೆ ಬೇಕಾದ ಅರ್ಹತೆಯೂ ಅವರಲ್ಲಿಲ್ಲ. ಆದ್ದರಿಂದ ಇಂತಹ ವಿದ್ಯೆಯಲ್ಲಿ ದೇವತೆಗಳಿಗೆ ಅಧಿಕಾರವಿಲ್ಲ, ಎಂದು ಜೈಮಿನಿಗಳ ಮತ.

**2.** 'ಇತ್ಯಾದಿನಾ ಪ್ರಾಪ್ಯ ಫಲತ್ವಾತ್' ಎಂಬ ಶಬ್ದವನ್ನು ಎರಡು ರೀತಿಯಾಗಿಯೂ ಛೇದಮಾಡಬೇಕು. 'ಪ್ರಾಪ್ಯಫಲತ್ವಾತ್, ಅಪ್ರಾಪ್ಯಫಲತ್ವಾತ್' ಎಂದು. ತತ್ತತ್ ಪದವಿಗಳು ಯೋಗ್ಯರಿಗೆ ಲಭ್ಯವಾಗುವ ಫಲ, ಅಯೋಗ್ಯರಿಗೆ ಅದು ಸಿಗದ ಫಲ, ಎಂದರ್ಥ.

ಪ್ರಾಪ್ತಪದಾನಾಂ-ಪ್ರಾಪ್ತಂ ಪದಂ ಯೈಃ ಎಂದು ಸಮಾಸ. ಪಡೆಯಬೇಕಾಗಿರುವ ಫಲವನ್ನು ಹೊಂದಿದ್ದಾರೆ ಎಂದು ಅರ್ಥ.

**3. ಶ್ರುತ್ಯರ್ಥ** – ಸ ಏತದೇವ ಅಮೃತಂ ವೇದ ವಸೂನಾಮೇವೈಕೋ

ಭೂತ್ವಾ ಅಗ್ನಿನೈವ ಮುಖೇನ ಏತದೇವಾಮೃತಂ ದೃಷ್ಟ್ವಾ ತೃಪ್ಯತಿ ||

ಸಃ=ಅಧಿಕಾರಿಯಾದವನು ಏತದೇವ=ಸೂರ್ಯಮಂಡಲದ ಪೂರ್ವಭಾಗದ ಕಿರಣಗಳಲ್ಲಿರುವ ಅಮೃತಂ=ಅಮೃತಪದವಾಚ್ಯನಾದ ವಾಸುದೇವನನ್ನು ಏವಂ=ಹಿಂದೆ ಹೇಳಿದಂತೆ ವೇದ=ತಿಳಿಯುತ್ತಾನೋ, ಅವನು, ವಸೂನಾಮೇವೈಕೋ ಭೂತ್ವಾ=ವಸುಗಳಲ್ಲಿ ಒಬ್ಬನಾಗಿ ಅಧಿಕಾರದಲ್ಲಿದ್ದು ಅಗ್ನಿನಾ ಮುಖೇನ=ಅಗ್ನಿಯ ಉಪದೇಶದಿಂದ ಏತದೇವ=ಇದೇ ಅಮೃತಂ=ವಾಸುದೇವನನ್ನು ದೃಷ್ಟ್ವಾ=ನೋಡಿ ತೃಪ್ಯತಿ=ಮುಕ್ತನಾಗುತ್ತಾನೆ.

|| ಸೂತ್ರ 31 ||

## ಓಂ || ಜ್ಯೋತಿಷಿ ಭಾವಾಚ್ಚ || ಓಂ

**ಜ್ಯೋತಿಷಿ=ಸರ್ವಜ್ಞತ್ವೇ ಭಾವಾಚ್ಚ। ಆದಿತ್ಯಪ್ರಕಾಶೇ ಅಂತರ್ಭಾವವತ್ ತಜ್ಜ್ಞಾನೇ ಸರ್ವವಸ್ತೂನಾಂ ಅಂತರ್ಭಾವಾತ್। ನಿತ್ಯಸಿದ್ಧತ್ವಾಚ್ಚ ವಿದ್ಯಾನಾಮ್ || 32 ||**

'ಜ್ಯೋತಿಷಿ' ಎಂದರೆ ದೇವತೆಗಳ ಜ್ಞಾನದಲ್ಲಿ ಸರ್ವವಸ್ತುಗಳೂ ಇರುವುದರಿಂದ, ಎಂದರ್ಥ. ಸೂರ್ಯನ ಪ್ರಕಾಶದಲ್ಲಿ ಎಲ್ಲವೂ ತೋರುವಂತೆ ದೇವತೆಗಳ ಜ್ಞಾನದಲ್ಲೂ ಎಲ್ಲವೂ ಸೇರಿದೆ. ಜ್ಞಾನ ಸಾಧನವಾದ ಎಲ್ಲ ವಿದ್ಯೆಗಳೂ ಅವರಿಗೆ ಸದಾ ಸಿದ್ಧ ಎಂದು ಭಾವ.

**ವಿವರಣೆ : 1.** ದೇವತಾ ಪದವಿಗೆ ಕಾರಣವಾದ ವಿದ್ಯೆಗಳಲ್ಲಿ ದೇವತೆಗಳಿಗೆ ಅಧಿಕಾರವಿಲ್ಲದಿರಬಹುದು. ಆದರೂ ಮೋಕ್ಷಕಾರಣವಾದ 'ಸತ್ಯಂ ಜ್ಞಾನಂ ಅನಂತಂ ಬ್ರಹ್ಮ' ಎಂಬ ಉಪಾಸನೆಗಳಲ್ಲಿ ಅವರಿಗೆ ಅಧಿಕಾರವಿರಬಹುದು. ಅದರ ಫಲ ದೊರೆತಿಲ್ಲವಾದ ಕಾರಣ ಅವರಿಗೆ ಅರ್ಥಿತ್ವ ಇದೆ, ಎಂದು ಪ್ರಶ್ನೆ. ದೇವತೆಗಳಿಗೆ ಮೋಕ್ಷದ ಇಚ್ಛೆಯೇನೋ ಇದೆ, ನಿಜ. ಆದರೆ ಅದಕ್ಕೆ ಬೇಕಾಗಿರುವ ಯೋಗ್ಯ ತತ್ತ್ವಜ್ಞಾನವೂ ಅವರಿಗೆ ಈಗಾಗಲೇ ದೊರೆತಿದೆ. ಆದ್ದರಿಂದ ಅಂತಹ ಜ್ಞಾನಕ್ಕೆ ಸಾಧನವಾದ ವಿದ್ಯೆಯಲ್ಲೂ ಅವರಿಗೆ ಅಧಿಕಾರವಿಲ್ಲ ಎಂದು ಸಮಾಧಾನ.

2. ಮೊದಲ ಸೂತ್ರದಲ್ಲಿ ಐಹಿಕ ಫಲವು ದೊರೆತಿರುವುದರಿಂದ ಅಂತಹ ಫಲ ಸಾಧನವಾದ ಜ್ಞಾನಕ್ಕೆ ಕಾರಣವಾದ ವಿದ್ಯೆಯಲ್ಲಿ ಅಧಿಕಾರವಿಲ್ಲ ಎಂದು ಹೇಳಲಾಗಿದೆ. ಈ ಸೂತ್ರದಲ್ಲಿ ಮೋಕ್ಷಕ್ಕೆ ಬೇಕಾದ ಯೋಗ್ಯ ಜ್ಞಾನವು ದೇವತೆಗಳಿಗೆ ನಿತ್ಯಸಿದ್ಧವಾದುದರಿಂದ ಅದಕ್ಕೆ ಸಾಧನವಾದ ವಿದ್ಯೆಯಲ್ಲೂ ಅಧಿಕಾರವಿಲ್ಲ, ಎಂದು ಹೇಳಲಾಗಿದೆ. ಪ್ರಥಮ ಸೂತ್ರದಲ್ಲೂ ಈ ಅಭಿಪ್ರಾಯವನ್ನು ಸೇರಿಸಿಕೊಳ್ಳಬೇಕು. ದೇವತಾ ಪದವಿಯಂತೆ ಆ

ಪದವಿಗೆ ಯೋಗ್ಯವಾದ ಜ್ಞಾನವೂ ಅವರಿಗೆ ದೊರೆತಿರುವುದರಿಂದ ಆ ಜ್ಞಾನಕ್ಕೆ ಸಾಧನವಾದ ಮಧುವಿದ್ಯೆಯಲ್ಲೂ ಅವರಿಗೆ ಅಧಿಕಾರವಿಲ್ಲ ಎಂದೂ ಆ ಸೂತ್ರದ ಅರ್ಥ.

3. 'ಸರ್ವಜ್ಞತ್ವೇ' ಎಂದು ಹೇಳದೆ 'ಜ್ಯೋತಿಷಿ' ಎಂಬ ಪದವನ್ನು ಪ್ರಯೋಗಿಸಿರುವುದು ಸೂರ್ಯಪ್ರಕಾಶದಂತೆ ದೇವತೆಗಳ ಜ್ಞಾನ ಎಂಬ ತತ್ತ್ವವನ್ನು ತಿಳಿಸುವುದಕ್ಕಾಗಿ. ॥ ಸೂತ್ರ 32 ॥

## ಓಂ ॥ ಭಾವಂ ತು ಬಾದರಾಯಣೋಽಸ್ತಿ ಹಿ ॥ ಓಂ

**ಫಲವಿಶೇಷಭಾವಾತ್ ಪ್ರಾಪ್ತಪದಾನಾಮಪಿ ದೇವಾನಾಂ ಮಧ್ವಾದಿಷು ಅಧಿಕಾರಂ ಬಾದರಾಯಣೋ ಮನ್ಯತೇ । ಅಸ್ತಿ ಹಿ ಪ್ರಕಾಶ ವಿಶೇಷಃ ।**

**ಯಾವತ್ ಸೇವಾ ಪರೇ ತತ್ವೇ ತಾವತ್ ಸುಖವಿಶೇಷತಾ ।**
**ಸಂಭವಾಚ್ಚ ಪ್ರಕಾಶಸ್ಯ ಪರಮೇಕಮೃತೇ ಹರಿಮ್ ॥**
**ತೇಷಾಂ ಸಾಮರ್ಥ್ಯಯೋಗಾಚ್ಚ ದೇವಾನಾಮಪ್ಯುಪಾಸನಮ್ ।**
**ಸರ್ವಂ ವಿಧೀಯತೇ ನಿತ್ಯಂ ಸರ್ವಯಜ್ಞಾದಿಕರ್ಮ ಚ ॥**

**ಇತಿ ಸ್ಕಾಂದೇ ।**

**ಉಕ್ತಫಲಾನಧಿಕಾರ ಮಾತ್ರಂ ಜೈಮಿನಿಮತಂ । ಅತೋ ನ ತನ್ಮತವಿರೋಧಃ ।**

**ಸರ್ವಜ್ಞಸ್ಯೈವ ಕೃಷ್ಣಸ್ಯ ತ್ವೇಕದೇಶ ವಿಚಿಂತಿತಮ್ ।**
**ಸ್ವೀಕೃತ್ಯ ಮುನಯೋ ಬ್ರೂಯುಃ ತನ್ಮತಂ ನ ವಿರುದ್ಧ್ಯತೇ ॥**

**ಇತಿ ಬ್ರಾಹ್ಮೇ ॥ 33 ॥**

## ॥ ಇತಿ ದೇವತಾಧಿಕರಣಮ್ ॥

ವಿದ್ಯೆಯ ಫಲವಾದ ಪದವಿ, ಜ್ಞಾನಗಳನ್ನು ದೇವತೆಗಳು ಹೊಂದಿದ್ದರೂ ಫಲವಿಶೇಷವಿರುವುದರಿಂದ ವೇದೋಕ್ತ ಮಧ್ವಾದಿವಿದ್ಯೆಗಳಲ್ಲೂ ಅವರಿಗೆ ಅಧಿಕಾರವಿದೆ ಎಂದು ಭಗವಾನ್ ವೇದವ್ಯಾಸರು ಅಭಿಪ್ರಾಯಪಡುತ್ತಾರೆ. ಏಕೆಂದರೆ ದೇವತೆಗಳಿಗೂ ಉಪಾಸನೆಯಿಂದ ಜ್ಞಾನವಿಶೇಷದ ಲಾಭ ಇದೆ. ಸ್ಕಾಂದದಲ್ಲಿ ಹೀಗಿದೆ— ಪರತತ್ತ್ವದ ಸೇವೆಯನ್ನು ಶ್ರವಣಾದಿ ಉಪಾಸನೆಗಳನ್ನು ಮಾಡಿದಷ್ಟೂ ದೇವತೆಗಳಿಗೆ ಸುಖವಿಶೇಷದ ಲಾಭವಿದೆ. ಅಲ್ಲದೆ ಶ್ರೀಹರಿಯನ್ನು ಬಿಟ್ಟು ಉಳಿದೆಲ್ಲರಿಗೂ ಜ್ಞಾನವಿಶೇಷದ ಪ್ರಾಪ್ತಿ ಇದ್ದೇ ಇದೆ. ಹೀಗೆ ದೇವತೆಗಳಿಗೂ ಫಲ ಮತ್ತು ಯೋಗ್ಯತೆಗಳು ಇರುವುದರಿಂದ ಅವರಿಗೂ ವೇದಗಳು ಉಪಾಸನೆ, ಯಜ್ಞಾದಿ ಕರ್ಮಗಳನ್ನು ವಿಧಿಸುತ್ತವೆ.

ಮಧುವಿದ್ಯೆಯಿಂದ ಐಹಿಕ ಫಲವಿಲ್ಲ, ಅಪ್ರಾಪ್ತವಾದ ಜ್ಞಾನದ ಲಾಭವಿಲ್ಲ ಎಂದಿಷ್ಟೇ ಜೈಮಿನಿಯ ಮತ. ಹೀಗಾಗಿ ಬಾದರಾಯಣರ ಮತಕ್ಕೂ ಆ ಮತಕ್ಕೂ

ವಿರೋಧವಿಲ್ಲ. ಬ್ರಾಹ್ಮಪುರಾಣದಲ್ಲಿ ಹೀಗಿದೆ— ಸರ್ವಜ್ಞರಾದ ವೇದವ್ಯಾಸರ ಬುದ್ಧಿಯ ಒಂದಂಶವನ್ನು ಸ್ವೀಕರಿಸಿ ಮುನಿಗಳು ತಮ್ಮ ಅಭಿಪ್ರಾಯವನ್ನಾಗಿ ಹೇಳುತ್ತಾರೆ. ಆದ್ದರಿಂದ ಅದು ವ್ಯಾಸರ ಅಭಿಮತಕ್ಕೆ ವಿರೋಧವಾಗುವುದಿಲ್ಲ.

**ವಿವರಣೆ :** ಮಧುವಿದ್ಯೆಯ ಉಪಾಸನೆಯಿಂದ ದೇವತೆಗಳಿಗೆ ಐಹಿಕವಾದ ಪದವಿಪ್ರಾಪ್ತಿ ಇಲ್ಲ. ಸತ್ಯಜ್ಞಾನಾದಿ ಗುಣಗಳಿಂದ ಬ್ರಹ್ಮನ ಶ್ರವಣಾದಿಗಳನ್ನು ಮಾಡಿದರೂ ಅವರಿಗೆ ಹೆಚ್ಚಿನ ಆನಂದದ ಪ್ರಾಪ್ತಿಯೂ ಇಲ್ಲ. ಆದರೂ ಅದು ವ್ಯರ್ಥವಲ್ಲ. ಇಂತಹ ಉಪಾಸನೆಗಳಿಂದ ಅವರ ಜ್ಞಾನದಲ್ಲಿ ಸ್ಪಷ್ಟತೆ ಹೆಚ್ಚಿ ಅದರಿಂದ ಅವರ ಯೋಗ್ಯತೆಗೆ ಅನುಗುಣವಾಗಿ ಕ್ಲೃಪ್ತವಾದ ಮೋಕ್ಷಾನಂದದಲ್ಲಿ ಉನ್ನಾಹವುಂಟಾಗುತ್ತದೆ. ಆದ್ದರಿಂದ ಸರ್ವವಿದ್ಯೆಗಳಲ್ಲೂ ದೇವತೆಗಳಿಗೆ ಅಧಿಕಾರವಿದೆ. ॥ ಸೂತ್ರ 33 ॥

## ಮಾಧ್ವಸಿದ್ಧಾಂತದಲ್ಲಿ ಸೂತ್ರಗಳ ಅರ್ಥ

**1. ಓಂ ॥ ತದುಪರ್ಯಪಿ ಬಾದರಾಯಣಃ ಸಂಭವಾತ್ ॥ ಓಂ**

ತದುಪರಿ, ತಸ್ಯ=ಮನುಷ್ಯತ್ವದ ಉಪರಿ=ದೇವತಾಪದಪ್ರಾಪ್ತ್ಯನಂತರವೂ ಮನುಷ್ಯರಿಗೆ ವೇದವಿದ್ಯೆಯಲ್ಲಿ ಅಧಿಕಾರವಿದೆ. ಏಕೆಂದರೆ, ಸಂಭವಾತ್=ವಿಶಿಷ್ಟವಾದ ಬೌದ್ಧಿಕ ಸಾಮರ್ಥ್ಯವಿರುವುದರಿಂದ. ಹೀಗೆಂದು ಬಾದರಾಯಣರ ಮತ.

(ಅತ್ರ ದೇವಾನಾಮಧಿಕಾರೋಽಸ್ತೀತಿ ಪ್ರಸಂಗಾದುಚ್ಯತೇ । ಅಧಿಕಾರ ಇತಿ ವಿಭಾಗವಿಪರಿಣ್ಯಾಭ್ಯಾಂ ಅಸ್ತಿ । ತದುಪರಿ, ತಸ್ಯ=ಪ್ರಕೃತಸ್ಯ ಮನುಷ್ಯತ್ವಸ್ಯ ಉಪರಿ=ವಿದ್ಯಾಕರ್ಮಾಭ್ಯಾಂ ದೇವತ್ವಪ್ರಾಪ್ತ್ಯನಂತರಮಪಿ, ದೇವಾನಾಮಿತಿ ಯಾವತ್, ಅಧಿಕಾರೋಽಸ್ತಿ। ಕುತಃ? ಸಂಭವಾತ್=ವಿಶಿಷ್ಯಬುದ್ಧ್ಯಾದೇಃ ಸಂಭವಾತ್ ಇತಿ ಬಾದರಾಯಣಃ ಆಹೇತ್ಯರ್ಥಃ । ದೇವಾನಾಮಿತಿವಾಚ್ಯೇ । ತದುಪರಿತ್ಯುಕ್ತಿಃ ದೇವತ್ವಸ್ಯ ಸಾದಿತ್ವಾದಿನಾ ಮೋಕ್ಷಾರ್ಥಿತಾ ಯುಕ್ತಾ ಇತಿ ಸೂಚಯಿತುಮ್)

**2. ಓಂ ॥ ವಿರೋಧಃ ಕರ್ಮಣೀತಿ ಚೇನ್ನ ಅನೇಕ ಪ್ರತಿಪತ್ತೇಃ ದರ್ಶನಾತ್ ॥ ಓಂ**

ದೇವತ್ವವು ಸಾದಿಯಾದರೆ ಕರ್ಮಣಿ=ಯಜ್ಞಾದಿ ಕರ್ಮಗಳ ವಿಷಯದಲ್ಲಿ ವಿರೋಧಃ=ವೈಯರ್ಥ್ಯ ಎಂಬ ದೋಷ ಬಂದೀತು, ಇತಿ ಚೇನ್ನ=ಹೀಗೆ ಹೇಳುವುದು ಸರಿಯಲ್ಲ. ಅನೇಕ ಪ್ರತಿಪತ್ತೇಃ, ಅನೇಕೇಷಾಂ=ಅನೇಕ ಮನುಷ್ಯರಿಗೆ ಪ್ರತಿಪತ್ತೇಃ=ದೇವತಾ ಪದ ಪ್ರಾಪ್ತಿಯು ದರ್ಶನಾತ್='ಯಜ್ಞೇನ ಯಜ್ಞಂ' ಎಂಬ ಶ್ರುತಿಯಿಂದ ತಿಳಿಯುತ್ತದೆಯಾದ್ದರಿಂದ.

(ತದುಪರಿ ಇತ್ಯುಕ್ತ ದೇವತಾಪದಸ್ಯ ಸಾದಿತ್ವೇ, ಕರ್ಮಣಿ=ಕರ್ಮವಿಷಯೇ ವಿರೋಧಃ=ವ್ಯರ್ಥತಾ ಸ್ಯಾತ್ ಇತಿ ಚೇನ್ನ । ಅನೇಕ ಪ್ರತಿಪತ್ತೇಃ ದರ್ಶನಾತ್, ಯೋಗ್ಯಮನುಷ್ಯಾಣಾಂ ಪ್ರತಿಪತ್ತೇಃ=ಪೂರ್ವಂ ಪೂರ್ವಂ ದೇವತಾ ಪದಪ್ರಾಪ್ತೇಃ

'ಯಜ್ಞೇನ ಯಜ್ಞಂ' ಇತಿ ಶ್ರುತೌ ದರ್ಶನಾದಿತ್ಯರ್ಥಃ । ಏತದ್ದೇವತಾಭಾವೇऽಪಿ ದೇವತಾಂತರಸತ್ವಾತ್ ನ ಕರ್ಮವಿರೋಧಃ ಇತಿ ಭಾವಃ।)

**3. ಓಂ ॥ ಶಬ್ದ ಇತಿ ಚೇನ್ನಾತಃ ಪ್ರಭವಾತ್ ಪ್ರತ್ಯಕ್ಷಾನುಮಾನಾಭ್ಯಾಮ್ ॥ ಓಂ**

ಶಬ್ದೇ=ವೇದರೂಪವಾದ ಶಬ್ದದ ವಿಷಯದಲ್ಲಿ ವಿರೋಧಃ=ದೇವತೆಗಳು ಇಲ್ಲದಾಗುವುದರಿಂದ ಅಪ್ರಾಮಾಣ್ಯದೋಷ ಬಂದೀತು ಇತಿಚೇನ್ನ=ಹೀಗೆ ಹೇಳುವುದು ಸರಿಯಲ್ಲ. ಅತಃ='ಧಾತಾ ಯಥಾಪೂರ್ವಮಕಲ್ಪಯತ್' ಎಂಬ ಪ್ರಮಾಣದಿಂದ ಪ್ರಭವಾತ್=ದೇವತೆಗಳ ಹುಟ್ಟಿನ ನಿಯಮ ಅರ್ಥಾತ್ ದೇವತಾಪ್ರವಾಹವು ನಿತ್ಯ ಎಂದು ತಿಳಿಯುವುದರಿಂದ, ವೇದವು ಅಪ್ರಮಾಣವಾಗಲಾರದು. ಪ್ರತ್ಯಕ್ಷಾನುಮಾನಾಭ್ಯಾಂ= ಮಹಾತ್ಮರಿಗೆ ದೇವತಾಪ್ರವಾಹವು ನಿತ್ಯ ಎಂದು ಪ್ರತ್ಯಕ್ಷವಿದೆ. ಇತರರಿಗೆ ಅನುಮಾನದಿಂದ ಅದು ಸಿದ್ಧವಾಗುತ್ತದೆಯಾದ್ದರಿಂದ 'ಧಾತಾ ಯಥಾಪೂರ್ವಂ' ಎಂಬ ಶ್ರುತಿಗೆ ಗೌಣಾರ್ಥವನ್ನು ಹೇಳಬಾರದು.

(ವಿರೋಧ ಇತ್ಯಸ್ತಿ । ಅತಃಶಬ್ದಃ ಪ್ರಕೃತ ಶಬ್ದಪರಃ । ಪ್ರಭವಶಬ್ದಃ ತನ್ನಿಯಮಾವಗಮಪರಃ। ತದುಪರಿ ಇತ್ಯುಕ್ತಿಲಬ್ಧ ಸಾಂತತ್ವೇ ದೇವಪದಸ್ಯ ಉಪಪ್ಲವೇ ಸತಿ ಶಬ್ದೇ=ನಿತ್ಯೇ ವೇದರೂಪಶಬ್ದೇ, ಅಪ್ರಾಮಾಣ್ಯಾಖ್ಯವಿರೋಧಃ ಸ್ಯಾತ್ ಇತಿ ಚೇನ್ನ । ಅತಃ='ಧಾತಾ ಯಥಾ ಪೂರ್ವಮಕಲ್ಪಯತ್' 'ಯಥೈವ ನಿಯಮಃ ಕಾಲೇ' ಇತ್ಯಾದಿಶಬ್ದಾತ್, ದೇವಾನಾಂ ಪ್ರಭವಾತ್=ಪ್ರಭವ ನಿಯಮಾವಗಮಾತ್, ಪ್ರವಾಹರೂಪೇಣ ದೇವಾನಾಂ ನಿತ್ಯತ್ವಾತ್ ನ ದೋಷ ಇತಿ ಭಾವಃ। ಶಬ್ದೇ ಉಪಚರಿತಾಪಿ ಉಕ್ತಿಃ ಸ್ಯಾತ್ ಅತ ಉಕ್ತಂ-ಪ್ರತ್ಯಕ್ಷೇತಿ। ಮಹತಾಂ ಪ್ರಭವ ನಿಯಮ ಪ್ರತ್ಯಕ್ಷಾತ್ ಅನ್ಯೇಷಾಂ 'ಉಪರಿತನ ಕಾಲಃ ದೇವವಾನ್, ಕಾಲತ್ವಾತ್' ಇತ್ಯನುಮಾನಾತ್ ತನ್ನಿಯಮಾವಗಮಾತ್।)

**4. ಓಂ ॥ ಅತ ಏವ ಚ ನಿತ್ಯತ್ವಮ್ ॥ ಓಂ**

ಅತ ಏವ=ವೇದವು ನಿತ್ಯವಾದುದರಿಂದಲೇ ದೇವಪ್ರವಾಹಕ್ಕೂ ನಿತ್ಯತ್ವಮ್= ನಿತ್ಯತ್ವವು ಇದೆ.

(ಅತಏವ=ಶಬ್ದನಿತ್ಯತ್ವಾದೇವ । ತದನ್ಯಥಾನುಪಪತ್ತ್ಯೈವೇತ್ಯರ್ಥಃ । ನಿತ್ಯತ್ವಂ, ದೇವಪ್ರವಾಹಸ್ಯೇತ್ಯರ್ಥಃ।)

**5. ಓಂ ॥ ಸಮಾನನಾಮ ರೂಪತ್ವಾಚ್ಚಾವೃತ್ತಾವಪಿ ಅವಿರೋಧಃ ದರ್ಶನಾತ್ ಸ್ಮೃತೇಶ್ಚ॥ ಓಂ**

ಮುಂದೆ ಮುಂದೆ ದೇವತಾಪದವಿಗೆ ಬರುವವರಿಗೆ ಸಮಾನ ನಾಮರೂಪತ್ವಾಚ್ಚ= ಹಿಂದಿನ ದೇವತೆಗಳ ಹೆಸರು, ಆಕೃತಿಗಳು, ಧರ್ಮಗಳೂ ಕೂಡ ಸಮಾನವಾದುದರಿಂದ, ಆವೃತ್ತಾವಪಿ= ದೇವತಾ ಸ್ಥಾನದಲ್ಲಿರುವವರಿಗೆ ಮುಕ್ತಿಯು ಆವೃತ್ತಿಯಾಗುತ್ತಿದ್ದರೂ ಅಥವಾ

ಅವೃತ್ತಾವಪಿ= ಹಿಂದಿನ ದೇವತೆಗಳು ಮುಕ್ತರಾಗಿ ದೇವತಾಪದದಲ್ಲಿ ಅವರು ಇಲ್ಲದಿದ್ದರೂ ಅವಿರೋಧಃ= ಆ ದೇವತೆಗಳನ್ನು ಪ್ರತಿಪಾದಿಸುವ ವೇದಕ್ಕೆ ಅಪ್ರಾಮಾಣ್ಯಾಪತ್ತಿ ಇಲ್ಲ. ಏಕೆಂದರೆ ದೇವತೆಗಳಿಗೆ ಅದೇ ನಾಮರೂಪಗಳಿರುತ್ತವೆ ಎಂದು ಶ್ರುತಿ-ಸ್ಮೃತಿಗಳು ಹೇಳುತ್ತವೆ.

(ತದುಪರೀತ್ಯತೋ ದೇವಾನಾಮಿತ್ಯನ್ವೇತಿ । ಪ್ರಾಚೀನದೇವಾನಾಂ ಮುಕ್ತತ್ವೇನ ಸ್ವಸ್ವಪದೇಷು ಅವೃತ್ತಾವಪಿ ತದನ್ಯೇಷಾಂ ತತ್‌ಸಮಾನರೂಪತ್ವಾತ್। ತತ್ತ್ವಪ್ರದೀಪ ರೀತ್ಯಾ ಸಮಾನಧರ್ಮಕತ್ವಾಚ್ಚೇತಿ ಚಶಬ್ದಾರ್ಥಃ । ತತ್ಪ್ರತಿಪಾದಕ ಏಕೈಕವಿಧವೇದಸ್ಯ ಅಪ್ರಾಮಾಣ್ಯಾಖ್ಯವಿರೋಧಃ ನಾಸ್ತಿ । ತದೇವ ಕುತ ಇತಿ ಚೇತ್, ದರ್ಶನಾತ್ 'ಯಥಾಪೂರ್ವಂ' ಇತಿ ಶ್ರುತೇಃ, 'ಅನಾದಿ ನಿಧನಾ ನಿತ್ಯಾ' ಇತ್ಯಾದಿಸ್ಮೃತೇಶ್ಚ ಇತ್ಯರ್ಥಃ।)

**6. ಓಂ ॥ ಮಧ್ವಾದಿಷು ಅಸಂಭವಾತ್ ಅನಧಿಕಾರಂ ಜೈಮಿನಿಃ ॥ ಓಂ**

''ಅಸೌ ವಾ ಆದಿತ್ಯಃ ದೇವಮಧು' ಇತ್ಯಾದಿಯಾಗಿ ಹೇಳಲ್ಪಟ್ಟ ಮಧುವಿದ್ಯೆ ಜ್ಯೋತಿಷ್ಟೋಮಾದಿ ಕರ್ಮಗಳಲ್ಲಿ ಅಸಂಭವಾತ್= ಅದರಿಂದ ಲಭಿಸುವ ಫಲವು ದೇವತೆಗಳಿಗೆ ದೊರೆತಿದೆಯಾದ ಕಾರಣ ಅರ್ಥಿತ್ವ ಅಸಂಭಾವಿತವಾದುದರಿಂದ ಅನಧಿಕಾರಂ= ಆ ವಿದ್ಯೆಗಳಲ್ಲಿ ಅವರಿಗೆ ಅಧಿಕಾರವಿಲ್ಲ ಎಂದು ಜೈಮಿನಿಃ= ಜೈಮಿನಿಮುನಿಯು ತಿಳಿಯುತ್ತಾನೆ.

(ದೇವಾನಾಮಿತ್ಯಸ್ತಿ । 'ಅಸೌ ವಾ ಆದಿತ್ಯೋ ದೇವಮಧು' ಇತ್ಯಾದ್ಯುಕ್ತ ಮಧು- ಜ್ಯೋತಿಷ್ಟೋಮಾದಿ ವಿದ್ಯಾಸು ದೇವಾನಾಂ ಅನಧಿಕಾರಂ ಜೈಮಿನಿಃ ಮನ್ಯತೇ ಇತ್ಯರ್ಥಃ । ಮೋಕ್ಷೇತರವಸುತ್ವಾದಿ ಫಲಕಾಸು ಯೋಗ್ಯಾನಾಂ ವಸುತ್ವಾದಿಫಲಾನಾಂ ಆಪ್ತತ್ವಾತ್, ಅಯೋಗ್ಯಾನಾಂ ಅಕಾಮ್ಯತ್ವೇನ ಅರ್ಥಿತಾ ಅಸಂಭವಾತ್ ಇತ್ಯರ್ಥಃ।)

**7. ಓಂ ॥ ಜ್ಯೋತಿಷಿ ಭಾವಾಚ್ಚ ॥ ಓಂ**

ಜ್ಯೋತಿಷಿ= ದೇವತೆಗಳ ಜ್ಞಾನದಲ್ಲಿ ಭಾವಾತ್= ಎಲ್ಲ ವಸ್ತುಗಳೂ ಇರುವುದ ರಿಂದಲೂ ಅವರಿಗೆ ಮೋಕ್ಷಕ್ಕೆ ಕಾರಣವಾದ ಉಪಾಸನಾದಿಗಳಲ್ಲೂ ಅಧಿಕಾರವಿಲ್ಲ.

(ಚೋಽಪ್ಯರ್ಥೇ । ದೇವಾನಾಮಿತ್ಯಸ್ತಿ । ಜ್ಯೋತಿಃಶಬ್ದೋ ಜ್ಞಾನಪರಃ । ದೇವಾನಾಂ ಜ್ಞಾನೇ ಭಾವಾತ್ । ವಸ್ತೂನಾಮಿತಿ ಶೇಷಃ। ಸಮಸ್ತವಸ್ತು ವಿಷಯೀಕರಣಾತ್ ಇತಿ ಯಾವತ್ । ದೇವಾನಾಂ ಸಾರ್ವಜ್ಞ್ಯೇನ ಮೋಕ್ಷಾರ್ಥವಿದ್ಯಾಸು ಅಪಿ ತತ್– ಸಾಧ್ಯಜ್ಞಾನಸ್ಯ ಆಪ್ತತ್ವೇನ ಅರ್ಥಿತಾ ಅಸಂಭವಾತ್ ಅನಧಿಕಾರಂ ಮನ್ಯತೇ ಇತ್ಯನ್ವಯಃ।)

**8. ಓಂ ॥ ಭಾವಂ ತು ಬಾದರಾಯಣೋಽಸ್ತಿ ಹಿ ॥ ಓಂ**

ಬಾದರಾಯಣಸ್ತು= ವ್ಯಾಸರಾದರೋ, ದೇವತೆಗಳಿಗೆ ಮಧು ವಿದ್ಯೆಯೇ ಮೊದಲಾದ ಎಲ್ಲ ವಿದ್ಯೆಗಳಲ್ಲೂ ಭಾವಂ= ಅಧಿಕಾರವಿದೆ ಎಂದು ಮನ್ಯತೇ= ತಿಳಿಯುತ್ತಾರೆ.

ಏಕೆಂದರೆ ಅವರಿಗೂ ಅಸ್ತಿ ಹಿ= ಆ ವಿದ್ಯೆಯಿಂದ ಜ್ಞಾನ ಮೋಕ್ಷಗಳಲ್ಲಿ ಅತಿಶಯವಿದೆ.

(ಮಧ್ವಾದಿಷು ಇತಿ ಅಧಿಕಾರಸ್ಯೇತಿ ದೇವಾನಾಮಿತಿ ಚಾಸ್ತಿ । ತುರ್ವಿಶೇಷೇ । ಬಾದರಾಯಣಸ್ತು ಇತ್ಯನ್ವಯಃ। ಭಾವಂ= ದೇವಾನಾಂ ಮಧ್ವಾದ್ಯಶೇಷವಿದ್ಯಾಸು ಅಧಿಕಾರಸ್ಯ ಭಾವಂ ಮನ್ಯತೇ। ಕುತಃ ? ಅಸ್ತಿ ಹಿ, ಅತಿಶಯ ಇತಿ ಶೇಷಃ। ಮೋಕ್ಷಫಲೇ ತದ್ಧೇತುಜ್ಞಾನೇ ಚ ಅತಿಶಯೋ ಅಸ್ತಿ ಹಿ ಯತೋಽತೋ ಅತಿಶಯಾರ್ಥಂ ಇತ್ಯರ್ಥಃ।)

## ಶಾಂಕರಭಾಷ್ಯದಲ್ಲಿ ಹೇಳಿರುವ ಸೂತ್ರಗಳ ಅರ್ಥ

**1. ತದುಪರ್ಯಪಿ ಬಾದರಾಯಣಃ ಸಂಭವಾತ್** - ಹಿಂದಿನ ಸೂತ್ರದಲ್ಲಿ ಶಾಸ್ತ್ರಕ್ಕೆ ಮನುಷ್ಯರು ಅಧಿಕಾರಿಗಳು ಎನ್ನಲಾಯಿತು. ಅವರು ಮಾತ್ರ ಅಧಿಕಾರಿಗಳಲ್ಲ. ದೇವತೆಗಳೂ ಅಧಿಕಾರಿಗಳು ಎಂದು ಇಲ್ಲಿ ಸಮರ್ಥಿಸಲಾಗುತ್ತದೆ. ತದುಪರಿ=ಮನುಷ್ಯರಿಗಿಂತ ಉತ್ತಮರಾದ ದೇವತೆಗಳಿಗೂ ವೈದಿಕ ವಿದ್ಯೆಯಲ್ಲಿ ಅಧಿಕಾರವಿದೆ ಎಂದು ಬಾದರಾಯಣರ ಮತ. ಏಕೆಂದರೆ, ಅರ್ಥಿತ್ವ, ಸಾಮರ್ಥ್ಯ, ವಿದ್ವತ್ತೆ ಇವು ಮೂರು ಅಧಿಕಾರಿಯ ಅರ್ಹತೆಗಳು. ದೇವತೆಗಳಿಗೆ ಮೋಕ್ಷದ ಇಚ್ಛೆ ಇದೆ. ದೇಹಾದಿಗಳು ಇರುವುದರಿಂದ ಶ್ರವಣಮನನಾದಿಗಳನ್ನು ಮಾಡುವ ಸಾಮರ್ಥ್ಯವೂ ಇದೆ. ನಿಷೇಧವಿಲ್ಲ. ಆದ್ದರಿಂದ ಸಂಭವಾತ್=ಅಧಿಕಾರಿಗಳ ಅರ್ಹತೆ ಅವರಿಗೂ ಇರುವುದರಿಂದ ಅವರು ವೇದವಿದ್ಯೆಗೆ ಅಧಿಕಾರಿಗಳು. ಆದ್ದರಿಂದಲೇ 'ಭೃಗುರ್ವೈವಾರುಣಿಃ । ವರುಣಂ ಪಿತರಮುಪಸಸಾರ' ಎಂದು ಮುಂತಾಗಿ ಗುರೂಪಸತ್ತ್ಯಾದಿಗಳನ್ನು ದೇವತೆಗಳೂ ಮಾಡಿದ್ದಾಗಿ ತಿಳಿಯುತ್ತದೆ. ಯಜ್ಞಾದಿ ಕರ್ಮಗಳಲ್ಲಿ ಮಾತ್ರ ಅವರಿಗೆ ಅಧಿಕಾರವಿಲ್ಲ. ಏಕೆಂದರೆ, ಅವರೇ ಯಜ್ಞದೇವತೆಗಳಾದುದರಿಂದ ಅವರಿಂದ ಆಹುತಿ ಪಡೆವ ಇತರ ದೇವತೆಗಳಿಲ್ಲ. ಆದರೆ ವೇದವಿದ್ಯೆಯಲ್ಲಿ ಅಧಿಕಾರವಿರಲು ಇಂತಹ ಬಾಧಕಗಳಿಲ್ಲ. ಆದ್ದರಿಂದ ದೇವತೆಗಳಿಗೂ ವೇದವಿದ್ಯೆಯಲ್ಲಿ ಅಧಿಕಾರವಿದೆ.

**2. ವಿರೋಧಃ ಕರ್ಮಣೀತಿ ಚೇನ್ನ ಅನೇಕಪ್ರತಿಪತ್ತೇಃ ದರ್ಶನಾತ್**- ದೇವತೆಗಳು ಯಜ್ಞದಲ್ಲಿ ನೀಡಲಾಗುವ ಹವಿಸ್ಸನ್ನು ಸ್ವೀಕರಿಸುವವರು. ಅವರಿಗೆ ಶರೀರವಿದ್ದರೆ ಒಂದೇ ಸಮಯದಲ್ಲಿ ನಡೆಯುವ ಅನೇಕ ಯಜ್ಞಗಳಲ್ಲಿ ಅವರ ಉಪಸ್ಥಿತಿ ಸಾಧ್ಯವಿಲ್ಲ. ಹೀಗೆ ವಿರೋಧಃ ಕರ್ಮಣಿ=ಕರ್ಮದಲ್ಲಿ ದೇವತೆಗಳ ಉಪಸ್ಥಿತಿಯು ಸಾಧ್ಯವಿಲ್ಲದಾಗುತ್ತದೆ ಎಂದು ಪ್ರಶ್ನೆ. ಅನೇಕ ಪ್ರತಿಪತ್ತೇಃ= ದೇವತೆ ಒಬ್ಬನೇ ಆದರೂ ಅವನಿಗೆ ಅನೇಕ ರೂಪವನ್ನು ತಾಳುವ ಸಾಮರ್ಥ್ಯವಿದೆ. ದರ್ಶನಾತ್-

ಆತ್ಮನೋ ವೈ ಶರೀರಾಣಿ ಬಹೂನಿ ಭರತರ್ಷಭ।

ಯೋಗೀ ಕುರ್ಯಾತ್ ಬಲಂ ಪ್ರಾಪ್ಯ ತೈಶ್ಚ ಸರ್ವೈಃ ಮಹೀಂ ಚರೇತ್ ॥

ಎಂದು ಸ್ಮೃತಿಯು ಅನೇಕ ಶರೀರಗಳನ್ನು ಪಡೆವ ಸಾಮರ್ಥ್ಯವನ್ನು ಯೋಗಿಗಳಿಗೂ

ತಿಳಿಸುತ್ತದೆ. ಅಂದಮೇಲೆ ದೇವತೆಗಳಿಗೆ ಅಂತಹ ಮಹಿಮೆ ಇಲ್ಲದಿರುವುದೆ? ಅಥವಾ ಅನೇಕರು ಹಾಕಿದ ಊಟವನ್ನು ಒಬ್ಬನು ಉಣಲು ಸಾಧ್ಯವಿಲ್ಲ, ಆದರೆ ಅನೇಕ ಮಂದಿ ಒಬ್ಬನಿಗೇ ನಮಸ್ಕಾರ ಮಾಡಬಹುದು. ಅದರಂತೆ ಅನೇಕ ಯಾಗಗಳಲ್ಲಿ ಒಬ್ಬ ಇಂದ್ರನನ್ನು ಉದ್ದೇಶಿಸಿ ಹವಿಸ್ಸನ್ನು ನೀಡುವುದರಲ್ಲಿ ತೊಂದರೆ ಏನೂ ಇಲ್ಲ.

**3. ಶಬ್ದ ಇತಿ ಚೇನ್ನ ಅತಃ ಪ್ರಭವಾತ್ ಪ್ರತ್ಯಕ್ಷಾನುಮಾನಾಭ್ಯಾಂ-** ದೇವತೆಗಳಿಗೆ ಶರೀರವಿದ್ದರೆ ಕರ್ಮ ವಿರೋಧವೇನೂ ಇಲ್ಲ. ಆದರೆ 'ಶಬ್ದೇ=ವೈದಿಕ ಶಬ್ದದ ವಿಷಯದಲ್ಲಿ' ವಿರೋಧವಿದೆ. ಇಂದ್ರ, ಅಗ್ನಿ ಮುಂತಾದ ವೈದಿಕ ಶಬ್ದಗಳು ನಿತ್ಯವಾಗಿವೆ. ಅವುಗಳಿಂದ ವಾಚ್ಯರಾದ ದೇವತೆಗಳ ಶರೀರಗಳು ಅನಿತ್ಯ.

ರಾಮನು ತನ್ನ ಮಗನಿಗೆ ಕೃಷ್ಣ ಎಂದು ಹೆಸರಿಡುತ್ತಾನೆ. ಕೃಷ್ಣನ ದೇಹ ಅವಸಾನವಾದಾಗ ಆ ಹೆಸರೂ ಅವನೊಡನೆ ನಾಶವಾಗುತ್ತದೆ. ಅದರಂತೆ, ದೇವತೆಗಳ ಶರೀರ ಅನಿತ್ಯವಾದರೆ ಅವಕ್ಕೆ ವಾಚಕವಾದ ವೇದಸಾಹಿತ್ಯ ನಿತ್ಯವಾಗುವುದು ಹೇಗೆ? 'ಅತಃ ಪ್ರಭವಾತ್' ದೇವತೆಗಳು ಶಬ್ದಗಳಿಂದಲೇ ಹುಟ್ಟುತ್ತಾರೆ.

ನಾಮರೂಪಂ ಚ ಭೂತಾನಾಂ ಕರ್ಮಣಾಂ ಚ ಪ್ರವರ್ತನಂ।

ವೇದಶಬ್ದೇಭ್ಯ ಏವಾದೌ ನಿರ್ಮಮೇ ಸ ಮಹೇಶ್ವರಃ॥ (ಮನು)

ಸೃಷ್ಟಿಕರ್ತ ವೇದದಲ್ಲಿರುವ 'ಅಗ್ನಿ' ಶಬ್ದವನ್ನು ಸ್ಮರಿಸಿಕೊಂಡು ಅನಂತರ ಅಗ್ನಿಯನ್ನು ಸೃಷ್ಟಿಮಾಡಿದ. ಹೀಗೆ ಶಬ್ದ ಹಿಂದಿನದೆ. ಅದರ ಅರ್ಥ ಬೇರೆ ಬೇರೆ. ಅಗ್ನಿ ಎಂಬುದು ಒಂದು ಪದವಿ. ಅದಕ್ಕೆ ಬರುವ ದೇವತೆ ಅನೇಕವಾದರೂ ಆ ಪದವಿ ಒಂದೇ. ಆದ್ದರಿಂದ ದೇವತೆಗಳ ಶರೀರ ಅನಿತ್ಯವಾದರೂ ಬಾಧಕವಿಲ್ಲ. (ಸೂತ್ರದಲ್ಲಿ ಪ್ರತ್ಯಕ್ಷ=ಶ್ರುತಿ, ಅನುಮಾನ=ಸ್ಮೃತಿ)

**4. ಅತ ಏವ ಚ ನಿತ್ಯತ್ವಂ-** ಪ್ರವಾಹತಃ ನಿತ್ಯವಾದ ಜಗತ್ತಿನ ಉತ್ಪತ್ತಿಗೆ ಕಾರಣವಾದುದರಿಂದಲೇ ವೇದವ್ಯ ನಿತ್ಯ. ಅಷ್ಟೇ ಅಲ್ಲದೆ ವೇದಕ್ಕೊಬ್ಬ ಕರ್ತೃ ಇದ್ದಾನೆ ಎಂಬ ಪ್ರಸಿದ್ಧಿಯೂ ಇಲ್ಲ.

**5. ಸಮಾನನಾಮರೂಪತ್ವಾಚ್ಚಾ ವೃತ್ತಾವಪಿ ಅವಿರೋಧೋ ದರ್ಶನಾತ್ ಸ್ಮೃತೇಶ್ಚ-** ಎಚ್ಚರದಲ್ಲಿರುವ ವ್ಯಕ್ತಿ ಮಲಗಿದಾಗ ಎಚ್ಚರಾವಸ್ಥೆಯಲ್ಲಿ ಅನುಭವಿಸಿರುವ ನಾಮರೂಪ ಪ್ರಪಂಚಗಳ ಪರಿವೆಯೇ ಅವನಿಗಿರುವುದಿಲ್ಲ. ಎದ್ದಕೂಡಲೇ ಮತ್ತೆ ಅದೇ ಪ್ರಾಪಂಚಿಕ ವಸ್ತುಗಳನ್ನು ಅವುಗಳ ಹೆಸರನ್ನೂ ಸ್ಮರಿಸಿಕೊಳ್ಳುತ್ತಾನೆ. ಅದರಂತೆ ಪ್ರತಿಕಲ್ಪದಲ್ಲೂ ವಿಶಿಷ್ಟ ಚೇತನನಾದ ಹಿರಣ್ಯಗರ್ಭನು ಹಿಂದಿನ ಕಲ್ಪದ ನಾಮರೂಪಾತ್ಮಕವಾದ ಪ್ರಪಂಚವನ್ನು ಸ್ಮರಿಸಿ ಅದೇ ರೀತಿ ಸೃಷ್ಟಿಮಾಡುತ್ತಾನೆ. ಹೀಗೆ ಸೃಷ್ಟಿಪ್ರಲಯಗಳು ಆವೃತ್ತಿಯಾಗುತ್ತಿದ್ದರೂ ದೇವತೆಗಳ ನಾಮ-ರೂಪಗಳು ಸಮಾನವಾಗಿರುವುದರಿಂದ ಅವರನ್ನು ಪ್ರತಿಪಾದಿಸುವ ವೈದಿಕ ಮಂತ್ರಗಳಿಗೆ ಅಪ್ರಾಮಾಣ್ಯರೂಪವಾದ ವಿರೋಧವಿಲ್ಲ. 'ಸೂರ್ಯಾಚಂದ್ರಮಸಾ'

ಎಂಬ ಶ್ರುತಿಯೂ

ಋಷೀಣಾಂ ನಾಮಧೇಯಾನಿ ಯಾಶ್ಚ ವೇದೇಷು ದೃಷ್ಟಯಃ।

ಶರ್ವರ್ಯಂತೇ ಪ್ರಸೂತಾನಾಂ ತಾನ್ಯೇವೇಭ್ಯೋ ದದಾತ್ಯಜಃ॥

ಎಂಬ ಸ್ಮೃತಿಯೂ ಈ ವಿಷಯದಲ್ಲಿ ಆಧಾರವಾಗಿದೆ.

6. **ಮಧ್ವಾದಿಷು ಅಸಂಭವಾತ್ ಅನಧಿಕಾರಂ ಜೈಮಿನಿಃ** - ದೇವತೆಗಳಿಗೆ ಬ್ರಹ್ಮವಿದ್ಯೆಯಲ್ಲಿ ಅಧಿಕಾರವಿದ್ದರೆ ಮಧುವಿದ್ಯೆಯಲ್ಲೂ ಅಧಿಕಾರವಿರಬೇಕು. ಆದರೆ, ಆದಿತ್ಯನು ದೇವತೆಗಳಿಗೆ ಆನಂದ ನೀಡುವುದರಿಂದ ಅವನನ್ನು 'ದೇವ ಮಧು' ಎಂದು ಉಪಾಸನೆ ಮಾಡಬೇಕು ಎಂದು ಮಧುವಿದ್ಯೆಯಲ್ಲಿ ಹೇಳಿದೆ. ಸ್ವತಃ ಆದಿತ್ಯನೂ ಒಬ್ಬ ದೇವತೆ. ಅವನು ಯಾರನ್ನು ಮಧು ಎಂದು ಉಪಾಸನೆ ಮಾಡುವುದು? ಆದ್ದರಿಂದ ದೇವತೆಗಳಿಗೆ ಮಧುವಿದ್ಯೆಯಲ್ಲಿ ಅಧಿಕಾರವಿಲ್ಲವಾದುದರಿಂದ ಯಾವ ವೈದಿಕ ಉಪಾಸನೆಗಳಲ್ಲೂ ಅಧಿಕಾರವಿಲ್ಲ, ಇದು ಜೈಮಿನಿ ಆಚಾರ್ಯರ ಅಭಿಪ್ರಾಯ.

7. **ಜ್ಯೋತಿಷಿ ಭಾವಾಚ್ಚ**- ಆದಿತ್ಯ ಅಗ್ನಿ ಮೊದಲಾದ ಶಬ್ದಗಳಿಗೆ ಜಡವಾದ ವಸ್ತುಗಳಲ್ಲೇ ಪ್ರಯೋಗವಿರುವುದರಿಂದ ಜಡವಾದ ಅಗ್ನಿಯನ್ನು ಹೊರತಾಗಿ ಬೇರೆ ದೇವತೆಗಳೇ ಇಲ್ಲ. ಅಂದಮೇಲೆ ಅವರಿಗೆ ಬ್ರಹ್ಮವಿದ್ಯೆಯಲ್ಲಿ ಅಧಿಕಾರದ ಪ್ರಶ್ನೆಯೇ ಇಲ್ಲ.

ಇವೆರಡು ಪೂರ್ವಪಕ್ಷ ಸೂತ್ರಗಳು.

8. **ಭಾವಂ ತು ಬಾದರಾಯಣೋಽಸ್ತಿ ಹಿ** - ಬಾದರಾಯಣಾಚಾರ್ಯರು ದೇವತೆಗಳಿಗೂ ಅಧಿಕಾರ ಇದೆ ಎನ್ನುತ್ತಾರೆ. ಬ್ರಾಹ್ಮಣರಿಗೆ ರಾಜಸೂಯಯಾಗದಲ್ಲಿ ಅಧಿಕಾರವಿಲ್ಲದಿದ್ದರೂ ಇತರ ಕರ್ಮಗಲ್ಲಿ ಅಧಿಕಾರವಿದೆ. ಅದರಂತೆ ದೇವತೆಗಳಿಗೂ ಮಧ್ವಾದಿ ವಿದ್ಯೆಗಳಲ್ಲಿ ಅಧಿಕಾರವಿಲ್ಲದಿದ್ದರೂ ಬ್ರಹ್ಮವಿದ್ಯೆಯಲ್ಲಿ ಅಧಿಕಾರವಿರಲು ಬಾಧಕವಿಲ್ಲ. ಜಡವಾದ ಗೋಲವೇ ಸೂರ್ಯನಲ್ಲ, ಅದರೊಳಗೆ ದೇವತೆಯೊಬ್ಬನಿದ್ದಾನೆ. 'ಆದಿತ್ಯಃ ಪುರುಷೋ ಭೂತ್ವಾ ಕುಂತೀಂ ಉಪಜಗಾಮ। ಎಂದು ಅರ್ಥವಾದದಲ್ಲಿ ಆದಿತ್ಯ ಎಂಬ ಚೇತನನ ಪ್ರಸ್ತಾವ ಇದೆ. ಆದ್ದರಿಂದ ಚೇತನರಾದ ದೇವತೆಗಳಿಗೆ ಬ್ರಹ್ಮವಿದ್ಯೆಯಲ್ಲಿ ಅಧಿಕಾರವಿದ್ದೇ ಇದೆ.

## ಚಂದ್ರಿಕಾದಲ್ಲಿ ಮಾಡಿರುವ ವಿಮರ್ಶೆ

1. ದೇವತೆಗಳಿಗೆ ಕರ್ಮಾಧಿಕಾರವಿಲ್ಲ ಎಂಬ ಸಿದ್ಧಾಂತ ಸರಿಯಲ್ಲ. 'ಯಜ್ಞೇನ ಯಜ್ಞಮಯಜಂತ ದೇವಾಃ' ಎಂಬ ಶ್ರುತಿಯಲ್ಲಿ ದೇವತೆಗಳೂ ಯಜ್ಞಮಾಡಿರುವ ಉಲ್ಲೇಖವಿದೆ. ಶೂದ್ರಾದಿಗಳಿಗೆ ಅಧಿಕಾರದ ನಿಷೇಧವಿದ್ದಂತೆ ದೇವತೆಗಳಿಗೆ ನಿಷೇಧವೂ ಇಲ್ಲ. ದೇವತೆಗಳು ಮಾಡುವ ಯಜ್ಞದಲ್ಲಿ ವಿಷ್ಣುವೇ ದೇವತೆ.

ಮಾಮೇವ ಯಜತಾಂ ಶಕ್ತಃ ಪ್ರಾಪಯಿಷ್ಯಾಮಿ ವಜ್ರಿತಾಮ್ ।

ಎಂದು ಮಹಾಭಾರತದಲ್ಲಿ ಹೀಗೆಯೇ ಹೇಳಲಾಗಿದೆ.

'ಬ್ರಾಹ್ಮಣಾದಿಗಳಿಗೆ ಅಗ್ನ್ಯಾಧಾನಕಾಲ ವಿಹಿತವಾಗಿರುವಂತೆ ದೇವತೆಗಳಿಗೂ 'ದೇವಾ ವೈ ಭದ್ರಾಃ ಸಂತೋ ಅಗ್ನೀನಾಧಿತ್ಸಂತೇ' ಎಂದು ಆರಂಭಿಸಿ 'ತೇ ಪುನರ್ವಸ್ವೋರಾಧತ್ತೇ' ಎಂದು ಕಾಲವು ವಿಹಿತವಾಗಿದೆ. ಆದ್ದರಿಂದ ಅವರಿಗೂ ಕರ್ಮಾಧಿಕಾರವಿದೆ.

2. ಎರಡನೆಯ ಸೂತ್ರದಲ್ಲಿ ಮಾಡಿರುವ ದೇವತೆಗಳಿಗೆ ಶರೀರವಿದ್ದರೆ ಅನೇಕ ಯಜ್ಞಗಳಲ್ಲಿ ಉಪಸ್ಥಿತಿ ಸಾಧ್ಯವಾಗದು ಎಂಬ ಪೂರ್ವಪಕ್ಷ ಸರಿಯಲ್ಲ. ಅವರಿಗೆ ಶರೀರವಿದ್ದರೂ ಅವರು ಯಜ್ಞಸ್ಥಾನಕ್ಕೆ ಹೋಗಬೇಕಾಗಿಲ್ಲ. ಇದ್ದಲ್ಲೇ ಇದ್ದು ತಮ್ಮ ಭಾಗವನ್ನು ಸ್ವೀಕರಿಸಬಹುದು. 'ಇಂದ್ರ ಆಗಚ್ಛ' ಎಂದು ಮಂತ್ರಾಹ್ವಾನವಿರುವುದರಿಂದ ಅವರು ಯಜ್ಞಸ್ಥಾನಕ್ಕೇ ಹೋಗಬೇಕಾಗುತ್ತದೆ ಎನ್ನುವುದಾದರೆ ಆಗ ಅದರಿಂದಲೇ ಅವರಿಗೆ ಶರೀರವೂ ಸಿದ್ಧವಾಗುತ್ತದೆ. ಅಂದಮೇಲೆ ಪೂರ್ವಪಕ್ಷಕ್ಕೆ ಅವಕಾಶವೇ ಇಲ್ಲ.

**ಇಲ್ಲಿಗೆ ದೇವತಾಧಿಕರಣ ಮುಗಿಯಿತು.**

# ಅಪಶೂದ್ರಾಧಿಕರಣ - 9

**ಮನುಷ್ಯಾಧಿಕಾರತ್ವಾತ್ ಇತ್ಯುಕ್ತೇ ಅವಿಶೇಷಾತ್ ಶೂದ್ರಸ್ಯಾಪಿ 'ಅಹ ಹಾರೇತ್ವಾ ಶೂದ್ರ' (ಛಾಂ.4.2.31) ಇತಿ ಪೌತ್ರಾಯಣೋಕ್ತೇಃ ಅಧಿಕಾರಃ ಇತ್ಯತ ಆಹ-**

**ಓಂ ॥ ಶುಗಸ್ಯ ತದನಾದರ ಶ್ರವಣಾತ್ ತದಾದ್ರವಣಾತ್ ಸೂಚ್ಯತೇ ಹಿ ॥ ಓಂ**

**ನಾಸೌ ಪೌತ್ರಾಯಣಃ ಶೂದ್ರಃ, ಶುಚಾ ಆದ್ರವಣಮೇವ ಶೂದ್ರತ್ವಂ (ಶೂದ್ರಶಬ್ದೇನೋಕ್ತಮ್) । 'ಕಂವರ ಏನಮೇತತ್ ಸಂತಂ' (ಛಾಂ.4.1.3) ಇತಿ ಅನಾದರಶ್ರವಣಾತ್ । 'ಸ ಹಿ ಸಂಜಹಾನ ಏವ ಕ್ಷತ್ತಾರಮುವಾಚ' (ಛಾಂ.4.1.5) ಇತಿ ಸೂಚ್ಯತೇ ಹಿ ॥ 34 ॥**

ಹಿಂದಿನ ಸೂತ್ರದಲ್ಲಿ ವೇದವಿದ್ಯೆಗೆ ಮನುಷ್ಯರು ಅಧಿಕಾರಿಗಳು ಎಂದು ಹೇಳಿರುವುದರಿಂದ ಶೂದ್ರನೂ ಮನುಷ್ಯನಾದುದರಿಂದ ಹಾಗೂ 'ಅಹ ಹಾರೇತ್ವಾ ಶೂದ್ರ' ಎಂದು ರೈಕ್ವರು ಪೌತ್ರಾಯಣನನ್ನು 'ಶೂದ್ರ' ಎಂದು ಸಂಬೋಧಿಸಿರುವುದರಿಂದ ಶೂದ್ರನಿಗೂ ವೇದವಿದ್ಯೆಯಲ್ಲಿ ಅಧಿಕಾರವಿದೆ, ಎಂದು ಆಕ್ಷೇಪ ಬಂದಾಗ ಸೂತ್ರಕಾರರು ಈ ಸೂತ್ರವನ್ನು ಹೇಳಿದ್ದಾರೆ. ಈ ಪೌತ್ರಾಯಣನು ಜಾತ್ಯಾ ಶೂದ್ರನಲ್ಲ.

ಶೋಕಪೂರ್ಣನಾಗಿರುವುದೇ ಶೂದ್ರ ಶಬ್ದದ ಅರ್ಥ. ಶೋಕವಾದರೂ 'ಕಂವರ' ಎಂದು ರಾಜನು ಹಂಸಗಳಿಂದ ತನ್ನ ಅನಾದರವನ್ನು ಕೇಳಿದ್ದರಿಂದ ಆಗಿದೆ. 'ಸಂಜಹಾಸ ಏವ' ಎಂಬ ವಾಕ್ಯದಿಂದ ರಾಜನಿಗೆ ಶೋಕವಾಗಿದೆ ಎಂದೂ ಸೂಚಿತವಾಗುತ್ತದೆ.

**ವಿವರಣೆ : 1.** ವೇದವಿದ್ಯೆಗೆ ಮನುಷ್ಯರು ಅಧಿಕಾರಿಗಳು, ಅವರು ಅರ್ಥಿಗಳು, ಸಮರ್ಥರು ಎನ್ನಲಾಯಿತು. ಹಾಗಿದ್ದಮೇಲೆ ಶೂದ್ರರೂ ಅಧಿಕಾರಿಗಳಾಗಬೇಕು. ಅಲ್ಲದೆ, ಶೂದ್ರನಾದ ಪೌತ್ರಾಯಣನಿಗೆ ರೈಕ್ವಮುನಿಗಳು ಸಂವರ್ಗವಿದ್ಯೆಯನ್ನು ಉಪದೇಶ ಮಾಡಿದ ಘಟನೆ ಛಾಂದೋಗ್ಯೋಪನಿಷತ್ತಿನಲ್ಲಿ ಉಲ್ಲೇಖಿಸಲ್ಪಟ್ಟಿದೆ. ರೈಕ್ವಮುನಿ ಅಪರೋಕ್ಷ ಜ್ಞಾನಿ. ಅಂತಹವನು ಸ್ವಾರ್ಥಕ್ಕಾಗಿ ಅವಿಹಿತವಾದುದನ್ನು ಮಾಡಲಾರ. ಆದ್ದರಿಂದ ಶೂದ್ರರಿಗೂ ವೈದಿಕ ವಿದ್ಯೆಯ ಶ್ರವಣ-ಮನನಾದಿಗಳಲ್ಲಿ ಅಧಿಕಾರವಿದೆ ಎಂದು ಪೂರ್ವಪಕ್ಷ.

**2. ಸಿದ್ಧಾಂತ –** ತ್ರೈವರ್ಣಿಕೇತರರಿಗೆ ವೇದವಿದ್ಯೆಯಲ್ಲಿ ಅಧಿಕಾರವಿಲ್ಲ. ಪೌತ್ರಾಯಣ ಕ್ಷತ್ರಿಯ, ಶೂದ್ರನಲ್ಲ. ರೈಕ್ವ ಜಾತಿನಿಮಿತ್ತದಿಂದ ರಾಜನನ್ನು ಶೂದ್ರ ಎಂದು ಕರೆದಿಲ್ಲ. 'ಶುಚಾ+ಆದ್ರವಣಂ-ಶೋಕದಲ್ಲಿ ಕರಗಿರುವುದು' ಎಂಬ ಅರ್ಥದಲ್ಲಿ ಅವನು ಶೂದ್ರನಾದುದರಿಂದ ಅವನನ್ನು ಶೂದ್ರನೆಂದಿದ್ದಾರೆ.

ಪೌತ್ರಾಯಣ ರಾತ್ರಿ ಮಲಗಿರುವಾಗ ಅವನ ಅಲೌಕಿಕ ತೇಜಸ್ಸಿನಿಂದ ತಡೆಯಲ್ಪಟ್ಟ ಹಾರುತ್ತಿರುವ ಎರಡು ಹಂಸಗಳ ಸಂಭಾಷಣೆಯನ್ನು ಕೇಳಿದ. ಒಂದು ಹಂಸ ರಾಜನ ತೇಜಸ್ಸನ್ನು ದಾಟದಿರುವಂತೆ ಮತ್ತೊಂದು ಹಂಸಕ್ಕೆ ಎಚ್ಚರ ನೀಡುತ್ತದೆ. ಆ ಹಂಸ-ರೈಕ್ವನ ಮುಂದೆ ಇವನೇನು ಮಹಾ! ಎಂದು ರಾಜನನ್ನು ಮೂದಲಿಸುತ್ತದೆ. ಇದನ್ನು ಕೇಳಿಸಿಕೊಂಡ ರಾಜನಿಗೆ ದುಃಖವಾಗುತ್ತದೆ. ಬೆಳಿಗ್ಗೆ ಎದ್ದಕೂಡಲೇ ತನ್ನ ರಾಜ್ಯದಲ್ಲಿ (ಕಾಶ್ಮೀರ) ರೈಕ್ವಮುನಿಯನ್ನು ಹುಡುಕಿಕೊಂಡು ಬರುವಂತೆ ಸಾರಥಿಗೆ ಆಜ್ಞಾಪಿಸುತ್ತಾನೆ. ಸಾರಥಿ ಹುಡುಕಿ ಬಂದಮೇಲೆ ಅವನೊಂದಿಗೆ ತಾನೂ ರೈಕ್ವದರ್ಶನಕ್ಕೆ ತೆರಳುತ್ತಾನೆ. ಅಲೌಕಿಕ ದೃಷ್ಟಿಯಿಂದ ರಾಜನ ಶೋಕವನ್ನು ತಿಳಿದ ರೈಕ್ವ ತನಗೆಲ್ಲ ತಿಳಿದಿದೆ ಎಂದು ಸೂಚಿಸಲು ಪೌತ್ರಾಯಣನನ್ನು 'ಶೂದ್ರ' ಎಂದು ಕರೆದಿದ್ದಾನೆ. ಇದರಿಂದ ತ್ರೈವರ್ಣಿಕೇತರರಿಗೆ ವೇದವಿದ್ಯಾಧಿಕಾರವಿದೆ ಎಂದೇನೂ ಸಿದ್ಧವಾಗುವುದಿಲ್ಲ.

**3.** ಭಾಷ್ಯದಲ್ಲಿ 'ಇತ್ಯುಕ್ತೇ' ಎಂದರೆ 'ಇತ್ಯುಕ್ತೇಃ' ಎಂದು ಅರ್ಥ. 'ಶೂದ್ರ' ಎಂಬ ಶಬ್ದ ಶುಗ್ ಉಪಪದವಾದ ದ್ರುಗತೌ ಧಾತುವಿನಿಂದಾಗಿದೆ. 'ರುಜಂ ದ್ರಾವಯತೇ ಇತಿ ರುದ್ರಃ' ರೋಗವನ್ನು ಪರಿಹರಿಸುವವನು ಎಂದರ್ಥ. ಅದರಂತೆ 'ಶುಚಾ ಆದ್ರವಣಾತ್= ಶೂದ್ರಃ' ಶೋಕದಲ್ಲಿ ಕರಗಿದವನು, ಅಥವಾ ಶೋಕದಿಂದ ರೈಕ್ವನಲ್ಲಿಗೆ ಓಡಿಬಂದವನು ಎಂದರ್ಥ. 'ರುಗ್‌ದ್ರ' 'ಶುಗ್‌ದ್ರ' ಎಂದಾಗಬೇಕಿತ್ತಾದರೂ 'ರುದ್ರ'ದಂತೆ 'ಶೂದ್ರ' ಆಗಿದೆ.

'ಶುಚೇಃ ದಶ್ಚ' ಎಂಬ ಸೂತ್ರದಿಂದ ರಕ್ ಪ್ರತ್ಯಯ ಬಂದು 'ಶುಚ್' ಧಾತುವಿನ

ಚಕಾರಕ್ಕೆ ದಕಾರ ಬಂದು 'ಶೂದ್ರ' ಎಂದಾಗಿದೆ. ಶೋಕದ ಆಳವನ್ನು ಸೂಚಿಸಲು 'ಶೂ' ಎಂದು ದೀರ್ಘ ಬಂದಿದೆ.

**4. ಶ್ರುತ್ಯರ್ಥ– ಅ.** 'ಅಹ ಹಾರೇತ್ವಾ ಶೂದ್ರ ತವೈವ ಸಹ ಗೋಭಿರಸ್ತು'

ಅಹ=ಎಲೈ ಶೂದ್ರ=ಶೋಕಾರ್ದ್ರನೇ, ಹಾರ=ಮುತ್ತಿನ ಮಾಲೆ ಇತ್ವಾ=ಗಾಡಿ, ಗೋಭಿಃ ಸಹ=ಎತ್ತುಗಳೊಂದಿಗೆ ತವೈವ=ನಿನಗೇ ಅಸ್ತು=ಇರಲಿ. ಪೌತ್ರಾಯಣ ತಂದ ಕಾಣಿಕೆಗಳನ್ನು ರೈಕ್ವ ತಿರಸ್ಕರಿಸಿದ ಮಾತು ಇದು. 'ಹಾರೇತ್ವಾನೌ' ಎಂಬಲ್ಲಿ ದ್ವಿವಚನ 'ದ್ವಾಸುಪರ್ಣಾ' ಎಂಬಂತೆ ಲೋಪವಾಗಿದೆ.

**ಆ.** 'ಕಂವರ ಏನಮೇತತ್ ಸಂತಂ ಸಯುಗ್ವಾನಮಿವ ರೈಕ್ವಂ ॥

ವರ=ಸ್ನೇಹಿತನಾದ ಹಂಸವೇ, ಸಂತಂ ಸಯುಗ್ವಾನಂ=ಸಜ್ಜನನಾದ, ಗಾಡಿಯ ಕೆಳಗಿರುವ ರೈಕ್ವಮಿವ=ರೈಕ್ವನನ್ನೆಂಬಂತೆ ಕಂ ಏನಂ=ಯಾವ ಈ ರಾಜನನ್ನು ಕುರಿತು ಮಹಾ ಹೇಳುತ್ತಿದ್ದೆಯೆ! ಇದು ಒಂದು ಹಂಸ ಮತ್ತೊಂದು ಹಂಸಕ್ಕೆ ರಾಜನನ್ನು ಮೂದಲಿಸಿ ಹೇಳುವ ಮಾತು.

ತತ್ತ್ವಪ್ರದೀಪದಲ್ಲಿ - 'ಏತತ್ ಸಂತಂ' ಎಂಬಲ್ಲಿ ಏತತ್ ಎಂದರೆ 'ನಿಂದಿತನಾದ' ಎಂದರ್ಥವನ್ನು ಮಾಡಲಾಗಿದೆ. ತಂತ್ರನಿರುಕ್ತದಲ್ಲಿ ಹೀಗಿದೆ-

ಕ್ವಚಿದ್ವಿಶ್ವಂ ಕ್ವಚಿದ್ ಬ್ರಹ್ಮ ಕ್ವಚಿನ್ನಿಂದ್ಯಮುದೀರ್ಯತೇ ॥

ಇ. 'ಸ ಹ ಸಂಜಹಾನ ಏವ ಕ್ಷತ್ತಾರಮುವಾಚ'

ಸಃ=ಪೌತ್ರಾಯಣನು ಸಂಜಹಾನ ಏವ=ಹಾಸಿಗೆಯಿಂದ ಎದ್ದ ಕೂಡಲೇ ಕ್ಷತ್ತಾರಂ=ಸಾರಥಿಯನ್ನು ಕುರಿತು ಉವಾಚ=ಹೇಳಿದನು. ॥ ಸೂತ್ರ 34 ॥

**3. ಓಂ ॥ ಕ್ಷತ್ರಿಯತ್ವಾವಗತೇಶ್ಚೋತ್ತರತ್ರ ಚೈತ್ರರಥೇನ ಲಿಂಗಾತ್ ॥ ಓಂ**

**'ಅಯಮಶ್ವತರೀರಥಃ' ಇತಿ ಚಿತ್ರರಥಸಂಬಂಧಿತ್ವೇನ ಲಿಂಗೇನ ಪೌತ್ರಾಯಣಸ್ಯ ಕ್ಷತ್ರಿಯತ್ವಾವಗತೇಶ್ಚ।**

**ರಥಸ್ತು ಅಶ್ವತರೀಯುಕ್ತಶ್ಚಿತ್ರ ಇತ್ಯಭಿಧೀಯತೇ।**

**ಇತಿ ಬ್ರಹ್ಮಾಂಡೇ (ಬ್ರಾಹ್ಮೇ)**

**ಯತ್ರ ವೇದೋ ರಥಸ್ತತ್ರ ನ ವೇದೋ ಯತ್ರ ನೋ ರಥಃ।**

**ಇತಿ (ಚ) ಬ್ರಹ್ಮವೈವರ್ತೇ ॥ 35 ॥**

'ಅಯಂ ಅಶ್ವತರೀರಥಃ' ಎಂಬ ಪೌತ್ರಾಯಣನ ವಾಕ್ಯದಲ್ಲಿ ಅವನಿಗೆ ಚಿತ್ರರಥದ ಸಂಬಂಧವನ್ನು ಹೇಳುತ್ತಿರುವ ಕಾರಣದಿಂದಲೂ ಪೌತ್ರಾಯಣನು ಕ್ಷತ್ರಿಯನೆಂದೇ ತಿಳಿಯುತ್ತದೆ. ಬ್ರಹ್ಮಾಂಡಪುರಾಣದಲ್ಲಿ ಚಿತ್ರರಥದ ಸ್ವರೂಪ ಹೀಗಿದೆ- ಕತ್ತೆಯಿಂದ

ಕುದುರೆಯಲ್ಲಿ ಜನಿಸಿದ 'ಅಶ್ವತರೀ' (ಹೇಸರಗತ್ತೆ) ಎಂಬ ಪ್ರಾಣಿಗೆ ಹೂಡಿದ ರಥಕ್ಕೆ 'ಚಿತ್ರರಥ' ಎಂದು ಹೆಸರು. 'ವೇದಾಧಿಕಾರವಿದ್ದವರಿಗೆ ರಥ, ವೇದಾಧಿಕಾರವಿಲ್ಲದವರು ರಥವೇರಬಾರದು' ಎಂದೂ ಬ್ರಹ್ಮವೈವರ್ತದಲ್ಲಿದೆ.

**ವಿವರಣೆ :** ಪೌತ್ರಾಯಣನು ಮೊದಲು ತಂದ ಗುರುದಕ್ಷಿಣೆಯನ್ನು ರೈಕ್ವರು ತಿರಸ್ಕರಿಸಿದಾಗ ಮತ್ತಷ್ಟು ದಕ್ಷಿಣೆಯನ್ನೂ ರಥವನ್ನೂ ತಂದು 'ಅಯಂ ಅಶ್ವತರೀರಥಃ' ಎಂದು ರಾಜ ಅರ್ಪಿಸಿದ. ಇದರಿಂದ ಅವನು ರಥಿಕನೆಂದು ತಿಳಿಯುತ್ತದೆ. ವೇದಾಧಿಕಾರಿಗಳು ಮಾತ್ರ ರಥವೇರಬೇಕು. ಹೀಗೆ ಪೌತ್ರಾಯಣ ರಥದೊಡೆಯನಾದುದರಿಂದ ಕ್ಷತ್ರಿಯನೆಂಬುದು ನಿಶ್ಚಿತ. ಅಂದಮೇಲೆ 'ಶೂದ್ರ' ಶಬ್ದಕ್ಕೆ ಮುಖ್ಯವಾದ ರೂಢಾರ್ಥವನ್ನು ಬಿಟ್ಟು ಹಿಂದೆ ಹೇಳಿದ ಯೌಗಿಕ ಅರ್ಥವನ್ನು ಮಾಡಬೇಕು. ॥ ಸೂತ್ರ 35 ॥

## ಓಂ ॥ ಸಂಸ್ಕಾರ ಪರಾಮರ್ಶಾತ್ ತದಭಾವಾಭಿಲಾಪಾಚ್ಚ ॥ ಓಂ

**'ಅಷ್ಟವರ್ಷಂ ಬ್ರಾಹ್ಮಣಂ ಉಪನಯೀತ, ತಮಧ್ಯಾಪಯೀತ'**

**ಇತಿ ಅಧ್ಯಯನಾರ್ಥಂ ಸಂಸ್ಕಾರ ಪರಾಮರ್ಶಾತ್ ।**

**'ನಾಗ್ನಿಃ ನ ಯಜ್ಞೋ, ನ ಸಂಸ್ಕಾರಃ, ನ ವ್ರತಾಪಿ ಶೂದ್ರಸ್ಯ' ಇತಿ ಪೈಂಗಿಶ್ರುತೌ ಸಂಸ್ಕಾರಾಭಾವಾಭಿಲಾಪಾಚ್ಚ । ಉತ್ತಮಸ್ತ್ರೀಣಾಂ ತು ನ ಶೂದ್ರವತ್ । 'ಸಪತ್ನಿಂ ಮೇ ಪರಾಧಮ' (ಮಂತ್ರ ಪ್ರ. 1.16) ಇತ್ಯಾದಿಷು ಅಧಿಕಾರದರ್ಶನಾತ್ । ಸಂಸ್ಕಾರಾಭಾವೇನ ಅಭಾವಸ್ತು ಸಾಮಾನ್ಯೇನ । ಅಸ್ತಿ ಚ ತಾಸಾಂ ಸಂಸ್ಕಾರಃ ।**

**ಸ್ತ್ರೀಣಾಂ ಪ್ರದಾನ ಕರ್ಮೈವ ಯಥೋಪನಯನಂ ತಥಾ ॥**

**ಇತಿ ಸ್ಮೃತೇಃ (ವ್ಯಾಸಸ್ಮೃತಿಃ) ॥ 36 ॥**

'ಅಷ್ಟವರ್ಷಂ ಬ್ರಾಹ್ಮಣಂ ಉಪನೀಯತ' ಎಂದು ಅಧ್ಯಯನಕ್ಕಾಗಿ ಉಪನಯನ ಸಂಸ್ಕಾರವನ್ನು ಹೇಳಿರುವುದರಿಂದಲೂ ಶೂದ್ರನಿಗೆ ವೈದಿಕ ವಿದ್ಯೆಯಲ್ಲಿ ಅಧಿಕಾರವಿಲ್ಲ. ಅವನಿಗೆ 'ನಾಗ್ನಿಃ ನ ಯಜ್ಞಃ' ಇತ್ಯಾದಿ ಪೈಂಗಿ ಶ್ರುತಿಯಲ್ಲಿ ಸಂಸ್ಕಾರಗಳಿಲ್ಲ ಎಂದೂ ಹೇಳಲಾಗಿದೆ. ಶಚ್ಯಾದಿ ಉತ್ತಮ ಸ್ತ್ರೀಯರಿಗಾದರೂ ಶೂದ್ರಾದಿಗಳಿಗಂತಲ್ಲ. 'ಸಪತ್ನಿಂ ಮೇ ಪರಾಧಮ' ಇತ್ಯಾದಿಯಾಗಿ ವೇದ ಮಂತ್ರಗಳಲ್ಲಿ ಅವರಿಗೂ ಅಧಿಕಾರ ಕಂಡಿದೆ. ಸಂಸ್ಕಾರವಿಲ್ಲದವರಿಗೆ ವೇದಾಧಿಕಾರವಿಲ್ಲ ಎಂಬ ನಿಯಮ ಸಾಮಾನ್ಯವಾದುದು. ಬಾಧಕಗಳು ಇದ್ದಾಗ ಆ ನಿಯಮವನ್ನು ಸಡಿಲಿಸಬಹುದು. ಅಥವಾ, ಅವರಿಗೂ ಸಂಸ್ಕಾರವಿದೆ. 'ಸ್ತ್ರೀಯರಿಗೆ ವಿವಾಹಕರ್ಮವೇ ಉಪನಯನದಂತೆ' ಎಂದು ಸ್ಮೃತಿಯಿದೆ.

**ವಿವರಣೆ :** 1. 'ಎಂಟುವರ್ಷದ ಬ್ರಾಹ್ಮಣವಟುವಿಗೆ ಉಪನಯನ ಮಾಡಿ

ವೇದಾಧ್ಯಯನ ಮಾಡಿಸಬೇಕು' ಎಂದು ವೇದವಚನವಿದೆ. ಇದರಿಂದ ವೇದಾಧ್ಯಯನ ಮಾಡಬೇಕಾದರೆ ಉಪನಯನವಾಗಿರಬೇಕು ಎಂದು ತಿಳಿಯುತ್ತದೆ. ಏಕೆಂದರೆ, ಆ ವಾಕ್ಯದಲ್ಲಿ ವೇದಾಧ್ಯಯನಕ್ಕಾಗಿ ಉಪನಯನ ಸಂಸ್ಕಾರವನ್ನು ಪರಾಮರ್ಶ ಮಾಡಲಾಗಿದೆ. 'ಅನ್ಯಾರ್ಥಂ ವಚನಂ ಪರಾಮರ್ಶಃ' ಒಂದು ಉದ್ದೇಶಕ್ಕಾಗಿ ಮತ್ತೊಂದನ್ನು ಹೇಳುವುದೇ ಪರಾಮರ್ಶ. ವೇದಾಧ್ಯಯನಕ್ಕಾಗಿ ಉಪನಯನವನ್ನು ಹೇಳಿರುವುದರಿಂದ ಉಪನಯನದ ಪರಾಮರ್ಶವನ್ನು ಮಾಡಲಾಗಿದೆ. ಶೂದ್ರರಿಗೆ 'ನ ಸಂಸ್ಕಾರಃ' ಎಂದು ಸಂಸ್ಕಾರಗಳನ್ನು ನಿಷೇಧಮಾಡಿರುವುದರಿಂದ ಅವರಿಗೆ ವೇದಾಧ್ಯಯನದಲ್ಲಿ ಅಧಿಕಾರವಿಲ್ಲ.

**2.** ಸಂಸ್ಕಾರವಿಲ್ಲದವರಿಗೆ ವೇದಾಧಿಕಾರವಿಲ್ಲ ಎಂಬ ನಿಯಮ ಸಾಮಾನ್ಯವಾದುದು. ಸಂಸ್ಕಾರವಿಲ್ಲದವರಿಗೂ ವೇದದಲ್ಲಿ ಅಧಿಕಾರವು ಎಲ್ಲಾದರೂ ಕಂಡರೆ ಆಗ ಆ ನಿಯಮವನ್ನು ಬಿಡಬೇಕಾಗುತ್ತದೆ. ಊರ್ವಶೀ, ಯಮಪತ್ನಿ ಶ್ಯಾಮಲೆ, ಶಚೀದೇವಿಯರು ಕೆಲವು ವೈದಿಕಮಂತ್ರಗಳನ್ನು ಋಷಿಗಳಂತೆ ಕಂಡಿದ್ದಾರೆ. ಅಂತಹವರಿಗೆ ಉಪನಯನವಿಲ್ಲದಿದ್ದರೂ ವೇದಾಧಿಕಾರವಿದೆ ಎನ್ನಬೇಕಾಗುತ್ತದೆ.

ಅಥವಾ ಸ್ತ್ರೀಯರಿಗೂ ವಿವಾಹವೇ ಉಪನಯನ. ಹೀಗೆ ವಿವಾಹಿತ ಸ್ತ್ರೀಯರು ಸಂಸ್ಕೃತರಾದುದರಿಂದ ಅಂತಹ ಶಚ್ಯಾದಿಗಳಿಗೆ ವೇದಾಧಿಕಾರವಿದೆ. ಆದರೂ ಜರಿತಾರ್ಯಾದಿ ಪಕ್ಷಿಗಳಿಗೆ ವಿವಾಹವೂ ಇಲ್ಲವಾದುದರಿಂದ 'ಸಂಸ್ಕಾರವಿದ್ದರೆ ಮಾತ್ರ ವೇದಾಧಿಕಾರ' ಎಂಬ ನಿಯಮಕ್ಕೆ ಸಂಕೋಚ ಮಾಡಲೇಬೇಕು.

ಇದಲ್ಲದೆ, ಬೃಹದಾರಣ್ಯಕದಲ್ಲಿ ಯಾಜ್ಞವಲ್ಕ್ಯರು ಗಾರ್ಗಿಗೆ ಅಕ್ಷರವಿದ್ಯೆಯನ್ನು ಉಪದೇಶಿಸಿದ್ದಾರೆ. 'ಆತ್ಮಾ ವಾ ಅರೇ ದ್ರಷ್ಟವ್ಯಃ' ಎಂದು ಮೈತ್ರೇಯಿಯನ್ನು ಸಂಬೋಧಿಸಿ ಅವಳಿಗೂ ಅಧ್ಯಾತ್ಮ ವಿದ್ಯೆಯನ್ನು ನೀಡಿದ್ದಾರೆ. ಆದ್ದರಿಂದ ಯಾವ ಸ್ತ್ರೀಯರಿಗೂ ಅಧಿ ಕಾರವಿಲ್ಲ ಎಂಬ ಅದ್ವೈತವಾದ ಸರಿಯಲ್ಲ. ॥ ಸೂತ್ರ 36 ॥

## ಓಂ ॥ ತದಭಾವನಿರ್ಧಾರಣೇ ಚ ಪ್ರವೃತ್ತೇಃ ॥ ಓಂ

**'ನಾಹಂ ಏತದ್ ವೇದ ಭೋಃ ಯದ್ಗೋತ್ರೋಽಹಮಸ್ಮೀತಿ' (ಛಾ.4.4)**

**ಇತಿ ಸತ್ಯವಚನೇನ ಸತ್ಯಕಾಮಸ್ಯ ಶೂದ್ರತ್ವಾಭಾವನಿರ್ಧಾರಣೇ ಹಾರಿದ್ರುಮತಸ್ಯ ''ನೈತದಬ್ರಾಹ್ಮಣೋ ವಿವಕ್ತುಮರ್ಹತಿ' (ಛಾಂ.4.5) ಇತಿ ತತ್ ಸಂಸ್ಕಾರೇ ಪ್ರವೃತ್ತೇಶ್ಚ॥ 37 ॥**

'ನನ್ನ ಗೋತ್ರ ಯಾವುದೆಂದು ನನಗೆ ತಿಳಿಯದು' ಸತ್ಯಕಾಮನಾಡಿದ ಈ ಸತ್ಯಮಾತಿನಿಂದ ಅವನು ಶೂದ್ರನಲ್ಲ 'ಅಬ್ರಾಹ್ಮಣನು ಹೀಗೆ ಹೇಳಲಾರ' ಎಂದು ನಿರ್ಧರಿಸಿ ಹಾರಿದ್ರುಮತನು ಸತ್ಯಕಾಮನಿಗೆ ಉಪನಯನ ಮಾಡಲು ಪ್ರವೃತ್ತಿಮಾಡಿದ.

**ವಿವರಣೆ :** ಛಾಂದೋಗ್ಯ ಉಪನಿಷತ್ತಿನಲ್ಲಿ ಜಾಬಾಲಿ ಸತ್ಯಕಾಮ, ಹಾರಿದ್ರುಮತ

ಇವರಿಬ್ಬರು ಗೋತಮನ ಬಳಿ ಬಂದು ತನಗೆ ಉಪನಯನ ಮಾಡಬೇಕೆಂದು ಕೇಳುತ್ತಾರೆ. ಗೋತಮ 'ನಿನ್ನ ಗೋತ್ರ ಏನು?' ಎನ್ನುತ್ತಾನೆ. ಮಗು ತಾಯಿಯ ಬಳಿ ಬಂದು ತನ್ನ ಗೋತ್ರವನ್ನು ಕೇಳುತ್ತದೆ. ಅವಳಿಗೂ ಗೊತ್ತಿಲ್ಲ. 'ನನ್ನ ಗೋತ್ರ ಗೊತ್ತಿಲ್ಲ. ನಾನು ಸತ್ಯಕಾಮ; ನನ್ನ ಅಮ್ಮ ಜಬಾಲೆ' ಎಂದಿಷ್ಟೇ ಮಗು ಹೇಳುತ್ತದೆ. ಆರ್ಜವ ಬ್ರಾಹ್ಮಣನ ಲಕ್ಷಣ. ಆದ್ದರಿಂದ ಅವನು ಶೂದ್ರನಲ್ಲ ಎಂದು ನಿರ್ಧರಿಸಿ ಗೋತಮರು ಅವನಿಗೆ ಉಪನಯನ ಮಾಡುತ್ತಾರೆ. ಹೀಗೆ ಸತ್ಯಕಾಮನು ಶೂದ್ರನಲ್ಲ ಎಂದು ತಿಳಿದೇ ಅವನ ಉಪನಯನದಲ್ಲಿ ಪ್ರವೃತ್ತಿ ಮಾಡಿರುವುದ ರಿಂದ ತ್ರೈವರ್ಣಿಕರಲ್ಲದವರಿಗೆ ಉಪನಯನಾದಿ ಸಂಸ್ಕಾರಗಳಿಲ್ಲ. ॥ 37 ॥

## ಓಂ ॥ ಶ್ರವಣಾಧ್ಯಯನಾರ್ಥಪ್ರತಿಷೇಧಾತ್ ಸ್ಮೃತೇಶ್ಚ॥ ಓಂ

**'ಶ್ರವಣೇ ತ್ರಪುಜತುಭ್ಯಾಂ ಶ್ರೋತ್ರಪರಿಪೂರಣಂ।**

**ಅಧ್ಯಯನೇ ಜಿಹ್ವಾಚ್ಛೇದಃ। ಅರ್ಥಾವಧಾರಣೇ ಹೃದಯವಿದಾರಣಮ್ ॥**

**ಇತಿ ಪ್ರತಿಷೇಧಾತ್ ।**

**ನಾಗ್ನಿರ್ನ ಯಜ್ಞಃ ಶೂದ್ರಸ್ಯ ತಥೈವಾಧ್ಯಯನಂ ಕುತಃ।**

**ಕೇವಲೈವ ತು ಶುಶ್ರೂಷಾ ತ್ರಿವರ್ಣಾನಾಂ ವಿಧೀಯತೇ ॥ ಇತಿ ಸ್ಮೃತೇಶ್ಚ।**

**ವಿದುರಾದೀನಾಂ ತು ಉತ್ಪನ್ನ ಜ್ಞಾನತ್ವಾತ್ ಕಶ್ಚಿದ್ವಿಶೇಷಃ ॥ 38 ॥**

## ॥ ಇತಿ ಅಪಶೂದ್ರಾಧಿಕರಣಮ್ ॥

'ಸ್ತ್ರೀಶೂದ್ರಾದಿಗಳು ವೇದವನ್ನು ಕೇಳಿಸಿಕೊಂಡರೆ ಸೀಸ ಮತ್ತು ಅರಗಿನಿಂದ ಕಿವಿ ಮುಚ್ಚಬೇಕು. ಓದಿದರೆ ನಾಲಿಗೆ ತುಂಡರಿಸಬೇಕು. ಅರ್ಥಾನುಸಂಧಾನ ಮಾಡಿಕೊಂಡರೆ ಹೃದಯ ಸೀಳಬೇಕು' ಹೀಗೆ ನಿಷೇಧ ಮಾಡಿರುವುದರಿಂದ ಶೂದ್ರಾದಿಗಳಿಗೆ ವೇದ ವಿದ್ಯಾಧಿ ಕಾರವಿಲ್ಲ.

''ಶೂದ್ರನಿಗೆ ಅಗ್ನಿಯಾಗಲೀ, ಯಜ್ಞವಾಗಲೀ ಇಲ್ಲ. ಅಂದಮೇಲೆ ಅಧ್ಯಯನವಿನ್ನೆಲ್ಲಿಂದ ಬರಬೇಕು? ಅವರು ತ್ರೈವರ್ಣಿಕರ ಸೇವೆಯನ್ನು ಮಾತ್ರ ಮಾಡಬೇಕು'' ಎಂದು ಸ್ಮೃತಿಯೂ ಇದೆ.

ವಿದುರ, ಧರ್ಮವ್ಯಾಧ ಇವರಿಗೆ ಪೂರ್ವಜನ್ಮದಲ್ಲಿ ಭಗವಂತನ ಅಪರೋಕ್ಷ ಜ್ಞಾನವಾಗಿರುವುದರಿಂದ ಇತರ ಶೂದ್ರರಿಗಿಂತ ಅವರಲ್ಲಿ ವಿಶೇಷವಿದೆ. (ಹೀಗಾಗಿ ಅವರಿಗೆ ವೇದಾರ್ಥಜ್ಞಾನ-ವಿಮರ್ಶೆಗಳಲ್ಲಿ ಅಧಿಕಾರವಿದೆ.)

**ವಿವರಣೆ :** 'ಶ್ರವಣೇ' ಇತ್ಯಾದಿ ಪ್ರಮಾಣವಾಕ್ಯ ಶ್ರುತಿ, ಗೌತಮಸೂತ್ರವಲ್ಲ. ಗೌತಮಸೂತ್ರದಲ್ಲಿ ಇದೇ ಅರ್ಥಬರುವ ವಾಕ್ಯವಷ್ಟೇ ಇದೆ. ಇದು ಶ್ರುತಿಯೆನ್ನಲು 'ಇತಿ ಶ್ರುತೌ' ಎಂಬ ಸ್ಪಷ್ಟ ಆಧಾರವಿದೆ.

॥ ಸೂತ್ರ 38 ॥

## ದ್ವೈತದರ್ಶನದಲ್ಲಿ ಸೂತ್ರಗಳ ಅರ್ಥ

**1. ಓಂ ॥ ಶುಗಸ್ಯ ತದನಾದರಶ್ರವಣಾತ್ ತದಾದ್ರವಣಾತ್ ಸೂಚ್ಯತೇ ಹಿ ॥ ಓಂ**

ಅಸ್ಯ=ಪೌತ್ರಾಯಣನಿಗೆ ತದನಾದರಶ್ರವಣಾತ್=ಹಂಸಗಳ ತಿರಸ್ಕಾರದ ಮಾತುಗಳನ್ನು ಕೇಳಿರುವ ಕಾರಣದಿಂದಾಗಿ ಶುಕ್=ದುಃಖವಾಗಿದೆ. ಹೀಗೆ ತದಾದ್ರವಣಾತ್=ಶೋಕದಿಂದ ಕರಗಿರುವುದರಿಂದಲೇ ರೈಕ್ವನು ಅವನನ್ನು ಶೂದ್ರ ಎಂದಿದ್ದಾನೆ. ಸೂಚ್ಯತೇ ಹಿ=ರಾಜನಿಗೆ ಶೋಕವಾಗಿದೆ ಎಂಬ ವಿಷಯ ಬೆಳಿಗ್ಗೆ ಎದ್ದಕೂಡಲೇ ರೈಕ್ವನ ಅನ್ವೇಷಣೆಗೆ ಸಾರಥಿಯನ್ನು ಆಜ್ಞಾಪಿಸಿರುವುದರಿಂದ ಸೂಚಿಸಲ್ಪಟ್ಟಿದೆ ತಾನೆ!

(ಅತ್ರ ಶೂದ್ರಾಣಾಂ ಅಧಿಕಾರೋ ನೇತ್ಯುಚ್ಯತೇ। ವೇದವಿದ್ಯಾಸು ಇತಿ ಪ್ರಕೃತಂ, ಶೂದ್ರಸ್ಯೇತಿ ಅರ್ಥಾದನ್ವೇತಿ। ಅನಧಿಕಾರ ಇತ್ಯಸ್ತಿ। ಆದ್ಯಃ ತಚ್ಛಬ್ದಃ ಶ್ರುತ್ಯುಕ್ತಹಂಸಪರಃ। ಅಂತ್ಯಃ ಶುಕ್‌ಪರಃ। ತಯಾ=ಶುಚಾ ಆದ್ರವಣಾತ್ ನಿಮಿತ್ತಾತ್ ಶೂದ್ರೇತ್ಯುಕ್ತಃ ಪೌತ್ರಾಯಣಃ ಮುನಿನಾ। ನ ರೂಢ್ಯಾ। ಶುಗೇವಾಸ್ಯ ಕಿಂ ನಿಮಿತ್ತಕ ಇತ್ಯತ ಉಕ್ತಂ-ಶುಗಸ್ಯ ತದನಾದರೇತಿ। ಹಂಸಕೃತಾನಾದರ ಶ್ರವಣಾದಸ್ಯ ಶುಗಿತ್ಯರ್ಥಃ। ಕಥಂ ಜ್ಞಾಯತೇ ಶುಗ್ ಅಸ್ಯ ಜಾತಾ ಇತ್ಯತ ಉಕ್ತಮ್ - ಸೂಚ್ಯತೇ ಹೀತಿ, ಹಿ=ಯಸ್ಮಾತ್ ವ್ಯಗ್ರತ್ವೋಕ್ತ್ಯಾ ಸೂಚ್ಯತೇ। ಅತಃ ಶುಗಸ್ಯ ಜ್ಞಾಯತೇತ್ಯರ್ಥಃ।)

**ಓಂ ॥ ಕ್ಷತ್ರಿಯತ್ವಾವಗತಶ್ಚ ಉತ್ತರತ್ರ ಚೈತ್ರರಥೇನ ಲಿಂಗಾತ್ ॥ ಓಂ**

ಉತ್ತರತ್ರ='ಅಯಂ ಅಶ್ವತರೀರಥಃ' ಎಂಬ ಮುಂದಿನ ವಾಕ್ಯದಲ್ಲಿ ತಿಳಿಯುವ ಚೈತ್ರರಥೇನ='ಚೈತ್ರರಥ' ಸಂಬಂಧರೂಪವಾದ ಲಿಂಗಾತ್=ಕಾರಣದಿಂದ ಪೌತ್ರಾಯಣನಿಗೆ ಕ್ಷತ್ರಿಯತ್ವಾವಗತೇಶ್ಚ=ಕ್ಷತ್ರಿಯಜಾತಿಯು ತಿಳಿಯಲ್ಪಡುತ್ತದೆ. ಆದ್ದರಿಂದಲೂ ಅವನು ಶೂದ್ರನಲ್ಲ.

(ಅಸ್ಯೇತ್ಯಸ್ತಿ। ಆದ್ರವಣಾದಿತಿ ಶೂದ್ರಸ್ಯ ಅನಧಿಕಾರ ಇತಿ ಚ। ಚಿತ್ರಶ್ಚಾಸೌ ರಥಶ್ಚ ಚಿತ್ರರಥಃ, ತಸ್ಯೇದಂ - ಚೈತ್ರರಥಂ । ಭಾವಪ್ರಧಾನಂ ಚೇದಂ, ತೇನ। ಉತ್ರರತ್ರ='ಅಯಮಶ್ವತರೀರಥಃ' ಇತ್ಯುತ್ತರವಾಕ್ಯೇ ಶ್ರುತೇನ ಚೈತ್ರರಥೇನ=ಚಿತ್ರರಥ ಸಂಬಂಧಿತ್ವೇನ ಲಿಂಗಾತ್=ಲಿಂಗೇನ ಅಸ್ಯ=ಪೌತ್ರಾಯಣಸ್ಯ ಕ್ಷತ್ರಿಯತ್ವಾವಗತೇಶ್ಚ ಶೂದ್ರಶಬ್ದೋ ನ ರೂಢ ಇತಿ ಶೂದ್ರಸ್ಯ ಅನಧಿಕಾರ ಇತ್ಯರ್ಥ । ಅಶ್ವತರೀಯುಕ್ತರಥಃ ಚಿತ್ರಪದಾರ್ಥಃ।

**3. ಓಂ ॥ ಸಂಸ್ಕಾರಪರಾಮರ್ಶಾತ್ ತದಭಾವಾಭಿಲಾಪಾಚ್ಚ ॥ ಓಂ**

ವೇದಾಧ್ಯಯನಕ್ಕಾಗಿ ಸಂಸ್ಕಾರ ಪರಾಮರ್ಶಾತ್='ತಂ ಅಧ್ಯಾಪಯೀತ' ಎಂದು ಉಪನಯನರೂಪವಾದ ಸಂಸ್ಕಾರವನ್ನು ಪರಾಮರ್ಶ ಮಾಡಿರುವುದರಿಂದ ಶೂದ್ರನಿಗಾದರೋ, ತದಭಾವಾಭಿಲಾಪಾಚ್ಚ='ನಾಗ್ನಿಃ... ನ ಸಂಸ್ಕಾರಃ' ಎಂದು

ಸಂಸ್ಕಾರವಿಲ್ಲವೆಂದು ಹೇಳಿರುವುದರಿಂದ ಅವನಿಗೆ ವೇದವಿದ್ಯೆಯಲ್ಲಿ ಅಧಿಕಾರವಿಲ್ಲ.

(ಅನ್ವಾರ್ಥವಚನಂ ಪರಾಮರ್ಶಃ । ಅಧ್ಯಯನಾಂಗತ್ವೇನ 'ತಮಧ್ಯಾಪಯೀತ' ಇತಿ ಉಪನಯನಾಖ್ಯಸಂಸ್ಕಾರ ಪರಾಮರ್ಶಾತ್ ಶೂದ್ರಸ್ಯ ಚ 'ನಾಗ್ನಿಃ ನ ಯಜ್ಞೋ ನ ಸಂಸ್ಕಾರಃ' ಇತಿ ಶ್ರುತೌ ಸಂಸ್ಕಾರಾಭಾವಾಭಿಲಾಪಾಚ್ಚ ಶೂದ್ರಸ್ಯ ವೇದವಿದ್ಯಾನಧಿಕಾರ ಇತ್ಯರ್ಥಃ।)

**4. ಓಂ॥ ತದದಭಾವನಿರ್ಧಾರಣೇ ಚ ಪ್ರವೃತ್ತೇಃ॥ ಓಂ**

ತದಭಾವನಿರ್ಧಾರಣೇ, ತಸ್ಯ=ಶೂದ್ರತ್ವದ ಅಭಾವನಿರ್ಧಾರಣೇ ಸತಿ= ಅಭಾವವನ್ನು ನಿರ್ಧರಿಸಿದ ಅನಂತರವೇ ಪ್ರವೃತ್ತೇಃ=ಗೋತಮನು ಸತ್ಯಕಾಮನ ಉಪನಯನದಲ್ಲಿ ಪ್ರವೃತ್ತಿ ಮಾಡಿರುವುದರಿಂದ ಶೂದ್ರನಿಗೆ ಸಂಸ್ಕಾರ ಇಲ್ಲ ಎಂದು ತಿಳಿಯುತ್ತದೆ.

(ಚೋ ಅವಧಾರಣೇ ಸಮುಚ್ಚಯೇ ವಾ, ತಸ್ಯ=ಶೂದ್ರತ್ವಸ್ಯ ಅಭಾವನಿರ್ಧಾರಣೇ ಏವ ಪ್ರವೃತ್ತೇಃ। ಸಂಸ್ಕಾರ ಇತ್ಯಸ್ತಿ। ಉಪನಯನ ಸಂಸ್ಕಾರೇ ಪ್ರವೃತ್ತೇಶ್ಚ ನ ನಿಷೇಧಾಭಾವ ಇತಿ ವಾ ನ ಸಂಸ್ಕಾರ ಇತಿ ವಾ ಯೋಜ್ಯಮ್।)

**5. ಓಂ॥ ಶ್ರವಣಾಧ್ಯಯನಾರ್ಥಪ್ರತಿಷೇಧಾತ್ ಸ್ಮೃತೇಶ್ಚ॥ ಓಂ**

ಶ್ರವಣ=ವೇದದ ಶ್ರವಣ ಮಾಡುವುದು ಅಧ್ಯಯನ=ವೇದವನ್ನು ಓದುವುದು ಅರ್ಥ=ಅರ್ಥವನ್ನು ತಿಳಿದುಕೊಳ್ಳುವುದು ಇವುಗಳನ್ನು ಪ್ರತಿಷೇಧಾತ್=ಶೂದ್ರನಿಗೆ ನಿಷೇಧ ಮಾಡಿರುವುದರಿಂದ, ಸ್ಮೃತೇಶ್ಚ=ನಾಗ್ನಿಃ ನ ಯಜ್ಞಃ, ಎಂಬ ಸ್ಮೃತಿಯೂ ಇರುವುದರಿಂದ ಶೂದ್ರನಿಗೆ ವೇದವಿದ್ಯೆಯಲ್ಲಿ ಅಧಿಕಾರವಿಲ್ಲ.

(ಅರ್ಥಪದೇನ ಅರ್ಥಾವಧಾರಣಂ ಉಚ್ಯತೇ । ವೇದಶ್ರವಣ-ಅಧ್ಯಯನ-ಅರ್ಥಾವಧಾರಣಾನಾಂ 'ಶ್ರವಣೇ ತ್ರಪುಜತುಭ್ಯಾಂ' ಇತ್ಯಾದಿನಾ ಪ್ರತಿಷೇಧಾತ್ 'ನಾಗ್ನಿಃ ನ ಯಜ್ಞಃ ಶೂದ್ರಸ್ಯ' ಇತ್ಯಾದಿ ಸ್ಮೃತೇಶ್ಚ ಶೂದ್ರಸ್ಯ ಅನಧಿಕಾರ ಇತ್ಯರ್ಥಃ । ಶ್ರುತೌ ಶೂದ್ರಪದಾನುಕ್ತೇಃ ಪೃಥಕ್ ಸ್ಮೃತ್ಯುಕ್ತಿಃ।)

## ಶಾಂಕರಭಾಷ್ಯದಲ್ಲಿ ಹೇಳಿದ ಸೂತ್ರಾರ್ಥ

**1. ಶುಗಸ್ಯ ತದನಾದರಶ್ರವಣಾತ್ ತದಾದ್ರವಣಾತ್ ಸೂಚ್ಯತೇ ಹಿ** - ವೇದವಿದ್ಯೆಯಲ್ಲಿ ಮನುಷ್ಯ ಮತ್ತು ದೇವತೆಗಳಿಗೆ ಅಧಿಕಾರವಿರುವಂತೆ ಶೂದ್ರರಿಗೂ ಅಧಿಕಾರವಿದೆ. ಅರ್ಥಿತ್ವ-ಸಾಮರ್ಥ್ಯ ಇವೆರಡೂ ಅವರಿಗಿದೆ. 'ತಸ್ಮಾತ್ ಶೂದ್ರೋ ಯಜ್ಞೇ ಅನವಕ್ಲೃಪ್ತಃ' ಎಂದು ಯಜ್ಞಾದಿಕರ್ಮಗಳಲ್ಲಿ ನಿಷೇಧವಿರುವಂತೆ 'ಶೂದ್ರೋ ವಿದ್ಯಾಯಾಂ ಅನವಕ್ಲೃಪ್ತಃ' ಎಂದು ವಿದ್ಯೆಗೆ ನಿಷೇಧವಿಲ್ಲ. ಛಾಂದೋಗ್ಯಉಪನಿಷತ್ತಿನಲ್ಲಿ ರೈಕ್ವನು ಪೌತ್ರಾಯಣನಿಗೆ ಸಂವರ್ಗವಿದ್ಯೆಯನ್ನು ಉಪದೇಶಿಸಿದ ಉಲ್ಲೇಖವಿದೆ. ಪೌತ್ರಾಯಣ

ಶೂದ್ರ. ರೈಕ್ವನು ಅವನನ್ನು 'ಅಹ ಹಾರೇತ್ವಾ ಶೂದ್ರ' ಎಂದು ಸಂಭೋಧಿಸಿರುವುದರಿಂದ ಅವನು ಶೂದ್ರನೆಂದು ಸ್ಪಷ್ಟ. ಆದ್ದರಿಂದ ಶೂದ್ರನಿಗೂ ವೇದವಿದ್ಯಾಧಿಕಾರವಿದೆ, ಎಂದು ಪೂರ್ವಪಕ್ಷ.

ಶೂದ್ರನಿಗೆ ಅರ್ಥಿತ್ವವಿದ್ದರೂ ಸಾಮರ್ಥ್ಯವಿಲ್ಲ. ಸಾಮರ್ಥ್ಯ ಲೌಕಿಕವಾದುದಲ್ಲ ಅದನ್ನು ವೇದದಿಂದ ನಿರ್ಣಯಿಸಬೇಕು. ಶೂದ್ರನಿಗೆ ಉಪನಯನವಿಲ್ಲವಾದುದರಿಂದ ವೇದದಲ್ಲಿ ಅಧಿಕಾರವಿಲ್ಲ. ಅದರಿಂದಾಗಿಯೇ ವೇದವಿದ್ಯೆಯಲ್ಲೂ ಅಧಿಕಾರವಿಲ್ಲ.

ರೈಕ್ವನು ಪೌತ್ರಾಯಣನನ್ನು ಶೂದ್ರ ಎಂದು ಸಂಬೋಧಿಸಲು ಅವನು ಶೋಕಪೂರ್ಣನಾಗಿರುವುದೇ ಕಾರಣ. ಶೋಕಕ್ಕೆ ಹಂಸಗಳು ಮಾಡಿರುವ ಅನಾದರ ಕಾರಣ. ತದಾದ್ರವಣಾತ್ - 'ಶುಚಂ ಅಭಿದುದ್ರಾವ, ಶುಚಾ ಅಭಿದುದ್ರುವೇ, ಶುಚಾ ರೈಕ್ವಂ ಅಭಿದುದ್ರಾವ ಇತಿ ಶೂದ್ರಃ' ಹೀಗೆ ಯೌಗಿಕ ಅರ್ಥದಲ್ಲಿ ಶೂದ್ರ ಶಬ್ದವು ಪೌತ್ರಾಯಣನಿಗೆ ಅನ್ವಯಿಸುತ್ತದೆ ಹೊರತು, ಜಾತಿನಿಮಿತ್ತದಿಂದಲ್ಲ.

**2. ಕ್ಷತ್ರಿಯತ್ವಾವಗತೇಶ್ಚ ಉತ್ತರತ್ರ ಚೈತ್ರರಥೇನ ಲಿಂಗಾತ್-** ಸಂವರ್ಗ ವಿದ್ಯಾಪ್ರಕರಣದಲ್ಲಿ ಮುಂದೆ ಹೀಗಿದೆ- 'ಅಥ ಹ ಶೌನಕಂ ಚ ಕಾಪೇಯಂ, ಅಭಿಪ್ರತಾರಿಣಂ ಚ ಕಾಕ್ಷಸೇನಿಂ' (ಛಾಂ.4.3.5) ಎಂದು. ಕಪಿಗೋತ್ರೋತ್ಪನ್ನನಾದ ಶುನಕನ ಪುತ್ರನಾದ ಪುರೋಹಿತನೊಂದಿಗೆ ಕಕ್ಷಸೇನನ ಮಗನಾದ ಅಭಿಪ್ರತಾರೀ ಎಂಬುವನಿಗೆ ಸಂಬಂಧ ತಿಳಿಯುತ್ತದೆ. ಇವರಿಬ್ಬರಲ್ಲಿ ಒಬ್ಬ ಯಾಜಕ ಮತ್ತೊಬ್ಬ ಯಜಮಾನ. ಯಾಜಕ ಕಪಿಗೋತ್ರಜನೆಂಬುದು ನಿಶ್ಚಿತ. ಯಜಮಾನ ಯಾರು ಎಂದು ವಿಚಾರ ಮಾಡಬೇಕು. 'ಏತೇನ ವೈ ಚಿತ್ರರಥಂ ಕಾಪೇಯಾ ಅಯಾಜಯನ್' ಎಂದು (ತಾಂಡ್ಯಬ್ರಾ) ಚಿತ್ರರಥನೆಂಬವನಿಗೆ ಕಾಪೇಯರು ಪುರೋಹಿತರೆಂದು ತಿಳಿಯುತ್ತದೆ. ಚಿತ್ರರಥ ಕ್ಷತ್ರಿಯ. 'ತಸ್ಮಾತ್ ಚೈತ್ರರಥಿರ್ನಾಮೈಕಃ ಕ್ಷತ್ರಪತಿರಜಾಯತ' ಎಂಬ ವಾಕ್ಯದಿಂದ ಅದು ಸ್ಪಷ್ಟವಾಗಿದೆ. ಹೀಗೆ ಕ್ಷತ್ರಿಯನಾದ ಚಿತ್ರರಥನಿಗೆ ಶೌನಕನು ಪುರೋಹಿತನಾದುದರಿಂದ ಅಂತಹ ಪುರೋಹಿತನ ಸಂಬಂಧ ಅಭಿಪ್ರತಾರಿಗೆ ಇದೆಯಾದ್ದರಿಂದ ಅವನೂ ಕ್ಷತ್ರಿಯ. ಅಭಿಪ್ರತಾರಿಗೆ ಸಂವರ್ಗ ವಿದ್ಯೆಯ ಸಂಬಂಧವನ್ನು ಹೇಳಿರುವುದರಿಂದ ಅದೇ ವಿದ್ಯೆ ಪೌತ್ರಾಯಣನಿಗೆ ಉಪದೇಶಿಸಲ್ಪಟ್ಟಿರುವುದರಿಂದ ಅವನೂ ಕ್ಷತ್ರಿಯ.

**3. ಸಂಸ್ಕಾರಪರಾಮರ್ಶಾತ್ ತದಭಾವಾಭಿಲಾಪಾಚ್ಚ-** ಉಪನಿಷತ್ತುಗಳಲ್ಲಿ ಅನೇಕ ವಿದ್ಯೆಗಳನ್ನು ಹೇಳುವಾಗ ಉಪನಯನ ಸಂಸ್ಕಾರದ ಉಲ್ಲೇಖವಿದೆ. 'ತಂ ಹ ಉಪನಿನ್ಯೇ' (ಶ.ಭ್ರಾ.) 'ಅಧೀಹಿ ಭಗವಃ ಇತಿ ಹೋಪಸಸಾದ' (ಛಾಂ.) ಇಲ್ಲಿ ಉಪಸಾದನ ಎಂದರೆ ಉಪನಯನ. ಆದರೆ ಶೂದ್ರರಿಗೆ ಉಪನಯನ ಸಂಸ್ಕಾರ ಇಲ್ಲವೆಂದು ನಿಷೇಧ ಮಾಡಲಾಗಿದೆ. 'ನ ಶೂದ್ರೋ ಪಾತಕಂ ಕಿಂಚಿತ್ ನಚ ಸಂಸ್ಕಾರಮರ್ಹತಿ'. ಆದ್ದರಿಂದಲೂ ಶೂದ್ರನಿಗೆ ವೇದವಿದ್ಯಾಧಿಕಾರವಿಲ್ಲ.

**4. ತದಭಾವ ನಿರ್ಧಾರಣೇ ಚ ಪ್ರವೃತ್ತೇಃ-** ಜಾಬಾಲನೆಂಬ ಕುಮಾರನು ಸತ್ಯವಾಡಿದ ಪ್ರಯುಕ್ತ ಅವನು ಬ್ರಾಹ್ಮಣ, ಶೂದ್ರನಲ್ಲ ಎಂದು ನಿರ್ಧರಿಸಿದ ಮೇಲೆ ಗೌತಮರು ಅವನ ಉಪನಯನದಲ್ಲಿ ಪ್ರವೃತ್ತಿ ಮಾಡಿದರು. ಇದರಿಂದಲೂ ಶೂದ್ರರಿಗೆ ಉಪನಯನ ವೇದವಿದ್ಯೆಗಳು ಇಲ್ಲವೆಂದು ತಿಳಿಯಬಹುದು.

**5. ಶ್ರವಣಾಧ್ಯಯನಾರ್ಥಪ್ರತಿಷೇಧಾತ್ ಸ್ಮೃತೇಶ್ಚ-** ಶೂದ್ರನಿಗೆ ವೇದ ಶ್ರವಣವನ್ನೇ 'ಅಥಾಸ್ಯ ವೇದಂ ಉಪಶ್ರುಣ್ವತಃ ತ್ರಪುಜತುಭ್ಯಾಂ ಶ್ರೋತ್ರಪರಿಪೂರಣಂ' ಎಂದು ನಿಷೇಧಿಸಲಾಗಿದೆ. ಶ್ರವಣವೇ ನಿಷಿದ್ಧವಾದ ಮೇಲೆ ಅಧ್ಯಯನ ಅರ್ಥ ಜ್ಞಾನಗಳು ಸರ್ವಥಾ ನಿಷಿದ್ಧ. ಆದ್ದರಿಂದ ಶೂದ್ರರಿಗೆ ವೇದವಿದ್ಯೆಯಲ್ಲಿ ಅಧಿಕಾರವಿಲ್ಲ.

## ಚಂದ್ರಿಕಾದಲ್ಲಿ ಮಾಡಿರುವ ವಿಮರ್ಶೆ

ಅದ್ವೈತಸಿದ್ಧಾಂತದಲ್ಲಿ 'ತತ್ತ್ವಮಸಿ' ಎಂಬ ವಾಕ್ಯದಿಂದ ಬರುವ ನಿರ್ಗುಣ ಬ್ರಹ್ಮನ ಅಪರೋಕ್ಷ ಜ್ಞಾನವೇ ಬಂಧಕ್ಕೆ ನಾಶಕ. ವೇದವಿದ್ಯೆಯಲ್ಲಿ ಅಧಿಕಾರವಿಲ್ಲದ ಶೂದ್ರನೊಬ್ಬ ನಿಷೇಧವನ್ನು ಅತಿಕ್ರಮಿಸಿ ಆ ವಾಕ್ಯವನ್ನು ಓದಿದರೆ ಅವನಿಗೂ ಅಪರೋಕ್ಷ ಜ್ಞಾನ ಏಕೆ ಬರಬಾರದು? ದ್ವೈತದರ್ಶನದಂತೆ ಅದ್ವೈತದರ್ಶನದಲ್ಲಿ ಮೋಕ್ಷಕ್ಕೆ ಭಗವಂತನ ಪ್ರಸಾದದ ಅಗತ್ಯವಿಲ್ಲ. ಬ್ರಹ್ಮನು ಅಪರೋಕ್ಷ ಸ್ವಭಾವನಾದರೂ ಲೋಕವಿಲಕ್ಷಣನಾದುದರಿಂದ ಅವನ ಅಪರೋಕ್ಷಜ್ಞಾನ ಬರಬೇಕಾದರೆ ಪುಣ್ಯವಿಶೇಷ ಬೇಕು. ಅಂತಹ ಪುಣ್ಯ ಶೂದ್ರನಿಗಿಲ್ಲ. ಆದ್ದರಿಂದ ಅವನಿಗೆ ಅಪರೋಕ್ಷಜ್ಞಾನ ಬರುವುದಿಲ್ಲ ಎನ್ನುವುದೂ ಸರಿಯಲ್ಲ. ಹಾಗಿದ್ದರೆ ಅಲೌಕಿಕವಾದ ಆ ಅಪರೋಕ್ಷಜ್ಞಾನವು ಸತ್ಯವಾದ ಬಂಧಕ್ಕೂ ಏಕೆ ನಾಶಕವಾಗಬಾರದು? ಜ್ಞಾನದಿಂದ ನಾಶ್ಯವಾದುದು ಮಿಥ್ಯಾ ಆಗಿರಬೇಕು, ಎಂಬ ಲೌಕಿಕ ಜ್ಞಾನದ ನಿಯಮವನ್ನು ಆ ಜ್ಞಾನಕ್ಕೇಕೆ ಹೇಳಬೇಕು?

ಶೂದ್ರಾದಿಗಳಿಗೆ ಅಪರೋಕ್ಷ ಜ್ಞಾನ ಬಂದರೂ ಅದು ನಿಯಮಬಾಹಿರವಾಗಿ ಮಾಡಿದ ಯಾಗದಂತೆ ಫಲಕಾರಿಯಾಗುವುದಿಲ್ಲ ಎನ್ನುವುದೂ ಸರಿಯಲ್ಲ. ಹಗ್ಗದ ತತ್ತ್ವಜ್ಞಾನದಿಂದ ಹಾವಿನ ಭ್ರಮೆಯ ನಿವೃತ್ತಿ ಎಲ್ಲರಿಗೂ ಜ್ಞಾನಸ್ವಭಾವದಿಂದಲೇ ಆಗುವಂತೆ ಶೂದ್ರರಿಗೂ ಬ್ರಹ್ಮಾಪರೋಕ್ಷವು ಬಂದರೆ ಸ್ವಭಾವ ಸಾಮರ್ಥ್ಯದಿಂದಲೇ ಅದೂ ಬಂಧನಾಶಕವಾಗಲೇಬೇಕು. ನಿಯಮಬಾಹಿರವಾಗಿ ಮಾಡಿದ ಅಧ್ಯಯನದಿಂದ ಉಂಟಾದ ಪಾಪವೂ ಮಿಥ್ಯಾ ಆದುದರಿಂದ ಬಂಧದಂತೆ ಅದೂ ಜ್ಞಾನದಿಂದ ನಾಶವಾಗಬೇಕು. ಹೀಗೆ ಶೂದ್ರಾದಿಗಳಿಗೆ ವೇದವಿದ್ಯಾಧಿಕಾರವನ್ನು ನಿಷೇಧ ಮಾಡಿದರೂ ಅದರಿಂದಾಗುವ ಅಪರೋಕ್ಷ, ಮೋಕ್ಷಗಳನ್ನು ಅವರಿಗೆ ಇಲ್ಲ ಎನ್ನಲು ಬರುವುದಿಲ್ಲ.

2. ಅಲ್ಲದೆ, ಅದ್ವೈತದರ್ಶನದಲ್ಲಿ ಚಿನ್ಮಾತ್ರವು ತತ್ತ್ವ, ಉಳಿದುದೆಲ್ಲವೂ ಆರೋಪಿತ, ಇದೇ ತತ್ತ್ವಜ್ಞಾನ. ಇದು ದೃಶ್ಯತ್ವಾದಿ ಅನುಮಾನದಿಂದಲೂ ಬರುತ್ತದೆ. ಅಂದಮೇಲೆ

ಬ್ರಾಹ್ಮಣಾದಿಗಳಾದರೂ ವೇದಾಧ್ಯಯನ, ಶ್ರವಣಾದಿಗಳನ್ನು ಮಾಡಿ ಬ್ರಹ್ಮನಲ್ಲಿ ಇಲ್ಲದ ಸರ್ವಜ್ಞತ್ವಾದಿ ಗುಣಗಳನ್ನು ತಿಳಿದು ಅದನ್ನು ಮತ್ತೆ ನಿರಾಕರಿಸಿ (ನೇಹ ನಾನಾಸ್ತಿ) ವಕ್ರೋಪಾಯದಿಂದ ತತ್ತ್ವಸಾಕ್ಷಾತ್ಕಾರವನ್ನು ಪಡೆದುಕೊಳ್ಳುವ ಸಾಹಸಕ್ಕೆ ಏಕೆ ಇಳಿಯಬೇಕು?

ಋಜೂಪಾಯೇನ ತರ್ಕೇಣ ತತ್ತ್ವನಿಶ್ಚಯ ಸಂಭವೇ।

ವಿಪ್ರಾದೇರಪಿ ವಕ್ರೈಃ ಕಿಂ ಸಾಧ್ಯಂ ವೇದವಿಚಾರಣೈಃ ॥

ಹೀಗೆ ಅದ್ವೈತದರ್ಶನದಲ್ಲಿ ವೇದ ವಿದ್ಯಾನಧಿಕಾರವನ್ನು ತ್ರೈವರ್ಣಿಕೇತರರಿಗೆ ಸಮರ್ಥಿಸುವುದು ಕಷ್ಟವಿದೆ.

## ರಾಮಾನುಜಭಾಷ್ಯದಲ್ಲಿ ಹೇಳಿರುವ ಸೂತ್ರಗಳ ಅರ್ಥ

ರಾಮಾನುಜಭಾಷ್ಯ ವಾಮನಾಧಿಕರಣವನ್ನು (ಶಬ್ದಾದೇವ ಪ್ರಮಿತಃ) ಪ್ರಮಿತಾಧಿಕರಣ ಎಂದು ಹೆಸರಿಸಿ ಅದನ್ನು ಪ್ರಧಾನಾಧಿಕರಣವೆಂದು ಪರಿಗಣಿಸಿದೆ. ಮುಂದಿನ ದೇವತಾಧಿಕರಣ ಮತ್ತು ಅಪಶೂದ್ರಾಧಿಕರಣಗಳೆರಡು ಪ್ರಮಿತಾಧಿಕರಣಕ್ಕೆ ಸಂಬಂಧಿಸಿರುವ, ಅದರಲ್ಲೇ ಅಂತರ್ಭೂತಗಳಾದ ಅಧಿಕರಣಗಳು. ಪ್ರಮಿತಾಧಿಕರಣದ ಎರಡನೆಯ ಸೂತ್ರದಲ್ಲಿ ಬಂದಿರುವ 'ಮನುಷ್ಯಾಧಿಕಾರತ್ವಾತ್' ಎಂಬುದಕ್ಕೆ ಸಂಬಂಧಪಟ್ಟಂತೆ ದೇವತೆಗಳಿಗೆ ವೇದವಿದ್ಯಾಧಿಕಾರದ ಪ್ರಶ್ನೆಬಂದಾಗ ದೇವತಾಧಿಕರಣವೂ ಶೂದ್ರರಿಗೆ ವೇದವಿದ್ಯಾಧಿಕಾರದ ವಿಚಾರಕ್ಕಾಗಿ ಅಪಶೂದ್ರಾಧಿಕರಣವೂ ಪ್ರಸ್ತುತವಾಗಿದೆ. ಆದ್ದರಿಂದ ಈ ಎರಡು ಅಧಿಕರಣಗಳೂ ಪ್ರಮಿತಾಧಿಕರಣದಲ್ಲಿ ಸೇರುವ ಅಧಿಕರಣಗಳು. ದೇವತಾಧಿಕರಣವನ್ನೂ ಎರಡು ಅಧಿಕರಣಗಳನ್ನಾಗಿ ಒಡೆಯಲಾಗಿದೆ - ದೇವತಾಧಿಕರಣ ಮತ್ತು ಮಧ್ವಧಿಕರಣ. ದ್ವೈತಾದ್ವೈತಭಾಷ್ಯಗಳಂತೆ ದೇವತಾಧಿಕರಣದಲ್ಲಿ ಒಟ್ಟು ಎರಡು ಸೂತ್ರಗಳು. ಆದರೆ ರಾಮಾನುಜಭಾಷ್ಯದಂತೆ ಮೊದಲ ಐದು ಸೂತ್ರಗಳು ಒಂದು ಅಧಿಕರಣ. ಅದಕ್ಕೆ ದೇವತಾಧಿಕರಣ ಎಂದು ಹೆಸರು. ಅನಂತರದ ಮೂರು ಸೂತ್ರಗಳು ಮತ್ತೊಂದು ಅಧಿಕರಣ. ಅದಕ್ಕೆ ಮಧ್ವಧಿಕರಣ ಎಂದು ಹೆಸರು. ದೇವತಾಧಿಕರಣದ ಸೂತ್ರಗಳಿಗೆ ಶಾಂಕರಭಾಷ್ಯದಂತೆಯೇ ವ್ಯಾಖ್ಯಾನ. ಮಧ್ವದಿಕರಣದ ಸೂತ್ರಗಳ ವ್ಯಾಖ್ಯಾನ ಸ್ವಲ್ಪ ಬೇರೆಯಾಗಿದೆ.

**1. ಮಧ್ವಾದಿಷು ಅಸಂಭವಾತ್ ಅನಧಿಕಾರಂ ಜೈಮಿನಿಃ-** ಉಪನಿಷತ್ತಿನಲ್ಲಿ ಹೇಳಿರುವ ಯಾವ ವಿದ್ಯೆಯಿಂದ ಯಾವ ದೇವತೆಯು ಉಪಾಸ್ಯನೋ ಆ ವಿದ್ಯೆಯಲ್ಲಿ ಅದೇ ದೇವತೆಗೆ ಅಧಿಕಾರವಿದೆಯೆ? ಎಂದು ಜಿಜ್ಞಾಸೆ. ಉದಾಹರಣೆಗೆ ಮಧುವಿದ್ಯೆಯಲ್ಲಿ ಉಪಾಸ್ಯರಾದವರು ಆದಿತ್ಯ ಮತ್ತು ವಸುಗಳು. ವೇದಪ್ರತಿಪಾದ್ಯವಾದ ಯಜ್ಞಕರ್ಮದಲ್ಲಿ ಅಗ್ನಿಗೆ ಹಾಕಿದ ಆಹುತಿಯ ರಸಭಾಗ ಕಿರಣಗಳ ಮೂಲಕ ಸೂರ್ಯನಿಗೆ ಸೇರುತ್ತದೆ. ಅಂತಹ ಸೂರ್ಯಕಿರಣಗಳನ್ನು ವಸ್ವಾದಿದೇವತೆಗಳು ಸೇವಿಸುತ್ತಾರೆ. ಆದ್ದರಿಂದ ಸೂರ್ಯ ದೇವಮಧು. ಈ ತತ್ತ್ವವನ್ನು ತಿಳಿದವನೂ ವಸುಗಳಲ್ಲಿ ಒಬ್ಬನಾಗುತ್ತಾನೆ. ಹೀಗೆ

ಮಧುವಿದ್ಯೆಯಲ್ಲಿ ಆದಿತ್ಯ ಉಪಾಸ್ಯ, ವಸುಪದ ಪ್ರಾಪ್ತಿ ಫಲ. ಸ್ವಯಂ ಆದಿತ್ಯನಾದವನು ತನ್ನನ್ನೇ ಉಪಾಸನೆ ಮಾಡುವುದು ಹೇಗೆ? ಅಥವಾ ಈಗಾಗಲೇ ವಸುಪದದಲ್ಲಿ ಇರುವವರು ಆ ಫಲವನ್ನು ಮತ್ತೆ ಪಡೆಯುವುದು ಹೇಗೆ? ಆದ್ದರಿಂದ ಯಾವ ವಿದ್ಯೆಯಲ್ಲಿ ಯಾರು ಉಪಾಸ್ಯನೋ ಆ ದೇವತೆಗೆ ಅಂತಹ ವಿದ್ಯೆಯಲ್ಲಿ ಅಧಿಕಾರವಿಲ್ಲ. ಯಾವ ವಿದ್ಯೆಯಿಂದ ಲಭಿಸುವ ಫಲವನ್ನು ಯಾವ ದೇವತೆಯು ಈಗಾಗಲೇ ಪಡೆದಿರುವನೋ ಆ ದೇವತೆಗೆ ಅಂತಹ ವಿದ್ಯೆಯಲ್ಲಿ ಅಧಿಕಾರವಿಲ್ಲ. ಇದು ಜೈಮಿನಿಯ ಮತ.

**2. ಜ್ಯೋತಿಷಿ ಭಾವಾಚ್ಚ-** 'ತಂ ದೇವಾ ಜ್ಯೋತಿಷಾಂಜ್ಯೋತಿಃ ಆಯುರ್ಹೋಪಾಸತೇ ಅಮೃತಂ' (ಬೃ.6.4.16) ಎಂದು ದೇವತೆಗಳಿಗೆ ಜ್ಯೋತಿಃ ಶಬ್ದವಾಚ್ಯನಾದ ಬ್ರಹ್ಮನ ಉಪಾಸನೆಯನ್ನು ಹೇಳಿರುವುದರಿಂದ ಇತರ ವಿದ್ಯೆಗಳಲ್ಲಿ ಅವರಿಗೆ ಅಧಿಕಾರವಿಲ್ಲ.

**3. ಭಾವಂ ತು ಬಾದರಾಯಣೋಽಸ್ತಿ ಹಿ** - ಬಾದರಾಯಣರು ಮಾತ್ರ, ಮಧುವಿದ್ಯೆಯಂತಹ ವಿದ್ಯೆಗಳಲ್ಲೂ ಆಯಾಯ ದೇವತೆಗಳಿಗೂ ಅಧಿಕಾರವಿದೆ. ಅವರಿಗೆ ಈಗ ದೇವತಾಪದ ಪ್ರಾಪ್ತಿಯಾಗಿದ್ದರೂ ಜನ್ಮಾಂತರದಲ್ಲಿ ದೇವತಾಪದವಿಯ ಪ್ರಾಪ್ತಿಗಾಗಿ ಮಧುವಿದ್ಯೋಪಾಸನೆಯ ಅಗತ್ಯವಿದೆ. ಆದಿತ್ಯನು ತನ್ನನ್ನು ತಾನು ಉಪಾಸನೆ ಮಾಡಲಾಗದಿದ್ದರೂ ತನ್ನಲ್ಲಿರುವ ಬ್ರಹ್ಮನನ್ನು ಉಪಾಸನೆ ಮಾಡಬಹುದಾದ್ದರಿಂದ ಅವನಿಗೂ ಅದರಲ್ಲಿ ಅಧಿಕಾರವಿದೆ, ಎಂದು ಹೇಳುತ್ತಾರೆ.

ಜನ್ಮಾಂತರೇ ವಸುತ್ವಸ್ಯ ಪ್ರಾಪ್ತ್ಯರ್ಥಂ ಸ್ವತನೋರ್ಭವೇತ್ ।
ಪರಸ್ಯೋಪಾಸನಂ ತೇಷಾಂ ಬಾದರಾಯಣ ಆಹ ಹಿ ॥

**ಇಲ್ಲಿಗೆ ರಾಮಾನುಜ ಭಾಷ್ಯದಲ್ಲಿ ಮಧ್ವಧಿಕರಣ ಮುಗಿಯಿತು.**

## ರಾಮಾನುಜಭಾಷ್ಯದಲ್ಲಿ
## ಅಪಶೂದ್ರಾಧಿಕರಣ -10

**1. ಶುಗಸ್ಯ ತದನಾದರ ಶ್ರವಣಾತ್ ತದಾದ್ರವಣಾತ್ ಸೂಚ್ಯತೇ ಹಿ** - ಯಜ್ಞಾದಿ ಕರ್ಮಗಳು ಅಗ್ನಿವಿದ್ಯೆ ಇದ್ದವರಿಗೆ ಮಾತ್ರ. ಶೂದ್ರನಿಗೆ ಅಗ್ನಿ ಇಲ್ಲ. ಹೀಗಾಗಿ ಅಗ್ನಿಸಾಧ್ಯಕರ್ಮದಲ್ಲಿ ಅವನಿಗೆ ಅಧಿಕಾರವಿಲ್ಲ. ಆದರೆ ಉಪಾಸನೆ ಮಾನಸ ಕ್ರಿಯೆ. ಶೂದ್ರನೂ ಇತಿಹಾಸ ಪುರಾಣಗಳನ್ನು ಕೇಳಿ ಬ್ರಹ್ಮಸ್ವರೂಪವನ್ನು ತಿಳಿದು ಉಪಾಸನೆಯನ್ನು ಮಾಡಬಹುದು. ಅಲ್ಲದೆ ಜಾನಶ್ರುತಿಯು ರೈಕ್ವನಿಗೆ ಸಂವರ್ಗವಿದ್ಯೆಯನ್ನು ಉಪದೇಶಿಸಿರುವ ವಿಷಯ ಉಪನಿಷತ್ತಿನಲ್ಲಿದೆ. ಆದ್ದರಿಂದ ಶೂದ್ರನಿಗೂ ಬ್ರಹ್ಮನ ಉಪಾಸನೆಯಲ್ಲಿ ಅಧಿಕಾರವಿದೆ, ಎಂದು ಪೂರ್ವಪಕ್ಷ.

ಶೂದ್ರನಿಗೆ ಸ್ವಾಧ್ಯಾಯಾಧ್ಯಯನದಿಂದ ಬಂದ ಜ್ಞಾನವಿಲ್ಲದಿರುವುದರಿಂದ ಅಂತಹ ಜ್ಞಾನದಿಂದಲೇ ಸಾಧ್ಯವಾದ ಬ್ರಹ್ಮೋಪಾಸನೆಯಲ್ಲಿ ಅಧಿಕಾರವಿಲ್ಲ. ಇತಿಹಾಸ ಪುರಾಣಗಳು ವೇದಗಳ ಅರ್ಥವನ್ನು ತಿಳಿಯಲು ಸಹಕಾರವನ್ನಷ್ಟೇ ಮಾಡುತ್ತವೆ. ಅವುಗಳಿಂದಲೇ ಬ್ರಹ್ಮಜ್ಞಾನ ಬರಲಾರದು. ಹೀಗಾಗಿ ಅವುಗಳ ಶ್ರವಣದಿಂದ ಶೂದ್ರನಿಗೆ ಪಾಪನಾಶವಷ್ಟೇ ಆಗುತ್ತದೆ. ಬ್ರಹ್ಮಜ್ಞಾನ ಬರುವುದಿಲ್ಲ.

ಜಾನಶ್ರುತಿ ಶೂದ್ರನಲ್ಲ. 'ಶೋಚತಿ ಇತಿ ಶೂದ್ರಃ' । ಶೋಕನಿಮಿತ್ತದಿಂದ ಅವನನ್ನು ಶೂದ್ರ ಎನ್ನಲಾಗಿದೆ.

ದ್ವೈತಾದ್ವೈತ ಭಾಷ್ಯಗಳಲ್ಲಿ ಅಖಂಡವಾದ ಮುಂದಿನ ಸೂತ್ರವನ್ನು ರಾಮಾನುಜಭಾಷ್ಯದಲ್ಲಿ ವಿಭಾಗ ಮಾಡಿ ಎರಡನ್ನಾಗಿ ಪರಿಗಣಿಸಲಾಗಿದೆ. 'ಕ್ಷತ್ರಿಯತ್ವಾವಗತೇಶ್ಚ' ಎಂದು ಒಂದು ಸೂತ್ರ. 'ಉತ್ತರತ್ರ ಚೈತ್ರರಥೇನ ಲಿಂಗಾತ್' ಎಂದು ಇನ್ನೊಂದು ಸೂತ್ರ. ಮೊದಲ ಸೂತ್ರದ ಅರ್ಥ-ಜಾನಶ್ರುತಿ ಪೌತ್ರಾಯಣನು 'ಬಹುದಾಯೀ-ದಾನಮಾಡುವವನು' 'ಬಹುಪಾಕ್ಯಃ' 'ಸರ್ವತ ಏವ ಮೇ ಅನ್ನಂ ಅತ್ಸ್ಯಂತಿ' ಎಂದು ಅನ್ನದಾನ ಕರ್ತೃ ಎಂದು ಮುಂತಾಗಿ ಉಪನಿಷತ್ತು ಹೇಳುವುದರಿಂದ ಅವನು ಕ್ಷತ್ರಿಯನೆಂದು ತಿಳಿಯುತ್ತದೆ.

ಎರಡನೆಯ ಸೂತ್ರಕ್ಕೆ ಅರ್ಥ - ಶತಪಥ ಬ್ರಾಹ್ಮಣದಲ್ಲಿ ಚೈತ್ರರಥ ಕ್ಷತ್ರಿಯನೆಂದು ಹೇಳಿದೆ. ಅವನ ಪುರೋಹಿತ ಕಾಪೇಯ ಬ್ರಾಹ್ಮಣ ಎಂದು ತಾಂಡ್ಯ ಬ್ರಾಹ್ಮಣದಲ್ಲಿದೆ. ಅಂತಹ ಕಾಪೇಯ ಬ್ರಾಹ್ಮಣನಿಗೆ ಅಭಿಪ್ರತಾರಿಯೊಂದಿಗೆ ಸಂಬಂಧವನ್ನು ಛಾಂದೋಗ್ಯದ ಈ ಪ್ರಕರಣದಲ್ಲಿ ಹೇಳಲಾಗಿದೆ. ಇದರಿಂದ ಅಭಿಪ್ರತಾರಿಯೂ ಚೈತ್ರರಥನೂ (ಚಿತ್ರರಥನ ಮಗ) ಒಬ್ಬರೆ. ಹೀಗೆ ಈ ಸಂವರ್ಗವಿದ್ಯೆಯ ಸಂಬಂಧವನ್ನು ಅಭಿಪ್ರತಾರಿ ಕ್ಷತ್ರಿಯನಿಗೆ ಹೇಳಿರುವುದರಿಂದ ಅದೇ ವಿದ್ಯೆಯ ಸಂಬಂಧ ಪಡೆದ ಜಾನಶ್ರುತಿಯೂ ಕ್ಷತ್ರಿಯ. ಸೂತ್ರದಲ್ಲಿರುವ 'ಉತ್ತರತ್ರ ಚೈತ್ರರಥೇನ' ಎಂಬ ಭಾಗ ಜಾನಶ್ರುತಿಯು ಕ್ಷತ್ರಿಯ ಎಂದು ಸಾಧಿಸುತ್ತದೆ. 'ಲಿಂಗಾತ್' ಎಂಬ ಭಾಗ ಅಭಿಪ್ರತಾರಿ ಚೈತ್ರರಥ ಕ್ಷತ್ರಿಯ ಎನ್ನುತ್ತದೆ.

ಶಾಂಕರಭಾಷ್ಯಕ್ಕಿಂತ ಈ ಭಾಷ್ಯದಲ್ಲಿ ಸೂಕ್ಷ್ಮವಾದ ಒಂದು ವ್ಯತ್ಯಾಸವಿದೆ. ಶಾಂಕರಭಾಷ್ಯದಲ್ಲಿ ತಾಂಡ್ಯ ಬ್ರಾಹ್ಮಣದ ಪಾಠ 'ಏತೇನ ವೈ ಚಿತ್ರರಥಂ ಕಾಪೇಯಾ ಅಯಾಜಯನ್' ಕಾಪೇಯನು ಯಾಗ ಮಾಡಿಸಿರುವುದು ಚಿತ್ರರಥನಿಂದ. ಅಭಿಪ್ರಾತರಿಗೂ ಅವನೇ ಪುರೋಹಿತನಾದುದರಿಂದ ಅಭಿಪ್ರತಾರಿ ಚೈತ್ರರಥನಾಗಿರಬೇಕು ಎಂದು ಊಹೆ. ರಾಮಾನುಜಭಾಷ್ಯದಲ್ಲಿ 'ಏತೇನ ವೈ ಚೈತ್ರರಥಂ' ಎಂದೇ ಬ್ರಾಹ್ಮಣಪಾಠ. ಆ ಚೈತ್ರರಥ ಅಭಿಪ್ರತಾರಿ. ಏಕೆಂದರೆ, ಅಭಿಪ್ರತಾರಿಯ ಪುರೋಹಿತನೂ ಚೈತ್ರರಥನ ಪುರೋಹಿತನೂ ಒಬ್ಬನೆ. ಹೀಗೆ ಶಾಂಕರ-ರಾಮಾನುಜ ಭಾಷ್ಯದಲ್ಲಿ ವ್ಯತ್ಯಾಸವಿದೆ.

ಈ ಭಾಷ್ಯದಲ್ಲಿ 'ಚೈತ್ರರಥೇನ ಲಿಂಗಾತ್ ಪೌತ್ರಾಯಣಃ ಕ್ಷತ್ರಿಯಃ' 'ಚೈತ್ರರಥ- ಚಿತ್ರ ಎಂಬ ಹೆಸರಿನ ರಥ- ಅದರ ಒಡೆತನವಿರುವುದರಿಂದ ಜಾನಶ್ರುತಿ ಕ್ಷತ್ರಿಯ ಎಂದು ಭಾವ. ಕೊನೆಯ ಸೂತ್ರವನ್ನೂ ವಿಭಾಗ ಮಾಡಿ, 'ಶ್ರವಣಾಧ್ಯಯನಾರ್ಥ- ಪ್ರತಿಷೇಧಾತ್' ಮತ್ತು 'ಸ್ಮೃತೇಶ್ಚ' ಎಂದು ಎರಡು ಸೂತ್ರಗಳನ್ನಾಗಿ ಪರಿಗಣಿಸಲಾಗಿದೆ.

## ಚಂದ್ರಿಕಾದಲ್ಲಿ ಮಾಡಿರುವ ವಿಮರ್ಶೆ

ಈ ಅಧಿಕರಣದಲ್ಲಿ ವೇದದಲ್ಲಿ ಅಧಿಕಾರವಿದೆಯೇ ಇಲ್ಲವೇ ಎಂಬುದನ್ನು ವಿಚಾರ ಮಾಡುವುದೇ ಸೂತ್ರಕಾರರಿಗೆ ಸಮ್ಮತವಾಗಿದೆ. 'ಸಂಸ್ಕಾರ ಪರಾಮರ್ಶಾತ್' ಎಂಬ ಮೂರನೆಯ ಸೂತ್ರದಿಂದ ಈ ಅಂಶ ಸ್ಪಷ್ಟವಾಗುತ್ತದೆ. ಹಾಗಿರುವಾಗ ಪುರಾಣದಿಂದ ಜನ್ಯವಾದ ಜ್ಞಾನ ಸಫಲವೋ ನಿಷ್ಫಲವೋ ಎಂಬ ವಿಚಾರ ಅಪ್ರಸ್ತುತ. ಅದೂ ಅಲ್ಲದೆ ಪುರಾಣಗಳು ವೇದಾರ್ಥಜ್ಞಾನಕ್ಕೆ ಸಾಧನವಾದುದರಿಂದ ಅವುಗಳಿಂದ ಜ್ಞಾನ ಬರದೇ ಹೋದರೂ ಭಾಷಾಂತರ ಮಾಡಿರುವ ಪ್ರಬಂಧಗಳಿಂದ ಬ್ರಹ್ಮಜ್ಞಾನ ಬರಲು ಸಾಧ್ಯವಿದೆ. ಅಲ್ಲದೆ, ಪುರಾಣಗಳು ಸ್ವತಂತ್ರವಾಗಿ ಜ್ಞಾನ ಸಾಧನವಲ್ಲ ಎನ್ನುವುದೂ ಸರಿಯಲ್ಲ.

ಸ್ತ್ರೀ ಶೂದ್ರಬ್ರಹ್ಮಬಂಧೂನಾಂ ತ್ರಯೀ ನ ಶ್ರುತಿಗೋಚರಾ ।
ಇತಿ ಭಾರತಮಾಖ್ಯಾನಂ ಕೃಪಯಾ ಮುನಿನಾ ಕೃತಮ್ ॥

ಎಂದು ವೇದವ್ಯಾಸರೇ ವೇದದಲ್ಲಿ ಅಧಿಕಾರವಿಲ್ಲದವರಿಗೆ ಮಹಾಭಾರತದ ರಚನೆಯನ್ನು ಮಾಡಲಾಗಿದೆ ಎಂದು ಹೇಳಿದ್ದಾರೆ.

ಪುರಾಣ ಶ್ರವಣದಿಂದ ಪಾಪಕ್ಷಯವೇ ಫಲ ಎಂದು ಹೇಳುವುದೂ ಸರಿಯಲ್ಲ. ಜ್ಞಾನವು ದೃಷ್ಟಫಲವಾಗಿರುವಾಗ ಅದೃಷ್ಟ ಫಲವನ್ನು ಕಲ್ಪಿಸಬಾರದು. ವಿಷ್ಣುಸಹಸ್ರನಾಮದ ಫಲಶ್ರುತಿಯಲ್ಲಿ 'ಯ ಇದಂ ಶ್ರುಣುಯಾತ್' ಎಂದು ಹೇಳಿ 'ಶೂದ್ರಃ ಸುಖಮವಾಪ್ನುಯಾತ್' ಎಂದು ಶೂದ್ರನಿಗೂ ಸುಖರೂಪ ಫಲವನ್ನು ನಿರೂಪಿಸಲಾಗಿದೆ. ಆದ್ದರಿಂದ ವೇದವಿದ್ಯೆಗೆ ಮಾತ್ರ ಈ ಅಧಿಕರಣವನ್ನು ಸೀಮಿತಗೊಳಿಸಬೇಕು.

**॥ ಇಲ್ಲಿಗೆ ಅಪಶೂದ್ರಾಧಿಕರಣ ಮುಗಿಯಿತು ॥**

# ಕಂಪನಾಧಿಕರಣ - 10

**ಯದಿದಂ ಕಿಂಚ ಜಗತ್ ಸರ್ವಂ ಪ್ರಾಣ ಏಜತಿ ನಿಃಸೃತಮ್ ।**
**ಮಹದ್ಭಯಂ ವಜ್ರಮುದ್ಯತಂ ಯ ಏತದ್ವಿದುರಮೃತಾಸ್ತೇ ಭವಂತಿ ॥**

**(ಕ.ಉ.2.3.2)**

ಇತಿ ಉದ್ಯತವಜ್ರಜ್ಞಾನಾತ್ ಮೋಕ್ಷಃ ಪ್ರತೀಯತೇ। ಇತ್ಯತೋಽಬ್ರವೀತ್-

ಓಂ॥ ಕಂಪನಾತ್ ॥ ಓಂ

ಏಜತೀತಿ ಕಂಪನವಚನಾತ್ ಉದ್ಯತವಜ್ರೋ ಭಗವಾನೇವ।

ಕೋ ಹ್ಯೇವಾನ್ಯಾತ್ ಕಃ ಪ್ರಾಣ್ಯಾತ್ ಯದೇಷ ಆಕಾಶ
ಆನಂದೋ ನ ಸ್ಯಾತ್ (ತೈ.ಉ.2.7)
ಪ್ರಾಣಸ್ಯ ಪ್ರಾಣಂ ಉತ ಚಕ್ಷುಷಶ್ಚಕ್ಷುಃ (ಬೃ.ಉ.6.4.18)

ಇತಿ ಚ।

ನಭಸ್ವತೋಽಪಿ ಸರ್ವಾಃ ಸ್ಯುಃ ಚೇಷ್ಟಾ ಭಗವತೋ ಹರೇಃ।
ಕಿಮುತಾನ್ಯಸ್ಯ ಜಗತೋ ಯಸ್ಯ ಚೇಷ್ಟಾ ನಭಸ್ವತಃ॥

ಇತಿ ಚ ಸ್ಕಾಂದೇ।

ಚಕ್ರಂ ಚಂಕ್ರಮಣಾದೇಷಃ ವರ್ಜನಾದ್ ವಜ್ರಮುಚ್ಯತೇ।
ಖಂಡನಾತ್ ಖಡ್ಗ ಏವೈಷಃ ಹೇತಿನಾಮಾ ಸ್ವಯಂ ಹರಿಃ॥

ಇತಿ ಬ್ರಹ್ಮವೈವರ್ತೇ॥ 39 ॥

॥ ಇತಿ ಕಂಪನಾಧಿಕರಣಮ್ ॥

'ಈ ಎಲ್ಲ ಜಗತ್ತು ಯಾವನಿಂದ ಸೃಷ್ಟಿಗೊಂಡಿತೋ ಅಂತಹ ಪ್ರಾಣನಿಗೂ ನಿಯಾಮಕವಾಗಿ ಮಹಾಭಯಂಕರವಾದುದು ಉದ್ಯತವಾದ ವಜ್ರ. ಇದನ್ನು ತಿಳಿದವರು ಮುಕ್ತರಾಗುತ್ತಾರೆ'. ಈ ಶ್ರುತಿಯಲ್ಲಿ ಉದ್ಯತವಾದ ವಜ್ರದ ಜ್ಞಾನದಿಂದ ಮೋಕ್ಷವೆಂದು ತಿಳಿಯುತ್ತದೆ. ಅದಕ್ಕಾಗಿ ಸೂತ್ರಕಾರರು 'ಕಂಪನಾತ್' ಎಂಬ ಸೂತ್ರವನ್ನು ಹೇಳಿರುವರು.

ಈ ಶ್ರುತಿಯಲ್ಲಿ 'ಏಜತಿ' ಎಂದು ಜಗತ್ತಿನ ಕಂಪನಕ್ಕೆ (ಕ್ರಿಯಾಶೀಲತೆಗೆ) ಕಾರಣವಾಗಿ ಹೇಳಲ್ಪಟ್ಟ ಉದ್ಯತವಜ್ರ ವಿಷ್ಣು. 'ಕೋ ಹ್ಯೇವಾನ್ಯಾತ್' ಎಂಬ ತೈತ್ತಿರೀಯ ಶ್ರುತಿಯಲ್ಲಿ ವಿಷ್ಣುವೆ ಜಗತ್ತಿನ ಪ್ರೇರಕನೆಂದು ಹೇಳಲಾಗಿದೆ. 'ಪ್ರಾಣಸ್ಯ ಪ್ರಾಣಂ' ಎಂಬ ಬೃಹದಾರಣ್ಯಕ ಶ್ರುತಿಯೂ ವಿಷ್ಣುವು ಪ್ರಾಣನಿಗೂ ಪ್ರೇರಕ ಎನ್ನುತ್ತದೆ. ಸ್ಕಾಂದದಲ್ಲಿ ಹೀಗಿದೆ- 'ಯಾವ ವಾಯುವಿನ ಕ್ರಿಯೆಯಿಂದಾಗಿ ಈ ಜಗತ್ತು ಕ್ರಿಯಾಶೀಲವಾಗಿದೆಯೋ ಅಂತಹ ವಾಯುದೇವನ ಕ್ರಿಯೆಯೂ ಪರಮಾತ್ಮನಿಂದಾಗಿ ನಡೆಯುತ್ತದೆ. ಅಂದಮೇಲೆ ಇತರರ ಕ್ರಿಯೆಗಳು ಅವನ ಅಧೀನವೆಂದು ಹೇಳಬೇಕೆ?'' ಬ್ರಹ್ಮವೈವರ್ತದಲ್ಲೂ ಹೀಗಿದೆ- ''ಶ್ರೀಹರಿಯು ಜೀವರನ್ನು ಸಂಸಾರದಲ್ಲಿ ಚಕ್ರದಂತೆ ತಿರುಗಿಸುವುದರಿಂದ ಚಕ್ರ. (ಚಂಕ್ರಾಮಯತೀತಿ ಚಕ್ರಂ). ದೋಷದೂರನಾದುದರಿಂದ ವಜ್ರ, ದುಷ್ಟನಿರಾಸಕನಾದುದರಿಂದ ಖಡ್ಗ. ಹೀಗೆ ಆಯುಧಗಳ ಹೆಸರುಗಳಿಂದ ವಾಚ್ಯನಾದವನು ಸ್ವಯಂ ಶ್ರೀಹರಿ''

**ವಿವರಣೆ : 1.** ಈ ಅಧಿಕರಣದಲ್ಲಿ 'ವಜ್ರ' ಎಂಬ ನಾಮಾತ್ಮಕ ಶಬ್ದದ ಸಮನ್ವಯವನ್ನು ಮಾಡಲಾಗಿದೆ. ಅದು ವಜ್ರಾಯುಧದ ಪ್ರಸಿದ್ಧವಾದ ನಾಮ. ಅದರ ಜ್ಞಾನವೇ ಮೋಕ್ಷಕಾರಣ ಎಂದು ಹೇಳಿರುವುದರಿಂದ ಅದು ವಿಷ್ಣುವಿಗೂ ವಾಚಕವಾಗಬಹುದು. ಹೀಗೆ ಉಭಯತ್ರ ಪ್ರಸಿದ್ಧವಾದುದು ವಜ್ರಶಬ್ದ. ಅದು ವಜ್ರಾಯುಧ ವಾಚಕ ಎಂದು ಪೂರ್ವಪಕ್ಷ. ಅದಕ್ಕೆ ಆಧಾರ ಶ್ರುತಿ ಲಿಂಗಗಳು. ವಜ್ರಶಬ್ದ ವಜ್ರಾಯುಧದ ರೂಢನಾಮ 'ಉದ್ಯತಂ=ಎತ್ತಲ್ಪಟ್ಟದ್ದು' ಎಂಬ ಶ್ರುತಿಯಲ್ಲಿ ಹೇಳಲ್ಪಟ್ಟ ಲಿಂಗವೂ ಅದಕ್ಕೆ ಅನ್ವಯಿಸುತ್ತದೆ. ಇನ್ನು ವಿಷ್ಣು ವಜ್ರ ಎನ್ನಲು ಮೋಕ್ಷ ಕಾರಣವಾದ ಜ್ಞಾನಕ್ಕೆ ವಿಷಯ ಎಂಬ ಲಿಂಗ ಆಧಾರ. ಕೇವಲ ಲಿಂಗಕ್ಕಿಂತ ಶ್ರುತಿಲಿಂಗಗಳು ಪ್ರಬಲಗಳಾದುದರಿಂದ ವಜ್ರಾಯುಧವೇ ವಜ್ರ. ಆದ್ದರಿಂದ ಮೋಕ್ಷಕಾರಣತ್ವ ಎಂಬ ವಿಷ್ಣುವಿನ ಲಕ್ಷಣಕ್ಕೆ ಅದರಲ್ಲಿ ಅತಿವ್ಯಾಪ್ತಿ, ಇದು ಪೂರ್ವಪಕ್ಷದ ಫಲ.

**2.** ಈ ಶ್ರುತಿಯಲ್ಲಿ 'ಪ್ರಾಣೇ ಏಜತಿ' ಎಂದು ವಜ್ರವು ಜಗತ್ತಿನ ಕಂಪನಕ್ಕೆ ಕ್ರಿಯಾಶೀಲತೆಗೆ ಕಾರಣ ಎಂದು ಹೇಳಲಾಗಿದೆ. ಅದು ವಿಷ್ಣುವಿನ ಅಸಾಧಾರಣ ಲಿಂಗ. ಪೂರ್ವಪಕ್ಷದ ಶ್ರುತಿಲಿಂಗಗಳು ವಿಷ್ಣುವಿನಲ್ಲಿ ಸಾವಕಾಶ. 'ಉದ್ಯತ' ಎಂಬ ಶಬ್ದ ಉತ್ ಉಪಸರ್ಗ ಸೇರಿ ಪ್ರಯತ್ನಾರ್ಥಕ 'ಯತ್' ಧಾತುವಿನಿಂದ ನಿಷ್ಪನ್ನವಾಗಿದೆ. ಪ್ರಯತ್ನ ಶೀಲನೆಂದರ್ಥ. ಅದು ವಿಷ್ಣುವಿಗೂ ಅನ್ವಯಿಸುತ್ತದೆ. 'ವರ್ಜನಾತ್ ವಜ್ರಃ' ಎಂಬ ಯೌಗಿಕ ವೃತ್ತಿ, ವಿದ್ವದ್ರೂಢಿಗಳಿಂದ 'ವಜ್ರ' ನಾಮವೂ ವಿಷ್ಣುವಿಗೆ ಸಂಗತವಾಗಿದೆ. ಆದ್ದರಿಂದ ವಿಷ್ಣುವೇ ವಜ್ರ, ಎಂದು ಸಿದ್ಧಾಂತ.

**3.** 'ಸರ್ವಂ ಜಗತ್ ಪ್ರಾಣೇ ಸ್ಥಿತಂ ಸತ್ ಪ್ರಾಣಾತ್ ನಿಃಸೃತಂ ಸತ್ ಯಸ್ಮಾದೇಜತಿ=ಯತ್ಪ್ರೇರಣಯಾ ಚೇಷ್ಟತೇ ತತ್ ಮಹದ್ಭಯಂ ವಜ್ರಂ' ಎಂದು ವಿಷಯವಾಕ್ಯದ ಅರ್ಥವನ್ನು ಟೀಕಾದಲ್ಲಿ ಬಿಡಿಸಲಾಗಿದೆ. 'ಪ್ರಾಣೇ' ಎಂದು ಸಪ್ತಮ್ಯಂತ ಪದ. ಪ್ರಾಣನಿಂದ ಸೃಷ್ಟಿಯಾದ, ಪ್ರಾಣನಲ್ಲಿ ಇರುವ ಈ ಜಗತ್ತು ಯಾರ ಪ್ರೇರಣೆಯಿಂದಾಗಿ ಕ್ರಿಯಾಶೀಲವಾಗಿದೆಯೋ ಅಂತಹ ವಜ್ರ, ಎಂದು ಅರ್ಥ. ಅಥವಾ 'ಸರ್ವಂ ಜಗತ್ ಯಸ್ಮಾತ್ ನಿಃಸೃತಂ ಸ ಪ್ರಾಣಃ ಯಸ್ಮಾತ್ ಚೇಷ್ಟತೇ ಇತಿ ವಾ' ಈ ಜಗತ್ತಿಗೆ ಕಾರಣನಾದ ಪ್ರಾಣನೂ ಯಾರಿಂದಾಗಿ ಕ್ರಿಯಾಶೀಲನೋ ಅಂತಹ ವಜ್ರ' ಎಂದೂ ಅರ್ಥವಾಗಬಹುದು.

ಈ ಶ್ರುತಿಯಲ್ಲಿ ಪ್ರಾಣಚೇಷ್ಟಕತ್ವವನ್ನಷ್ಟೇ ಹೇಳಿದ್ದರೂ ಆ ಪ್ರಾಣನು ಜಗಚ್ಚೇಷ್ಟಕನಾದುದರಿಂದ ಸರ್ವಚೇಷ್ಟಕತ್ವವನ್ನೇ ವಿಷ್ಣುವಿಗೆ ಹೇಳಿದಂತಾಯಿತು.

**4.** ಕಾಠಕಭಾಷ್ಯದಲ್ಲಿ 'ವಜ್ರದಂತೆ ಭಯಂಕರ' ಎಂಬ ಅರ್ಥದಲ್ಲಿ ವಜ್ರಶಬ್ದವನ್ನು ಗೌಣವಾಗಿ ವಿಷ್ಣುವಿನಲ್ಲಿ ಸಮನ್ವಯ ಮಾಡಲಾಗಿದೆ. ಇಲ್ಲಿ ಮುಖ್ಯ ವೃತ್ತಿಯಿಂದಲೆ ಸಮನ್ವಯವನ್ನು ತೋರಿಸಲಾಗಿದೆ.

## ದ್ವೈತದರ್ಶನದಲ್ಲಿ ಸೂತ್ರದ ಅರ್ಥ

**ಓಂ ॥ ಕಂಪನಾತ್ ॥ ಓಂ**

'ಮಹದ್ಭಯಂ ವಜ್ರಂ' ಎಂದು ಕಾಠಕದಲ್ಲಿ ಹೇಳಿರುವ ವಜ್ರಶಬ್ದದಿಂದ ವಾಚ್ಯನಾದವನು ವಿಷ್ಣು. ಏಕೆಂದರೆ ಕಂಪನಾತ್='ಜಗತ್ ಸರ್ವಂ ಪ್ರಾಣ ಏಜತಿ ನಿಃಸೃತಂ' ಎಂದು ಜಗಚ್ಚೇಷ್ಟಕತ್ವವನ್ನು ಹೇಳಲಾಗಿದೆ. ಅದು ವಿಷ್ಣುವಿಗೆ ಸಾಧ್ಯ, ವಜ್ರಾಯುಧದಲ್ಲಿ ಅಸಂಭಾವಿತ.

(ಅತ್ರ ವಜ್ರನಾಮ ಸಮನ್ವೀಯತೇ। ಯೋಗ್ಯತಯಾ ವಜ್ರ ಇತಿ ಅನ್ವೇತಿ । ತತ್ತು ಇತ್ಯಸ್ತಿ । 'ಮಹದ್ಭಯಂ ವಜ್ರಮುದ್ಯತಂ' ಇತ್ಯುಕ್ತವಜ್ರೋ ಬ್ರಹ್ಮೈವ । ನ ತು ಇಂದ್ರಾಯುಧಮ್ । ಕಂಪನಾತ್='ಜಗತ್ ಸರ್ವಂ ಪ್ರಾಣ ಏಜತಿ' ಇತಿ ಕಂಪನ ವಚನಾತ್ । ಜಗಚ್ಚೇಷ್ಟಕತ್ವಲಿಂಗಾತ್ ಇತ್ಯರ್ಥಃ।)

## ಶಾಂಕರಭಾಷ್ಯದಲ್ಲಿ ಹೇಳಿರುವ ಸೂತ್ರದ ಅರ್ಥ

ಕಾಠಕದ 'ಯದಿದಂ ಕಿಂಚ ಜಗತ್ ಸರ್ವಂ ಪ್ರಾಣ ಏಜತಿ ನಿಃಸೃತಂ ॥' ಎಂಬ ಮಂತ್ರದಲ್ಲಿ ಹೇಳಲಾದುದು ಪ್ರಾಣವಾಯು. ಅವನು ಐದು ರೂಪಗಳಿಂದ ಜಗತ್ತಿನ ಚೇತನವರ್ಗವನ್ನು ಕ್ರಿಯಾಶೀಲಗೊಳಿಸುತ್ತಾನೆಂಬುದು ಪ್ರಸಿದ್ಧ. ಅವನೇ ಮೋಡವಾಗಿ ಗುಡುಗು-ಮಿಂಚಿನ ರೂಪವನ್ನು ತಾಳಿ ವಜ್ರಾಯುಧದಂತೆ ಜಗತ್ತಿಗೆ ಭಯವನ್ನೂ ಒಡ್ಡುತ್ತಾನೆ. ಹೀಗಾಗಿ 'ಮಹದ್ಭಯಂ ವಜ್ರಮುದ್ಯತಂ' ಎಂಬ ಅಂಶವೂ ಅವನಿಗೆ ಹೊಂದುತ್ತದೆ. ಆದ್ದರಿಂದ ಪ್ರಾಣ ವಾಯುವೇ ಈ ಮಂತ್ರಪ್ರತಿಪಾದ್ಯ ಎಂದು ಪೂರ್ವಪಕ್ಷ. ಈ ಮಂತ್ರದ ಹಿಂದಿನ ಮಂತ್ರ ಹೀಗಿದೆ.

ತದೇವ ಶುಕ್ರಂ ತದ್ ಬ್ರಹ್ಮ ತದೇವಾಮೃತಮುಚ್ಯತೇ। (2.6.1)

ಇಲ್ಲಿ ಬ್ರಹ್ಮನ ಉಲ್ಲೇಖವಿದೆ. ಮುಂದಿನ ಮಂತ್ರ-

ಭಯಾದಸ್ಯಾಗ್ನಿಸ್ತಪತಿ ಭಯಾತ್ತಪತಿ ಸೂರ್ಯಃ॥ (2.6.3)

ಎಂದು ಬ್ರಹ್ಮನ ಲಿಂಗವನ್ನು ಹೇಳಲಾಗಿದೆ. 'ಭೀಷಾಸ್ಮಾದ್ವಾತಃ ಪವತೇ' ಎಂದು ಇಂತಹ ಧರ್ಮ ಬ್ರಹ್ಮನ ಗುಣ. ಆದ್ದರಿಂದ ಇವೆರಡು ಮಂತ್ರಗಳ ಮಧ್ಯದಲ್ಲಿರುವ ಪ್ರಾಣವಾಚಕ ಮಂತ್ರದಲ್ಲಿ ಹೇಳಲ್ಪಟ್ಟ ಪ್ರಾಣನೂ ಬ್ರಹ್ಮನೆ. ಸೂತ್ರದಲ್ಲಿ ಹೇಳಿರುವಂತೆ ಕಂಪನವೂ (ಪ್ರಾಣೇ ಏಜತಿ) ಬ್ರಹ್ಮನ ಧರ್ಮ. 'ಪ್ರಾಣಸ್ಯ ಪ್ರಾಣಂ' ಎಂದು ಇದೇ ಉಪನಿಷತ್ತು ಬ್ರಹ್ಮನಿಗೂ ಜಗಚ್ಚೇಷ್ಟಕತ್ವವನ್ನು ಹೇಳುತ್ತದೆ. ವಜ್ರಾಯುಧಕ್ಕೆ ಹೆದರುವಂತೆ ಅವನಿಗೆ ಹೆದರಿ ವಾಯು, ಸೂರ್ಯ, ಅಗ್ನಿಗಳು ತಮ್ಮ ಕಾರ್ಯವನ್ನು ಮಾಡುತ್ತಾರೆ. ಆದ್ದರಿಂದ ಅವನೇ ವಜ್ರ.

## ಚಂದ್ರಿಕಾದಲ್ಲಿ ಮಾಡಿರುವ ವಿಮರ್ಶೆ

ಈ ಸೂತ್ರದಲ್ಲಿ 'ವಜ್ರ' ಶಬ್ದದ ಸಮನ್ವಯ ಎಂದು ಆಚಾರ್ಯರ ಅಭಿಪ್ರಾಯ. ಪ್ರಾಣ ಶಬ್ದ ಸಮನ್ವಯ ಎಂದು ಶಾಂಕರಭಾಷ್ಯದ ಅಭಿಪ್ರಾಯ. ಸೂತ್ರದಲ್ಲಿ 'ಕಂಪನಾತ್' ಎಂದಿದೆ. ಕಂಪನಕ್ಕೆ=ಭಯಕ್ಕೆ ಕಾರಣವಾದುದು ವಜ್ರ ಎಂದು 'ಮಹದ್ಭಯಂ ವಜ್ರಮುದ್ಯತಂ' ಎಂಬ ಮಂತ್ರ ಹೇಳುತ್ತದೆ. ಹೀಗೆ ಸೂತ್ರ ಹೇಳಿದ ಸಿದ್ಧಾಂತ ಯುಕ್ತಿ ವಜ್ರಕ್ಕೆ ಅನ್ವಯಿಸುವುದರಿಂದ ಆ ಶಬ್ದದ ಸಮನ್ವಯವೇ ಸೂತ್ರಕಾರರಿಗೆ ಸಮ್ಮತವಾಗಿದೆ. ಪ್ರಾಣ ಶಬ್ದವನ್ನು ಪ್ರಥಮ ಪಾದದಲ್ಲೇ ಸಮನ್ವಯ ಮಾಡಲಾಗಿದೆಯಾದ್ದರಿಂದ ಅದರ ಪ್ರಸ್ತಾವ ಮತ್ತೆ ಅನಾವಶ್ಯಕ.

## ರಾಮಾನುಜ ಭಾಷ್ಯದಲ್ಲಿ ಹೇಳಿರುವ ಸೂತ್ರಗಳ ಅರ್ಥ

ರಾಮಾನುಜಭಾಷ್ಯರೀತ್ಯಾ ಈ ಅಧಿಕರಣದಲ್ಲಿ ಎರಡು ಸೂತ್ರಗಳು. ಅಲ್ಲದೆ ಇದು ಹಿಂದಿನ ಪ್ರಮಿತಾಧಿಕರಣದ (ಶಬ್ದಾದೇವ ಪ್ರಮಿತಃ) ಶೇಷ. ಮಧ್ಯದಲ್ಲಿ ವೇದವಿದ್ಯಾಧಿಕಾರವನ್ನು ನಿರ್ಣಯಿಸಿ ಮತ್ತೆ ಅಂಗುಷ್ಠಮಾತ್ರನಾದ ಪುರುಷ ಬ್ರಹ್ಮ ಎನ್ನಲು 'ಕಂಪನಾತ್' ಎಂಬ ಮತ್ತೊಂದು ಕಾರಣವನ್ನು ಈ ಸೂತ್ರದಲ್ಲಿ ಹೇಳಲಾಗಿದೆ.

'ಅಂಗುಷ್ಠಮಾತ್ರಃ ಪುರುಷಃ...ಈಶಾನೋ ಭೂತಭವ್ಯಸ್ಯ' (4.12) ಹೀಗೆ ಪ್ರಮಿತಾಧಿಕರಣಕ್ಕೆ ವಿಷಯವಾಕ್ಯವಾದ ಕಾಠಕದ ಈ ಮಂತ್ರ ಮತ್ತು

ಅಂಗುಷ್ಠಮಾತ್ರಃ ಪುರುಷೋಽಂತರಾತ್ಮಾ ॥ (6-17)

ಎಂಬ ವಾಕ್ಯಗಳ ನಡುವೆ

ಯದಿದಂ ಕಿಂ ಚ ಜಗತ್ ಸರ್ವಂ ಪ್ರಾಣ ಏಜತಿ ನಿಃಸೃತಂ॥ (6.2)

ಎಂಬ ವಾಕ್ಯವಿದೆ. ಇದರಲ್ಲಿ ಅಂಗುಷ್ಠಪರಿಮಿತಿಯ ಪುರುಷನನ್ನು ಪ್ರಾಣ ಎಂದು ಕರೆದು ಅಂತಹ ಪ್ರಾಣನಿಂದ ಹೆದರಿ ಈ ಜಗತ್ತು ಕಂಪಿಸುತ್ತದೆ, ಎನ್ನಲಾಗಿದೆ. ಇದು ಬ್ರಹ್ಮನ ಧರ್ಮ. ಆದ್ದರಿಂದ ಅಂಗುಷ್ಠಪರಿಮಿತಿಯ ಪುರುಷ ಬ್ರಹ್ಮ.

ಅಂಗುಷ್ಠ ಪ್ರಮಿತ ಪ್ರಾಣ ಪದಾರ್ಥಬ್ರಹ್ಮಜಾದ್ ಭಯಾತ್ ।
ಸರ್ವೇ ದೇವಾ ಜಾಗರೂಕಾ ಇತಿ ಶ್ರುತ್ಯಾ ಪರಃ ಸ ಹಿ ॥

**2. ಜ್ಯೋತಿರ್ದರ್ಶನಾತ್** - ಅಂಗುಷ್ಠಪ್ರಮಿತನಾದ ಪುರುಷನನ್ನು ಹೇಳುವ ವಾಕ್ಯಗಳೆರಡರ ಮಧ್ಯದಲ್ಲಿ-

ನ ತತ್ರ ಸೂರ್ಯೋ ಭಾತಿ ಸ ಚಂದ್ರತಾರಕಂ
ನೇಮಾ ವಿದ್ಯುತೋ ಭಾಂತಿ ಕುತೋಽಯಮಗ್ನಿಃ ।
ತಮೇವ ಭಾಂತಂ ಅನುಭಾತಿ ಸರ್ವಂ
ತಸ್ಯ ಭಾಸಾ ಸರ್ವಮಿದಂ ವಿಭಾತಿ ॥

ಎಂಬ ಮಂತ್ರವಿದೆ. ಇದರಲ್ಲಿ ಅಂಗುಷ್ಠಮಾತ್ರ ಪ್ರಮಿತ ಪುರುಷನ ಜ್ಯೋತಿಯ ಮಹತ್ವವನ್ನು ಹೇಳಲಾಗಿದೆ. 'ತಂ ದೇವಾಃ ಜ್ಯೋತಿಷಾಂ ಜ್ಯೋತಿರಾಯುರ್ಹೋಽಪಾಸತೇ ಅಮೃತಮ್' ಎಂದು ಉಪನಿಷತ್ತುಗಳು ಇಂತಹ ಅದ್ಭುತ ಸಾಮರ್ಥ್ಯದ ಜ್ಯೋತಿ ಪರಬ್ರಹ್ಮನೆಂದು ಹೇಳುತ್ತವೆ. ಆದ್ದರಿಂದ ಅಂಗುಷ್ಠಪರಿಮಿತಿಯ ಪುರುಷ ಪರಬ್ರಹ್ಮ.

## ಚಂದ್ರಿಕಾದಲ್ಲಿ ಮಾಡಿರುವ ವಿಮರ್ಶೆ

ಇದು ವಾಮನಾಧಿಕರಣದ (ಪ್ರಮಿತಾಧಿಕರಣ) ಶೇಷವಾಗಿದ್ದಿದ್ದರೆ ಅದರ ಜೊತೆಯಲ್ಲೇ ಹೇಳಬೇಕಾಗಿತ್ತು. ಅಲ್ಲದೆ, ಅಂಗುಷ್ಠ ಪ್ರಮಿತ ಪುರುಷನನ್ನು ಉಲ್ಲೇಖಿಸುವ ಎರಡು ವಾಕ್ಯಗಳ ಮಧ್ಯದಲ್ಲಿ

'ಊರ್ಧ್ವಮೂಲೋಽವಾರ್ಕ್ ಶಾಖಃ ಏಷೋಽಶ್ವತ್ಥಃ ಸನಾತನಃ ॥'

ಎಂಬ ವಾಕ್ಯವಿದೆ. ಇದು ಪ್ರಪಂಚವನ್ನು ಕುರಿತು ಹೇಳುವ ವಾಕ್ಯವೆಂದು ಸಮ್ಮತವಾಗಿದೆ. ಅದರಂತೆ 'ಮಹದ್ಭಯಂ ವಜ್ರಮುದ್ಯತಂ' ಎಂಬ ವಾಕ್ಯದಲ್ಲಿ 'ವಜ್ರ' ಶಬ್ದವಿರುವುದರಿಂದ ಅದೂ ಇತರ ಪರವಾದ ವಾಕ್ಯವೇ ಏಕಾಗಿರಬಾರದು. ಅಲ್ಲಿ ಹೇಳಿದ ಧರ್ಮ ಬ್ರಹ್ಮನದೇ ಎಂದು ನಿರ್ಣಯ ಮಾಡುವುದು ಹೇಗೆ?

**ಇಲ್ಲಿಗೆ ಕಂಪನಾಧಿಕರಣ ಮುಗಿಯಿತು.**

# ಜ್ಯೋತಿರಧಿಕರಣ - 11

**ಹೃದಯ ಆಹಿತಂ ಜ್ಯೋತಿಃ ಪರಮಾತ್ಮೇತ್ಯುಕ್ತಮ್ । ತತ್ರ,**

**'ಯೋಽಯಂ ವಿಜ್ಞಾನಮಯಃ ಪ್ರಾಣೇಷು ಹೃದ್ಯಂತರ್ಜ್ಯೋತಿಃ ಪುರುಷಃ'**

**(ಬೃ 6.3.7) ಇತಿ ।**

**ಅತ್ರ 'ಉಭೌ ಲೋಕೌ ಅನು ಸಂಚರತಿ' ಇತಿ ವಚನಾತ್ ಜೀವ ಇತಿ ಪ್ರತೀಯತೇ ಇತಿ । ಅತ ಉಚ್ಯತೇ**

**ಓಂ ॥ ಜ್ಯೋತಿರ್ದರ್ಶನಾತ್ ॥ ಓಂ**

'ವಿಷ್ಣುರೇವ ಜ್ಯೋತಿಃ ವಿಷ್ಣುರೇವಾತ್ಮಾ ವಿಷ್ಣುರೇವ ಬ್ರಹ್ಮ

ವಿಷ್ಣುರೇವ ಬಲಂ ವಿಷ್ಣುರೇವ ಯಶಃ ವಿಷ್ಣುರೇವಾನಂದಃ'

**ಇತಿ ದರ್ಶನಾತ್ ಚತುರ್ವೇದಶಿಖಾಯಾಮ್, ಜ್ಯೋತಿರ್ವಿಷ್ಣುರೇವ।**

**ಪ್ರಾಜ್ಞೇನಾತ್ಮನಾ ಅನ್ವಾರೂಢಃ ಉತ್ಸರ್ಜದ್ಯಾತಿ (ಬೃ6.3.35)**

**ಇತಿ ವಚನಾತ್ ತಸ್ಯಾಪಿ ಲೋಕಸಂಚರಣಂ ಅಸ್ತ್ಯೇವ ॥ 40 ॥**

ಹಿಂದೆ ಜ್ಯೋತಿರಧಿಕರಣದಲ್ಲಿ (1.1.24) ಹೃದಯಗತ ಜ್ಯೋತಿ ಪರಮಾತ್ಮ ಎನ್ನಲಾಗಿದೆ. ಅಂತಹ ಜ್ಯೋತಿಯ ಬಗ್ಗೆ 'ಇಂದ್ರಿಯ (ಪ್ರಾಣೇಷು) ಮತ್ತು ಹೃದಯಗಳಲ್ಲಿರುವ ವಿಜ್ಞಾನಮಯನಾದ ಜ್ಯೋತಿ ಪುರುಷ' ಎಂದು ಬೃಹದಾರಣ್ಯಕೋಪನಿಷತ್ತಿನಲ್ಲಿ ಹೇಳಲಾಗಿದೆ. ಈ ಜ್ಯೋತಿಯನ್ನು 'ಭೂಲೋಕ ಸ್ವರ್ಗಲೋಕಗಳಲ್ಲಿ ಸಂಚರಿಸುತ್ತದೆ' ಎಂದು ಉಲ್ಲೇಖಿಸಿರುವುದರಿಂದ ಅಂತಹ ಜ್ಯೋತಿ ಜೀವಾತ್ಮನೆಂದು ತಿಳಿಯುತ್ತದೆ. ಅದರ ನಿರಾಸಕ್ಕಾಗಿ, ಈ ಸೂತ್ರವಿದೆ. ಚತುರ್ವೇದ ಶಿಖೆಯಲ್ಲಿ 'ವಿಷ್ಣುವೇ ಜ್ಯೋತಿ, ವಿಷ್ಣುವೇ ಆತ್ಮ, ವಿಷ್ಣುವೇ ಬ್ರಹ್ಮ, ವಿಷ್ಣುವೇ ಬಲ, ವಿಷ್ಣುವೇ ಯಶಸ್ಸು, ವಿಷ್ಣುವೇ ಆನಂದ' ಎಂದಿರುವುದರಿಂದ ಇಲ್ಲಿ ಹೇಳಿದ ಜ್ಯೋತಿಯೂ ವಿಷ್ಣುವೇ ಆಗಿದ್ದಾನೆ. 'ಜೀವನು ಮರಣಕಾಲದಲ್ಲಿ ಪರಮಾತ್ಮನಿಂದ ಅಧಿಷ್ಠಿತನಾಗಿ ಈ ದೇಹವನ್ನು ಬಿಟ್ಟು ಲೋಕಾಂತರಕ್ಕೆ ಹೋಗುತ್ತಾನೆ' ಎಂದು ಹೇಳಿರುವುದರಿಂದ ಪರಮಾತ್ಮನಿಗೂ ಲೋಕಾಂತರ ಸಂಚಾರವಿದೆ.

**ವಿವರಣೆ : 1.** ಈ ಅಧಿಕರಣದಲ್ಲಿ ಜ್ಯೋತಿಃ ಶಬ್ದವನ್ನು ಸಮನ್ವಯ ಮಾಡಲಾಗಿದೆ. ಜ್ಯೋತಿಃ ಶಬ್ದಕ್ಕೆ ಜ್ಞಾನವು ಪ್ರವೃತ್ತಿನಿಮಿತ್ತವೆಂದು ಪರಿಗಣಿಸಿದಾಗ ಜ್ಞಾನರೂಪನಾದ ಜೀವ ಹಾಗೂ ಪರಮಾತ್ಮನಿಗೆ ಅದು ವಾಚಕವಾಗುತ್ತದೆ. ಹೀಗಾಗಿ ಆ ಶಬ್ದ ಉಭಯತ್ರ ಪ್ರಸಿದ್ಧವೆನಿಸಿದೆ. ಈ ಅಧಿಕರಣಕ್ಕೆ ಜ್ಯೋತಿರಧಿಕರಣದೊಂದಿಗೆ ಆಕ್ಷೇಪಿಕೀ ಸಂಗತಿ.

ಈ ಜ್ಯೋತಿ ಜೀವ ಎಂದು ಪೂರ್ವಪಕ್ಷ. ಹಿಂದೆ, ಅಗ್ನಿಸೂಕ್ತದಲ್ಲಿ ಹೇಳಿರುವ ಜ್ಯೋತಿ ವಿಷ್ಣುವಾದರೂ ವಾಜಸನೇಯ ಶಾಖೆಯಲ್ಲಿ ಹೇಳಿದ ಈ ಜ್ಯೋತಿ ವಿಷ್ಣುವಲ್ಲ. ಏಕೆಂದರೆ, ಇಲ್ಲಿ ಜ್ಯೋತಿಯು ಸ್ವರ್ಗ ಭೂಮಿ ಅಥವಾ ಸ್ವಪ್ನ ನಿದ್ರೆ ಹೀಗೆ ಕರ್ಮಾನುಗುಣವಾಗಿ ಅನೇಕ ಕಡೆಗಳಲ್ಲಿ ಸಂಚಿಸುತ್ತದೆ ಎನ್ನಲಾಗಿದೆ. ಇದು ಪರಮಾತ್ಮನಿಗೆ ಅನ್ವಯಿಸುವುದಿಲ್ಲ.

ಈ ವಾಕ್ಯ ಜನಕ ಯಾಜ್ಞವಲ್ಕ್ಯರ ಸಂವಾದದಲ್ಲಿ ಬರುತ್ತದೆ. ಜನಕ 'ಕಿಂ ಜ್ಯೋತಿರಯಂ ಪುರುಷಃ- ಎಚ್ಚರದಲ್ಲಿ ಈ ಪುರುಷನ ಜ್ಞಾನಕ್ಕೆ ಸಾಧನ ಯಾವುದು?' ಎಂದು ಪ್ರಶ್ನೆ ಮಾಡಿದಾಗ 'ಆದಿತ್ಯಜ್ಯೋತಿರಯಂ ಸಮ್ರಾಟ್-ಸೂರ್ಯನೇ ಪುರುಷನ ಜ್ಞಾನಕ್ಕೆ ಸಾಧನ' ಎಂದು ಯಾಜ್ಞವಲ್ಕ್ಯರು ಉತ್ತರ ನೀಡುತ್ತಾರೆ. ಹೀಗೆ ಪ್ರಶ್ನೋತ್ತರಗಳು ನಡೆಯುತ್ತಾ 'ಆದಿತ್ಯ ಚಂದ್ರ ಅಗ್ನಿ ಮಾತು' ಇವುಗಳಲ್ಲಿ ಒಂದೊಂದೂ ಇಲ್ಲವಾದಾಗ ನಿದ್ರಾವಸ್ಥೆಯಲ್ಲಿ 'ಕಿಂ ಜ್ಯೋತಿರಯಂ ಪುರುಷಃ' ಎಂದು ಜನಕ ಪ್ರಶ್ನಿಸುತ್ತಾನೆ. ಆಗ ಯಾಜ್ಞವಲ್ಕ್ಯರು 'ಆತ್ಮೈವಾಸ್ಯ ಜ್ಯೋತಿರ್ಭವತಿ' ಎಂದು ಉತ್ತರಿಸುತ್ತಾರೆ. 'ಕತಮ ಆತ್ಮಾ- ಆ

ಆತ್ಮ ಎಂತಹವನು' ಎಂಬ ಪ್ರಶ್ನೆಗೆ 'ಯೋऽಯಂ ವಿಜ್ಞಾನಮಯಃ' ಎಂದು ಮುಂತಾಗಿ ಯಾಜ್ಞವಲ್ಕ್ಯರು ಉತ್ತರಿಸಿದ್ದಾರೆ. ಯಾಜ್ಞವಲ್ಕ್ಯರ ಪ್ರಾರಂಭದ ಉತ್ತರದಲ್ಲಿ ಪ್ರಸ್ತುತವಾದ ಪುರುಷ ಜೀವ. ಏಕೆಂದರೆ, ಅವನ ಜ್ಞಾನಕ್ಕೆ ಮಾತ್ರ ಸೂರ್ಯನ ಅಗತ್ಯವಿದೆ. ಅಂದಮೇಲೆ, ಅವನನ್ನೇ 'ಯೋऽಯಂ' ಎಂದು ಮುಂದಿನ ವಾಕ್ಯದಲ್ಲಿ ಪರಾಮರ್ಶೆ ಮಾಡಬೇಕು. ಆದ್ದರಿಂದಲೂ ಈ ವಿಷಯವಾಕ್ಯದಲ್ಲಿ ಪ್ರಸ್ತುತನಾದ ಜ್ಯೋತಿ ಜೀವಾತ್ಮ ಎಂದು ಪೂರ್ವಪಕ್ಷ.

2. ಉಪನಿಷತ್ತುಗಳಲ್ಲಿ ಹೇಳಿರುವ 'ನಾರಾಯಣ ಪರೋ ಜ್ಯೋತಿಃ' 'ಪರಂ ಜ್ಯೋತಿರುಪಸಂಪದ್ಯ' ಹಾಗೂ ಭಾಷ್ಯದಲ್ಲಿ ಉದಾಹರಿಸಿರುವ ಮಂತ್ರ ಇವುಗಳಿಂದ ಜ್ಯೋತಿಃಶಬ್ದ ಮುಖ್ಯವಾಗಿ ವಿಷ್ಣುವಾಚಕ ಎಂದು ತಿಳಿಯುತ್ತದೆ. ಆದ್ದರಿಂದ ವಾಜಸನೇಯ ಶಾಖೆಯಲ್ಲೂ 'ಹೃದ್ಯಂತಃ ಜ್ಯೋತಿಃ' ಎಂಬ ಉಪಕ್ರಮ, 'ಸ್ವಯಂಜ್ಯೋತಿಃ' ಎಂಬ ಉಪಸಂಹಾರ ವಾಕ್ಯ, 'ಸ್ವಪಿತಿ ಅತ್ರಾಯಂ ಪುರುಷಃ ಸ್ವಯಂ ಜ್ಯೋತಿಃ' ಎಂಬ ಮಧ್ಯದ ವಾಕ್ಯಗಳಲ್ಲೂ ಜ್ಯೋತಿಃಶಬ್ದ ಪರಮಾತ್ಮವಾಚಕ. ಆದ್ದರಿಂದ ಅದರೊಂದಿಗೆ ಬರುವ ಎಲ್ಲ ಲಿಂಗಗಳನ್ನೂ ಪರಮಾತ್ಮನಲ್ಲೇ ಸಮನ್ವಯ ಮಾಡಬೇಕು, ಎಂದು ಸಿದ್ಧಾಂತ. ಸೂತ್ರದಲ್ಲಿ ದರ್ಶನಾತ್ ಎಂದರೆ ಶ್ರುತಿಯಲ್ಲಿರುವುದರಿಂದ ಎಂದು ಅರ್ಥ.

**3. ಶ್ರುತ್ಯರ್ಥ - ಅ.** 'ಯೋऽಯಂ ವಿಜ್ಞಾನಮಯಃ

ಪ್ರಾಣೇಷು ಹೃದ್ಯಂತಃ ಜ್ಯೋತಿಃ ಪುರುಷಃ ॥

ಯಃ= ಯಾವ ಅಯಂ= ಈ ವಿಜ್ಞಾನಮಯಃ= ವಿಜ್ಞಾನಪೂರ್ಣನಾದ ಪ್ರಾಣೇಷು= ಇಂದ್ರಿಯಗಳಲ್ಲಿ ಹೃದಿ ಅಂತಃ= ಹೃದಯದೊಳಗೂ ನಿಯಾಮಕನಾಗಿರುವ ಜ್ಯೋತಿಃ= ಜೀವನಿಗೆ ಬುದ್ಧಿ ಪ್ರಚೋದಕನಾದ ಪುರುಷಃ= ಪೂರ್ಣ ಷಡ್ಗುಣನೋ ಸಃ= ಅವನೇ ಆತ್ಮಾ= ಪರಮಾತ್ಮ.

**ಆ.** ಚತುರ್ವೇದಶಿಖಾ ವಾಕ್ಯದಲ್ಲಿ 'ಬಲಂ ವಿಷ್ಣುಃ' ಎಂದರೆ 'ಸ ವೈ ಬಲಂ ಬಲಿನಾಂ ಚಾಪರೇಷಾಂ' ಎಂದು ಭಾಗವತದಲ್ಲಿ ಹೇಳಿರುವಂತೆ ಬಲಪ್ರದನಾದುದರಿಂದ ಪರಮಾತ್ಮ ಬಲ ಎನಿಸಿದ್ದಾನೆ, ಎಂದು ಅರ್ಥ.

'ವಿಷ್ಣುರೇವ ಯಶಃ' ಎನ್ನುವುದನ್ನು ಮಹಾನಾರಾಯಣನೋಪನಿಷತ್ತೂ ಹೇಳಿದೆ - 'ತಸ್ಯನಾಮ ಮಹದ್ಯಶಃ' (1-10) ಇದನ್ನು ತತ್ತ್ವಪ್ರದೀಪದಲ್ಲಿ ಹೇಳಲಾಗಿದೆ. ॥ 40 ॥

## ದ್ವೈತದರ್ಶನದಲ್ಲಿ ಸೂತ್ರಗಳ ಅರ್ಥ

**1. ಓಂ ॥ ಜ್ಯೋತಿಃ ದರ್ಶನಾತ್ ॥ ಓಂ**

'ಹೃದ್ಯಂತಜ್ಯೋರ್ತಿಃ' ಎಂದು ಬೃಹದಾರಣ್ಯಕದಲ್ಲಿ ಹೇಳಿರುವ ಜ್ಯೋತಿ ವಿಷ್ಣು. ಏಕೆಂದರೆ, ದರ್ಶನಾತ್='ವಿಷ್ಣುರೇವ ಜ್ಯೋತಿಃ' ಎಂದು ಶ್ರುತಿ ಇದೆ, ಆದ್ದರಿಂದ.

('ಯೋऽಯಂ ವಿಜ್ಞಾನಮಯಃ ಪ್ರಾಣೇಷು ಹೃದ್ಯಂತಃ ಜ್ಯೋತಿಃ' ಇತ್ಯುಕ್ತಂ

ಜ್ಯೋತಿಃ ಬ್ರಹ್ಮೈವ। ನ ತು ಜೀವಃ। ಕುತಃ ? ದರ್ಶನಾತ್='ವಿಷ್ಣುರೇವ ಜ್ಯೋತಿಃ' ಇತಿ ಶ್ರುತೇರಿತ್ಯರ್ಥಃ।)

## ಶಾಂಕರಭಾಷ್ಯದಲ್ಲಿ ಹೇಳಿರುವ ಸೂತ್ರಾರ್ಥ

'ಪರಂ ಜ್ಯೋತಿರುಪಸಂಪದ್ಯ' ಎಂದು ಛಾಂದೋಗ್ಯ ಶ್ರುತಿಯಲ್ಲಿ ಜ್ಯೋತಿಃ ಶಬ್ದದಿಂದ ಪ್ರಸಿದ್ಧವಾದ ಸೂರ್ಯಜ್ಯೋತಿಯೇ ಪ್ರತಿಪಾದ್ಯ. ಏಕೆಂದರೆ, ಇಲ್ಲಿಯೇ ನಾಡೀಪ್ರಕರಣದಲ್ಲಿ

ಅಥ ಯತ್ರೈತತ್ ಅಸ್ಮಾತ್ ಶರೀರಾತ್ ಉತ್ಕ್ರಾಮತಿ

ಅಥ ಏತೈರೇವ ರಶ್ಮಿಭಿಃ ಊರ್ಧ್ವಂ ಉತ್ಕ್ರಾಮತೇ'

ಎಂದು ಜೀವನಿಗೆ ಮರಣಾನಂತರ ಸೂರ್ಯರಶ್ಮಿಯ ಮೂಲಕ ಸೂರ್ಯಪ್ರಾಪ್ತಿಯು ಹೇಳಲ್ಪಟ್ಟಿದೆ. ಆದ್ದರಿಂದ 'ಪರಂ ಜ್ಯೋತಿಃ' ಎಂದಿರುವ ಜ್ಯೋತಿ ಸೂರ್ಯ ಎಂದು ಪೂರ್ವಪಕ್ಷ.

ಈ ಪ್ರಕರಣದಲ್ಲಿ ಪ್ರತಿಪಾದ್ಯನಾಗಿ ಪ್ರಸ್ತುತನಾದವನು ಬ್ರಹ್ಮ ಎಂದು 'ಯ ಆತ್ಮಾ ಅಪಹತಪಾಪ್ಮಾ' ಎಂಬ ಆರಂಭದ ಮಂತ್ರದಿಂದ ತಿಳಿಯುತ್ತದೆ. ಆದ್ದರಿಂದ ಈ ಪ್ರಕರಣದಲ್ಲಿ ಬ್ರಹ್ಮನೇ ಜ್ಯೋತಿ. ಸೂರ್ಯಪ್ರಾಪ್ತಿ ಆತ್ಯಂತಿಕಮೋಕ್ಷವಲ್ಲ. ಗತಿ- ಉತ್ಕ್ರಾಂತಿಗಳಿಂದ ಸಿಗುವ ಸ್ಥಾನ ಸೂರ್ಯಲೋಕವಾದುದರಿಂದ ಅದು ಗೌಣಮುಕ್ತಿ. ಪ್ರಕೃತ ಜ್ಯೋತಿ ರೂಪವನ್ನು ಪಡೆದವರನ್ನು 'ಅಶರೀರಂ ವಾವ ಸಂತಂ' ಎಂದಿರುವುದರಿಂದ ಇದು ಆತ್ಯಂತಿಕಮೋಕ್ಷವೆಂದು ತಿಳಿಯುತ್ತದೆ. ಅದು ಬ್ರಹ್ಮರೂಪವಾದುದರಿಂದ ಅಂತಹ ವಾಕ್ಯದಲ್ಲಿ ಪ್ರಾಪ್ಯವಾಗಿ ಹೇಳಲ್ಪಟ್ಟ ಜ್ಯೋತಿ ಪರಬ್ರಹ್ಮ.

## ಚಂದ್ರಿಕಾದಲ್ಲಿ ಮಾಡಿರುವ ವಿಮರ್ಶೆ

ಅದ್ವೈತ ದರ್ಶನದಲ್ಲಿ ಆತ್ಯಂತಿಕ ಮೋಕ್ಷವೆಂದರೆ ನಿರ್ಗುಣ ಬ್ರಹ್ಮಭಾವ. ಆದರೆ ಇಲ್ಲಿ 'ಪರಂ ಜ್ಯೋತಿಃ' ಎಂಬ ವಿಷಯ ವಾಕ್ಯದ ಮೊದಲೂ 'ಯ ಆತ್ಮಾ ಅಪಹತಪಾಪ್ಮಾ' ಎಂದು ಆರಂಭಿಸಿ 'ಸತ್ಯಕಾಮಃ ಸತ್ಯಸಂಕಲ್ಪಃ...' ಎಂದು ಮುಂತಾಗಿ ಸಗುಣಬ್ರಹ್ಮನ ನಿರೂಪಣೆ ಇದೆ. ಅನಂತರವೂ 'ಸ ತತ್ರ ಪರ್ಯೇತಿ ಜಕ್ಷನ್ ಕ್ರೀಡನ್ ರಮಮಾಣಃ' ಎಂದು ಸಗುಣಮೋಕ್ಷದ ಪ್ರಸ್ತಾವ ಇದೆ. ಆದ್ದರಿಂದ ಇಲ್ಲಿ ಹೇಳಿರುವುದು ನಿರ್ಗುಣ ಮುಕ್ತಿಯಾಗಲಾರದು.

ರಾಮಾನುಜದರ್ಶನದಲ್ಲಿ ಈ ಸೂತ್ರ ಪ್ರಮಿತಾಧಿಕರಣದಲ್ಲಿ ಸೇರಿದೆ. 'ಜ್ಯೋತಿರ್ದರ್ಶನಾತ್' ಎಂಬ ಸಮಗ್ರ ಸೂತ್ರ 'ಅಂಗುಷ್ಠಮಾತ್ರ ಪುರುಷ' ಬ್ರಹ್ಮನೆಂದು ಸಾಧಿಸಲು ಹೇತುವನ್ನು ಹೇಳುತ್ತದೆ. ಕಾಠಕದಲ್ಲಿ ಅಂಗುಷ್ಠ ಪ್ರಮಿತ ಪುರುಷನ ಜ್ಯೋತಿಯು

' ನ ತತ್ರ ಸೂರ್ಯೋ ಭಾತಿ' ಎಂದು ಮುಂತಾಗಿ ಸರ್ವತೇಜೋಭಿಭಾವಕ ಎನ್ನಲಾಗಿದೆ. ಅಂತಹ ಜ್ಯೋತಿ ಪರಬ್ರಹ್ಮನೆಂದು 'ಪರಂ ಜ್ಯೋತಿಃ ಉಪಸಂಪದ್ಯ' ಮುಂತಾದ ಉಪನಿಷತ್ತುಗಳು ತಿಳಿಸುತ್ತವೆ. ಆದರೆ, ಹಿಂದಿನ ಸೂತ್ರಗಳಂತೆ ಈ ಸೂತ್ರದಲ್ಲಿ 'ಜ್ಯೋತಿಃ ಬ್ರಹ್ಮ । ದರ್ಶನಾತ್' ಎಂದೇ ಸ್ಪಷ್ಟವಿರುವಾಗ ಹೇತುಮಾತ್ರ ಪರವಾಗಿ ಇದನ್ನು ವ್ಯಾಖ್ಯಾನಿಸುವುದು ಸರಿಯಲ್ಲ.

**॥ ಇಲ್ಲಿಗೆ ಜ್ಯೋತಿರಧಿಕರಣ ಮುಗಿಯಿತು ॥**

## ಆಕಾಶಾಧಿಕರಣ - 12

**ಸರ್ವಾಧಾರತ್ವಂ ವಿಷ್ಣೋರುಕ್ತಮ್ । ತಚ್ಚ**

**ಆಕಾಶೋ ವೈ ನಾಮ ನಾಮರೂಪಯೋಃ ನಿರ್ವಹಿತಾ (ಛಾ.8.14.1)**

**ಇತ್ಯತ್ರ ಆಕಾಶಸ್ಯ ಪ್ರತೀಯತೇ 'ವೈ ನಾಮ' ಇತಿ ಪ್ರಸಿದ್ಧೋಪದೇಶಾತ್ ಪ್ರಸಿದ್ಧಾಕಾಶಶ್ಚ ಅಂಗೀಕರ್ತವ್ಯಃ ಇತಿ । ಅತ ಉಚ್ಯತೇ-**

**ಓಂ ॥ ಆಕಾಶೋ ಅರ್ಥಾಂತರತ್ವಾದಿವ್ಯಪದೇಶಾತ್ ॥ ಓಂ**

**'ತೇ ಯದಂತರಾ ತದ್ ಬ್ರಹ್ಮ' (ಛಾಂ.8.14.1) ಇತಿ ಅರ್ಥಾಂತರತ್ವಾದಿ ವ್ಯಪದೇಶಾತ್ ಆಕಾಶೋ ಹರಿರೇವ । 'ಅವರ್ಣಂ' 'ಯತೋ ವಾಚೋ ನಿವರ್ತಂತೇ' ಇತ್ಯಾದಿಶ್ರುತೇಃ ತಸ್ಯೈವ ಹಿ ತಲ್ಲಕ್ಷಣಮ್ ।**

**ಅನಾಮಾ ಸೋಽಪ್ರಸಿದ್ಧತ್ವಾತ್ ಅರೂಪೋ ಭೂತವರ್ಜನಾತ್ ।**

**ಇತಿ ಬ್ರಾಹ್ಮೇ ॥ 41 ॥**

**॥ ಇತಿ ಆಕಾಶಾಧಿಕರಣಮ್ ॥**

ದ್ಯುಭ್ವಾದಿ ಅಧಿಕರಣದಲ್ಲಿ ಆಕಾಶಾದಿ ಸರ್ವಾಧಾರನಾದವನು ವಿಷ್ಣು ಎನ್ನಲಾಗಿದೆ. ಆ ಸರ್ವಾಧಾರತ್ವವು 'ಪ್ರಸಿದ್ಧವಾದ ಆಕಾಶವೇ ನಾಮ ಮತ್ತು ರೂಪ ಪ್ರಪಂಚಕ್ಕೆ ನಿರ್ವಾಹಕ' ಎಂದು ಛಾಂದೋಗ್ಯ ವಾಕ್ಯದಲ್ಲಿ ಆಕಾಶಕ್ಕೆ ತಿಳಿದುಬರುತ್ತಿದೆ. ಆ ಶ್ರುತಿಯಲ್ಲಿ 'ವೈ ನಾಮ' ಎಂಬ ಎರಡು ಅವ್ಯಯಗಳಿಂದ ಪ್ರಸಿದ್ಧವಾದುದು ಎಂದಿರುವುದರಿಂದ, ಲೋಕಪ್ರಸಿದ್ಧವಾದ ಆಕಾಶವೇ ಆ ಮಂತ್ರದಿಂದ ಪ್ರತಿಪಾದ್ಯವೆಂದು ಹೇಳಬೇಕು. ಅದಕ್ಕಾಗಿ ಸೂತ್ರಕಾರರು ಈ ಸೂತ್ರವನ್ನು ಹೇಳಿದ್ದಾರೆ.

'ನಾಮರೂಪ ರಹಿತವಾದುದು ಯಾವುದೋ ಅದೇ ಬ್ರಹ್ಮ' ಎಂದು ಲೋಕವಿಲಕ್ಷಣವಾದ ತತ್ತ್ವವನ್ನಾಗಿಯೂ ಬ್ರಹ್ಮನನ್ನಾಗಿಯೂ ಆಕಾಶವನ್ನು

ಹೇಳಿರುವುದರಿಂದ ಇಲ್ಲಿ ಹೇಳಿರುವ ಆಕಾಶ ಶ್ರೀಹರಿ. 'ಅವರ್ಣಂ ಅಚಕ್ಷುಃಶ್ರೋತ್ರಂ' ಎಂಬ ಆಥರ್ವಣಶ್ರುತಿ 'ಯತೋ ವಾಚೋ ನಿವರ್ತಂತೇ' ಎಂಬ ತೈತ್ತಿರೀಯ ಶ್ರುತಿ ಈ ಮೊದಲಾದ ಶ್ರುತಿಗಳಿರುವುದರಿಂದ ನಾಮರೂಪರಹಿತನಾಗಿ ಲೋಕವಿಲಕ್ಷಣ ನಾಗಿರುವುದು ಅವನದೇ ಲಕ್ಷಣ. ಬ್ರಾಹ್ಮಪುರಾಣದಲ್ಲಿ ಹೀಗಿದೆ- ಶ್ರೀಹರಿಯು ಲೋಕಪ್ರಸಿದ್ಧನಲ್ಲದ ಕಾರಣ ನಾಮವಾಚ್ಯನಾದರೂ ನಾಮರಹಿತ. ಭೌತಿಕ ದೇಹ ರಹಿತನಾದುದರಿಂದ ಆಕಾರ ರಹಿತ.

**ವಿವರಣೆ : 1.** ಆಕಾಶ ಶಬ್ದ ಭೂತಾಕಾಶದಲ್ಲೂ ವಿಷ್ಣುವಿನಲ್ಲೂ ಪ್ರಸಿದ್ಧವಾದುದರಿಂದ ಉಭಯತ್ರ ಪ್ರಸಿದ್ಧ ಶಬ್ದ. ಹಿಂದಿನ ಆಕಾಶಾಧಿಕರಣದಲ್ಲಿ (1.1-22) ಲೋಕಾಧಾರವಾಗಿ ಹೇಳಿರುವುದರಿಂದ ಆಕಾಶ ವಿಷ್ಣುವಾದರೂ ಪ್ರಕೃತ ವಿಷಯವಾಕ್ಯದಲ್ಲಿ ವಿಷ್ಣು ಎಂದು ಹೇಳಲಾಗದು.

ಆಕಾಶೋ ವೈ ನಾಮ ನಾಮರೂಪಯೋಃ ನಿರ್ವಹಿತಾ

ತೇ ಯದಂತರಾ ತದ್ ಬ್ರಹ್ಮ, ತದಮೃತಮ್ ॥

ಎಂದು ಪ್ರಕೃತ ವಿಷಯವಾಕ್ಯ. ಇಲ್ಲಿರುವ 'ವೈ ನಾಮ' ಎಂಬ ಎರಡು ಅವ್ಯಯಗಳು ಪ್ರಸಿದ್ಧ ಎಂಬ ಅರ್ಥವನ್ನು ಹೇಳುತ್ತವೆ. ಆಕಾಶವು ಪ್ರಸಿದ್ಧ, ಅದು ನಾಮರೂಪ ಪ್ರಪಂಚಕ್ಕೆ ನಿರ್ವಾಹಕ ಎಂಬುದೂ ಪ್ರಸಿದ್ಧ ಎಂದು ಅದರ ಭಾವ. ಆಕಾಶತತ್ತ್ವ ಪಂಚಭೂತಗಳಲ್ಲಿ ಒಂದಾದುದರಿಂದ ಪ್ರಾಪಂಚಿಕ ವಸ್ತುಗಳೆಲ್ಲ ಅದರ ವಿಕಾರಗಳು. ಹೀಗೆ ಅದು ರೂಪಪ್ರಪಂಚಕ್ಕೂ ನಾಮಪ್ರಪಂಚಕ್ಕೂ ನಿರ್ವಾಹಕ. ಈ ಎರಡು ನಿರವಕಾಶ ಲಿಂಗಗಳಿಂದ ಆಕಾಶಪದ ಭೂತಾಕಾಶವಾಚಕ ಎಂದು ಪೂರ್ವಪಕ್ಷ.

ಇಲ್ಲಿ ಆಕಾಶವೆಂದರೆ ಭೂತಾಕಾಶವೋ ಅಥವಾ ಅವ್ಯಾಕೃತಾಕಾಶವೋ ಎಂಬ ಬಗ್ಗೆ ವಿವಾದವಿದೆ. ಸತ್ತರ್ಕದೀಪಾವಲಿಯಲ್ಲಿ ಪದ್ಮನಾಭತೀರ್ಥರು 'ನ ವಿಷ್ಣುಃ ಕಿಂತು ಭೂತಾಕಾಶ ಏವ' ಎಂದು ಸ್ಪಷ್ಟವಾಗಿ ಹೇಳಿದ್ದಾರೆ. ತತ್ತ್ವಪ್ರಕಾಶಿಕಾದ ಕೊನೆಯ ವಾಕ್ಯವೂ - 'ಅವಕಾಶಸ್ಯಾಪಿ ನಾಮರೂಪವತ್ವಾತ್' ಎಂದಿದೆ. ಟೀಕೆಯ ಈ ಪಾಠವೇ ಚಂದ್ರಿಕಾ ಸಮ್ಮತವಾದುದು. ಹೀಗೆ ಸ್ಪಷ್ಟಸೂಚನೆಗಳಿರುವುದರಿಂದ ಭೂತಾಕಾಶವೇ ಈ ವಾಕ್ಯ ಪ್ರತಿಪಾದ್ಯವೆಂದು ಇಲ್ಲಿನ ಪೂರ್ವಪಕ್ಷದಲ್ಲಿ ಹೇಳಲಾಗಿದೆ.

**2.** ತೇ= ಆ ನಾಮರೂಪಗಳನ್ನು ಅಂತರಾ= ಬಿಟ್ಟು ಅರ್ಥಾತ್ ಅವುಗಳಿಂದ ಭಿನ್ನವಾಗಿ ಯತ್= ಯಾವುದೋ ತತ್ ಬ್ರಹ್ಮ= ಅದೇ ಬ್ರಹ್ಮ, ಎಂದು ವಿಷಯವಾಕ್ಯದಲ್ಲಿ ಆಕಾಶವು ನಾಮರೂಪಾತ್ಮಕ ಪ್ರಪಂಚಕ್ಕಿಂತ ವಿಲಕ್ಷಣ ಎನ್ನಲಾಗಿದೆ. ಬ್ರಹ್ಮನಿಗೆ ಈ ಗುಣ ಉಚಿತವಾಗಿದೆ. ಅವನು ಸರ್ವನಾಮ ವಾಚ್ಯನಾದರೂ ಯಾವ ನಾಮಗಳೂ ಅವನನ್ನು ಸಮಗ್ರವಾಗಿ ಹೇಳಲಾರವು. ಹೀಗಾಗಿ, ಅವನು ನಾಮಾತೀತ. ಅವನಿಗೆ ವರ್ಣ,

ದೇಹಗಳಿದ್ದರೂ ಅವು ಅಪ್ರಾಕೃತವಾದುದರಿಂದ ಅವನು ರೂಪ ಪ್ರಪಂಚಕ್ಕಿಂತ ಅತೀತ. ಹೀಗೆ ಬ್ರಹ್ಮನೇ ಇಲ್ಲಿ ಹೇಳಿರುವ ಆಕಾಶ. ॥ ಸೂತ್ರ 41 ॥

## ದ್ವೈತದರ್ಶನದಲ್ಲಿ ಸೂತ್ರದ ಅರ್ಥ

**1. ಓಂ ॥ ಆಕಾಶಃ ಅರ್ಥಾಂತರತ್ವಾದಿ ವ್ಯಪದೇಶಾತ್ ॥ ಓಂ**

ಅರ್ಥಾಂತರತ್ವಾದಿ ವ್ಯಪದೇಶಾತ್=ಲೋಕವಿಲಕ್ಷಣವಾದ ವಸ್ತುವನ್ನಾಗಿ ಮತ್ತು ಬ್ರಹ್ಮನನ್ನಾಗಿ ಹೇಳಿರುವುದರಿಂದ 'ಆಕಾಶೋ ವೈ' ಇತ್ಯಾದಿ ಛಾಂದೋಗ್ಯಶ್ರುತಿಯಲ್ಲಿ ಹೇಳಿರುವ ಆಕಾಶ ಬ್ರಹ್ಮನೇ.

('ಆಕಾಶಃ ವೈ' ಇತ್ಯುಕ್ತಾಕಾಶಃ ತತ್ತು- ಬ್ರಹ್ಮೈವ । ನ ತು ಅವ್ಯಾಕೃತಾಕಾಶಃ । ಕುತಃ ? ಅರ್ಥಾಂತರತ್ವಾದಿ ವ್ಯಪದೇಶಾತ್, ಅನ್ಯೋ ಅರ್ಥೋ ಅರ್ಥಾಂತರಂ । ವಿಲಕ್ಷಣೋ ಅರ್ಥಃ। ತಸ್ಯ ಭಾವಃ। ನಾಮ ರೂಪರಾಹಿತ್ಯರೂಪ ವಿಲಕ್ಷಣಾರ್ಥತ್ವವ್ಯಪದೇಶಾತ್, ಆದಿ ಪದಾತ್ ಬ್ರಹ್ಮತ್ವ ಅಮೃತತ್ವ ವ್ಯಪದೇಶಾತ್ ಇತ್ಯರ್ಥಃ।)

## ಶಾಂಕರಭಾಷ್ಯದಲ್ಲಿ ಹೇಳಿರುವ ಸೂತ್ರದ ಅರ್ಥ

ಶಾಂಕರಭಾಷ್ಯದಲ್ಲಿ ಇದೇ ವಿಷಯವಾಕ್ಯವನ್ನು ಪರಿಗ್ರಹಿಸಿ ವಿಚಾರ ಮಾಡಲಾಗಿದೆ. ಈ ಶ್ರುತಿವಾಕ್ಯದಲ್ಲಿ ಸೃಷ್ಟ್ಯುತ್ವಾದಿ ಸ್ಪಷ್ಟ ಬ್ರಹ್ಮಲಿಂಗಗಳು ಇಲ್ಲವಾದುದರಿಂದ ಹಿಂದಿನ ಆಕಾಶಾಧಿಕರಣದಿಂದ ಗತಾರ್ಥತ್ವವಿಲ್ಲ. ಆಕಾಶಶಬ್ದ ಭೂತಾಕಾಶದಲ್ಲಿ ಪ್ರಸಿದ್ಧವಾಗಿರುವುದು ಹಾಗೂ ನಾಮರೂಪ ನಿರ್ವಾಹಕತ್ವ ಇವೆರಡು ಪೂರ್ವಪಕ್ಷ ಯುಕ್ತಿಗಳು. ನಾಮರೂಪ ಪ್ರಪಂಚಗಳಿಗೆ ಅವಕಾಶ ನೀಡುವುದರಿಂದ ಭೂತಾಕಾಶ ನಾಮರೂಪ ನಿರ್ವಾಹಕ. ಸಿದ್ಧಾಂತಯುಕ್ತಿಯೂ ದ್ವೈತಭಾಷ್ಯದಂತೆಯೇ. ಆದರೆ ಬ್ರಹ್ಮನಿಗೆ ನಾಮರೂಪನಿರ್ವಾಹಕತ್ವ 'ಅನೇನ ಜೀವೇನ ಆತ್ಮನಾ ಅನುಪ್ರವಿಶ್ಯ ನಾಮರೂಪೇ ವ್ಯಾಕರವಾಣಿ' ಎಂಬ ಶ್ರುತಿಯಂತೆ ವಿಕಾರಾಧಿಷ್ಠಾನತ್ವೇನ. ಇದು ಶಾಂಕರಭಾಷ್ಯದ ವಿಶೇಷ.

ಆದರೆ, ಈ ಶ್ರುತಿಯಲ್ಲೂ ನಾಮಲಿಂಗನಿರ್ವಾಹಕತ್ವರೂಪವಾದ ಸ್ಪಷ್ಟ ಬ್ರಹ್ಮಲಿಂಗವಿರುವುದರಿಂದ ಹಿಂದಿನ ಆಕಾಶಾಧಿಕರಣದಿಂದ ಗತಾರ್ಥತ್ವ ಅನಿವಾರ್ಯ ಎಂದು ಚಂದ್ರಿಕಾದ ವಿಮರ್ಶೆ.

## ರಾಮಾನುಜ ಭಾಷ್ಯದಲ್ಲಿ ಹೇಳಿದ ಸೂತ್ರಾರ್ಥ

ರಾಮಾನುಜ ಭಾಷ್ಯದಲ್ಲೂ ಇದೇ ವಿಷಯವಾಕ್ಯವನ್ನು ವಿಚಾರ್ಯವನ್ನಾಗಿ ಪರಿಗ್ರಹಿಸಿ ಈ ವಾಕ್ಯದಿಂದ ಪ್ರತಿಪಾದ್ಯನಾದವನು ಮುಕ್ತಾತ್ಮ ಎಂದು ಪೂರ್ವಪಕ್ಷವನ್ನು ಮಾಡಲಾಗಿದೆ. ಇದರಲ್ಲಿ ನಾಮರೂಪನಿರ್ವಾಹಕತ್ವ ಮತ್ತು ನಾಮರೂಪರಾಹಿತ್ಯ

ಎರಡನ್ನೂ ಹೇಳಲಾಗಿದೆ. ಮುಕ್ತಾತ್ಮ ಸಂಸಾರಾವಸ್ಥೆಯಲ್ಲಿ ನಾಮರೂಪಧಾರಿ, ಮುಕ್ತಾವಸ್ಥೆಯಲ್ಲಿ ನಾಮರೂಪ ರಹಿತ. ಆದ್ದರಿಂದ ಅವನೇ ಆಕಾಶಪದವಾಚ್ಯ ಎಂದು ಪೂರ್ವಪಕ್ಷ, ಬ್ರಹ್ಮನೇ ಆಕಾಶ, ಇಲ್ಲಿ ಅರ್ಥಾಂತರತ್ವವ್ಯಪದೇಶಾತ್— ಜೀವನಿಂದ ಭೇದಕ ಧರ್ಮವನ್ನು ಹೇಳಲಾಗಿದೆಯಾದ್ದರಿಂದ. ನಾಮರೂಪ ನಿರ್ವಾಹಕತ್ವವೇ ಜೀವಭೇದಕ ಧರ್ಮ. ನಾಮ-ರೂಪ ನಿರ್ವಾಹಕತ್ವವೆಂದರೆ ನಾಮರೂಪಕರ್ತೃತ್ವ. ಜೀವ ಸ್ವಯಂ ನಾಮ-ರೂಪವುಳ್ಳವನಾದುದರಿಂದ ಅದಕ್ಕೆ ಕರ್ತೃ ಆಗಲಾರ. ಆದ್ದರಿಂದ ಬ್ರಹ್ಮನೇ ಆಕಾಶ.

ಉಳಿದೆರಡು ಸೂತ್ರಗಳೂ ಇದೇ ಅಧಿಕರಣಕ್ಕೆ ಸೇರಿವೆ. ಎಂದು ಆ ಭಾಷ್ಯದ ವ್ಯಾಖ್ಯಾನ. (ಅದರ ಅರ್ಥವನ್ನು ಮುಂದಿನ ಅಧಿಕರಣದಲ್ಲಿ ತಿಳಿಸಲಾಗಿದೆ.)

### ಚಂದ್ರಿಕಾದಲ್ಲಿ ಮಾಡಿರುವ ವಿಮರ್ಶೆ

ಆಕಾಶ ಶಬ್ದದ ಪ್ರಯೋಗ ಜೀವನಲ್ಲಿ ಇಲ್ಲ. ಅಲ್ಲದೆ, ಜೀವನು ಆ ಶಬ್ದದಿಂದ ವಾಚ್ಯ ಎನ್ನಲು ಇಲ್ಲಿ ಅಸಾಧಾರಣವಾದ ಲಿಂಗವೂ ಇಲ್ಲ. ಅಂದಮೇಲೆ ಜೀವನೇ ಆಕಾಶ ಎಂಬ ಪೂರ್ವಪಕ್ಷ ತೀರಾ ದುರ್ಬಲ.

**ಇಲ್ಲಿಗೆ ಆಕಾಶಾಧಿಕರಣ ಮುಗಿಯಿತು.**

## ಸುಷುಪ್ತ್ಯಧಿಕರಣ - 13

**ಅಸಂಗತ್ವಂ ಪರಮಾತ್ಮನಃ ಉಕ್ತಮ್ । ತಚ್ಚ**

**'ಸ ಯತ್ ತತ್ರ ಕಿಂಚಿತ್ ಪಶ್ಯತಿ ಅನನ್ವಾಗತಃ**

**ತೇನ ಭವತಿ ಅಸಂಗೋಹ್ಯಯಂ ಪುರುಷಃ' (ಬೃ6.3.15)**

**ಇತಿ ಸ್ವಪ್ನಾದಿದ್ರಷ್ಟುಃ ಪ್ರತೀಯತೇ । ಸ ಚ ಜೀವಃ ಪ್ರಸಿದ್ಧೇಃ ಇತಿ । ಅತೋ ವಕ್ತಿ-**

**ಓಂ ॥ ಸುಷುಪ್ತಿ - ಉತ್ಕ್ರಾಂತ್ಯೋಃ ಭೇದೇನ ॥ ಓಂ**

**'ಪ್ರಾಜ್ಞೇನಾತ್ಮನಾ ಸಂಪರಿಷ್ವಕ್ತಃ ನ ಬಾಹ್ಯಂ ಕಿಂಚನ ವೇದ ನಾಂತರಮ್।' (ಬೃ6.3.21) 'ಪ್ರಾಜ್ಞೇನಾತ್ಮನಾ ಅನ್ವಾರೂಢಃ ಉತ್ಸರ್ಜದ್ಯಾತಿ' (ಬೃ6.3.35)**

**ಇತಿ ಭೇದವ್ಯಪದೇಶಾತ್ ನ ಜೀವಃ, ಪರ ಏವಾಸಂಗಃ । ಸ್ವಪ್ನಾದಿದ್ರಷ್ಟೃತ್ವಂ ಚ ಸರ್ವಜ್ಞತ್ವಾತ್ ತಸ್ಯೈವ ಯುಜ್ಯತೇ ॥ 42 ॥**

**॥ ಇತಿ ಸುಷುಪ್ತ್ಯಧಿಕರಣಮ್ ॥**

ಹಿಂದೆ ಅಕ್ಷರಾಧಿಕರಣದಲ್ಲಿ (1.3.10) 'ಅಂಗಧಂ ಅರಸಂ' ಎಂದು ಪರಮಾತ್ಮ ಅಸಂಗ ಎಂದು ಹೇಳಲಾಗಿದೆ. ಆ ಅಸಂಗತ್ವವನ್ನು 'ಸ ಯತ್ ತತ್ರ...' ಎಂಬ ಬೃಹದಾರಣ್ಯಕ ವಾಕ್ಯದಲ್ಲಿ ಸ್ವಪ್ನಕಾಣುವವನಿಗೆ ಹೇಳಲಾಗಿದೆ. ಸ್ವಪ್ನಕಾಣುವವನು ಜೀವನೆಂದು ಪ್ರಸಿದ್ಧವಾದುದು. ಆದ್ದರಿಂದ ಅವನೇ ಅಸಂಗ. ಹೀಗೆ ಆಕ್ಷೇಪಬಂದಾಗ ಸೂತ್ರಕಾರರು ಈ ಸೂತ್ರವನ್ನು ಹೇಳಿದ್ದಾರೆ. 'ಪ್ರಾಜ್ಞೇನ ಆತ್ಮನಾ' ಎಂದು ಇಲ್ಲಿರುವ ಸುಷುಪ್ತಿ ಪ್ರಕರಣದಲ್ಲಿ ಮತ್ತು 'ಪ್ರಾಜ್ಞೇನಾತ್ಮನಾ' ಎಂದು ಉತ್ಕ್ರಾಂತಿ ಪ್ರಕರಣದಲ್ಲಿ ಜೀವ ಮತ್ತು ಈಶ್ವರರಿಗೆ ಭೇದವನ್ನು ಹೇಳಿರುವುದರಿಂದ ವಿಷಯ ವಾಕ್ಯದಲ್ಲಿ ಹೇಳಿರುವ ಅಸಂಗಪುರುಷ ಜೀವನಲ್ಲ ಪರಮಾತ್ಮನೆ. ಅವನು ಸರ್ವಜ್ಞನಾದುದರಿಂದ ಸ್ವಪ್ನದರ್ಶನವೂ ಅವನಿಗಿದೆ.

**ವಿವರಣೆ : 1.** ಸ ವಾ ಏಷ ಏತಸ್ಮಿನ್ ಸಂಪ್ರಸಾದೇ ರತ್ವಾ ಚರಿತ್ವಾ ದೃಷ್ಟ್ವೈವ ಪುಣ್ಯಂ
ಚ ಪಾಪಂ ಚ ಪುನಃಪ್ರತಿನ್ಯಾಯಂ ಪ್ರತಿಯೋನ್ಯಾದ್ರವತಿ ಸ್ವಪ್ನಾಯೈವ।
ಸ ಯತ್ ತತ್ರ ಕಿಂಚಿತ್ ಪಶ್ಯತಿ ಅನನ್ವಾಗತಃ ತೇನ ಭವತಿ
ಅಸಂಗೋಹ್ಯಯಂ ಪುರುಷಃ।

ಬೃಹದಾರಣ್ಯಕದ ಈ ವಾಕ್ಯ ಪ್ರಕೃತ ಅಧಿಕರಣದ ವಿಷಯ ವಾಕ್ಯ. ಸ ವಾ ಏಷಃ=ಪರಮಾತ್ಮನು ಏತಸ್ಮಿನ್ ಸಂಪ್ರಸಾದೇ=ಜೀವಾತ್ಮನ ನಿದ್ರಾವಸ್ಥೆಯಲ್ಲಿ ರತ್ವಾ=ರಮಿಸಿ ಚರಿತ್ವಾ=ಸಂಚರಿಸಿ ಪುಣ್ಯಂ ಚ ಪಾಪಂ ಚ=ಜೀವನ ಪುಣ್ಯಪಾಪಗಳನ್ನು ದೃಷ್ಟ್ವೈವ=ಕೇವಲ ನೋಡಿ ಪುನಃ=ಮತ್ತೆ ಪ್ರತಿನ್ಯಾಯಂ=ಜೀವನ ಪುಣ್ಯಪಾಪಗಳಿಗೆ ಅನುಗುಣವಾಗಿ ಪ್ರತಿಯೋನಿ=ಆಯಾಯ ನಾಡಿಗಳನ್ನು ಅನುಸರಿಸಿ ಆದ್ರವತಿ=ಸ್ವಪ್ನಸ್ಥಾನಕ್ಕೆ ಜೀವನೊಂದಿಗೆ ಹೋಗುತ್ತಾನೆ. ಸಃ=ಆ ಪರಮಾತ್ಮನು ತತ್ರ=ಆ ಸ್ವಪ್ನಾವಸ್ಥೆಯಲ್ಲಿ ಕಿಂಚಿತ್‌ಪಶ್ಯತಿ=ಏನು ನೋಡುವನೋ ತೇನ=ಆ ದರ್ಶನದಿಂದ (ಪರಮಾತ್ಮನು) ಅನನ್ವಾಗತಃ= ದುಃಖದಿಂದ ಅಸಂಸ್ಪೃಷ್ಟನಾಗಿ ಭವತಿ=ಇರುತ್ತಾನೆ. ಏಕೆಂದರೆ, ಅಯಂ ಪುರುಷಃ=ಈ ಪರಮಾತ್ಮನು ಅಸಂಗಃ=ಪುಣ್ಯಪಾಪ ಸಂಸರ್ಗರಹಿತ.

ಈ ವಾಕ್ಯದಲ್ಲಿ ಪರಮಾತ್ಮ ಪ್ರತಿಪಾದ್ಯ ಎಂಬ ಸಿದ್ಧಾಂತವನ್ನು ಅನುಸರಿಸಿ ಮೇಲಿನ ಅರ್ಥವನ್ನು ಹೇಳಲಾಗಿದೆ. ಆದರೆ, ಪೂರ್ವಪಕ್ಷಿಯ ಈ ವಾಕ್ಯ ಜೀವಪ್ರತಿಪಾದಕ ಎನ್ನುತ್ತಾನೆ. ಏಕೆಂದರೆ, ಇಲ್ಲಿ ಸ್ವಪ್ನವನ್ನು ಕಾಣುವ ಪ್ರಸ್ತಾವ ಇದೆ. ತನ್ನ ಪೂರ್ವಕರ್ಮಾನುಗುಣವಾಗಿ ಸ್ವಪ್ನಕಾಣುವವನು ಜೀವ. ಆದ್ದರಿಂದ ಅವನೇ ಪ್ರತಿಪಾದ್ಯ. ಅವನು ಪುಣ್ಯಪಾಪಗಳಿಂದ ಸಂಸೃಷ್ಟನಾದರೂ ಅವನಿಗೂ ಬ್ರಹ್ಮನಿಗೂ ಅಭೇದವಿರುವುದರಿಂದ, ಬ್ರಹ್ಮರೂಪದಿಂದ ಅವನು ಅಸಂಗನಾಗಿದ್ದಾನೆ. ಆದ್ದರಿಂದ, ಜೀವನೇ ಸ್ವಪ್ನದ್ರಷ್ಟೃವಾಗಿ ಈ ವಾಕ್ಯಪ್ರತಿಪಾದ್ಯ ಎಂದು ಪೂರ್ವಪಕ್ಷ.

**2.** ಈ ಅಧಿಕರಣದಲ್ಲಿ ಸ್ವಪ್ನದ್ರಷ್ಟೃತ್ವ ಲಿಂಗವನ್ನು ಪರಮಾತ್ಮನಲ್ಲಿ ಸಮನ್ವಯಮಾಡಲಾಗಿದೆ. ಅದು ಲೋಕದಲ್ಲಿ ಜೀವನಿಗೆ ಪ್ರಸಿದ್ಧ, ಪರಮಾತ್ಮ ಸ್ವಪ್ನ ದ್ರಷ್ಟೃ

ಎಂದು ಲೋಕದಲ್ಲಿ ಪ್ರಸಿದ್ಧಿ ಇಲ್ಲ. ಆದರೂ ಪ್ರಥಮಾಧ್ಯಾಯದ ಮೊದಲ ಮತ್ತು ಎರಡನೆಯ ಪಾದಗಳಲ್ಲಿ ನಾಮಲಿಂಗಾತ್ಮಕ ಶಬ್ದಗಳೆಲ್ಲವೂ ಪರಮಾತ್ಮಪರ ಎಂದು ಸಾಧಿಸಿರುವುದರಿಂದ ಈ ಶಬ್ದವೂ ಪರಮಾತ್ಮ ವಾಚಕವಾಗಿದೆ. ಹೀಗೆ 'ಸ್ವಪ್ನದ್ರಷ್ಟೃತ್ವ' ಉಭಯತ್ರ ಪ್ರಸಿದ್ಧವಾದ ಲಿಂಗಾತ್ಮಕ ಶಬ್ದ. ಆದ್ದರಿಂದ ಈ ಪಾದದಲ್ಲಿ ಅದನ್ನು ಸಮನ್ವಯ ಮಾಡುವುದು ಸಂಗತವಾಗಿದೆ.

**3. ಸಿದ್ಧಾಂತ** - ಈ ಪ್ರಕರಣದಲ್ಲಿ ಜೀವೇಶರಿಗೆ ಭೇದವನ್ನೇ ಹೇಳಲಾಗಿದೆ. ಸುಷುಪ್ತ್ಯವಸ್ಥೆಯಲ್ಲಿ 'ಪ್ರಾಜ್ಞೇನ ಆತ್ಮನಾ ಸಂಪರಿಷ್ವಕ್ತಃ' ಎಂದು ಪರಮಾತ್ಮನ ಸಂಬಂಧವನ್ನು ಜೀವಾತ್ಮನು ದೇಹವನ್ನು ಬಿಟ್ಟು ಹೊರಡುವ ಪ್ರಸಂಗದಲ್ಲೂ 'ಪ್ರಾಜ್ಞೇನ ಆತ್ಮನಾ ಅನ್ವಾರೂಢಃ' 'ಜೀವನು ಪ್ರಾಜ್ಞಪರಮಾತ್ಮನನ್ನು ಹೊತ್ತು ಹೊರನಡೆಯುತ್ತಾನೆ' ಎಂದು ಜೀವಪರಮಾತ್ಮರಿಗೆ ಆಧಾರ ಆಧೇಯಭಾವವನ್ನು ಹೇಳಿರುವುದರಿಂದ ಅವರಿಬ್ಬರಿಗೆ ಭೇದವೇ ಸೂಚಿಸಲ್ಪಟ್ಟಿದೆ. ಅಂದಮೇಲೆ ಜೀವ ಅಸಂಗನಾಗಲು ಸಾಧ್ಯವಿಲ್ಲ. ಅಸಂಗತ್ವವನ್ನು ಈ ವಾಕ್ಯ ಸ್ವಪ್ನದ್ರಷ್ಟೃವಿಗೆ ಹೇಳಿದೆ. ಆದ್ದರಿಂದ ಸ್ವಪ್ನದ್ರಷ್ಟೃ ಪರಮಾತ್ಮ. ಅವನು ಸರ್ವಜ್ಞನಾದುದರಿಂದ ನಿರ್ಲಿಪ್ತನಾಗಿ ಜೀವನ ಸ್ವಾಪ್ನವಸ್ತುಗಳನ್ನು ನೋಡುವುದರಲ್ಲಿ ಬಾಧಕವೂ ಇಲ್ಲ. || ಸೂತ್ರ 42 ||

## ದ್ವೈತದರ್ಶನದಲ್ಲಿ ಸೂತ್ರದ ಅರ್ಥ

**ಓಂ || ಸುಷುಪ್ತ್ಯುತ್ಕ್ರಾಂತ್ಯೋಃ ಭೇದೇನ || ಓಂ**

ಈ ಅಧಿಕರಣದಲ್ಲಿ ಸ್ವಪ್ನದ್ರಷ್ಟೃತ್ವಲಿಂಗವನ್ನು ಸಮನ್ವಯ ಮಾಡಲಾಗಿದೆ. 'ಸ ಯತ್ತತ್ರ ಕಿಂಚಿತ್ ಪಶ್ಯತಿ' ಎಂದು ಬೃಹದಾರಣ್ಯಕದಲ್ಲಿ ಹೇಳಲ್ಪಟ್ಟ ಸ್ವಪ್ನದರ್ಶಕ ಬ್ರಹ್ಮನೇ. ಏಕೆಂದರೆ 'ಅಸಂಗೋಹ್ಯಯಂ' ಎಂದು ಅವನಿಗೆ ಪುಣ್ಯಪಾಪಗಳ ಅಸಂಬಂಧವನ್ನು ಹೇಳಲಾಗಿದೆ. ಜೀವನು ಬ್ರಹ್ಮ ಭಿನ್ನನಾದುದರಿಂದ ಅವನಿಗೂ ಅಸಂಗತ್ವ ಇದೆ ಎನ್ನಕೂಡದು. 'ಪ್ರಾಜ್ಞೇನಾತ್ಮನಾ ಸಂಪರಿಷ್ವಕ್ತಃ' ಎಂದು ಸುಷುಪ್ತಿ ಪ್ರಕರಣದಲ್ಲೂ 'ಪ್ರಾಜ್ಞೇನಾತ್ಮನಾ ಅನ್ವಾರೂಢಃ' ಎಂದು ಉತ್ಕ್ರಾಂತಿಪ್ರಕರಣದಲ್ಲೂ ಅವರಿಬ್ಬರಿಗೆ ಭೇದವನ್ನೇ ಹೇಳಲಾಗಿದೆ.

(ವ್ಯಪದೇಶಾತ್ ಇತ್ಯಸ್ತಿ ಸ್ವಪ್ನಾದಿದ್ರಷ್ಟೇತಿ ಯೋಗ್ಯತಯಾ ಅನ್ವೇತಿ। 'ಸ ಯತ್ತತ್ರ' ಇತ್ಯುಕ್ತಸ್ವಪ್ನಾದಿದ್ರಷ್ಟಾ ತತ್ತು ಬ್ರಹ್ಮೈವ। ನ ಜೀವಃ, ಕುತಃ ? 'ಅಸಂಗೋಹ್ಯಯಂ ಪುರುಷಃ' ಇತಿ ಅಸಂಗತ್ವಲಿಂಗಾತ್ । ನ ಚಾಭೇದೇನ ಲಿಂಗೋಪಪತ್ತಿಃ । ಸುಷುಪ್ತಿ - ಉತ್ಕ್ರಾಂತಿ ಪ್ರಕರಣಯೋಃ ಭೇದೇನ ಜೀವೇಶಯೋಃ ವ್ಯಪದೇಶಾತ್ ಇತಿ ಪರಂಪರಯಾ ಯೋಜ್ಯಮ್।)

ಶಾಂಕರಭಾಷ್ಯದಲ್ಲಿ ಈ ಸೂತ್ರ ಮತ್ತು ಮುಂದಿನ ಸೂತ್ರವನ್ನು ಒಂದೇ ಅಧಿ

ಕರಣವನ್ನಾಗಿ ಪರಿಗಣಿಸಲಾಗಿದೆ. ಆದ್ದರಿಂದ ಮುಂದಿನ ಸೂತ್ರದಲ್ಲೆ ಇದರ ಅರ್ಥವನ್ನು ನಿರೂಪಿಸಲಾಗಿದೆ.

ರಾಮಾನುಜಭಾಷ್ಯದಲ್ಲಿ ಆಕಾಶಾಧಿಕರಣವನ್ನು 'ಅರ್ಥಾಂತರತ್ವಾದಿ ವ್ಯಪದೇಶಾಧಿಕರಣ' ಎಂದು ಹೆಸರಿಸಿ ಅಲ್ಲಿಂದ ಮೂರು ಸೂತ್ರಗಳನ್ನೂ ಒಂದೇ ಅಧಿಕರಣವನ್ನಾಗಿ ಪರಿಗಣಿಸಲಾಗಿದೆ. ಮೊದಲ ಸೂತ್ರದಲ್ಲಿ ಆಕಾಶಪದವಾಚ್ಯ ಬ್ರಹ್ಮನೆಂದೂ ಎರಡು ಮತ್ತು ಮೂರನೆಯ ಸೂತ್ರಗಳಲ್ಲಿ ಜೀವಬ್ರಹ್ಮರ ಭೇದವನ್ನೂ ಸಾಧಿಸಲಾಗಿದೆ. ಅದರ ವಿವರವನ್ನು ಮುಂದಿನ ಸೂತ್ರದಲ್ಲೇ ಕೊಡಲಾಗಿದೆ.

**ಇಲ್ಲಿಗೆ ಸುಷುಪ್ತ್ಯಧಿಕರಣ ಮುಗಿಯಿತು.**

## ಬ್ರಾಹ್ಮಣಾಧಿಕರಣ - 14

'ಏಷ ನಿತ್ಯೋ ಮಹಿಮಾ ಬ್ರಾಹ್ಮಣಸ್ಯ' (ಬೃ6.4.22)

ಇತಿ ಬ್ರಾಹ್ಮಣಸ್ಯಾಪಿ ನಿತ್ಯಮಹಿಮಾ ಪ್ರತೀಯತೇ। ಸ ಚ ಬ್ರಾಹ್ಮಣಃ-

'ಸ ವಾ ಏಷ ಮಹಾನಜ ಆತ್ಮಾ' (ಬೃ6.4.24)

ಇತಿ ಅಜಶಬ್ದಾತ್ ವಿರಿಂಚ ಇತಿ ಪ್ರಾಪ್ತಂ। ದೇವಾನಾಂ ಚ ವಿದ್ಯಾ ಕರ್ಮಣೋಃ ಪದಪ್ರಾಪ್ತಿಃ ಸೂಚಿತಾ ತದುಪರ್ಯಪೀತಿ। ಅತೋ ಬ್ರವೀತಿ-

**ಓಂ ॥ ಪತ್ಯಾದಿ ಶಬ್ದೇಭ್ಯಃ ॥ ಓಂ**

'ಸರ್ವಸ್ಯಾಧಿಪತಿಃ ಸರ್ವಸ್ಯೇಶಾನಃ... ಸ ವಾ ಏಷ ನೇತಿ ನೇತಿ' ಇತ್ಯಾದಿ ಶಬ್ದೇಭ್ಯಃ ನಿತ್ಯಮಹಿಮಾ ವಿಷ್ಣುರೇವ। (ಬೃ6.4.21)

'ಉತಾಮೃತತ್ವಸ್ಯೇಶಾನಃ। ಯದನ್ನೇನಾತಿರೋಹತಿ' (ತೈ.ಆ.3.12)

ಸಪ್ತಾರ್ಧಗರ್ಭಾ ಭುವನಸ್ಯ ರೇತೋ

ವಿಷ್ಣೋಸ್ತಿಷ್ಠಂತಿ ಪ್ರದಿಶಾ ವಿಧರ್ಮಣಿ ॥ (ಋ.1.164.36)

'ಸ ಯೋಽತೋಽಶ್ರುತಃ' (ಐ.ಆ.3.2.4)

ಇತ್ಯಾದಿ ಶ್ರುತಿಭ್ಯಃ ತಸ್ಯೈವ ಹಿ ತೇ ಶಬ್ದಾಃ ॥ 43 ॥

**॥ ಇತಿ ಶ್ರೀಮದ್ ಬ್ರಹ್ಮಸೂತ್ರಭಾಷ್ಯೇ ಪ್ರಥಮಾಧ್ಯಾಯಸ್ಯ ತೃತೀಯಃ ಪಾದಃ ॥**

'ಏಷ ನಿತ್ಯೋ ಮಹಿಮಾ ಬ್ರಾಹ್ಮಣಸ್ಯ' ಎಂದು ನಾಶವಿಲ್ಲದ ಸಾರ್ವಕಾಲಿಕ ಮಹತ್ವವು ಬ್ರಾಹ್ಮಣನಿಗೆ ಹೇಳಲ್ಪಟ್ಟಿದೆ. ಆ ಬ್ರಾಹ್ಮಣನಾದರೋ 'ಸ ವಾ ಏಷ ಮಹಾನ್ ಅಜ ಆತ್ಮಾ' ಎಂಬ ಉಪನಿಷತ್ ವಾಕ್ಯದಲ್ಲಿ ಅಜಶಬ್ದವಿರುವುದರಿಂದ ಚತುರ್ಮುಖ ಬ್ರಹ್ಮನೆಂದು ತಿಳಿಯುತ್ತದೆ. ಹಿಂದೆ ದೇವತಾಧಿಕರಣದಲ್ಲಿ ದೇವತೆಗಳಿಗೆ ಮಾತ್ರ ವಿದ್ಯೆ ಕರ್ಮಗಳಿಂದ ದೇವತಾ ಪದವಿಯ ಪ್ರಾಪ್ತಿಯನ್ನು ಹೇಳಲಾಗಿದೆ. ಬ್ರಹ್ಮನಿಗಲ್ಲ. ಆದ್ದರಿಂದ ಅವನು ನಿತ್ಯಮಹಿಮನಾಗಬಹುದು ಎಂದು ಆಕ್ಷೇಪ ಬಂದಾಗ ಈ ಸೂತ್ರವನ್ನು ಹೇಳಲಾಗಿದೆ.

ಈ ಪ್ರಕರಣದಲ್ಲಿ ಬ್ರಾಹ್ಮಣನಿಗೆ 'ಸರ್ವಸ್ಯಾಧಿಪತಿಃ ಸರ್ವಸ್ಯೇಶಾನಃ' ಎಂದು ಸರ್ವಾಧಿಪತಿ ಮೊದಲಾದ ಶಬ್ದಗಳನ್ನು ಪ್ರಯೋಗ ಮಾಡಿರುವುದರಿಂದ ನಿತ್ಯಮಹಿಮೆಯುಳ್ಳವನು ವಿಷ್ಣುವೆ. 'ಉತಾಮೃತತ್ವಸ್ಯೇಶಾನಃ' ಇತ್ಯಾದಿ ಶ್ರುತಿಯಿಂದ ಸರ್ವಸ್ಯ ಈಶಾನಃ ಎಂಬ ಶಬ್ದ 'ಸಪ್ತಾರ್ಧಗರ್ಭಾ' ಎಂಬ ಶ್ರುತಿಯಿಂದ ಸರ್ವಾಧಿಪತಿ ಎಂಬ ಶಬ್ದ 'ಸ ಯೋಽತೋ' ಇತ್ಯಾದಿ ಶ್ರುತಿಯಿಂದ 'ನೇತಿ ನೇತಿ' ಎಂಬ ಶಬ್ದ ವಿಷ್ಣುವಿಗೆ ಸಂಬಂಧಿಸಿದೆ ಎಂದು ತಿಳಿಯುತ್ತದೆ.

**ವಿವರಣೆ : 1.** 'ಶಬ್ದಾದೇವ ಪ್ರಮಿತಃ' ಎಂಬ ಸೂತ್ರ ವಾಮನಾಧಿಕರಣದ್ದು. ಅಲ್ಲಿ ಸಮನ್ವಯ ಮಾಡುವ ನಾಮ ಈಶಾನ. ಅದಕ್ಕೆ ಸಾಧಕವಾದುದು 'ಶಬ್ದಾದೇವ' ಎಂದು ಸೂತ್ರದಿಂದ ಸೂಚಿತವಾದ ವಾಮನ ಶಬ್ದ. ಹೀಗಾಗಿ ಅದು ವಾಮನಾಧಿಕರಣ. ಈ ಅಧಿಕರಣದಲ್ಲಿ 'ಬ್ರಾಹ್ಮಣ' ಶಬ್ದವನ್ನು ಸಮನ್ವಯ ಮಾಡುವುದರಿಂದ ಇದು ಬ್ರಾಹ್ಮಣಾಧಿಕರಣ.

**2. ಪೂರ್ವಪಕ್ಷ** - ಬೃಹದಾರಣ್ಯಕೋಪನಿಷತ್ತಿನ ಆರನೆಯ ಅಧ್ಯಾಯದ ನಾಲ್ಕನೆಯ ಬ್ರಾಹ್ಮಣದಲ್ಲಿ 'ತದೇತದ್ ಋಚಾಭ್ಯುಕ್ತಮ್' ಎಂದು ಉಪನಿಷತ್ತು ಉದಾಹರಿಸಿದ ಮಂತ್ರ-

ಏಷ ನಿತ್ಯೋ ಮಹಿಮಾ ಬ್ರಾಹ್ಮಣಸ್ಯ ನ ಕರ್ಮಣಾ ವರ್ಧತೇ ನೋ ಕನೀಯಾನ್ ।
ತಸ್ಯೈವಷಃ ಸ್ಯಾತ್ ಪದವಿತ್ ತಂ ವಿದಿತ್ವಾ ನ ಲಿಪ್ಯತೇ ಕರ್ಮಣಾ ಪಾಪಕೇನ ॥

ಇಲ್ಲಿ ಬ್ರಾಹ್ಮಣನ ಮಹಿಮೆ-ಮಹತ್ವ ನಿತ್ಯ ಎನ್ನಲಾಗಿದೆ. ಈ ಬ್ರಾಹ್ಮಣ ಬ್ರಹ್ಮನಲ್ಲವಾದರೆ ಆಗ ಜನ್ಮಾಧಿಕರಣದಲ್ಲಿ ಸ್ವತಂತ್ರವಾದ ಸೃಷ್ಟಿಕ್ರಿಯೆಯಿಂದ ಬ್ರಹ್ಮನಿಗೆ ಸೂಚಿತವಾದ ನಿತ್ಯಮಹಿಮೆ ಮತ್ತೊಬ್ಬರಲ್ಲಿ ಇದ್ದಂತಾಗುತ್ತದೆ. ಅದಕ್ಕಾಗಿ ಇಲ್ಲಿ ಹೇಳಿರುವ ಬ್ರಾಹ್ಮಣ ವಿಷ್ಣು ಎಂದು ಸಮರ್ಥಿಸಬೇಕಾಗಿದೆ.

ಈ ಬ್ರಾಹ್ಮಣ ಬ್ರಹ್ಮನಲ್ಲ, ಚತುರ್ಮುಖ. ಇದೇ ಖಂಡದ ಮುಂದಿನ 25ನೆಯ ಮಂತ್ರ-

''ಸ ವಾ ಏಷ ಮಹಾನಜ ಆತ್ಮಾ ಅನ್ನಾದಃ
ವಸುದಾನಃ ವಿಂದತೇ ವಸು ಯ ಏವಂ ವೇದ''

ಎಂದು 'ಸ ವಾ ಏಷಃ' ಎಂದು ಹಿಂದಿನ ಮಂತ್ರದಲ್ಲಿ ಹೇಳಿದ ಬ್ರಾಹ್ಮಣನನ್ನು ಪರಾಮರ್ಶ ಮಾಡಿ ಅವನನ್ನು 'ಅಜ' ಎಂದು ಕರೆದಿದೆ. ಅಜ ಶಬ್ದ ಚತುರ್ಮುಖನ ರೂಢನಾಮ. ಯೌಗಿಕವೂ ಹೌದು. ಅಕಾರವಾಚ್ಯನಾದ ವಿಷ್ಣುವಿನಿಂದ ಜನಿಸಿದವ ಎಂಬ ಅರ್ಥದಲ್ಲಿ ಅವನು 'ಅ-ಜ'. ಆದರೆ ವಿಷ್ಣುವಿಗೆ ಆ ಶಬ್ದ ಯೋಗದಿಂದಷ್ಟೇ (ನ ಜಾಯತೇ) ಅನ್ವಯಿಸುತ್ತದೆ. ಹೀಗೆ ಬ್ರಾಹ್ಮಣ, ಅಜ ಶಬ್ದಗಳಿರುವುದರಿಂದ ಚತುರ್ಮುಖನೇ ಇಲ್ಲಿ ಹೇಳಲಾದ ನಿತ್ಯಮಹಿಮ.

**3. ಸಿದ್ಧಾಂತ –** ವಿಷಯವಾಕ್ಯವಾದ ಈ ಮಂತ್ರಕ್ಕಿಂತ ಹಿಂದಿನ 22ನೆಯ ವಾಕ್ಯದಲ್ಲಿ 'ಸ ವಾ ಏಷಃ' ಎಂದು ಆರಂಭ ಮಾಡಿ 'ಸರ್ವಸ್ಯ ಈಶಾನಃ ಸರ್ವಸ್ಯಾಧಿಪತಿಃ ಸ ನ ಸಾಧುಕರ್ಮಣಾ ಭೂಯಾನ್ ನೋ ಏವ ಅಸಾಧುನಾ ಕನೀಯಾನ್ ಏಷ ಸರ್ವೇಶ್ವರಃ ಏಷ ಭೂತಾಧಿಪತಿಃ ಏಷ ಭೂತಪಾಲಃ ಏಷ ಸೇತುಃ ವಿಧರಣಃ... ಸ ಏಷ ನೇತಿ ನೇತಿ ಆತ್ಮಾ ಅಗೃಹ್ಯೋ ನ ಗೃಹ್ಯತೇ'' ಎಂದು ಆತ್ಮನ ಮಹಿಮೆಯನ್ನು ಹೇಳಲಾಗಿದೆ. ಅಲ್ಲಿ ಹೇಳಿರುವ ಸರ್ವಾಧಿಪತಿತ್ವಾದಿ ಧರ್ಮಗಳು ವಿಷ್ಣುವಿಗಲ್ಲದೆ ಇತರರಿಗಿಲ್ಲ. ಆದ್ದರಿಂದ ವಿಷ್ಣುವೇ ಬ್ರಾಹ್ಮಣ. ಬ್ರಹ್ಮಣಾ=ವೇದೇನ ಅಣ್ಯತೇ=ಗಮ್ಯತೇ ಇತಿ-ಬ್ರಾಹ್ಮಣಃ । ವೇದ ಪ್ರತಿಪಾದ್ಯನೆಂದು ಅರ್ಥ.

**4.** ಪೂರ್ವಪಕ್ಷದಲ್ಲಿ ವಿರಿಂಚನೇ ನಿತ್ಯಮಹಿಮೆಯವನು ಎನ್ನಲಾಗಿದೆ. ಆದರೆ ದೇವತಾಧಿಕರಣದಲ್ಲಿ ದೇವತೆಗಳಿಗೆ ಪದವಿಯು ಒಂದು ಕಾಲದಲ್ಲಿ ದೊರೆಯುತ್ತದೆ ಎಂದಿದೆ. ಅಂದಮೇಲೆ ಆ ಪದವಿ ಸಾದಿ. ಸಾದಿಯಾದುದು ಅನಿತ್ಯ. ಹುಟ್ಟಿದ್ದು ನಾಶವಾಗಲೇಬೇಕು. ಹಾಗಿದ್ದ ಮೇಲೆ ವಿರಿಂಚ ನಿತ್ಯಮಹಿಮನಾಗುವುದು ಹೇಗೆ? ಅದಕ್ಕೆ ಭಾಷ್ಯಕಾರರ ಉತ್ತರ-ಇತರ ದೇವತೆಗಳ ಪದವಿ ಸಾದಿ. ಆದರೆ ಚತುರ್ಮುಖ ಬ್ರಹ್ಮ ವಿಷ್ಣುವಿನದೇ ರೂಪಾಂತರ.

ಸತ್ವಂ ರಜಸ್ತಮ ಇತಿ ಪ್ರಕೃತೇರ್ಗುಣಾಃ

ತೈರ್ಯುಕ್ತಃ ಪರಃ ಪುರುಷ ಏಕ ಇಹಾಸ್ಯಧತ್ತೇ ।

ಸ್ಥಿತ್ಯಾದಯೇ ಹರಿ-ವಿರಿಂಚ-ಹರೇತಿ ಸಂಜ್ಞಾಃ ॥

ಎಂದು ಭಾಗವತದಲ್ಲಿ ವಿಷ್ಣುವೇ ಹರಿ-ಹರ-ಬ್ರಹ್ಮರೂಪನಾಗುತ್ತಾನೆ ಎಂದಿದೆ.

'ಹಾಗಾದರೆ 'ನಿತ್ಯಮಹಿಮೆ' ಚತುರ್ಮುಖನಿಗಾದರೂ ಬಾಧಕವಿಲ್ಲ. ಅವನೇ ವಿಷ್ಣು ತಾನೆ' ಎನ್ನಬಾರದು. ಕಾರ್ಯಕ್ಕಿರುವ ಗುಣ, ನಾಮಗಳು ಕಾರಣಕ್ಕಿಲ್ಲ. ವಿರಿಂಚ ಬ್ರಹ್ಮನಿಂದ ಜನಿಸಿದ ಕಾರ್ಯ. ಅವನಿಗಿರುವ ಗುಣವಾದ ನಿತ್ಯಮಹಿಮೆ, ಬ್ರಾಹ್ಮಣನಾಮ ಕಾರಣನಾದ ವಿಷ್ಣುವಿಗೆ ಇಲ್ಲ. ಆದ್ದರಿಂದ ವಿರಿಂಚನೇ ನಿತ್ಯಮಹಿಮ ಎಂದು ಪೂರ್ವಪಕ್ಷ ಯುಕ್ತವಾಗಿದೆ.

ಇದರ ನಿರಾಕರಣೆಗಾಗಿ ಸಿದ್ಧಾಂತದಲ್ಲಿ ಬ್ರಹ್ಮ ವಿಷ್ಣುಗಳಿಗೆ ಭೇದವನ್ನು ಸಮರ್ಥಿಸಬೇಕು. ಹರ ಮತ್ತು ಬ್ರಹ್ಮನಲ್ಲಿ ವಿಷ್ಣುವಿನ ಅದೇ ಹೆಸರಿನ ರೂಪವಿರುವುದರಿಂದ ಹರಿ- ಹರ- ಬ್ರಹ್ಮರು ವಿಷ್ಣು ಎನ್ನುತ್ತದೆ ಭಾಗವತ. ಇಲ್ಲದಿದ್ದರೆ-

ಸ್ವಧರ್ಮನಿಷ್ಠಃ ಶತಜನ್ಮಭಿಃ ಪುಮಾನ್

ವಿರಿಂಚತಾಮೇತೀ ತತಃ ಪರಂ ಹಿ ಮಾಂ॥

ಎಂಬ ವಚನ ವಿರುದ್ಧವಾಗುತ್ತದೆ. ಅಲ್ಲಿ 'ನೂರು ಜನ್ಮಗಳ ಬಳಿಕ ಧರ್ಮನಿಷ್ಠರಾದ ಯೋಗ್ಯಜೀವರು ಚತುರ್ಮುಖನ ಪದವಿ ಹೊಂದುತ್ತಾರೆ. ಅನಂತರ ನನ್ನನ್ನು ತಲುಪುತ್ತಾರೆ' ಎನ್ನಲಾಗಿದೆ. ಹೀಗೆ ವಿಷ್ಣುವಿಗೆ ಬ್ರಹ್ಮಾದಿಗಳ ಅಭೇದವನ್ನೂ ಭೇದವನ್ನೂ ತಿಳಿಸುವ ವಾಕ್ಯಗಳಿಗೆ ವಿರೋಧವಿಲ್ಲ.

**ಶ್ರುತ್ಯರ್ಥ : ಅ.** ಪುರುಷ ಏವೇದಂ ಸರ್ವಂ ಯದ್ಭೂತಂ ಯಚ್ಚ ಭವ್ಯಮ್ ।

ಉತಾಮೃತತ್ವಸ್ಯೇಶಾನಃ ಯದನ್ನೇನಾತಿರೋಹತಿ ॥

ಯತ್ ಭೂತಂ= ಯಾವುದು ಅತೀತವೋ, ಯಚ್ಚ ಭವ್ಯಂ= ಯಾವುದು ಭಾವಿಯೋ ಇದಂ ಸರ್ವಂ= ಇವೆಲ್ಲವೂ ಪುರುಷ ಏವ= ಪರಮಪುರುಷನ ಅಧೀನವಾದುದು. ಅವನು, ಯತ್= ಯಾವ ಕಾರಣದಿಂದ ಅನ್ನೇನ- ಅನ್ನಂ= ಮರ್ತ್ಯವಾದ ಸಂಸಾರಿ ಸಮೂಹವನ್ನು ಅತಿರೋಹತಿ= ಮೀರಿದ್ದಾನೋ ಆ ಕಾರಣದಿಂದಲೇ ಅಮೃತತ್ವಸ್ಯ ಉತ= ಮುಕ್ತವರ್ಗಕ್ಕೂ ಈಶಾನಃ= ಅಧಿಪತಿ.

'ಅಮೃತತ್ವ' ಎಂಬಲ್ಲಿ ತ್ವಪ್ರತ್ಯಯಕ್ಕೆ ಸಮೂಹ ಎಂದು ಅರ್ಥ. 'ವಿಚಿತ್ರಾ ಹಿ ತದ್ಧಿತಗತಿಃ' ಎಂದಂತೆ ತದ್ಧಿತ ಪ್ರತ್ಯಯಕ್ಕೆ ಈ ಅರ್ಥವನ್ನು ಹೇಳಬಹುದು.

ತತ್ತ್ವಪ್ರದೀಪದಲ್ಲಿ- 'ಭಾವ- ಭವಿತ್ರೋಃ ಅಭೇದಾತ್' ಎಂಬ ನ್ಯಾಯವನ್ನು ಅನುಸರಿಸಿ 'ಅಮೃತತ್ವ' ಶಬ್ದಕ್ಕೆ ಮುಕ್ತ ಎಂದೂ ಅರ್ಥವನ್ನು ಹೇಳಲಾಗಿದೆ.

ಈ ಮಂತ್ರದಲ್ಲಿ ಪೂರ್ವಾರ್ಧದಲ್ಲಿ 'ಪುರುಷ ಏವೇದಂ ಸರ್ವಂ' ಎಂದು ಹೇಳಿರುವ ಸರ್ವೇಶಾನತ್ವಕ್ಕೆ ಉತ್ತರಾರ್ಧದಲ್ಲಿ ಕಾರಣವನ್ನು ಹೇಳಲಾಗಿದೆ. ಅದಕ್ಕಾಗಿ ಭಾಷ್ಯದಲ್ಲಿ ಉತ್ತರಾರ್ಧವನ್ನಷ್ಟೇ ಉಲ್ಲೇಖಿಸಲಾಗಿದೆ. ಈ ಪ್ರಮಾಣದಿಂದ ಸರ್ವೇಶಾನತ್ವ- ಸರ್ವಪ್ರೇರಕತ್ವ ಸಿದ್ಧವಾಗುತ್ತದೆ.

**ಆ.** 'ಸಪ್ತಾರ್ಧಗರ್ಭಾ' ಎಂಬ ಮಂತ್ರದ ವ್ಯಾಖ್ಯಾನ ಅಕ್ಷರಾಧಿಕರಣದಲ್ಲಿದೆ. (1.3.11) ಬ್ರಹ್ಮಾದಿ ದೇವತೆಗಳು ಭುವನಕ್ಕೆ ರತಿಪ್ರದನಾದ ವಿಷ್ಣುವಿನ ಆಜ್ಞೆಯಿಂದ (ಪ್ರದಿಶಾ) ತಮ್ಮ ಕಾರ್ಯದಲ್ಲಿ ತೊಡಗಿದ್ದಾರೆ ಎಂದು ಈ ಮಂತ್ರ ವಿಷ್ಣುವಿಗೆ ಸರ್ವಾಧಿ ಪತಿತ್ವವನ್ನು ಹೇಳುತ್ತದೆ.

**ಇ.** 'ಸ ವಾ ಏಷ ನೇತಿ ನೇತಿ' ಎಂಬ ವಿಷಯವಾಕ್ಯದಲ್ಲಿ ಸಃ= ಪ್ರಾಣಶಬ್ದದಿಂದ

ವಾಚ್ಯನಾದ ಏಷಃ=ಪರಮಾತ್ಮನು ಇತಿನ=ನಾವು ಕಂಡಿರುವ ವಸ್ತುಗಳಂತಲ್ಲ. ಇತಿ ನ=ನಾವು ಕೇಳಿ ತಿಳಿದ ವಸ್ತುವಿನಂತೆಯೂ ಅಲ್ಲ. ಅವನು ಅವೆಲ್ಲದಕ್ಕಿಂತ ವಿಲಕ್ಷಣ ಎಂದರ್ಥ. 'ಸ ಯೋ ಅತೋ ಅಶ್ರುತಃ' ಎಂಬ ಐತರೇಯ ಶ್ರುತಿ ಅಶ್ರುತತ್ವಾದಿ ಈ ಧರ್ಮಗಳು ವಿಷ್ಣುವಿನ ಅಸಾಧಾರಣಗುಣಗಳು ಎನ್ನುತ್ತದೆ. ॥ ಸೂತ್ರ 43 ॥

## ದ್ವೈತದರ್ಶನದಲ್ಲಿ ಸೂತ್ರದ ಅರ್ಥ

**ಓಂ ॥ ಪತ್ಯಾದಿ ಶಬ್ದೇಭ್ಯಃ ॥ ಓಂ**

ಪತ್ಯಾದಿಶಬ್ದೇಭ್ಯಃ='ಸರ್ವಸ್ಯ ವಶೀ, ಸರ್ವಸ್ಯ ಈಶಾನಃ ಸರ್ವಾಧಿಪತಿಃ' ಎಂದು ಸರ್ವಾಧಿಪತಿ ಮೊದಲಾದ ಶಬ್ದಗಳಿಂದಾಗಿ 'ಏಷ ನಿತ್ಯೋ ಮಹಿಮಾ ಬ್ರಾಹ್ಮಣಸ್ಯ' ಎಂಬ ಮಂತ್ರದಲ್ಲಿರುವ ಬ್ರಾಹ್ಮಣ ಶಬ್ದದಿಂದ ವಾಚ್ಯನಾದವನು ವಿಷ್ಣು.

(ಅತ್ರ ಬ್ರಾಹ್ಮಣನಾಮ ಸಮನ್ವೀಯತೇ। ಬ್ರಾಹ್ಮಣೇತಿ ಯೋಗ್ಯತಯಾ ಅನ್ವೇತಿ। 'ಏಷ ನಿತ್ಯೋ ಮಹಿಮಾ ಬ್ರಾಹ್ಮಣಸ್ಯ' ಇತ್ಯುಕ್ತೋ ಬ್ರಾಹ್ಮಣಃ ತತ್ತು=ಬ್ರಹ್ಮೈವ। ನ ವಿರಿಂಚಿಃ। ಕುತಃ? 'ಸರ್ವಸ್ಯ ವಶೀ' ಇತ್ಯಾದಿ ಸರ್ವಾಧಿಪತ್ಯಾದಿಶಬ್ದೇಭ್ಯಃ। ಅತ್ರ ಶ್ರುತೌ ವಶಿತ್ವಸ್ಯ ಆದಿತ್ವೇಽಪಿ ಭಾಷ್ಯೋಕ್ತ ಶ್ರುತ್ಯಂತರಾನುರೋಧಾತ್ ಪತ್ಯಾದೀತ್ಯುಕ್ತಮ್॥)

## ಶಾಂಕರಭಾಷ್ಯದಲ್ಲಿ ಹೇಳಿರುವ ಸೂತ್ರದ ಅರ್ಥ

ಶಾಂಕರ ಭಾಷ್ಯ ಹೇಳುವಂತೆ ಹಿಂದಿನ ಮತ್ತು ಈ ಸೂತ್ರ ಸೇರಿ ಒಂದು ಅಧಿಕರಣ.

**1. ಸುಷುಪ್ತಿ-ಉತ್ಕ್ರಾಂತ್ಯೋಃ ಭೇದೇನ**-ಬೃಹದಾರಣ್ಯಕದ 4ನೆಯ ಅಧ್ಯಾಯದ ಮೂರನೆಯ ಬ್ರಾಹ್ಮಣ-

ಕತಮ ಆತ್ಮೇತಿ ಯೋಽಯಂ ವಿಜ್ಞಾನಮಯಃ
ಪ್ರಾಣೇಷು ಹೃದ್ಯಂತರ್ಜ್ಯೋತಿಃ ಪುರುಷಃ॥ (4.3.7)

ಎಂದು ಆರಂಭವಾಗಿ ಆತ್ಮನ ಕುರಿತು ಅನೇಕ ವಿಷಯಗಳನ್ನು ಹೇಳುತ್ತಿದೆ. ಈ ಆತ್ಮ ಜೀವ. ಏಕೆಂದರೆ ಉಪಕ್ರಮದ ಈ ವಾಕ್ಯದಲ್ಲೂ 'ಹೃದ್ಯಂತಃ' ಎಂದು ಹೃದಯದ ಸಂಬಂಧವನ್ನು ಹೇಳಲಾಗಿದೆ. ಉಪಸಂಹಾರದಲ್ಲೂ

ಸ ವಾ ಏಷಃ ಮಹಾನಜ ಆತ್ಮಾ ಯೋಽಯಂ ವಿಜ್ಞಾನಮಯಃ ಪ್ರಾಣೇಷು ॥
(4.4.22)

ಎಂದು ಅದೇ ವಿಜ್ಞಾನಮಯನ ಉಲ್ಲೇಖವಿದೆ. ಮಧ್ಯದಲ್ಲಿ ಜಾಗ್ರತ್, ಸ್ವಪ್ನ ಸುಷುಪ್ತಿಗಳ ಪ್ರಸ್ತಾವ ಇದೆ. ಹೀಗೆ ಜೀವಾತ್ಮನ ಲಿಂಗಗಳಿರುವುದರಿಂದ ಜೀವನೇ ಈ ಪ್ರಕರಣದಿಂದ ಪ್ರತಿಪಾದ್ಯ, ಎಂದು ಪೂರ್ವಪಕ್ಷ.

ಸುಷುಪ್ತಿ ಅವಸ್ಥೆಯಲ್ಲಿ 'ಪ್ರಾಜ್ಞೇನ ಆತ್ಮನಾ ಸಂಪರಿಷ್ವಕ್ತಃ ನ ಬಾಹ್ಯಂ ಕಿಂಚನ ವೇದ' ಎಂದು ಜೀವನಿಗೆ ಬಾಹ್ಯಪದಾರ್ಥಗಳ ಅಜ್ಞಾನವನ್ನೂ 'ಪ್ರಾಜ್ಞೇನ' ಎಂದು ಬ್ರಹ್ಮನಿಗೆ ಸರ್ವಜ್ಞತ್ವವನ್ನೂ ಹೇಳಿ ಅವರಿಬ್ಬರಿಗೆ ಭೇದವನ್ನು ತಿಳಿಸಲಾಗಿದೆ. ಉತ್ಕ್ರಾಂತಿ ವಾಕ್ಯದಲ್ಲೂ 'ಪ್ರಾಜ್ಞೇನ ಆತ್ಮನಾ ಅನ್ವಾರೂಢಃ' ಎಂದು ಅವರಿಬ್ಬರಿಗೆ ಭೇದವನ್ನೇ ಹೇಳಲಾಗಿದೆ. ಹೀಗೆ ಜೀವನಿಗಿಂತ ಭಿನ್ನನಾದ ಬ್ರಹ್ಮನೇ ಈ ಪ್ರಕರಣ ಪ್ರತಿಪಾದ್ಯ. ಹೀಗೆ, ಉಪಕ್ರಮದಲ್ಲಿ ಜೀವಸ್ವರೂಪವನ್ನು ಉಲ್ಲೇಖ ಮಾಡಲಾಗಿದ್ದರೂ ಜೀವನಲ್ಲಿರುವ ಧರ್ಮಗಳು ಮಿಥ್ಯಾ ಎಂದು 'ಧ್ಯಾಯತೀವ ಲೇಲಾಯತೀವ' ಎಂದು ತಿಳಿಸಿ ಅಂತಹ ಜೀವನಿಗೆ ಬ್ರಹ್ಮೈಕ್ಯವನ್ನು ಹೇಳುವುದು ಅದರ ಉದ್ದೇಶ. ಉಪಸಂಹಾರವಾಕ್ಯದಲ್ಲಂತೂ ಅಭೇದ ಸ್ಪಷ್ಟವಾಗಿದೆ - 'ವಿಜ್ಞಾನಮಯಃ(ಜೀವ) ಸವಾ ಏಷಃ ಮಹಾನ್ ಅಜಃ ಆತ್ಮಾ'. ಹೀಗೆ ಜೀವಾಭಿನ್ನನಾದ ಬ್ರಹ್ಮನೇ ಇಲ್ಲಿ ಪ್ರತಿಪಾದ್ಯ.

2. **ಪತ್ಯಾದಿಶಬ್ದೇಭ್ಯಃ** - ಈ ಪ್ರಕರಣದಲ್ಲಿರುವ 'ಸರ್ವಸ್ಯವಶೀ ಸರ್ವಸ್ಯೇಶಾನಃ ಸರ್ವಸ್ಯಾಧಿಪತಿಃ' ಎಂದು ಪತ್ಯಾದಿ ಶಬ್ದಗಳು ಜೀವನಿಗೆ ಅಸಂಭಾವಿತವಾದುದರಿಂದಲೂ ಈ ಪ್ರಕರಣ ಬ್ರಹ್ಮಪರ.

## ಚಂದ್ರಿಕಾದಲ್ಲಿ ಮಾಡಿರುವ ವಿಮರ್ಶೆ

ಅದ್ವೈತ ಭಾಷ್ಯವೇ ಹೇಳುವಂತೆ ಶ್ರುತಿಯಲ್ಲಿ, ಸೂತ್ರದಲ್ಲಿ ಜೀವೇಶ ಭೇದವನ್ನೇ ಹೇಳಲಾಗಿದೆ. ಅಂದಮೇಲೆ ಅದಕ್ಕೆ ವಿರುದ್ಧವಾಗಿ 'ಸ ವಾ ಏಷಃ ಮಹಾನ್ ಅಜಃ ಆತ್ಮಾ ಯೋಽಯಂ ವಿಜ್ಞಾನಮಯಃ' ಎಂಬ ಶ್ರುತಿವಾಕ್ಯ ಅಭೇದವನ್ನು ಹೇಗೆ ಹೇಳೀತು?

ಯತ್ತತ್ತ್ವಮೈಕ್ಯಂ ತನ್ನೈವ ಕೀರ್ತ್ಯತೇ ಶ್ರುತಿಸೂತ್ರಯೋಃ।
ತತ್ರ ಯಃ ಕೀರ್ತ್ಯತೇ ಭೇದಃ ತಚ್ಚ ತತ್ತ್ವಂ ನ ತೇ ಮತೇ॥

## ರಾಮಾನುಜ ಭಾಷ್ಯದಲ್ಲಿ ಹೇಳಿರುವ ಸೂತ್ರಾರ್ಥ

1. **ಆಕಾಶೋ ಅರ್ಥಾಂತರತ್ವಾದಿ ವ್ಯಪದೇಶಾತ್** - ಇತ್ಯಾದಿ ಮೂರು ಸೂತ್ರಗಳೂ ಸೇರಿ ಒಂದು ಅಧಿಕರಣ. ಇಲ್ಲಿ ಆಕಾಶ ಶಬ್ದದ ಸಮನ್ವಯವನ್ನು ಸಾಧಿಸಲಾಗಿದೆ. ದ್ವೈತಾದ್ವೈತದರ್ಶನದಲ್ಲಿ ಹೇಳಿರುವ ಛಾಂದೋಗ್ಯದ ಮಂತ್ರವೇ ವಿಷಯವಾಕ್ಯ. ನಾಮರೂಪ ವಿಲಕ್ಷಣ ಎಂದು ಹೇಳಿರುವುದರಿಂದ ಆಕಾಶ ಬ್ರಹ್ಮ ಎಂದೇ ಮೊದಲ ಸೂತ್ರದ ಅರ್ಥ. ಆದರೆ ಮುಕ್ತಾತ್ಮ ಆಕಾಶಪದವಾಚ್ಯ ಇದು ಪೂರ್ವಪಕ್ಷ.

2. **ಸುಷುಪ್ತಿ ಉತ್ಕ್ರಾಂತ್ಯೋಃ ಭೇದೇನ-ಪತ್ಯಾದಿ ಶಬ್ದೇಭ್ಯಃ** - ಜೀವಬ್ರಹ್ಮರಿಗೆ ಭೇದವಿಲ್ಲ, ಆದ್ದರಿಂದ ನಾಮರೂಪನಿರ್ವಾಹಕ ಮುಕ್ತನೂ ಆಗಬಹುದು ಎಂಬ ಆಕ್ಷೇಪಕ್ಕೆ

ಉತ್ತರವಾಗಿ ಈ ಎರಡು ಸೂತ್ರಗಳು ಜೀವಬ್ರಹ್ಮಭೇದವನ್ನು ಸಾಧಿಸುತ್ತಿದೆ. ಎರಡೂ ಸೂತ್ರಗಳಿಗೆ ವಿಷಯವಾಕ್ಯ ಹಾಗೂ ಅರ್ಥ ದ್ವೈತಾದ್ವೈತ ಭಾಷ್ಯಗಳಂತೆಯೇ.

## ಚಂದ್ರಿಕಾದಲ್ಲಿ ಮಾಡಿರುವ ವಿಮರ್ಶೆ

ಆಕಾಶ ಮುಕ್ತಾತ್ಮ. ಬ್ರಹ್ಮನಲ್ಲ ಎಂದು ಆಕಾಶಾಧಿಕರಣದ ಪೂರ್ವಪಕ್ಷ. ಅಂದಮೇಲೆ ಪೂರ್ವಪಕ್ಷಿ ಜೀವ ಬ್ರಹ್ಮಭೇದವನ್ನು ಒಪ್ಪಿ ಪ್ರಶ್ನಿಸುತ್ತಿದ್ದಾನೆ. ತಾನು ಮೊದಲು ಒಪ್ಪಿರುವ ಭೇದಕ್ಕೆ ವಿರುದ್ಧವಾಗಿ ಅವರಿಬ್ಬರಿಗೆ ಅಭೇದವನ್ನು ಅಂಗೀಕರಿಸಿ ಸುಷುಪ್ತಿ ಸೂತ್ರಕ್ಕೆ ಪೂರ್ವಪಕ್ಷವನ್ನು ಮಾಡುವುದು ಹೇಗೆ ಸಾಧ್ಯ?

**ಇಲ್ಲಿಗೆ ಬ್ರಾಹ್ಮಣಾಧಿಕರಣ ಮುಗಿಯಿತು.**

**ಪ್ರಥಮಾಧ್ಯಾಯದ ಮೂರನೆಯ ಪಾದವೂ ಮುಗಿಯಿತು.**

ಶ್ರೀಮದಾನಂದತೀರ್ಥರು ರಚಿಸಿರುವ

# ಬ್ರಹ್ಮಸೂತ್ರ ಭಾಷ್ಯ

## ಮೊದಲನೆಯ ಅಧ್ಯಾಯದ

# ನಾಲ್ಕನೆಯ ಪಾದ

## ಆನುಮಾನಿಕಾಧಿಕರಣ -1

**॥ ಹರಿಃ ಓಂ ॥**

**ಶ್ರುತಿಲಿಂಗಾದಿಭಿಃ ಅನ್ಯತ್ರೈವ ಪ್ರಸಿದ್ಧಾನಾಮಪಿ ಶಬ್ದಾನಾಂ ಸಾಮಸ್ತ್ಯೇನ ವಿಶೇಷಹೇತುಭಿಃ ವಿಷ್ಣಾವೇವ ಪ್ರವೃತ್ತಿಂ ದರ್ಶಯತಿ ಅಸ್ಮಿನ್ ಪಾದೇ ।**

ಈ ಪಾದದಲ್ಲಿ ಶ್ರುತಿ ಮತ್ತು ಲಿಂಗಗಳಿಂದ ವಿಷ್ಣುವಿಗಿಂತ ಭಿನ್ನವಾದುದನ್ನೇ ಹೇಳುವಂತೆ ತೋರುವ ಶಬ್ದಗಳಿಂದ, ಸ್ವರವರ್ಣಗಳಿಂದಲೂ ವಿಷ್ಣುವೇ ವಾಚ್ಯನೆಂದು ಪ್ರಬಲವಾದ ಕಾರಣಗಳನ್ನು ನೀಡಿ ಸೂತ್ರಕಾರರು ಸಮರ್ಥಿಸಿದ್ದಾರೆ.

**ವಿವರಣೆ :** 1. ಪ್ರಥಮ ಮತ್ತು ದ್ವಿತೀಯ ಪಾದದಲ್ಲಿ ಅನ್ಯತ್ರ ಪ್ರಸಿದ್ಧ ಶಬ್ದಗಳ ಸಮನ್ವಯ. ಈ ಪಾದದಲ್ಲಿ ಅನ್ಯತ್ರೈವ ಪ್ರಸಿದ್ಧವಾದ ಶಬ್ದಗಳ ಸಮನ್ವಯ. ಆನಂದಮಯ, ಆಕಾಶ ಮುಂತಾದ ಶಬ್ದಗಳು ವೈದಿಕ- ಲೌಕಿಕ ಪ್ರಯೋಗಗಳಲ್ಲಿ ವಿಷ್ಣು ಭಿನ್ನವಾದ ಪ್ರಾಪಂಚಿಕ ವಸ್ತುಗಳನ್ನೋ ದೇವತೆಗಳನ್ನೋ ಹೇಳುತ್ತವೆ. ಆದರೆ ಅವುಗಳು ವಿಷ್ಣುವಾಚಕವಲ್ಲ ಎಂದು

ಹೇಳಲು ಬಲವಾದ ಕಾರಣಗಳಿಲ್ಲ. ಅಂತಹ ಶಬ್ದಗಳು ಅನ್ಯತ್ರ ಪ್ರಸಿದ್ಧ ಶಬ್ದಗಳು. ಆದರೆ, ಕೆಲವು ಶಬ್ದಗಳು ವಿಷ್ಣುವಾಚಕಗಳಾಗಬಹುದು ಎಂಬ ಸಂಭಾವನೆಗೂ ಒಳಗಾಗದೆ ಅವುಗಳಿಂದ ವಿಷ್ಣುವು ವಾಚ್ಯನಾಗಲು ಸಾಧ್ಯವೇ ಇಲ್ಲ ಎಂದು ಮೇಲ್ನೋಟಕ್ಕೆ ತೋರುತ್ತದೆ. ಇಂತಹ ಶಬ್ದಗಳು ಅನ್ಯತ್ರೈವ ಪ್ರಸಿದ್ಧ ಶಬ್ದಗಳು. ಅನ್ಯತ್ರ ಪ್ರಸಿದ್ಧ ಶಬ್ದಗಳಿಗೆ ಶ್ರುತಿ ಅಥವಾ ಲಿಂಗ ಇವುಗಳಲ್ಲಿ ಯಾವುದಾದರೊಂದರ ಬೆಂಬಲವಿದ್ದರೆ ಅನ್ಯತ್ರೈವ ಪ್ರಸಿದ್ಧ ಶಬ್ದಗಳಿಗೆ ಇವೆರಡರ ಸಹಾಯವೂ ಇರುವುದಿಲ್ಲ. ಶ್ರುತಿಲಿಂಗಗಳ ವಿರೋಧ ಬರುವುದರಿಂದ ಅವುಗಳು ವಿಷ್ಣುವಾಚಕಗಳಾಗಿರಲು ಸಾಧ್ಯವಿಲ್ಲ ಎನಿಸುತ್ತದೆ. ಉದಾಹರಣೆಗೆ- 'ದುಃಖೀ' ಎಂಬ ಶಬ್ದ. ದುಃಖ ಇದ್ದವನೇ ಆ ಶಬ್ದದ ಅರ್ಥ. ಅಥವಾ, ಅವ್ಯಕ್ತ ಶಬ್ದ. 'ಅವ್ಯಕ್ತಾತ್ ಪುರುಷಃ ಪರಃ' ಎಂದು ವಿಷ್ಣುವು ಅವ್ಯಕ್ತಕ್ಕಿಂತ ಉತ್ತಮನಾದ ಮೇಲೆ ಅಲ್ಲಿರುವ ಅವ್ಯಕ್ತ ಶಬ್ದವು ವಿಷ್ಣುವಾಚಕವಾಗಲು ಸಾಧ್ಯವಿಲ್ಲ. ಇಂತಹ ಶಬ್ದಗಳನ್ನು ವಿಷ್ಣುವಿನಲ್ಲಿ ಸಮನ್ವಯ ಮಾಡಲಾಗುತ್ತದೆ.

'ದುಃಖೀ' ಎಂಬ ಶಬ್ದವನ್ನು ಸಮನ್ವಯ ಮಾಡುವುದು ಅಸಂಭಾವಿತ ಎಂದು ತೋರಿದರೂ ಅದನ್ನು ಸಮನ್ವಯ ಮಾಡುವುದು ತೀರಾ ಅಶಕ್ಯವೇನಲ್ಲ. ಶಬ್ದಗಳು ವಸ್ತು ವಾಚಕಗಳಾಗಿರಲು ಎರಡು ಕಾರಣಗಳಿವೆ. ಆ ಶಬ್ದದಿಂದ ಹೇಳಲ್ಪಡುವ ಗುಣಗಳು ಶಬ್ದವಾಚ್ಯ ವ್ಯಕ್ತಿ ಅಥವಾ ವಸ್ತುಗಳಲ್ಲಿ ಇರಬೇಕು. ಉದಾಹರಣೆಗೆ 'ಪರಿಮಳವಾದ ಹೂ' ಎಂದಾಗ 'ಪರಿಮಳ' ಎಂಬ ಗುಣ ಹೂವಿನಲ್ಲಿದ್ದರೆ ಮಾತ್ರ ಆ ಶಬ್ದ ಹೂವಿಗೆ ವಾಚಕವಾಗುತ್ತದೆ. ಅಥವಾ, ಶಬ್ದದಿಂದ ವಾಚ್ಯವಾದ ಗುಣ-ಧರ್ಮಗಳು ವ್ಯಕ್ತಿಯಲ್ಲಿ ನೇರವಾಗಿ ಇಲ್ಲದಿದ್ದರೂ ಆದರ ಒಡೆತನವಷ್ಟೇ ಇದ್ದರೂ ಸಾಕು. ಅಂತಹ ಶಬ್ದ ಆ ವ್ಯಕ್ತಿಗೆ ವಾಚಕವಾಗುತ್ತದೆ. ಉದಾಹರಣೆಗೆ 'ಧನಿಕ' ಎಂಬ ಶಬ್ದ. ಆ ಶಬ್ದದ ಅರ್ಥ ಹಣವುಳ್ಳವನು ಎಂದು. ಹಣ ವ್ಯಕ್ತಿಯ ಜೇಬಿನಲ್ಲೇ ಇರಬೇಕಿಲ್ಲ. ಅಥವಾ ಜೇಬಿನಲ್ಲಿ ಒಡೆಯನ ಹಣವನ್ನು ತುಂಬಿಸಿ ಹಿಡಿದಿರುವ ಪೇದೆಯೂ ಧನಿಕನಲ್ಲ. ಹಣ ಎಲ್ಲೇ ಇದ್ದರೂ ಅದರ ಒಡೆತನ ವ್ಯಕ್ತಿಗಿರಬೇಕು. ಆಗ ಅವನು 'ಧನಿಕ'ನೆನಿಸುತ್ತಾನೆ. ಅದರಂತೆ, ಜೀವನು ದುಃಖದ ಸಂಪರ್ಕದಿಂದ ದುಃಖಿಯಾದರೆ ಪರಮಾತ್ಮ ದುಃಖದ ಒಡೆತನದಿಂದ ದುಃಖಿ. ತನಗೆ ದುಃಖವಾಗದಂತೆ, ತಪ್ಪು ಮಾಡಿದವರಿಗೆ ದುಃಖವಾಗುವಂತೆ ನಿಯಂತ್ರಿಸಬಲ್ಲ ಸಾಮರ್ಥ್ಯ ದೇವರಿಗಿದೆ. ಅದರಿಂದಾಗಿ ಅವನು 'ದುಃಖೀ' ಎನಿಸುತ್ತಾನೆ. ಹೀಗೆ ಪ್ರಬಲವಾದ ಕಾರಣಗಳನ್ನು ನೀಡಿ ಇಂತಹ ಶಬ್ದಗಳನ್ನು ಇಲ್ಲಿ ಸಮನ್ವಯ ಮಾಡಲಾಗಿದೆ.

2. ಇಂತಹ ಶಬ್ದಗಳನ್ನು ಸಮನ್ವಯ ಮಾಡುವುದರಿಂದ ಸಿಗುವ ಪ್ರಯೋಜನವೇನು? ಪ್ರಥಮ ಸೂತ್ರದ ಬ್ರಹ್ಮ ಶಬ್ದ ಹೇಳುವ ಗುಣಪೂರ್ಣತೆಯ ಸಿದ್ಧಿಯೇ ಸಮನ್ವಯದ ಪ್ರಯೋಜನ. ಉತ್ಕರ್ಷವಾಚಕ ಶಬ್ದಗಳನ್ನು ಪರಮಾತ್ಮನಲ್ಲಿ ಸಮನ್ವಯ ಮಾಡಿದರೆ ಪರಮಾತ್ಮನಿಗೆ ಅಂತಹ ಶಬ್ದಗಳಿಂದ ವಾಚ್ಯವಾದ ಗುಣಗಳು ಸಿದ್ಧವಾಗಿ ಅವನು ಸರ್ವಗುಣ ಪೂರ್ಣನಾಗುತ್ತಾನೆ. ಆದರೆ, ದುಃಖೀ ಶಬ್ದವನ್ನು

ಸಮನ್ವಯ ಮಾಡಿದರೆ ಇಂತಹ ಲಾಭವೇನೂ ಇಲ್ಲ. ದುಃಖನಿಯಾಮಕತ್ವವು ಸಿದ್ಧವಾಗುವುದಾದರೂ ಅದು ಅಂತರ್ಯಾಮಿ ಅಧಿಕರಣದಿಂದಲೇ ಸಿದ್ಧವಾಗಿದೆ. ಅಲ್ಲಿ ಪರಮಾತ್ಮ ಅಂತರ್ಯಾಮಿಯಾಗಿದ್ದು ಸರ್ವಕ್ಕೂ ನಿಯಾಮಕ ಎಂದು ಹೇಳಲಾಗಿದೆ. ಆದ್ದರಿಂದ ಇಂತಹ ಅಸಂಭಾವಿತವಾದ ಶಬ್ದಗಳನ್ನು ಏಕೆ ಸಮನ್ವಯ ಮಾಡಬೇಕು? ಇದಕ್ಕೆ ಚಂದ್ರಿಕಾದಲ್ಲಿ ಎರಡು ಕಾರಣಗಳನ್ನು ಹೇಳಲಾಗಿದೆ.

ಅ. ಬ್ರಹ್ಮ ಸರ್ವಗುಣಪೂರ್ಣ ಎಂಬ ಜ್ಞಾನದಂತೆ ಅವನು ಸರ್ವಶಬ್ದವಾಚ್ಯ ಎಂಬ ಜ್ಞಾನವೂ ಮೋಕ್ಷಕ್ಕೆ ಕಾರಣ. 'ಪ್ರಾಣ ಋಚ ಇತ್ಯೇವ ವಿದ್ಯಾತ್' ಎಂಬ ಐತರೇಯಶ್ರುತಿ ಪ್ರಾಣನಾಮಕ ಪರಮಾತ್ಮ ಸರ್ವಶಬ್ದ ವಾಚ್ಯನೆಂದು (ಋಚಃ) ತಿಳಿಯಬೇಕು ಎಂದು ವಿಧಿಸಿದೆ. ಅದಕ್ಕಾಗಿ 'ಸ ಬದ್ಧಃ ಸ ದುಃಖೀ ಸ ಬಂಧಯತಿ' ಎಂಬ ಶ್ರುತಿಯಲ್ಲಿ ಬರುವ ಬದ್ಧ ದುಃಖೀ ಮೊದಲಾದ ಶಬ್ದಗಳನ್ನೂ ಸಮನ್ವಯ ಮಾಡಬೇಕು.

ಆ. 'ನಾಮಾನಿ ಸರ್ವಾಣಿ ಯಮಾವಿಶಂತಿ' ಎಂಬ ಪ್ರಮಾಣವಾಕ್ಯ ಸರ್ವಶಬ್ದಗಳೂ ಪರಮಾತ್ಮನಲ್ಲಿ ಸಮನ್ವಯಗೊಳ್ಳುತ್ತವೆ ಎಂದು ತಿಳಿಸಿದೆ. 'ದುಃಖೀ ಶಬ್ದವನ್ನು ಸಮನ್ವಯ ಮಾಡದಿದ್ದರೆ 'ಸರ್ವಾಣಿ' ಎಂಬ ಸರ್ವಶಬ್ದಕ್ಕೆ 'ದುಃಖೀ' ಮೊದಲಾದ ಶಬ್ದಗಳನ್ನು ಹೊರತು ಇತರ ಶಬ್ದಗಳು ಬ್ರಹ್ಮವಾಚಕಗಳು ಎಂದು ಸಂಕೋಚಗೊಳಿಸಬೇಕಾಗುತ್ತದೆ. ಅಸಂಕುಚಿತವಾದ ಅರ್ಥವನ್ನು ಹೇಳಲು ಬರುವಾಗ ಶ್ರುತ್ಯರ್ಥವನ್ನು ಸಂಕೋಚಗೊಳಿಸಬಾರದು. ಅದಕ್ಕಾಗಿ ದುಃಖೀ ಶಬ್ದದ ಸಮನ್ವಯ.

# ಆನುಮಾನಿಕಾಧಿಕರಣ - 1

## ಓಂ ॥ ಆನುಮಾನಿಕಮಪಿ ಏಕೇಷಾಮಿತಿ ಚೇನ್ನ ಶರೀರರೂಪಕವಿನ್ಯಸ್ತಗೃಹೀತೇರ್ದರ್ಶಯತಿ ಚ ॥ ಓಂ

'ತತ್ತು ಸಮನ್ವಯಾತ್' ಇತಿ ಸರ್ವಶಬ್ದಾನಾಂ ಪರಮೇಶ್ವರೇ ಸಮನ್ವಯಃ ಉಕ್ತಃ । ತನ್ನ ಯುಜ್ಯತೇ । ಯತಃ 'ಅವ್ಯಕ್ತಾತ್ ಪುರುಷಃ ಪರಃ' (ಕಠ. 1.3.11) ಇತಿ ಸಾಂಖ್ಯಾನುಮಾನಪರಿಕಲ್ಪಿತಂ ಪ್ರಧಾನಮಪಿ ಏಕೇಷಾಂ ಶಾಖಿನಾಂ ಉಚ್ಯತೇ ಇತಿ ಚೇತ್, ನ । ತಸ್ಯೈವ ಪಾರತಂತ್ರ್ಯಾತ್ ಶರೀರರೂಪಕೇ ಅವ್ಯಕ್ತೇ ವಿನ್ಯಸ್ತಸ್ಯ ಪರಮಾತ್ಮನ ಏವ ಅವ್ಯಕ್ತಶಬ್ದೇನ ಗೃಹೀತಿಃ । ಕಪ್ರತ್ಯಯಃ ಕುತ್ಸನೇ । ಪರಮಾತ್ಮನ ಏವಾವ್ಯಕ್ತಶಬ್ದಃ, ತತ್ತಂತ್ರತ್ವೇನ ತಚ್ಛರೀರರೂಪತ್ವಾತ್ ಇತರಸ್ಯಾಪಿ ಅವ್ಯಕ್ತಶಬ್ದಃ । 'ತುಚ್ಛೇನಾಭ್ವಪಿಹಿತಂ ಯದಾಸೀತ್' (ಋ.10.129.3) ಇತಿ ದರ್ಶಯತಿ ಚ ।

ಅವ್ಯಕ್ತಮಚಲಂ ಶಾಂತಂ ನಿಷ್ಕಲಂ ನಿಷ್ಕ್ರಿಯಂ ಪರಮ್ ।
ಯೋ ವೇದ ಹರಿಮಾತ್ಮಾನಂ ಸ ಭಯಾದನು ಮುಚ್ಯತೇ ।

ಇತಿ ಪಿಪ್ಪಲಾದಶಾಖಾಯಾಮ್ ।

**'ಅಕ್ಷರಂ ಬ್ರಹ್ಮ ಪರಮಂ' ಇತ್ಯುಕ್ತ್ವಾ 'ಅವ್ಯಕ್ತೋಽಕ್ಷರ ಇತ್ಯುಕ್ತಃ' (ಗೀತಾ 8.3.21) ಇತಿ ವಚನಾಚ್ಚ॥ 1 ॥**

'ತತ್ತು ಸಮನ್ವಯಾತ್' (1.1.4) ಎಂಬ ಸೂತ್ರದಲ್ಲಿ ಸರ್ವ ಶಬ್ದಗಳೂ ಪರಮಾತ್ಮನಲ್ಲಿ ಸಮನ್ವಯಗೊಳ್ಳುತ್ತವೆ ಎಂದು ಹೇಳಲಾಗಿದೆ. ಆದರೆ ಅದು ಸರಿಯಲ್ಲ. ಏಕೆಂದರೆ, ಸಾಂಖ್ಯರ ಅನುಮಾನ ಪ್ರಮಾಣದಿಂದ ಸಿದ್ಧವಾದ ಪ್ರಕೃತಿಯೂ 'ಅವ್ಯಕ್ತಾತ್ ಪುರುಷಃ ಪರಃ' ಎಂದು ಕಠಶಾಖೆಯಲ್ಲಿ ಅವ್ಯಕ್ತ ಶಬ್ದದಿಂದ ವಾಚ್ಯವಾಗಿದೆ, ಎಂದರೆ ಇದು ಯುಕ್ತವಲ್ಲ. ವಿಷ್ಣುವಿನ ಅಧೀನವಾದುದರಿಂದ ಅವನ ಶರೀರದಂತಿರುವ ಅವ್ಯಕ್ತ ತತ್ತ್ವದಲ್ಲಿ (ಪ್ರಕೃತಿಯಲ್ಲಿ) ಇರುವ ಆ ಪರಮಾತ್ಮನೇ ಅವ್ಯಕ್ತ ಶಬ್ದದಿಂದ (ಕಠಶ್ರುತಿಯಲ್ಲಿ) ವಾಚ್ಯನಾಗಿದ್ದಾನೆ.

ಸೂತ್ರದಲ್ಲಿ 'ಶರೀರ ರೂಪ-ಕ' ಎಂಬ ಕ ಪ್ರತ್ಯಯ ನಿಂದಾರ್ಥದಲ್ಲಿದೆ. (ನಮಗೆ ಪಾಂಚಭೌತಿಕ ಶರೀರವಿದ್ದಂತೆ ಅವ್ಯಕ್ತಾದಿ ಜಡವಸ್ತುಗಳು ಪರಮಾತ್ಮನಿಗೂ ಸುಖದುಃಖಗಳಿಗೆ ಕಾರಣವಾದ ಶರೀರವಲ್ಲ. ಅವನು ನಿಯಾಮಕನಾದುದರಿಂದಷ್ಟೇ ಅವು ಶರೀರಗಳು, ಎಂದು ಸೂಚಿಸಲು ಕುತ್ಸಾರ್ಥದಲ್ಲಿ ಕಪ್ರತ್ಯಯ.)

ಅವ್ಯಕ್ತಾದಿ ಶಬ್ದಗಳು ಮುಖ್ಯವಾಗಿ ಪರಮಾತ್ಮನದೇ ಹೆಸರುಗಳು. ಆ ಹೆಸರಿನ ಪರಮಾತ್ಮ ಒಳಗಿರುವುದರಿಂದಲೇ ಅವನ ದೇಹದಂತಿರುವ ವಸ್ತುಗಳಿಗೂ ಅವ್ಯಕ್ತಾದಿ ಶಬ್ದಗಳು ಹೆಸರಾಗಿವೆ. 'ತುಚ್ಛ್ಯೇನಾಭ್ವಪಿಹಿತಂ' ಎಂಬ ಶ್ರುತಿ ಇದನ್ನೇ ಹೇಳುತ್ತದೆ. ಪಿಪ್ಪಲಾದ ಶಾಖೆಯಲ್ಲಿ ಹೀಗಿದೆ- ಯಾವ ಅಧಿಕಾರಿಯು, ಅಜ್ಞೇಯನಾದುದರಿಂದ ಅವ್ಯಕ್ತನೆನಿಸಿರುವ, ಐಶ್ವರ್ಯದಿಂದ ಚ್ಯುತಿ ಇಲ್ಲದಿರುವುದರಿಂದ ಅಚಲನೆನಿಸಿರುವ, ಷೋಡಶ ಕಲಾರಹಿತನಾದ, ಅನಾಯಾಸವಾಗಿ ಕ್ರಿಯಾಶೀಲನಾದ ಶ್ರೀಹರಿಯನ್ನು ಸ್ವಾಮಿಯನ್ನಾಗಿ ತಿಳಿಯುವನೋ ಅವನು ಕೂಡಲೇ (ಅನು) ಸಂಸಾರಭಯದಿಂದ ಬಿಡುಗಡೆ ಹೊಂದುತ್ತಾನೆ'. ಭಗವದ್ಗೀತೆಯಲ್ಲೂ 'ಪರಬ್ರಹ್ಮನೇ ಅಕ್ಷರ' ಎಂದು ಹೇಳಿ 'ಅವ್ಯಕ್ತವೇ ಅಕ್ಷರ' ಎಂದು ಕರೆಯಲ್ಪಡುತ್ತದೆ ಎಂಬ ಮಾತಿದೆ.

**ವಿವರಣೆ** - 1. ಈ ಅಧಿಕರಣವು ಸೂತ್ರದ ಆರಂಭದ ಶಬ್ದವಾದ 'ಆನುಮಾನಿಕ' ಶಬ್ದದಿಂದ ಹೆಸರಿಸಲ್ಪಡುವುದಾದರೂ ಇಲ್ಲಿ ಸಮನ್ವಯ ಮಾಡಲಾಗುವ ಶಬ್ದ ಅವ್ಯಕ್ತನಾಮ. ಅವ್ಯಕ್ತನಾಮಕ್ಕೆ ಶಾಸ್ತ್ರದಲ್ಲಿ ಪ್ರಕೃತಿತತ್ವ ಎಂದು ಅರ್ಥ. ಅಷ್ಟೇ ಅಲ್ಲ ಪ್ರಕೃತ ವಿಷಯ ವಾಕ್ಯದಲ್ಲಿ 'ಅವ್ಯಕ್ತಾತ್ ಪುರುಷಃ ಪರಃ' ಎಂದು ಅವ್ಯಕ್ತವು ಪರಮಾತ್ಮನಲ್ಲಿರುವ ಉತ್ಕರ್ಷಕ್ಕೆ ಅವಧಿಯಾಗಿ ಹೇಳಲ್ಪಟ್ಟಿದೆ. 'ಪುರುಷನು ಅವ್ಯಕ್ತಕ್ಕಿಂತ ಪರನಾದರೆ ಅವ್ಯಕ್ತವು ಪುರುಷನಿಗಿಂತ ಅವರ' ಕಡಿಮೆಯಾಯಿತು. ವಿಷ್ಣುವು ಯಾರಿಗಿಂತಲೂ ಕಡಿಮೆಯವನಲ್ಲ. ಅವನು ಸರ್ವಾಧಿಪತಿಯೆಂದು ಹಿಂದಿನ ಸೂತ್ರದಲ್ಲೇ ಹೇಳಲಾಗಿದೆ. ಹೀಗೆ ಶ್ರುತಿಪ್ರಸಿದ್ಧಿ ಮತ್ತು ಯುಕ್ತಿಗಳಿಂದ ಅವ್ಯಕ್ತ ಶಬ್ದ ಅನ್ಯತ್ರೈವ ಪ್ರಸಿದ್ಧ ಶಬ್ದವಾಗಿದೆ.

**2. ಆನುಮಾನಿಕಂ** – ಸಾಂಖ್ಯರು ಪ್ರಕೃತಿಯನ್ನು ಅನುಮಾನ ಪ್ರಮಾಣದಿಂದ ಸಾಧಿಸುತ್ತಾರೆ. ನಾವು ಕಾಣುವ ಈ ಜಗತ್ತು ತ್ರಿಗುಣಾತ್ಮಕವಾದುದು. ಆದ್ದರಿಂದ ಇದಕ್ಕೆ ಕಾರಣವಾದ ಸೂಕ್ಷ್ಮರೂಪವೂ ತ್ರಿಗುಣಾತ್ಮಕವೇ ಆಗಿರಬೇಕು. ಅದೇ, ಅವ್ಯಕ್ತ - ಪ್ರಕೃತಿ. ಇದು ಅವರು ಅನುಮಾನ ಮಾಡುವ ಕ್ರಮ. ಆದ್ದರಿಂದ ಪ್ರಕೃತಿ ಅನುಮಾನಿಕ. ಅಂತಹ ಪ್ರಕೃತಿಯೇ 'ಅವ್ಯಕ್ತಾತ್ ಪುರುಷಃ ಪರಃ' ಎಂಬ ಕಠ ಶಾಖೆಯ ಅವ್ಯಕ್ತಪದದಿಂದ ವಾಚ್ಯ ಎಂದು ಪೂರ್ವಪಕ್ಷ.

**3. ಶರೀರರೂಪಕವಿನ್ಯಸ್ತ ಗೃಹೀತೇಃ** - ಅವ್ಯಕ್ತಾದಿ ತತ್ತ್ವಗಳೆಲ್ಲವೂ ಬ್ರಹ್ಮನ ಅಧೀನಗಳಾದುದರಿಂದ ಅವನ ಶರೀರದಂತೆ ಇವೆ. ಅವನು ನಿಯಾಮಕ, ಅವು ನಿಯಮ್ಯ. ಸ್ವತಂತ್ರನಾದ ಅವನಿಗೆ ಅವ್ಯಕ್ತ ಎಂಬ ಹೆಸರು ಮುಖ್ಯವಾದುದು. ಅದರಿಂದಾಗಿ ಅವನ ಶರೀರದಂತಿರುವ ತತ್ತ್ವಕ್ಕೂ ಆ ಹೆಸರು ಬಂದಿದೆ. ಪ್ರತಿಮೆಯಲ್ಲಿ ದೇವರಿರುವುದರಿಂದ ಪ್ರತಿಮೆಯೇ ದೇವರು ಎಂದಂತೆ ಪರಮಾತ್ಮನಿಗೆ ಮುಖ್ಯವಾಗಿ ಅವ್ಯಕ್ತಾದಿ ಹೆಸರುಗಳಿವೆ. ಇದಕ್ಕೆ ಆಧಾರವನ್ನು 'ದರ್ಶಯತಿ ಚ' ಎಂಬ ಸೂತ್ರದ ಎರಡು ಶಬ್ದಗಳು ನೀಡಿವೆ. ದರ್ಶನ ಎಂದರೆ ಶ್ರುತಿ, ಚ ಶಬ್ದದಿಂದ ಸ್ಮೃತಿ. ಆ ಶ್ರುತಿ -ಸ್ಮೃತಿಗಳನ್ನು ಭಾಷ್ಯಕಾರರು ಉದಾಹರಿಸಿದ್ದಾರೆ.

**4. ಶ್ರುತ್ಯರ್ಥ**-ತುಚ್ಛೇನಾಭ್ವಪಿಹಿತಂ ಯದಾಸೀತ್ ॥ ಈ ಶ್ರುತಿ ಶ್ರೀಹರಿ ಸ್ವತಂತ್ರ; ಪ್ರಕೃತ್ಯಾದಿಗಳು ಪರಾಧೀನವಾಗಿದ್ದು ನಿಕೃಷ್ಟವಾಗಿವೆ, ಎಂದು ತಿಳಿಸುತ್ತದೆ. ತುಚ್ಛೇನ=ಪರಮಾತ್ಮನಿಗಿಂತ ಗುಣದಲ್ಲಿ ಅಲ್ಪವಾದ ಪ್ರಕೃತಿಯಿಂದ ಆಭು=ವಿಭುವಾದ ಪರಬ್ರಹ್ಮ ಅಪಿಹಿತಂ=ಆಚ್ಛಾದಿತವಾಗಿ ಆಸೀತ್=ಆಗಿತ್ತು. ॥ ಸೂತ್ರ 1 ॥

**ಓಂ ॥ಸೂಕ್ಷ್ಮಂ ತು ತದರ್ಹತ್ವಾತ್ ॥ ಓಂ**

**ಸೂಕ್ಷ್ಮಮೇವ ಅವ್ಯಕ್ತಶಬ್ದೇನ ಉಚ್ಯತೇ । ತದ್ಧಿ ಅವ್ಯಕ್ತತಾಮರ್ಹತಿ । ಸೂಕ್ಷ್ಮತ್ವಂ ಚ ಮುಖ್ಯಂ ತಸ್ಯೈವ ।**

**ಯತ್ತತ್ ಸೂಕ್ಷ್ಮಂ ಪರಮಂ ವೇದಿತವ್ಯಂ ನಿತ್ಯಂ ಪದಂ ವೈಷ್ಣವಂ ಹ್ಯಾಮನಂತಿ ।**
**ಯತ್ತಲ್ಲೋಕಾ ನ ವಿದುರ್ಲೋಕಸಾರಂ ವಿದಂತ್ಯೇತತ್ ಕವಯೋ ಯೋಗನಿಷ್ಠಾಃ ।**
**ಇತಿ ಚ ಪಿಪ್ಪಲಾದಶಾಖಾಯಾಮ್ ॥**

**ಮುಖ್ಯೇ ಚ ವಿದ್ಯಮಾನೇ ನಾಮುಖ್ಯಂ ಯುಕ್ತಮ್ ॥ 2 ॥**

ಸೂಕ್ಷ್ಮವಾದುದು 'ಅವ್ಯಕ್ತ' ಶಬ್ದದಿಂದ ಕರೆಯಲ್ಪಡುತ್ತದೆ. ಏಕೆಂದರೆ ಸೂಕ್ಷ್ಮವಾದುದೇ 'ಅವ್ಯಕ್ತತೆಗೆ' ಅರ್ಹವಾದುದು. ಮುಖ್ಯವಾದ ಸೂಕ್ಷ್ಮತ್ವವಾದರೋ ವಿಷ್ಣುವಿಗೇ ಇರುವುದು. ( ಆದ್ದರಿಂದ ಅವ್ಯಕ್ತ ಶಬ್ದದಿಂದ ಮುಖ್ಯವಾಚ್ಯ ವಿಷ್ಣು.) ಪಿಪ್ಪಲಾದ ಶಾಖೆಯಲ್ಲಿ ಹೀಗಿದೆ - ಲೋಕೋತ್ತರವಾದ( ಲೋಕಸಾರಂ) ವಿಷ್ಣುಸ್ವರೂಪವೇನಿದೆಯೋ

(ವೈಷ್ಣವ ಪದಂ) ಅದನ್ನು ಪರಮ ಸೂಕ್ಷ್ಮವನ್ನಾಗಿ ತಿಳಿಯಬೇಕು(ವೇದಿತವ್ಯಂ) ಎಂಬುದನ್ನು 'ಏಷೋಽಣುರಾತ್ಮಾ ಚೇತಸಾ ವೇದಿತವ್ಯಃ' ಎಂದು ಆಥರ್ವಣರು ಹೇಳುತ್ತಾರೆ. (ಆಮನಂತಿ). ಯಾವುದನ್ನು ಪಾಮರರು (ಲೋಕಾಃ) ತಿಳಿಯಲಾರರೋ ಅಂತಹ ವಿಷ್ಣುವನ್ನು ಬ್ರಹ್ಮಧ್ಯಾನಪರರಾದ (ಯೋಗನಿಷ್ಠಾಃ) ಜ್ಞಾನಿಗಳು (ಕವಯಃ) ಸಾಕ್ಷಾತ್ಕರಿಸಿಕೊಳ್ಳುತ್ತಾರೆ (ವಿದಂತಿ).

ಪ್ರಕೃತ ವಿಷಯವಾಕ್ಯದಲ್ಲಿರುವ ಅವ್ಯಕ್ತಶಬ್ದದಿಂದ ಮುಖ್ಯವಾಗಿ ಅವ್ಯಕ್ತನಾದ ವಿಷ್ಣುವೇ ವಾಚ್ಯನೆಂದು ಹೇಳಲು ಬರುವಾಗ ಅಮುಖ್ಯವಾದ ಪ್ರಕೃತಿಯನ್ನು ವಾಚ್ಯವೆಂದು ಹೇಳಬಾರದು.

**ವಿವರಣೆ-** ಅವ್ಯಕ್ತಶಬ್ದವು ವಿಷ್ಣುವಾಚಕವಾಗಬಹುದಾದರೂ ಅವನೇ ಮುಖ್ಯಾರ್ಥನಾಗುವುದು ಹೇಗೆ? ಎಂಬ ಪ್ರಶ್ನೆಗೆ ಈ ಸೂತ್ರ ಉತ್ತರ ನೀಡುತ್ತದೆ. 'ನ ವ್ಯಜ್ಯತೇ ಇತಿ-ಅವ್ಯಕ್ತಂ' ಕಣ್ಣಿಗೆ ಕಾಣದ ಸೂಕ್ಷ್ಮವಸ್ತು ಅವ್ಯಕ್ತ. ವಿಷ್ಣು 'ಅಣೋರಣೀಯಾನ್' - ಪರಮ ಸೂಕ್ಷ್ಮನಾದುದರಿಂದ ಅವ್ಯಕ್ತ ಶಬ್ದ ಅವನಿಗೇ ಮುಖ್ಯವಾಗಿ ಅನ್ವಯಿಸುತ್ತದೆ. ||2||

## ಓಂ || ತದಧೀನತ್ವಾತ್ ಅರ್ಥವತ್ || ಓಂ

**ತದಧೀನತ್ವಾಚ್ಚ ಅವ್ಯಕ್ತತ್ವಾದೀನಾಂ ತಸ್ಯೈವ ಅವ್ಯಕ್ತತ್ವ-ಪರಾವರತ್ವಾದಿಕಂ ಅರ್ಥವತ್।**
**ಯದಧೀನೋ ಗುಣೋ ಯಸ್ಯ ತದ್ಗುಣೀ ಸೋಽಭಿಧೀಯತೇ।**
**ಯಥಾ ಜೀವಃ ಪರಾತ್ಮೇತಿ ಯಥಾ ರಾಜಾ ಜಯೀತ್ಯಪಿ ||**

**ಇತಿ ಚ ಸ್ಕಾಂದೇ || 3 ||**

ಅವ್ಯಕ್ತಾದಿ ಶಬ್ದಗಳಿಂದ ವಾಚ್ಯವಾದ ಸೂಕ್ಷ್ಮತ್ವಾದಿ ಗುಣಗಳು ಮುಖ್ಯವಾಗಿ ವಿಷ್ಣುವಿನಲ್ಲೇ ಇರುವುದರಿಂದಷ್ಟೇ ಅವ್ಯಕ್ತಾದಿ ಶಬ್ದಗಳು ವಿಷ್ಣುವಾಚಕಗಳಲ್ಲ, ಅವ್ಯಕ್ತಾದಿ ತತ್ತ್ವಗಳಲ್ಲಿರುವ ಅವ್ಯಕ್ತತ್ವಾದಿಗಳೂ ಅವನ ಅಧೀನಗಳಾಗಿರುವ ಕಾರಣ, ಅವ್ಯಕ್ತತ್ವ, ಪರಾವರತ್ವ ಮುಂತಾದ ಧರ್ಮಗಳು ಅವನಿಗೆ ಇರುವುದರಿಂದಲೂ ಆ ಶಬ್ದಗಳು ಅವನಲ್ಲೇ ಸಾರ್ಥಕಗಳು. ಸ್ಕಾಂದ ಪುರಾಣದಲ್ಲಿ ಹೀಗಿದೆ - 'ಯಾವುದರ ಗುಣವು ಯಾರ ಅಧೀನವೋ ಅವನೇ ಆ ಗುಣವುಳ್ಳವನೆಂದು ಹೇಳಲ್ಪಡುತ್ತಾನೆ. ಉದಾಹರಣೆಗೆ - ಪರಮಾತ್ಮನು 'ಅನೇನ ಜೀವೇನ' ಎಂಬಲ್ಲಿ ಜೀವನೆಂದು ಹೇಳಲ್ಪಡುತ್ತಾನೆ. ರಾಜನು ಜಯಶಾಲೀ ಎನಿಸುತ್ತಾನೆ.

**ವಿವರಣೆ** 1. 'ಅವ್ಯಕ್ತಾತ್ ಪುರುಷಃ ಪರಃ' ಎಂದು ಕಠಶ್ರುತಿಯಲ್ಲಿ ಅವ್ಯಕ್ತವು ಪುರುಷನಿಗಿಂತ ನೀಚವಾಗಿ ಶ್ರುತವಾದುದರಿಂದ ಅವ್ಯಕ್ತ ಶಬ್ದ ವಿಷ್ಣುವಾಚಕವಲ್ಲ ಎಂಬ ಪೂರ್ವಪಕ್ಷ ಯುಕ್ತಿಗೆ ಇಲ್ಲಿ ಸಮಾಧಾನವಿದೆ.

2. ಶಬ್ದವು ವಸ್ತುವಾಚಕವಾಗಲು ಆ ಶಬ್ದದಿಂದ ವಾಚ್ಯವಾದ ಗುಣವು ಹೇಗೆ

ಕಾರಣವಾಗುವುದೋ ಅದರಂತೆ ಆ ಗುಣದ ಸ್ವಾತಂತ್ರ್ಯವೂ ಕಾರಣವಾಗುತ್ತದೆ. ರಣರಂಗದಲ್ಲಿ ಹೋರಾಡಿ ಜಯಗಳಿಸಿದವರು ಯೋಧರು. ಆದರೆ 'ಜಯಶಾಲೀ' ಎಂಬ ಬಿರುದು ರಾಜನಿಗೆ. ಕಾರಣ, 'ಜಯಶಾಲೀ' ಎಂಬ ಶಬ್ದದ ಬಳಕೆಗೆ ಕಾರಣವಾದ ಜಯ ಭೃತ್ಯನಲ್ಲಿದ್ದರೂ ಆ ಭೃತ್ಯ ರಾಜನ ಅಧೀನ. ಆದ್ದರಿಂದ ರಾಜನೇ 'ಜಯಶಾಲಿ'. ಅದರಂತೆ ಪ್ರಕೃತ ಅವ್ಯಕ್ತದಲ್ಲಿರುವ ಅವ್ಯಕ್ತತೆಗೆ ವಿಷ್ಣು ನಿಯಾಮಕ. ಅವನ ಇಚ್ಛೆಯಿಂದಾಗಿ ಅದು ಅವ್ಯಕ್ತವಾಗಿ ಉಳಿದಿದೆ. ಆದ್ದರಿಂದ ವಿಷ್ಣುವೇ ಅವ್ಯಕ್ತ. ಆ ಅವ್ಯಕ್ತತತ್ತ್ವವು ಪರನಾದ ಪುರುಷನಿಗಿಂತ ಅವರ (ಕಡಿಮೆ)ವೆನಿಸಲೂ ಅವನೇ ಕಾರಣ. ಈ ದೃಷ್ಟಿಯಲ್ಲಿ ಅವನನ್ನು ಅವರ ಎನ್ನಲು ಅಡ್ಡಿಯೇನೂ ಇಲ್ಲ.

3. ಸ್ಕಾಂದಪುರಾಣ ಪರಮಾತ್ಮನನ್ನೂ ಜೀವ ಎಂದು ಕರೆಯಬಹುದು ಎನ್ನುತ್ತದೆ. ಜೀವಶಬ್ದದ ಪ್ರಯೋಗಕ್ಕೆ 'ಪ್ರಾಣಾಧಾರಕತ್ವ' ನಿಮಿತ್ತ. ಜೀವನಿಗೆ ಪ್ರಾಣಧಾರಣ ಶಕ್ತಿ ಈಶ್ವರನಿಂದಾಗಿದೆ. ಆದ್ದರಿಂದ ಶ್ರೀಹರಿಯೇ ಜೀವ ಎನಿಸುತ್ತಾನೆ.

ಇದರಿಂದ ದುಃಖೀ, ಬದ್ಧ, ಅವರ ಮುಂತಾದ ದೋಷವಾಚಕ ಶಬ್ದಗಳ ಸಮನ್ವಯವನ್ನು ತೋರಿಸಿದಂತಾಯಿತು. ಗುಣವಾಚಕ ಶಬ್ದಗಳು ವಿಷ್ಣುವಾಚಕಗಳಾಗಲು ಎರಡು ಕಾರಣ - ಆ ಶಬ್ದ ಹೇಳುವ ಗುಣಗಳು ಅವನಲ್ಲಿ ಉಚ್ಚಮಟ್ಟದಲ್ಲಿರುವುದು ಮತ್ತು ಆ ಗುಣಗಳು ಅವನ ಅಧೀನಗಳಾಗಿರುವುದು. ದೋಷವಾಚಕ ಶಬ್ದಗಳು ವಿಷ್ಣುವಾಚಕವಾಗಲು ಒಂದೇ ನಿಮಿತ್ತ - ಆ ದೋಷಗಳು ಹರಿಯ ಅಧೀನಗಳಾಗಿರುವುದು. ಈ ಎರಡು ವಿಧದ ಒಂದೊಂದು ಶಬ್ದಗಳನ್ನು ಆಚಾರ್ಯರು ಭಾಷ್ಯದಲ್ಲಿ ಸೂಚಿಸಿದ್ದಾರೆ - ''ಅವ್ಯಕ್ತತ್ವ ಪರಾವರತ್ವಾದೀನಾಂ'' ಅವ್ಯಕ್ತಶಬ್ದ ಪ್ರವೃತ್ತಿನಿಮಿತ್ತ ಅವ್ಯಕ್ತತ್ವ ಸೂಕ್ಷ್ಮತೆ. ಅವರ ಶಬ್ದದ ಪ್ರವೃತ್ತಿ ನಿಮಿತ್ತ - ಅವರತ್ವ= ನೀಚತ್ವ. ಆದರೆ, ಅವ್ಯಕ್ತತ್ವ ಶ್ರೀಹರಿಯಲ್ಲಿದೆ, ಅವರತ್ವ ಅವನಲ್ಲಿ ಇಲ್ಲ. ಇವೆರಡೂ ಶ್ರೀಹರಿಯ ಅಧೀನಗಳು.

4. ಭಾಷ್ಯದಲ್ಲಿ 'ಅವ್ಯಕ್ತತ್ವ ಪರಾವರತ್ವಾದಿಕಂ ತಸ್ಯೈವ' ಎಂದು ಒಂದು ಅನ್ವಯ. ಪ್ರಕೃತಿಯಲ್ಲಿರುವ ಅವ್ಯಕ್ತತ್ವ, ಪರಾವರತ್ವ ಈ ಧರ್ಮಗಳೂ ಅವನ ಸಂಬಂಧಿಗಳೇ ಎಂದು ಅರ್ಥ. 'ಅವ್ಯಕ್ತತ್ವ ಪರಾವರತ್ವಾದಿಕಂ ಅರ್ಥವತ್' ಎಂದು ಮತ್ತೊಂದು ಅನ್ವಯ. ಈಗ 'ಅವ್ಯಕ್ತತ್ವ- ಪರಾವರತ್ವ ವಾಚಕ ಪದ - ಅವನಲ್ಲೇ ಸಾರ್ಥಕ' ಎಂದು ಅರ್ಥ.

ತಸ್ಯೈವ ಅವ್ಯಕ್ತತ್ವಾದಿಧರ್ಮಜಾತಂ ಮುಖ್ಯಮ್ । ಅತಃ ತಸ್ಯೈವ ಅವ್ಯಕ್ತಾದಿ ಶಬ್ದಜಾತಂ ಅರ್ಥವತ್। (ತ.ಪ್ರದೀಪಿಕಾ) ॥ ಸೂತ್ರ 3 ॥

## ಓಂ ॥ ಜ್ಞೇಯತ್ವಾವಚನಾಚ್ಚ ॥ ಓಂ

**ಅನ್ಯಸ್ಯ ನ ವಾಚ್ಯತ್ವಂ ಯುಜ್ಯತೇ ॥ 4 ॥**

'ಅನ್ಯಾ ವಾಚೋ ವಿಮುಂಚಥ' ಎಂದು ಬ್ರಹ್ಮೇತರವಾದ ತತ್ತ್ವಗಳಿಗೆ

ಜ್ಞೇಯತ್ವವನ್ನು ಹೇಳಿಲ್ಲವಾದುದರಿಂದಲೂ ಪ್ರಕೃತಿ ಮುಂತಾದ ತತ್ತ್ವಗಳು ವೈದಿಕ ಶಬ್ದಗಳಿಂದ ವಾಚ್ಯವಾಗಲು ಅನರ್ಹವಾಗಿವೆ.

**ವಿವರಣೆ** - ವೇದಗಳು ಜೀವರ ಮೋಕ್ಷಕ್ಕಾಗಿ ವಿಷಯಗಳನ್ನು ನಿರೂಪಿಸುತ್ತವೆ -

ತೇಷಾಂ ದುಃಖಪ್ರಹಾಣಾಯ ಶ್ರುತಿರೇಷಾ ಪ್ರವರ್ತತೇ ।

ತಮೇವೈಕಂ ಜಾನಥ ಆತ್ಮಾನಂ ಅನ್ಯಾ ವಾಚೋ ವಿಮುಂಚಥ ।

ಅಮೃತಸ್ಯೈಷ ಸೇತುಃ ।

ಎಂದು ಮುಂಡಕೋಪನಿಷತ್ತು ಪರಮಾತ್ಮನ ಜ್ಞಾನದಿಂದಲೇ ಮೋಕ್ಷಲಾಭವನ್ನು ಹೇಳಿ ಇತರ ತತ್ತ್ವಗಳ ಗೊಡವೆಗೆ ಹೋಗಬಾರದು ಎಂದು ಆದೇಶಿಸಿದೆ. ಅಂದಮೇಲೆ

ವೇದೇ ರಾಮಾಯಣೇ ಚೈವ ಪುರಾಣೇ ಭಾರತೇ ತಥಾ ।

ಆದಾವಂತೇ ಚ ಮಧ್ಯೇ ಚ ವಿಷ್ಣುಃ ಸರ್ವತ್ರ ಗೀಯತೇ ॥

ಎಂದಂತೆ ವೇದದ ಶಬ್ದ ಶಬ್ದಗಳೂ ವಿಷ್ಣು ಪ್ರತಿಪಾದಕಗಳಾಗಬೇಕು. ಆದ್ದರಿಂದ ವೇದದಲ್ಲಿ ಬರುವ ಅವ್ಯಕ್ತಾದಿ ಶಬ್ದಗಳೂ ವಿಷ್ಣುವಾಚಕಗಳು.

## ಓಂ ॥ ವದತೀತಿ ಚೇನ್ನ ಪ್ರಾಜ್ಞೋ ಹಿ ॥ ಓಂ

**ಮಹತಃ ಪರಂ ಧ್ರುವಂ ನಿಚಾಯ್ಯ ತಂ ಮೃತ್ಯುಮುಖಾತ್ ಪ್ರಮುಚ್ಯತೇ ।**

**(ಕಠ 1.3.15)**

**ಇತಿ ಜ್ಞೇಯತ್ವಂ ವದತೀತಿ ಚೇತ್, ನ । ಪ್ರಾಜ್ಞಃ ಪರಮಾತ್ಮಾ ಹಿ ತತ್ರೋಚ್ಯತೇ ।**

**'ಅಣೋರಣೀಯಾನ್ ಮಹತೋ ಮಹೀಯಾನ್' (ಕಠ.1.2.20)**

**ಇತಿ ತಸ್ಯೈವ ಹಿ ಮಹತೋ ಮಹತ್ವಮ್ । ಸರ್ವಸ್ಮಾತ್ ಪರಸ್ಯ ಮಹತೋಽಪಿ ಪರತ್ವಂ ಯುಜ್ಯತೇ ॥ 5 ॥**

'ಮಹತಃ ಪರಂ' ಇತ್ಯಾದಿ ಶ್ರುತಿಯು ಅವ್ಯಕ್ತತತ್ತ್ವಕ್ಕೂ ಜ್ಞೇಯತ್ವವನ್ನು ಹೇಳಿದೆ ಎಂದರೆ, ಅದು ಸರಿಯಲ್ಲ. 'ಮಹತಃ ಪರಂ' ಎಂಬ ವಾಕ್ಯದಲ್ಲೂ ಪರಮಾತ್ಮನೇ ವಾಚ್ಯನಾಗಿದ್ದಾನೆ. 'ಅಣೋರಣೀಯಾನ್' ಎಂಬ ಹಿಂದಿನ ಪ್ರಕರಣದಲ್ಲಿ ಅವನಿಗೇ ಮಹತ್ತತ್ತ್ವಕ್ಕಿಂತ ಉತ್ತಮತ್ವವನ್ನು ಹೇಳಲಾಗಿದೆ. ಎಲ್ಲದಕ್ಕಿಂತಲೂ ಉತ್ತಮನಾದವನಿಗೆ ಮಹತ್ತತ್ತ್ವಕ್ಕಿಂತ ಉತ್ತಮತ್ವವೂ ಯುಕ್ತವೇ ಆಗಿದೆ.

**ವಿವರಣೆ** - 1. ಹಿಂದಿನ ಸೂತ್ರದಲ್ಲಿ ಪರಮಾತ್ಮೇತರವಾದುದು ಹೇಯ, ಜ್ಞೇಯವಲ್ಲ ಎನ್ನಲಾಯಿತು. ಆದರೆ ಕಾಠಕಶ್ರುತಿಯಲ್ಲಿ 'ಮಹತ್ತತ್ತ್ವಕ್ಕಿಂತ ಪರವಾದುದನ್ನು ತಿಳಿದು ಮೃತ್ಯುವಿನ ದವಡೆಯಿಂದ ಪಾರಾಗುತ್ತಾನೆ' ಎನ್ನಲಾಗಿದೆ. ಮಹತ್ತತ್ತ್ವಕ್ಕಿಂತ ಪರವಾದುದು, ಅದಕ್ಕೆ ಕಾರಣವಾದ ಪ್ರಕೃತಿತತ್ತ್ವ. ಅದರ ಜ್ಞಾನವೂ ಮೋಕ್ಷಕಾರಣ

ಎಂದಂತಾಯಿತು. ಆದ್ದರಿಂದ ಹಿಂದೆ ಹೇಳಿರುವ ಬ್ರಹ್ಮೇತರಕ್ಕೆ 'ಜ್ಞೇಯತ್ವಾವಚನ' ಅಸಿದ್ಧ ಎಂದು ಆಕ್ಷೇಪ.

ಅದಕ್ಕೆ ಹೀಗೆ ಉತ್ತರ - ಈ ವಾಕ್ಯದಲ್ಲೂ ಜ್ಞೇಯವಾಗಿ ಹೇಳಲ್ಪಟ್ಟಿರುವ ತತ್ತ್ವ ಪ್ರಕೃತಿಯಲ್ಲ, ವಿಷ್ಣುವೇ. ಅವನೂ ಮಹತ್ತತ್ತ್ವಕ್ಕಿಂತ ಪರ-ಉತ್ತಮನೇ. ಆದುದರಿಂದ 'ಮಹತಃ ಪರಂ' ಎಂಬ ವಿಶೇಷಣ ಅವನಿಗೂ ಯುಕ್ತವಾಗುತ್ತದೆ. ಆದ್ದರಿಂದ ಪ್ರಕೃತಿಯು ಮೋಕ್ಷಕ್ಕಾಗಿ ಜ್ಞೇಯ ಎನ್ನಲು ಇದು ಸಾಧಕವಾಗುವುದಿಲ್ಲ.

3. ಭಾಷ್ಯದಲ್ಲಿ ಪರಮಾತ್ಮನಿಗೆ ಮಹತಃ ಪರತ್ವವನ್ನು ಸಮರ್ಥಿಸಲು 'ಅಣೋರಣೀಯಾನ್ ಮಹತೋ ಮಹೀಯಾನ್' ಎಂಬ ಶ್ರುತಿಯನ್ನು ಉದಾಹರಿಸಲಾಗಿದೆ. ಆದರೆ, ಈ ಶ್ರುತಿ ಪರಮಾತ್ಮನು ಎಲ್ಲ ಅಣುಗಳಿಗಿಂತಲೂ ಅಣು, ಮಹತ್ತಾದ ವಸ್ತುಗಳಿಗಿಂತಲೂ ಮಹತ್ ಎಂದು ಹೇಳುತ್ತದೆ. ಇದರಿಂದ ಪರಮಾತ್ಮ ಮಹತ್ತತ್ತ್ವಕ್ಕಿಂತ ಪರ ಎಂದು ಹೇಗೆ ಸಿದ್ಧವಾಗುತ್ತದೆ, ಎಂದು ಆಕ್ಷೇಪ. ಮಹತ್ತತ್ತ್ವ ಅಣುವಾದರೂ ಪ್ರಕೃತಿಗಿಂತ ಅದು ಸ್ಥೂಲವಾದುದರಿಂದ ಮಹತ್. 'ಮಹತೋ ಮಹೀಯಾನ್' ಎಂಬ ಪ್ರಮಾಣ ಮಹತ್ತಾದ ಎಲ್ಲ ವಸ್ತುಗಳಿಗಿಂತಲೂ ಪರಮಾತ್ಮ ಮಹತ್ತಾದುದರಿಂದ ಉತ್ತಮ ಎನ್ನುತ್ತದೆ. ಮಹತ್ತತ್ತ್ವವೂ ಮಹತ್ ಪದಾರ್ಥಗಳಲ್ಲಿ ಸೇರಿರುವುದರಿಂದ ಅದಕ್ಕಿಂತಲೂ ವಿಷ್ಣು ಪರ- ಉತ್ತಮನೆಂದು ಇದರಿಂದ ಸಿದ್ಧವಾಗುತ್ತದೆ.

|| ಸೂತ್ರ 5 ||

## ಓಂ || ಪ್ರಕರಣಾತ್ || ಓಂ

**ಸೋಽಧ್ವನಃ ಪಾರಮಾಪ್ನೋತಿ ತದ್ವಿಷ್ಣೋಃ ಪರಮಂ ಪದಮ್ || (ಕಠ.1.3.9)**

**ಇತಿ ತಸ್ಯ ಹ್ಯೇತತ್ ಪ್ರಕರಣಮ್ || 6 ||**

'ಯಾರು ವಿಷ್ಣುವಿನ ಪರಮಸ್ವರೂಪವನ್ನು ತಿಳಿಯುವರೋ ಅವರು ಈ ಸಂಸಾರವೆಂಬ ದಾರಿಯ ಕೊನೆ ತಲುಪುತ್ತಾರೆ' ಎಂದು ಈ ಪ್ರಕರಣ ವಿಷ್ಣುವಿಗೆ ಸಂಬಂಧಿಸಿದೆ. ಆದ್ದರಿಂದಲೂ ಆ ಪ್ರಕರಣದಲ್ಲಿ ವಿಚಾರ್ಯವಾಗಿ ಪ್ರಸ್ತುತವಾದ 'ಮಹತ್ತತ್ತ್ವಕ್ಕಿಂತ ಪರವಾದ ತತ್ತ್ವ' ವಿಷ್ಣು.

**ವಿವರಣೆ** - ಅಹಂಕಾರ ತತ್ತ್ವ, ಮಹತ್ತತ್ತ್ವ, ಪ್ರಕೃತಿ, ಲಕ್ಷ್ಮೀದೇವಿ, ವಿಷ್ಣು ಇವು ಐದು ಒಂದಕ್ಕಿಂತ ಒಂದು ಉತ್ತಮವಾದವು. ಅಹಂಕಾರ ತತ್ತ್ವಕ್ಕಿಂತ ಪರವಾದುದು ಮಹತ್ತತ್ತ್ವ, ಅದಕ್ಕಿಂತ ಪರ ಪ್ರಕೃತಿ. ಹೀಗೆ 'ಮಹತಃ ಪರತ್ವ' ಮುಖ್ಯವಾಗಿ ಪ್ರಕೃತಿಗೆ ಅನ್ವಯಿಸುತ್ತದೆ. ವಿಷ್ಣು ಸರ್ವೋತ್ತಮನಾದುದರಿಂದ 'ಮಹತಃ ಪರ' ಎನ್ನುವುದು ನಿಜವಾದರೂ ಅವನನ್ನು 'ಅವ್ಯಕ್ತಾತ್ ಪರ' ಎನ್ನುವುದೇ ಉಚಿತ. ಹೊರತು, ಮಹತಃ ಪರ ಎನ್ನುವುದು ಸ್ವರಸವಲ್ಲ. ಈ ಆಕ್ಷೇಪಕ್ಕೆ ಪ್ರಕೃತಸೂತ್ರ ಸಮಾಧಾನ ನೀಡುತ್ತದೆ. ಈ ಪ್ರಕರಣದ ಮೂರನೆಯ ಮಂತ್ರದಲ್ಲಿ, ಈ ಪ್ರಕರಣದಲ್ಲಿ ಹೇಳಿರುವ ತತ್ತ್ವವನ್ನು ಉಪಾಸನೆ ಮಾಡಿದರೆ ವಿಷ್ಣು

ಪ್ರಾಪ್ತಿಯನ್ನು ಹೇಳಲಾಗಿದೆ. ಇದರಿಂದ ಇದು ವೈಷ್ಣವ ಪ್ರಕರಣ ಎಂದು ತಿಳಿಯುತ್ತದೆ. ಹೀಗಾಗಿ 'ಮಹತಃ ಪರತ್ವ' ವಿಷ್ಣು ಮತ್ತು ಅವ್ಯಕ್ತ(ಪ್ರಕೃತಿ) ಎರಡಕ್ಕೂ ಇದ್ದರೂ ಪ್ರಕರಣ ಬಲದಿಂದ ವಿಷ್ಣುವೇ ಇಲ್ಲಿ ಹೇಳಲಾದ ಮಹತಃ ಪರವಾದ ತತ್ತ್ವ ಎಂದು ನಿರ್ಧರಿಸಬಹುದು. || ಸೂತ್ರ 6 ||

**ಓಂ || ತ್ರಯಾಣಾಮೇವ ಚೈವಂ ಉಪನ್ಯಾಸಃ ಪ್ರಶ್ನಶ್ಚ || ಓಂ**

**ತ್ರಯಾಣಾಮೇವ=ಪಿತೃಸೌಮನಸ್ಯ-ಸ್ವರ್ಗ್ಯಾಗ್ನಿ-ಪರಮಾತ್ಮನಾಂ ಪ್ರಶ್ನಃ ಉಪನ್ಯಾಸಶ್ಚ।**
**ಅವಿಜ್ಞಾತಪ್ರಾರ್ಥನಂ ಚ ಪ್ರಶ್ನ ಇತ್ಯಭಿಧೀಯತೇ ||**
**ಇತಿ ವಚನಾತ್ ನ ವಿರೋಧಃ || 7 ||**

ತಂದೆಯ ಮನಃಶಾಂತಿ, ಸ್ವರ್ಗ(ಮೋಕ್ಷ)ಪ್ರಾಪ್ತಿಗೆ ಕಾರಣವಾದ ನಾಚಿಕೇತಾಗ್ನಿ ಮುಕ್ತನಿಯಾಮಕನಾದ ಪರಮಾತ್ಮ ಈ ಮೂರರ ಕುರಿತೇ ಪ್ರಶ್ನೆ ಮತ್ತು ಉತ್ತರಗಳು (ಈ ಉಪನಿಷತ್ತಿನಲ್ಲಿವೆ). 'ದೊರಕುವುದೋ ಇಲ್ಲವೋ ಎಂದು ಸಂದಿಗ್ಧವಾದುದನ್ನು ಪ್ರಾರ್ಥಿಸುವುದೂ ಪ್ರಶ್ನೆ ಎನಿಸುತ್ತದೆ' ಎಂದಿರುವುದರಿಂದ ನಚಿಕೇತ ಪಿತೃಸೌಮನಸ್ಯದ ಬಗ್ಗೆ ಪ್ರಶ್ನೆ ಮಾಡದಿದ್ದರೂ 'ತ್ರಯಾಣಾಂ ಪ್ರಶ್ನಃ' ಎಂಬ ಸೂತ್ರಾಂಶಕ್ಕೆ ವಿರುದ್ಧವಲ್ಲ.

**ವಿವರಣೆ** - 1. ಹಿಂದಿನ ಸೂತ್ರದಲ್ಲಿ, ಪ್ರಕರಣವನ್ನು ಆಧಾರವನ್ನಾಗಿ ನೀಡಿ 'ಮಹತಃ ಪರಂ ಧ್ರುವಂ' ಎಂಬ ವಾಕ್ಯದಲ್ಲಿ ಪ್ರಕೃತಿಯು ಪ್ರತಿಪಾದ್ಯವಲ್ಲ, ಎಂದು ಸಾಧಿಸಲಾಯಿತು. ಈ ಸೂತ್ರದಲ್ಲಿ ಅರ್ಥನಿಶ್ಚಾಯಕವಾದ 'ಸ್ಥಾನ' ಪ್ರಮಾಣದಿಂದಲೂ ಅದೇ ವಿಷಯವನ್ನು ದೃಢಪಡಿಸಲಾಗಿದೆ. ಅನೇಕ ವಾಕ್ಯಗಳ ಸಮೂಹ ಪ್ರಕರಣ. ಅಂತಹ ಅನೇಕ ಪ್ರಕರಣಗಳ ಗುಂಪು ಒಂದು ಸ್ಥಾನ. ಈ ದೃಷ್ಟಿಯಲ್ಲಿ ಸಮಗ್ರ ಉಪನಿಷತ್ತು ಒಂದು ಸ್ಥಾನ. ತಂದೆಯ ಶಾಪಕ್ಕೆ ಗುರಿಯಾದ ನಚಿಕೇತ ಯಮಪಟ್ಟಣಕ್ಕೆ ಹೋಗಿ ಅಲ್ಲಿ ಯಮನ ಮನಸ್ಸನ್ನು ಗೆದ್ದು ಮೂರು ವರಗಳನ್ನು ಪಡೆದ. 'ನನ್ನ ತಂದೆಯ ಮನಸ್ಸು ವ್ಯಗ್ರವಾಗಿದೆ. ಅದು ಶಾಂತವಾಗಬೇಕು. ನಾನು ಮತ್ತೆ ಅವನ ಬಳಿ ಹೋದಾಗ ನನ್ನನ್ನು ಗುರುತಿಸಿ ಸಂತೋಷದಿಂದ ಸ್ವಾಗತಿಸಬೇಕು. 'ಇದು ಮೊದಲ ವರ. ಎರಡನೆಯ ವರ ನಾಚಿಕೇತ ಅಗ್ನಿಯ ಉಪಾಸನೆ. ಮೂರನೆಯ ವರ ಮುಕ್ತನಿಯಾಮಕನಾದ ಪರಮಾತ್ಮನ ಉಪದೇಶ. ಈ ಮೂರು ಬೇಡಿಕೆಗಳ ಕುರಿತೇ ಉಪನಿಷತ್ತಿನಲ್ಲಿ ಹೇಳಬೇಕು, ಅದನ್ನು ಬಿಟ್ಟು ಪ್ರಕೃತಿಯ ಬಗ್ಗೆ ಹೇಳುವುದು ಅಸಂಗತ. ಆದ್ದರಿಂದ 'ಮಹತಃ ಪರಂ ಧ್ರುವಂ' ಎಂಬ ವಾಕ್ಯದಿಂದ ಪ್ರತಿಪಾದ್ಯವಾದುದು ಪ್ರಕೃತಿಯಲ್ಲ ವಿಷ್ಣು.

2. ನಚಿಕೇತ ಕೇಳಿದ ಮೂರು ವರಗಳಲ್ಲಿ ಮೊದಲನೆಯದು ಪ್ರಾರ್ಥನೆ. ಅಂದಮೇಲೆ ಸೂತ್ರದಲ್ಲಿ 'ತ್ರಯಾಣಾಂ ಪ್ರಶ್ನಃ' ಎಂದಿರುವುದು ಹೇಗೆ? ಈ ಪ್ರಶ್ನೆಗೆ ಉತ್ತರವಾಗಿ ಆಚಾರ್ಯರು, ಪ್ರಾರ್ಥನೆಯೂ ಪ್ರಶ್ನೆಯಾಗಬಹುದು ಎಂಬುದನ್ನು ಸಾಧಾರವಾಗಿ ನಿರೂಪಿಸಿದ್ದಾರೆ.

3. ಸೂತ್ರದಲ್ಲಿ 'ಏವಂ ತ್ರಯಾಣಾಂ ಏವ ಪ್ರಶ್ನಃ' ಎಂದು ಅನ್ವಯ. 'ಹೀಗೆ ಮೂರರ ಕುರಿತೇ ಪ್ರಶ್ನೆ' ಎಂದು ಅರ್ಥ. 'ಹೀಗೆ' ಅಂದರೆ ಹೇಗೆ? ಅದನ್ನು ಭಾಷ್ಯಕಾರರು 'ಪಿತೃಸೌಮನಸ್ಯ...' ಎಂದು ವಿವರಿಸಿದ್ದಾರೆ. ॥ಸೂತ್ರ 7 ॥

## ಓಂ ॥ ಮಹದ್ವಚ್ಚ ॥ ಓಂ

**ಯಥಾ ಮಹತ್ ಶಬ್ದಃ ಮಹತ್ತತ್ತ್ವೇ ಪ್ರಸಿದ್ಧೋಽಪಿ ಪರಮ ಮಹತ್ತ್ವಾತ್ ಪರಮಾತ್ಮನ ಏವ ಮುಖ್ಯಃ ಏವಂ ಇತರೇಽಪಿ ॥ 8 ॥**

'ಮಹತ್' ಎಂಬ ಶಬ್ದ ಮಹತ್ತತ್ತ್ವದಲ್ಲಿ ಪ್ರಸಿದ್ಧವಾದರೂ 'ಮಹಾಂತಂ ವಿಭುಂ ಆತ್ಮಾನಂ' (ಕಠ 1.2.22) ಎಂದು ಪರಮಮಹತ್ವಗುಣವಿರುವುದರಿಂದ ಪರಮಾತ್ಮನಿಗೇ ಹೇಗೆ ಮುಖ್ಯವಾಚಕವಾಗಿದೆಯೋ ಅದರಂತೆ ಅವ್ಯಕ್ತಾದಿ ಶಬ್ದಗಳೂ ಪರಮಾತ್ಮನಿಗೇ ಮುಖ್ಯ ವಾಚಕಗಳಾಗಿ ಇರಬಹುದು.

**ವಿವರಣೆ** - 1. ಇದುವರೆಗಿನ ಮೂರು ಸೂತ್ರಗಳಲ್ಲಿ ''ಅನಾದ್ಯನಂತಂ ಮಹತಃ ಪರಂ ಧ್ರುವಂ' ಎಂಬ ಕಾಠಕವಾಕ್ಯದ 'ಮಹತಃ ಪರಂ' ಎಂಬ ಶಬ್ದ ಪರಮಾತ್ಮವಾಚಕ, ಪ್ರಕೃತಿ ವಾಚಕವಲ್ಲ, ಎಂದು ಹೇಳಲಾಯಿತು. ಈ ಅಧಿಕರಣದ ಪ್ರಧಾನ ವಿಷಯ 'ಅವ್ಯಕ್ತಾತ್ ಪುರುಷಃ ಪರಃ' ಎಂಬ ಕಾಠಕಮಂತ್ರದ ಅವ್ಯಕ್ತ ಶಬ್ದಕ್ಕೆ ವಿಷ್ಣುವೇ ಅರ್ಥ ಎಂಬುದು. ಅದಕ್ಕೆ ಪೂರಕವಾಗಿ 'ಮಹತಃ ಪರಂ' ಎಂಬಲ್ಲಿ ವಾಚ್ಯ ಯಾರು, ಎಂಬ ವಿಷಯ ಪ್ರಸ್ತುತವಾಯಿತು. ಈ ಸೂತ್ರದಲ್ಲಿ ಮತ್ತೆ ಪ್ರಧಾನ ವಿಷಯದ ಬಗ್ಗೆ ಹೇಳಲಾಗಿದೆ.

ಅತಿ ಸೂಕ್ಷ್ಮತ್ವ ಪರಮಾತ್ಮನಿಗೇ ಇರುವುದಾದ್ದರಿಂದ ಅವನೇ ಅವ್ಯಕ್ತ ಶಬ್ದದ ಅರ್ಥ, ಎಂದು ಎರಡನೆಯ ಸೂತ್ರದಲ್ಲಿ ಹೇಳಲಾಗಿದೆ. ಆದರೆ ಅವ್ಯಕ್ತ ಶಬ್ದದ ಶಾಸ್ತ್ರೀಯ ಪ್ರಯೋಗ ಜಡಪ್ರಕೃತಿಯಲ್ಲೇ ಇದೆ. ಪರಮಾತ್ಮನು ಪ್ರಕೃತಿಗಿಂತಲೂ ಸೂಕ್ಷ್ಮನಾಗಿರಬಹುದು. ಆದರೆ, ಪ್ರವೃತ್ತಿ ನಿಮಿತ್ತ ಪುಷ್ಕಳವಾಗಿದೆ ಎಂಬ ಕಾರಣದಿಂದ ಶಬ್ದಕ್ಕೆ ಪ್ರಸಿದ್ಧಾರ್ಥವನ್ನು ಬಿಟ್ಟು ಇನ್ನೊಂದು ಮುಖ್ಯಾರ್ಥವನ್ನು ಸ್ವೀಕರಿಸಿರುವುದಕ್ಕೆ ನಿದರ್ಶನಗಳಿಲ್ಲ. ತುಂಬ ನೀರಿರುವ ಜಲಾಶಯ ಮುಖ್ಯವಾದ ಸರೋವರ, ಸ್ವಲ್ಪ ನೀರಿದ್ದರೆ ಅಮುಖ್ಯ ಸರೋವರ ಎನ್ನುವುದು ಯುಕ್ತವಲ್ಲ. ಆದ್ದರಿಂದ ಅವ್ಯಕ್ತ ಶಬ್ದಕ್ಕೆ ಪ್ರಕೃತಿಯೇ ಮುಖ್ಯಾರ್ಥ, ಎಂದು ಆಕ್ಷೇಪ.

ಪ್ರವೃತ್ತಿ ನಿಮಿತ್ತ ಪುಷ್ಕಲವಾಗಿದ್ದಾಗ ಶಬ್ದವು ಮುಖ್ಯವಾಗಿರುವುದಕ್ಕೆ ನಿದರ್ಶನವಿದೆ. 'ಮಹತ್' ಎಂಬ ಶಬ್ದದ ಶಾಸ್ತ್ರೀಯ ಪ್ರಯೋಗ ಮಹತ್ತತ್ತ್ವದಲ್ಲೇ ಆದರೂ ಆ ಶಬ್ದದ ಅರ್ಥವಾದ ಮಹತ್ವವು ನಿರವಧಿಕವಾಗಿ ಬ್ರಹ್ಮನಲ್ಲಿ ಇರುವುದರಿಂದ 'ಮಹತ್' ಶಬ್ದಕ್ಕೆ ಬ್ರಹ್ಮನೇ ಮುಖ್ಯಾರ್ಥ. ಶ್ರೀಮಂತಶಬ್ದಕ್ಕೆ ಹೆಚ್ಚು ಹಣವಿರುವವನೇ ಮುಖ್ಯಾರ್ಥ ವಾಗಿರುವುದು ಲೋಕದಲ್ಲೂ ತಿಳಿದ ವಿಚಾರ. ಆದ್ದರಿಂದ ಅವ್ಯಕ್ತ ಶಬ್ದಕ್ಕೂ ಪರಮಾತ್ಮನೇ ಮುಖ್ಯಾರ್ಥವಾಗಬಹುದು.

2. ಸೂತ್ರದಲ್ಲಿ 'ಮಹತಿ ಇವ ಮಹದ್ವತ್' ಎಂದೂ 'ಮಹತ್ ಇವ ಮಹದ್ವತ್'

ಎಂದೂ ಎರಡು ರೀತಿಯಿಂದ ಅರ್ಥ ಹೇಳಬೇಕು. ಎರಡನೆಯ ಅರ್ಥದಲ್ಲಿ 'ಮಹತ್' ಎಂದರೆ ಮಹತ್ ಎಂಬ ಶಬ್ದ ಎಂದರ್ಥ. ಮೊದಲ ಅರ್ಥದಲ್ಲಿ ಮಹತ್ ಎಂದರೆ ಮಹತ್ತತ್ತ್ವ. ಮಹತ್ ಎಂಬ ಶಬ್ದವು ಮಹತ್ತತ್ತ್ವದಲ್ಲಿ ಪ್ರಸಿದ್ಧವಾದರೂ ಹೇಗೆ ಪರಮಾತ್ಮನಿಗೆ ಮುಖ್ಯವೋ ಆದರಂತೆ ಅವ್ಯಕ್ತ ಶಬ್ದವೂ ಪರಮಾತ್ಮನಲ್ಲೇ ಮುಖ್ಯ ಎಂದು ಅರ್ಥ. ಇದನ್ನೇ ಭಾಷ್ಯದಲ್ಲಿ ತೋರಿಸಲಾಗಿದೆ. ॥ ಸೂತ್ರ 8 ॥

## ಓಂ ॥ ಚಮಸವದವಿಶೇಷಾತ್ ॥ ಓಂ

**ಯಥಾ ಚಮಸಶಬ್ದಃ ಅನ್ಯತ್ರ ಪ್ರಸಿದ್ಧೋऽಪಿ,**

**''ಇದಂ ತಚ್ಛಿರಃ ಏಷ ಹ್ಯರ್ವಾಗ್‌ಬಿಲಶ್ಚಮಸ ಊರ್ಧ್ವಬುಧ್ನಃ'' (ಬೃ2.2.3)**

**ಇತಿ ಶ್ರುತೇಃ ಶಿರೋವಾಚಕಃ ಏವಂ ಅವ್ಯಕ್ತಾದಿಶಬ್ದಾಃ ಸರ್ವೇ ಅನ್ಯತ್ರ ಪ್ರಸಿದ್ಧಾಃ ಅಪಿ**

**ನಾಮಾನಿ ಸರ್ವಾಣಿ ಯಮಾವಿಶಂತಿ ತಂ ವೈ ವಿಷ್ಣುಂ ಪರಮಮುದಾಹರಂತಿ ॥**

**ಇತ್ಯಾದಿ ಶ್ರುತೇಃ ಪರಮಾತ್ಮಾಭಿಧಾಯಕಾ ಏವ । ಅವಿಶೇಷಾತ್ ಶ್ರುತೇಃ ॥ 9 ॥**

## ॥ ಇತಿ ಆನುಮಾನಿಕಾಧಿಕರಣಂ ॥

ಹೇಗೆ 'ಚಮಸ' ಎಂಬ ಶಬ್ದ ಚತುಷ್ಕೋಣಾಕಾರದ ಯಾಜ್ಞೀಯ ಪಾತ್ರೆಯಲ್ಲಿ ಪ್ರಸಿದ್ಧವಾದರೂ 'ಇದಂ ತಚ್ಛಿರಃ' ಎಂಬ ಉಪನಿಷದ್ವಾಕ್ಯದಲ್ಲಿ ಅದಕ್ಕೆ ತಲೆ ಎಂಬ ಅರ್ಥವನ್ನು ಆದೇಶಿಸಲಾಗಿರುವುದರಿಂದ ಶಿರೋವಾಚಕವೋ ಆದರಂತೆ, ಅವ್ಯಕ್ತ ಮೊದಲಾದ ಶಬ್ದಗಳೂ ಕೂಡ ಪ್ರಕೃತ್ಯಾದಿ ತತ್ತ್ವವಾಚಕಗಳಾಗಿ ಪ್ರಸಿದ್ಧಗಳಾಗಿದ್ದರೂ 'ನಾಮಾನಿ ಸರ್ವಾಣಿ' ಎಂಬ ಶ್ರುತಿಯ ಆಧಾರದಿಂದ ವಿಷ್ಣುವಾಚಕಗಳು. ಚಮಸ ಶಬ್ದವು ಶಿರೋವಾಚಕ ಎಂಬ ಶ್ರುತಿಗೂ, ಎಲ್ಲ ನಾಮಗಳೂ ವಿಷ್ಣುವಾಚಕ ಎಂಬ ಶ್ರುತಿಗೂ ವಿಶೇಷವೇನಿಲ್ಲದ ಕಾರಣ ಚಮಸ ಶಬ್ದದಂತೆ ಅವ್ಯಕ್ತಾದಿ ಶಬ್ದಗಳೂ ಶಕ್ತಿವೃತ್ತಿಯಿಂದಲೇ ವಿಷ್ಣುವಾಚಕಗಳು.

**ವಿವರಣೆ** - ಅವ್ಯಕ್ತಶಬ್ದದ ರೂಢಿ ಜಡಪ್ರಕೃತಿಯಲ್ಲಿರುವುದು ನಿರ್ವಿವಾದ. ಕೆಲವೆಡೆ ಆ ಶಬ್ದವನ್ನು ಪರಮಾತ್ಮನಲ್ಲೂ ಪ್ರಯೋಗಿಸಿರುವುದೂ ಇದೆ. ಅಂದಮಾತ್ರಕ್ಕೆ ವಿಷ್ಣು ಆ ಶಬ್ದದ ಮುಖ್ಯಾರ್ಥ ಎನ್ನಬೇಕಾದ ಅಗತ್ಯವಿಲ್ಲ. ಅವನು ಆ ಶಬ್ದದ ಲಾಕ್ಷಣಿಕ ಅರ್ಥ ಎಂದೂ ಹೇಳಬಹುದು. ಹೀಗೆ ಅವ್ಯಕ್ತ ಶಬ್ದಕ್ಕೆ ವಿಷ್ಣು ಮುಖ್ಯಾರ್ಥವೇ ಆಗದಿರುವಾಗ ಅವನು ಪರಮ ಮುಖ್ಯಾರ್ಥ ಎಂದು ಹೇಳುವುದು ಹೇಗೆ? ಈ ಆಕ್ಷೇಪಕ್ಕೆ ಪ್ರಕೃತ ಸೂತ್ರ ಸಮಾಧಾನ ನೀಡುತ್ತಿದೆ.

'ಚಮಸ' ಎಂಬ ಶಬ್ದದ ಬಳಕೆ ಯಜ್ಞದಲ್ಲಿ ಉಪಯೋಗಿಸುವ ಪಾತ್ರೆಯಲ್ಲಿದೆ. ಆದರೆ ಬೃಹದಾರಣ್ಯಕ ಉಪನಿಷತ್ತು ಚಮಸ ಶಬ್ದವನ್ನು ನಮ್ಮ ಶಿರೋಭಾಗದಲ್ಲಿ

ಪ್ರಯೋಗಿಸಿದೆ. ಆದರೆ, ಆ ಶಬ್ದಕ್ಕೆ ಶಿರೋಭಾಗ ಅಮುಖ್ಯಾರ್ಥವಲ್ಲ. ಉಪನಿಷತ್ತು ನಿರ್ದೇಶ ಮಾಡಿರುವುದರಿಂದ ಅದೂ ಒಂದು ಮುಖ್ಯಾರ್ಥವೆ. ಅದರಂತೆ ಅವ್ಯಕ್ತಶಬ್ದದ ಬಳಕೆ ಪ್ರಕೃತಿಯಲ್ಲಿದ್ದರೂ ಅದನ್ನು ಪರಮಾತ್ಮನಲ್ಲಿ ಪ್ರಯೋಗಿಸಿದಾಗ ಪರಮಾತ್ಮ ಆ ಶಬ್ದದ ಅಮುಖ್ಯಾರ್ಥವಲ್ಲ, ಮುಖ್ಯಾರ್ಥವೇ ಆಗುತ್ತಾನೆ. ಅದಕ್ಕೂ 'ಸಾಮಾನಿ ಸರ್ವಾಣಿ' ಎಂಬ ಶ್ರುತಿ ಆಧಾರವಾಗಿದೆ.

2. ಬೃಹದಾರಣ್ಯಕದಲ್ಲಿ 'ತದೇಷ ಶ್ಲೋಕೋ ಭವತಿ' ಎಂದು ಹೇಳಿ ಈ ಮಂತ್ರವನ್ನು ಉದಾಹರಿಸಲಾಗಿದೆ-

ಅರ್ವಾಗ್ ಬಿಲಶ್ಚಮಸ ಊರ್ಧ್ವಬುಧ್ನಃ
ತಸ್ಮಿನ್ ಯಶೋ ನಿಹಿತಂ ವಿಶ್ವರೂಪಂ ॥

ಈ ಮಂತ್ರದ ಪ್ರಥಮಪಾದವನ್ನು ಉಪನಿಷತ್ತು ಹೀಗೆ ವ್ಯಾಖ್ಯಾನಿಸುತ್ತದೆ - ಇದಂ ತಚ್ಛಿರಃ ಏಷ ಹಿ ಅರ್ವಾಗ್ ಬಿಲಃ ಚಮಸಃ ಊರ್ಧ್ವಬುಧ್ನಃ ॥

''ಮಂತ್ರದಲ್ಲಿ ಹೇಳಿರುವ ಚಮಸವೆಂದರೆ ನಮ್ಮ ಈ ತಲೆಯೇ ಆಗಿದೆ. ಆದರೆ, ಅದರ ಬಾಯಿ ಕೆಳಮುಖವಾಗಿದೆ. ದುಂಡಗಿನ ಗಟ್ಟಿಯಾದ ಕೆಳಭಾಗ ಮೇಲಿದೆ.'' ಹೀಗೆ ಈ ನಮ್ಮ ಶಿರೋಭಾಗವನ್ನು ಬೋರಲಾದ ಚಮಸವೆಂದು ಉಪನಿಷತ್ತು ಹೇಳಿದೆ. ಇಲ್ಲಿ ಚಮಸ ಶಬ್ದಕ್ಕೆ ಶಕ್ಯಾರ್ಥವಾದ ಪಾತ್ರೆಯ ಸಂಬಂಧ ತಲೆಗೆ ಇಲ್ಲವಾದುದರಿಂದ ಶಿರೋಭಾಗದಲ್ಲಿ ಚಮಸಶಬ್ದವು ಲಾಕ್ಷಣಿಕವಲ್ಲ. ಅದರ ಸಾದೃಶ್ಯವೂ ಇಲ್ಲವಾದುದರಿಂದ ಗೌಣೀವೃತ್ತಿಯೂ ಅಲ್ಲ. ಆದ್ದರಿಂದ ಶಿರೋಭಾಗ ಚಮಸ ಶಬ್ದದ ಮುಖ್ಯಾರ್ಥವೇ ಆಗಿದೆ. ಅದರಂತೆ ಅವ್ಯಕ್ತ ಶಬ್ದವೂ ಮುಖ್ಯವೃತ್ತಿಯಿಂದಲೇ ವಿಷ್ಣುವಾಚಕವಾಗಿದೆ. ॥ ಸೂತ್ರ 9 ॥

## ದ್ವೈತದರ್ಶನದಲ್ಲಿ ಸೂತ್ರಗಳ ಅರ್ಥ

**1. ಓಂ ॥ ಆನುಮಾನಿಕಮಪಿ ಏಕೇಷಾಂ ಇತಿ ಚೇನ್ನ**
**ಶರೀರರೂಪಕವಿನ್ಯಸ್ತಗೃಹೀತೇಃ ದರ್ಶಯತಿ ಚ ॥ ಓಂ**

'ಅವ್ಯಕ್ತಾತ್ ಪುರುಷಃ ಪರಃ' ಎಂಬಲ್ಲಿ ಆನುಮಾನಿಕಂ= ಅನುಮಾನಸಿದ್ಧವಾದ ಪ್ರಕೃತಿಯೇ ಏಕೇಷಾಂ= ಕೆಲವು ಶಾಖೆಗಳಲ್ಲಿ ವಾಚ್ಯವಾಗಿದೆ. ಇತಿ ಚೇನ್ನ= ಹೀಗೆ ಹೇಳುವುದು ಸರಿಯಲ್ಲ, ಅವ್ಯಕ್ತಶಬ್ದದಿಂದ ವಾಚ್ಯನಾದವನು ಬ್ರಹ್ಮನೆ. ಏಕೆಂದರೆ, ದರ್ಶಯತಿ ಚ= ಶ್ರುತಿ ಸ್ಮೃತಿಗಳು ಅವ್ಯಕ್ತಶಬ್ದದಿಂದ ಬ್ರಹ್ಮನನ್ನೇ ಹೇಳಿವೆ. 'ಅವ್ಯಕ್ತಮಚಲಂ ಶಾಂತಂ' ಎಂದು ಶ್ರುತಿ; 'ಅವ್ಯಕ್ತೋಽಕ್ಷರ ಉಚ್ಯತೇ' ಎಂದು ಸ್ಮೃತಿ, ಅವ್ಯಕ್ತಶಬ್ದವನ್ನು ಬ್ರಹ್ಮನ ಹೆಸರನ್ನಾಗಿ ಬಳಸಿದೆ. ವಿಷ್ಣುವೇ ಅವ್ಯಕ್ತಾದಿ ಶಬ್ದಗಳಿಂದ ವಾಚ್ಯನಾದರೆ ಇತರ ವಸ್ತುಗಳಲ್ಲಿ ಆ ಶಬ್ದದ ಪ್ರಯೋಗ ಹೇಗೆ? ಶರೀರರೂಪಕವಿನ್ಯಸ್ತಗೃಹೀತೇಃ= ಬ್ರಹ್ಮಾಧೀನವಾದುದರಿಂದ ಅವನ ಶರೀರದಂತಿರುವ ಅವ್ಯಕ್ತಾದಿ ತತ್ತ್ವಗಳಲ್ಲಿ ಇರುವ (ವಿನ್ಯಸ್ತ) ವಿಷ್ಣುವನ್ನೇ ಅವ್ಯಕ್ತಾದಿ

ಶಬ್ದಗಳಿಂದ ವಾಚ್ಯನೆಂದು ಪರಿಗ್ರಹಿಸಲಾಗಿದೆ. ಪ್ರಕೃತ್ಯಾದಿಗಳು ಶರೀರವಾದುದರಿಂದ ಅವುಗಳಿಗೆ ಅವ್ಯಕ್ತ ಶಬ್ದ ಅಮುಖ್ಯ. ಆತ್ಮನಂತೆ ಒಳಗಿರುವ ವಿಷ್ಣು ಅವ್ಯಕ್ತ ಶಬ್ದದಿಂದ ವಾಚ್ಯನಾದುದರಿಂದ ಅವನ ದೇಹದಂತಿರುವ ಪ್ರಕೃತಿಯೂ ಆ ಹೆಸರಿನಿಂದಲೇ ಕರೆಯಲ್ಪಡುತ್ತದೆ.

ಇಲ್ಲಿ ಉಪಲಕ್ಷಣಯಾ 'ಜೀವಾ ಏವ ತು ದುಃಖಿನಃ' ಎಂಬ ವಾಕ್ಯದಲ್ಲಿರುವ ಜೀವಾದಿ ಶಬ್ದಗಳನ್ನೂ ಸಮನ್ವಯ ಮಾಡಲಾಗಿದೆ.

(ಅತ್ರ ಐಶ್ವರ್ಯವಿರೋಧಿ ಅವರತ್ವ ದುಃಖಿತ್ವಾದ್ಯರ್ಥಕ ಶಬ್ದಾಃ ಸಮನ್ವೀಯಂತೇ। ಅತ್ರ ಅವ್ಯಕ್ತ-ಜೀವ-ಬದ್ಧಾದಿಶಬ್ದಃ ಯೋಗ್ಯತಯಾ ಅನ್ವೇತಿ । ಅಪಿರೇವಾರ್ಥೇ । ಆನುಮಾನಿಕಮಿತಿ ಜೀವಾದೇರುಪಲಕ್ಷಣಮ್ । ತತ್ತು ಇತಿ ಅಸ್ತಿ। 'ಅವ್ಯಕ್ತಾತ್ ಪುರುಷಃ ಪರ' 'ಜೀವಾ ಏವ ತು ದುಃಖಿನಃ' ಇತಿ ಅವ್ಯಕ್ತಾದಿ ಶಬ್ದೈಃ ಆನುಮಾನಿಕಮಪಿ= ಅನುಮಾನಗಮ್ಯಂ ಪ್ರಧಾನಾದಿರೇವ ಕೇಷಾಂಚಿತ್ ಶಾಖಾಸು ಉಚ್ಯತೇ ಇತಿ ಚೇನ್ನ । ಅವ್ಯಕ್ತಾದಿ ತತ್ತು=ಪರಮಮುಖ್ಯವೃತ್ತ್ಯಾ ಬ್ರಹ್ಮೈವ । ನ ಪ್ರಧಾನಾದಿ । ಕುತಃ ? ದರ್ಶಯತಿ ಶ್ರುತಿಃ । 'ಅವ್ಯಕ್ತೋಽಕ್ಷರ ಉಚ್ಯತೇ' ಇತಿ ಸ್ಮೃತಿಶ್ಚ। ತಥಾ 'ಅನೇನ ಜೀವೇನ ಆತ್ಮನಾ' ಇತಿ ಶ್ರುತಿಃ, 'ಜೀವೋ ವಿನಯಿತಾ ಸಾಕ್ಷೀ' ಇತಿ ಸ್ಮೃತಿಶ್ಚ ಅವ್ಯಕ್ತಾದಿ ಬ್ರಹ್ಮೇತಿ ಯತೋ ದರ್ಶಯತಿ ತಸ್ಮಾದಿತ್ಯರ್ಥಃ। ವಿಷ್ಣೋರೇವ ಅವ್ಯಕ್ತಾದಿ ಶಬ್ದವಾಚ್ಯತ್ವೇ ಕಥಂ ಅನ್ಯತ್ರ ವ್ಯವಹಾರಃ ? ಇತ್ಯತ ಉಕ್ತಂ- ಶರೀರೇತಿ। ಶರೀರಸ್ಯ ರೂಪಮಿವ ರೂಪಂ ಯಸ್ಯತತ್ ಶರೀರರೂಪಂ। ಕುತ್ಸಿತಂ ಶರೀರರೂಪಂ ಶರೀರರೂಪಕಂ ಪ್ರಧಾನಾದಿ। ತತ್ರ ವಿನ್ಯಸ್ತಸ್ಯ=ಸ್ಥಿತಸ್ಯ ವಿಷ್ಣೋಃ ಅವ್ಯಕ್ತಾದಿ ಪದೇನ ಗೃಹೀತೇಃ। ವಿನ್ಯಸ್ತೇತ್ಯುಕ್ತ್ಯಾ ಅವ್ಯಕ್ತಾದಿ ಶಬ್ದವಾಚ್ಯ ಬ್ರಹ್ಮಸಂಬಂಧಾತ್ ಪ್ರಧಾನಾದೌ ಅವ್ಯಕ್ತಾದಿ ಶಬ್ದವ್ಯವಹಾರಃ ಇತಿ ದರ್ಶಿತಮ್ । ವೈಪರೀತ್ಯಂ ಕಿಂ ನೇತ್ಯತ- ಶರೀರೇತಿ । ಜೀವಶರೀರಂ ಯಥಾ ತತ್ತಂತ್ರಂ ತಥಾ ಪ್ರಧಾನಾದ್ಯಪಿ ಬ್ರಹ್ಮತಂತ್ರಮಿತಿ ॥)

**2. ಓಂ ॥ ಸೂಕ್ಷ್ಮಂ ತು ತದರ್ಹತ್ವಾತ್ ॥ ಓಂ .**

ತದರ್ಹತ್ವಾತ್, ತಸ್ಯ=ಸೂಕ್ಷ್ಮವಾದ ವಸ್ತುವಿಗೇ ತಸ್ಯ= ಅವ್ಯಕ್ತತ್ವದ ಅರ್ಹತ್ವಾತ್= ಅರ್ಹತೆ ಇರುವುದರಿಂದ ಸೂಕ್ಷ್ಮಂ ತು=ಸೂಕ್ಷ್ಮವಾದ ವಸ್ತುವೇ ಅವ್ಯಕ್ತ ಶಬ್ದದಿಂದ ವಾಚ್ಯವಾದುದು.

(ತುರೇವ । ಸೂಕ್ಷ್ಮಮೇವ ವಸ್ತು ಅವ್ಯಕ್ತ ಶಬ್ದವಾಚ್ಯಮ್ । ಅವ್ಯಕ್ತತ್ವಸ್ಯೈವ ತಚ್ಛಬ್ದನಿಮಿತ್ತತ್ವಾತ್ ಕಥಮೇತತ್ ಇತ್ಯತ ಉಕ್ತಂ- ತದರ್ಹತ್ವಾತ್ । ತದಿತಿ ತಂತ್ರಂ । ತಸ್ಯ=ಸೂಕ್ಷ್ಮಸ್ಯ, ತಸ್ಯ=ಪ್ರಕೃತಾವ್ಯಕ್ತತ್ವಸ್ಯ ಅರ್ಹತ್ವಾತ್ ಇತ್ಯರ್ಥಃ। ಸೂಕ್ಷ್ಮಸ್ಯೈವ ಅವ್ಯಕ್ತಶಬ್ದ ಪ್ರವೃತ್ತಿನಿಮಿತ್ತ- ಅವ್ಯಕ್ತತಾ- ಅರ್ಹತ್ವಾತ್ ತದವ್ಯಕ್ತಶಬ್ದವಾಚ್ಯಂ ಬ್ರಹ್ಮೈವ 'ಯತ್ತತ್ ಸೂಕ್ಷ್ಮಂ ಪರಮಂ ವೇದಿತವ್ಯಂ' ಇತ್ಯಾದೇಃ ಸೂಕ್ಷ್ಮತಮಮಿತಿ ಅವ್ಯಕ್ತಶಬ್ದ ಮುಖ್ಯಾರ್ಥಃ।)

**3. ಓಂ ॥ ತದಧೀನತ್ವಾತ್ ಅರ್ಥವತ್ ॥ ಓಂ**

ಅವರತ್ವ, ದುಃಖಾದಿ ಧರ್ಮಗಳು ತದಧೀನತ್ವಾತ್=ವಿಷ್ಣುವಿನ ಅಧೀನಗಳಾದುದರಿಂದ 'ಅವ್ಯಕ್ತಾತ್ ಪುರುಷಃ ಪರಃ' ಎಂಬಲ್ಲಿ ಅವಧಿ ಎಂಬ ಅರ್ಥವನ್ನು ತಿಳಿಸುವ ಪಂಚಮೀ ವಿಭಕ್ತಿ 'ದುಃಖೀ' ಇತ್ಯಾದಿ ಶಬ್ದಗಳೆಲ್ಲವು ಬ್ರಹ್ಮನಲ್ಲೂ ಅರ್ಥವತ್=ಸಾರ್ಥಕ, ವ್ಯರ್ಥವಲ್ಲ.

ಬ್ರಹ್ಮನಲ್ಲಿ ದುಃಖವಿಲ್ಲದಿದ್ದರೂ ಜೀವನಲ್ಲಿರುವ ದುಃಖವು ಅವನ ಅಧೀನವಾದುದರಿಂದ ಅವನನ್ನು ದುಃಖೀ ಎನ್ನಬಹುದು. 'ಅವ್ಯಕ್ತಾತ್ ಪುರುಷ ಪರಃ' ಎಂಬಲ್ಲಿ ಪುರುಷನು ಅವ್ಯಕ್ತಕ್ಕಿಂತ ಉತ್ತಮ ಎಂದಾಗ ಆ ಉತ್ತಮತ್ವಕ್ಕೆ ಅವಧಿ ಅವ್ಯಕ್ತ. ಇದರಿಂದ ಅದು ಉತ್ತಮವಲ್ಲ, ಪುರುಷನಿಗಿಂತ ಅವರ - ಕಡಿಮೆ. ಅವ್ಯಕ್ತ ಶಬ್ದದಿಂದ ವಿಷ್ಣು ವಾಚ್ಯನಾದರೆ, ಅವನೂ ಅವರನೆನಿಸಬೇಕಾದೀತು. ಎಂದರೆ, ಅದಕ್ಕೆ ಹೀಗೆ ಸಮಾಧಾನ- ಅವರತ್ವ ಅವನ ಅಧೀನವಾದುದರಿಂದ ಅವನೂ ಅವರತ್ವವಾಚಕಪಂಚಮೀ ವಿಭಕ್ತಿಯಿಂದ ವಾಚ್ಯನಾಗುತ್ತಾನೆ.

(ಅವರತ್ವಾಕ್ಷೇಪಕ ಅವಧಿತ್ವಾದಿ ವಾಚಿ ಪಂಚಮ್ಯಾದಿಶಬ್ದಜಾತಂ ಇತ್ಯನ್ವೇತಿ । ಅರ್ಥವತ್=ಬ್ರಹ್ಮಣಿ ಅರ್ಥವತ್, ನ ವ್ಯರ್ಥಂ। ಕುತಃ ? ತದಧೀನತ್ವಾತ್ । ಅವರತ್ವ= ದುಃಖಿತ್ವಾದಿ ತನ್ನಿಮಿತ್ತಧರ್ಮಾಣಾಂ ತಸ್ಯ=ವಿನ್ಯಸ್ತಪದೇನ ಪ್ರಕೃತಸ್ಯ ಬ್ರಹ್ಮಣಃ ಅಧೀನತ್ವಾತ್ ಇತ್ಯರ್ಥಃ।)

**4. ಓಂ ॥ ಜ್ಞೇಯತ್ವಾವಚನಾಚ್ಚ ॥ ಓಂ**

'ತಮೇವೈಕಂ ಜಾನಥ ಆತ್ಮಾನಂ' ಎಂದು ಇತರ ತತ್ತ್ವಗಳಿಗೆ ಮುಮುಕ್ಷುಗಳಿಂದ ಜ್ಞೇಯತ್ವ ಹೇಳದೆ ಬ್ರಹ್ಮನಿಗೆ ಮಾತ್ರ ಜ್ಞೇಯತ್ವವನ್ನು ಹೇಳಿರುವುದರಿಂದ ಅವ್ಯಕ್ತಾದಿ ಶಬ್ದಗಳ ಮುಖ್ಯಾರ್ಥ ವಿಷ್ಣುವೆ, ಪ್ರಧಾನಾದಿಗಳಲ್ಲ.

(ಅವ್ಯಕ್ತಜೀವಾದಿ ಶಬ್ದಮುಖ್ಯಾರ್ಥಃ ಬ್ರಹ್ಮೈವ, ನಾನುಮಾನಿಕಾದಿಃ, 'ತಮೇವೈಕಂ ಜಾನಥ ಆತ್ಮಾನಂ' ಇತಿ ಬ್ರಹ್ಮಣ ಏವ ಮುಮುಕ್ಷುಜ್ಞೇಯತ್ವೋಕ್ತಿ-ಅನುಕ್ತಿಭ್ಯಾಂ ಮೋಕ್ಷಾರ್ಥ ವೇದಾನಾಂ ಬ್ರಹ್ಮಪರತ್ವಸಿದ್ಧೌ ಪ್ರತಿವಾಕ್ಯಂ ತತ್ ಪರತ್ವಸ್ಯ 'ಆದಾವಂತೇ ಚ ಮಧ್ಯೇ ಚ' ಇತ್ಯಾದಿನಾ ಸಿದ್ಧೇಃ ಸ್ವತಃ ಪ್ರಾಪ್ತಮುಖ್ಯವೃತ್ತಿತ್ಯಾಗಾಯೋಗಾತ್ ಅವ್ಯಕ್ತಾದಿ ಶಬ್ದ ಮುಖ್ಯಾರ್ಥೋ ಬ್ರಹ್ಮೈವೇತಿ ಭಾವಃ।)

**5. ಓಂ ॥ ವದತೀತಿ ಚೇನ್ನ ಪ್ರಾಜ್ಞೋ ಹಿ ॥ ಓಂ**

ವದತಿ='ಮಹತಃ ಪರಂ ಧ್ರುವಂ ನಿಚಾಯ್ಯ' ಎಂದು ಮಹತ್ತತ್ತ್ವವೂ ಜ್ಞೇಯವೆಂದು ಉಪನಿಷತ್ತು ಹೇಳುತ್ತದೆ ಎಂದರೆ ಇತಿ ಚೇನ್ನ=ಅದು ಸರಿಯಲ್ಲ. ಅಲ್ಲೂ ಪ್ರಾಜ್ಞೋ ಹಿ=ವಿಷ್ಣುವೇ ಜ್ಞೇಯನಾಗಿ ಹೇಳಲ್ಪಟ್ಟಿದ್ದಾನೆ.

(ಜ್ಞೇಯತ್ವಾವಚನಂ ಅನ್ಯಸ್ಯಾಪಿ ಸಿದ್ಧಂ। ಯತೋ 'ಮಹತಃ ಪರಂ ಧ್ರುವಂ' ಇತಿ ಮಹತ್ ಪರತ್ವಲಿಂಗೇನ ಪ್ರಧಾನಸ್ಯಾಪಿ ಮುಮುಕ್ಷು ಜ್ಞೇಯತ್ವಂ ವದತಿ ಶ್ರುತಿಃ ಇತಿ ಚೇನ್ನ। ಪ್ರಾಜ್ಞೋ ಹಿ। ಯಸ್ಮಾತ್ ಪ್ರಾಜ್ಞೋ ವಿಷ್ಣುರತ್ರ ಉಚ್ಯತೇ। ಸರ್ವತಃ ಪರೇ ಮಹತ್‌ಪರತ್ವಂ ಯುಕ್ತಮಿತಿ ಭಾವಃ)

**6. ಓಂ॥ ಪ್ರಕರಣಾತ್ ॥ ಓಂ**

ಇದು ವಿಷ್ಣುವಿನ ಪ್ರಕರಣವಾದುದರಿಂದಲೂ ಇಲ್ಲಿರುವ 'ಮಹತಃ ಪರ' ಶಬ್ದದಿಂದ ವಾಚ್ಯನಾದವನು ವಿಷ್ಣು.

('ಸೋಽಧ್ವನಃ ಪಾರಮಾಪ್ನೋತಿ ತದ್ವಿಷ್ಣೋಃ ಪರಮಂ ಪದಂ' ಇತಿ ಪ್ರಕರಣೋಕ್ತಾರ್ಥ- ಉಪಾಸಕಸ್ಯ ವಿಷ್ಣುಪದ ಪ್ರಾಪ್ತ್ಯುಕ್ತ್ಯಾ ನಿರ್ಣೀತಾತ್ ಪ್ರಕರಣಾತ್ ಪ್ರಾಜ್ಞಃ ತತ್ರ ಉಚ್ಯತೇ ಇತ್ಯನ್ವಯಃ।)

**7. ಓಂ॥ ತ್ರಯಾಣಾಮೇವ ಚೈವಮುಪನ್ಯಾಸಃ ಪ್ರಶ್ನಶ್ಚ॥ ಓಂ**

ಏವಂ=ಕಾಠಕದಲ್ಲಿ ಹೇಳಿರುವಂತೆ ತ್ರಯಾಣಾಮೇವ=ತಂದೆಯ ಮನಃಶಾಂತಿ, ಸ್ವರ್ಗಕಾರಣವಾದ ಅಗ್ನಿಸ್ಥ ಪರಮಾತ್ಮ, ಮುಕ್ತನಿಯಾಮಕನಾದ ಬ್ರಹ್ಮ ಈ ಮೂರನ್ನೇ ಇಲ್ಲಿ ಹೇಳಲಾಗಿದೆ. ಏಕೆಂದರೆ, ಪ್ರಶ್ನಶ್ಚ=ನಚಿಕೇತ ಈ ಮೂರನ್ನೇ ಕೇಳಿದ್ದಾನೆ.

(ಆದ್ಯ ಚಶಬ್ದಃ ಯುಕ್ತಿ ಸಮುಚ್ಚಯೇ। ನ ಕೇವಲಂ ಪ್ರಕರಣಾತ್ ಇತಿ। ಅಂತ್ಯಃ ಪ್ರಶ್ನೋಪನ್ಯಾಸ ಸಮುಚ್ಚಯೇ। ಪ್ರಾಜ್ಞ ಇತ್ಯಸ್ತಿ। ಬುದ್ಧಿಸ್ಥತ್ವಾತ್ 'ಏತದುಪನಿಷದಿ' ಇತಿ ಅನ್ವೇತಿ। ಏವಂ='ವೀತಮನ್ಯುಸ್ತ್ವಾಂ ದದೃಶಿವಾನ್ ಮೃತ್ಯುಮುಖಾತ್ ಪ್ರಮುಕ್ತಂ' ಇತಿ, 'ಸ್ವರ್ಗ್ಯಮಗ್ನಿಂ ನಚಿಕೇತಃ ಪ್ರಜಾನನ್' ಇತಿ, 'ದೇವೈರತ್ರಾಪಿ ವಿಚಿಕಿತ್ಸಿತಂ ಕಿಲ' ಇತ್ಯೇವಂ ಪ್ರಕಾರೇಣ ತ್ರಯಾಣಾಂ=ಪಿತೃಸೌಮನಸ್ಯ-ಸ್ವರ್ಗ್ಯಾಗ್ನಿ-ಬ್ರಹ್ಮಣಾಮೇವ ಉಪನ್ಯಾಸೋ ಯತೋಽತಶ್ಚ ಪ್ರಾಜ್ಞ ಏವ ತತ್ರ ಉಚ್ಯತೇ ಇತ್ಯರ್ಥಃ। ತ್ರಯಾಣಾಮೇವೇತಿ ಕುತಃ? ಇತ್ಯತ ಉಕ್ತಂ-ಪ್ರಶ್ನಶ್ಚೇತಿ। ತ್ರಿತಯ ವಿಷಯ ಏವ ಪ್ರಶ್ನಶ್ಚ ಯತೋಽತಃ ಉಪನ್ಯಾಸಃ ತ್ರಿತಯ ವಿಷಯ ಇತ್ಯರ್ಥಃ।)

**8. ಓಂ॥ ಮಹದ್ವಚ್ಚ॥ ಓಂ**

ಮಹತ್ ಎಂಬ ಶಬ್ದವನ್ನು ಬ್ರಹ್ಮನಲ್ಲಿ 'ಮಹಾಂತಂ ವಿಭುಮಾತ್ಮನಂ' ಎಂದು ಪ್ರಯೋಗ ಮಾಡಿರುವಂತೆ ಅವ್ಯಕ್ತ ಶಬ್ದವನ್ನು ಬ್ರಹ್ಮನಲ್ಲೇ ಮುಖ್ಯವಾಗಿ ಪ್ರಯೋಗಿಸಲಾಗಿದೆ.

(ಚ ಶಬ್ದಾತ್ ಅವ್ಯಕ್ತಾದಿ ಶಬ್ದಂ ಬ್ರಹ್ಮೈವ ಇತಿ ಸಮುಚ್ಚೀಯತೇ। ಮಹದ್ವತ್= ಮಹಚ್ಛಬ್ದಂ ಬ್ರಹ್ಮ ಯಥಾ ತಥೇತ್ಯರ್ಥಃ। ಮಹಚ್ಛಬ್ದೋ ಮಹತತ್ತ್ವೇ ಪ್ರಯೋಗ– ಪ್ರಾಚುರ್ಯವತ್ವೇನ ಬ್ರಹ್ಮಣಿ ತದ್ಧೀನೋಽಪಿ 'ಮಹಾಂತಂ ವಿಭುಮಾತ್ಮಾನಂ' ಇತ್ಯಾದೌ

ಯಥಾ ಮಹತ್ವರೂಪ ತತ್ ಪ್ರವೃತ್ತಿನಿಮಿತ್ತಸತ್ವಾತ್ ಮುಖ್ಯಃ ತಥಾ ಅವ್ಯಕ್ತಾದಿಶಬ್ದಃ ಅನ್ಯತ್ರ ಪ್ರಸಿದ್ಧ್ಯಾ ಬ್ರಹ್ಮಣಿ ತದಭಾವೇಽಪಿ ನಿಮಿತ್ತಾತಿಶಯಾತ್ ಮುಖ್ಯ ಇತಿ ಭಾವಃ।)

**9. ಓಂ ॥ ಚಮಸವದವಿಶೇಷಾತ್ ॥ ಓಂ**

'ಚಮಸ' ಶಬ್ದವು ಯಜ್ಞಪಾತ್ರೆಯಲ್ಲಿ ಪ್ರಸಿದ್ಧವಾದರೂ ನಮ್ಮ ಶಿರಸ್ಸಿನಲ್ಲಿ ಹೇಗೆ ಮುಖ್ಯವೋ ಅದರಂತೆ ಅವ್ಯಕ್ತ ಶಬ್ದವೂ ಜಡಪ್ರಕೃತಿಯಲ್ಲಿ ಪ್ರಸಿದ್ಧವಾದರೂ ಬ್ರಹ್ಮನಲ್ಲೇ ಮುಖ್ಯ. ಎರಡೂ ಶ್ರುತಿಗಳಲ್ಲಿ ವಿಶೇಷವಿಲ್ಲವಾದುದರಿಂದ ಚಮಸ- ಅವ್ಯಕ್ತ ಶಬ್ದಗಳೆರಡಕ್ಕೂ ತಲೆ- ವಿಷ್ಣು ಎಂಬುದು ಮುಖ್ಯಾರ್ಥಗಳೇ.

(ಅವ್ಯಕ್ತಾದಿ ಬ್ರಹ್ಮೈವ ಇತ್ಯಸ್ತಿ। ಚಮಸ ಶಬ್ದೋ ಯಜ್ಞಪಾತ್ರೇ ಪ್ರಸಿದ್ಧೋಽಪಿ ಯಥಾ ಶಿರಸಿ ಮುಖ್ಯಃ ತಥಾವ್ಯಕ್ತಾದಿರಪಿ ಬ್ರಹ್ಮೈವ- ತತ್ರ ಮುಖ್ಯ ಇತ್ಯರ್ಥಃ। 'ನಾಮಾನಿ ಸರ್ವಾಣಿ' ಇತಿ ಶ್ರುತೇಃ 'ಇದಂ ತಚ್ಛಿರಃ' ಇತಿ ಶ್ರುತ್ಯಾ ಅವಿಶೇಷಾತ್=ಸಾಮ್ಯಾತ್, ಆಸ್ಯಾ ಅನುಶಾಸನ ರೂಪತ್ವಾತ್ ಇತಿ ಯಾವತ್।)

## ಶಾಂಕರ ಭಾಷ್ಯದಲ್ಲಿ ಹೇಳಿರುವ ಸೂತ್ರಗಳ ಅರ್ಥ

**ಆನುಮಾನಿಕಮಪ್ಯೇಕೇಷಾಮಿತಿ ಚೇನ್ನ**

**ಶರೀರರೂಪಕವಿನ್ಯಸ್ತಗೃಹೀತೇಃ ದರ್ಶಯತಿ ಚ ॥**

ದ್ವಿತೀಯ ಸೂತ್ರದಲ್ಲಿ ಬ್ರಹ್ಮನಿಗೆ ಹೇಳಿರುವ ಜಗತ್ಕಾರಣತ್ವ ಜಡಪ್ರಕೃತಿಗೂ ಇದೆ; ಎಂಬ ಆಶಂಕೆಯನ್ನು 'ಈಕ್ಷತೇಃ ನಾಶಬ್ದಂ' ಎಂಬ ಸೂತ್ರ ನಿರಾಕರಿಸಿದೆ. ವೇದಾಂತ ವಾಕ್ಯಗಳೆಲ್ಲವೂ ಬ್ರಹ್ಮಕಾರಣತಾವಾದವನ್ನೇ ಸಮರ್ಥಿಸುತ್ತವೆ. ಪ್ರಕೃತಿಕಾರಣತಾವಾದ ವೇದಾಂತ ವಾಕ್ಯಗಳಿಗೆ ಸಮ್ಮತವಲ್ಲ, ಎಂದು ಆ ಅಧಿಕರಣದ ತಾತ್ಪರ್ಯ. ಇದು ಕೇವಲ ಪ್ರತಿಜ್ಞೆಯಾಯಿತು. ವೇದಾಂತಗಳಲ್ಲೂ ಪ್ರಕೃತಿ ಪರವಾದ ಕೆಲವು ವಾಕ್ಯಗಳಿವೆ. ಅಂತಹ ವಾಕ್ಯಗಳು ಪ್ರಕೃತಿಯನ್ನು ಹೇಳುತ್ತಿಲ್ಲ, ಬ್ರಹ್ಮನನ್ನೇ ಹೇಳುತ್ತವೆ ಎಂದು ಇಲ್ಲಿ ಸಮರ್ಥಿಸಲಾಗಿದೆ.

ಮಹತಃ ಪರಮವ್ಯಕ್ತಂ ಅವ್ಯಕ್ತಾತ್ ಪುರುಷಃ ಪರಃ ॥

ಎಂದು ಕಠಶಾಖೆಯವರು ಕಾಪಿಲಸ್ಮೃತಿ ಹೇಳುವ ಕ್ರಮದಲ್ಲೇ ತತ್ತ್ವಗಳನ್ನು ಉಲ್ಲೇಖಿಸಿ ಅವ್ಯಕ್ತ ಶಬ್ದದಿಂದ ಪ್ರಕೃತಿಯನ್ನು ಹೇಳುತ್ತಾರೆ. 'ನ ವ್ಯಕ್ತಂ ಅವ್ಯಕ್ತಂ' ಎಂದು ಪ್ರಮಾಣಗಳಿಗೆ ಸಿಗದ ಸೂಕ್ಷ್ಮವಾದ ಜಡಪ್ರಕೃತಿಗೆ ಆ ಶಬ್ದ ಅನ್ವರ್ಥವಾಗಿ ಅನ್ವಯಿಸುತ್ತದೆ. ಸಾಂಖ್ಯ ಸಿದ್ಧಾಂತದಲ್ಲಿ ಅವ್ಯಕ್ತಶಬ್ದ ಪ್ರಕೃತಿವಾಚಕವಾಗಿ ಪ್ರಸಿದ್ಧವೂ ಆಗಿದೆ. ಆದ್ದರಿಂದ ಪ್ರಕೃತಿಯೇ ಅವ್ಯಕ್ತ ಶಬ್ದದ ಅರ್ಥ. ಅಂದಮೇಲೆ ಅದನ್ನು 'ಅಶಬ್ದಂ' ಎಂದುದು ಸರಿಯಲ್ಲ, ಎಂದು ಪೂರ್ವಪಕ್ಷ.

ಅವ್ಯಕ್ತಶಬ್ದ ಸೂಕ್ಷ್ಮವಾದುದನ್ನು ಹೇಳುತ್ತದೆ. ಪ್ರಕೃತದಲ್ಲಿ,

ಆತ್ಮಾನಂ ರಥಿನಂ ವಿದ್ಧಿ ಶರೀರಂ ರಥಮೇವ ಚ।

ಎಂದು ಈ ಪ್ರಕರಣದಲ್ಲಿ ನಮ್ಮ ದೇಹವನ್ನು ರಥವನ್ನಾಗಿ ನಿರೂಪಿಸಲಾಗಿದೆ. ಇಂದ್ರಿಯಗಳೇ ಈ ರಥದ ಕುದುರೆಗಳು. ಆ ಕುದುರೆಗಳು ಹತೋಟಿಯಲ್ಲಿದ್ದರೆ 'ಸೋಽಧ್ವನಃ ಪಾರಮಾಪ್ನೋತಿ'- ಈ ಸಂಸಾರದ ದಾರಿ ಕೊನೆ ಮುಟ್ಟುತ್ತದೆ' ಎನ್ನಲಾಗಿದೆ. ಇದರ ಕೊನೆ ಯಾವುದು? ಅದನ್ನು

ಇಂದ್ರಿಯೇಭ್ಯಃ ಪರಾ ಹ್ಯರ್ಥಾಃ ಅರ್ಥೇಭ್ಯಶ್ಚ ಪರಂ ಮನಃ।
ಮನಸಸ್ತು ಪರಾ ಬುದ್ಧಿಃ ಬುದ್ಧೇರಾತ್ಮಾ ಮಹಾನ್ ಪರಃ।
ಮಹತಃ ಪರಮವ್ಯಕ್ತಂ ಅವ್ಯಕ್ತಾತ್ ಪುರುಷಃ ಪರಃ॥
ಪುರುಷಾತ್ ನ ಪರಂ ಕಿಂಚಿತ್ ಸಾ ಕಾಷ್ಠಾ ಸಾ ಪರಾ ಗತಿಃ॥

ಹೀಗೆ ಬ್ರಹ್ಮನೇ ಪರಮಪ್ರಾಪ್ಯ ಎಂದು ತಿಳಿಸಲಾಗಿದೆ. ಶರೀರಕ್ಕೆ ರಥದ ಕಲ್ಪನೆಯಲ್ಲಿ ಇಂದ್ರಿಯಗಳು, ವಿಷಯಗಳು, ಮನಸ್ಸು, ಬುದ್ಧಿ, ಆತ್ಮ, ಶರೀರ ಇವಿಷ್ಟು ಸೇರಿವೆ. ಮೇಲಿನ ಮಂತ್ರದಲ್ಲಿ ಇವೆಲ್ಲದಕ್ಕೂ ವಾಚಕವಾದ ಸ್ಪಷ್ಟಶಬ್ದಗಳಿವೆ. ಆದರೆ, ಶರೀರವಾಚಕ ಶಬ್ದವಿಲ್ಲ. ಹೀಗಾಗಿ ಉಳಿದಿರುವ ಅವ್ಯಕ್ತಶಬ್ದವೇ ಶರೀರವನ್ನು ಹೇಳಬೇಕು. ಅದನ್ನು ಬಿಟ್ಟು ಜಡಪ್ರಕೃತಿ ಇಲ್ಲಿ ಸರ್ವಥಾ ಅಪ್ರಸ್ತುತ.

**2. ಸೂಕ್ಷ್ಮಂ ತು ತದರ್ಹತ್ವಾತ್**-ಸ್ಥೂಲವಾದ ಶರೀರವು ಸೂಕ್ಷ್ಮ ಎಂಬ ಅರ್ಥ ಬರುವ ಅವ್ಯಕ್ತಶಬ್ದದಿಂದ ಹೇಗೆ ವಾಚ್ಯವಾಗುತ್ತದೆ? ಅದಕ್ಕೆ ಉತ್ತರ-ಇಲ್ಲಿ ಶರೀರ ಶಬ್ದದಿಂದ ಶರೀರಕ್ಕೆ ಕಾರಣವಾದ ಭೂತಸೂಕ್ಷ್ಮಗಳನ್ನು ಪರಿಗ್ರಹಿಸಿದಾಗ ಅವು ಸೂಕ್ಷ್ಮವಾದುದರಿಂದ ಅವ್ಯಕ್ತಶಬ್ದಕ್ಕೆ ಅರ್ಹವಾಗಿವೆ.

**3. ತದಧೀನತ್ವಾತ್ ಅರ್ಥವತ್** - ದೇಹಕಾರಣವಾದ ಭೂತಸೂಕ್ಷ್ಮಗಳು ಅವ್ಯಕ್ತ ಶಬ್ದದಿಂದ ವಾಚ್ಯ, ಎಂದು ಹೇಳಿದರೆ ಪ್ರಕೃತಿವಾಚ್ಯ ಎಂದು ಒಪ್ಪಿಕೊಂಡಂತೆಯೇ ಆಯಿತು! ಹೌದು, ಪ್ರಕೃತಿಯ ಸ್ವರೂಪವೇ ಇಲ್ಲವೆಂದು ಹೇಳಲಾಗದು. ಆದರೆ, ಸಾಂಖ್ಯರು ಹೇಳುವಂತೆ ಈಶ್ವರನಿಲ್ಲದ ಸ್ವತಂತ್ರವಾದ ಪ್ರಕೃತಿ ತತ್ತ್ವ ಇಲ್ಲ ಎಂದಿಷ್ಟೇ ನಮ್ಮ ವಾದ. ಪರಮೇಶ್ವರಾಧೀನವಾದ ಪ್ರಕೃತಿಯನ್ನು ಯಾರೂ ಅಲ್ಲಗಳೆಯಲಾಗದು. ಅದಿಲ್ಲದೆ ಕ್ರಿಯಾಶಕ್ತಿಯೇ ಅವನಿಗೆ ಇರಲಾರದು. ಅದನ್ನು ಅವಿದ್ಯಾ, ತಮಸ್ಸು, ಮಾಯೆ ಎಂದೆಲ್ಲ ಕರೆಯಲಾಗುವುದು. ಅದೇ ಪ್ರಕೃತ ಅವ್ಯಕ್ತಶಬ್ದದ ಅರ್ಥ. (ಅರ್ಥವತೀ ಹಿ ಸಾ । ನ ಹಿ ತಯಾ ವಿನಾ ಪರಮೇಶ್ವರಸ್ಯ ಸ್ರಷ್ಟೃತ್ವಂ ಸಿದ್ಧ್ಯತಿ। ಶಾಂ.ಭಾ.)

**4. ಜ್ಞೇಯತ್ವಾವಚನಾಚ್ಚ** - ಸಾಂಖ್ಯರು ಪ್ರಕೃತಿ ಪುರುಷ ವಿವೇಕ ಜ್ಞಾನವು ತಾರಕ ಎಂದು ಹೇಳಿರುವುದರಿಂದ ಪ್ರಕೃತಿಯೂ ಜ್ಞೇಯವೆನ್ನುತ್ತಾರೆ. ಆದರೆ, ಪ್ರಕೃತ

ಉಪನಿಷತ್ತಿನಲ್ಲಿ ಎಲ್ಲೂ ಈ ಅವ್ಯಕ್ತವನ್ನು ಜ್ಞೇಯವೆನ್ನಲಾಗಿಲ್ಲ. ಆದ್ದರಿಂದ, ಅವರಿಗೆ ಅಭಿಮತವಾದ ಪ್ರಕೃತಿ ಇಲ್ಲಿ ವಿವಕ್ಷಿತವಲ್ಲ.

**5. ವದತೀತಿ ಚೇನ್ನ ಪ್ರಾಜ್ಞೋ ಹಿ, ಪ್ರಕರಣಾತ್** - ಇಲ್ಲೂ

'ಅನಾದ್ಯನಂತಂ ಮಹತಃ ಪರಂ ಧ್ರುವಂ

ನಿಚಾಯ್ಯ ತಂ ಮೃತ್ಯುಮುಖಾತ್ ಪ್ರಮುಚ್ಯತೇ ॥

ಎಂದು 'ಮಹತ್ತತ್ತ್ವಕ್ಕಿಂತ ಪರವನ್ನಾಗಿ ಪ್ರಕೃತಿಯನ್ನು ಪ್ರಸ್ತಾಪಿಸಿ ಅದನ್ನು 'ನಿಚಾಯ್ಯ-ತಿಳಿದು' ಎಂದು ಹೇಳಲಾಗಿದೆ. ಅಂದಮೇಲೆ ಪ್ರಧಾನವು ಜ್ಞೇಯವಾಗಿ ಹೇಳಲ್ಪಟ್ಟಿಲ್ಲ ಎನ್ನುವುದು ಹೇಗೆ? ಈ ಪ್ರಶ್ನೆ ಸರಿಯಲ್ಲ- ಅಲ್ಲೂ 'ಮಹತಃ ಪರಂ' ಎಂದು ಬ್ರಹ್ಮನನ್ನು ಹೇಳಿ ಅವನನ್ನೇ ಜ್ಞೇಯನನ್ನಾಗಿ ಹೇಳಲಾಗಿದೆ. ಏಕೆಂದರೆ, ಇದು ಬ್ರಹ್ಮಪ್ರಕರಣ-'ಸಾ ಕಾಷ್ಠಾ ಸಾ ಪರಾ ಗತಿಃ' ಎಂದು ಅವನೇ ಉಪಕ್ರಮದಲ್ಲಿ ಪ್ರಸ್ತುತನಾಗಿದ್ದಾನೆ.

(ಶಾಂಕರ ಭಾಷ್ಯದಂತೆ 'ಪ್ರಕರಣಾತ್' ಎಂದು ಪ್ರತ್ಯೇಕ ಸೂತ್ರವಲ್ಲ)

**6. ತ್ರಯಾಣಾಮೇವ ಚೈವಮುಪನ್ಯಾಸಃ ಪ್ರಶ್ನಶ್ಚ**- ಈ ಕಾಠಕ ಉಪನಿಷತ್ತಿನಲ್ಲಿ ನಚಿಕೇತನ ಪ್ರಶ್ನೆ ಮೂರು- 1. 'ಸ ತ್ವಮಗ್ನಿಂ ಸ್ವರ್ಗ್ಯಮಧ್ಯೇಷಿ ಮೃತ್ಯೋ ಪ್ರಬ್ರೂಹಿ ತಂ' ಎಂದು ಅಗ್ನಿಯ ಕುರಿತು,

2. 'ಯೇಽಯಂ ಪ್ರೇತೇ ವಿಚಿಕಿತ್ಸಾ ಮನುಷ್ಯೇ । ಅಸ್ತೀತ್ಯೇಕೇ ನಾಯಮಸ್ತೀತಿ ಚೈಕೇ । ಏತದ್ವಿದ್ಯಾಂ...' ಎಂದು ಸತ್ತಮೇಲೆ ಜೀವನ ಕುರಿತು,

3. ಅನ್ಯತ್ರ ಧರ್ಮಾತ್ ಅನ್ಯತ್ರಾಧರ್ಮಾತ್...ಯತ್ತತ್ ಪಶ್ಯತಿ ತದ್ವದ॥ ಎಂದು ಬ್ರಹ್ಮನ ಕುರಿತು.

ಈ ಮೂರಕ್ಕೆ ಮಾತ್ರ ಯಮನ ಉತ್ತರವಿರಬೇಕು. ಅಂದಮೇಲೆ ಜಡಪ್ರಕೃತಿಯ ನಿರೂಪಣೆಯ ಪ್ರಸಂಗವೇ ಇಲ್ಲಿ ಇಲ್ಲ.

**7. ಮಹದ್ವಚ್ಚ**-ಸಾಂಖ್ಯರು ಮಹತ್ ಶಬ್ದವನ್ನು ಪ್ರಕೃತಿಯ ಮೊದಲ ವಿಕೃತಿಯಾದ ಮಹತ್ತತ್ವಕ್ಕೆ ವಾಚಕ ಎನ್ನುತ್ತಾರೆ. ಆದರೆ, ವೈದಿಕ ಸಾಹಿತ್ಯದಲ್ಲಿ ಆ ಶಬ್ದ 'ಮಹಾಂತಂ ವಿಭುಂ ಆತ್ಮಾನಂ' ಎಂದು ಆತ್ಮನಲ್ಲಿ ಪ್ರಯೋಗಿಸಲ್ಪಡುತ್ತದೆ. ಅದರಂತೆ, ಅವ್ಯಕ್ತ ಶಬ್ದದಿಂದ ಅವರು ಪ್ರಕೃತಿಯನ್ನು ಹೇಳಿದರೂ ವೈದಿಕ ಸಾಹಿತ್ಯದಲ್ಲಿ ಅದಕ್ಕೆ ಬೇರೆಯೇ ಅರ್ಥವಿದೆ.

ಶಾಂಕರಭಾಷ್ಯದಲ್ಲಿ 'ಚಮಸವದವಿಶೇಷಾತ್' ಎಂದು ಮುಂತಾದ ಮುಂದಿನ ಮೂರು ಸೂತ್ರಗಳು ಪ್ರತ್ಯೇಕಾಧಿಕರಣ. ಚಮಸಾಧಿಕರಣವೆಂದು ಅದಕ್ಕೆ ಹೆಸರು.

## ಚಂದ್ರಿಕಾದಲ್ಲಿ ಮಾಡಿರುವ ವಿಮರ್ಶೆ

1. ಈ ಅಧಿಕರಣ, ಶಾಂಕರ ವ್ಯಾಖ್ಯಾನದಂತೆ, ಅನಾವಶ್ಯಕ. ಸೂತ್ರ ಇದೆ ಎಂದಿಷ್ಟೇ ಅರ್ಥ ಹೇಳಿದಂತಿದೆ. ಏಕೆಂದರೆ, ಪ್ರಧಾನವು ಶಾಸ್ತ್ರ ಪ್ರತಿಪಾದ್ಯವೇ ಅಲ್ಲ ಎಂದು ಸಿದ್ಧಾಂತವನ್ನು ಇಲ್ಲಿ ಮಾಡಲಾಗಿಲ್ಲ. ಕಾರಣ, ಅವ್ಯಕ್ತ ಶಬ್ದದಿಂದ ಪರಮಾತ್ಮಾಧೀನವಾಗಿ ಪ್ರಧಾನವು ಪ್ರತಿಪಾದ್ಯ ಎಂದು ಇಲ್ಲಿಯೇ ಒಪ್ಪಿಕೊಳ್ಳಲಾಗಿದೆ. ಇನ್ನು ಅದು ಜಗತ್ಕಾರಣವಾಗಿ ಶಾಸ್ತ್ರಪ್ರತಿಪಾದ್ಯವಲ್ಲ ಎನ್ನಬೇಕು. ಆದರೆ, ಇಲ್ಲಿ ಸಮನ್ವಯ ಮಾಡಲಾಗುವ ಕಾಠಕದ ವಾಕ್ಯ ಅವ್ಯಕ್ತವನ್ನು ಕಾರಣವೆಂದೇನೂ ಹೇಳುತ್ತಿಲ್ಲ. ದ್ವೈತಭಾಷ್ಯದಂತೆ ಅದ್ವೈತಭಾಷ್ಯದಲ್ಲಿ ಸಕಲ ಶಬ್ದಗಳೂ ಬ್ರಹ್ಮವಾಚಕ ಎಂದೇನೂ ಸಮನ್ವಯ ಸೂತ್ರದಲ್ಲಿ ಹೇಳಲಾಗಿಲ್ಲ. ಅಂದಮೇಲೆ ಕಾಠಕದ ಈ ಅವ್ಯಕ್ತ ಶಬ್ದ ಪ್ರಧಾನವಾಚಕವಾದರೂ ಏನು ನಷ್ಟ ?

2. ಅಲ್ಲದೆ, ಇಲ್ಲಿರುವ ಅವ್ಯಕ್ತ ಶಬ್ದ ಸಾಂಖ್ಯಾಭಿಮತವಾದ ಪ್ರಧಾನ ವಾಚಕವಲ್ಲ ಎಂದು ನಿರಾಕರಿಸಿ ಬ್ರಹ್ಮವಾಚಕವೆಂದೇನೂ ಸಿದ್ಧಾಂತ ಮಾಡಲಾಗುವುದಿಲ್ಲ. ಹಾಗೆ ಮಾಡಿಯೂ ಇಲ್ಲ. ಅದು ಅವಿದ್ಯಾವಾಚಕ ಎಂದೇ ಇಲ್ಲಿ ಮಾಡಿರುವ ಸಿದ್ಧಾಂತ. ಇದು ಕುರಿಯನ್ನು ತೋಳದ ಬಾಯಿಯಿಂದ ತಪ್ಪಿಸಿ ಹುಲಿಗೆ ಬಲಿ ನೀಡಿದಂತಾಯಿತು-

ವೃಕೇಣಾಪಹೃತಂ ಮೇಷಂ ಆದಾಯಾತಿಪ್ರಯತ್ನತಃ।
ಸ ಚೇತ್ ವ್ಯಾಘ್ರಾಯ ದೀಯೇತ ಕೋ ಲಾಭಃ ತೇನ ಸಿದ್ಧ್ಯತಿ॥

## ರಾಮಾನುಜ ಭಾಷ್ಯದಲ್ಲಿ ಹೇಳಿರುವ ಸೂತ್ರಾರ್ಥ

ಈ ಭಾಷ್ಯದಲ್ಲಿ 'ಅವ್ಯಕ್ತಾತ್ ಪುರುಷಃ ಪರಃ' ಎಂಬುದನ್ನೇ ವಿಷಯವನ್ನಾಗಿ ಉಲ್ಲೇಖಿಸಲಾಗಿದ್ದರೂ ಅಲ್ಲಿ 'ಅವ್ಯಕ್ತವೆಂದರೆ ಪ್ರಕೃತಿ; ಪುರುಷನೆಂದರೆ ಸಾಂಖ್ಯರ ಆತ್ಮ' ಎಂದು ಹೇಳಿ ಈ ವಾಕ್ಯ ಸಾಂಖ್ಯರ ಪ್ರಕೃತಿ ಪುರುಷಪ್ರತಿಪಾದಕ. 'ಪುರುಷಾನ್ನ ಪರಂ ಕಿಂಚಿತ್' ಎಂದು ಹೇಳುವ ಮೂಲಕ 'ಪುರುಷೋಪಸರ್ಜನ ಪ್ರಕೃತಿ ಕರ್ತೃತ್ವವಾದ'ವನ್ನು ಈ ವಾಕ್ಯ ಮಂಡಿಸುತ್ತಿದೆ, ಎಂದು ಪೂರ್ವಪಕ್ಷವನ್ನು ಮಾಡಲಾಗಿದೆ.

ಆದರೆ, ಅವ್ಯಕ್ತ ಶಬ್ದಕ್ಕೆ ಶರೀರ ಎಂದು ಅರ್ಥ. ಪುರುಷನೆಂದರೆ ಪರಮಾತ್ಮ. ಏಕೆಂದರೆ, ಕಾಠಕದ ಆಲಂಕಾರಿಕ ನಿರೂಪಣೆಯಲ್ಲಿ ಜೀವ ರಥಿಕ, ಶರೀರ ರಥ, ಇಂದ್ರಿಯ ಕುದುರೆ, ವಿಷಯಗಳು ಸಂಚಾರ ಭೂಮಿ, ಮನಸ್ಸು ಕಡಿವಾಣ, ಬುದ್ಧಿ ಸಾರಥಿ. ಇವುಗಳ ತಾರತಮ್ಯವನ್ನು

'ಇಂದ್ರಿಯೇಭ್ಯಃ ಪರಾ ಹ್ಯರ್ಥಾಃ ಅರ್ಥೇಭ್ಯಶ್ಚ ಪರಂ ಮನಃ।
ಮನಸಸ್ತು ಪರಾ ಬುದ್ಧಿಃ ಬುದ್ಧೇರಾತ್ಮಾ ಮಹಾನ್ ಪರಃ।
ಮಹತಃ ಪರಮವ್ಯಕ್ತಂ ಅವ್ಯಕ್ತಾತ್ ಪುರುಷಃ ಪರಃ।
ಪುರುಷಾತ್ ನ ಪರಂ ಕಿಂಚಿತ್ ಸಾ ಕಾಷ್ಠಾ ಸಾ ಪರಾ ಗತಿಃ॥

ಎಂದು ನಿರೂಪಿಸಲಾಗಿದೆ. ಇಂದ್ರಿಯಗಳಿಗಿಂತಲೂ ವಿಷಯಗಳೇ ಹೆಚ್ಚಿನವು. ಇಂದ್ರಿಯಗಳನ್ನು ಎಷ್ಟು ನಿಗ್ರಹಿಸಿದರೂ ವಿಷಯಗಳ ಮುಂದೆ ಅವು ಸೋಲುತ್ತವೆ. ಮನಸ್ಸು ಅದಕ್ಕಿಂತ ಪ್ರಧಾನ. ವಿಷಯಗಳು ಇಲ್ಲದಿದ್ದರೂ ಅದು ವಿಷಯಗಳನ್ನು ಮೆಲುಕು ಹಾಕುತ್ತಿರುತ್ತದೆ. ಅದ್ಕಕಿಂತಲೂ ಬುದ್ಧಿ ಹೆಚ್ಚಿನದು. ಬುದ್ಧಿ ಎಂದರೆ ಅಧ್ಯವಸಾಯ. ಅಧ್ಯವಸಾಯ ಎಂದರೆ ವಿಷಯ ವಸ್ತುಗಳಲ್ಲಿ ದೋಷವನ್ನು ಕಂಡು ಅವುಗಳಲ್ಲಿ ತಿರಸ್ಕಾರದ ನಿರ್ಧಾರ. ಅದಿಲ್ಲದಿದ್ದರೆ ಮನಸ್ಸು ಎಷ್ಟು ನಿಗ್ರಹಿಸಲ್ಪಟ್ಟರೂ ವಿಷಯದ ಕಡೆಗೆ ಓಡುತ್ತದೆ. ಆತ್ಮನ ನಿರ್ಧಾರ ಅಂತಿಮವಾದುದರಿಂದ ಅದು ಬುದ್ಧಿಗಿಂತ ಪ್ರಧಾನ. ಇವೆಲ್ಲ ತೊಂದರೆಗಳಿಗೆ ಮೂಲಕಾರಣವಾದುದು ಈ ದೇಹ. ಅದು ಆತ್ಮನಿಗಿಂತಲೂ ಮುಖ್ಯ. ಇವೆಲ್ಲ ಸರಿಯಾಗಿದ್ದರೂ ಗುರಿಯಾಗಿ ಪರಮಪುರುಷನಿರಬೇಕು. ಅವನು ಈ ರಥಯಾತ್ರೆಯ ತುತ್ತ ತುದಿ. ಹೀಗೆ, ಇಲ್ಲಿ ಪ್ರಧಾನವನ್ನೂ ಸಾಂಖ್ಯಾಭಿಮತಪುರುಷನನ್ನೂ ಹೇಳುವ ಪ್ರಸಕ್ತಿಯೇ ಇಲ್ಲ.

ಎರಡನೆಯ ಸೂತ್ರದಲ್ಲಿ ಅವ್ಯಕ್ತ ಶಬ್ದ ಅದ್ವೈತಭಾಷ್ಯದಂತೆ ಅವಿದ್ಯಾವಾಚಕವಾದರೆ ರಾಮಾನುಜಭಾಷ್ಯ ಭೂತಸೂಕ್ಷ್ಮವಾಚಕ ಎನ್ನುತ್ತದೆ. 'ತ್ರಯಾಣಾಮೇವ ಉಪನ್ಯಾಸಃ' ಎಂಬ ಸೂತ್ರದಲ್ಲಿ 'ತ್ರಯಾಣಾಂ' ಎಂಬ ಪದದಿಂದ ದ್ವೈತಾದ್ವೈತ ಭಾಷ್ಯಗಳಲ್ಲಿ ನಚಿಕೇತ ಬೇಡಿದ ಮೂರು ವರಗಳನ್ನು ತೆಗೆದುಕೊಳ್ಳಲಾಗಿದ್ದರೆ ರಾಮಾನುಜ ಭಾಷ್ಯದಲ್ಲಿ ಮೂರನೆಯ ವರದಲ್ಲಿ ನಚಿಕೇತ 'ಅನ್ಯತ್ರ ಧರ್ಮಾತ್' ಎಂದು ಮುಂತಾಗಿ ಕೇಳಿದ ಪ್ರಾಪ್ಯ, ಪ್ರಾಪ್ಯವೆನಿಸಿದ ಸಾಧಕ, ಮೋಕ್ಷಪ್ರಾಪ್ತಿ ಸಾಧನ ಇವುಗಳನ್ನು ತೆಗೆದುಕೊಳ್ಳಲಾಗಿದೆ.

ಶಾಂಕರಭಾಷ್ಯದಂತೆ ಇಲ್ಲೂ ಪ್ರಕರಣಾತ್ ಎಂಬುದು ಪ್ರತ್ಯೇಕ ಸೂತ್ರವಲ್ಲ. ಚಮಸಾಧಿಕರಣವನ್ನು ಪ್ರತ್ಯೇಕವಾಗಿ ಪರಿಗಣಿಸಿ ಒಟ್ಟು ಏಳು ಸೂತ್ರಗಳ ಒಂದು ಅಧಿಕರಣ ಆನುಮಾನಿಕಾಧಿಕರಣ ಎಂದು ಪರಿಗಣಿಸಲಾಗಿದೆ.

## ಚಂದ್ರಿಕಾದಲ್ಲಿ ಮಾಡಿರುವ ವಿಮರ್ಶೆ

ನಚಿಕೇತ ಕೇಳಿರುವ ಮೂರು ವರಗಳನ್ನೇ 'ತ್ರಯಾಣಾಮೇವ' ಎಂಬ ಪದದಿಂದ ತೆಗೆದುಕೊಳ್ಳಲು ಬರುವಾಗ 'ಅನ್ಯತ್ರ ಧರ್ಮಾತ್' ಎಂಬ ಶ್ಲೋಕದಿಂದ ಕ್ಲೇಶದಿಂದ ಮೂರನ್ನು ಸಂಪಾದಿಸಿ ಅವುಗಳನ್ನು ತೆಗೆದುಕೊಳ್ಳುವುದು ಅನುಚಿತ. ಈ ಮೂರನ್ನು ಬಿಟ್ಟು ನಚಿಕೇತ ಕೇಳಿದ ಅಗ್ನಿ, ಪಿತೃಸೌಮನಸ್ಯಗಳೂ ಇರುವುದರಿಂದ ಸೂತ್ರದಲ್ಲಿ 'ತ್ರಯಾಣಾಮೇವ' ಎಂಬ ಪದ ಅಸ್ವರಸ.

**ಇಲ್ಲಿಗೆ ಆನುಮಾನಿಕಾಧಿಕರಣ ಮುಗಿಯಿತು.**

# ಜ್ಯೋತಿರುಪಕ್ರಮಾಧಿಕರಣ - 2

**'ವಸಂತೇ ವಸಂತೇ ಜ್ಯೋತಿಷಾ ಯಜೇತ'**

**ಇತ್ಯಾದಿ ಕರ್ಮಾಭಿಧಾಯಕಸ್ಯ ಕರ್ಮಕ್ರಮಾದಿವಿರೋಧಾತ್ ನ ಯುಜ್ಯತೇ ಇತಿ । ಅತ ಆಹ-**

**ಓಂ ॥ ಜ್ಯೋತಿರುಪಕ್ರಮಾತ್ತು ತಥಾ ಹಿ ಅಧೀಯತ ಏಕೇ ॥ ಓಂ**

**ಜ್ಯೋತಿರಾದಿಕರ್ಮವಾಚಕತ್ವೇನ ಪ್ರಸಿದ್ಧಾಭಿಧೇಯೋಽಪಿ ಸ ಏವ ।**

**'ಏಷ ಇಮಂ ಲೋಕಮಭ್ಯಾರ್ಚತ್' ಇತ್ಯುಪಕ್ರಮ್ಯ, 'ತಾ ವಾ ಏತಾಃ ಸರ್ವಾ ಋಚಃ ಸರ್ವೇ ವೇದಾಃ ಸರ್ವೇ ಘೋಷಾಃ ಏಕೈವ ವ್ಯಾಹೃತಿಃ ಪ್ರಾಣ ಏವ, ಪ್ರಾಣ ಋಚ ಇತ್ಯೇವ ವಿದ್ಯಾತ್ ॥' (ಐ.ಆ.2.2.2)**

**ಇತಿ ಹಿ ಅಧೀಯತೇ ಏಕೇ ॥ 1 ॥**

'ವಸಂತೇ ವಸಂತೇ ಜ್ಯೋತಿಷಾ ಯಜೇತ' ಎಂಬುದು ಜ್ಯೋತಿರ್ಯಾಗ ರೂಪವಾದ ಕರ್ಮವನ್ನು ವಿಧಿಸುವ ವಾಕ್ಯ. 'ವೇದಂ ಕೃತ್ವಾ ವೇದಿಂ ಕರೋತಿ' ಎಂಬುದು ವೈದಿಕ ಕರ್ಮಗಳಲ್ಲಿ ಕ್ರಮವನ್ನು ವಿಧಿಸುವ ವಾಕ್ಯ. ಇವುಗಳಿಗೆ, ಕರ್ಮ ಹಾಗೂ ಕರ್ಮಗಳಿಗಿರುವ ಕ್ರಮಗಳೇ ಇಲ್ಲದಾಗುವ ಸಂಭವವಿರುವುದರಿಂದ, ಬ್ರಹ್ಮವಾಚಕತ್ವ ಯುಕ್ತವಲ್ಲ, ಎಂದರೆ ಅದಕ್ಕೆ ಸೂತ್ರಕಾರರು ಈ ಸೂತ್ರವನ್ನು ರಚಿಸಿದ್ದಾರೆ.

ಕರ್ಮವಾಚಕವಾಗಿ ಪ್ರಸಿದ್ಧವಾದ ಜ್ಯೋತಿರಾದಿ ಶಬ್ದಗಳಿಂದ ವಾಚ್ಯನಾದವನೂ ವಿಷ್ಣುವೇ. 'ಬ್ರಹ್ಮನು ಈ ಚತುರ್ಮುಖ ಬ್ರಹ್ಮಾದಿಗಳ ಶರೀರವನ್ನು (ಲೋಕಂ) ಅಂತರ್ಯಾಮಿಯಾಗಿ ಪ್ರವೇಶಿಸಿದನು' ಎಂದು ಋಷಿವಾಚಕಗಳಾದ ಕೆಲವು ಶಬ್ದಗಳನ್ನು ಸಮನ್ವಯ ಮಾಡಿ 'ತಾ ವಾ ಏತಾಃ...' ಇತ್ಯಾದಿಯಾಗಿ ವೈದಿಕ ಸಕಲ ಶಬ್ದಗಳಿಂದಲೂ ವಿಷ್ಣುವೇ ವಾಚ್ಯ ಎಂದು ಕೆಲವು ಶಾಖೆಯವರು ಹೇಳುತ್ತಾರೆ.

**ವಿವರಣೆ-** 'ತತ್ತು ಸಮನ್ವಯಾತ್' ಎಂಬ ಸೂತ್ರದಲ್ಲಿ ವೈದಿಕ ಸಕಲ ಶಬ್ದಗಳೂ ವಿಷ್ಣುನಾಮಗಳು ಎನ್ನಲಾಗಿದೆ. ಆದರೆ, ಇದು ಸರಿಯಲ್ಲ. ವೇದದ ಕರ್ಮಕಾಂಡದಲ್ಲಿ ಜ್ಯೋತಿಷ್ಟೋಮಾದಿ ಅನೇಕ ಯಾಗಗಳನ್ನು ವಿಧಿಸುವ ವಾಕ್ಯಗಳಿವೆ. ಕೆಲವು ವಾಕ್ಯಗಳು ಯಾವ ಕೆಲಸ ಮಾಡಿದಮೇಲೆ ಯಾವ ಕೆಲಸವನ್ನು ಮಾಡಬೇಕು ಎಂಬ ಕ್ರಮವನ್ನು ತಿಳಿಸಿಕೊಡುತ್ತವೆ. ಉದಾಹರಣೆಗೆ - ವೇದ ಎಂದರೆ ಹಾಸುವುದಕ್ಕಾಗಿ ಸಿದ್ಧಪಡಿಸಿದ ದರ್ಭೆಯ ಮುಷ್ಟಿ ಅದನ್ನು ಸಿದ್ಧಪಡಿಸಿ ಆಮೇಲೆ ಯಜ್ಞವೇದಿಕೆಯನ್ನು ಮಾಡಬೇಕು; ಹೀಗೆ ಕೆಲವು ವಾಕ್ಯಗಳು ವೈದಿಕ ಕರ್ಮಗಳಲ್ಲಿ ಕ್ರಮವನ್ನು ತಿಳಿಸುತ್ತವೆ. ಇಂತಹ ವಾಕ್ಯಗಳಿಂದಲೂ

ಬ್ರಹ್ಮನೇ ಪ್ರತಿಪಾದಿಸಲ್ಪಟ್ಟರೆ ಆಗ ಕರ್ಮಸ್ವರೂಪ, ಅವುಗಳಲ್ಲಿ ಕ್ರಮ ಹೇಗೆ ತಿಳಿಯಬೇಕು? ಎಂದು ಪೂರ್ವಪಕ್ಷ.

ಐತರೇಯೋಪನಿಷತ್ತಿನಲ್ಲಿ ಶತರ್ಚಿ, ಮಾಧ್ಯಮ ಮೊದಲಾದ ಋಷಿಗಳ ಹೆಸರುಗಳೆಲ್ಲವೂ ಪರಮಾತ್ಮನ ನಾಮಗಳು ಎಂದು ಸಮರ್ಥಿಸಿ ಕೊನೆಗೆ 'ಪ್ರಾಣ ಋಚ ಇತ್ಯೇವ ವಿದ್ಯಾತ್ - ವೇದದ ಎಲ್ಲ ಋಕ್ಕುಗಳೂ ನಾರಾಯಣಪರವಾಗಿವೆ' ಎಂದು ನಿರ್ಣಯಿಸಲಾಗಿದೆ. ಹೀಗೆ ವಿಷ್ಣುವೇ ಸಕಲ ವೈದಿಕ ಶಬ್ದಗಳಿಂದ ವಾಚ್ಯ ಎಂದು ಐತರೇಯ ಶಾಖೆಯವರು ಹೇಳಿದ್ದಾರೆ, ಎಂದು ಸಿದ್ಧಾಂತ.

2. 'ವಸಂತೇ ವಸಂತೇ' ಎಂಬ ವಾಕ್ಯ 'ಜ್ಯೋತಿಃ' ಎಂಬ ಶಬ್ದದಿಂದ ಜ್ಯೋತಿಷ್ಟೋಮಯಾಗವನ್ನು ಅನುವಾದ ಮಾಡಿ, ಆ ಯಾಗವನ್ನು ವಸಂತಕಾಲದಲ್ಲಿ ಮಾಡಬೇಕು ಎಂದಿಷ್ಟೇ ವಿಧಾನಮಾಡುತ್ತದೆ ಎನ್ನುತ್ತಾರೆ ಮೀಮಾಂಸಕರು. ಆದರೆ ಆಚಾರ್ಯರು ಗೀತಾಭಾಷ್ಯದಲ್ಲಿ ಈ ವಾಕ್ಯವನ್ನು ವಿವರಿಸುತ್ತ (2-47) ಈ ವಾಕ್ಯದಲ್ಲಿ ಜ್ಯೋತಿರ್ನಾಮಕವಾದ ಪ್ರತ್ಯೇಕ ಯಾಗವೇ ವಿಧಿಸಲ್ಪಟ್ಟಿದೆ ಎಂದಿದ್ದಾರೆ. ಆದ್ದರಿಂದಲೇ ಸೂತ್ರಕಾರರೂ ಈ ವಾಕ್ಯದ ಆರಂಭದ ಶಬ್ದವನ್ನು ಉಲ್ಲೇಖಿಸದೆ ಯಾಗದ ಹೆಸರನ್ನು ಹೇಳುವ ಜ್ಯೋತಿಶ್ಶಬ್ದವನ್ನು ಉಲ್ಲೇಖಿಸಿದ್ದಾರೆ.

3. 'ಉಪಕ್ರಮಾತ್' ಎಂಬ ಸೂತ್ರದ ಶಬ್ದದಲ್ಲಿ ಪಂಚಮೀ ವಿಭಕ್ತಿ 'ಲ್ಯಪ್‌ಲೋಪ' ನಿಮಿತ್ತಕವಾದುದು. 'ಉಪಕ್ರಮಂ ವಿಧಾಯ' ಎಂದು ಅರ್ಥ. ಸಕಲ ಶಬ್ದಗಳೂ ಮಹಾಯೋಗವೃತ್ತಿಯಿಂದ ಬ್ರಹ್ಮವಾಚಕಗಳು ಎಂದು ಸೂಚಿಸುತ್ತದೆ ಈ ಶಬ್ದ. ಬ್ರಹ್ಮನು ಸಕಲ ಶಬ್ದವಾಚ್ಯ ಎಂದು ಹೇಳುವ ಮುನ್ನ ಐತರೇಯೋಪನಿಷತ್ತು ಉದಾಹರಣೆಗಾಗಿ ಕೆಲವು ಋಷಿನಾಮಗಳನ್ನು ಬ್ರಹ್ಮನಲ್ಲಿ ಸಮನ್ವಯ ಮಾಡಿ ತೋರಿಸಿಕೊಟ್ಟಿದೆ- ಚತುರ್ಮುಖ ಬ್ರಹ್ಮನ ದೇಹವನ್ನು ಪ್ರವೇಶಿಸಿದ ವಿಷ್ಣು ನೂರು ವರ್ಷಗಳ ಕಾಲ ಆ ದೇಹದಲ್ಲೇ ಉಳಿದ. ಹೀಗಾಗಿ ಅವನಿಗೆ 'ಶತರ್ಚಿ' ಎಂದು ಹೆಸರು ಬಂದಿದೆ. ಹೀಗೆ ವಿಷ್ಣುವಿಗೆ ಸರ್ವಾಂತರ್ಯಾಮಿತ್ವವನ್ನು ಸಮರ್ಥಿಸಲೋಸುಗ ಸರ್ವಗುಣಪೂರ್ಣತ್ವವನ್ನೂ ಅದರ ಸಿದ್ಧಿಗಾಗಿ ಸರ್ವಶಬ್ದವಾಚ್ಯತ್ವವನ್ನೂ ತೋರಿಸಲು ಪ್ರಾರಂಭಿಸಿದ ಈ ಉಪನಿಷತ್ತು 'ಇದೇ ರೀತಿ ವೈದಿಕಸರ್ವಶಬ್ದಗಳೂ, ಧ್ವನಿಗಳೂ, ಋಕ್ಕುಗಳೂ ವಿಷ್ಣುವಾಚಕಗಳಾಗಿವೆ' ಎಂದು ತೀರ್ಮಾನಿಸಿದೆ.

**4. ಶ್ರುತ್ಯರ್ಥ-** ತಾ ವಾ ಏತಾಃ=ಪ್ರಸಿದ್ಧವಾಗಿರುವ ವೈದಿಕವಾದ ಸರ್ವಾಃ ಋಚಃ=ಎಲ್ಲ ಮಂತ್ರಗಳೂ ಸರ್ವೇ ವೇದಾಃ=ಸಕಲ ವೇದಗಳೂ ಸರ್ವೇ ಘೋಷಾಃ=ಎಲ್ಲ ಧ್ವನಿಗಳೂ ಪ್ರಾಣೇ ಏವ=ನಾರಾಯಣನ ವಿಷಯದಲ್ಲಿ ಏಕೈವ ವ್ಯಾಹೃತಿಃ=ಒಂದೇ ವಿಧವಾದ ವೃತ್ತಿ ಉಳ್ಳವುಗಳು. ಋಚಃ=ಇಂದ್ರ, ಅಗ್ನಿ ಮುಂತಾದ ದೇವತಾನಾಮಗಳುಳ್ಳ ಮಂತ್ರಗಳೂ ಪ್ರಾಣೇ= ನಾರಾಯಣ ವಿಷಯಕವಾಗಿವೆ, ಇತ್ಯೇವ=ಹೀಗೆಂದೇ ವಿದ್ಯಾತ್=ತಿಳಿಯಬೇಕು.

|| ಸೂತ್ರ 10 ||

**ಓಂ ॥ ಕಲ್ಪನೋಪದೇಶಾಚ್ಚ ಮಧ್ವಾದಿವತ್ ಅವಿರೋಧಃ ॥ ಓಂ**

**ಮಧುವಿದ್ಯಾದಿವತ್ ಸರ್ವಶಬ್ದಾರ್ಥತ್ವೇನ ಪರಸ್ಯ ಕಲ್ಪನೋಪದೇಶಾಚ್ಚ ನ ಕರ್ಮಕ್ರಮಾದಿ ವಿರೋಧಃ ॥ 11 ॥**

**॥ ಇತಿ ಜ್ಯೋತಿರುಪಕ್ರಮಾಧಿಕರಣಮ್ ॥**

ಮಧುವಿದ್ಯೆಯಲ್ಲಿ ಮಧುಶಬ್ದವನ್ನು ಪರಮಾತ್ಮನಲ್ಲಿ ಪ್ರಯೋಗಿಸಿದಂತೆ ಸಕಲ ಶಬ್ದಗಳ ಅರ್ಥವನ್ನು ತೋರಿಸಿ ಆಯಾಯ ಶಬ್ದವಾಚ್ಯತ್ವವನ್ನು ಭಗವಂತನಿಗೆ ಐತರೇಯದಲ್ಲಿ ಆದೇಶಿಸಿರುವುದರಿಂದ ಕರ್ಮ-ಕ್ರಮಗಳು ಸಿದ್ಧವಾಗಲಿಕ್ಕಿಲ್ಲ ಎಂಬ ವಿರೋಧವಿಲ್ಲ.

**ವಿವರಣೆ -** 1. 'ಅಸೌ ವಾ ಆದಿತ್ಯೋ ದೇವ ಮಧು' ಎಂದು ಛಾಂದೋಗ್ಯದಲ್ಲಿ ಆದಿತ್ಯ ಮಂಡಲದಲ್ಲಿರುವ ವಿಷ್ಣು ಮಧು-ಜೇನಿನಂತೆ ತನ್ನ ಕಿರಣಗಳಿಂದ ವಸ್ವಾದಿ ದೇವತೆಗಳಿಗೆ ತೃಪ್ತಿ ನೀಡುವ ಪ್ರಯುಕ್ತ ಮುಖ್ಯವಾಗಿ ಮಧು ಶಬ್ದದಿಂದ ವಾಚ್ಯ ಎನ್ನಲಾಗಿದೆ. ಆದರೂ ಲೌಕಿಕವಾದ ಜೇನಿನಲ್ಲೂ ಆ ಶಬ್ದದ ಪ್ರಯೋಗವಿದೆ. ಹೀಗೆ ವಿಷ್ಣು ವೈದಿಕ ಶಬ್ದಗಳಿಂದ ಮುಖ್ಯವಾಚ್ಯನಾದರೂ ಅವುಗಳಿಗೆ ಅಮುಖ್ಯವಾದ ಮತ್ತೊಂದು ಅರ್ಥ ಇದ್ದೇ ಇದೆ. 'ಜ್ಯೋತಿಃ' ಎಂಬ ಶಬ್ದಕ್ಕೆ ಮುಖ್ಯಾರ್ಥ ಪ್ರಕಾಶರೂಪನಾದ ವಿಷ್ಣು. ಅಮುಖ್ಯಾರ್ಥ ಜ್ಯೋತಿರ್ಯಾಗ. ಈ ಅಮುಖ್ಯಾರ್ಥವನ್ನು ಪರಿಗ್ರಹಿಸಿದಾಗ ಕರ್ಮಸ್ವರೂಪ, ಅವುಗಳಲ್ಲಿ ಕ್ರಮ ಇವೆಲ್ಲವುಗಳೂ ಸಿದ್ಧವಾಗುವುದರಿಂದ ಅವುಗಳ ಲೋಪ ಪ್ರಸಂಗವಿಲ್ಲ.

2. ಸೂತ್ರದಲ್ಲಿ 'ಕಲ್ಪನೋಪದೇಶಾತ್' ಎಂದರೆ 'ಕಲ್ಪನಾಂ ಉಪೇತ್ಯ ಕಲ್ಪನಯಾ ಉಪದೇಶಾತ್' ಎಂದರ್ಥ. ಕಲ್ಪನೆ ಎಂದರೆ ಲೋಕದಲ್ಲಿ ಕ್ಲೃಪ್ತವಾದುದು - ಸಿದ್ಧವಾದುದು, ಯೋಗ, ರೂಢಿ ಮೊದಲಾದ ಶಬ್ದ ವೃತ್ತಿಗಳು. ಅವುಗಳನ್ನು ಒಪ್ಪಿ ಕಲ್ಪನಯಾ= ವಿಷ್ಣುವಿನಲ್ಲಿಯೂ ತೋರಿಸಿ ಉಪದೇಶಾತ್=ಸರ್ವ ಶಬ್ದವಾಚ್ಯತ್ವವನ್ನು ಉಪನಿಷತ್ತಿನಲ್ಲಿ ಉಪದೇಶಿಸಲಾಗಿದೆ. ಸರ್ವ ಶಬ್ದವಾಚ್ಯತ್ವವನ್ನು ಹೇಳುವ ಉದ್ದೇಶವೂ ಕಲ್ಪನೆಗಾಗಿ- ಉಪಾಸನೆಗಾಗಿ. ಇದು ಸೂತ್ರದ ಭಾವ.

3. ಈ ಸಂದರ್ಭದಲ್ಲಿ ತತ್ತ್ವಪ್ರಕಾಶಿಕಾಗ್ರಂಥವು ಶಬ್ದಗಳ ವೈವಿಧ್ಯವನ್ನು ಪರಿಚಯಿಸಿದೆ. ವಾಚಕ ಶಬ್ದಗಳು ಮೂರು ವಿಧ.

**ಅ. ರೂಢ-** ಶಬ್ದವನ್ನು ಹೆಚ್ಚಾಗಿ ಯಾವ ವಸ್ತುವಿನಲ್ಲಿ ಪ್ರಯೋಗಿಸಲಾಗುವುದೋ ಅಂತಹ ಶಬ್ದ ರೂಢ. ಉದಾಹರಣೆಗೆ 'ಹಸು' ಎಂಬ ಶಬ್ದ, ಸಂಸ್ಕೃತದಲ್ಲಿ 'ಗೌಃ' ಎಂಬ ಶಬ್ದ.

**ಆ. ಯೌಗಿಕ -** ಒಂದು ಶಬ್ದದ ಅವಯವಗಳು ಹೇಳುವ ಅರ್ಥವನ್ನು ನೋಡಿ

ಅಂತಹ ಅರ್ಥ ಯಾರಲ್ಲಿ ಅನ್ವಯಿಸುವುದೋ ಅಂತಹವರಲ್ಲಿ ಆ ಶಬ್ದವನ್ನು ಪ್ರಯೋಗಿಸಲಾಗುತ್ತದೆ. ಉದಾಹರಣೆಗೆ - 'ಪಾಚಕ' ಎಂಬ ಶಬ್ದ. ಈ ಶಬ್ದದಲ್ಲಿ ಎರಡು ಅಂಶಗಳಿವೆ. 'ಪಚ್' ಎಂಬ ಮೂಲಧಾತು. 'ಕ' ಎಂಬ ಪ್ರತ್ಯಯ. ಧಾತುವಿಗೆ ಅಡಿಗೆ ಮಾಡುವುದು ಎಂದು ಅರ್ಥ. 'ಕ' ಪ್ರತ್ಯಯಕ್ಕೆ ಅಂತಹ ಕ್ರಿಯೆಯನ್ನು ಮಾಡುವ ವ್ಯಕ್ತಿ ಎಂದು ಅರ್ಥ. ಈ ಶಬ್ದಕ್ಕೆ ಇಂತಹ ವ್ಯಕ್ತಿಯೇ ಅರ್ಥ ಎಂದು ನಿಯಮವಿಲ್ಲ. ಯಾರು ಅಡಿಗೆ ಮಾಡುವರೋ ಅಂತಹ ಎಲ್ಲರಲ್ಲೂ ಈ ಶಬ್ದವನ್ನು ಪ್ರಯೋಗಿಸಬಹುದು. ಆದ್ದರಿಂದ ಇದು ಯೌಗಿಕ ಶಬ್ದ.

**3. ಯೋಗರೂಢ-** ಹಿಂದಿನ ಎರಡೂ ಸನ್ನಿವೇಶಗಳು ಒಂದೇ ಶಬ್ದದಲ್ಲಿ ಕೂಡಿ ಬಂದರೆ ಅಂತಹ ಶಬ್ದ ಯೋಗ ರೂಢ. ಉದಾಹರಣೆಗೆ, 'ಪಂಕಜ' ಶಬ್ದ. ಆ ಶಬ್ದದಲ್ಲೂ 'ಪಾಚಕ' ಶಬ್ದದಂತೆ ಎರಡು ಅಂಶಗಳಿವೆ- 'ಪಂಕ' ಮತ್ತು ಜ. ಪಂಕ=ಕೆಸರು, ಅದರಲ್ಲಿ ಜ=ಹುಟ್ಟಿರುವುದು. ಆದರೂ ಕೆಸರಿನಿಂದ ಹುಟ್ಟಿದ ಹುಳುಗಳಿಗೆ ಆ ಹೆಸರಿಲ್ಲ. ಕೆಸರಿನಲ್ಲಿ ಹುಟ್ಟುವ ಕಮಲಕ್ಕೆ ಮಾತ್ರ ಪಂಕಜ ಎಂಬ ಹೆಸರು. ಆದ್ದರಿಂದ ಇದು ಯೋಗರೂಢ ಶಬ್ದ.

ಹೀಗೆ ಯೋಗ, ರೂಢ, ಯೋಗರೂಢ ಶಬ್ದಗಳು ಪ್ರಧಾನವಾದವು. ಅಪ್ರಧಾನವಾದ ಶಬ್ದಗಳು ಎರಡು. ಗೌಣ ಮತ್ತು ಲಾಕ್ಷಣಿಕ. 'ಯಮ' ಎಂಬುದು ಒಬ್ಬ ದೇವತೆಯ ಹೆಸರು. ಅವನಂತೆ ಕ್ರೂರನಾದ ಮನುಷ್ಯನಿಗೂ 'ಯಮ' ಎನ್ನಲಾಗುತ್ತದೆ. ಹೀಗೆ ರೂಢವಾದ ಶಬ್ದವನ್ನು ಸಾದೃಶ್ಯ ಪ್ರಯುಕ್ತವಾಗಿ ಬೇರೆ ಕಡೆ ಬಳಸಿದರೆ 'ಗೌಣೀ ವೃತ್ತಿ' ಅಥವಾ 'ಉಪಚಾರ' ಎಂದು ಹೆಸರು.

'ಶಾಲೆ ಮೌನವಾಗಿದೆ' ಎನ್ನಲಾಗುತ್ತದೆ. ಶಾಲೆ ಎಂದರೆ ಒಂದು ಸಂಸ್ಥೆ-ಕಟ್ಟಡ. ಅದು ಜಡ. ಹೀಗಾಗಿ ಇಲ್ಲಿ ಶಾಲೆ ಎಂದರೆ ಶಾಲೆಯ ಮಕ್ಕಳು ಎಂದರ್ಥ. ಇದು ಲಾಕ್ಷಣಿಕ ಪ್ರಯೋಗ.

ಪರಮಾತ್ಮನಲ್ಲಿ ಶಬ್ದಗಳನ್ನು ಮಹಾಯೋಗ ಮತ್ತು ವಿದ್ವದ್ ರೂಢಿಯಿಂದ ಪ್ರಯೋಗ ಮಾಡಲಾಗುತ್ತದೆ. ಶಬ್ದಗಳು ಹೇಳುವ ಅವಯವಾರ್ಥ ಅವನಲ್ಲಿ ಪರಿಪೂರ್ಣವಾಗಿರುತ್ತದೆ. ಉದಾಹರಣೆಗೆ - 'ಇಂದ್ರ' ಎಂದರೆ ಐಶ್ವರ್ಯವುಳ್ಳವನು. ಪರಮಾತ್ಮನಲ್ಲಿ ಮೂರುಲೋಕದ ಒಡೆತನವಿದೆ. ಅಂದಮೇಲೆ ಅವನಲ್ಲಿರುವ ಐಶ್ವರ್ಯ ಇನ್ನಾರಲ್ಲೂ ಇಲ್ಲ. ಆದ್ದರಿಂದ ಅವನು ಇಂದ್ರ ಶಬ್ದದ ಮುಖ್ಯಾರ್ಥ. ಇದನ್ನು ಮಹಾಯೋಗ ಎನ್ನಲಾಗುತ್ತದೆ. ನಾವು ವ್ಯವಹಾರಕ್ಕಾಗಿ ಕೆಲವೊಂದು ಶಬ್ದಗಳನ್ನು ಬೇರೆ ಬೇರೆ ವಸ್ತುಗಳಲ್ಲಿ ಗೊತ್ತುಪಡಿಸಿರುತ್ತೇವೆ. ಇದೇ ರೂಢಿ. ಆದರೆ ಹೀಗೆ ಇಂದ್ರಾದಿ ಶಬ್ದಗಳನ್ನು ನಮ್ಮಂತಹ ಅಜ್ಞರಾರೂ ಪರಮಾತ್ಮನಲ್ಲಿ ನಿರ್ದೇಶಿಸಿದ್ದಲ್ಲ, ಅವನನ್ನು ಕಂಡು ಅವನ ವೈಭವಕ್ಕೆ ಬೆರಗಾಗಿ ಬ್ರಹ್ಮಾದಿ ದೇವತೆಗಳು ಅವನನ್ನು ಅನಾದಿಕಾಲದಿಂದಲೂ ಇಂದ್ರನೆಂದು ಕರೆದರು. ಹೀಗೆ ಆ ಶಬ್ದಗಳಿಗೆ ಪರಮಾತ್ಮನಲ್ಲಿ ವಿದ್ವದ್ ರೂಢಿ ಇದೆ.

ಆದ್ದರಿಂದ ಎಲ್ಲ ಶಬ್ದಗಳೂ ಮಹಾಯೋಗ, ವಿದ್ವದ್ ರೂಢಿಗಳಿಂದ ಪರಮಾತ್ಮನನ್ನು ಹೇಳಿದರೂ ಲೌಕಿಕವಾದ ಯೋಗ-ರೂಢಿಗಳಿಂದ ಅವೇ ಶಬ್ದಗಳೂ ಲೌಕಿಕ ವಸ್ತುಗಳನ್ನೂ ಸಂಕೇತಿಸುತ್ತವೆ. ಜ್ಯೋತಿಃ ಎಂಬ ಶಬ್ದಕ್ಕೆ ಮುಖ್ಯಾರ್ಥ ವಿಷ್ಣುವಾದರೆ ಅದರ ಅಮುಖ್ಯಾರ್ಥ ಜ್ಯೋತಿರ್ಯಾಗ. ಆ ಅರ್ಥವೂ ಶ್ರುತಿಗೆ ಅಭಿಮತವಾಗಿದೆ. ಆದ್ದರಿಂದ ಕರ್ಮಾದಿ ಲೋಪ ಪ್ರಸಂಗವಿಲ್ಲ. || ಸೂತ್ರ 11 ||

## ದ್ವೈತದರ್ಶನದಲ್ಲಿ ಸೂತ್ರಗಳ ಅರ್ಥ

**1. ಓಂ || ಜ್ಯೋತಿರುಪಕ್ರಮಾತ್ತು ತಥಾಹಿ ಅಧೀಯತ ಏಕೇ || ಓಂ**

ತು=ಏವ ಹಿ=ಕಾರಣ. 'ಜ್ಯೋತಿಷಾ ಯಜೇತ' ಎಂದು ವೇದದಲ್ಲಿ ಹೇಳಿರುವ ಜ್ಯೋತಿ ವಿಷ್ಣು. ಹಿ=ಏಕೆಂದರೆ ಏಕೇ=ಐತರೇಯ ಶಾಖೆಯವರು, ತತ್ತು=ಆ ಬ್ರಹ್ಮನನ್ನು ತಥಾ=ಸರ್ವ ಶಬ್ದಗಳಿಂದಲೂ ವಾಚ್ಯನನ್ನಾಗಿ ಉಪಕ್ರಮಾತ್=ಯೋಗವೃತ್ತಿಯಿಂದ ಕೆಲವು ಋಷಿನಾಮಗಳ ಸಮನ್ವಯವನ್ನು ಪ್ರಾರಂಭಿಸಿ ಅಧೀಯತೇ='ತಾ ವಾ ಏತಾಃ' ಎಂದು ಪಠಿಸುವರು.

(ಅತ್ರ ಸರ್ವೇ ಶಬ್ದಾಃ ವರ್ಣಪದಾದಿರೂಪೇಣ ಸಮನ್ವೀಯಂತೇ । ತತ್ತು ಇತಿ ಅಸ್ತಿ। ತುರೇವ। ಲ್ಯಪ್‌ಲೋಪನಿಮಿತ್ತಾ ಪಂಚಮೀ। ಹಿರ್ಹೇತೌ। 'ಜ್ಯೋತಿಷಾ ಯಜೇತ' ಇತ್ಯುಕ್ತ ಜ್ಯೋತಿರಾದಿಃ ತತ್ತು=ಪರಮಮುಖ್ಯವೃತ್ತ್ಯಾ ಬ್ರಹ್ಮೈವ। ನ ತು ಕರ್ಮಾದಿಃ। ಕುತಃ? ಹಿ=ಯಸ್ಮಾತ್, ಏಕೇ ಶಾಖಿನಃ, ತದಿತ್ಯಾವರ್ತತೇ, ತತ್=ಬ್ರಹ್ಮ, ತಥಾ=ಸರ್ವಶಬ್ದವಾಚ್ಯತ್ವೇನ, 'ತಾ ವಾ ಏತಾಃ ಸರ್ವಾ ಋಚಃ' ಇತ್ಯಾದಿನಾ ಅಧೀಯತೇ=ಪಠಂತಿ, ತಸ್ಮಾದಿತ್ಯರ್ಥಃ। ಕಯಾ ವೃತ್ತ್ಯಾ? ಇತ್ಯತ ಉಕ್ತಮ್-ಉಪಕ್ರಮಾತ್ತು ಇತಿ। ಉಪಕ್ರಮಂ ವಿಧಾಯೈವ। 'ಏಷ ಇಮಂ ಲೋಕಂ ಅಭ್ಯಾರ್ಚತ್' ಇತ್ಯುಪಕ್ರಮ್ಯೈವ 'ತಾ ವಾ ಏತಾಃ' ಇತಿ ಅಧೀಯತೇ ಇತಿ। ಉಪಲಕ್ಷಣತ್ವೇನ ಕಾಂಶ್ಚಿದ್ ಋಷ್ಯಾದಿ ಶಬ್ದಾನ್ ಯೌಗಿಕತ್ವಾದ್ಯುಕ್ತ್ಯಾ ಉಪಕ್ರಮ್ಯ ಸರ್ವಶಬ್ದಾನಾಂ ತನ್ನಿಷ್ಠತ್ವೋಕ್ತೇಃ ಮಹಾಯೋಗ ರೂಢಿವೃತ್ತ್ಯಾ ತದ್ವಾಚಿತ್ವಮಿತಿ ಭಾವಃ।)

**2. ಓಂ || ಕಲ್ಪನೋಪದೇಶಾಚ್ಚ ಮಧ್ವಾದಿವದವಿರೋಧಃ || ಓಂ**

ಕಲ್ಪನೋಪದೇಶಾತ್, ಕಲ್ಪನಾ=ಲೋಕಸಿದ್ಧವಾದ ಶಬ್ದವೃತ್ತಿಯನ್ನು ಅಂಗೀಕರಿಸಿ ಕಲ್ಪನಾ=ಅದನ್ನು ವಿಷ್ಣುವಿನಲ್ಲಿ ತೋರಿಸಿ 'ತಾ ವಾ ಏತಾಃ' ಎಂದು ಸರ್ವಶಬ್ದವಾಚ್ಯತ್ವವನ್ನು ಉಪದೇಶಮಾಡಿರುವುದರಿಂದ ಮಧ್ವಾದಿವತ್=ಮಧು ಮುಂತಾದ ಶಬ್ದಗಳಂತೆ ಅವಿರೋಧಃ=ಕರ್ಮಾದಿಗಳು ಸಿದ್ಧವಾಗಲಿಕ್ಕಿಲ್ಲ, ಎಂಬ ವಿರೋಧವಿಲ್ಲ.

(ಚ ಏವ, ಸಮುಚ್ಚಯೇ ವಾ। ಕಲ್ಪನೇತಿ ತಂತ್ರಂ, ಕಲ್ಪನಾಂ ಕ್ಲೃಪ್ತಿಂ। ಲೋಕಸಿದ್ಧ ರೂಢ್ಯಾದಿ ವೃತ್ತಿಕ್ಲೃಪ್ತಿಂ ಉಪೇತ್ಯೈವ, ಕಲ್ಪನಯಾ=ವ್ಯುತ್ಪಾದನೇನ, ಲೋಕ ಕ್ಲೃಪ್ತ ಮಹಾಯೋಗವೃತ್ತೇಃ ವ್ಯುತ್ಪಾದನೇನ, ಸರ್ವಶಬ್ದವಾಚ್ಯತ್ವೇನ, 'ತಾ ವಾ' ಇತ್ಯಾದಿನಾ

ಉಪದೇಶಾತ್। ಕಲ್ಪನಾಯಾಃ=ಸರ್ವಶಬ್ದವಾಚ್ಯತ್ವೇನ ಉಪಾಸನಾಯಾಃ 'ಪ್ರಾಣ ಋಚ ಇತ್ಯೇವ ವಿದ್ಯಾತ್' ಇತ್ಯಾದೌ ಉಪದೇಶಾತ್ ಅವಿರೋಧಶ್ಚ। ನ ಕೇವಲಂ ಸಾಧಕಮಸ್ತಿ ಕರ್ಮಾದಿ ಅನನುಷ್ಠಾನವಿರೋಧಶ್ಚ ನೇತ್ಯರ್ಥಃ । ಮಧ್ವಾದಿವತ್=ಯಥಾ, 'ಅಸಾವಾದಿತ್ಯೋ ದೇವ ಮಧು' ಇತಿ ಮಧುಶಬ್ದಸ್ಯ ಆದಿತ್ಯಸ್ಥವಿಷ್ಣೌ ಉಪಾಸನಾರ್ಥಂ ಉಕ್ತಾವಪಿ ನ ಕ್ಷೌದ್ರಕಾದೌ ವ್ಯವಹಾರವಿರೋಧಃ ತದ್ವದಿತ್ಯರ್ಥಃ।)

## ಶಾಂಕರಭಾಷ್ಯದಲ್ಲಿ ಸೂತ್ರಗಳ ಅರ್ಥ

ಶಾಂಕರಭಾಷ್ಯದಲ್ಲಿ ಈ ಎರಡು ಸೂತ್ರಗಳು ಹಿಂದಿನ ಒಂದು ಸೂತ್ರದೊಂದಿಗೆ ಸೇರಿ 'ಚಮಸಾಧಿಕರಣ' ಎಂದು ಹೆಸರಿಸಲ್ಪಟ್ಟಿವೆ.

**1. ಚಮಸವತ್ ಅವಿಶೇಷಾತ್ -**

ಅಜಾಮೇಕಾಂ ಲೋಹಿತ ಶುಕ್ಲಕೃಷ್ಣಾಂ ಬಹ್ವೀಃ ಪ್ರಜಾಃ ಸೃಜಮಾನಾಂ ಸರೂಪಾಂ।

ಎಂಬ ಶ್ವೇತಾಶ್ವತರೋಪನಿಷತ್ತಿನಲ್ಲಿ ಅಜಾಶಬ್ದದಿಂದ ಪ್ರಕೃತಿ ವಾಚ್ಯ. ಏಕೆಂದರೆ, ಕೆಂಪು, ಬಿಳಿ, ಕಪ್ಪು ಈ ಮೂರು ಬಣ್ಣಗಳಿಂದ ರಜಸ್ಸು-ಸತ್ವ-ತಮಸ್ಸು ಈ ಮೂರು ಗುಣಗಳನ್ನು ಸೂಚಿಸಿ ಗುಣತ್ರಯಾತ್ಮಕತ್ವ ಹಾಗೂ ಅಜಾ=ಹುಟ್ಟದಿರುವುದು-ಅವಿಕಾರರೂಪವಾದುದು ಎಂದು ಅನೇಕ ಧರ್ಮಗಳನ್ನು ಆದಕ್ಕೆ ಹೇಳಲಾಗಿದೆ. ಅಂದಮೇಲೆ ಪ್ರಕೃತಿ 'ಅಶಬ್ದ' ಎನ್ನುವುದು ಹೇಗೆ? ಎಂದು ಸಾಂಖ್ಯರ ಪ್ರಶ್ನೆ.

'ಏಷಃ ಅರ್ವಾಗ್ ಬಿಲಃ ಚಮಸಃ' ಎಂದು ಕೆಳಮುಖವಾದುದಕ್ಕೆ 'ಚಮಸ' ಎನ್ನಬೇಕು ಎಂದಿದೆ ಉಪನಿಷತ್ತು. ಅದು ಯಾವುದೆಂದು ನಿರ್ದಿಷ್ಟವಾಗಿ ನಿರ್ದೇಶ ಇಲ್ಲ. ಆದ್ದರಿಂದ ಚಮಸ ಶಬ್ದ ಸಾಧಾರಣ. ಅದರಂತೆ 'ಅಜಾ' ಶಬ್ದವೂ ನಿರ್ವಿಕಾರವಾದ ಯಾವುದೇ ವಸ್ತುವನ್ನು ಬೇಕಾದರೂ ಹೇಳಬಹುದು. ಪ್ರಕೃತಿಯನ್ನೇ ಹೇಳಬೇಕೆಂದೇನೂ ಇಲ್ಲ.

**2. ಜ್ಯೋತಿರುಪಕ್ರಮಾ ತು ತಥಾ ಹಿ ಅಧೀಯತ ಏಕೇ-** 'ಇದಂ ತಚ್ಛಿರಃ ಏಷಃ ಅರ್ವಾಗ್ ಬಿಲಃ ಚಮಸಃ' ಎಂಬಲ್ಲಿರುವ ಚಮಸ ಶಬ್ದ 'ಇದಂ ಶಿರಃ' ಎಂದು ನಿರ್ದೇಶ ಮಾಡಿರುವುದರಿಂದ, ಶಿರೋವಾಚಕ. ಅದರಂತೆ 'ಅಜಾಂ, ಲೋಹಿತ ಶುಕ್ಲಕೃಷ್ಣಾಂ' ಎಂದು ಸಾಮಾನ್ಯವಾಗಿ ನಿರ್ದೇಶಿಸಿದ ಅಜಾಶಬ್ದ,

'ಯದಗ್ನೇಃ ರೋಹಿತಂ ರೂಪಂ ತೇಜಸಃ ತದ್ರೂಪಂ,
ಯಚ್ಛುಕ್ಲಂ ತದಪಾಂ, ಯತ್ ಕೃಷ್ಣಂ ತದನ್ನಸ್ಯ'

ಹೀಗೆ ಕೆಲವು ಶಾಖೆಗಳಲ್ಲಿ ನಿರ್ದೇಶಿಸಿರುವಂತೆ ಜಗತ್ತಿಗೆ ಮೂಲಕಾರಣವಾದ ತೇಜಸ್ಸು, ನೀರು ಮತ್ತು ಪೃಥಿವೀ, ಇವುಗಳಿಗಿರುವಂತೆ ಕೆಂಪು, ಬಿಳಿ, ಕಪ್ಪು ಅದೇ ಬಣ್ಣಗಳನ್ನು 'ಅಜಾ' ಶಬ್ದಾರ್ಥಕ್ಕೆ ಹೇಳಿರುವುದರಿಂದ ಈ ಮೂರಕ್ಕೂ ವಾಚಕವಾಗಬಹುದು.

(ದ್ವೈತ ಭಾಷ್ಯದಲ್ಲಿ 'ಉಪಕ್ರಮಾತ್' ಎಂದು ಸೂತ್ರಪಾಠ. ಇಲ್ಲಿ ಉಪಕ್ರಮಾ 'ಜ್ಯೋತಿಯೇ ಮೊದಲಾದುದು ಈ ಅಜಾ' ಎಂದು ಅರ್ಥ.)

**3. ಕಲ್ಪನೋಪದೇಶಾಚ್ಚ ಮಧ್ವಾದಿವದವಿರೋಧಃ-** ಅಜಾ ಶಬ್ದಕ್ಕೆ ಹೆಣ್ಣು ಆಡು, ಎಂದು ಅರ್ಥ. ಈ ಶಬ್ದವನ್ನು ಜ್ಯೋತಿರಾದಿಗಳಲ್ಲಿ ಪ್ರಯೋಗಿಸಲಾಗಿದೆ. ತೇಜೋ-ಅಪ್-ಅನ್ನಗಳಲ್ಲಿ ಆ ಶಬ್ದದ ಪ್ರಯೋಗಕ್ಕೆ ನಿಮಿತ್ತವಾದುದು ಆಡಿನಂತೆ ಇರುವ ಆಕಾರವಲ್ಲ, ಏಕೆಂದರೆ ಅವುಗಳಲ್ಲಿ ಅಂತಹ ಆಕಾರವಿಲ್ಲ. ಆದರೂ, ಹೆಣ್ಣಾಡು ಗಂಡಿನ ಸಂಪರ್ಕದಿಂದ ತನ್ನಂತಿರುವ ಅನೇಕ ಮರಿಗಳನ್ನಿಡುವಂತೆ ಈ ಭೂತತ್ರಯವೂ ಪುರುಷ ಸಂಪರ್ಕದಿಂದ , 'ಬಹ್ವೀಃ ಪ್ರಜಾಃ ಜನಯಂತೀಂ ಸರೂಪಾಂ' ತನ್ನಂತಿರುವ ಅನೇಕ ಕಾರ್ಯವಸ್ತುಗಳನ್ನು ಸೃಷ್ಟಿಸುತ್ತದೆ. ಹೇಗೆ ಮಧುವಿನಂತೆ ತೃಪ್ತಿ ಹೇತುವಾದುದರಿಂದ ಆದಿತ್ಯನು ಮಧು ಎನಿಸಿದ್ದಾನೋ ಅದರಂತೆ ಈ ಮೂರೂ ಆಡಿನಂತೆ ಅನೇಕ ವಸ್ತುಗಳ ಉತ್ಪತ್ತಿಗೆ ಕಾರಣವಾದುದರಿಂದ ಅಜಾ ಎನಿಸಿವೆ.

## ಚಂದ್ರಿಕಾದಲ್ಲಿ ಮಾಡಿರುವ ವಿಮರ್ಶೆ

1. ವಿಶೇಷ ಸೂಚನೆ ಇಲ್ಲದಿರುವುದರಿಂದ ಚಮಸ ಶಬ್ದವು ಕೆಳಮುಖವಾದ ಯಾವುದಕ್ಕೆ ಬೇಕಾದರೂ ವಾಚಕವಾಗುವಂತೆ ಅಜಾಶಬ್ದವೂ ಸಾಮಾನ್ಯ ಶಬ್ದ ಎಂದಿದೆ ಮೊದಲ ಸೂತ್ರದ ಶಾಂಕರಭಾಷ್ಯ. ಆದರೆ ಚಮಸ ಶಬ್ದವನ್ನು ಉಲ್ಲೇಖಿಸುವ ವಾಕ್ಯದ ಪ್ರಾರಂಭವೇ 'ಇದಂ ತಚ್ಛಿರಃ' ಎಂದಿದೆ. ತಲೆಯೇ ಚಮಸ. ಅಂದಮೇಲೆ ಅದನ್ನೇ ಮರೆತು ಚಮಸ ಶಬ್ದವು ಯಾವುದಕ್ಕೂ ವಾಚಕವಾಗಬಹುದಾದ ಅವಿಶೇಷ ಶಬ್ದ ಎಂದುದು ಸರಿಯಲ್ಲ.

2. ಅಜಾಶಬ್ದ ಪ್ರಕೃತಿ ವಾಚಕ ಎನ್ನುತ್ತಾರೆ ಸಾಂಖ್ಯರು. ಅಲ್ಲ, ಅದು ಭೂತತ್ರಯವಾಚಕ ಎನ್ನುತ್ತದೆ ಅದ್ವೈತವಾದ. ಏನಾದರೂ ಅಜಾಶಬ್ದ ಬ್ರಹ್ಮವಾಚಕವಂತೂ ಅಲ್ಲ. ಅಂದಮೇಲೆ ಕಾರಣತ್ವಲಕ್ಷಣಕ್ಕೆ ಬ್ರಹ್ಮೇತರದಲ್ಲಿ, ಅದು ಪ್ರಕೃತಿಯಾಗಿರಲಿ, ಭೂತತ್ರಯವಾಗಿರಲಿ ಅತಿವ್ಯಾಪ್ತಿ ಅಂತೂ ಇದ್ದದ್ದೆ.

3. ಅಜಾ ಚೇತ್ ಜ್ಯೋತಿರಾದಿಃ ಸ್ಯಾತ್ ಅಜೈಕತ್ವಾದ್ಯಸಂಭವಃ।
ಅವಿದ್ಯೇತಿ ತು ಪಕ್ಷೇ ಸ್ಯಾತ್ ಲೋಹಿತತ್ವಾದ್ಯಸಂಭವಃ॥

ಅಜಾ ಭೂತತ್ರಯವಾದರೆ ಅದರಲ್ಲಿ ಏಕತ್ವ, ಅನುತ್ಪತ್ತಿಗಳು (ನಜಾಯತೇ ಇತಿ ಅಜಃ) ಇರಲು ಸಾಧ್ಯವಿಲ್ಲ. ಜಗತ್ಕಾರಣವಾದ ಅವಿದ್ಯೆಗೆ ಅವೆರಡೂ ಇದ್ದರೂ ಶ್ರುತಿ ಹೇಳಿದ ಕೆಂಪು ಮುಂತಾದ ರೂಪತ್ರಯಗಳು ಇಲ್ಲ. ಅಂದಮೇಲೆ ಉಪನಿಷತ್ತಿನಲ್ಲಿ ಹೇಳಿದ 'ಅಜಾ' ಯಾವುದು ಎಂದು ನಿರ್ಣಯವೇ ಇಲ್ಲದಾದೀತು.

ರಾಮಾನುಜ ಭಾಷ್ಯದಲ್ಲೂ ಇದೇ ರೀತಿಯ ಅರ್ಥವನ್ನು ಹೇಳಲಾಗಿದೆ. ಆದರೆ,

'ಜ್ಯೋತಿರುಪಕ್ರಮಾ' ಎಂಬ ಶಬ್ದಕ್ಕೆ 'ಬ್ರಹ್ಮ ಕಾರಣಿಕಾ' ಎಂದು ಅರ್ಥ. 'ಜ್ಯೋತಿಃ' ಎಂದರೆ ಬ್ರಹ್ಮ. ಅದೇ ಕಾರಣವಾಗಿರುವುದರಿಂದ ಪ್ರಕೃತಿಗೆ ಆ ಹೆಸರು. ತೈತ್ತಿರೀಯ ಶಾಖೆಯಲ್ಲಿ 'ಅಜಾಮೇಕಾಂ' ಎಂದು ಪ್ರಕೃತಿಯೂ ಬ್ರಹ್ಮನಿಂದಾಗಿದೆ ಎಂದು ಹೇಳಲಾಗಿದೆ. ಆದ್ದರಿಂದ ಸಾಂಖ್ಯಾಭಿಮತವಾದ ಪ್ರಕೃತಿ ಇಲ್ಲಿ ವಾಚ್ಯವಲ್ಲ ಎಂದು ಸೂತ್ರಾರ್ಥ.

ಪ್ರಕೃತಿ ಬ್ರಹ್ಮಜನ್ಯವಾದರೆ 'ಅಜಾ' ಎಂಬ ಹೆಸರು ಅನ್ವರ್ಥವಾಗುವುದು ಹೇಗೆ? 'ಕಲ್ಪನೋಪದೇಶಾತ್' - ಕಲ್ಪನೆ ಎಂದರೆ ಸೃಷ್ಟಿ. 'ಧಾತಾ ಯಥಾ ಪೂರ್ವಂ ಅಕಲ್ಪಯತ್' ಎಂದು ಸೃಷ್ಟಿ ಎಂಬ ಅರ್ಥದಲ್ಲಿ ಕಲ್ಪನ ಪದದ ಪ್ರಯೋಗವಿದೆ.

'ಅಸ್ಮಾತ್ ಮಾಯೀ ಸೃಜತೇ ವಿಶ್ವಮೇತತ್'

ಎಂದು ಪರಮಾತ್ಮನು ಈ ಪ್ರಕೃತಿಯ ಸಹಾಯದಿಂದಲೇ ಸೃಷ್ಟಿಸುತ್ತಾನೆ ಎಂದು ಹೇಳಿರುವುದರಿಂದ ಅವಿಭಕ್ತನಾಮರೂಪವುಳ್ಳ ಪ್ರಕೃತಿ 'ಅಜಾ'. ಅದು ತೇಜೋ-ಅಪ್-ಅನ್ನಾತ್ಮಕವಾಗಿ ಪರಮಾತ್ಮನಿಂದ ಸೃಷ್ಟಿಗೊಳ್ಳುತ್ತದೆ. ಹೇಗೆ ಒಬ್ಬನೇ ಸೂರ್ಯ ಕಾರಣಾವಸ್ಥೆಯಲ್ಲಿ ಉದಯಾಸ್ತಮಯಾದಿಗಳ ಕಲ್ಪನೆಗೂ ವೇದೋಕ್ತ ಕರ್ಮಜನ್ಯ (ಕಾರ್ಯಾವಸ್ಥೆ) ರಸಕ್ಕೆ ಆಶ್ರಯನಾದುದರಿಂದ ಮಧುತ್ವ ಕಲ್ಪನೆಗೂ ಆಧಾರನಾಗುವನೋ ಅದರಂತೆ ಒಂದೇ ಪ್ರಕೃತಿ ಕಾರಣಾವಸ್ಥೆಯಲ್ಲಿ 'ಅಜಾ' ಎನಿಸಿದ್ದು ಕಾರ್ಯಾವಸ್ಥೆಯಲ್ಲಿ ಜ್ಯೋತಿರುಪಕ್ರಮಾ-ಬ್ರಹ್ಮಜನ್ಯ ಎನಿಸಬಹುದು. ಹೀಗೆ ಬ್ರಹ್ಮಜನ್ಯವಾದ ಪ್ರಕೃತಿಯೇ ಈ ಶ್ರುತಿಯಿಂದ ಪ್ರತಿಪಾದ್ಯ, ಸಾಂಖ್ಯರು ಹೇಳುವ ಪ್ರಕೃತಿಯಲ್ಲ.

## ಚಂದ್ರಿಕಾದಲ್ಲಿ ಮಾಡಿರುವ ವಿಮರ್ಶೆ

1. ಸಾಂಖ್ಯರು ಒಪ್ಪಿದ ಪ್ರಕೃತಿಯನ್ನು ರಾಮಾನುಜಸಿದ್ಧಾಂತ ಅಲ್ಲಗಳೆಯುವುದಿಲ್ಲ. ಸಾಂಖ್ಯರು ಒಪ್ಪಿರುವಂತೆ ಪ್ರಕೃತಿ ಸ್ವತಂತ್ರ ಎಂದು ಒಪ್ಪುವುದಿಲ್ಲ, ಅಷ್ಟೆ. ಅದು ಬ್ರಹ್ಮಾಧೀನವೆಂದು 'ತದಧೀನತ್ವಾತ್ ಅರ್ಥವತ್' ಎಂಬ ಸೂತ್ರದಲ್ಲಿ ಹೇಳಿ ಸಾಂಖ್ಯರ ಪ್ರಕೃತಿ ಸ್ವಾತಂತ್ರ್ಯವಾದವನ್ನು ಈಗಾಗಲೇ ನಿರಾಕರಿಸಿಯಾಗಿದೆ. ಅಂದಮೇಲೆ ಈ ಅಧಿಕರಣದ ಅಗತ್ಯವಿಲ್ಲ.

2. 'ಅಜಾಮೇಕಾಂ' ಎಂಬ ವಾಕ್ಯದಲ್ಲಿ 'ಬಹ್ವೀಃಪ್ರಜಾಃ ಸೃಜಮಾನಾಂ' ಎಂದು ಸೃಷ್ಟಿಕಾರಣವಾಗುವ ಸಂದರ್ಭದಲ್ಲೇ (ಕಾರಣಾವಸ್ಥೆ) ಲೋಹಿತ-ಶುಕ್ಲ-ಕೃಷ್ಣರೂಪಗಳನ್ನು ಶ್ರುತಿ ಹೇಳುತ್ತಿರುವಾಗ ಅದಕ್ಕೆ 'ಅಜಾತ್ವ' (ಅನುತ್ಪತ್ತಿ) ಕಾರಣಾವಸ್ಥೆಯಲ್ಲಿ, ತ್ರಿರೂಪತ್ವ ಕಾರ್ಯಾವಸ್ಥೆಯಲ್ಲಿ ಎಂದು ವಿಭಾಗಿಸಿ ವ್ಯಾಖ್ಯಾನ ಮಾಡುವುದು ಉಚಿತವಲ್ಲ.

**|| ಇಲ್ಲಿಗೆ ಜ್ಯೋತಿರುಪಕ್ರಮಾಧಿಕರಣ ಮುಗಿಯಿತು ||**

# ನ ಸಂಖ್ಯೋಪಸಂಗ್ರಹಾಧಿಕರಣ - 3

## ಓಂ ॥ ನ ಸಂಖ್ಯೋಪಸಂಗ್ರಹಾದಪಿ ನಾನಾಭಾವಾದತಿರೇಕಾಚ್ಚ॥ ಓಂ

**'ಯಸ್ಮಿನ್ ಪಂಚ ಪಂಚಜನಾ ಆಕಾಶಶ್ಚ ಪ್ರತಿಷ್ಠಿತಃ।' (ಬೃ4.4.17)**

**ಇತ್ಯಾದಿಷು ಬಹುಸಂಖ್ಯೋಪಸಂಗ್ರಹೇಽಪಿ ನ ವಿರೋಧಃ । ತಸ್ಯೈವ ಆಕಾಶಾದಿಷು ನಾನಾಭಾವಾತ್ ತದತಿರಿಕ್ತಸ್ವರೂಪತ್ವಾಚ್ಚ॥ 12 ॥**

'ಯಸ್ಮಿನ್ ಪಂಚ' ಇತ್ಯಾದಿ ವಾಕ್ಯಗಳಲ್ಲೂ ಬಹುತ್ವಸಂಖ್ಯೆಯನ್ನೂ ಆಧೇಯತ್ವವನ್ನೂ ಹೇಳಲಾಗಿದ್ದರೂ ಪಂಚಜನ, ಆಕಾಶಾದಿಶಬ್ದಗಳು ವಿಷ್ಣುವಾಚಕಗಳೆನ್ನಲು ವಿರೋಧವೇನೂ ಇಲ್ಲ. ಆಕಾಶಾದಿಗಳಲ್ಲಿ ನಿಯಾಮಕವಾಗಿ ವಿಷ್ಣುವಿಗೆ ನಾನಾರೂಪಗಳಿವೆ ಹಾಗೂ ಆಧಾರನಾದ ಅವನಿಗಿಂತ ಆ ರೂಪಗಳು ಅತಿರಿಕ್ತವೂ ಆಗಿವೆಯಾದ್ದರಿಂದ ಆಧಾರಾಧೇಯಭಾವ, ಬಹುತ್ವ ಇವೆರಡೂ ಅವನಲ್ಲಿ ಇರಬಹುದು.

**ವಿವರಣೆ** - ಬೃಹದಾರಣ್ಯಕದಲ್ಲಿ ಹೀಗೊಂದು ಮಂತ್ರವಿದೆ.

ಯಸ್ಮಿನ್ ಪಂಚ ಪಂಚಜನಾ ಆಕಾಶಶ್ಚ ಪ್ರತಿಷ್ಠಿತಃ।
ತಮೇವಂ ಮನ್ಯೇ ಆತ್ಮಾನಂ ವಿದ್ವಾನ್ ಬ್ರಹ್ಮಾಮೃತೋಽಮೃತಂ॥

ಇಲ್ಲಿರುವ 'ಪಂಚಪಂಚಜನಾಃ ಆಕಾಶಃ' ಈ ಶಬ್ದಗಳಿಂದ ವಿಷ್ಣು ವಾಚ್ಯನಾಗಲು ಸಾಧ್ಯವಿಲ್ಲ. ಅದಕ್ಕೆ ಎರಡು ಕಾರಣಗಳು.

ಒಂದು- 'ಪಂಚಜನಾಃ-ಐದು ಜನರು' ಎಂದು ಬಹುತ್ವ ಸಂಖ್ಯೆಯನ್ನು ಜನರಿಗೆ ಹೇಳಲಾಗಿದೆ. ವಿಷ್ಣು ಅದ್ವಿತೀಯ. ಅವನಿಗೆ ಈ ಬಹುತ್ವ ಸಂಖ್ಯೆ ಹೊಂದುವುದಿಲ್ಲ. ಎರಡನೆಯದಾಗಿ, 'ಯಸ್ಮಿನ್-ಪ್ರತಿಷ್ಠಿತಃ-ವಿಷ್ಣುವಿನಲ್ಲಿ ಪಂಚಜನರು ಇದ್ದಾರೆ' ಎನ್ನಲಾಗಿದೆ. ವಿಷ್ಣು ಆಧಾರ, ಪಂಚಜನರು ಆಧೇಯರು. ಹೀಗೆ ವಿರುದ್ಧ ಧರ್ಮಗಳಿರುವುದರಿಂದ ಆಧಾರ ಮತ್ತು ಆಧೇಯ ಇಬ್ಬರೂ ಒಬ್ಬನೇ ಆಗಲು ಸಾಧ್ಯವಿಲ್ಲ. ಆದ್ದರಿಂದ ವಿಷ್ಣು ಸರ್ವಶಬ್ದವಾಚ್ಯ ಎಂಬ ಸಿದ್ಧಾಂತ ಸರಿಯಲ್ಲ ಎಂದು ಪೂರ್ವಪಕ್ಷ.

**ಸಿದ್ಧಾಂತ** - ನಮ್ಮ ಈ ದೇಹದೊಳಗೆ ನಿಯಾಮಕನಾಗಿ ವಿಷ್ಣು ಇದ್ದಾನೆ. ಇದಲ್ಲದೆ ಪಂಚಪ್ರಾಣವಾಯುಗಳು, ಕಣ್ಣು, ಕಿವಿ, ಪೃಥಿವೀ, ಮನಸ್ಸು ಈ ಪಂಚಕವರ್ಗ, ಪ್ರಕೃತಿ ಇವೂ ಈ ದೇಹದಲ್ಲಿವೆ. ಅವುಗಳಲ್ಲಿ ನಿಯಾಮಕನಾಗಿ ಪರಮಾತ್ಮನೂ ಬೇರೆ ಬೇರೆ ರೂಪಗಳಲ್ಲಿ ಇದ್ದಾನೆ. ಹೀಗೆ ರೂಪಗಳು ಅನೇಕವಾದುದರಿಂದ ಪರಮಾತ್ಮ ಒಬ್ಬನಾದರೂ ಅವನನ್ನು 'ಪಂಚ' ಎನ್ನುವುದೂ ಯುಕ್ತವಾಗಿದೆ. ದೇಹಕ್ಕೆ ನಿಯಾಮಕವಾದ ಅವನ ಒಂದು ರೂಪದಲ್ಲಿ

ತತ್ತ್ವನಿಯಾಮಕವಾದ ಅವನದೇ ಇತರ ರೂಪಗಳು ಇವೆಯಾದ್ದರಿಂದ ಆಧಾರಾಧೇಯ ಭಾವವೂ ಹೊಂದುತ್ತದೆ. ಹೀಗೆ ಅನುಪಪತ್ತಿ ಇಲ್ಲದಿರುವುದರಿಂದ ಇಂತಹ ಶಬ್ದಗಳನ್ನೂ ವಿಷ್ಣುವಿನಲ್ಲಿ ಸಮನ್ವಯ ಮಾಡಬಹುದು.

2. ಯಸ್ಮಿನ್ ಪಂಚ ಪಂಚಜನಾಃ ಆಕಾಶಶ್ಚ ಪ್ರತಿಷ್ಠಿತಃ।

ತಮೇವಂ ಮನ್ಯೇ ಆತ್ಮಾನಂ ವಿದ್ವಾನ್ ಬ್ರಹ್ಮಾಮೃತೋಽಮೃತಮ್ ॥

ಪ್ರತಿದೇಹದಲ್ಲೂ ವಿಷ್ಣು ಐದೈದು ರೂಪಗಳಿಂದ ಇದ್ದಾನೆ, ಎಂದು ತಿಳಿಸಲು 'ಪಂಚ' ಶಬ್ದವನ್ನು ಈ ಶ್ರುತಿಯಲ್ಲಿ ಎರಡು ಬಾರಿ ಪ್ರಯೋಗಿಸಲಾಗಿದೆ.

ಯಸ್ಮಿನ್=ಸರ್ವಶರೀರಗಳಲ್ಲಿರುವ ಪರಮಾತ್ಮನಲ್ಲಿ ಪಂಚ ಪಂಚಜನಾಃ= ಪ್ರತಿದೇಹದಲ್ಲಿ ಪ್ರಾಣಾದಿ ಪಂಚತತ್ತ್ವಗಳಿಗೆ ನಿಯಾಮಕವಾದ, ಪಂಚಜನ ಶಬ್ದವಾಚ್ಯವಾದ ಪರಮಾತ್ಮನ ಐದು ರೂಪಗಳು ಆಕಾಶಶ್ಚ=ಆಕಾಶಪದವಾಚ್ಯನಾದ ಪ್ರಕೃತಿಗೆ ನಿಯಾಮಕನಾದ ವಿಷ್ಣುವೂ ಪ್ರತಿಷ್ಠಿತಾಃ=ನೆಲೆಗೊಂಡಿವೆಯೋ, ತಂ-ಅಂತಹ ಪರಮಾತ್ಮನನ್ನು ಮನ್ಯೇ=ತಿಳಿಯುವೆನು. ತಂ ಆತ್ಮಾನಂ ಅಮೃತಂ ಬ್ರಹ್ಮ ಏವಂ ವಿದ್ವಾನ್= ಅಂತಹ ಆತ್ಮನಾದ, ಮೃತಿರಹಿತನಾದ ಬ್ರಹ್ಮನನ್ನು ಹೀಗೆ ತಿಳಿದವನು ಅಮೃತೋ ಭವತಿ= ಮುಕ್ತನಾಗುತ್ತಾನೆ. ॥ ಸೂತ್ರ 12 ॥

**ಪಂಚ ಜನಾನಾಹ –**

## ಓಂ ॥ ಪ್ರಾಣಾದಯೋ ವಾಕ್ಯಶೇಷಾತ್ ॥ ಓಂ

**'ಪ್ರಾಣಸ್ಯ ಪ್ರಾಣಂ ಉತ ಚಕ್ಷುಷಶ್ಚಕ್ಷುಃ**

**ಶ್ರೋತ್ರಸ್ಯ ಶ್ರೋತ್ರಂ ಅನ್ನಸ್ಯಾನ್ನಂ ಮನಸೋ ಮನಃ ॥'**

**ಇತಿ ವಾಕ್ಯಶೇಷಾತ್ ॥ 13 ॥**

ಹಿಂದಿನ ಮಂತ್ರದಲ್ಲಿ ಉಲ್ಲೇಖಿಸಲ್ಪಟ್ಟ ಐದು ಮಂದಿಯನ್ನು ಈ ಸೂತ್ರದಲ್ಲಿ ಸೂತ್ರಕಾರರು ಹೇಳುತ್ತಾರೆ- 'ಪ್ರಾಣಸ್ಯ ಪ್ರಾಣಂ' ಎಂಬ ಮುಂದಿನ ವಾಕ್ಯಭಾಗದಿಂದ ಪ್ರಾಣಾದಿಗಳೇ ಆ ಐದು ಮಂದಿ ಎಂದು ತಿಳಿಯುತ್ತದೆ.

**ವಿವರಣೆ** -ವಿಷ್ಣು ಪ್ರಾಣನಿಗೆ ಚೇಷ್ಟಾಪ್ರದನಾಗಿಯೂ, ಕಣ್ಣಿಗೆ ದರ್ಶನ ಶಕ್ತಿಯಾಗಿಯೂ, ಕಿವಿಗೆ ಶ್ರವಣ ಶಕ್ತಿಪ್ರದನಾಗಿಯೂ, ಅನ್ನಕ್ಕೆ ಅನ್ನತ್ವಪ್ರದನಾಗಿಯೂ ಮನಸ್ಸಿಗೆ ಮನನಶಕ್ತಿಯನ್ನು ನೀಡುತ್ತಲೂ ಇರುತ್ತಾನೆ ಎಂದು ಯಾರು ತಿಳಿಯುವರೋ, ಅವರು ಬ್ರಹ್ಮನನ್ನು ಹೊಂದುತ್ತಾರೆ. ಇದು ಮಾಧ್ಯಂದಿನಾಯನ ಶಾಖೆಯ ವಾಕ್ಯಶೇಷದ ಅರ್ಥ. ಇಲ್ಲಿ ಪಂಚಜನರ ವಿವರಣೆ ಇದೆ. ॥ ಸೂತ್ರ 13 ॥

**ಓಂ ॥ ಜ್ಯೋತಿಷೈಕೇಷಾಂ ಅಸತ್ಯನ್ನೇ ॥ ಓಂ**

**ತದ್ದೇವಾ ಜ್ಯೋತಿಷಾಂ ಜ್ಯೋತಿಃ (ಬೃ4.4.16) ಇತ್ಯನೇನ ಕಾಣ್ವಾನಾಂ ಪಂಚಕಮ್ ॥ 14 ॥**

**॥ ಇತಿ ನ ಸಂಖ್ಯೋಪಸಂಗ್ರಹಾಧಿಕರಣಮ್ ॥**

ಕಾಣ್ವಶಾಖೆಯ ವಾಕ್ಯಶೇಷದಲ್ಲಿ ಪ್ರಾಣಾದಿ ನಾಲ್ಕನ್ನೇ ಹೇಳಿದ್ದರೂ 'ತದ್ದೇವಾ ಜ್ಯೋತಿಷಾಂ ಜ್ಯೋತಿಃ' ಎಂದು ಹಿಂದೆ ಹೇಳಿರುವ ಜ್ಯೋತೀರೂಪವನ್ನು ಪರಿಗಣಿಸಿ ಒಟ್ಟು ಐದು ರೂಪಗಳನ್ನು ತಿಳಿಯಬೇಕು.

**ವಿವರಣೆ** - ಮಾಧ್ಯಂದಿನಾಯನ ಶಾಖೆಯಲ್ಲೇನೋ ದೇಹದೊಳಗಿರುವ ಪಂಚ ತತ್ತ್ವಗಳ ಉಲ್ಲೇಖವಿದೆ. ಆದರೆ ಕಾಣ್ವ ಶಾಖೆಯಲ್ಲಿ,

ಪ್ರಾಣಸ್ಯ ಪ್ರಾಣಂ ಉತ ಚಕ್ಷುಷಃ ಚಕ್ಷುಃ।
ಶ್ರೋತಸ್ಯ ಶ್ರೋತ್ರಂ ಮನಸೋ ಮನೋ ಯೇ ವಿದುಃ ॥

ಎಂದು ಅನ್ನವನ್ನು ಬಿಟ್ಟು ಉಳಿದ ನಾಲ್ಕನ್ನು ಮಾತ್ರ ಉಲ್ಲೇಖಿಸಲಾಗಿದೆ. ಆದರೂ ಹಿಂದೆ ಹೇಳಿರುವ ಜ್ಯೋತಿಯನ್ನು ಅನ್ನದ ಸ್ಥಾನದಲ್ಲಿ ಪರಿಗಣಿಸಬೇಕು. ಜ್ಯೋತಿ ಮತ್ತು ಅನ್ನ ಶಬ್ದಗಳಿಗೆ ಏಕಾರ್ಥವನ್ನು ಮಾಡಿ ಈ ಎರಡು ಶಾಖೆಗಳಿಗೆ ಅವಿರೋಧವನ್ನು ಹೇಳಬೇಕು. ''ಜ್ಯಾಯಸೀ ಊತಿಃ= ಶರೀರಪುಷ್ಟಿಃ ಯಸ್ಮಾತ್ ಇತಿ-ಜ್ಯೋತಿಃ'' ಶರೀರದ ಪೋಷಣೆಗೆ ಕಾರಣವಾದ ಅನ್ನ ಎಂದು ಜ್ಯೋತಿಃ ಶಬ್ದದ ಅರ್ಥ. ಅಥವಾ ಕೆಲವು ಅಧಿಕಾರಿಗಳಿಗೆ ಜ್ಯೋತಿರಾದಿ ಪಂಚಕಗಳ ಉಪಾಸನೆ ಮತ್ತೆ ಕೆಲವರಿಗೆ ಅನ್ನಾದಿ ಪಂಚಕಗಳ ಉಪಾಸನೆ. ಹೀಗೆ ವಿವಕ್ಷಾಭೇದದಿಂದ ಪ್ರತ್ಯೇಕ ಪಂಚಕಗಳನ್ನೂ ಹೇಳಬಹುದು. ॥ ಸೂತ್ರ 14 ॥

## ದ್ವೈತದರ್ಶನದಲ್ಲಿ ಸೂತ್ರಗಳ ಅರ್ಥ

**1. ಓಂ ॥ ನ ಸಂಖ್ಯೋಪಸಂಗ್ರಹಾದಪಿ ನಾನಾಭಾವಾತ್ ಅತಿರೇಕಾಚ್ಚ ॥ ಓಂ**

ತದಧೀನತ್ವ ನ್ಯಾಯದಿಂದ 'ಯಸ್ಮಿನ್ ಪಂಚ ಪಂಚಜನಾಃ' ಎಂಬ ವಾಕ್ಯದಲ್ಲಿರುವ ಪಂಚಜನಶಬ್ದದಿಂದ ವಾಚ್ಯನಾದವನು ವಿಷ್ಣು. ವಿಷ್ಣುವಿಗೆ ನಾನಾಭಾವಾತ್= ಅನೇಕ ರೂಪಗಳಿರುವುದರಿಂದ ಅತಿರೇಕಾಚ್ಚ= ಶರೀರಸ್ಥರೂಪಕ್ಕಿಂತ ಪಂಚಕದಲ್ಲಿರುವ ರೂಪಗಳು ಭಿನ್ನವಾದುದರಿಂದಲೂ ಸಂಖ್ಯೋಪಸಂಗ್ರಹಾದಪಿ= ಪಂಚ ಎಂಬ ಬಹುತ್ವ ಸಂಖ್ಯೆಯಿಂದ ಸಂಗ್ರಹಿಸಿರುವುದರಿಂದಾಗಲೀ 'ಯಸ್ಮಿನ್' ಎಂದು ಆಧಾರಾಧೇಯಭಾವವನ್ನು ಹೇಳಿರುವುದರಿಂದಾಗಲೀ ವಿರೋಧವಿಲ್ಲ.

(ಅತ್ರ ಬಹುತ್ವವಾಚಿಶಬ್ದಾಃ ಸಮನ್ವೀಯಂತೇ । ಅಪಿಃ ವಿಭಾಗೇನ ವಿರೋಧಾಪಕರ್ಷಣಾರ್ಥಃ । ಆಧಾರಾಧೇಯ ಭಾವ ಸಮುಚ್ಚಯಾರ್ಥೋ ವಾ । ಪಂಚಜನಾ ಇತಿ ಯೋಗ್ಯತಯಾ ಅನ್ವೇತಿ। ತತ್ರ ಇತಿ ಅಸ್ತಿ। 'ಯಸ್ಮಿನ್ ಪಂಚ ಪಂಚಜನಾಃ

ಇತ್ಯುಕ್ತಪಂಚಪಂಚೇತಿ ವಿಶೇಷಣಯುಕ್ತಾಃ ಜನಾಃ ತತು=ಬ್ರಹ್ಮೈವ ಪರಮಮುಖ್ಯವೃತ್ತ್ಯಾ। ನ ಪ್ರಾಣ ಚಕ್ಷುಃ ಶ್ರೋತ್ರ ಮನಾಂಸಿ । ಕುತಃ ? ತದಧೀನತ್ವಜ್ಞೇಯತ್ವಾವಚನಾದಿ ಉಕ್ತಹೇತುಭ್ಯಃ । ಅಗ್ರೇತನ ಹೇತೋಶ್ಚ। ಏವಂ ತರ್ಹಿ ಪಂಚೇತ್ಯುಕ್ತ ಬಹುತ್ವಸಂಖ್ಯಾ ವಿರೋಧಃ ಇತ್ಯತಃ ಸೂತ್ರಂ-ಸಂಖ್ಯೋಪಸಂಗ್ರಹಾದಪಿ । ಪಂಚೇತಿ ಬಹುತ್ವ ಸಂಖ್ಯೋಪಸಂಗ್ರಹಾತ್ 'ಯಸ್ಮಿನ್=ಬ್ರಹ್ಮಣಿ' ಇತ್ಯುಕ್ತ ಆಧಾರಾಧೇಯಭಾವಾದಪಿ ನ ವಿರೋಧಃ। ಕುತಃ ? ನಾನಾಭಾವಾತ್। ನಾನಾಶಬ್ದೋ ಭಿನ್ನವಾಚೀ। ನಾನಾರೂಪಾಣಾಂ ಭಾವಾತ್=ಸತ್ವಾತ್ ಅತಿರೇಕಾಚ್ಚ=ಭೇದಾಚ್ಚ।)

**2. ಓಂ॥ ಪ್ರಾಣಾದಯೋ ವಾಕ್ಯಶೇಷಾತ್ ॥ ಓಂ**

ವಾಕ್ಯಶೇಷಾತ್='ಪ್ರಾಣಸ್ಯ ಪ್ರಾಣಂ' ಎಂದು ಮುಂದಿನ ಶೇಷವಾಕ್ಯದಿಂದ ಹಿಂದೆ ಹೇಳಿದ ಪಂಚಜನರು ಪ್ರಾಣಾದಯಃ=ಪ್ರಾಣ, ಚಕ್ಷು, ಶ್ರೋತ್ರ, ಅನ್ನ ಮತ್ತು ಮನಃ ಶಬ್ದಗಳಿಂದ ವಾಚ್ಯವಾದ ಭಗವಂತನ ರೂಪಗಳು.

(ಪಂಚಜನಾಃ ಇತ್ಯಸ್ತಿ। 'ಪ್ರಾಣಸ್ಯ ಪ್ರಾಣಂ' ಇತ್ಯಾದಿ ದ್ವಿತೀಯಾಂತ ನಿರ್ದಿಷ್ಟ ಪ್ರಾಣ-ಚಕ್ಷುಃ-ಶ್ರೋತ್ರ ಅನ್ನ ಮನಃ ಶಬ್ದಿತಾಃ ಪಂಚಜನಾಃ। 'ಪ್ರಾಣಸ್ಯ ಪ್ರಾಣಂ' ಇತ್ಯಾದಿ ವಾಕ್ಯಶೇಷಾತ್ ಇತ್ಯರ್ಥಃ।)

**3. ಓಂ॥ ಜ್ಯೋತಿಷೈಕೇಷಾಂ ಅಸತ್ಯನ್ನೇ ॥ ಓಂ**

ಏಕೇಷಾಂ=ಕಾಣ್ವರ ಶಾಖೆಯಲ್ಲಿ ಅನ್ನೇ=ಅನ್ನಾಖ್ಯರೂಪವು ಅಸತಿ=ಇಲ್ಲದಿದ್ದರೂ ಜ್ಯೋತಿಷಾ='ಜ್ಯೋತಿಷಾಂ ಜ್ಯೋತಿಃ' ಎಂದು ಹೇಳಿರುವ ಜ್ಯೋತಿ ಎಂಬ ರೂಪದೊಂದಿಗೆ ಸೇರಿ ಒಟ್ಟು ಐದು ರೂಪಗಳನ್ನು ತಿಳಿಯಬೇಕು.

(ಏಕೇಷಾಂ=ಕಾಣ್ವಾನಾಂ ಶಾಖಾಯಾಂ ಅನ್ನೇ=ಅನ್ನಾಖ್ಯೇ ರೂಪೇ ಅಸತ್ಯಪಿ 'ಜ್ಯೋತಿಷಾಂ ಜ್ಯೋತಿಃ' ಇತಿ ಪ್ರಾಗುಕ್ತ ಜ್ಯೋತಿಷಾ ಪಂಚತ್ವಂ ಬೋಧ್ಯಮ್।)

## ಶಾಂಕರಭಾಷ್ಯದಲ್ಲಿ ಸೂತ್ರಗಳ ಅರ್ಥ

**1. ನ ಸಂಖ್ಯೋಪಸಂಗ್ರಹಾದಪಿ ನಾನಾಭಾವಾತ್ ಅತಿರೇಕಾಚ್ಚ**- 'ಯಸ್ಮಿನ್ ಪಂಚ ಪಂಚಜನಾಃ' ಎಂಬ ಬೃಹದಾರಣ್ಯಕ ವಾಕ್ಯದಲ್ಲಿ ಸಾಂಖ್ಯಸಿದ್ಧಾಂತ ಪ್ರತಿಪಾದ್ಯವಾಗಿದೆ. ಸಾಂಖ್ಯದರ್ಶನದಲ್ಲಿ ಒಟ್ಟು ಇಪ್ಪತ್ತೈದು ತತ್ತ್ವಗಳು. ವಿಕಾರವಿಲ್ಲದ ಮೂಲಪ್ರಕೃತಿ. ಸ್ವತಃ ಪ್ರಕೃತಿಯ ವಿಕಾರವಾಗಿದ್ದು ಇತರ ವಿಕಾರಗಳಿಗೆ ಪ್ರಕೃತಿಯಾಗಿರುವ ಪ್ರಕೃತಿ-ವಿಕೃತಿಗಳು ಏಳು-ಮಹತ್ತತ್ತ್ವ, ಅಹಂಕಾರ ತತ್ತ್ವ. ರೂಪ-ರಸ-ಗಂಧ-ಸ್ಪರ್ಶ- ಶಬ್ದರೂಪವಾದ, ಪಂಚಭೂತಗಳಿಗೆ ಕಾರಣವಾದ ತನ್ಮಾತ್ರೆಗಳು ಐದು-ಒಟ್ಟು ಏಳು. ಹದಿನಾರು ಕೇವಲ ವಿಕೃತಿಗಳು-ಹನ್ನೊಂದು ಇಂದ್ರಿಯಗಳು, ಪಂಚಭೂತಗಳು. ಪ್ರಕೃತಿಯೂ ವಿಕೃತಿಯೂ ಅಲ್ಲದ ಪುರುಷ. (ಹೀಗೆ 1+7+16+1=25). ಈ ಇಪ್ಪತ್ತೈದು ತತ್ತ್ವಗಳನ್ನು 'ಪಂಚ

ಪಂಚಜನಾಃ' ಎಂಬ ಶಬ್ದ ಹೇಳುತ್ತದೆ, ಎಂದು ಪೂರ್ವಪಕ್ಷ. ಇದು, 'ಸಂಖ್ಯೋಪಸಂಗ್ರಹಾತ್'=ಇಪ್ಪತ್ತೈದು ಸಂಖ್ಯೆಯಲ್ಲಿ ಪದಾರ್ಥಗಳನ್ನು ಸಂಗ್ರಹಮಾಡಿರುವುದರಿಂದ' ಎಂಬ ಸೂತ್ರದ ಪೂರ್ವಪಕ್ಷದ ಭಾಗಕ್ಕೆ ಅರ್ಥ.

'ನಾನಾಭಾವಾತ್' ಎಂದು ಉತ್ತರ. ಈ ತತ್ತ್ವಗಳಲ್ಲಿ ಹಿಂದೆ ಹೇಳಿದಂತೆ, ಸಾಮಾನ್ಯ ಧರ್ಮಗಳನ್ನು ಗುರುತಿಸಿ ಒಂದು, ಏಳು ಎಂದು ಮುಂತಾಗಿ ಗುಂಪುಗಳನ್ನಾಗಿ ವಿಂಗಡಿಸಬಹುದು. ಆದರೆ, ಐದರ ಐದು ಗುಂಪುಗಳನ್ನಾಗಿ ಮಾಡಲು ಆಧಾರವಿಲ್ಲ. ಆದ್ದರಿಂದ 'ಪಂಚ ಪಂಚಜನಾಃ' ಎಂಬ ಪದಗಳು ಸಾಂಖ್ಯರ ತತ್ತ್ವವಿಭಾಗಕ್ಕೆ ಅನುಗುಣವಾಗಿಲ್ಲ. ಇದು 'ನಾನಾಭಾವಾತ್' ಪದದ ಅರ್ಥ.

ಅಷ್ಟೇ ಅಲ್ಲ, ಈ ವಾಕ್ಯದಲ್ಲಿ ಇನ್ನೊಂದು ತತ್ತ್ವವನ್ನೂ ಹೇಳಲಾಗಿದೆ. ಅದು ಇಪ್ಪತ್ತೈದರಲ್ಲಿ ಸೇರಿಲ್ಲ. 'ಯಸ್ಮಿನ್' ಎಂದು ಇಪ್ಪತ್ತೈದಕ್ಕೆ ಆಧಾರವಾಗಿ ಆತ್ಮ ತತ್ತ್ವವೂ ಶ್ರುತವಾಗಿದೆ. ಆದ್ದರಿಂದಲೂ ಈ ವಾಕ್ಯ ಸಾಂಖ್ಯದರ್ಶನಕ್ಕೆ ಅನುಕೂಲವಲ್ಲ. ಇದು 'ಅತಿರೇಕಾತ್' ಎಂಬ ಪದದ ಅರ್ಥ.

2. **ಪ್ರಾಣಾದಯೋ ವಾಕ್ಯಶೇಷಾತ್** - ಹಾಗಾದರೆ ಆ ಪಂಚಜನಗಳು ಯಾರು? 'ಪ್ರಾಣಾದಯಃ' - ಪ್ರಾಣ, ಚಕ್ಷುಸ್ಸು, ಶ್ರೋತ್ರ, ಅನ್ನ, ಮನಸ್ಸು. ಇವು ಮುಂದಿರುವ ವಾಕ್ಯದಲ್ಲಿ 'ಪ್ರಾಣಸ್ಯ ಪ್ರಾಣಂ' ಎಂದು ಮುಂತಾಗಿ ಹೇಳಲ್ಪಟ್ಟಿವೆ. ಜಡವಾದರೂ ಇವುಗಳನ್ನು ಛಾಂದೋಗ್ಯದಲ್ಲಿ 'ತೇ ವಾ ಏತೇ ಪಂಚ ಬ್ರಹ್ಮ ಪುರುಷಾಃ' ಎಂದಿರುವುದರಿಂದ ಪ್ರಕೃತ ಉಪನಿಷತ್ತಿನಲ್ಲೂ 'ಪಂಚಜನಾಃ' ಎಂದು ಉಲ್ಲೇಖಿಸಲಾಗಿದೆ.

3. **'ಜ್ಯೋತಿಷೈಕೇಷಾಂ ಅಸತ್ಯನ್ನೇ'** - ಮಾಧ್ಯಂದಿನರು ಪ್ರಾಣಾದಿ ಪಂಚಕಗಳನ್ನು ಹೇಳಿದ್ದಾರೆ. ಆದರೆ, ಕಾಣ್ವಪಾಠದಲ್ಲಿ ಅನ್ನ ಬಿಟ್ಟು ಹೋಗಿದೆ. ನಾಲ್ಕೇ ಇದೆಯಲ್ಲವೆ? ಹೌದು, ಅಲ್ಲೂ ಹಿಂದಿನ ಮಂತ್ರದಲ್ಲಿ ಹೇಳಿರುವ ಜ್ಯೋತಿಯನ್ನು ಅನ್ನದ ಸ್ಥಾನದಲ್ಲಿ ಸೇರಿಸಿಕೊಳ್ಳಬೇಕು.

## ಚಂದ್ರಿಕಾದಲ್ಲಿ ಮಾಡಿರುವ ವಿಮರ್ಶೆ

1. ಸಾಂಖ್ಯರು ಹೇಳುವ 25 ತತ್ತ್ವಗಳು ಎಲ್ಲ ವೇದಾಂತಿಗಳಿಗೂ ಸಮ್ಮತವೇ ಆಗಿವೆ. ಅವುಗಳನ್ನು ಅಂಗೀಕರಿಸದಿದ್ದರೆ ಪ್ರಮಾಣ ವಿರೋಧವಿದೆ.

ಪಂಚಭಿಃ ಪಂಚಭಿಃ ಬ್ರಹ್ಮ ಚತುರ್ಭಿಃ ದಶಭಿಸ್ತಥಾ ।

ಏತತ್ ಚತುರ್ವಿಂಶತಿಕಂ ಗಣಂ ಪ್ರಾಧಾನಿಕಂ ವಿದುಃ ॥

ಎಂದು ಭಾಗವತ ಸ್ಪಷ್ಟವಾಗಿ ಪುರುಷನನ್ನು ಬಿಟ್ಟು 24 ತತ್ತ್ವಗಳನ್ನು ಪರಿಗಣಿಸಿದೆ. ಅಂದಮೇಲೆ ಈ ಇಪ್ಪತ್ತೈದು ತತ್ವಗಳು ಪ್ರಾಮಾಣಿಕಗಳಾದರೂ 'ಯಸ್ಮಿನ್ ಪಂಚ ಪಂಚಜನಾಃ' ಎಂಬ ಬೃಹದಾರಣ್ಯಕವಾಕ್ಯದಲ್ಲಿ ಆ ತತ್ತ್ವಗಳು ಪ್ರತಿಪಾದಿತವಲ್ಲ, ಎಂದಿಷ್ಟೇ

ಹೇಳಬೇಕು. ಹೀಗೆ ಹೇಳಿದ್ದರಿಂದ ಆಗುವ ಲಾಭವೇನೂ ಇಲ್ಲ. ಏಕೆಂದರೆ, ಸಾಂಖ್ಯ ಸಿದ್ಧಾಂತದ ತತ್ತ್ವವು 'ಅಶಬ್ದ-ಪ್ರಮಾಣ ಗಮ್ಯವಲ್ಲ' ಎಂದು ಹೇಳಲು ಈ ಸೂತ್ರಗಳಿವೆ. ಅವರ ಸಿದ್ಧಾಂತ ಈ ಶಬ್ದದಿಂದ ಪ್ರತಿಪಾದ್ಯವಲ್ಲ, ಬೇರೊಂದು ಶಬ್ದದಿಂದ ಪ್ರತಿಪಾದ್ಯ ಎಂದು ಹೇಳುವುದರಲ್ಲಿ ಔಚಿತ್ಯವೇನಿದೆ?

2. ಇಪ್ಪತ್ತೈದನ್ನು ಐದು ಗುಂಪುಗಳಲ್ಲಿ ವಿಂಗಡಿಸಲು ಸಮಾನ ಧರ್ಮಗಳಿಲ್ಲ ಎನ್ನುವುದೂ ಸರಿಯಲ್ಲ. 1. ಪಂಚ ತನ್ಮಾತ್ರೆಗಳು, 2. ಪಂಚಭೂತಗಳು, 3. ಪಂಚಜ್ಞಾನೇಂದ್ರಿಯಗಳು, 4. ಪಂಚಕರ್ಮೇಂದ್ರಿಯಗಳು, 5. ಉಳಿದ ಐದು ಹೀಗೆ ಐದೈದರ ಐದು ಗುಂಪುಗಳನ್ನು ಮಾಡಬಹುದು.

ರಾಮಾನುಜ ಭಾಷ್ಯದಲ್ಲೂ ಇದೇ ಅರ್ಥವನ್ನು ಹೇಳಲಾಗಿದೆ. ಆದರೆ, ಪ್ರಥಮ ಸೂತ್ರದಲ್ಲಿ 'ನಾನಾಭಾವಾತ್-ಎಂದರೆ ನಾನಾ=ಪೃಥಕ್-ಸಾಂಖ್ಯರು ಹೇಳಿದ ಇಪ್ಪತ್ತೈದಕ್ಕಿಂತ ಪ್ರತ್ಯೇಕವಾಗಿ ಭಾವಾತ್=ಶ್ರುತಿಸಿದ್ಧವಾಗಿ ಇರುವುದರಿಂದ ಎಂದರ್ಥ. ಈ ತತ್ತ್ವಗಳಿಗಿಂತ ಭಿನ್ನವಾದ ಬ್ರಹ್ಮನನ್ನೂ 'ಯಸ್ಮಿನ್' ಶಬ್ದದಿಂದ ಹೇಳಲಾಗಿದೆ ಎಂದು ಭಾವ.

**ಇಲ್ಲಿಗೆ ಸಂಖ್ಯೋಪಸಂಗ್ರಹಾಧಿಕರಣ ಮುಗಿಯಿತು.**

## ಆಕಾಶಾಧಿಕರಣ - 4

**ಅವಾಂತರಕಾರಣತ್ವೇನಾಪಿ ಸ ಏವೋಚ್ಯತೇ ಇತಿ ವಕ್ತಿ-**

**ಓಂ ॥ ಕಾರಣತ್ವೇನ ಚ ಆಕಾಶಾದಿಷು ಯಥಾವ್ಯಪದಿಷ್ಟೋಕ್ತೇಃ ॥ ಓಂ**

**ಆಕಾಶಾದಿಷು ಅವಾಂತರಕಾರಣತ್ವೇನ ಸ ಏವ ಸ್ಥಿತಃ । ಯಥಾವ್ಯಪದಿಷ್ಟಸ್ಯೈವ ಪರಸ್ಯ 'ಯ ಆಕಾಶೇ ತಿಷ್ಠನ್' (5.7.12) ಇತ್ಯಾದಿನಾ ಆಕಾಶಾದಿಷು ಉಕ್ತೇಃ ॥ 15 ॥**

**॥ ಇತಿ ಆಕಾಶಾಧಿಕರಣಮ್ ॥**

ಪ್ರಧಾನಕಾರಣವಾಗಿ ಮಾತ್ರವಲ್ಲದೆ ಅವಾಂತರಕಾರಣವಾಗಿಯೂ ಶ್ರುತಿಯಲ್ಲಿ ಅವನೇ ಹೇಳಲ್ಪಟ್ಟಿದ್ದಾನೆ ಎಂದು ಸೂತ್ರಕಾರರು ಇಲ್ಲಿ ಹೇಳಿದ್ದಾರೆ.

ಅವಾಂತರಕಾರಣನಾಗಿ ಆಕಾಶಾದಿಗಳಲ್ಲಿ ಅವನೇ ಇದ್ದಾನೆ. ಏಕೆಂದರೆ, 'ಸ ಯೋಽತೋಽ ಅಶ್ರುತಃ' ಎಂದು ಐತರೇಯದಲ್ಲಿ ಯಾವ ಗುಣಗಳಿಂದ ವಿಷ್ಣುವು ಹೇಳಲ್ಪಟ್ಟಿದ್ದಾನೆಯೋ ಅದೇ ಗುಣಗಳುಳ್ಳವನಾಗಿ 'ಯ ಆಕಾಶೇ ತಿಷ್ಠನ್' ಎಂದು ಮುಂತಾಗಿ ಬೃಹದಾರಣ್ಯಕದಲ್ಲೂ ಆಕಾಶಾದಿಗತನಾಗಿ ಹೇಳಲ್ಪಟ್ಟಿದ್ದಾನೆ.

**ವಿವರಣೆ** - 1. 'ಆತ್ಮನಃ ಆಕಾಶಃ ಸಂಭೂತಃ। ಆಕಾಶಾದ್ವಾಯುಃ। ವಾಯೋರಗ್ನಿಃ।'

ಹೀಗೆ ತೈತ್ತಿರೀಯದಲ್ಲಿ ಆತ್ಮನಿಂದ ಆಕಾಶ, ಆಕಾಶದಿಂದ ವಾಯು, ವಾಯುವಿನಿಂದ ಅಗ್ನಿ ಎಂದು ಸೃಷ್ಟಿಯ ಕ್ರಮವನ್ನು ಹೇಳಲಾಗಿದೆ. ಇಲ್ಲಿ ಆತ್ಮನೆಂದರೆ ವಿಷ್ಣು. ಅವನಿಂದ ಆಕಾಶ ಹುಟ್ಟುತ್ತದೆ. ಅಂದಮೇಲೆ ವಿಷ್ಣುವೇ ಅಲ್ಲಿ ಆಕಾಶನಾಗಲು ಸಾಧ್ಯವಿಲ್ಲ. ಹೀಗೆ ಇಂತಹ ಸಂದರ್ಭಗಳಲ್ಲಿ ಆಕಾಶಾದಿ ಶಬ್ದಗಳಿಂದ ವಿಷ್ಣು ವಾಚ್ಯನಲ್ಲವಾದುದರಿಂದ 'ನಾಮಾನಿ ಸರ್ವಾಣಿ' ಎಂಬ ಶ್ರುತಿಗೆ ಅರ್ಥ ಸಂಕೋಚ ಮಾಡುವುದು ಅನಿವಾರ್ಯ. ಆದ್ದರಿಂದ ಸಮನ್ವಯ ಸೂತ್ರದಲ್ಲಿ ಹೇಳಿದ ಸಿದ್ಧಾಂತ ಸರಿಯಲ್ಲ ಎಂದು ಆಕ್ಷೇಪ.

ಇಲ್ಲೂ ಆಕಾಶಶಬ್ದ ಮುಖ್ಯವಾಗಿ ವಿಷ್ಣುವಾಚಕ ಎಂದು ಸಿದ್ಧಾಂತ. ವಿಷ್ಣುವಿನಿಂದ ಆಕಾಶ ಹುಟ್ಟುವಾಗ ಅದಕ್ಕೆ ನಿಯಾಮಕವಾದ ಆಕಾಶ ಎಂಬ ಹೆಸರಿನ ಪರಮಾತ್ಮನ ರೂಪವೂ ಅಭಿವ್ಯಕ್ತವಾಗುತ್ತದೆ. ಅದು ಆತ್ಮನೆಂಬ ರೂಪದಿಂದ ಅಭಿವ್ಯಕ್ತಿ ಹೊಂದಿರುವುದರಿಂದ ಆತ್ಮನಿಂದ ಹುಟ್ಟಿದೆ. (ಅಭಿವ್ಯಕ್ತಿ ಹೊಂದಿದೆ.) ಆಕಾಶವೆಂದರೆ ವಿಷ್ಣುವಿನ ಆಕಾಶಾಖ್ಯ ರೂಪ. ಅದರಿಂದ ಮುಂದೆ ವಾಯುವಿಗೆ ನಿಯಾಮಕವಾದ ವಾಯು ಎಂಬ ಹೆಸರಿನ ಭಗವದ್ರೂಪ ವ್ಯಕ್ತವಾಗುತ್ತದೆ. ಹೀಗೆ, ವಿಷ್ಣು ಆತ್ಮನಾಗಿ ಮುಖ್ಯ ಕಾರಣನೂ ಆಗಿದ್ದಾನೆ. ಆಕಾಶಾದಿರೂಪದಿಂದ ವಾಯುವಿಗೆ ಅವಾಂತರ ಕಾರಣನೂ ಆಗಿದ್ದಾನೆ. ಕಾರ್ಯನೂ-ಕಾರಣನೂ ಆದರೆ ಅವಾಂತರ ಕಾರಣನೆಂದರ್ಥ. ಆಕಾಶ ಎಂಬ ರೂಪ ಆತ್ಮನ ಕಾರ್ಯ, ಅದೇ ವಾಯು ಎಂಬ ಮತ್ತೊಂದು ರೂಪಕ್ಕೆ ಕಾರಣ. ಆದ್ದರಿಂದ ವಿಷ್ಣು ಅವಾಂತರ ಕಾರಣ.

ಸೂತ್ರದ 'ಚ' ಶಬ್ದವು ವಿಷ್ಣು ಪ್ರಧಾನಕಾರಣನಷ್ಟೇ ಅಲ್ಲ; ಅವಾಂತರಕಾರಣನೂ ಆಗಿದ್ದಾನೆ, ಎಂದು ತಿಳಿಸುತ್ತದೆ.

2. ಆಕಾಶದಲ್ಲಿ ವಿಷ್ಣುವಿನ ಆಕಾಶನಾಮಕವಾದ ರೂಪವಿದೆ ಎನ್ನಲು ಆಧಾರವನ್ನು ಸೂತ್ರದಲ್ಲಿರುವ 'ಯಥಾ ವ್ಯಪದಿಷ್ಟೋಕ್ತೇಃ' ಎಂಬ ಅಂಶ ನೀಡುತ್ತದೆ. ಬೃಹದಾರಣ್ಯಕದಲ್ಲಿ

> ಯ ಆಕಾಶೇ ತಿಷ್ಠನ್ ಆಕಾಶಸ್ಯ ಅಂತರಃ ಯಂ ಆಕಾಶೋ ನ ವೇದ
> ಯಸ್ಯಾಕಾಶಃ ಶರೀರಂ ಯ ಆಕಾಶಮಂತರೋ ಯಮಯತಿ ಸ ತೇ ಆತ್ಮಾ
> ಅಂತರ್ಯಾಮೀ ಅಮೃತಃ॥ (ಬೃ.3.7.30)

ಹೀಗೆ ಆಕಾಶಾದಿಗಳಲ್ಲಿ ನಿಯಾಮಕವಾಗಿ ಪರಮಾತ್ಮನ ರೂಪವಿದೆ ಎಂದು ತಿಳಿಯುತ್ತದೆ. ಬೃಹದಾರಣ್ಯಕದಲ್ಲಿ ಪರಮಾತ್ಮನೇ ಅಂತರ್ಯಾಮಿಯಾಗಿ ವಿವಕ್ಷಿತ ಎನ್ನಲು, ಐತರೇಯ ಆರಣ್ಯಕದಲ್ಲಿ 'ಸ ಯೋಽತೋ ಅಶ್ರುತಃ' ಎಂದು ವಿಷ್ಣು ಅಜ್ಞೇಯನಾಗಿ ಹೇಳಲ್ಪಟ್ಟಿರುವಂತೆಯೇ ಇಲ್ಲೂ 'ಯಂ ಆಕಾಶೋ ನ ವೇದ' ಎಂದು ಹೇಳಲಾಗಿರುವುದೇ

ಗಮಕ. ಆದ್ದರಿಂದ ಆಕಾಶಾದಿಗಳ ಅಂತರ್ಯಾಮಿಯೂ ವಿಷ್ಣು. ಆದ್ದರಿಂದ ಅವನೇ ಆಕಾಶಪದದಿಂದ ವಾಚ್ಯ.

## ದ್ವೈತದರ್ಶನದಲ್ಲಿ ಸೂತ್ರದ ಅರ್ಥ

**ಓಂ || ಕಾರಣತ್ವೇನ ಚ ಆಕಾಶಾದಿಷು ಯಥಾವ್ಯಪದಿಷ್ಟೋಕ್ತೇಃ || ಓಂ**

ಆಕಾಶಾದಿಷು ಎಂಬ ಶಬ್ದವನ್ನು ಆವೃತ್ತಿ ಮಾಡಿಕೊಳ್ಳಬೇಕು. 'ತತ್ತು' ಎಂದೂ 'ನ ವಿರೋಧಃ' ಎಂದೂ ಅನುವೃತ್ತಿ ಮಾಡಿಕೊಳ್ಳಬೇಕು. 'ಆತ್ಮನಃ ಆಕಾಶಃ ಸಂಭೂತಃ' ಎಂದು ಮುಂತಾಗಿ ಕಾರ್ಯನಾಗಿಯೂ ಕಾರಣನಾಗಿಯೂ ಹೇಳಲ್ಪಟ್ಟವನೂ ಆಕಾಶ ಶಬ್ದದಿಂದ ವಾಚ್ಯನಾದವನೂ ಬ್ರಹ್ಮನೆ. ಅವನು ಮೂಲಕಾರಣನಷ್ಟೇ ಅಲ್ಲ, ಅವಾಂತರ ಕಾರಣನೂ ಆಗಿದ್ದಾನೆ. ಹೀಗೆ ಹೇಳಲು 'ಸರ್ವಶಬ್ದವಾಚ್ಯ ವಿಷ್ಣು' ಎಂಬುದೇ ಕಾರಣ. ಆತ್ಮನಿಂದ ಅಭಿವ್ಯಕ್ತಿ ಹೊಂದಿದ ಆಕಾಶರೂಪ ವಾಯುವಿಗೆ ಕಾರಣವಾಗುವುದರಿಂದ ಆಕಾಶವು ಕಾರ್ಯವೂ ಕಾರಣವೂ ಆಗುವುದರಲ್ಲಿ ವಿರೋಧವೇನೂ ಇಲ್ಲ. ಆಕಾಶದಲ್ಲಿ ವಿಷ್ಣು ನಿಯಾಮಕನಾಗಿದ್ದಾನೆನ್ನಲು ಏನು ಆಧಾರ? ಯಥಾ ವ್ಯಪದಿಷ್ಟೋಕ್ತೇಃ। 'ಸ ಯೋ ಅತೋ ಅಶ್ರುತಃ' ಎಂದು ಐತರೇಯದಲ್ಲಿ ಹೇಳಿರುವಂತೆಯೇ 'ಯ ಆಕಾಶೇ ತಿಷ್ಠನ್' ಎಂದು ಇಲ್ಲೂ ಅವೇದ್ಯನಾದವನನ್ನು ಆಕಾಶಸ್ಥನನ್ನಾಗಿ ಹೇಳಲಾಗಿದೆ. ಆದ್ದರಿಂದ ಆಕಾಶಾದಿಗಳಲ್ಲಿ ನಿಯಾಮಕನಾಗಿ ಅದೇ ಹೆಸರಿನಿಂದ ಪರಮಾತ್ಮನಿದ್ದಾನೆ.

(ಅತ್ರ ಅವಾಂತರ ಕಾರಣತ್ವಲಿಂಗಂ ವಾ ತಾದೃಶಾಕಾಶಾದಿನಾಮ ವಾ ಸಮನ್ವೀಯತೇ। ಆಕಾಶಾದಿ ಸಮುಚ್ಚಾಯಕಃ ಚಃ। ಕಾರ್ಯತ್ವಸಮುಚ್ಚಾಯಕೋ ವಾ। ಆಕಾಶಾದಿಷು ಇತ್ಯಾವೃತ್ತಿಃ। ತತ್ತು ಇತ್ಯಸ್ತಿ। ನ ವಿರೋಧಃ ಇತಿ ಚ। 'ಆತ್ಮನಃ ಆಕಾಶಃ ಸಂಭೂತಃ' ಇತ್ಯಾದೌ ಕಾರಣತ್ವೇನ ಕಾರ್ಯತ್ವೇನ ಚ ಉಕ್ತ ಆಕಾಶಾದಿಶ್ಚ ಪರಮಮುಖ್ಯ ವೃತ್ತ್ಯಾ ಬ್ರಹ್ಮೈವ। ನ ಕೇವಲಂ ಮೂಲಕಾರಣಾತ್ಮಾ ಇತ್ಯರ್ಥಃ। ನ ತು ಭೂತಾದಿಃ। ಕುತಃ? ಪ್ರಾಗುಕ್ತ ಹೇತುಭ್ಯಃ ಇತ್ಯರ್ಥಃ। ಆಕಾಶಾದಿಷು ಸ್ಥಿತತ್ವಾತ್ ನ ವಿರೋಧಃ। ಆಕಾಶಾದ್ಯುತ್ಪತ್ತೌ ತದಂತಸ್ಥತ್ವೇನ ತಸ್ಯಾಪಿ ಅಭಿವ್ಯಕ್ತ್ಯಾ ಕಾರ್ಯತ್ವಂ, ವಾಯ್ವಾದಿಸ್ವರೂಪವ್ಯಕ್ತಿಹೇತುತ್ವೇನ ಕಾರಣತ್ವಂ ಚ ಯುಕ್ತಂ ಇತಿ ಭಾವಃ। ಆಕಾಶಾದಿಷು ಸ್ಥಿತತ್ವಮೇವ ಕುತಃ? ಇತ್ಯತ ಉಕ್ತಂ- ಯಥೇತಿ । ಯಥಾ= ಯೇನ ಪ್ರಕಾರೇಣ ಅವಿದಿತತ್ವಾದಿನಾ 'ಸ ಯೋಽತೋಽಶ್ರುತಃ' ಇತ್ಯಾದೌ ವ್ಯಪದಿಷ್ಟಃ ತಸ್ಯ ಉಕ್ತೇಃ ಆಕಾಶಾದಿಷು 'ಯ ಆಕಾಶೇ ತಿಷ್ಠನ್' ಇತ್ಯಾದೌ ಇತ್ಯರ್ಥಃ।)

## ಶಾಂಕರಭಾಷ್ಯದಲ್ಲಿ ಹೇಳಿರುವ ಸೂತ್ರಾರ್ಥ

ಇದುವರೆಗೆ ಪ್ರಧಾನವು ಶಾಸ್ತ್ರಪ್ರತಿಪಾದ್ಯವಲ್ಲ ಎಂದು ತೋರಿಸಿ ಬ್ರಹ್ಮನಲ್ಲಿ ವೇದಾಂತವಾಕ್ಯಗಳ ಗತಿಸಾಮಾನ್ಯವನ್ನು ಸಮರ್ಥಿಸಲಾಯಿತು. ಅಂದರೆ ಆಮೂಲಾಗ್ರವಾಗಿ

ವೇದಾಂತಗಳಲ್ಲಿ ಜಗತ್ಕಾರಣನಾಗಿ ಪ್ರತಿಪಾದ್ಯನಾದವನು ಬ್ರಹ್ಮನೊಬ್ಬನೆ ಎಂದು ಹೇಳಲಾಯಿತು. ಆದರೆ ವೇದಾಂತಗಳಲ್ಲಿ ಸೃಷ್ಟಿಯ ಬಗ್ಗೆ ವಿಭಿನ್ನ ನಿರೂಪಣೆಗಳಿವೆ-

ತೈತ್ತಿರೀಯದಲ್ಲಿ- 'ಆತ್ಮನಃ ಆಕಾಶ ಸಂಭೂತಃ'

ಛಾಂದೋಗ್ಯದಲ್ಲಿ - 'ತತ್ತೇಜೋ ಅಸೃಜತ'।

ಪ್ರಶ್ನೋಪನಿಷತ್ತಿನಲ್ಲಿ - 'ಸ ಪ್ರಾಣಮಸೃಜತ'

ಐತರೇಯದಲ್ಲಿ 'ಸ ಇಮಾನ್ ಲೋಕಾನಸೃಜತ।

ಅಂಭೋ ಮರೀಚಿಃ ಮರಮಾಪಃ'

ತೈತ್ತಿರೀಯದಲ್ಲಿ- 'ಅಸದ್ವಾ ಇದಮಗ್ರ ಆಸೀತ್ ತತೋ ವೈ ಸದಜಾಯತ।

ಹೀಗೆ ಸೃಷ್ಟಿಕಾರಣದ ಬಗ್ಗೆ ಸೃಷ್ಟಿಯ ಕ್ರಮದ ಬಗ್ಗೆ ಒಂದೊಂದು ಕಡೆ ಒಂದೊಂದು ನಿರೂಪಣೆ ಇದೆ. ಆದ್ದರಿಂದ ಸೃಷ್ಟಿಯ ಬಗ್ಗೆ ನಿರ್ಧಾರ ಹೇಗೆ?

ಸೃಜ್ಯವಾದ ವಸ್ತುವಿನ ಬಗ್ಗೆ ವಿಭಿನ್ನ ಹೇಳಿಕೆಗಳಿದ್ದರೂ ಸೃಷ್ಟಿಕರ್ತನ ಬಗ್ಗೆ ವೇದಾಂತಗಳಲ್ಲಿ ವಿರೋಧವಿಲ್ಲ. ತೈತ್ತಿರೀಯದಲ್ಲಿ ಆಕಾಶಾದಿಗಳ ಕಾರಣವಾಗಿ ಯಾವ ಚೇತನವು ನಿರೂಪಿಸಲ್ಪಟ್ಟಿದೆಯೋ ಅದೇ 'ಆತ್ಮ' 'ಸತ್' 'ಆಕಾಶ' ಮುಂತಾದ ಬೇರೆಬೇರೆ ಹೆಸರುಗಳಿಂದ ಎಲ್ಲ ಕಡೆಯೂ ಹೇಳಲ್ಪಟ್ಟಿದೆ. ಆದ್ದರಿಂದ ಬ್ರಹ್ಮಕಾರಣತಾವಾದದಲ್ಲಿ ವೈಮತ್ಯವಿಲ್ಲ. ಕಾರ್ಯ ಪ್ರಪಂಚದ ಸೃಷ್ಟಿಯಲ್ಲಿ ವಿಭಿನ್ನತೆಗೆ 'ನ ವಿಯದಶ್ರುತೇಃ' (2.3.1) ಎಂಬ ಸೂತ್ರದಲ್ಲಿ ಸಮಾಧಾನ ನೀಡುತ್ತಾರೆ.

ಈ ಸೂತ್ರದಲ್ಲಿ 'ಕಾರಣತ್ವೇನ' ಎಂಬ ಪದವನ್ನು 'ಕಾರಣತ್ವೇ+ನ' ಎಂದೂ 'ಕಾರಣತ್ವೇನ' ಎಂದೂ ಚ್ಛೇದ ಮಾಡಬೇಕು. 'ಆಕಾಶಾದಿಷು ಕಾರಣತ್ವೇ ನ ವಿಗಾನಂ' ಆಕಾಶಾದಿಗಳ ಕಾರಣದ ವಿಷಯದಲ್ಲಿ ವಿಪ್ರತಿಪತ್ತಿ ಇಲ್ಲ. ಏಕೆಂದರೆ, 'ಕಾರಣತ್ವೇನ ಯಥಾವ್ಯಪದಿಷ್ಟೋಕ್ತೇಃ' ಒಂದು ಶಾಖೆಯಲ್ಲಿ ಕಾರಣ ಸ್ವರೂಪವನ್ನು ಹೇಳಿದಂತೆಯೇ ಇನ್ನೊಂದರಲ್ಲಿ ಹೇಳಲಾಗಿದೆ, ಎಂದರ್ಥ.

## ಚಂದ್ರಿಕಾದಲ್ಲಿ ಮಾಡಿರುವ ವಿಮರ್ಶೆ

1. ಈ ವಿಷಯ ಅಧ್ಯಾಯಕ್ಕಾಗಲೀ ಪಾದಕ್ಕಾಗಲೀ ಸಂಗತವಲ್ಲ. ಶ್ರುತಿವಿರೋಧ ಪರಿಹಾರಕ್ಕಾಗಿ ಎರಡನೆಯ ಅಧ್ಯಾಯವಿದೆ. ಎರಡನೆಯ ಅಧ್ಯಾಯದ ಮೂರು ಮತ್ತು ನಾಲ್ಕನೆಯ ಪಾದಗಳಲ್ಲಿ ವೇದಗಳಲ್ಲೇ ಪರಸ್ಪರ ವಿರೋಧ ಕಂಡುಬಂದಾಗ ಅದರ ಪರಿಹಾರವನ್ನು ಮಾಡಲಾಗಿದೆ, ಎಂದು ಶಾಂಕರಭಾಷ್ಯದಲ್ಲೇ ಹೇಳಲಾಗಿದೆ. ಅಂದಮೇಲೆ, ಈ ವಿಷಯವು ಅಲ್ಲಿ ಸಂಗತ, ಸಮನ್ವಯಾಧ್ಯಾಯದಲ್ಲಿ ಅಸಂಗತ. ಇದು ಪ್ರಕೃತಿಗೆ ಶಾಬ್ದತ್ವವನ್ನು ನಿರಾಕರಿಸುವ ಪಾದ. ಹಿಂದಿನ ಸೂತ್ರಗಳಲ್ಲಿ, ಮುಂದಿನ ಸೂತ್ರಗಳಲ್ಲೂ

ಅದನ್ನೇ ಮಾಡಲಾಗುತ್ತದೆ. ಅಂದಮೇಲೆ ಮಧ್ಯದ ಈ ಸೂತ್ರ ಪೂರ್ವಾಪರ ಅಸಂಗತವಾದ ವಿಷಯವನ್ನು ಹೇಳುವಂತಿದೆ.

2. ಅಲ್ಲದೆ, ತೈತ್ತಿರೀಯದಲ್ಲಿ ಆತ್ಮನಿಂದ ಆಕಾಶವೆಂದಿದ್ದಾರೆ. ಇನ್ನೊಂದೆಡೆ 'ತತ್ತೇಜೋ ಅಸೃಜತ' ಎಂದಿದೆ. ಇವೆರಡಕ್ಕೆ ವಿರೋಧವೇನಿದೆ? ಎರಡನೆಯ ವಾಕ್ಯದಲ್ಲಿ 'ಆಕಾಶವು ಬ್ರಹ್ಮನಿಂದ ಹುಟ್ಟಿಲ್ಲ' ಎಂದಿಲ್ಲವಲ್ಲ? ಆಕಾಶ ವಾಯುಗಳನ್ನು ಬಿಟ್ಟು ತೇಜಸ್ಸನ್ನು ಹೇಳಲಾಗಿದೆ ಅಷ್ಟೆ. ಅನುಕ್ತಿ ವಿರೋಧವಲ್ಲ. ಆದ್ದರಿಂದ ಉತ್ಪತ್ತಿ ಕ್ರಮದಲ್ಲಿ ವಿರೋಧವಿದೆ, ಎಂಬ ಪೂರ್ವಪಕ್ಷ ಅಸಂಗತ.

## ರಾಮಾನುಜ ಭಾಷ್ಯದಲ್ಲಿ ಹೇಳಿರುವ ಸೂತ್ರಾರ್ಥ

**1. ಕಾರಣತ್ವೇನ ಚಾಕಾಶಾದಿಷು ಯಥಾವ್ಯಪದಿಷ್ಟೋಕ್ತೇಃ-** ಈ ಜಗತ್ತಿಗೆ ಬ್ರಹ್ಮ ಕಾರಣವಲ್ಲ. ಛಾಂದೋಗ್ಯದಲ್ಲಿ 'ಸದೇವ ಸೋಮ್ಯ' ಎಂದು ಸತ್ ವಸ್ತುವಿನಿಂದಲೂ ತೈತ್ತಿರೀಯದಲ್ಲಿ 'ಅಸದೇವೇದಮಗ್ರ ಆಸೀತ್' ಎಂದು ಅಸತ್ತಿನಿಂದಲೂ ಸೃಷ್ಟಿಯನ್ನು ಹೇಳಲಾಗಿದೆ. ಬ್ರಹ್ಮ ಸತ್, ಅಸತ್ ಉಭಯ ರೂಪನಾಗಲು ಸಾಧ್ಯವಿಲ್ಲ. ಆದರೆ ಪ್ರಧಾನದ ಸ್ವರೂಪವು ನಿತ್ಯವಾದುದರಿಂದ ಸತ್ ಎಂದೂ ಸೃಷ್ಟಿಕಾಲದಲ್ಲಿ ಪರಿಣಾಮ ಹೊಂದುವುದರಿಂದ ಅಸತ್ ಎಂದೂ ಅದನ್ನು ವ್ಯವಹರಿಸಬಹುದು. ಅಲ್ಲದೆ, 'ತದ್ಧೇದಂ ಅವ್ಯಾಕೃತಮಾಸೀತ್' ಎಂದು ಪ್ರಧಾನದಲ್ಲಿ ಪ್ರಲಯವನ್ನು ಹೇಳಿ 'ತತ್ ನಾಮ ರೂಪಾಭ್ಯಾಂ ವ್ಯಾಕ್ರಿಯತ್' ಎಂದು ಅದರಿಂದಲೇ ಸೃಷ್ಟಿಯನ್ನು ಹೇಳಲಾಗಿದೆ. ಆದ್ದರಿಂದ ಪ್ರಕೃತಿಯೇ ಜಗತ್ಕಾರಣ ಎಂದು ಪೂರ್ವಪಕ್ಷ.

'ಸತ್ಯಂ ಜ್ಞಾನಂ ಅನಂತಂ ಬ್ರಹ್ಮ' ಎಂದು ತೈತ್ತಿರೀಯದಲ್ಲಿ ಬ್ರಹ್ಮನ ಸ್ವರೂಪವನ್ನು ಹೇಳಿ ಅದೇ ಬ್ರಹ್ಮನನ್ನು 'ತಸ್ಮಾದ್ವಾ ಏತಸ್ಮಾತ್ ಆತ್ಮನಃ ಆಕಾಶಃ ಸಂಭೂತಃ' ಎಂದು ಪರಾಮರ್ಶ ಮಾಡಿ (ಯಥಾವ್ಯಪದಿಷ್ಟೋಕ್ತೇಃ) ಆಕಾಶಾದಿ ಕಾರಣನನ್ನಾಗಿ ಹೇಳಲಾಗಿದೆ. ಆದ್ದರಿಂದ ಬ್ರಹ್ಮನೇ ಜಗತ್ಕಾರಣ, ಪ್ರಧಾನವಲ್ಲ.

**2. ಸಮಾಕರ್ಷಾತ್ -** 'ಅಸದ್ವಾ ಇದಮಗ್ರ ಆಸೀತ್' ಎಂಬಲ್ಲೂ ಹಿಂದೆ ಹೇಳಿದ ಆತ್ಮನನ್ನೇ ಪರಾಮರ್ಶ ಮಾಡಲಾಗಿದೆ. ಆನಂದಮಯ ಬ್ರಹ್ಮನನ್ನು ನಿರೂಪಿಸಿ 'ಸೋಽಕಾಮಯತ' ಎಂದು ಅವನಿಂದಲೇ ಸೃಷ್ಟಿಯನ್ನು ಬ್ರಾಹ್ಮಣವಾಕ್ಯ ನಿರೂಪಿಸಿ ಅದಕ್ಕೆ ಸಂವಾದಿಯಾಗಿ 'ತದಪ್ಯೇಷ ಶ್ಲೋಕೋ ಭವತಿ' ಎಂದು ಹೇಳಿ 'ಅಸದ್ವಾ ಇದಮಗ್ರ' ಎಂಬ ಶ್ಲೋಕವನ್ನು ಉದಾಹರಿಸಲಾಗಿದೆ. ಆದ್ದರಿಂದ ಇಲ್ಲೂ 'ಅಸತ್' ಶಬ್ದದಿಂದ ಹಿಂದೆ ಹೇಳಿದ ಆತ್ಮನನ್ನೇ ಪರಾಮರ್ಶ ಮಾಡಿಕೊಳ್ಳಬೇಕು. ಸೃಷ್ಟಿಗಿಂತ ಮೊದಲು ಬ್ರಹ್ಮನಿಗೆ ನಾಮರೂಪಾತ್ಮಕವಾದ ಪ್ರಪಂಚ ಭಾವ ಇಲ್ಲದಿರುವುದರಿಂದ ಬ್ರಹ್ಮನೂ 'ಅಸತ್' ಎನಿಸಬಹುದು.

**ಚಂದ್ರಿಕಾದಲ್ಲಿ ಮಾಡಿರುವ ವಿಮರ್ಶೆ**

'ತದ್ಧಿ ಅವ್ಯಾಕೃತಂ ಆಸೀತ್-ನಾಮರೂಪಾಭ್ಯಾಂ ವ್ಯಾಕ್ರಿಯತ್' ಎಂದು ಸೃಷ್ಟಿ ಪ್ರಲಯಗಳನ್ನು ಹೇಳುವ ಈ ವಾಕ್ಯದಲ್ಲಿ ಪ್ರಧಾನಕ್ಕೆ ಪೋಷಕವಾದ, ಅಸಾಧಾರಣವಾದ ಲಿಂಗವಾಗಲೀ, ರೂಢ ಶಬ್ದವಾಗಲೀ ಇಲ್ಲ. 'ಅವ್ಯಾಕೃತಂ-ವ್ಯಾಕ್ರಿಯತ' ಶಬ್ದಗಳನ್ನು ಬ್ರಹ್ಮನಿಗೂ ರಾಮಾನುಜದರ್ಶನದಲ್ಲಿ ಅನ್ವಯಿಸಬಹುದು. ಹೀಗಾಗಿ ಈ ಸಾಧಾರಣಶಬ್ದ ಪೂರ್ವಪಕ್ಷಕ್ಕೆ ದುರ್ಬಲವಾದ ಆಧಾರವಾಗಿದೆ.

**॥ ಇಲ್ಲಿಗೆ ಆಕಾಶಾಧಿಕರಣ ಮುಗಿಯಿತು ॥**

# ಸಮಾಕರ್ಷಾಧಿಕರಣ

**ಸರ್ವಶಬ್ದಾನಾಂ ಪರಮಾತ್ಮವಾಚಕತ್ವೇ ಕಥಮನ್ಯತ್ರ ವ್ಯವಹಾರಃ ಇತಿ । ಅತೋ ಬ್ರವೀತಿ-**

**ಓಂ ॥ ಸಮಾಕರ್ಷಾತ್ ॥ ಓಂ**

**ಪರಮಾತ್ಮವಾಚಿನಃ ಶಬ್ದಾಃ ಅನ್ಯತ್ರ ಸಮಾಕೃಷ್ಯ ವ್ಯವಹ್ರಿಯಂತೇ ।**

**ಪರಸ್ಯ ವಾಚಕಾಃ ಶಬ್ದಾಃ ಸಮಾಕೃಷ್ಯೇತರೇಷ್ವಪಿ ।**
**ವ್ಯವಹ್ರಿಯಂತೇ ಸತತಂ ಲೋಕವೇದಾನುಸಾರತಃ ॥**

**ಇತಿ ಪಾದ್ಮೇ ॥ 16 ॥**

ಎಲ್ಲ ಶಬ್ದಗಳೂ ಪರಮಾತ್ಮ ವಾಚಕಗಳಾದರೆ ಲೌಕಿಕ ವಸ್ತುಗಳಲ್ಲಿ ಅವುಗಳ ಪ್ರಯೋಗ ಹೇಗೆ? ಆದಕ್ಕಾಗಿ ಈ ಸೂತ್ರವನ್ನು ಹೇಳಿದ್ದಾರೆ.

ಪರಮಾತ್ಮನಿಗೆ ಪರಮಮುಖ್ಯವೃತ್ತಿಯಿಂದ ವಾಚಕವಾದ ಶಬ್ದಗಳನ್ನೇ ಲೌಕಿಕ ವಸ್ತುಗಳಲ್ಲಿ ಸಮಾಕರ್ಷ ಮಾಡಿ-ಮುಖ್ಯವೃತ್ತಿಯಿಂದ ಪ್ರಯೋಗಿಸಲಾಗುತ್ತದೆ. ಇದರಿಂದ ಲೋಕವ್ಯವಹಾರ ನಡೆಯುತ್ತದೆ. ಪಾದ್ಮಪುರಾಣದಲ್ಲಿ ಹೀಗಿದೆ-

ಪರಮಾತ್ಮವಾಚಕವಾದ ಶಬ್ದಗಳನ್ನೇ ಸಮಾಕರ್ಷ ಮಾಡಿ ಲೋಕವೇದಗಳಿಗೆ ಅನುಗುಣವಾಗಿ ಇತರ ವಸ್ತುಗಳಲ್ಲಿ ವ್ಯವಹರಿಸಲಾಗುತ್ತದೆ.

**ವಿವರಣೆ-** 1. ಈ ಅಧಿಕರಣದಲ್ಲಿ ಯಾವ ಶಬ್ದವನ್ನೂ ಸಮನ್ವಯ ಮಾಡಲಾಗಿಲ್ಲ. ಸಮನ್ವಯದ ಬಗ್ಗೆ ಬರುವ ಆಕ್ಷೇಪವನ್ನಷ್ಟೇ ಇಲ್ಲಿ ಪರಿಹರಿಸಲಾಗಿದೆ. ಆದ್ದರಿಂದ ಹಿಂದಿನ ಆಕಾಶಾಧಿಕರಣಕ್ಕೆ ಇದು ಸೇರಬೇಕು. ತತ್ತ್ವಪ್ರದೀಪಿಕಾದಲ್ಲೂ ಇದನ್ನು ಪ್ರತ್ಯೇಕ ಅಧಿ

ಕರಣವೆಂದು ಪರಿಗಣಿಸಿದಂತೆ ತೋರುವುದಿಲ್ಲ. ಅನುವ್ಯಾಖ್ಯಾನದಲ್ಲೂ ಪೂರ್ವಪಕ್ಷ ಸಿದ್ಧಾಂತ ಯುಕ್ತಿಗಳನ್ನು ಅಧಿಕರಣಕ್ಕೆ ಅನುಗುಣವಾಗಿ ಸಂಗ್ರಹಿಸುವ ಸಂದರ್ಭದಲ್ಲಿ ಹಿಂದಿನ ಆಕಾಶಾಧಿಕರಣದ ಯುಕ್ತಿಯನ್ನೂ ಮುಂದಿನ ಪ್ರಕೃತ್ಯಧಿಕರಣದ ಯುಕ್ತಿಯನ್ನೂ ಸಂಗ್ರಹಿಸಲಾಗಿದೆ. ಈ ಅಧಿಕರಣದ ಯುಕ್ತಿಯನ್ನು ಹೇಳಿಲ್ಲ. ಇದರಿಂದಲೂ ಇದೊಂದು ಪ್ರತ್ಯೇಕ ಅಧಿಕರಣವಲ್ಲ, ಎಂದು ತಿಳಿಯುತ್ತದೆ. ಆದರೆ ತತ್ತ್ವಪ್ರಕಾಶಿಕಾದಲ್ಲಿ ಇದನ್ನು ಪ್ರತ್ಯೇಕ ಅಧಿಕರಣವೆಂದು ಪರಿಗಣಿಸಲಾಗಿದೆ. ಕಾರಣ, ಈ ಅಧಿಕರಣದಿಂದ 'ಪ್ರತ್ಯೇಕವಾದ ನ್ಯಾಯ' ಲಭ್ಯವಾಗುತ್ತದೆ. ಶ್ರುತ್ಯರ್ಥನಿರ್ಣಾಯಕನ್ಯಾಯಗಳನ್ನು ನಿರೂಪಿಸುವುದೇ ಸೂತ್ರಗಳ ಗುರಿ. ಒಂದೊಂದು ನ್ಯಾಯ(ನಿಯಮ)ವನ್ನು ಹೇಳುವ ಅನೇಕ ಸೂತ್ರಗಳ ಗುಂಪು ಒಂದು ಅಧಿಕರಣ, ಎಂದು ಪೂರ್ವ ಮೀಮಾಂಸಾದಲ್ಲಿ ಅಂಗೀಕರಿಸಲಾಗಿದೆ. ಅದರಂತೆ ಪ್ರಕೃತದಲ್ಲೂ ಇದನ್ನೊಂದು ಪ್ರತ್ಯೇಕ ಅಧಿಕರಣವೆಂದು ಪರಿಗಣಿಸುವುದರಲ್ಲಿ ತಪ್ಪಿಲ್ಲ, ಎಂದು ಚಂದ್ರಿಕಾದಲ್ಲಿ ಹೇಳಲಾಗಿದೆ.

2. ಸಕಲ ಶಬ್ದಗಳೂ ಪರಮಾತ್ಮ ವಾಚಕಗಳಾದರೆ ಜಗತ್ತಿನಲ್ಲಿ ಶಾಬ್ದವ್ಯವಹಾರ ನಡೆಯುವುದು ಹೇಗೆ? ಇದಕ್ಕೆ ಹಿಂದೆ ಮೂರು ಸೂತ್ರಗಳಲ್ಲಿ ಪರಿಹಾರವನ್ನು ನೀಡಲಾಗಿದೆ-

ಅ. ಸಾಕ್ಷಾದಪಿ ಅವಿರೋಧಂ ಜೈಮಿನಿಃ - (1.2.28) ಈ ಸೂತ್ರದಲ್ಲಿ ಪರಮಾತ್ಮವಾಚಕವಾದ ಅಗ್ನಿ ಮೊದಲಾದ ಶಬ್ದಗಳನ್ನೇ, ಅನಭಿಜ್ಞರು ಲೋಕವ್ಯವಹಾರ ಸಿದ್ಧಿಗಾಗಿ ಬೆಂಕಿಯಲ್ಲಿ ಪ್ರಯೋಗಿಸುತ್ತಾರೆ ಎನ್ನಲಾಗಿದೆ. ಆದರೆ, ಈ ಸಮಾಧಾನದ ಮೇಲೆ ಹೀಗೆ ಆಕ್ಷೇಪಿಸಬಹುದು- ಹಾಗಿದ್ದರೆ ಅಗ್ನಿ ಎಂಬ ಶಬ್ದವನ್ನು ನೀರಿನಲ್ಲಿ ಏಕೆ ಪ್ರಯೋಗಿಸಬಾರದು? ಅನಭಿಜ್ಞನೊಬ್ಬ ಆ ಶಬ್ದವನ್ನು ನೀರಿನಲ್ಲಿ ಪ್ರಯೋಗಿಸಿದರೆ ತಪ್ಪೇನು? ಆದ್ದರಿಂದ ಅಜ್ಞಪ್ರಯೋಗದಿಂದ ಲೋಕವ್ಯವಹಾರ ಎನ್ನುವುದು ಸರಿಯಲ್ಲ.

ಆ. ಆನುಮಾನಿಕಾಧಿಕರಣದಲ್ಲಿ (1.4.1) ಆಕಾಶದೊಳಗೆ ಆಕಾಶನಾಮಕವಾದ ವಿಷ್ಣುವಿನ ರೂಪವಿದೆ. ಅವನಿಗೆ ದೇಹದಂತೆ ಈ ಜಡವಾದ ಆಕಾಶವಿದೆ. ಹೀಗಾಗಿ ವಿಷ್ಣುವಾಚಕವಾದ ಆಕಾಶ ಶಬ್ದವನ್ನು ಅವನ ದೇಹದಂತಿರುವ ಜಡವಾದ ಗಗನದಲ್ಲಿ ಪ್ರಯೋಗಿಸಲಾಗುತ್ತದೆ, ಎನ್ನಲಾಗಿದೆ. ಆದರೆ ಇದರ ಮೇಲೂ ಆಕ್ಷೇಪವಿದೆ. ಪ್ರವಾಹದ ಸಂಬಂಧದಿಂದ ದಡವನ್ನು 'ಗಂಗೆ' ಎಂದು ಕರೆದರೆ ಅದನ್ನು ಲಾಕ್ಷಣಿಕಪ್ರಯೋಗ ಎನ್ನಲಾಗುತ್ತದೆ. ಅದರಂತೆ ಪರಮಾತ್ಮನ ಸಂಬಂಧದಿಂದ ಲೌಕಿಕ ವಸ್ತುಗಳಿಗೆ ಆಕಾಶಾದಿ ಶಬ್ದಗಳನ್ನು ಪ್ರಯೋಗಿಸಿದರೆ ಆಗ ಆ ಶಬ್ದಗಳೆಲ್ಲ ಲಾಕ್ಷಣಿಕಗಳೆಂದಂತಾಗುತ್ತದೆ.

ಇ. ಕಲ್ಪನೋಪದೇಶಾಚ್ಚ- (1.4.11) ಇತ್ಯಾದಿ ಸೂತ್ರದಲ್ಲಿ ಅಗ್ನ್ಯಾದಿ ಶಬ್ದಗಳಿಗೆ ಲೌಕಿಕ ವಸ್ತುಗಳಲ್ಲಿ ರೂಢಿ ಎಂಬ ವೃತ್ತಿ ಇರುವುದರಿಂದ ಪ್ರಯೋಗ ಮಾಡಬಹುದು, ಎನ್ನಲಾಗಿದೆ. ಹೀಗೆ ಹೇಳಿದರೆ ಅಗ್ನ್ಯಾದಿ ಶಬ್ದಗಳಿಗೆ ವಿಷ್ಣುವಿನಲ್ಲೂ ರೂಢಿ, ಬೆಂಕಿಯಲ್ಲೂ ರೂಢಿ ಎಂದಂತಾಗುತ್ತದೆ. ಆಗ ಆ ಶಬ್ದಗಳು ವಿಷ್ಣುವಿನಲ್ಲಿ ಮುಖ್ಯ, ಬೆಂಕಿಯಲ್ಲಿ

ಅಮುಖ್ಯವೆಂದು ನಿರ್ಣಯಿಸಲು ಆಗುವುದಿಲ್ಲ. ಅಂದಮೇಲೆ ಸಮನ್ವಯ ಸೂತ್ರದಲ್ಲೂ 'ತತ್ತು- ವಿಷ್ಣುವೇ ಶಾಸ್ತ್ರಗಮ್ಯ' ಎಂದು ನಿರ್ಧಾರಾತ್ಮಕವಾಗಿ ಹೇಳಲು ಬರುವುದಿಲ್ಲ.

ಹೀಗೆ ಹಿಂದೆ ಹೇಳಿರುವ ಎಲ್ಲ ಸಮಾಧಾನಗಳ ಮೇಲೂ ಆಕ್ಷೇಪವಿರುವುದರಿಂದ ಈ ಸೂತ್ರದ ಅಗತ್ಯವಿದೆ.

3. ಎಲ್ಲ ಶಬ್ದಗಳೂ, ಪರಮಮುಖ್ಯವೃತ್ತಿಯಿಂದ ವಿಷ್ಣುವಾಚಕಗಳು. ಮುಖ್ಯವೃತ್ತಿಯಿಂದ ಲೌಕಿಕ ವಸ್ತುಗಳನ್ನೂ ಅವು ಹೇಳುತ್ತವೆ. ಹೀಗಾಗಿ ಎರಡೂ ಕಡೆಯೂ ಸಮಾನ ಎಂಬ ಆಕ್ಷೇಪಕ್ಕೆ ಅವಕಾಶವಿಲ್ಲ. ಇನ್ನು ಅವ್ಯವಸ್ಥೆಗೂ ಅವಕಾಶವಿಲ್ಲ. ಲೋಕವ್ಯವಹಾರ, ವೇದದ ಪ್ರಯೋಗಗಳನ್ನು ನೋಡಿ ಯಾವ ಶಬ್ದಕ್ಕೆ ಯಾವ ಲೌಕಿಕ ವಸ್ತು ಅರ್ಥವೆಂದು ನಿರ್ಧರಿಸಲಾಗುತ್ತದೆ. ಅದಕ್ಕೆ ವಿರುದ್ಧವಾಗಿ ಅಜ್ಞನೊಬ್ಬ ಪ್ರಯೋಗಿಸಿದರೆ ಆ ಪ್ರಯೋಗ ಅಸಾಧುವೆನಿಸುತ್ತದೆ. ಸಾಕ್ಷಾತ್ ರೂಢಿಯನ್ನೇ ಹೇಳುವುದರಿಂದ ಲಕ್ಷಣಾ ಪ್ರಸಂಗವೂ ಇಲ್ಲ. 'ಸಮನ್ವಯಾಧಿಕರಣದಲ್ಲಿ ಸಕಲ ಶಬ್ದಗಳಿಗೂ ಪರಮ ಮುಖ್ಯ ವೃತ್ತಿಯಿಂದ ವಿಷ್ಣುವೇ ಅರ್ಥ' ಎಂದು ನಿರ್ಧರಿಸಲಾಗುವುದರಿಂದ ಲೌಕಿಕ ವಸ್ತುಗಳಲ್ಲಿ ಮುಖ್ಯವೃತ್ತಿಯನ್ನು ಅಂಗೀಕರಿಸಲು ಬಾಧಕವೂ ಇಲ್ಲ. ॥ ಸೂತ್ರ 16 ॥

**ತರ್ಹಿ ಕಥಂ ತೇಷಾಂ ಶಬ್ದಾನಾಂ ಜಗತಿ ಪ್ರಸಿದ್ಧಿಃ-**

## ಓಂ ॥ ಜಗದ್ವಾಚಿತ್ವಾತ್ ॥ ಓಂ

**ಜಗತಿ ವ್ಯವಹಾರೋ ಲೋಕಸ್ಯ । ನ ತು ಪರಮಾತ್ಮನಿ ತಥಾ । ಅತೋ ಜಗತಿ ಪ್ರಸಿದ್ಧಿಃ ಶಬ್ದಾನಾಂ ॥ 17 ॥**

ಎಲ್ಲ ಶಬ್ದಗಳಿಗೂ ವಿಷ್ಣುವೇ ಮುಖ್ಯಾರ್ಥನಾದರೆ ಆ ಶಬ್ದಗಳು ಇತರ ವಾಚಕಗಳಾಗಿ ಲೋಕದಲ್ಲಿ ಹೇಗೆ ಪ್ರಸಿದ್ಧವಾಗಿವೆ? ಅದಕ್ಕೆ ಈ ಸೂತ್ರ ಸಮಾಧಾನಿಸಿದೆ.

ಸಾಮಾನ್ಯ ಜನರು ಲೌಕಿಕ ವಸ್ತುಗಳಲ್ಲೇ ಶಬ್ದಗಳನ್ನು ಪ್ರಯೋಗಿಸುವವರು. ಪರಮಾತ್ಮನಲ್ಲಿ ಲೋಕವ್ಯವಹಾರವಿಲ್ಲ. ಆದ್ದರಿಂದ ಅಜ್ಞರೂಢಿಯಿಂದ ಶಬ್ದಗಳು ಲೌಕಿಕ ವಸ್ತುಗಳಲ್ಲಿ ವಾಚಕಗಳಾಗಿ ಪ್ರಸಿದ್ಧವಾಗಿವೆ.

**ವಿವರಣೆ -** ಮುಖ್ಯತಃ ಪರಮಾತ್ಮವಾಚಕವಾದ ಅಗ್ನ್ಯಾದಿ ಶಬ್ದಗಳನ್ನೂ ಸೆಳೆದು ಬೆಂಕಿ ಮೊದಲಾದ ಲೌಕಿಕ ವಸ್ತುಗಳಲ್ಲಿ ಹೆಸರಿಸುವುದಾದರೆ ಆ ಶಬ್ದಗಳ ಅರ್ಥ ಪರಮಾತ್ಮ ಎಂದೇ ಜಗತ್ತಿನಲ್ಲಿ ಪ್ರಸಿದ್ಧಿ ಇರಬೇಕಲ್ಲವೆ? ಬೆಂಕಿಯು ಅಗ್ನಿ ಶಬ್ದದ ಅರ್ಥ, ಎಂದು ಪ್ರಸಿದ್ಧಿಗೆ ಹೇಗೆ ಬಂತು? ಅಗ್ನಿಯಂತೆ ಪ್ರಜ್ವಲಿಸುವ ತೇಜಸ್ಸುಳ್ಳ ಬ್ರಹ್ಮಚಾರಿಗೆ ಅಗ್ನಿ ಎನ್ನುತ್ತೇವೆ. ಮಕ್ಕಳು ಚಿತ್ರದಲ್ಲಿರುವ ಸಿಂಹವನ್ನು 'ಸಿಂಹ' ಎನ್ನುತ್ತವೆ. ಅಂದಮಾತ್ರಕ್ಕೆ ಆ ಶಬ್ದಗಳು ಅವುಗಳಲ್ಲೇ ಪ್ರಸಿದ್ಧಗಳಾಗುವುದಿಲ್ಲ ತಾನೆ? ಎಂದು ಪ್ರಶ್ನೆ.

ಸಾಮಾನ್ಯ ಜನ ಲೌಕಿಕ ವ್ಯವಹಾರದಲ್ಲೇ ಮುಳುಗಿರುತ್ತಾರೆ. ಹೀಗಾಗಿ ಅಗ್ನ್ಯಾದಿ ಶಬ್ದಗಳನ್ನು ಬೆಂಕಿಯಲ್ಲೇ ಪ್ರತಿದಿನ ಪ್ರಯೋಗ ಮಾಡಿ ಅದೇ ಮುಖ್ಯಾರ್ಥ ಎಂದು ಭಾವಿಸಿರುತ್ತಾರೆ. ಅಂದಮಾತ್ರಕ್ಕೆ ಆ ಶಬ್ದಕ್ಕೆ ಅದೇ ಮುಖ್ಯಾರ್ಥವಾಗಬೇಕಿಲ್ಲ, ಎಂದು ಸಮಾಧಾನ || ಸೂತ್ರ 17 ||

**ಓಂ || ಜೀವಮುಖ್ಯ ಪ್ರಾಣಲಿಂಗಾದಿತಿ ಚೇತ್ ತದ್ ವ್ಯಾಖ್ಯಾತಂ || ಓಂ**

**ತದಧೀನತ್ವಾತ್ ತಚ್ಛಬ್ದವಾಚ್ಯತ್ವಂ ಇತ್ಯುಕ್ತಮ್ । ತತ್ಜೀವ ಮುಖ್ಯಪ್ರಾಣಯೋಃ ಲಿಂಗಮ್ ।**

**ಅಸ್ಯ ಯದ್ಯೆಕಾಂ ಶಾಖಾಂ ಜೀವೋ ಜಹಾತಿ ಅಥ ಸಾ ಶುಷ್ಯತಿ || (ಛಾ.6.11.2)**

**"ವಾಯುನಾ ಹಿ ಸರ್ವೇ ಲೋಕಾ ನೇನೀಯಂತೇ"**

**ಇತ್ಯಾದಿ ಶ್ರುತಿಭ್ಯಃ ಇತಿ ಚೇನ್ನ। ಉಪಾಸಾತ್ರೈವಿಧ್ಯಾತ್ ಇತಿ ವ್ಯಾಖ್ಯಾತತ್ವಾತ್ || 18 ||**

'ತದಧೀನತ್ವಾತ್ ಅರ್ಥವತ್' (1.4.3) ಎಂಬ ಸೂತ್ರದಲ್ಲಿ ಶಬ್ದ ಪ್ರವೃತ್ತಿನಿಮಿತ್ತವು ವಿಷ್ಣುವಿನ ಅಧೀನವಾದುದರಿಂದ ವಿಷ್ಣು ದುಃಖೀ ಮೊದಲಾದ ಶಬ್ದಗಳಿಂದ ವಾಚ್ಯ ಎಂದು ಹಿಂದೆ ಹೇಳಲಾಗಿದೆ. ಶಬ್ದ ಪ್ರವೃತ್ತಿಗೆ ಕಾರಣವಾದ 'ತದಧೀನತ್ವ' ಜೀವ ಮತ್ತು ಮುಖ್ಯ ಪ್ರಾಣರ ಲಿಂಗ. 'ಅಸ್ಯ ಯದೇಕಾಂ ಶಾಖಾಂ' ಎಂಬ ಛಾಂದೋಗ್ಯಶ್ರುತಿ ವೃಕ್ಷಾದಿಗಳು ಅಲ್ಲಿರುವ ಜೀವನ ಅಧೀನ ಎನ್ನುತ್ತದೆ. 'ವಾಯುನಾ ಹಿ' ಎಂಬ ಶ್ರುತಿಯು ಸರ್ವವೂ ಮುಖ್ಯಪ್ರಾಣನ ಅಧೀನವೆನ್ನುತ್ತದೆ. (ಆದ್ದರಿಂದ ಅವರೂ ಸರ್ವಶಬ್ದವಾಚ್ಯರಾಗ ಬೇಕಾದೀತು) ಈ ಆಕ್ಷೇಪ ಸರಿಯಲ್ಲ. ಇದನ್ನು ಹಿಂದೆಯೇ 'ಉಪಾಸಾತ್ರೈವಿಧ್ಯಾತ್' ಎಂದು ವಿವರಿಸಲಾಗಿದೆ.

**ವಿವರಣೆ :** 1. ಶಬ್ದದ ಪ್ರವೃತ್ತಿ ನಿಮಿತ್ತವು ಯಾರ ಅಧೀನವೋ ಅವನು ಆ ಶಬ್ದದಿಂದ ವಾಚ್ಯ ಎಂದು ಹಿಂದೆ ಹೇಳಲಾಗಿದೆ. ಹಾಗಿದ್ದರೆ ಸರ್ವಶಬ್ದವಾಚ್ಯತ್ವ, ಜೀವಾತ್ಮ ಮುಖ್ಯಪ್ರಾಣರಿಗೂ ಇರಬೇಕಾಗುತ್ತದೆ. ದೇಹ, ಮರ ಮುಂತಾದ ಜಡವಸ್ತುಗಳಲ್ಲಿರುವ ಜೀವನು ಆ ಜಡವಸ್ತುಗಳಿಗೆ ನಿಯಾಮಕ. ಛಾಂದೋಗ್ಯಶ್ರುತಿಯೂ ಹಾಗೆ ಹೇಳುತ್ತದೆ.

'ಅಥ ಯಾಂ ಜೀವೋ ಜಹಾತಿ ಸಾ ಶುಷ್ಯತಿ'

'ಜೀವನು ಯಾವ ಮರದ ಕೊಂಬೆಯನ್ನು ಬಿಡುತ್ತಾನೋ ಆ ಕೊಂಬೆ ಒಣಗುತ್ತದೆ'. ಹೀಗೆ ಸಮಷ್ಟಿಯಾಗಿ ಜೀವರು ಆಯಾಯ ಜಡಗಳಿಗೆ ನಿಯಾಮಕರಾದುದರಿಂದ ಜಡವಸ್ತುಗಳು ತತ್ತಜ್ಜೀವರ ಅಧೀನವಾಗಿವೆ. ಅಂದಮೇಲೆ ಆ ಜಡಗಳಿಗೆ ವಾಚಕವಾದ ಶಬ್ದಗಳು ಅವಕ್ಕೆ ನಿಯಾಮಕರಾದ ಚೇತನಗಳಿಗೂ ವಾಚಕಗಳಾಗಲಿ.

'ವಾಯುನೈವ ಹಿ ಸರ್ವೇ ಲೋಕಾ ನೇನೀಯಂತೇ'

ಎಲ್ಲ ಜನರೂ ಮುಖ್ಯಪ್ರಾಣನಿಂದಲೇ ತಮ್ಮ ತಮ್ಮ ಕಾರ್ಯಗಳಲ್ಲಿ ತೊಡಗುತ್ತಾರೆ, ಎಂದಿರುವುದರಿಂದ ಸರ್ವವೂ ವಾಯುವಿನ ಅಧೀನವಾಗಿದೆ. ಹಾಗಿದ್ದ ಮೇಲೆ ವಾಯುವೂ ಸರ್ವಶಬ್ದವಾಚ್ಯನಾಗಬಹುದು, ಎಂದು ಪೂರ್ವಪಕ್ಷ.

2. ಉಪನಿಷತ್ತುಗಳಲ್ಲಿ ಅಂತರ್ಗತತಯಾ ಉಪಾಸನೆಗಾಗಿ ಅನೇಕ ವಿಷಯಗಳನ್ನು ಹೇಳಲಾಗುತ್ತದೆ. ಪ್ರಕೃತ 'ಜೀವೋ ಜಹಾತಿ' ಎಂಬಲ್ಲಿ ಜೀವನೆಂದರೆ ಜೀವಾತ್ಮನಲ್ಲ, ಅವನಲ್ಲಿರುವ ಅನಿರುದ್ಧಾಖ್ಯ ಪರಮಾತ್ಮ. ಆಯಾಯ ಜಡಪದಾರ್ಥಗಳು ಅವನ ಅಧೀನ ಎಂದರ್ಥ. ಅದರಂತೆ ವಾಯು ಎಂದರೂ ವಾಯುವಿನ ಅಂತರ್ಯಾಮಿಯಾದ ವಿಷ್ಣು ಅವನಿಂದಾಗಿ ಜನ ಸ್ವಕಾರ್ಯಗಳಲ್ಲಿ ತೊಡಗುತ್ತಾರೆ, ಎಂದೇ ಅರ್ಥ. ಆದ್ದರಿಂದ ಅವು ಜೀವ ಮತ್ತು ಮುಖ್ಯಪ್ರಾಣರ ಲಿಂಗಗಳೇ ಅಲ್ಲ, ಎಲ್ಲವೂ ಭಗವದಧೀನ. ಆದ್ದರಿಂದ ಸಕಲ ಶಬ್ದಗಳ ಪ್ರವೃತ್ತಿನಿಮಿತ್ತ ಸ್ವಾತಂತ್ರ್ಯ ಅವನಿಗೆ ಮಾತ್ರ ಇದೆ, ಅವನೇ ಸರ್ವಶಬ್ದಾರ್ಥ.

3. ಹಿಂದಿನ ಸೂತ್ರದಲ್ಲೂ (1.1.31),

ಯದ್ಯತ್ ವಿಭೂತಿಮತ್ ಸತ್ವಂ ಶ್ರೀಮದೂರ್ಜಿತಮೇವ ವಾ।
ತತ್ತದೇವಾಗಚ್ಛತ್ವಂ ಮಮ ತೇಜೋಽಂಶಸಂಭವಮ್ ॥

ಎಂಬ ಗೀತಾ ಸ್ಮೃತಿಯಲ್ಲೂ ಎಲ್ಲ ಲಿಂಗಗಳೂ ಭಗವಂತನವು ಎಂದು ವ್ಯಾಖ್ಯಾನಿಸಲಾಗಿದೆ. ಇದು ಸೂತ್ರದಲ್ಲಿರುವ 'ತದ್ವ್ಯಾಖ್ಯಾತಮ್' ಎಂಬ ಶಬ್ದದ ಅರ್ಥ.

॥ ಸೂತ್ರ 18 ॥

**ಓಂ ॥ ಅನ್ಯಾರ್ಥಂ ತು ಜೈಮಿನಿಃ ಪ್ರಶ್ನವ್ಯಾಖ್ಯಾನಾಭ್ಯಾಂ ಅಪಿ ಚೈವಮೇಕೇ ॥ ಓಂ**

**ಪರಮಾತ್ಮಜ್ಞಾನಾರ್ಥಂ ಕರ್ಮಾದಿಕಮಪಿ ವದತೀತಿ ಜೈಮಿನಿಃ।**

**ಕಸ್ಮಿನ್ನು ಭಗವೋ ವಿಜ್ಞಾತೇ ಸರ್ವಮಿದಂ**
**ವಿಜ್ಞಾತಂ ಭವತೀತಿ। ತಸ್ಮೈ ಸ ಹೋವಾಚ-**
**ದ್ವೇ ವಿದ್ಯೇ ವೇದಿತವ್ಯೇ (ಮು.1.13.4)**

**'ಕಥಂ ನು ಭಗವಃ ಸ ಆದೇಶೋ ಭವತೀತಿ।**
**ಯಥಾ ಸೋಮ್ಯ ಏಕೇನ ಮೃತ್ಪಿಂಡೇನ' (ಛಾಂ.6.1.3-4)**

**ಇತ್ಯಾದಿ ಪ್ರಶ್ನವ್ಯಾಖ್ಯಾನಾಭ್ಯಾಮ್। ಏವಮಪಿ ಚೈಕೇ (ಶಾಖಿನಃ) ಪಠಂತಿ-**

**'ಯಸ್ತನ್ನ ವೇದ ಕಿಮೃಚಾ ಕರಿಷ್ಯತಿ' (ಋ.1.164.39) ಇತಿ ॥ 19 ॥**

ವೇದವು ಪರಮಾತ್ಮನ ಜ್ಞಾನಕ್ಕಾಗಿಯೇ ಕರ್ಮಗಳನ್ನು ಹೇಳುತ್ತದೆ ಎಂದು ಜೈಮಿನಿ ಆಚಾರ್ಯರು ಹೇಳುತ್ತಾರೆ. ಮುಂಡಕೋಪನಿಷತ್ತಿನಲ್ಲಿರುವ ಶೌನಕ-ಅಂಗಿರಸರ ಪ್ರಶ್ನೋತ್ತರ, ಛಾಂದೋಗ್ಯದಲ್ಲಿರುವ ಉದ್ದಾಲಕ ಶ್ವೇತಕೇತುಗಳ ಪ್ರಶ್ನೋತ್ತರಗಳಿಂದಲೂ

ಇದು ತಿಳಿಯುತ್ತದೆ. ಕೆಲವು ಶಾಖೆಯವರು ಹೀಗೆಯೇ ಹೇಳುತ್ತಾರೆ- 'ವಿಷ್ಣುವನ್ನು ತಿಳಿಯದವ ಬರೇ ವೇದ ಓದಿ ಏನು ಮಾಡುತ್ತಾನೆ?' ಎಂದು.

**ವಿವರಣೆ-** 1. ಲೌಕಿಕ ವ್ಯವಹಾರ ಸಿದ್ಧಿಗಾಗಿ ಪರಮಾತ್ಮವಾಚಕವಾದ ಶಬ್ದಗಳನ್ನು ಇತರ ವಸ್ತುಗಳಲ್ಲೂ ಪ್ರಯೋಗಿಸುವುದೇನೋ ಸರಿ. ಆದರೆ, 'ಜ್ಯೋತಿಷ್ಟೋಮಾದಿ' ವೈದಿಕ ಪದಗಳನ್ನು ಕರ್ಮಾದಿಗಳಲ್ಲಿ ಪ್ರಯೋಗ ಮಾಡುವುದು ಹೇಗೆ? ಅದರಿಂದ ಲೌಕಿಕ ಶಬ್ದ ವ್ಯವಹಾರ ಸಿದ್ಧಿಯಂತೂ ಇಲ್ಲ. ಇನ್ನು ಜ್ಯೋತಿಷ್ಟೋಮಾದಿ ಕರ್ಮಸಿದ್ಧಿಯೇ ಉಪಯೋಗವೆನ್ನಬೇಕು. ಆದರೆ, ಕರ್ಮದ ಅಗತ್ಯವಿಲ್ಲ. ಅದು ಸಿದ್ಧವಾಗದೇ ಹೋದರೂ ಬಾಧಕವೇನಿಲ್ಲ. ಏಕೆಂದರೆ, ಮೋಕ್ಷಕ್ಕೆ ಪರಮಾತ್ಮನ ಜ್ಞಾನ ಕಾರಣ, ಕರ್ಮಬೇಕಾಗಿಲ್ಲ. ಆದ್ದರಿಂದ ಕರ್ಮಬೋಧಕ ಪದಗಳು ಮುಖ್ಯತಃ ಕರ್ಮವಾಚಕಗಳಾಗಿವೆ, ಎಂದು ಪೂರ್ವಪಕ್ಷ.

2. ಕರ್ಮವು ನಿಷ್ಫಲವಲ್ಲ. ಮೋಕ್ಷಕ್ಕೆ ಬೇಕಾದ ಜ್ಞಾನವು ಕರ್ಮದಿಂದಲೇ ಬರುತ್ತದೆ. ಹೀಗೆ ಪರಮಾತ್ಮನ ಜ್ಞಾನಕ್ಕಾಗಿ ಕರ್ಮದ ಆವಶ್ಯಕತೆ ಇರುವುದರಿಂದ ಕರ್ಮವಾಚಕ ಪದಗಳನ್ನು ಸಮಾಕರ್ಷಮಾಡಿ ಜ್ಯೋತಿಷ್ಟೋಮಾದಿಗಳಲ್ಲಿ ಪ್ರಯೋಗಿಸಬೇಕಾಗುತ್ತದೆ. ಆದ್ದರಿಂದ ಆ ಪದಗಳೂ ಪರಮ ಮುಖ್ಯವೃತ್ತಿಯಿಂದ ಭಗವದ್ವಾಚಕವಾಗಿವೆ.

3. ಕರ್ಮವು ಜ್ಞಾನಸಾಧನವೆನ್ನಲು ಉಪನಿಷತ್ತಿನಲ್ಲಿ ಬರುವ ಎರಡು ಸಂವಾದಗಳನ್ನು ಭಾಷ್ಯದಲ್ಲಿ ಉದಾಹರಿಸಲಾಗಿದೆ. ಮೊದಲನೆಯದು ಅಥರ್ವಣೋಪನಿಷತ್ತಿನಲ್ಲಿ ಬರುವ ಶೌನಕ- ಅಂಗಿರಸರ ಸಂವಾದ. ಶೌನಕ ಕರ್ಮನಿಷ್ಠ. ಅವನು ಜ್ಞಾನನಿಷ್ಠರಾದ ಅಂಗಿರಸರ ಬಳಿ ಶಿಷ್ಯವೃತ್ತಿಯನ್ನು ಸ್ವೀಕರಿಸಿ, 'ಗುರುಗಳೇ, ಯಾರನ್ನು ತಿಳಿದಾಗ ಈ ಕರ್ಮಜ್ಞಾನವು ಸಾರ್ಥಕವಾಗುತ್ತದೆ?' ಎಂದು ಕೇಳಿದ. ಅದಕ್ಕೆ ಉತ್ತರವಾಗಿ ಅಂಗಿರಸರು - 'ದ್ವೇ ವಿದ್ಯೇ ವೇದಿತವ್ಯೇ- ವಿದ್ಯೆಗಳು ಪರ ಮತ್ತು ಅಪರ ಎಂದು ಎರಡು ವಿಧವಾಗಿದೆ' ಎಂದು ಉತ್ತರಿಸಿದ್ದಾರೆ. ಇಲ್ಲಿ ಬ್ರಹ್ಮಜ್ಞಾನವನ್ನು ಪರವಿದ್ಯೆ ಎಂದು ಹೇಳಿರುವುದರಿಂದ ಅಪರವಿದ್ಯೆಯಾದ ಕರ್ಮಜ್ಞಾನ ಅದಕ್ಕೆ ಸಾಧನವೆಂದು ತಿಳಿಯುತ್ತದೆ. ಅಪರವಿದ್ಯೆಯಾದ ಋಗಾದಿಗಳು ಹೇಳುವ ಕರ್ಮಗಳ ಅನುಷ್ಠಾನದಿಂದ ಪರವಿದ್ಯೆಯೆನಿಸಿದ ಬ್ರಹ್ಮಜ್ಞಾನ ಸಿದ್ಧಿಸುತ್ತದೆ, ಎಂದು ಅಂಗಿರಸರ ಅಭಿಪ್ರಾಯ.

ಎರಡನೆಯ ಸಂವಾದ ಉದ್ದಾಲಕ ಶ್ವೇತಕೇತುಗಳದು. ಅದು ಛಾಂದೋಗ್ಯದಲ್ಲಿದೆ. ಗುರುಕುಲದಿಂದ ಸ್ನಾತಕನಾಗಿ ಹೊರಬಂದ ಶ್ವೇತಕೇತುವಿಗೆ ತಂದೆ ಕೇಳಿದರು - 'ಯಾವುದನ್ನು ತಿಳಿದರೆ ಇವೆಲ್ಲವನ್ನೂ ತಿಳಿದ ಫಲ ದೊರೆಯುವುದೋ ಅಂತಹ ತತ್ತ್ವದ ಉಪದೇಶ ನಿನಗೆ ಆಗಿದೆಯೇ?' ಶ್ವೇತಕೇತು ಪ್ರಶ್ನಿಸಿದ ಅದೆಂತಹ ಉಪದೇಶ, ಅಪ್ಪಾ? ಅದಕ್ಕೆ ತಂದೆ ಉದ್ದಾಲಕರು - 'ಹೇಗೆ ಒಂದು ಮಣ್ಣಿನ ಮುದ್ದೆಯನ್ನು ತಿಳಿದರೆ

ಮಣ್ಣಿನಿಂದಾದ ಎಲ್ಲವಸ್ತುಗಳೂ ತಿಳಿಯಲ್ಪಡುವವೋ ಅದರಂತೆ ಪರಮಾತ್ಮನ ಜ್ಞಾನದಿಂದ ಕರ್ಮಾದಿಗಳೆಲ್ಲ ತಿಳಿದಂತೆ.'

ಪ್ರಕೃತ ಸಂಗತವಾಗುವಂತೆ ಇದರ ಭಾವವನ್ನು ಶ್ರೀವಾದಿರಾಜರು ಗುರ್ವರ್ಥ ದೀಪಿಕಾದಲ್ಲಿ ಹೀಗೆ ಬಿಡಿಸಿದ್ದಾರೆ- ಇವೆಲ್ಲಕ್ಕೂ ಮಣ್ಣು ಮೂಲಕಾರಣ ಎಂದು ತಿಳಿದರೆ ಸಾಮಾನ್ಯಜ್ಞಾನದೊಂದಿಗೆ ವಿಶೇಷ ತಿಳುವಳಿಕೆಯೂ ಉಂಟಾಗುವುದರಿಂದ ಮಡಿಕೆ-ಕುಡಿಕೆಗಳ ಜ್ಞಾನ ಸಾರ್ಥಕ. ಅದರಂತೆ, ಶುಷ್ಕವಾದ ಕರ್ಮಗಳ ಆಚರಣೆಯಿಂದ ಹೆಚ್ಚಿನ ಪ್ರಯೋಜನವೇನೂ ಇಲ್ಲ. ಪರಮಾತ್ಮನನ್ನು ತಿಳಿದು ಅವನೇ ನನ್ನಿಂದ ಮಾಡಿಸಿದ್ದಾನೆಂದು ತಿಳಿದರೆ ಪರಮಾತ್ಮನ ಅನುಗ್ರಹಕ್ಕೆ ಕಾರಣವಾಗಿ ಕರ್ಮ ಸಫಲವಾಗುತ್ತದೆ. ಹೀಗೆ ಈ ಸಂವಾದದಲ್ಲೂ ಕರ್ಮವೂ ಪರಂಪರಯಾ ಮೋಕ್ಷಕ್ಕೆ ಕಾರಣವೆಂದು ತಿಳಿಯುತ್ತದೆ. || ಸೂತ್ರ 19 ||

## ಓಂ || ವಾಕ್ಯಾನ್ವಯಾತ್ || ಓಂ

**ವಾಕ್ಯಸ್ಯಾಪಿ ಏವಂ ಅನ್ವಯೋ ಯುಜ್ಯತೇ ಪೃಥಕ್ ಪೃಥಕ್ ಸ್ಥಿತಸ್ಯಾಪಿ ಪರಮಾತ್ಮನಾ || 20 ||**

ವೈದಿಕ ವಾಕ್ಯಗಳಲ್ಲಿರುವ ಪ್ರತ್ಯೇಕ ಪದಗಳು ಬ್ರಹ್ಮಭಿನ್ನವಾದ ಅರ್ಥವನ್ನು ಹೇಳುತ್ತಿದ್ದರೂ ಸಮಗ್ರವಾಕ್ಯ (ವಾಕ್ಯಾರ್ಥ) ಪರಮಾತ್ಮನೊಂದಿಗೆ ಅನ್ವಯ ಹೊಂದುತ್ತದೆ.

**ವಿವರಣೆ :** ವೇದಗಳಿಗೆ ಪರಮಾತ್ಮನ ಬಗ್ಗೆ ತಿಳುವಳಿಕೆ ಮೂಡಿಸುವುದೇ ಉದ್ದೇಶವಾದರೆ ಅವನನ್ನಷ್ಟೇ ಹೇಳಬೇಕು, ಕರ್ಮಾದಿಗಳನ್ನು ಹೇಳುವುದು ಏಕೆ? ಎಂಬ ಪ್ರಶ್ನೆಗೆ ಇಲ್ಲಿಸಮಾಧಾನವಿದೆ. ವೇದದ ಒಂದೊಂದು ಪದಗಳೂ ವಿಷ್ಣುವಾಚಕಗಳಾಗಿವೆ. ಆದರೆ ಇದನ್ನು ತಿಳಿಯುವ ಯೋಗ್ಯತೆ ಸಾಮಾನ್ಯರಿಗಿಲ್ಲ. ಅದಕ್ಕಾಗಿ, ಪದಗಳಿಗೆ ಪ್ರತ್ಯೇಕವಾಗಿ ಬ್ರಹ್ಮೇತರವಾದ ಕರ್ಮಾದಿಗಳು ಅರ್ಥ. ಸಮಗ್ರವಾಕ್ಯದ ಅರ್ಥ ಬ್ರಹ್ಮ. ಹೀಗೆ, ಸಾಮಾನ್ಯರಿಗೆ ತಿಳಿಯುವಂತಹ ಅರ್ಥವೂ ವೇದಕ್ಕಿದೆ. 'ಜ್ಯೋತಿಷ್ಟೋಮೇನ ಸ್ವರ್ಗಕಾಮೋ ಯಜೇತ' 'ಅಹರಹಃ ಸಂಧ್ಯಾಮುಪಾಸೀತ' ಇತ್ಯಾದಿ ವೈದಿಕ ವಾಕ್ಯಗಳು ಜ್ಯೋತಿಷ್ಟೋಮಾದಿಯಾಗಗಳನ್ನು, ಸಂಧ್ಯಾದಿ ನಿತ್ಯಕರ್ಮಗಳನ್ನು ವಿಧಿಸುತ್ತವೆ. ಆದರೆ ಈ ವಾಕ್ಯದ ಒಟ್ಟು ತಾತ್ಪರ್ಯ- 'ವಿಷ್ಣುಪ್ರೀತಿಗಾಗಿ ಈ ಕರ್ಮವನ್ನು ಮಾಡಿ' ಎಂದು. ಹೀಗೆ ವಾಕ್ಯದಲ್ಲಿರುವ ಪ್ರತ್ಯೇಕ ಪದಗಳಿಗೆ ಅರ್ಥ ಬೇರೆಯಾದರೂ ವಾಕ್ಯದ ಒಟ್ಟು ತಾತ್ಪರ್ಯ ಬ್ರಹ್ಮನೇ ಆಗಿದ್ದಾನೆ. ಅದಕ್ಕಾಗಿ ಕರ್ಮಾದಿಗಳೂ ವೈದಿಕ ಪದಗಳಿಂದ ವಾಚ್ಯವಾಗಿವೆ, ಎಂದು ಹೇಳಬೇಕಾಗುತ್ತದೆ.

(ವಾಕ್ಯಾನ್ವಯೋ ನಾಮ ಪೃಥಕ್ ಪೃಥಕ್ ಅರ್ಥೇಷು ವಾಚಕತಯಾ ಸ್ಥಿತವಾಕ್ಯಸ್ಯ ಅಂತತೋ ಭಗವತ್ ಪರತ್ವಂ... ವಿನಾ ವಾಕ್ಯಾನ್ವಯಂ ಉತ್ತಮಾಧಿಕಾರಿ ವ್ಯತಿರಿಕ್ತಾನಾಂ ಜ್ಞಾನಸ್ಯೈವ ಅಸಂಭವೇನ ಜಿಜ್ಞಾಸಾಯಾಂ ವೈಮುಖ್ಯಪ್ರಸಂಗಾತ್- ತತ್ವಪ್ರಕಾಶಿಕಾ)

ತತ್ತ್ವಪ್ರಕಾಶಿಕಾದಲ್ಲಿ ವಾಕ್ಯಾನ್ವಯವನ್ನು ಹೀಗೆ ತೋರಿಸಲಾಗಿದೆ. ಕರ್ಮದಿಂದ ದೊರಕುವ ಫಲ ಅಲ್ಪ, ಅಸ್ಥಿರ, ದೇವತೆಗಳೂ ವಿಷ್ಣುಪರತಂತ್ರರು, ಏಕೆಂದರೆ ಅವರು ವಿಷ್ಣುವಿನಿಂದಲೇ ಹುಟ್ಟುತ್ತಾರೆ. ಪ್ರಪಂಚವೂ ಅಸ್ಥಿರ, ಅಪ್ರಧಾನ, ಆತ್ಮನೇ ಸರ್ವೋತ್ತಮ, ಅನಂತಫಲಕ್ಕೆ ಕಾರಣ. ಆದ್ದರಿಂದ ಅವನ ಜ್ಞಾನವನ್ನೇ ಸಂಪಾದಿಸಬೇಕು. ಯೋಗ್ಯರಿಗೆ ಹೀಗೆ ತಿಳುವಳಿಕೆ ಬರಬೇಕಾದರೆ ವೇದವು ಕರ್ಮ, ದೇವತೆಗಳು, ಪ್ರಪಂಚ ಮುಂತಾದ ಪ್ರಮೇಯಗಳನ್ನು ಹೇಳಬೇಕಾಗುತ್ತದೆ. ಈ ಎಲ್ಲ ವಾಕ್ಯಗಳ ಉದ್ದೇಶ ಬ್ರಹ್ಮಜ್ಞಾನವನ್ನು ಸಂಪಾದಿಸಬೇಕು ಎಂದು. ಇದೇ ವಾಕ್ಯಾನ್ವಯ || ಸೂತ್ರ 20 ||

## ಓಂ || ಪ್ರತಿಜ್ಞಾಸಿದ್ಧೇಃ ಲಿಂಗಂ ಆಶ್ಮರಥ್ಯಃ || ಓಂ

**'ನಾನ್ಯಃ ಪಂಥಾ ಅಯನಾಯ ವಿದ್ಯತೇ' (ತೈ.ಆ.3.12.7) ಇತಿ ಪ್ರತಿಜ್ಞಾಸಿದ್ಧೇಃ ಲಿಂಗತ್ವೇನ ಕರ್ಮಾದಿಕಂ ಉಚ್ಯತೇ ಇತಿ ಆಶ್ಮರಥ್ಯಃ । ಯಸ್ಮಾದೇವಂ ಅನಿತ್ಯಫಲಂ ಅನ್ಯತ್ ತಸ್ಮಾತ್ ನಾನ್ಯಃ ಪಂಥಾ ಇತಿ || 21 ||**

'ಮೋಕ್ಷಕ್ಕೆ ಜ್ಞಾನದ ಹೊರತು ಬೇರೆ ಸಾಧನವಿಲ್ಲ' ಎಂಬ ಪ್ರತಿಜ್ಞೆಯನ್ನು ಪೂರೈಸುವುದಕ್ಕಾಗಿ ವೇದದಲ್ಲಿ ಕರ್ಮಾದಿಗಳನ್ನು ಹೇಳಲಾಗಿದೆ, ಹೀಗೆಂದು ಆಶ್ಮರಥ್ಯಾಚಾರ್ಯರು ಹೇಳುತ್ತಾರೆ. 'ಕರ್ಮಗಳ ಫಲವು ಅಶಾಶ್ವತವಾದುದರಿಂದ ಮೋಕ್ಷಕ್ಕೆ ಜ್ಞಾನ ಬಿಟ್ಟು ಬೇರೆ ದಾರಿ ಇಲ್ಲ' ಎಂದು ಪ್ರತಿಜ್ಞೆಯನ್ನು ಪೂರೈಸುವ ವಿಧಾನ.

**ವಿವರಣೆ** - ಪರಮಾತ್ಮನಲ್ಲಿ ವಾಕ್ಯಾನ್ವಯಕ್ಕಾಗಿ ಕರ್ಮಾದಿ ಪ್ರತಿಪಾದನೆ ಎಂಬ ಹಿಂದಿನ ಸೂತ್ರದ ಅರ್ಥವನ್ನು ಮೂರು ಮಂದಿ ವ್ಯಾಸ ಶಿಷ್ಯರು ಮೂರು ತೆರನಾಗಿ ಸಮರ್ಥಿಸುತ್ತಾರೆ. ಅದರಲ್ಲಿ ಆಶ್ಮರಥ್ಯರ ಅಭಿಪ್ರಾಯ ಹೀಗೆ- 'ಜ್ಞಾನವೇ ಮೋಕ್ಷಕ್ಕೆ ಸಾಧನ, ಕರ್ಮಾದಿಗಳಲ್ಲ' ಎಂದು ವೇದಾಂತದ ಪ್ರತಿಜ್ಞೆ. ಇದು ಸಿದ್ಧವಾಗಬೇಕಾದರೆ 'ಕರ್ಮ ಏಕೆ ಮೋಕ್ಷಸಾಧನವಲ್ಲ?' ಎನ್ನುವುದು ಸ್ಪಷ್ಟವಾಗಬೇಕು. ಅದಕ್ಕಾಗಿ ಕರ್ಮಕಾಂಡದಲ್ಲಿ ವಿಸ್ತಾರವಾಗಿ ಕರ್ಮಗಳನ್ನು ಹೇಳಿ ಕೊನೆಗೆ,

'ಅಮೃತೋ ವಾವ ಸೋಮಪೋ ಭವತಿ ಯಾವದಿಂದ್ರಃ'

ಎಂದು ಕರ್ಮದ ಫಲವನ್ನು ತಿಳಿಸಲಾಗಿದೆ. 'ಯಾಗಾದಿ ಕರ್ಮಗಳನ್ನು ಮಾಡಿ ಯಾಗಶೇಷವಾದ ಸೋಮರಸವನ್ನು ಪಾನ ಮಾಡಿದರೆ ಇಂದ್ರನಿರುವಷ್ಟು ಕಾಲ ಸ್ವರ್ಗಸುಖ ಲಭಿಸುತ್ತದೆ' ಎಂದು ಕರ್ಮದಿಂದ ಸಿಗುವ ಫಲ. ಆದ್ದರಿಂದ ಶಾಶ್ವತ ಫಲ ಕರ್ಮಲಭ್ಯವಲ್ಲ. ಅದಕ್ಕಾಗಿ ಬ್ರಹ್ಮಜ್ಞಾನವನ್ನೇ ಸಂಪಾದಿಸಬೇಕು. ಹೀಗೆ ಬ್ರಹ್ಮಜ್ಞಾನ ಸಂಪಾದನೆಯ ಪ್ರತಿಜ್ಞಾಸಿದ್ಧಿಗೆ ಕಾರಣವಾಗಿ (ಲಿಂಗತ್ವೇನ) ಕರ್ಮಗಳನ್ನು ಹೇಳಲಾಗಿದೆ. ಆಶ್ಮರಥ್ಯನ ಮತವನ್ನು ಶ್ರುತಿಯೂ ಹೇಳಿದೆ- 'ಪರೀಕ್ಷ್ಯ ಲೋಕಾನ್ ಕರ್ಮಚಿತಾನ್ ಬ್ರಾಹ್ಮಣಃ ನಿರ್ವೇದಮಾಯಾತ್' || ಸೂತ್ರ 21 ||

**ಓಂ ॥ ಉತ್ಕ್ರಮಿಷ್ಯತ ಏವಂ ಭಾವಾದಿತಿ ಔಡುಲೋಮಿಃ ॥ ಓಂ**

**ಉತ್ಕ್ರಮಿಷ್ಯತೋ ಮುಮಕ್ಷೋಃ ಕರ್ಮಾದಿನಾ ಭಾವ್ಯಂ ಸಾಧನ ಸಾಧನತ್ವೇನ । ಅತಃ ತದ್ವಕ್ತಿ ಇತಿ ಔಡುಲೋಮಿಃ ಮನ್ಯತೇ ॥ 22 ॥**

ಸಂಸಾರದಿಂದ ಬಿಡುಗಡೆಯನ್ನು ಬಯಸುವ ಮೋಕ್ಷಾರ್ಥಿಯು ಮೋಕ್ಷಸಾಧನವಾದ ಜ್ಞಾನಕ್ಕೆ ಸಾಧನವಾಗಿ ಕರ್ಮವನ್ನು ಆಚರಿಸಬೇಕು. ಅದಕ್ಕಾಗಿ ವೇದಗಳು ಕರ್ಮಗಳನ್ನು ಹೇಳುತ್ತವೆ, ಎಂದು ಔಡುಲೋಮಿ ಆಚಾರ್ಯರು ಹೇಳುತ್ತಾರೆ.

**ವಿವರಣೆ** - ಮೋಕ್ಷಕ್ಕೆ ಜ್ಞಾನಬೇಕು. ಅದಕ್ಕೆ ಧ್ಯಾನ ಸಾಧನ. ಧ್ಯಾನ ಮಾಡಲು ದೃಢವಾದ ಜ್ಞಾನ ಬೇಕು. ಚಿತ್ತಚಾಂಚಲ್ಯವಿರಬಾರದು. ಅದಕ್ಕಾಗಿ ಅಂತಃಕರಣದಲ್ಲಿರುವ ವಿಷಯಾಭಿಲಾಷೆ, ಕ್ರೋಧ ಮುಂತಾದ ದುರ್ಗುಣಗಳು ಕ್ಷಯಿಸಬೇಕು. ಅದು ನಿಷ್ಕಾಮ ಕರ್ಮಾನುಷ್ಠಾನದಿಂದ ಆಗುತ್ತದೆ. ಅದಕ್ಕಾಗಿ ಕರ್ಮಗಳನ್ನು ವೇದ ಹೇಳುತ್ತದೆ. ಹೀಗೆ ಕರ್ಮದ ಫಲ ಅಂತಃಕರಣದ ನಿರ್ಮಲತೆಯ ಮೂಲಕ ಜ್ಞಾನದ ಸ್ಥಿರತೆ. ವೇದದಲ್ಲಿ ಸ್ವರ್ಗಾದಿಫಲಗಳನ್ನು ಕರ್ಮಗಳಲ್ಲಿ ಆಸಕ್ತಿ ಮೂಡಿಸುವುದಕ್ಕಾಗಿಯಷ್ಟೇ ಹೇಳಲಾಗಿದೆ.

ಔಡುಲೋಮಿಯ ಈ ಮತವೂ ವೇದೋಕ್ತವಾದುದೆ-

'ತಮೇತಂ ವೇದಾನುವಚನೇನ ಬ್ರಾಹ್ಮಣಾ ವಿವಿದಿಷಂತಿ ಯಜ್ಞೇನ ದಾನೇನ ತಪಸಾಽನಾಶಕೇನ' ॥ ಸೂತ್ರ 22 ॥

**ಓಂ ॥ ಅವಸ್ಥಿತೇರಿತಿ ಕಾಶಕೃತ್ಸ್ನಃ ॥ ಓಂ**

**ಸರ್ವಂ ಪರಮಾತ್ಮನಿ ಅವಸ್ಥಿತಂ ಇತಿ ವಕ್ತುಂ ತದ್ವಚನಂ ಇತಿ ಕಾಶಕೃತ್ಸ್ನಃ ।**

**ಕೃಷ್ಣದ್ವೈಪಾಯನಮತಾತ್ ಏಕದೇಶವಿದಃ ಪರೇ ।**

**ವದಂತಿ ತೇ ಯಥಾಪ್ರಜ್ಞಂ ನ ವಿರೋಧಃ ಕಥಂಚನ ॥**

**ಇತಿ ಪಾದ್ಮೇ ॥ 23 ॥**

**॥ ಇತಿ ಸಮಾಕರ್ಷಾಧಿಕರಣಮ್ ॥**

ಎಲ್ಲವೂ ವಿಷ್ಣುವಿನ ಅಧೀನ ಎಂದು ಹೇಳಲು ಕರ್ಮಾದಿಪ್ರಪಂಚವನ್ನು ವೇದವು ಹೇಳುತ್ತದೆ. ಹೀಗೆಂದು ಕಾಶಕೃತ್ಸ್ನರು ಹೇಳುತ್ತಾರೆ.

ಶ್ರೀವೇದವ್ಯಾಸರ ಚಿತ್ತದಲ್ಲಿರುವ ಅನೇಕ ಅಭಿಪ್ರಾಯಗಳಲ್ಲಿ ಅವರ ಶಿಷ್ಯರು ಒಂದೊಂದನ್ನು ತಮ್ಮ ಪ್ರಜ್ಞೆಗೆ ಅನುಸಾರವಾಗಿ ಸ್ವೀಕರಿಸಿ ತಮ್ಮ ಮತವನ್ನಾಗಿ ಹೇಳುತ್ತಾರೆ. ಅವುಗಳಲ್ಲಿ ಪರಸ್ಪರ ವಿರೋಧವಿಲ್ಲ, ಎಂದು ಪಾದ್ಮಪುರಾಣದಲ್ಲಿದೆ.

**ವಿವರಣೆ** - ಮೋಕ್ಷಕ್ಕೆ ಸಾಧನವಾದ ವಿಷ್ಣುವಿನ ಜ್ಞಾನ ಹೀಗಿರಬೇಕು- ಈ ಜಗತ್ತು

ಕರ್ಮಾದಿಗಳೆಲ್ಲವೂ ಅವನ ಅಧೀನ, ಅವನೇ ಸ್ವತಂತ್ರ. ಹೀಗೆ ಅವನನ್ನು ಸರ್ವಾಧಾರನನ್ನಾಗಿ ತಿಳಿಯಬೇಕು. ಹೀಗೆಂದು. 'ಏಷ ಸೇತುಃ ವಿಧರಣಃ' ಎಂಬಲ್ಲಿ ಹೇಳಲು ಕರ್ಮಾದಿ ಪರತಂತ್ರ ಪ್ರಪಂಚದ ನಿರೂಪಣೆ ಮಾಡಲಾಗಿದೆ. ಇದು ಕಾಶಕೃತ್ಸ್ನರ ಮತ.

ಈ ಬಗ್ಗೆ ವ್ಯಾಸರು ತಮ್ಮ ಹೆಸರನ್ನು ಹೇಳದೆಯೇ ತಮ್ಮದೇ ಅಭಿಪ್ರಾಯವನ್ನು ಶಿಷ್ಯರ ಪ್ರಸಿದ್ಧಿಗಾಗಿ ಅವರ ಹೆಸರುಗಳಿಂದ ಸೂತ್ರಗಳಲ್ಲಿ ನಿರೂಪಿಸಿದ್ದಾರೆ. ಈ ಮೂರು ಅಭಿಪ್ರಾಯಗಳಲ್ಲಿ ವಿರೋಧವೇನೂ ಇಲ್ಲ. ಅಧಿಕಾರಿಗಳಿಗೆ ತಕ್ಕಂತೆ ಮೂರೂ ಸರಿಯೆ, ಎಂದು ಅನುವ್ಯಾಖ್ಯಾನದಲ್ಲಿ ಆಚಾರ್ಯರು ಹೇಳಿದ್ದಾರೆ - 'ತಾರತಮ್ಯಂ ನೃಣಾಂ ವದನ್'.

ಬ್ರಹ್ಮಜ್ಞಾನವನ್ನು ಬಯಸದೆ ಸ್ವರ್ಗವನ್ನೇ ಬಯಸುವ ಅಧಿಕಾರಿಗಳಿಗೆ ಮೊದಲ ಆಶ್ಮರಥ್ಯರ ಮತ. ಬ್ರಹ್ಮಜಿಜ್ಞಾಸೆಯಲ್ಲಿ ತೊಡಗಿರುವ ಅಧಿಕಾರಿಗಳಿಗೆ ಎರಡನೆಯ ಔಡುಲೋಮಿಯ ಮತ. ಜ್ಞಾನವನ್ನು ಗಳಿಸಿದ ಅಲ್ಪಾಧಿಕಾರಿಗಳಿಗೆ ಮೂರನೆಯ ಮತ.

|| ಸೂತ್ರ 23 ||

## ದ್ವೈತದರ್ಶನದಲ್ಲಿ ಸೂತ್ರಗಳ ಅರ್ಥ

**1. ಓಂ || ಸಮಾಕರ್ಷಾತ್ || ಓಂ**

ಮುಂದಿನ ಸೂತ್ರದ ಜಗತ್ ಪದವನ್ನು ಇಲ್ಲಿ ತರಬೇಕು. ಸರ್ವ ಶಬ್ದಾನಾಂ ಎಂದು ಸೇರಿಸಿಕೊಳ್ಳಬೇಕು. ಸರ್ವಶಬ್ದಾನಾಂ=ಎಲ್ಲಾ ಶಬ್ದಗಳನ್ನು ಜಗತಿ ಸಮಾಕರ್ಷಾತ್=ಬ್ರಹ್ಮನಿಂದ ಜಗತ್ತಿನೆಡೆಗೆ ಸೆಳೆದು ಜಗದ್ವಾಚಕಗಳನ್ನಾಗಿ ಹೇಳುವುದರಿಂದ ಬ್ರಹ್ಮ-ಜಗತ್ತುಗಳೆರಡರಲ್ಲೂ ಸಮಾನವೃತ್ತಿ ಇರುವ ಪ್ರಯುಕ್ತವಾದ ಸಾಮ್ಯ ಪ್ರಸಂಗವಿಲ್ಲ. ಆದ್ದರಿಂದ, ಸಮನ್ವಯ ಸೂತ್ರದಲ್ಲಿ 'ತತ್ತು' ಎಂಬ ಅವಧಾರಣವು ಯುಕ್ತವಾಗಿದೆ.

(ಅತ್ರ ನಯೇ ಜ್ಯೋತಿರ್ನಯ ಇವ ಸರ್ವಶಬ್ದಾಃ ನ್ಯಾಯಭೇದೇನ ಸಮನ್ವಿಯಂತೇ । ತತ್ತು ಇತಿ ಪ್ರಕೃತಂ ಬ್ರಹ್ಮ ತತ ಇತಿ ಅನ್ವೇತಿ । ನ ವಿರೋಧಃ ಇತ್ಯಸ್ತಿ। ವಕ್ಷ್ಯಮಾಣಂ ಜಗತ್‌ಪದಂ ಆಕೃಷ್ಯತೇ। ಸರ್ವಶಬ್ದಾನಾಮಿತಿ ಶೇಷಃ।

ಪೂರ್ವೋಕ್ತಹೇತುಭಿಃ ಬ್ರಹ್ಮವಾಚಿತ್ವೇಽಪಿ ರೂಢ್ಯಾದಿನಾ ವ್ಯವಹಾರೇ ಚ ಸಿದ್ಧೇ ಬಾಧಕನಿರಾಸಾರ್ಥಂ ಇದಂ ಸೂತ್ರಂ। ಸರ್ವಶಬ್ದಾನಾಂ ತತಃ ಬ್ರಹ್ಮಣಃ ಸಕಾಶಾತ್ ಜಗತಿ ಸಮ್ಯಗಾಕರ್ಷಾತ್ । ನ ಚ ವೃತ್ತಿಸಾಮ್ಯಾಪತ್ತ್ಯಾ ತತ್ತು ಇತಿ ಅವಧಾರಣವಿರೋಧಃ । ಸಮಾಕರ್ಷೋಕ್ತ್ಯಾ ವಿಷ್ಣೌ ಪರಮಮುಖ್ಯ ವೃತ್ತಿಃ ಅನ್ಯತ್ರ ಮುಖ್ಯವೃತ್ತಿಃ ಇತಿ ತಾರತಮ್ಯ-ಸೂಚನಾತ್ ತತ್ತು ಇತಿ ಅವಧಾರಣೋಪಪತ್ತಿಃ। ಸಮಿತ್ಯುಕ್ತಿಃ ಅನ್ಯತ್ರ ಮುಖ್ಯತ್ವಮೇವ, ನ ಲಕ್ಷಣಾದಿಃ ಇತಿ ಸೂಚನಾಯ।)

**2. ಓಂ॥ ಜಗದ್ವಾಚಿತ್ವಾತ್ ॥ ಓಂ**

ಜಗದ್ವಾಚಿತ್ವಾತ್ ಎಂಬ ಸೂತ್ರವನ್ನು ಆವೃತ್ತಿ ಮಾಡಿಕೊಳ್ಳಬೇಕು. ಎರಡನೆಯ ಬಾರಿಗೆ 'ಜಗದ್ವಾಚಿತ್ವ ಜ್ಞಾನ' ಎಂದು ಅರ್ಥ. ಶಬ್ದಗಳನ್ನು ಲೋಕದಲ್ಲಿ ಜನರು ಆಯಾಯ ವಸ್ತುಗಳಲ್ಲಿ ಪ್ರಯೋಗಿಸುವುದರಿಂದಾಗಿ 'ಆ ವಸ್ತುಗಳಿಗೇ ಆಯಾಯ ಶಬ್ದಗಳು ವಾಚಕಗಳು' ಎಂಬ ಜ್ಞಾನ ಬರುವುದರಿಂದ, ಆ ಶಬ್ದಗಳಿಗೆ ಜಾಗತಿಕ ವಸ್ತುಗಳಲ್ಲಿ ಪ್ರಸಿದ್ಧಿ ಇದೆ. ಹೀಗೆ ಎಲ್ಲ ಶಬ್ದಗಳಿಗೂ ವಿಷ್ಣುವೆ ಮುಖ್ಯಾರ್ಥನಾದರೂ ವಿಷ್ಣುವಿಗಿಂತ ಇತರ ವಸ್ತುಗಳಲ್ಲೇ ಅವುಗಳ ಪ್ರಸಿದ್ಧಿ ಯುಕ್ತವಾಗಿದೆ.

(ಶಬ್ದಾನಾಮಿತ್ಯಸ್ತಿ। ಜಗದ್ವಾಚಿತ್ವಾತ್ ಇತ್ಯಾವರ್ತತೇ। ದ್ವಿತೀಯಂ ಜ್ಞಾನಪರಂ। ಶಬ್ದಾನಾಂ ಜಗದ್ವಾಚಿತ್ವಾತ್= ಲೋಕಾನಾಂ ಜಗತಿ ವ್ಯವಹಾರಾದ್ಧೇತೋಃ ಜಗದ್ವಾಚಿತ್ವಾತ್= ಜಗದ್ವಾಚಿತ್ವಜ್ಞಾನಾತ್ ತತ್ರ ಪ್ರಸಿದ್ಧಿರಿತಿ ಶೇಷಃ।)

**3. ಓಂ॥ ಜೀವಮುಖ್ಯಪ್ರಾಣಲಿಂಗಾದಿತಿ ಚೇತ್ ತದ್ ವ್ಯಾಖ್ಯಾತಮ್ ॥ ಓಂ**

'ತದಧೀನತ್ವಾತ್ ಅರ್ಥವತ್' ಎಂಬ ಸೂತ್ರವನ್ನು 'ನ' ಎಂಬ ಪದವನ್ನೂ ಅನುವೃತ್ತಿ ಮಾಡಿಕೊಳ್ಳಬೇಕು. ತದಧೀನತ್ವಾತ್= ಜಗತ್ತು ಭಗವಂತನ ಅಧೀನವಾದುದರಿಂದ ಎಲ್ಲ ಶಬ್ದಗಳೂ ಅವನನ್ನೇ ಹೇಳುತ್ತವೆ ಎಂಬುದು ಸರಿಯಲ್ಲ. ಈ ಜಗತ್ತು ಜೀವನ ಅಧೀನವೆಂದೂ, ಮುಖ್ಯಪ್ರಾಣನ ಅಧೀನವೆಂದೂ ಉಪನಿಷತ್ತುಗಳಲ್ಲಿ ಹೇಳಿದೆ. ಆದ್ದರಿಂದ ಅವರೂ ಸರ್ವಶಬ್ದವಾಚ್ಯರಾಗಲಿ, ಎಂದರೆ ತದ್= ಆ ಜೀವ ಮುಖ್ಯಪ್ರಾಣರ ಧರ್ಮವು ಅಂತರ್ಯಾಮಿಯಾದ ವಿಷ್ಣು ಪರ ಎಂದು ವ್ಯಾಖ್ಯಾತಂ= ಉಪಾಸಾತ್ರೈವಿಧ್ಯಾತ್ ಎಂಬಲ್ಲಿ ವಿವರಿಸಲಾಗಿದೆ.

('ತದಧೀನತ್ವಾದರ್ಥವತ್' ಇತಿ ನೇತಿ ಚ ಮಂಡೂಕಪ್ಲುತ್ಯಾ ಅನುವರ್ತತೇ। ಶಬ್ದಜಾತಂ ಸರ್ವಸ್ಯ ತದಧೀನತ್ವಾತ್ ತತ್ರ ಅರ್ಥವತ್ ಇತಿ ನ ಯುಕ್ತಮ್। 'ಅಸ್ಯ ಯದೇಕಾಂ ಶಾಖಾಂ' ಇತಿ ಜೀವೇ ಕ್ವಚಿತ್, 'ವಾಯುನ್ಯೈವ ಹಿ ಲೋಕಾ ನೇನೀಯಂತೇ' ಇತಿ ವಾಯೌ ಸರ್ವತ್ರ ತದಧೀನತ್ವರೂಪಲಿಂಗಂ ಶ್ರೂಯತೇ। ತಸ್ಮಾತ್ ಲಿಂಗಾತ್ ತಯೋರಪಿ ಶಬ್ದಜಾತಂ ಅರ್ಥವತ್। ಮುಖ್ಯತಃ ತಯೋರಪಿ ವಾಚಕಂ ಇತಿ ಚೇನ್ನ। ಯತಃ ತಲ್ಲಿಂಗಂ ವ್ಯಾಖ್ಯಾತಂ ತದಂತರ್ಯಾಮಿಸಂಬಂಧಿತಯಾ ಇತ್ಯರ್ಥಃ।)

**4. ಓಂ॥ ಅನ್ಯಾರ್ಥಂ ತು ಜೈಮಿನಿಃ ಪ್ರಶ್ನವ್ಯಾಖ್ಯಾನಾಭ್ಯಾಂ ಅಪಿ ಚೈವಮೇಕೇ ॥ ಓಂ**

ಜೈಮಿನಿಃ= ಜೈಮಿನಿ ಆಚಾರ್ಯರು ಪ್ರಶ್ನವ್ಯಾಖ್ಯಾನಾಭ್ಯಾಂ- ಉದ್ದಾಲಕಶ್ವೇತಕೇತು ಗಳ ಹಾಗೂ ಶೌನಕ ಅಂಗಿರಸರ ಪ್ರಶ್ನೆ ಮತ್ತು ವಿವರಣೆಗಳಿಂದ ಅನ್ಯಾರ್ಥಂ= ಬ್ರಹ್ಮಜ್ಞಾನಕ್ಕಾಗಿ ಅಗ್ನ್ಯಾದಿ ಪದಗಳು ದೇವತಾವಾಚಕವಾಗಿವೆ ಎನ್ನುತ್ತಾರೆ. ಅಪಿ ಚ= ಅಷ್ಟೇ ಅಲ್ಲದೆ, ಏಕೇ=ಕೆಲವು ಶಾಖಿಗಳು ಏವಂ='ಯಸ್ತನ್ನ ವೇದ ಕಿಮೃಚಾ ಕರಿಷ್ಯತಿ' ಎಂದು ಸ್ಪಷ್ಟವಾಗಿಯೇ ಹೇಳುತ್ತಾರೆ.

(ಜಗದ್ವಾಚಿತ್ವಂ ಇತ್ಯಸ್ತಿ । ಶಬ್ದಾನಾಮಿತಿ ಚ । ಅನ್ವೇತಿ ಪ್ರಕೃತ ಜೀವಾದನ್ಯ ಬ್ರಹ್ಮವಾಚೀ ಸನ್ ತಜ್ಜ್ಞಾನಪರಃ। ತುರೇವ। ಶಬ್ದಾನಾಂ ಜಗದ್ವಾಚಿತ್ವಂ= ವೈದಿಕ ಶಬ್ದಾನಾಂ ಮುಮುಕ್ಷುಂ ಪ್ರತಿ ಕರ್ಮದೇವತಾದಿ ಜಗದ್ವಾಚಿತ್ವಂ ಅನ್ವಾರ್ಥಂ ತು= ಬ್ರಹ್ಮಜ್ಞಾನಾರ್ಥಮೇವ । ಕುತಃ ? 'ಕಸ್ಮಿನ್ನು ಖಲು' ಇತಿ ಶೌನಕಪ್ರಶ್ನಾತ್ । 'ತಸ್ಮೈ ಹೋವಾಚ' ಇತಿ ಅಂಗಿರಸೋ ವ್ಯಾಖ್ಯಾನಾತ್ । ತಾಭ್ಯಾಂ ಹೇತುಭ್ಯಾಂ ಇತ್ಯರ್ಥಃ। ಅಪಿ ಚ ಸ್ಪಷ್ಟಂ ಚೈವಮೇಕೇ ಶಾಖಿನೋ 'ಯಸ್ತನ್ನ ವೇದ' ಇತಿ ಪಠಂತಿ।)

**5. ಓಂ ॥ ವಾಕ್ಯಾನ್ವಯಾತ್ ॥ ಓಂ**

ವಾಕ್ಯಾನ್ವಯಾತ್=ವಾಕ್ಯ ಸಮನ್ವಯಕ್ಕಾಗಿ ವೈದಿಕಶಬ್ದಗಳು ಕರ್ಮಾದಿ ವಾಚಕ ಗಳಾಗಬೇಕು. ಪ್ರತಿಯೊಂದು ಪದಗಳೂ ವಿಷ್ಣು ಮಾತ್ರ ವಾಚಕಗಳಾದರೆ ಸಾಮಾನ್ಯರಿಗೆ ವೇದದಿಂದ ತತ್ತ್ವಜ್ಞಾನವು ಬರಲಾರದು.

(ನಿಮಿತ್ತಪಂಚಮೀಯಂ। ವೈದಿಕ ಶಬ್ದಾನಾಂ ಅನ್ವಾರ್ಥಂ ಜಗದ್ವಾಚಿತ್ವಂ ಇತಿ ಅಸ್ತಿ ಕುತಃ? ವಾಕ್ಯಾನ್ವಯಾತ್ ನಿಮಿತ್ತಾತ್ । ಕರ್ಮದೇವತಾದಿ ವಾಚಿತಯಾ ಸ್ಥಿತವಾಕ್ಯಾನಾಂ ಅಂತತೋ ಬ್ರಹ್ಮಪರತ್ವಂ ಇತ್ಯೇವಂ ರೂಪ ವಾಕ್ಯಾನ್ವಯಾಭಾವೇ ಮಂದಾನಾಂ ಪ್ರತಿಪದ- ಅನ್ವಯ- ಅಯೋಗ್ಯತಯಾ ತತ್ರ ವೈಮುಖ್ಯಂ ಇತ್ಯಾದಿದೋಷಃ ಸ್ಯಾದಿತಿ ಭಾವಃ।)

**6. ಓಂ ॥ ಪ್ರತಿಜ್ಞಾಸಿದ್ಧೇಃ ಲಿಂಗಮ್ ಆಶ್ಮರಥ್ಯಃ ॥ ಓಂ**

'ಜ್ಞಾನದಿಂದಲೇ ಮೋಕ್ಷ' ಎಂಬ ಔಪನಿಷದ ಪ್ರತಿಜ್ಞಾಸಿದ್ಧಿಗೆ ಲಿಂಗಂ= ಕಾರಣವಾಗಿ ಕರ್ಮದೇವತಾವಾಚಕ ಪದಗಳಿಗೆ ಅನ್ವಾರ್ಥತ್ವವನ್ನು ಆಶ್ಮರಥ್ಯರು ಹೇಳುತ್ತಾರೆ.

(ಜಗದ್ವಾಚಿತ್ವಂ ಅನ್ವಾರ್ಥಂ ಇತ್ಯಸ್ತಿ। ಪ್ರತಿಜ್ಞಾಸಿದ್ಧೇಃ 'ನಾನ್ಯಃ ಪಂಥಾ ಅಯನಾಯ' ಇತಿ ಜ್ಞಾನಮೇವ ಮುಕ್ತಿಹೇತುಃ ಇತಿ ಪ್ರತಿಜ್ಞಾತಾರ್ಥನಿಶ್ಚಯಸ್ಯ ಲಿಂಗಂ- ಶಬ್ದಾನಾಂ ಜಗದ್ವಾಚಿತ್ವಂ ಲಿಂಗಂ= ಜನಕಂ ಸತ್ ಅನ್ವಾರ್ಥಂ ಭವತಿ ಇತಿ ಆಶ್ಮರಥ್ಯಃ ಮನ್ಯತೇ ಇತ್ಯರ್ಥಃ।)

**7. ಓಂ ॥ ಉತ್ಕ್ರಮಿಷ್ಯತ ಏವಂ ಭಾವಾದಿತ್ಯೌಡುಲೋಮಿಃ ॥ ಓಂ**

ಕರ್ಮಾದಿ ವಾಚಕತ್ವ ಬ್ರಹ್ಮಜ್ಞಾನಕ್ಕಾಗಿ. ಹೇಗೆಂದರೆ, ಉತ್ಕಮಿಷ್ಯತಃ= ಜ್ಞಾನದಿಂದ ಸಂಸಾರ ಬಂಧವನ್ನು ನೀಗಲು ಬಯಸುವವನಿಗೆ ಏವಂ ಭಾವಾತ್= ಜ್ಞಾನಕ್ಕೆ ಕಾರಣವಾಗಿ ಕರ್ಮವು ಬೇಕಾದುದರಿಂದ, ಎಂದು ಔಡುಲೋಮಿಗಳು ಹೇಳುತ್ತಾರೆ.

(ಶಬ್ದಾನಾಂ ಜಗದ್ವಾಚಿತ್ವಂ ಅನ್ವಾರ್ಥಂ ಬ್ರಹ್ಮಜ್ಞಾನಾರ್ಥಂ, ಕಥಂ? ಉತ್ಕ್ರಮಿಷ್ಯತಃ= ಜ್ಞಾನೇನ ಉತ್ಕ್ರಮಣಮಿಚ್ಛತಃ ಪುಂಸಃ ಮುಮುಕ್ಷೋಃ ಏವಂ= ಜ್ಞಾನ ಹೇತುತಯಾ ಕರ್ಮಾದೇಃ ಭಾವಾತ್= ಅವಶ್ಯಂ ಭಾವಾತ್ । ಇತ್ಯೌಡುಲೋಮಿಃ ಮನ್ಯತೇ ಇತ್ಯರ್ಥಃ।)

**8. ಓಂ ॥ ಅವಸ್ಥಿತೇರಿತಿ ಕಾಶಕೃತ್ಸ್ನಃ ॥ ಓಂ**

ಅವಸ್ಥಿತೇಃ=ಕರ್ಮದೇವತಾದಿ ಜಗತ್ತು ಬ್ರಹ್ಮನಲ್ಲೇ ನೆಲೆಗೊಂಡಿರುವುದರಿಂದ ಅನ್ಯಾರ್ಥಂ='ಏಷ ಸೇತುಃ' ಎಂಬ ವಾಕ್ಯದಿಂದ ಬ್ರಹ್ಮನೇ ಸರ್ವಾಧಾರ ಎಂಬ ಜ್ಞಾನದ ಉತ್ಪತ್ತಿಗಾಗಿ ಕರ್ಮಾದಿ ಜ್ಞಾನ, ಎಂದು ಕಾಶಕೃತ್ಸ್ನರು ಹೇಳುತ್ತಾರೆ.

(ಬ್ರಹ್ಮಣೇತಿ ಪ್ರಕೃತಂ ಬ್ರಹ್ಮ ಅನ್ವೇತಿ । ಕರ್ಮ-ದೇವತಾದಿಜಗತಃ ಬ್ರಹ್ಮಣಿ ಅವಸ್ಥಿತೇಃ, ಅನ್ಯಾರ್ಥಂ='ಏಷ ಸೇತುಃ ವಿಧಾರಣಃ' ಇತ್ಯಾದಿನಾ ಸರ್ವಾಧಾರತ್ವಪ್ರಕಾರಕ ಜ್ಞಾನೋತ್ಪತ್ತ್ಯರ್ಥಂ ಆಧೇಯರೂಪಕರ್ಮಾದಿ ಜಗದ್ವಾಚಿತ್ವಂ ಇತಿ ಕಾಶಕೃತ್ಸ್ನೋ ಮನ್ಯತೇ ಇತ್ಯರ್ಥಃ। ಶಿಷ್ಯ ಪ್ರಸಿದ್ಧ್ಯರ್ಥಂ ಜೈಮಿನ್ಯಾದ್ಯುಕ್ತಿಃ।)

## ಶಾಂಕರಭಾಷ್ಯದಲ್ಲಿ ಸೂತ್ರಗಳ ಅರ್ಥ

ಹಿಂದೆ ಹೇಳಿದಂತೆ, ಮಾಧ್ವಭಾಷ್ಯದಲ್ಲಿ 'ಸಮಾಕರ್ಷಾತ್' ಎಂಬ ಸೂತ್ರವನ್ನಾರಂಭಿಸಿ ಒಟ್ಟು ಎಂಟು ಸೂತ್ರಗಳು ಸೇರಿ ಒಂದು ಅಧಿಕರಣ. ಶಾಂಕರ ಮತ್ತು ರಾಮಾನುಜ ಭಾಷ್ಯಗಳಲ್ಲಿ 'ಸಮಾಕರ್ಷಾತ್' ಎಂಬ ಸೂತ್ರ ಹಿಂದಿನ ಅಧಿಕರಣಕ್ಕೆ ಸೇರಿದೆ. ಅನಂತರದ 'ಜಗದ್ವಾಚಿತ್ವಾತ್' ಮೊದಲಾದ ಮೂರು ಸೂತ್ರಗಳು ಒಂದು ಅಧಿಕರಣವಾದರೆ, ಮುಂದಿನ ನಾಲ್ಕು ಸೂತ್ರಗಳು ಮತ್ತೊಂದು ಅಧಿಕರಣ.

**1. ಜಗದ್ವಾಚಿತ್ವಾತ್-** ಕೌಶೀತಕೀ ಬ್ರಾಹ್ಮಣದಲ್ಲಿ ಅಜಾತ ಶತ್ರು ಮತ್ತು ಬಾಲಾಕಿ ಬ್ರಾಹ್ಮಣರ ನಡುವೆ ಬ್ರಹ್ಮನ ಕುರಿತು ಸಂವಾದ ನಡೆಯುತ್ತದೆ. ಬಾಲಾಕಿ ರಾಜನ ಬಳಿ ಬಂದು ಕೇಳಿದ ಪ್ರಶ್ನೆಗಳಿಗೆ ರಾಜ ಉತ್ತರಿಸುತ್ತಾನೆ -

'ಯೋ ಬಾಲಾಕ, ಏತೇಷಾಂ ಪುರುಷಾಣಾಂ ಕರ್ತಾ
ಯಸ್ಯ ವಾ ಏತತ್ ಕರ್ಮ ಸ ವೈ ವೇದಿತವ್ಯಃ॥'

ಇಲ್ಲಿ ಹೇಳಿದ ಕರ್ತಾ ಜೀವ ಅಥವಾ ಮುಖ್ಯಪ್ರಾಣ ಎಂದು ಪೂರ್ವಪಕ್ಷ. ಪ್ರಾಣವಾಯುವಿನಿಂದಾಗಿಯೇ ಎಲ್ಲರೂ ಜೀವಿಸುವುದರಿಂದ, ಕ್ರಿಯಾಶೀಲರಾಗಿರುವುದರಿಂದ 'ಪುರುಷಾಣಾಂ ಕರ್ತಾ' 'ಏತತ್ ಕರ್ಮ' ಎಂಬ ಶಬ್ದಗಳು ಅವನಿಗೆ ಅನ್ವಯಿಸುತ್ತವೆ. ಈ ಮಂತ್ರದ ಹಿಂದೆ ಆದಿತ್ಯಸ್ಥ ಪುರುಷ, ಚಂದ್ರಮಂಡಲಸ್ಥಪುರುಷರ ಪ್ರಸ್ತಾವ ಇದೆ. ಅವರನ್ನೇ 'ಏತೇಷಾಂ ಪುರುಷಾಣಾಂ' ಎಂದು ಪರಾಮರ್ಶ ಮಾಡಿ ಅವರು ಪ್ರಾಣನಿಂದಾಗಿ ಇದ್ದಾರೆ, ಎನ್ನಲಾಗುತ್ತದೆ. ಬೃಹದಾರಣ್ಯಕದಲ್ಲಿ 'ಕತಮ ಏಕೋ ದೇವಃ? ಇತಿ, ಪ್ರಾಣ ಇತಿ' ಎಂದು ಹೇಳಿರುವುದರಿಂದ ಹಿರಣ್ಯಗರ್ಭನೆಂಬ ಪ್ರಾಣನ ಅವಸ್ಥಾವಿಶೇಷರೇ ಆದಿತ್ಯಾದಿ ದೇವತೆಗಳು. ಆದ್ದರಿಂದ ಈ ದೇವತೆಗಳಿಗೆ ಜನಕನಾಗಿರುವುದರಿಂದ ಪ್ರಾಣನು 'ಏತೇಷಾಂ ಕರ್ತಾ' ಎಂದುದೂ ಯುಕ್ತವಾಗಿದೆ.

ಅಥವಾ, ಜೀವನೂ ಆಗಬಹುದು. 'ಏತತ್ ಕರ್ಮ' ಎಂದರೆ ಈ ಪುಣ್ಯಪಾಪಗಳು.

ಅವು ಜೀವನಿಗೆ ಸಂಬಂಧಿಸಿವೆ. ಅವನು ಭೋಕ್ತೃವಾದ್ದರಿಂದ ಈ ಭೋಗ್ಯ ಪ್ರಪಂಚಕ್ಕೆಲ್ಲ ಅದೃಷ್ಟದ್ವಾರಾ ಕರ್ತೃ. ಅಲ್ಲದೆ, ರಾಜ ಬಾಲಾಕಿಯನ್ನು ಮಲಗಿದ ಪುರುಷನ ಬಳಿಗೆ ಒಯ್ದು ಅವನಲ್ಲಿ ಪ್ರಾಣವಾಯು ಸಂಚಾರವಿದ್ದರೂ ಅವನನ್ನು ಕರೆದಾಗ ಎಚ್ಚರವಾಗದಿದ್ದುದನ್ನು ತೋರಿಸಿ ಕೋಲಿನಿಂದ ಹೊಡೆದಾಗ ಎಚ್ಚರವಾದುದನ್ನೂ ಪರಾಮರ್ಶಿಸಿ ಸುಪ್ತೋತ್ಥಿತನಾದ, ಪ್ರಾಣಭಿನ್ನನಾದ ಜೀವನಿದ್ದಾನೆ, ಎಂದು ಪ್ರಯೋಗ ಮಾಡಿ ಮನವರಿಕೆ ಮಾಡಿಸಿದ. ಇದರಿಂದಲೂ ಇಲ್ಲಿ ಜೀವಾತ್ಮನೇ ವಾಚ್ಯ. ಇದು ಪೂರ್ವಪಕ್ಷ.

**ಸಿದ್ಧಾಂತ** - ಈ ವಿಷಯವಾಕ್ಯದಲ್ಲಿರುವ 'ಯಸ್ಯವಾ ಏತತ್ ಕರ್ಮ' ಎಂದರೆ 'ಈ ಜಗದ್ರೂಪವಾದ ಕರ್ಮ' ಎಂದರ್ಥ. ಏಕೆಂದರೆ, ರಾಜನು ಬ್ರಾಹ್ಮಣನಿಗೆ 'ಬ್ರಹ್ಮ ತೇ ಬ್ರವಾಣಿ' ಎಂದು ಪ್ರಾರಂಭಿಸಿದ್ದಾನೆ. ಆದಿತ್ಯಗತ ಪುರುಷನನ್ನು ಹೇಳಿ ರಾಜ ಸುಮ್ಮನಾದಾಗ ಬಾಲಾಕಿ,

'ಮೃಷಾ ವೈ ಖಲು ಮಾ ಸಂವದಿಷ್ಠಾಃ-ಬ್ರಹ್ಮ ತೇ ಬ್ರವಾಣಿ'

ಎಂದು ಎಚ್ಚರಿಸಿದ. ಇದಕ್ಕೆ ಅನುಗುಣವಾಗಿ ಮುಂದೆ ಬ್ರಹ್ಮನನ್ನೇ ಹೇಳಬೇಕಾದುದರಿಂದ 'ಏತತ್ ಕರ್ಮ' ಎಂದರೆ ಈ ಜಗತ್ತು, ಅದು ಯಾರಿಂದ ಸೃಷ್ಟಿಯಾಗಿದೆಯೋ ಅಂತಹವನು ಬ್ರಹ್ಮ, ಎಂದರ್ಥ. ಜೀವನ ಪ್ರಸ್ತಾವವೂ ಬ್ರಹ್ಮೋಪದೇಶಕ್ಕಾಗಿಯೇ. ಜೀವನು ನಿದ್ರೆಯಲ್ಲಿ ಯಾರೊಂದಿಗೆ ಐಕ್ಯವನ್ನು ಹೊಂದುವನೋ ಅದು ಬ್ರಹ್ಮ ಎಂದು ಭಾವ.

**2. ಜೀವ ಮುಖ್ಯಪ್ರಾಣಲಿಂಗಾನ್ನೇತಿ ಚೇತ್ ತದ್ವ್ಯಾಖ್ಯಾತಂ** - ಜೀವ ಮತ್ತು ಮುಖ್ಯಪ್ರಾಣರ ಲಿಂಗವಿದ್ದರೂ ಅವರು ಇಲ್ಲಿ ಉಪಾಸ್ಯರಾಗಿ ವಿವಕ್ಷಿತರಲ್ಲ, ಒಂದೇ ಪ್ರಕರಣದಲ್ಲಿ ಮೂವರು ಉಪಾಸ್ಯರಾಗಿ ನಿರ್ದೇಶಿಸಲ್ಪಡಲಾರರು ಎಂದು ಹಿಂದೆಯೇ ಹೇಳಿದ್ದೇವೆ (1.1.31).

**3. ಅನ್ಯಾರ್ಥಂ ತು ಜೈಮಿನಿಃ ಪ್ರಶ್ನವ್ಯಾಖ್ಯಾನಾಭ್ಯಾಂ ಅಪಿ ಚೈವಮೇಕೇ**- ಜೀವಾತ್ಮನ ಪ್ರಸ್ತಾವ ಅನ್ಯಾರ್ಥಂ=ಬ್ರಹ್ಮೋಪದೇಶಕ್ಕಾಗಿ ಇದೆ, ಎನ್ನುತ್ತಾರೆ ಜೈಮಿನಿಗಳು. ಏಕೆಂದರೆ ಕೋಲಿನಿಂದ ಬಡಿದು ನಿದ್ರೆಯಿಂದ ಎಚ್ಚರವಾದಾಗ ಪ್ರಾಣಾತಿರಿಕ್ತ ಜೀವನನ್ನು ಸಾಬೀತುಪಡಿಸಿದ ಮೇಲೆ ಬಾಲಕಿಗೆ ರಾಜ ಕೇಳುತ್ತಾನೆ-

'ಕ್ವೈಷ ಏತದ್ ಬಾಲಾಕೇ, ಪುರುಷ ಅಶಯಿಷ್ಟ?'

'ಈ ಜೀವ ಯಾರಲ್ಲಿ ನಿದ್ದೆ ಹೋದ' ಎಂದು. ಅದಕ್ಕೆ ಉತ್ತರ-

''ಯದಾ ಸುಪ್ತಃ ಸ್ವಪ್ನಂ ನ ಕಂಚನ ಪಶ್ಯತಿ

ಅಥ ಅಸ್ಮಿನ್ ಪ್ರಾಣೇ ಏವ ಏಕಧಾ ಭವತಿ''

ಜೀವನು ನಿದ್ರಾಕಾಲದಲ್ಲಿ ಪ್ರಾಣನಲ್ಲಿ-ಬ್ರಹ್ಮನಲ್ಲಿ ಐಕ್ಯ ಹೊಂದುತ್ತಾನೆ. ಹೀಗೆ ಪ್ರಶ್ನೋತ್ತರಗಳಿಂದ ಜೀವನ ಪ್ರಸ್ತಾವ ಬ್ರಹ್ಮೋಪದೇಶಕ್ಕಾಗಿ ಎಂದು ಸ್ಪಷ್ಟವಾಗುತ್ತದೆ.

ಅಪಿ ಚೈವಮೇಕೇ- ವಾಜಸನೇಯ ಶಾಖಿಗಳೂ ಜೀವನು ಬ್ರಹ್ಮನಲ್ಲೇ ಮಲಗುತ್ತಾನೆ ಎನ್ನುತ್ತಾರೆ-

''ಯ ಏಷ ವಿಜ್ಞಾನಮಯಃ ಪುರುಷಃ ಕ್ವೈಷ

ತದಾಭೂತ್ ಕುತ ಏತದಾಗಾತ್?'' ಎಂದು ಅವರ ಪ್ರಶ್ನೆ. ಉತ್ತರ-

'ಯ ಏಷೋಂತರ್ಹೃದಯ ಆಕಾಶಃ ಅಸ್ಮಿನ್ ಶೇತೇ'' (ಬೃ.3.1.16) ಎಂದಿದೆ.

ಹೀಗೆ ಈ ಮೂರು ಸೂತ್ರಗಳು ಕೌಶೀತಕೀ ಬ್ರಾಹ್ಮಣದ ಪ್ರಕರಣವನ್ನು ಬ್ರಹ್ಮನಲ್ಲಿ ಸಮನ್ವಯ ಮಾಡುತ್ತವೆ. ಆಚಾರ್ಯರು ಈ ಬ್ರಾಹ್ಮಣಭಾಗದ ವಾಕ್ಯಗಳನ್ನು ಎಲ್ಲೂ ವಿಷಯವಾಕ್ಯವನ್ನಾಗಿ ತೆಗೆದುಕೊಂಡಿಲ್ಲ.

ರಾಮಾನುಜಭಾಷ್ಯದಲ್ಲೂ ಪ್ರಾಯಃ ಇದೇ ರೀತಿಯಾಗಿ ಅಧಿಕರಣವನ್ನು ವ್ಯಾಖ್ಯಾನಿಸಲಾಗಿದೆ. ಆದರೆ, ಈ ವಿಷಯವಾಕ್ಯ ಸಾಂಖ್ಯರು ಹೇಳುವ ಪ್ರಕೃತಿ- ಪುರುಷರನ್ನು ಹೇಳುತ್ತದೆ ಎಂದು ಅವರ ಪೂರ್ವಪಕ್ಷ. ಪ್ರಕೃತಿಗೆ ಅಶಾಬ್ದತ್ವವನ್ನು ನಿರಾಕರಿಸಲೋಸುಗ ಈ ಪಾದವಾದುದರಿಂದ ಹೀಗೆ ಪೂರ್ವಪಕ್ಷ ಸಂದರ್ಭೋಚಿತವಾಗಿದೆ.

ಎರಡನೆಯ ಸೂತ್ರದಲ್ಲಿ 'ತದ್ ವ್ಯಾಖ್ಯಾತಂ' ಎಂದರೆ ಪ್ರತರ್ದನಾಧಿಕರಣದಲ್ಲಿ (1.1.2) ಉಪಕ್ರಮಾದಿಗಳಿಗೆ ಅನುಗುಣವಾಗಿಯೇ ಪ್ರಕರಣದ ಅರ್ಥವನ್ನು ಹೇಳಬೇಕೆಂದಿರುವುದರಿಂದ ಇಲ್ಲೂ ಉಪಕ್ರಮದಲ್ಲಿ ಮತ್ತು ಉಪಸಂಹಾರದಲ್ಲಿ ಬ್ರಹ್ಮನ ಪ್ರಸ್ತಾವ ಇರುವುದರಿಂದ ಈ ಪ್ರಕರಣದಲ್ಲಿ ಬ್ರಹ್ಮನೇ ಪ್ರತಿಪಾದ್ಯ ಎಂದರ್ಥ.

## ಚಂದ್ರಿಕಾದಲ್ಲಿ ಮಾಡಿರುವ ವಿಮರ್ಶೆ

1. ಹಿಂದಿನ ಮೂರು ಪಾದಗಳಲ್ಲಿ ಶ್ರುತಿಸಮನ್ವಯ, ಈ ಪಾದದಲ್ಲಿ ಮೊದಲ ಮೂರು ಅಧಿಕರಣಗಳಲ್ಲಿ ಪ್ರಧಾನಕ್ಕೆ ಶಾಬ್ದತ್ವನಿರಾಸ, ಅನಂತರದ ಕಾರಣಾಧಿಕರಣದಲ್ಲಿ ಶ್ರುತಿಯಲ್ಲಿ ಪರಸ್ಪರ ವಿರೋಧಾಭಾವವನ್ನು ಹೇಳಿ ಮತ್ತೆ ಈ ಅಧಿಕರಣದಲ್ಲಿ ಬ್ರಹ್ಮನಲ್ಲಿ ಶ್ರುತಿಸಮನ್ವಯ. ಹೀಗೆ ನಿರ್ದಿಷ್ಟವಾದ ಒಂದು ವ್ಯವಸ್ಥೆಯೇ ಇದ್ದಂತೆ ತೋರುವುದಿಲ್ಲ, ಎಂದು ಶಾಂಕರಭಾಷ್ಯದಲ್ಲಿ ಕಾಣುವ ಆಕ್ಷೇಪ.

2. ಈ ಅಧಿಕರಣದ ಕೊನೆಯ ಸೂತ್ರದಲ್ಲಿ ಜೈಮಿನಿಯ ಪ್ರಸ್ತಾವ ಇದೆ. ಮುಂದೆ ಆಶ್ಮರಥ್ಯ, ಕಾಶಕೃತ್ಸ್ನರ ಉಲ್ಲೇಖವಿದೆ. ಇದರಿಂದ ಈ ಎಲ್ಲ ಸೂತ್ರಗಳೂ ಪರಸ್ಪರ ಅಭಿಪ್ರಾಯಭೇದವನ್ನು ಉಲ್ಲೇಖಿಸಿ ಒಂದೇ ಅಧಿಕರಣಕ್ಕೆ ಸೇರಿವೆ, ಎಂಬುದು ಸ್ಪಷ್ಟವಾಗುತ್ತದೆ. ಅವನ್ನು ಬೇರ್ಪಡಿಸುವುದು ಉಚಿತವಲ್ಲ. ಅವುಗಳನ್ನು ಬೇರೆ ಮಾಡಿದಾಗ ಸೂತ್ರದಲ್ಲಿ 'ಜೈಮಿನಿಃ' ಎಂಬ ಉಲ್ಲೇಖ ವ್ಯರ್ಥ. ಮತ್ತೊಬ್ಬರ ವಿಭಿನ್ನಾಭಿಪ್ರಾಯವಿದ್ದಾಗ ಮಾತ್ರ 'ಜೈಮಿನಿ ಹೀಗೆ ಹೇಳುತ್ತಾನೆ, ಎನ್ನಬೇಕಲ್ಲವೆ?

## ಶಾಂಕರಭಾಷ್ಯದಲ್ಲಿ ವಾಕ್ಯಾನ್ವಯಾಧಿಕರಣ

**1. ವಾಕ್ಯಾನ್ವಯಾತ್** - ಬೃಹದಾರಣ್ಯಕೋಪನಿಷತ್ತಿನಲ್ಲಿ

'ನ ವಾ ಅರೇ ಸರ್ವಸ್ಯ ಕಾಮಾಯ ಸರ್ವಂ ಪ್ರಿಯಂ ಭವತಿ।
ಆತ್ಮನಸ್ತು ಕಾಮಾಯ ಸರ್ವಂ ಪ್ರಿಯಂ ಭವತಿ।
ಆತ್ಮಾ ವಾ ಅರೇ, ದ್ರಷ್ಟವ್ಯಃ ಶ್ರೋತವ್ಯೋ ಮಂತವ್ಯೋ ನಿದಿಧ್ಯಾಸಿತವ್ಯಃ॥'

ಎಂದಿದೆ. ಇಲ್ಲಿ ಹೇಳಿದ ಆತ್ಮ ವಿಜ್ಞಾನಾತ್ಮ-ಜೀವ, ಎಂದು ಪೂರ್ವಪಕ್ಷ. ಏಕೆಂದರೆ, ಪತಿ, ಪತ್ನಿ, ಪುತ್ರ, ವಿತ್ತಗಳು ಪ್ರಿಯವಾಗುವುದು ಜೀವನಿಗೆ. ಮುಂದೆ ಇದೇ ಪ್ರಕರಣದಲ್ಲಿ

''ವಿಜ್ಞಾನ ಘನ ಏವ ಏತೇಭ್ಯಃ ಭೂತೇಭ್ಯಃ
ಸಮುತ್ಥಾಯ ತಾನ್ಯೇವ ಅನು ವಿನಶ್ಯತಿ॥''

ಎಂದು ಜೀವನ (ವಿಜ್ಞಾನಘನಃ) ಪ್ರಸ್ತಾವ ಇದೆ. ಆದ್ದರಿಂದ ಜೀವನೇ ಈ ಪ್ರಕರಣದಿಂದ ಪ್ರತಿಪಾದ್ಯ, ಎಂದು ಪೂರ್ವಪಕ್ಷ.

ಈ ಪ್ರಕರಣದ ಪೂರ್ವಾಪರ ವಾಕ್ಯಗಳನ್ನು ಪರಿಶೀಲಿಸಿದಾಗ ಅವುಗಳೆಲ್ಲ ಪರಮಾತ್ಮನಿಗೇ ಅನ್ವಯಿಸುತ್ತವೆ. ಯಾಜ್ಞವಲ್ಕ್ಯ-ಮೈತ್ರೇಯಿಯರ ಸಂವಾದ ರೂಪದಲ್ಲಿ ಈ ಪ್ರಕರಣವಿದೆ.

'ಅಮೃತತ್ವಸ್ಯ ನಾಶಾ ಅಸ್ತಿ ವಿತ್ತೇನ'

'ಐಶ್ವರ್ಯದಿಂದ ಮೋಕ್ಷವನ್ನು ಪಡೆಯಲಾಗದು' ಎಂದು ಮೈತ್ರೇಯಿಗೆ ಯಾಜ್ಞವಲ್ಕ್ಯರು ಹೇಳಿದಾಗ,

'ಯೇನಾಹಂ ಅಮೃತಾ ಸ್ಯಾಂ ಕಿಮಹಂ ತೇನ ಕುರ್ಯಾಂ'

'ನಾನು ಮೋಕ್ಷವನ್ನು ಪಡೆಯಬೇಕಾದರೆ ಏನು ಮಾಡಬೇಕು' ಎಂದು ಮೈತ್ರೇಯೀ ಪ್ರಶ್ನಿಸುತ್ತಾಳೆ. ಅದಕ್ಕೆ ಉತ್ತರವಾಗಿ ಬ್ರಹ್ಮೋಪಾಸನೆಯನ್ನು ಹೇಳಲು ಯಾಜ್ಞವಲ್ಕ್ಯರು ಉಪಕ್ರಮಿಸಿದ್ದಾರೆ.

'ಬ್ರಹ್ಮ ತಂ ಪರಾದಾತ್ ಯೋ ಅನ್ಯತ್ರ ಆತ್ಮನೋ ಬ್ರಹ್ಮ ವೇದ'

ಎಂದು ಬ್ರಹ್ಮ ಭಿನ್ನವಾಗಿ ಈ ಜಗತ್ತನ್ನು ಕಂಡರೆ ಸೋಲುತ್ತಾನೆ, ಹೀಗೆ ಹೇಳಿ

'ಇದಂ ಸರ್ವಂ ಯದಯಮಾತ್ಮಾ'

ಎಂದು ಬ್ರಹ್ಮನಿಗೆ ಸರ್ವಾತ್ಮಕತ್ವವನ್ನು ಹೇಳಲಾಗಿದೆ. ಈ ಎಲ್ಲ ವಾಕ್ಯಗಳು ಬ್ರಹ್ಮನಿಗೇ ಅನ್ವಯಿಸುವುದರಿಂದ ಬ್ರಹ್ಮನೇ ಈ ಪ್ರಕರಣದಿಂದ ಪ್ರತಿಪಾದ್ಯ.

**2. ಪ್ರತಿಜ್ಞಾಸಿದ್ಧೇಃ ಲಿಂಗಂ ಇತಿ ಆಶ್ಮರಥ್ಯಃ** - ಈ ಪ್ರಕರಣದಲ್ಲಿ

'ಆತ್ಮನಿ ವಿಜ್ಞಾತೇ ಸರ್ವಮಿದಂ ವಿಜ್ಞಾತಂ ಭವತಿ'

ಎಂದು ಪ್ರತಿಜ್ಞಾವಾಕ್ಯವಿದೆ. ವಿಜ್ಞಾನಾತ್ಮನು ಪರಮಾತ್ಮ ಭಿನ್ನನಾದರೆ ಆಗ ಪರಬ್ರಹ್ಮ ವಿಜ್ಞಾನದಿಂದ ಅವನ ಜ್ಞಾನ ಬರಲಿಲ್ಲವಾದ ಕಾರಣ ಪ್ರತಿಜ್ಞಾವಿರೋಧ ಬಂದೀತು. ಆದ್ದರಿಂದ ಈ ಪ್ರಕರಣದಲ್ಲಿ ದ್ರಷ್ಟವ್ಯನಾಗಿ ಹೇಳಲ್ಪಟ್ಟವನು ಬ್ರಹ್ಮನೆ. ವಿಜ್ಞಾನಾತ್ಮನು ಬ್ರಹ್ಮಕಾರ್ಯನಾದುದರಿಂದ ಅವನಿಗೆ ಮತ್ತು ಬ್ರಹ್ಮನಿಗೆ ಅಭೇದವಿರುವುದರಿಂದ 'ಪ್ರಿಯಂ ಭವತಿ' ಎಂದು ವಿಜ್ಞಾನಾತ್ಮನ ಉಲ್ಲೇಖವೂ ಸಂಗತ, ಎಂದು ಆಶ್ಮರಥ್ಯರ ಮತ.

**3. ಉತ್ಕ್ರಮಿಷ್ಯತ ಏವಂ ಭಾವಾದಿತ್ಯೌಡುಲೋಮಿಃ** - ಜೀವನು ಸಂಸಾರ ದಶಾದಲ್ಲಿ ಭಿನ್ನನಾದರೂ ಮುಕ್ತಿದಶಾದಲ್ಲಿ ಪರಮಾತ್ಮನಿಂದ ಅಭಿನ್ನನಾದುದರಿಂದ ಭಾವೀ ಅಭೇದವನ್ನು ಪರಿಗ್ರಹಿಸಿ ಆರಂಭದಲ್ಲಿ ಬ್ರಹ್ಮಾಭಿನ್ನನಾದ ಜೀವನ ಪ್ರಸ್ತಾವ ಮಾಡಲಾಗಿದೆ, ಎಂದು ಔಡುಲೋಮಿಗಳ ಮತ.

**4. ಅವಸ್ಥಿತೇರಿತಿ ಕಾಶಕೃತ್ಸ್ನಃ** - ಉಪನಿಷತ್ತುಗಳಲ್ಲಿ ತೇಜಸ್ಸು ಮೊದಲಾದ ಸೃಷ್ಟಿಗಳಂತೆ ಜೀವರ ಸೃಷ್ಟಿಯನ್ನು ಹೇಳದೆ,

'ಅನೇನ ಜೀವೇನ ಆತ್ಮನಾ ಅನು ಪ್ರವಿಶ್ಯ'

ಎಂದು ಬ್ರಹ್ಮ ತಾನೇ ಜೀವರೂಪನಾಗುತ್ತಾನೆ, ಎಂದು ಹೇಳಲಾಗಿದೆ. ಹೀಗೆ ಜೀವ ಬ್ರಹ್ಮರಿಗೆ ಭೇದವಿಲ್ಲದ ಕಾರಣ ಬ್ರಹ್ಮಪ್ರಕರಣದಲ್ಲಿ ಜೀವನ ಉಪಕ್ರಮ ಯುಕ್ತವಾಗಿದೆ, ಎಂದು ಕಾಶಕೃತ್ಸ್ನರು ಹೇಳುತ್ತಾರೆ.

ಶಾಂಕರಭಾಷ್ಯದಲ್ಲಿ ಈ ಮೂರು ಪಕ್ಷಗಳನ್ನು ತುಲನೆ ಮಾಡಿ ಕೊನೆಯ ಸಿದ್ಧಾಂತವನ್ನು ಒಪ್ಪಿಕೊಳ್ಳಲಾಗಿದೆ. ಮೊದಲ ಆಶ್ಮರಥ್ಯನ ಸಿದ್ಧಾಂತವೂ ಜೀವಬ್ರಹ್ಮರಿಗೆ ಅಭೇದವನ್ನೇ ಹೇಳುತ್ತಿದ್ದರೂ ಜೀವ-ಬ್ರಹ್ಮರಿಗೆ ಕಾರ್ಯಕಾರಣ ಭಾವವನ್ನು ಸಮರ್ಥಿಸಬೇಕಾಗುವುದರಿಂದ ಭೇದವನ್ನೂ ಹೇಳಬೇಕಾಗುತ್ತದೆ. ಈ ಜಗತ್ತು ಬ್ರಹ್ಮನ ಕಾರ್ಯವಾದುದರಿಂದ ಬ್ರಹ್ಮನ ಜ್ಞಾನದಿಂದ ಜ್ಞಾತವಾಗುತ್ತದೆ, ಎಂದು 'ಏಕವಿಜ್ಞಾನೇನ ಸರ್ವವಿಜ್ಞಾನ'ದ ಪ್ರತಿಜ್ಞೆಯನ್ನು ಕೂಡಿಸಬೇಕು. ಆಗ ಜೀವನು ಬ್ರಹ್ಮಕಾರ್ಯನಾಗುತ್ತಾನೆ. ಆದ್ದರಿಂದ ಅವನಿಗೆ ಬ್ರಹ್ಮಭೇದವೂ ಇರಬೇಕಾಗುತ್ತದೆ. ಹೀಗೆ, ಜೀವಬ್ರಹ್ಮರಿಗೆ ಭೇದಾಭೇದ ಎಂದು ಈ ಸಿದ್ಧಾಂತದ ಭಾವ.

ಎರಡನೆಯ ಮತದಲ್ಲಂತೂ ಸ್ಪಷ್ಟವಾಗಿ ಸಂಸಾರದಲ್ಲಿ ಬ್ರಹ್ಮಭೇದವನ್ನು ಹೇಳಲಾಗಿದೆ.

ಕೊನೆಯ ಸಿದ್ಧಾಂತದಲ್ಲಿ ಜೀವಬ್ರಹ್ಮರಿಗೆ ಆತ್ಯಂತಿಕಾಭೇದವನ್ನು ಹೇಳಿರುವುದರಿಂದ ಅದೇ ಶ್ರುತಿಸಿದ್ಧಾಂತ - 'ತತ್ರ ಕಾಶಕೃತ್ಸ್ನೀಯಂ ಮತಂ ಶ್ರುತ್ಯನುಸಾರೀತಿ ಗಮ್ಯತೇ । -ಶಾಂ. ಭಾ.'' ಜೀವಬ್ರಹ್ಮರ ಭೇದ ಕಾಲ್ಪನಿಕ ಅಭೇದ ಸ್ವಾಭಾವಿಕ. ಬಿಂಬ ಪ್ರತಿಬಿಂಬಗಳಂತೆ, ಎಂದು ಈ ಮತ.

## ಛಂದ್ರಿಕಾದಲ್ಲಿ ಮಾಡಿರುವ ವಿಮರ್ಶೆ

ಆತ್ಮಪದ ಪರಮಾತ್ಮ ವಾಚಕ. ಆದ್ದರಿಂದ 'ಆತ್ಮನಸ್ತು ಕಾಮಾಯ' ಎಂದರೆ 'ತನ್ನ (ಜೀವನ) ಕಾಮನೆಗಾಗಿ, ತನಗಾಗಿ ಎಲ್ಲವೂ ಪ್ರಿಯವಾಗುತ್ತದೆ ಎಂದು ಅರ್ಥವನ್ನು ಹೇಳಿ ಪ್ರಾರಂಭದಲ್ಲಿ ಜೀವನ ಪ್ರಸ್ತಾವ ಇದೆ, ಎಂದು ಪೂರ್ವಪಕ್ಷವೇ ಅಸಮಂಜಸ. ''ಪತಿ, ಪತ್ನ್ಯಾದಿಗಳು ಅವರಿಗಾಗಿ ಪ್ರಿಯರಲ್ಲ, ತನಗಾಗಿ ಪ್ರಿಯರಾಗುತ್ತಾರೆ. ಆದ್ದರಿಂದ ಆತ್ಮನಿಗೆ ತಾನೇ ನಿರುಪಾಧಿಕ ಪ್ರಿಯ'' ಎಂದು ಉಪನಿಷತ್ ಪ್ರಕರಣದ ತಾತ್ಪರ್ಯವನ್ನು ಹೇಳಬೇಕು. ಹಾಗಿದ್ದರೆ, ''ದುಃಖವೂ ತನಗೆ ಸಂಪರ್ಕವಾದಾಗ ಮಾತ್ರ ಅಪ್ರಿಯ, ಇಲ್ಲದಿದ್ದರೆ ಅಪ್ರಿಯವಲ್ಲ. ಆದ್ದರಿಂದ ತನಗೆ ತಾನೇ ಅಪ್ರಿಯ'' ಎಂದೂ ತರ್ಕಮಾಡಬೇಕಾದೀತು. ಹೀಗಾಗಿ 'ಆತ್ಮನಸ್ತು ಕಾಮಾಯ' ಎಂಬಲ್ಲಿ ಚತುರ್ಥೀ ವಿಭಕ್ತಿಗೆ ತೃತೀಯಾವಿಭಕ್ತಿಯ ಅರ್ಥವನ್ನು ಹೇಳಿ 'ಆತ್ಮನಸ್ತು ಕಾಮೇನ' ಎಂದು ಅರ್ಥ ಹೇಳಬೇಕು. ಆತ್ಮನೆಂದರೆ ಪರಮಾತ್ಮ. ಆಗ ಪ್ರಕರಣದ ತಾತ್ಪರ್ಯ ಹೀಗಾಗುತ್ತದೆ- ''ಪತಿಯು ಎಷ್ಟು ರೂಪ-ಗುಣವಂತನಾದರೂ ಪತ್ನಿಗೆ ಪ್ರಿಯನಾಗಬೇಕಿಲ್ಲ. ಪರಮಾತ್ಮ ಬಯಸಿದರೆ ಮಾತ್ರ ಅವನು ಅವಳಿಗೆ ಪ್ರಿಯನಾಗುತ್ತಾನೆ'' ಎಂದು. ಈಗ ಈ ಪ್ರಕರಣದ ಉಪಕ್ರಮವೂ ಬ್ರಹ್ಮಪರವೇ ಆಗುತ್ತದೆ. ಅಂದಮೇಲೆ ಪೂರ್ವಪಕ್ಷಕ್ಕೆ ಅವಕಾಶವೇ ಇಲ್ಲ.

## ರಾಮಾನುಜ ಭಾಷ್ಯದಲ್ಲಿ ಸೂತ್ರಾರ್ಥ

ಈ ಭಾಷ್ಯದಲ್ಲಿ ಬೃಹದಾರಣ್ಯಕದ ಇದೇ ವಾಕ್ಯವನ್ನು ವಿಚಾರ್ಯವನ್ನಾಗಿ ಪ್ರಸ್ತಾಪಿಸಲಾಗಿದೆ. 'ಆತ್ಮನಸ್ತು ಕಾಮಾಯ' ಎಂಬ ಆತ್ಮಶಬ್ದ ಪುರುಷಪರ. ಈ ಪ್ರಕರಣದಲ್ಲಿ ಪ್ರಕೃತಿಗಿಂತ ವಿವಿಕ್ತನಾದ ಪುರುಷನೇ ಜ್ಞೇಯ ಎಂದು ಹೇಳಲಾಗಿದೆ. ಹೀಗೆ ಸಾಂಖ್ಯರು ಪೂರ್ವಪಕ್ಷಿಗಳು.

ಆತ್ಮಶಬ್ದಕ್ಕೆ ಪರಮಾತ್ಮನೆಂದೇ ಅರ್ಥ. ಪತ್ನೀಪುತ್ರಾದಿಗಳು ನಾವು ಬಯಸಿದಂತೆ ನಮಗೆ ಪ್ರಿಯರಾಗುವುದಿಲ್ಲ. ನಮ್ಮ ಪೂರ್ವಕರ್ಮಗಳಿಂದ ಸಂತುಷ್ಟನಾದ ಪರಮಾತ್ಮನ ಸಂಕಲ್ಪದಂತೆಯೇ ಅವರು ಪ್ರಿಯರಾಗುತ್ತಾರೆ ಎಂದು ಉಪನಿಷತ್ ಪ್ರಕರಣದ ಭಾವ.

2. 'ಪ್ರತಿಜ್ಞಾಸಿದ್ಧೇಃ ಲಿಂಗಂ ಆಶ್ಮರಥ್ಯಃ' ಎಂಬ ಸೂತ್ರದಲ್ಲಿ ''ಏಕವಿಜ್ಞಾನೇನ ಸರ್ವವಿಜ್ಞಾನದ ಪ್ರತಿಜ್ಞಾಸಿದ್ಧಿಗಾಗಿ ಜೀವಬ್ರಹ್ಮರಿಗೆ ಅಭೇದವನ್ನು ಪರಿಗ್ರಹಿಸಿ ಉಪಕ್ರಮದ ಆತ್ಮಶಬ್ದದಿಂದ ಬ್ರಹ್ಮರೂಪನಾದ ಜೀವನ ಉಲ್ಲೇಖ ಮಾಡಲಾಗಿದೆ'' ಎಂದು ಆಶ್ಮರಥ್ಯರ ಮತವನ್ನು ಅನುವಾದ ಮಾಡಲಾಗಿದೆ. ಅದು ಸೂತ್ರಕಾರರ ಅಭಿಪ್ರಾಯವಲ್ಲ. ಅದನ್ನು ರಾಮಾನುಜ ಭಾಷ್ಯದಲ್ಲಿ ಖಂಡಿಸಿ ಮುಂದಿನ ಸೂತ್ರದ ಅರ್ಥವನ್ನು ಹೀಗೆ ಹೇಳಲಾಗಿದೆ- ''ಔಡುಲೋಮಿಗಳು ಮೋಕ್ಷದಲ್ಲಿ ಅಭೇದವನ್ನು ಹೇಳುತ್ತಾರೆ. ಆದ್ದರಿಂದ ಮುಂದೆ ಬರುವ ಅಭೇದವನ್ನು ಪರಿಗ್ರಹಿಸಿ ಜೀವವಾಚಕ ಶಬ್ದದಿಂದ ಉಪಕ್ರಮದಲ್ಲಿ ಪರಮಾತ್ಮನನ್ನು

ಹೇಳಲಾಗಿದೆ'' ಎಂದು. ಆದರೆ, ಇದೂ ಸರಿಯಲ್ಲ. ಭೇದವು ಸ್ವಾಭಾವಿಕವಾಗಿದ್ದು ಅದು ಮೋಕ್ಷದಲ್ಲಿ ನಾಶವಾಗಲಾರದು. ಆದ್ದರಿಂದ ಕೊನೆಯಲ್ಲಿ ಕಾಶಕೃತ್ಸ್ನಾಚಾರ್ಯರ ಮತವೇ ಸಿದ್ಧಾಂತ. ಇವರು, ಅವಸ್ಥಿತೇಃ= ಜೀವನಲ್ಲಿ ಪರಮಾತ್ಮನು ಶರೀರಿಯಾಗಿ ಇರುವುದರಿಂದ ಜೀವವಾಚಕ ಶಬ್ದದಿಂದ ಪರಮಾತ್ಮನೂ ವಾಚ್ಯನಾಗುತ್ತಾನೆ ಎಂದು ಹೇಳುತ್ತಾರೆ. ಇದು ನಮಗೆ ಸಮ್ಮತ ಎಂದಿದ್ದಾರೆ ಆ ಭಾಷ್ಯಕಾರರು. ರಾಮಾನುಜ ಸಿದ್ಧಾಂತದಂತೆ ಎರಡು ಮತ್ತು ಮೂರನೆಯ ಸೂತ್ರಗಳು ಪೂವಪಕ್ಷ ಸೂತ್ರಗಳು ಕೊನೆಯದು ಸಿದ್ಧಾಂತ ಸೂತ್ರ. ಅದನ್ನು ತಮ್ಮ ಅಭಿಪ್ರಾಯಕ್ಕೆ ಅನುಗುಣವಾಗಿ ವ್ಯಾಖ್ಯಾನಿಸಿ, ಮೊದಲಿನ ಎರಡೂ ಸೂತ್ರಗಳಿಗೆ ತಾವೇ ಹೇಳಿದ ಅರ್ಥವನ್ನು ತಮ್ಮ ಭಾಷ್ಯದಲ್ಲಿ ನಿರಾಕರಿಸಿದ್ದಾರೆ. ಆದರೆ ಅದಕ್ಕೆ ಸೂತ್ರದಲ್ಲಿ ಯಾವ ಸೂಚನೆಯೂ ಇಲ್ಲ.

**|| ಇಲ್ಲಿಗೆ ಸಮಾಕರ್ಷಾಧಿಕರಣ ಮುಗಿಯಿತು ||**

## ಪ್ರಕೃತ್ಯಧಿಕರಣ - 6

ಸ್ತ್ರೀಶಬ್ದಾ ಅಪಿ ತಸ್ಮಿನ್ನೇವೇತ್ಯಾಹ-

**ಓಂ || ಪ್ರಕೃತಿಶ್ಚ ಪ್ರತಿಜ್ಞಾದೃಷ್ಟಾಂತಾನುಪರೋಧಾತ್ || ಓಂ**

''ಹಂತ ಏತಮೇವ ಪುರುಷಂ ಸರ್ವಾಣಿ ನಾಮಾನಿ ಅಭಿವದಂತಿ ಯಥಾ ನದ್ಯಃ ಸ್ಯಂದಮಾನಾಃ ಸಮುದ್ರಾಯಣಾಃ ಸಮುದ್ರಂ ಅಭಿವಿಶಂತಿ ಏವಮೇವ ಏತಾನಿ ನಾಮಾನಿ ಸರ್ವಾಣಿ ಪುರುಷಂ ಅಭಿವಿಶಂತಿ ||''

ಇತಿ ಪ್ರತಿಜ್ಞಾದೃಷ್ಟಾಂತಾನುಪರೋಧಾತ್ ಪ್ರಕೃತಿ ಶಬ್ದ ವಾಚ್ಯೋಽಪಿ ಸ ಏವ || 24 ||

ಸ್ತ್ರೀಲಿಂಗ ಶಬ್ದಗಳೂ (ಸ್ತ್ರೀ ಎಂಬ ಶಬ್ದವೂ) ಅವನನ್ನೇ ಹೇಳುತ್ತವೆ ಎಂದು ಈ ಸೂತ್ರದಲ್ಲಿ ಹೇಳಿದ್ದಾರೆ.

'ಏತಮೇವ ಪುರುಷಂ ಸರ್ವಾಣಿ ನಾಮಾನಿ ಅಭಿವದಂತಿ' ಎಂಬ ಪ್ರತಿಜ್ಞಾವಾಕ್ಯ,

'ಯಥಾ ನದ್ಯಃ ಸ್ಯಂದಮಾನಾಃ ಸಮುದ್ರಾಯಣಾಃ'

ಇತ್ಯಾದಿ ದೃಷ್ಟಾಂತವಾಕ್ಯ. ಇವುಗಳಿಗೆ ಅನುಗುಣವಾಗಿ ಪ್ರಕೃತಿಶಬ್ದದಿಂದ ವಾಚ್ಯನೂ ವಿಷ್ಣುವೆ.

**ವಿವರಣೆ :** 1. ಈ ಅಧಿಕರಣದಲ್ಲಿ ಸ್ತ್ರೀಲಿಂಗಾಂತವಾದ ಪ್ರಕೃತಿ ಮುಂತಾದ ಶಬ್ದಗಳಿಂದಲೂ ವಿಷ್ಣುವೇ ವಾಚ್ಯನೆಂದೂ ಸ್ತ್ರೀಶಬ್ದವೂ ಕೂಡ ಅವನಿಗೇ ವಾಚಕವೆಂದೂ ಸಮರ್ಥಿಸಲಾಗಿದೆ.

''ಏಷಾ ಹ್ಯೇವ ಪ್ರಕೃತಿಃ ಅವಿಕೃತಿಃ ಯಾ ಪ್ರಾಣೇನ ಸಂವಿಶತಿ ಅದಿತಿರ್ದೇವತಾಮಯೀ''

ಎಂದು ವತ್ಸಶ್ರುತಿಯಲ್ಲಿ ಪ್ರಕೃತಿ ಶಬ್ದವಿದೆ. ಇದರಿಂದ ವಿಷ್ಣು ವಾಚ್ಯನಾಗಲಾರ. ಏಕೆಂದರೆ, ಅದು ಸ್ತ್ರೀಲಿಂಗಶಬ್ದ. ಸ್ತ್ರೀಲಿಂಗವು ಸ್ತ್ರೀತ್ವವನ್ನು ಹೇಳುತ್ತದೆ. 'ನೈನಂ ವಾಚಾ ಸ್ತ್ರಿಯಂ ಬ್ರುವನ್' ಎಂದು ವಿಷ್ಣುವಿಗೆ ಸ್ತ್ರೀತ್ವ ನಿಷಿದ್ಧವಾಗಿದೆ. ಅಲ್ಲಿ ಪ್ರಾಕೃತ ಸ್ತ್ರೀತ್ವ ನಿಷೇಧವೆಂದು ಒಪ್ಪಿದರೂ ಅವನ ಪುರುಷರೂಪದಲ್ಲಿ ಸ್ತ್ರೀತ್ವವಿಲ್ಲದುದರಿಂದ ಅದಕ್ಕೆ ಆ ಶಬ್ದ ವಾಚಕವಾಗಲಾರದು.

'ಕಲತ್ರಂ' ಎಂಬ ನಪುಂಸಕಲಿಂಗದ ಶಬ್ದಕ್ಕೆ ಪತ್ನಿ ಎಂದು ಅರ್ಥ. ಆದರೆ, ಆ ಶಬ್ದವಾಚ್ಯಳಾದ ಸ್ತ್ರೀಗೆ ನಪುಂಸಕತ್ವವಿಲ್ಲ. ಆದ್ದರಿಂದ ಅಂತಹ ಸಂದರ್ಭಗಳಲ್ಲಿ ಲಿಂಗವು ಶಬ್ದಸ್ವಭಾವ ಎಂದು ಹೇಳುವುದು ಅನಿವಾರ್ಯ. ಆದರೆ, ಪ್ರಕೃತದಲ್ಲಿ ಪ್ರಕೃತಿಶಬ್ದದಿಂದ ವಾಚ್ಯಳಾದ ಲಕ್ಷ್ಮೀದೇವಿಯಲ್ಲಿ ಸ್ತ್ರೀತ್ವವೂ, ಪ್ರಕೃತಿತ್ವವೂ ಇರುವುದರಿಂದ ಅವಳಲ್ಲಿ ಆ ಶಬ್ದ ಮುಖ್ಯವಾಗುತ್ತದೆ. ಪರಮಾತ್ಮನಲ್ಲಿ ಪ್ರಕೃತಿತ್ವ ಇದ್ದರೂ ಸ್ತ್ರೀತ್ವ ಇಲ್ಲದಿರುವುದರಿಂದ ಆ ಶಬ್ದ ಗೌಣವಾಗಿ ಬಿಡುತ್ತದೆ.

ಪ್ರಕೃತಿ ಶಬ್ದವನ್ನು ಸಮನ್ವಯ ಮಾಡಿದರೂ 'ಸ್ತ್ರೀ' ಎಂಬ ಶಬ್ದವನ್ನಂತೂ ಸಮನ್ವಯ ಮಾಡಲು ಸಾಧ್ಯವಿಲ್ಲ. ಇದರಿಂದ 'ನಾಮಾನಿ ಸರ್ವಾಣಿ' ಎಂಬ ಪ್ರಮಾಣ ವಾಕ್ಯದಲ್ಲಿ 'ಸರ್ವ' ಶಬ್ದಕ್ಕೆ ಸಂಕೋಚವನ್ನು ಮಾಡಲೇಬೇಕಾಗುತ್ತದೆ ಎಂದು ಪೂರ್ವಪಕ್ಷ.

2. ಎಲ್ಲ ನಾಮಗಳೂ ವಿಷ್ಣುವಾಚಕಗಳು, ಎಲ್ಲ ನದಿಗಳೂ ಸಮುದ್ರಸೇರುವಂತೆ, ಎಂದು ಪ್ರಮಾಣ ವಚನದಲ್ಲಿ ನದೀ ಸಮುದ್ರಗಳ ದೃಷ್ಟಾಂತಪುರಸ್ಸರವಾಗಿ ವಿಷ್ಣುವಿಗೆ ಸರ್ವಶಬ್ದವಾಚ್ಯತ್ವವನ್ನು ಹೇಳಿರುವುದರಿಂದ 'ಪ್ರಕೃತಿ' ಶಬ್ದದಿಂದಲೂ ಅವನೇ ವಾಚ್ಯ. ಈ ಶ್ರುತಿಗೆ ಅರ್ಥಸಂಕೋಚ ಮಾಡಲು ಕಾರಣವಿಲ್ಲ.

3. ಸೂತ್ರದ ಚ ಶಬ್ದವು ಪರಮಾತ್ಮನಿಗೆ ಸ್ತ್ರೀತ್ವದಂತೆ ಪುಂಸ್ತ್ವವೂ ಇದೆ ಎನ್ನುತ್ತದೆ.

|| ಸೂತ್ರ 24 ||

## ಓಂ || ಅಭಿಧ್ಯೋಪದೇಶಾಚ್ಚ || ಓಂ

**ಮಾಯಾಂ ತು ಪ್ರಕೃತಿಂ ವಿದ್ಧಿ ಮಾಯಿನಂ ತು ಮಹೇಶ್ವರಮ್ । (ಶ್ವೇ. 4.10)**

**ಮಹಾಮಾಯೇತಿ ಅವಿದ್ಯೇತಿ ನಿಯತಿರ್ಮೋಹಿನೀತಿ ಚ ।**

**ಪ್ರಕೃತಿರ್ವಾಸನೇತ್ಯೇವಂ ತವೇಚ್ಛಾಽನಂತ ಕಥ್ಯತೇ ॥**

**ಇತಿ ವಚನಾತ್ ತದಭಿಧ್ಯೈವ ಪ್ರಕೃತಿ ಶಬ್ದೇನ ಉಚ್ಯತೇ ।**

**'ಸೋಽಭಿಧ್ಯಾ ಸ ಜ್ಯೋತಿಃ ಸ ಪ್ರಜ್ಞಾ ಸ ಆನಂದಃ'**

**ಇತಿ ಶ್ರುತೇಃ ಅಭಿಧ್ಯಾ ಚ ಸ್ವರೂಪಮೇವ ।**

**ಧ್ಯಾಯತಿ ಧ್ಯಾನರೂಪೋಽಸೌ ಸುಖೀ ಸುಖಮತೀವ ಚ।**
**ಪರಮೈಶ್ವರ್ಯಯೋಗೇನ ವಿರುದ್ಧಾರ್ಥತಯೇಷ್ಯತೇ ॥**

**ಇತಿ ಬ್ರಹ್ಮಾಂಡೇ ॥ 25 ॥**

ಶ್ವೇತಾಶ್ವತರೋಪನಿಷತ್ತಿನಲ್ಲಿ 'ಮಹೇಶ್ವರನನ್ನು ಮಾಯಿ ಎಂದೂ, ಮಾಯೆಯನ್ನು ಪ್ರಕೃತಿಪದವಾಚ್ಯವೆಂದೂ ತಿಳಿ' ಎಂದು ಹೇಳಲಾಗಿದೆ.

'ಅನಂತನೇ, ಮಹಾಮಾಯೆ, ಅವಿದ್ಯೆ, ನಿಯತಿ, ಮೋಹಿನೀ, ಪ್ರಕೃತಿ, ವಾಸನಾ ಹೀಗೆ ನಿನ್ನ ಇಚ್ಛೆಗೆ ಅನೇಕ ಹೆಸರಿವೆ' ಎಂದೂ ಪ್ರಮಾಣ ವಚನಗಳಿರುವುದರಿಂದ ವಿಷ್ಣುವಿನ ಇಚ್ಛೆಯೇ ಪ್ರಕೃತಿ ಶಬ್ದದಿಂದ ಹೇಳಲ್ಪಡುತ್ತದೆ.

'ಆ ಪರಮಾತ್ಮನೇ ಇಚ್ಛಾರೂಪ, ಪ್ರೇರಣಕ್ರಿಯಾರೂಪ (ಜೂತಿಃ), ಅವನು ಜ್ಞಾನರೂಪ, ಅವನು ಆನಂದರೂಪ' ಹೀಗೆ ಶ್ರುತಿ ಇರುವುದರಿಂದ ಅಂತಹ ಇಚ್ಛೆಯು ಅವನ ಸ್ವರೂಪವೇ ಆಗಿದೆ.

''ಅವನು ಧ್ಯಾನರೂಪನಾದರೂ ಧ್ಯಾನಕರ್ತನೆಂದೂ, ನಿರವಧಿಕ ಸುಖರೂಪನಾದರೂ 'ಸುಖೀ' ಎಂದೂ, ಹೀಗೆ ಅತಿವಿಲಕ್ಷಣ ಸಾಮರ್ಥ್ಯ ನಿಮಿತ್ತದಿಂದ ವಿರುದ್ಧವಾದ ಧರ್ಮವುಳ್ಳವನಾಗಿ ಜ್ಞಾನಿಗಳಿಂದ ಹೇಳಲ್ಪಡುತ್ತಾನೆ'' ಹೀಗೆಂದು ಬ್ರಹ್ಮಾಂಡ ಪುರಾಣದಲ್ಲಿದೆ.

**ವಿವರಣೆ** - ಬ್ರಹ್ಮನಿಗೆ ಪ್ರಕೃತಿ ಎಂಬ ಹೆಸರಿದೆ ಎನ್ನಲು ಈ ಸೂತ್ರವು ಪ್ರಮಾಣವನ್ನು ಹೇಳುತ್ತದೆ. ಪರಮಾತ್ಮನ ಇಚ್ಛೆಗೆ ಪ್ರಕೃತಿ ಎಂಬ ಹೆಸರಿದೆ. ಅಂತಹ ಇಚ್ಛೆ ಅವನಿಂದ ಅಭಿನ್ನವಾಗಿದೆ. ಆದರಿಂದ ಅವನಿಗೂ ಪ್ರಕೃತಿ ಎಂಬ ನಾಮವಿದೆ.

ಇದರಿಂದ, ಸೂತ್ರಕ್ಕೆ ಎರಡು ರೀತಿಯ ಅರ್ಥವನ್ನು ಸೂಚಿಸಿದಂತಾಗಿದೆ-

ಅ. ಅಭಿಧ್ಯಾಯಾಃ ಪ್ರಕೃತಿತ್ವೋಪದೇಶಾತ್ - ಭಗವದಿಚ್ಛೆಯನ್ನು ಪ್ರಕೃತಿ ಎಂದಿರುವುದರಿಂದ,

ಆ. ಬ್ರಹ್ಮಣಶ್ಚ ಅಭಿಧ್ಯಾತ್ವೋಪದೇಶಾತ್-ಬ್ರಹ್ಮನೇ ಇಚ್ಛಾರೂಪನೆಂದು ಹೇಳಿರುವುದರಿಂದ.

ಭಾಷ್ಯದಲ್ಲಿ ಮೊದಲು ಉದಾಹರಿಸಿದ ಎರಡು ಪ್ರಮಾಣಗಳು ಇಚ್ಛೆಗೆ ಪ್ರಕೃತಿ ಎಂಬ ಹೆಸರನ್ನೂ ಅನಂತರ ಉದಾಹರಿಸಿರುವ ಪ್ರಮಾಣ ಭಗವಂತನೇ ಇಚ್ಛಾರೂಪನೆಂದೂ ಸಾಧಿಸುತ್ತವೆ. ॥ಸೂತ್ರ 25 ॥

## ಓಂ ॥ ಸಾಕ್ಷಾಚ್ಚ ಉಭಯಾಮ್ನಾನಾತ್ ॥ ಓಂ

**ಏಷ ಸ್ತ್ರೀ, ಏಷ ಪುರುಷಃ, ಏಷ ಪ್ರಕೃತಿಃ, ಏಷ ಆತ್ಮಾ, ಏಷ ಬ್ರಹ್ಮ, ಏಷ**

**ಲೋಕಃ, ಏಷ ಆಲೋಕಃ, ಯೋಽಸೌ ಹರಿಃ ಆದಿಃ, ಅನಾದಿಃ ಅನಂತೋಽಂತಃ, ಪರಮಃ ಪರಾದ್ ವಿಶ್ವರೂಪಃ ॥**

**ಇತಿ ಪೈಂಗಿಶ್ರುತೌ ಸಾಕ್ಷಾದೇವ ಪ್ರಕೃತಿ ಪುರುಷತ್ವಾಮ್ನಾನಾತ್ ॥ 26 ॥**

''ಇವನು ಸ್ತ್ರೀ, ಇವನು ಪುರುಷ, ಇವನು ಪ್ರಕೃತಿ, ಇವನು ಆತ್ಮ, ಇವನು ಬ್ರಹ್ಮ, ಇವನು ಆಧಾರ(ಲೋಕಃ), ಇವನು ಪ್ರಕಾಶರೂಪ, ಅಂತಹವನೇ ಶ್ರೀಹರಿ. ಇವನು ಜಗತ್ತಿಗೆ ಆದಿ, ಆದರೆ ಇವನಿಗೆ ಆದಿ ಇಲ್ಲ. ಇವನು ಜಗತ್ತಿಗೆ ಅಂತಕ, ಅವನಿಗೆ ಅಂತವಿಲ್ಲ. ಪರವೆನಿಸಿದ ಪ್ರಕೃತಿಗಿಂತಲೂ ಉತ್ತಮ. ಈ ವಿಶ್ವದ ರೂಪದಂತೆ ಅವನಿಗೂ ರೂಪವಿದೆ'' ಹೀಗೆ ಪೈಂಗಿಶ್ರುತಿಯಲ್ಲಿ ಹಿಂದೆ ಹೇಳಿದಂತೆ ಇಚ್ಛಾದ ಅಪೇಕ್ಷೆ ಇಲ್ಲದೆಯೇ ನೇರವಾಗಿ ಬ್ರಹ್ಮನಿಗೆ ವಿಶೇಷವಾಗಿ ಪ್ರಕೃತಿ-ಪುರುಷ ಶಬ್ದಗಳಿಂದ ವಾಚ್ಯತ್ವವನ್ನು ಹೇಳಲಾಗಿದೆ.

**ವಿವರಣೆ :** ಪ್ರಥಮ ಸೂತ್ರದಲ್ಲಿ ಸಾಮಾನ್ಯವಾಗಿ 'ಎಲ್ಲ ನಾಮಗಳೂ ವಿಷ್ಣುವಿಗಿದೆ' ಎನ್ನಲಾಗಿದೆ. ಎರಡನೆಯ ಸೂತ್ರದಲ್ಲಿ ಪ್ರಕೃತಿ ಶಬ್ದಕ್ಕೆ ಪರಮಾತ್ಮನ ಇಚ್ಛೆ ಎಂದು ಅರ್ಥ. ಅಂತಹ ಇಚ್ಛಾರೂಪನಾದುದರಿಂದ ಅವನೂ ಪ್ರಕೃತಿ ಎಂದು ಇಚ್ಛಾಮೂಲಕ ಪ್ರಕೃತಿ ಶಬ್ದಾವಾಚ್ಯತ್ವವನ್ನು ಅವನಿಗೆ ಹೇಳಲಾಯಿತು. ಆದರೆ ಈ ಸೂತ್ರದಲ್ಲಿ ನೇರವಾಗಿ, ಪ್ರಕೃತಿ ಎಂಬ ವಿಶಿಷ್ಟ ಶಬ್ದದಿಂದಲೇ ವಿಷ್ಣುವಾಚ್ಯ ಎನ್ನಲಾಗಿದೆ.

ಈ ಜಗತ್ತಿನಲ್ಲಿ ಸ್ತ್ರೀರೂಪದ ಜೀವರೂ ಇದ್ದಾರೆ. ಪುರುಷ ರೂಪದ ಜೀವರೂ ಇದ್ದಾರೆ. ಅವರಿಬ್ಬರಿಗೂ ಪರಮಾತ್ಮ ಬಿಂಬನಾಗಿದ್ದಾನೆ. ಅಂದಮೇಲೆ ಅವನಿಗೂ ಈ ಎರಡೂ ರೂಪಗಳಿರಬೇಕು. ಇದನ್ನು ಭಾಷ್ಯದಲ್ಲಿ ಉದಾಹರಿಸಲಾಗಿದ ಪೈಂಗಿ ಶ್ರುತಿಯಲ್ಲಿರುವ 'ವಿಶ್ವರೂಪಃ' ಎಂಬ ಪದ ಹೇಳುತ್ತದೆ. ॥ ಸೂತ್ರ 25 ॥

## ಓಂ ॥ ಆತ್ಮಕೃತೇಃ ಪರಿಣಾಮಾತ್ ॥ ಓಂ

**ಪ್ರಕರ್ಷೇಣ ಕರೋತೀತಿ ಪ್ರಕೃತಿಃ, ಇತಿ ಯೋಗಾಚ್ಚ। ಪ್ರಕೃತೌ ಅನುಪ್ರವಿಶ್ಯ ತಾಂ ಪರಿಣಾಮ್ಯ ತತ್ ಪರಿಣಾಮನಿಯಾಮಕತಯಾ ತತ್ರ ಸ್ಥಿತ್ವಾ ಆತ್ಮನೋ ಬಹುಧಾಕರಣಾತ್।**

**ಅಥ ಹ್ಯೇಷ ಆತ್ಮಾ ಪ್ರಕೃತಿಂ ಅನುಪ್ರವಿಶ್ಯ ಆತ್ಮಾನಂ ಬಹುಧಾ ಚಕಾರ।**

**ತಸ್ಮಾತ್ ಪ್ರಕೃತಿಃ ಪ್ರಕೃತಿರಿತ್ಯಾಚಕ್ಷತೇ ॥**

**ಇತಿ ಭಾಲ್ಲವೇಯ ಶ್ರುತಿಃ।**

**ಅವಿಕಾರೋಽಪಿ ಪರಮಃ ಪ್ರಕೃತಿಂ ತು ವಿಕಾರಿಣೀಂ।**

**ಅನುಪ್ರವಿಶ್ಯ ಗೋವಿಂದಃ ಪ್ರಕೃತಿಶ್ಚಾಭಿಧೀಯತೇ।**

**ಇತಿ ನಾರದೀಯೇ।**

**ನ ಚ ಅನ್ಯತ್ ಕಲ್ಪ್ಯಂ। ಅಪ್ರಾಮಾಣಿಕತ್ವಾತ್ ॥ 27 ॥**

''ಅತ್ಯುತ್ತಮ ಯತ್ನವುಳ್ಳವನು'' ಎಂಬ ಯೋಗಾರ್ಥವೂ ವಿಷ್ಣುವಿನಲ್ಲಿ ಇರುವುದರಿಂದ ಅವನು ಪ್ರಕೃತಿ. ಅವನು ಜಡವಾದ ಪ್ರಕೃತಿಯೊಳಗೆ ಪ್ರವೇಶಮಾಡಿ, ಅದನ್ನು ಮಹತ್ತತ್ವಾದಿರೂಪದಿಂದ ಪರಿಣಾಮಗೊಳ್ಳುವಂತೆ ಮಾಡಿ, ಆ ಪರಿಣತವಸ್ತುಗಳ ನಿಯಾಮಕನಾಗಿ ಅವುಗಳಲ್ಲಿದ್ದು ತನ್ನನ್ನು ಅನೇಕ ರೂಪಗಳುಳ್ಳವವನ್ನಾಗಿ ಮಾಡಿಕೊಳ್ಳುತ್ತಾನೆ. ಭಾಲ್ಲವೇಯ ಶ್ರುತಿ ಹೀಗೆಯೇ ಹೇಳುತ್ತದೆ- ''ಈ ಆತ್ಮನು ಪ್ರಕೃತಿಯಲ್ಲಿ ಪ್ರವೇಶಿಸಿ ತನ್ನನ್ನು ಅನೇಕ ರೂಪವುಳ್ಳವನನ್ನಾಗಿ ಮಾಡಿದ. ಆದ್ದರಿಂದ ಅವನನ್ನು ಪ್ರಕೃತಿ, ಪ್ರಕೃತಿ ಎನ್ನುತ್ತಾರೆ''.

ನಾರದೀಯ ಪುರಾಣದಲ್ಲಿ ಹೀಗಿದೆ- 'ತಾನು ವಿಕಾರ ಹೊಂದದೆಯೇ ಪ್ರಕೃತಿಯನ್ನು ಪ್ರವೇಶಿಸಿ ಗೋವಿಂದನು ವಿಕಾರಗೊಳಿಸುತ್ತಾನೆ. ಅದರಿಂದಾಗಿ ಅವನು ಪ್ರಕೃತಿ ಎಂದೂ ಹೇಳಲ್ಪಟ್ಟಿದ್ದಾನೆ.'

ನಾವು ಹೇಳುವ ಅರ್ಥವನ್ನು ಬಿಟ್ಟು ಇತರ ಭಾಷ್ಯಕಾರರು ಹೇಳುವ ಅರ್ಥವನ್ನು ಸೂತ್ರಕ್ಕೆ ಹೇಳಬಾರದು. ಅದಕ್ಕೆ ಪ್ರಮಾಣವೂ ಇಲ್ಲ. ಅದು ಪ್ರಮಾಣಕ್ಕೆ ವಿರುದ್ಧವೂ ಆಗಿದೆ.

**ವಿವರಣೆ -** 1. ಈ ಸೂತ್ರದಲ್ಲಿ ಪ್ರಕೃತಿ ಶಬ್ದದ ಅರ್ಥವು ವಿಷ್ಣುವಿನಲ್ಲಿ ಮುಖ್ಯವಾಗಿ ಇರುವುದರಿಂದಾಗಿಯೂ ಅವನು ಪ್ರಕೃತಿ ಶಬ್ದದಿಂದ ವಾಚ್ಯ ಎನ್ನಲಾಗಿದೆ. 'ಪ್ರಕೃಷ್ಟಾ ಕೃತಿಃ ಯಸ್ಯಾಸೌ ಪ್ರಕೃತಿಃ' ಅಸಾಧಾರಣ ಯತ್ನಶಾಲಿ ಎಂದರ್ಥ. ಇನ್ನಾರೂ ಮಾಡದ ಕಾರ್ಯವನ್ನು ಸೃಷ್ಟಿಯ ಆದಿಯಲ್ಲಿ ಅವನು ಮಾಡುತ್ತಾನೆ. ಪ್ರಕೃತಿಯನ್ನು ಮಹದಾದಿ ರೂಪದಿಂದ ಪರಿಣಾಮಗೊಳಿಸುವುದು ತನ್ನನ್ನು ಅನೇಕ ರೂಪನನ್ನಾಗಿ ಮಾಡಿ ಅದರಲ್ಲಿ ಸೇರಿಕೊಳ್ಳುವುದು. ಆದ್ದರಿಂದ ಅವನು ವಿಶಿಷ್ಟಕ್ರಿಯಾಶೀಲ. ಅದಕ್ಕಾಗಿ ಅವನೇ ಪ್ರಕೃತಿ.

2. ಶಾಂಕರ ಮತ್ತು ರಾಮಾನುಜ ಭಾಷ್ಯಗಳಲ್ಲಿ ಈ ಸೂತ್ರವು ಬ್ರಹ್ಮನಿಗೆ ಉಪಾದಾನ ಕಾರಣತ್ವವನ್ನು ಸಮರ್ಥಿಸಿದೆ ಎಂದು ವ್ಯಾಖ್ಯಾನ ಮಾಡಲಾಗಿದೆ. 'ಪ್ರಕೃತಿ' ಎಂದರೆ ಉಪಾದಾನ ಕಾರಣ. 'ಚ' ಶಬ್ದವು ನಿಮಿತ್ತ ಕಾರಣ ಎಂಬ ಅರ್ಥವನ್ನು ಹೇಳುತ್ತದೆ. ಮಡಿಕೆಗೆ ಮಣ್ಣು ಉಪಾದಾನ, ಕುಂಬಾರ ನಿಮಿತ್ತ. ಬ್ರಹ್ಮನು ಮಣ್ಣಿನಂತೆ ಉಪಾದಾನವೂ ನಿಮಿತ್ತವೂ ಆಗಿದ್ದಾನೆ, ಎಂದು ಸೂತ್ರದ ಅಭಿಪ್ರಾಯ. ಇದನ್ನು ಆಚಾರ್ಯರು ಸೂಕ್ಷ್ಮವಾಗಿ ನಿರಾಕರಿಸಿದ್ದಾರೆ. ನಿರ್ವಿಕಾರನಾದ ಬ್ರಹ್ಮ ಪರಿಣಾಮ ಹೊಂದಲಾರ. ಅಂದಮೇಲೆ ಅವನು ಉಪಾದಾನನಾಗುವುದು ಹೇಗೆ? ಹಾಗೆ ಹೇಳುವುದು ನಿರ್ವಿಕಾರ ಶ್ರುತಿಗೆ ವಿರುದ್ಧ. ಅಷ್ಟೇ ಅಲ್ಲ, ಅವನು ಉಪಾದಾನವೆನ್ನಲು ಸ್ಪಷ್ಟ ಆಧಾರಗಳೂ ಇಲ್ಲ.

## ಓಂ ॥ ಯೋನಿಶ್ಚ ಹಿ ಗೀಯತೇ ॥ ಓಂ

**ಅವ್ಯವಧಾನೇನ ಉತ್ಪತ್ತಿದ್ವಾರತ್ವಂ ಚ ಪ್ರಕೃತಿತ್ವಂ। ತಚ್ಚ ಅಸ್ಯೈವ ಹಿ ಗೀಯತೇ -**

**ಯದ್ ಭೂತಯೋನಿಂ ಪರಿಪಶ್ಯಂತಿ ಧೀರಾಃ (ಮುಂ.1.1.6) ಇತಿ।**

**ವ್ಯವಧಾನೇನ ಸೂತಿಸ್ತು ಪುಂಸ್ತ್ವಂ ವಿದ್ವದ್ಭಿರುಚ್ಯತೇ।**

**ಸೂತಿರವ್ಯವಧಾನೇನ ಪ್ರಕೃತಿತ್ವಮಿತಿ ಸ್ಥಿತಿಃ॥**

**ಉಭಯಾತ್ಮಕಸೂತಿತ್ವಾತ್ ವಾಸುದೇವಃ ಪರಃ ಪುಮಾನ್ ।**
**ಪ್ರಕೃತಿಃ ಪುರುಷಶ್ಚೇತಿ ಶಬ್ದೈರೇಕೋಽಭಿಧೀಯತೇ ॥ ಇತಿ ಬ್ರಹ್ಮಾಂಡೇ ॥**

## ॥ ಇತಿ ಪ್ರಕೃತ್ಯಧಿಕರಣಮ್ ॥

ಮತ್ತೊಬ್ಬರ ವ್ಯವಧಾನವಿಲ್ಲದೆ ಸ್ವದೇಹದಿಂದಲೇ ಸಂತತಿಯ ಉತ್ಪತ್ತಿಗೆ ಕಾರಣವಾಗುವುದೇ ಸ್ತ್ರೀತ್ವ. ಇಂತಹ ಸ್ತ್ರೀತ್ವ ವಿಷ್ಣುವಿಗೇ ಹೇಳಲ್ಪಟ್ಟಿದೆ. ''ಪ್ರಲಯಕಾಲದಲ್ಲಿ ತನ್ನ ಉದರದಲ್ಲಿದ್ದ ಬ್ರಹ್ಮಾದಿ ಚೇತನವರ್ಗಗಳಿಗೆ ಸೂಕ್ಷ್ಮದೇಹವನ್ನು ನೀಡುವ (ಭೂತಯೋನಿಂ) ಯಾರನ್ನು ಜ್ಞಾನಿಗಳು ಕಾಣುವರೋ (ಅಂತಹವನು ಅದೃಶ್ಯತ್ವಾದಿ ಗುಣವುಳ್ಳವನು)'' ಎಂದು. ಬ್ರಹ್ಮಾಂಡ ಪುರಾಣದಲ್ಲೂ ಹೀಗಿದೆ- ಸ್ತ್ರೀಯ ಮೂಲಕ ಸಂತಾನೋತ್ಪತ್ತಿಗೆ ಕಾರಣವಾಗುವುದು ಪುಂಸ್ತ್ವ ಎಂದು ಬಲ್ಲವರು ಹೇಳುತ್ತಾರೆ. ನೇರವಾಗಿ ಪ್ರಸವಕಾರಣತ್ವವೇ ಪ್ರಕೃತಿತ್ವ. (ಸ್ತ್ರೀಲಿಂಗಶಬ್ದ ಪ್ರವೃತಿ ನಿಮಿತ್ತ) ಇದು ವಸ್ತುಸ್ಥಿತಿ. ಎರಡೂ ರೀತಿಯ ಪ್ರಸವಕ್ಕೆ ಕಾರಣನಾದುದರಿಂದ ಪುರುಷೋತ್ತಮನಾದ ವಾಸುದೇವನು ಪ್ರಕೃತಿ ಎಂದೂ ಪುರುಷನೆಂದೂ ಒಬ್ಬನೇ ಹೇಳಲ್ಪಡುತ್ತಾನೆ.

**ವಿವರಣೆ** - ಪ್ರಕೃತಿ ಶಬ್ದದ ಯೌಗಿಕಾರ್ಥ ವಿಷ್ಣುವಿನಲ್ಲಿದ್ದರೂ ಆ ಶಬ್ದದಲ್ಲಿರುವ ಸ್ತ್ರೀಲಿಂಗ ವಾಚ್ಯವಾದ ಸ್ತ್ರೀತ್ವ ಅವನಲ್ಲಿ ಇಲ್ಲದಿರುವುದರಿಂದ ಅವನಿಗೆ ಪ್ರಕೃತಿ ಶಬ್ದ ಮುಖ್ಯನಾಮವಾಗುವುದು ಹೇಗೆ? ಅಲ್ಲದೆ, 'ಸ್ತ್ರೀ' ಎಂಬ ಶಬ್ದಕ್ಕೆ ಪ್ರವೃತ್ತಿ ನಿಮಿತ್ತ ಸ್ತ್ರೀತ್ವ. ಅದು ವಿಷ್ಣುವಿನಲ್ಲಿ ಇಲ್ಲ. ಅಂದಮೇಲೆ ವಿಷ್ಣು ಸ್ತ್ರೀಶಬ್ದದಿಂದ ಹೇಗೆ ವಾಚ್ಯನಾಗುತ್ತಾನೆ? ಈ ಎರಡು ಆಕ್ಷೇಪಗಳಿಗೆ ಇಲ್ಲಿ ಉತ್ತರವಿದೆ- ಪುರುಷ ಸ್ತ್ರೀಯ ಮೂಲಕ ಸಂತತಿಗೆ ಜನಕನಾಗುತ್ತಾನೆ. ಆದರೆ, ಸ್ತ್ರೀ ನೇರವಾಗಿ ಸಂತತಿಗೆ ಕಾರಣಳಾಗುತ್ತಾಳೆ. ಹೀಗೆ ಅನ್ಯ ವ್ಯವಧಾನವಿಲ್ಲದೆ ಪುತ್ರೋತ್ಪಾದಕತ್ವವೇ ಸ್ತ್ರೀಶಬ್ದವನ್ನು ಪ್ರಯೋಗ ಮಾಡಲು ನಿಮಿತ್ತ. ವಿಷ್ಣು ಪ್ರಲಯಕಾಲದಲ್ಲಿ ತನ್ನ ಉದರದಲ್ಲಿರುವ ಜೀವರಾಶಿಗಳಿಗೆ ಸೂಕ್ಷ್ಮಶರೀರ ನೀಡಿ ಸೃಷ್ಟಿಮಾಡುವುದರಿಂದ ಅವನಲ್ಲೂ ಅವ್ಯವಧಾನದಿಂದ ಪ್ರಸೂತಿ ಹೇತುತ್ವವಿದೆ. ಆದ್ದರಿಂದ ಅವನೂ ಸ್ತ್ರೀಶಬ್ದದಿಂದ ವಾಚ್ಯನಾಗಬಹುದು. ಲಕ್ಷ್ಮೀದೇವಿಯ ಮೂಲಕವೂ ಬ್ರಹ್ಮಾಂಡದ ಸೃಷ್ಟಿಗೆ ಕಾರಣನಾದುದರಿಂದ ಪುರುಷತ್ವವೂ ಅವನಲ್ಲಿದೆ. 'ನೈನಂ ವಾಚಾ ಸ್ತ್ರಿಯಂ ಬ್ರುವನ್' ಎಂಬುದು ಲೌಕಿಕವಾದ ಸ್ತ್ರೀತ್ವವನ್ನಷ್ಟೇ ನಿಷೇಧ ಮಾಡುತ್ತದೆ.

ವಾದಿರಾಜರು- ಪರಮಾತ್ಮ ತನ್ನ ದೇಹದಿಂದಲೇ ಸೃಷ್ಟಿಯನ್ನು ಮಾಡುವುದರಿಂದ ಸ್ತ್ರೀ ಎಂಬುದನ್ನು ಪುರುಷಸೂಕ್ತದ ಆಧಾರ ನೀಡಿ ಸಮರ್ಥಿಸಿದ್ದಾರೆ-

''ಬ್ರಾಹ್ಮಣೋಽಸ್ಯ ಮುಖಮಾಸೀದ್ ಬಾಹೂ ರಾಜನ್ಯಃ ಕೃತಃ ।
''ಮುಖಾದಿಂದ್ರಶ್ಚಾಗ್ನಿಶ್ಚ ಪ್ರಾಣಾದ್ ವಾಯುರಜಾಯತ ॥ ''

ಎಂದು ಮುಂತಾಗಿ ಪುರುಷನಾಮಕ ಪರಮಾತ್ಮನ ದೇಹದಿಂದಲೇ ಅಗ್ನ್ಯಾದಿ ದೇವತೆಗಳ ಸೃಷ್ಟಿಯನ್ನು ಹೇಳಲಾಗಿದೆ, ಎಂದು. ॥ ಸೂತ್ರ 28 ॥

## ದ್ವೈತದರ್ಶನದಲ್ಲಿ ಸೂತ್ರಗಳ ಅರ್ಥ

**1. ಓಂ ॥ ಪ್ರಕೃತಿಶ್ಚ ಪ್ರತಿಜ್ಞಾದೃಷ್ಟಾಂತಾನುಪರೋಧಾತ್ ॥ ಓಂ**

'ಎಲ್ಲ ನಾಮಗಳೂ ವಿಷ್ಣುವಿಗೆ ಇವೆ' ಎಂಬ ಪ್ರತಿಜ್ಞೆ, ನದಿಗಳು ಸಮುದ್ರ ಸೇರುವ ದೃಷ್ಟಾಂತ. ಇವೆರಡರಿಂದ ಬ್ರಹ್ಮನು ಪುಂಲಿಂಗ ಶಬ್ದದಂತೆ ಪ್ರಕೃತಿ ಮೊದಲಾದ ಸ್ತ್ರೀಲಿಂಗ ಶಬ್ದಗಳಿಂದಲೂ, ಸ್ತ್ರೀಶಬ್ದದಿಂದಲೂ ವಾಚ್ಯನಾಗಿದ್ದಾನೆ. (ಚ ಶಬ್ದವು ಸಕಲ ಸ್ತ್ರೀಲಿಂಗ ಶಬ್ದಗಳಿಗೆ ಸಮುಚ್ಚಾಯಕವೆಂದು ತತ್ತ್ವಪ್ರದೀಪದಲ್ಲಿದೆ.)

(ಅತ್ರ ಸ್ತ್ರೀಲಿಂಗ ಶಬ್ದಾಃ ಸಮನ್ವೀಯಂತೇ । ಶ್ರೀವಾಚಿತಯಾ ಪ್ರಾಧಾನ್ಯಾತ್ ಪ್ರಕೃತಿಪದಸ್ಯ ಅನ್ಯೋಪಲಕ್ಷಣತ್ವಾತ್ । ತತ್ತು ಇತಿ ಅಸ್ತಿ । 'ಸೈಷಾ ಪ್ರಕೃತಿಃ' ಇತ್ಯಾದ್ಯುಕ್ತ ಪ್ರಕೃತ್ಯಾದಿ ಮುಖ್ಯತೋ ಬ್ರಹ್ಮೈವ । ನ ತು ಶ್ರೀತತ್ವಾದಿ । ಕುತಃ ? 'ಹಂತ ಏತಮೇವ ಪುರುಷಂ ಸರ್ವಾಣಿ ನಾಮಾನಿ ಅಭಿವದಂತಿ' ಇತಿ ಪ್ರತಿಜ್ಞಾ, 'ಯಥಾ ನದ್ಯಃ ಸ್ಯಂದಮಾನಾಃ ಸಮುದ್ರಾಯಣಾಃ ಸಮುದ್ರಮಭಿ ವಿಶಂತಿ ಏವಮೇವೈತಾನಿ ನಾಮಾನಿ' ಇತಿ ದೃಷ್ಟಾಂತಃ । ತಯೋಃ ಅನುಪರೋಧಾತ್ - ಅನುಸಾರಾದಿತ್ಯರ್ಥಃ । ಅನ್ಯಥಾ ತದುಪರೋಧಃ ಸ್ಯಾದಿತಿ ಭಾವಃ ।)

**2. ಓಂ ॥ ಅಭಿಧ್ಯೋಪದೇಶಾಚ್ಚ ॥ ಓಂ**

ಪ್ರಕೃತಿತ್ವೇನ=ಪ್ರಕೃತಿಶಬ್ದವಾಚ್ಯವನ್ನಾಗಿ ಅಭಿಧ್ಯೋಪದೇಶಾತ್, ಅಭಿಧ್ಯಾಯಾಃ= ಇಚ್ಛೆಗೆ ಉಪದೇಶಾತ್='ಪ್ರಕೃತಿಃ ವಾಸನೇತ್ಯೇವಂ ತವೇಚ್ಛಾನಂತ ಕಥ್ಯತೇ' ಎಂದು ಸ್ಮೃತಿಯಲ್ಲಿ ಪ್ರಕೃತಿ ಎಂದು ಕರೆದಿರುವುದರಿಂದ ಹಾಗೂ ಬ್ರಹ್ಮನನ್ನು ಅಭಿಧ್ಯೋಪದೇಶಾತ್- ಅಭಿಧ್ಯಾತ್ವೇನ=ಇಚ್ಛಾ ಸ್ವರೂಪನನ್ನಾಗಿ ಉಪದೇಶಾತ್='ಸೋಽಭಿಧ್ಯಾ ಸ ಜೂತಿಃ' ಎಂದು ಶ್ರುತಿಯಲ್ಲಿ ಹೇಳಿರುವುದರಿಂದಲೂ ಪ್ರಕೃತಿ ಶಬ್ದದಿಂದ ವಿಷ್ಣುವೇ ವಾಚ್ಯ.

(ಪ್ರಕೃತಿಃ ಇತಿ ಅನುವರ್ತಮಾನಂ ಆವರ್ತತೇ । ದ್ವಿತೀಯಂ ಭಾವಪ್ರಧಾನಂ । ಯೋಗ್ಯತಯಾ ಅಭಿಧ್ಯೇತ್ಯನೇನ ಅನ್ವೇತಿ । ಅಭಿಧ್ಯಾ ಇತ್ಯಪಿ ಆವರ್ತತೇ । ದ್ವಿತೀಯಂ ಭಾವಪ್ರಧಾನಂ ।

ಪ್ರಕೃತಿಃ ಬ್ರಹ್ಮೈವ । ಕುತಃ ? ಪ್ರಕೃತಿತ್ವೇನ=ಪ್ರಕೃತಿ ಶಬ್ದ ವಾಚ್ಯತ್ವೇನ ಅಭಿಧ್ಯಾಯಾಃ= ಇಚ್ಛಾಯಾಃ ಉಪದೇಶಾತ್ । ತಥಾ ಬ್ರಹ್ಮಣೋ ಅಭಿಧ್ಯಾತ್ವೋಪದೇಶಾತ್ । ಪ್ರಕೃತಿಶಬ್ದವಾಚ್ಯ-ಇಚ್ಛಾತ್ಮಕತ್ವಾಚ್ಚ ಪ್ರಕೃತಿಶಬ್ದಂ ಬ್ರಹ್ಮೇತ್ಯರ್ಥಃ ।)

**3. ಓಂ ॥ ಸಾಕ್ಷಾಚ್ಚ ಉಭಯಾಮ್ನಾನಾತ್ ॥ ಓಂ**

ವಿಷ್ಣುವನ್ನು ಇಚ್ಛೆಯ ವ್ಯವಧಾನ ಇಲ್ಲದೆ, ಸಾಕ್ಷಾತ್ತಾಗಿ 'ನಾಮಾನಿ ಸರ್ವಾಣಿ' ಎಂದು ಸಾಮಾನ್ಯವಾಗಿಯೂ ಅಲ್ಲದೆ, ವಿಶಿಷ್ಯ ಪ್ರಕೃತಿ ಪುರುಷ ಶಬ್ದಗಳಿಂದ ಶ್ರುತಿಯು ಹೇಳುತ್ತಿರುವುದರಿಂದಲೂ ಅವನು ಪ್ರಕೃತಿ, ಸ್ತ್ರೀ ಮುಂತಾದ ಶಬ್ದಗಳಿಂದ ವಾಚ್ಯನಾಗಿದ್ದಾನೆ.

(ಚ ಏವ । ಪ್ರಕೃತ್ಯಾದಿಃ ಬ್ರಹ್ಮೈವ । ಸಾಕ್ಷಾದೇವ=ಸಾಮಾನ್ಯ ಪಾರಂಪರ್ಯೇಣ ವಿನಾ ಪ್ರಕೃತ್ಯಾದಿ ಶಬ್ದತ್ವಸ್ಯ ಪುರುಷತ್ವಸ್ಯ ಚ ಆಮ್ನಾನಾತ್ 'ಏಷ ಸ್ತ್ರೀ ಏಷ ಪುರುಷಃ' ಇತಿ ಶ್ರುತೌ ಇತ್ಯರ್ಥಃ॥)

**4. ಓಂ ॥ ಆತ್ಮಕೃತೇಃ ಪರಿಣಾಮಾತ್ ॥ ಓಂ**

ಪ್ರಕೃತಿಯಲ್ಲಿ ಮಹದಾದಿರೂಪದಿಂದ ಪರಿಣಾಮವನ್ನು ಉಂಟುಮಾಡಿ ಅವುಗಳನ್ನು ನಿಯಂತ್ರಿಸಲು ಆತ್ಮಕೃತೇಃ=ತನ್ನನ್ನು ಅನೇಕ ರೂಪನನ್ನಾಗಿ ಮಾಡುವುದರಿಂದಲೂ ಪ್ರಕೃತಿಶಬ್ದದಿಂದ ವಿಷ್ಣು ವಾಚ್ಯನಾಗಿದ್ದಾನೆ.

(ಯೋಗ್ಯತಯಾ ಪ್ರಕೃತೇರಿತ್ಯಸ್ವೇತಿ । ಪರಿಣಾಮಾತ್ ಇತಿ ಲ್ಯಬ್‌ಲೋಪೇ ಪಂಚಮೀ । ಪ್ರಕೃತೇಃ ಪರಿಣಾಮಂ ವಿಧಾಯ ತತ್ ಪ್ರೇರಣಾಯ ಆತ್ಮನಃ ಕೃತೇಃ=ಬಹುಧಾಕರಣಾತ್ ಪ್ರಕೃತಿಃ ಬ್ರಹ್ಮೇತ್ಯರ್ಥಃ । ಪ್ರಕೃಷ್ಟಾ ಕೃತಿರ್ಯಸ್ಯ ಇತಿ ಯೋಗಸಂಭವಾತ್ ।)

**5. ಓಂ ॥ ಯೋನಿಶ್ಚ ಹಿ ಗೀಯತೇ ॥ ಓಂ**

'ಯದ್ಭೂತಯೋನಿಂ' ಎಂಬ ಶ್ರುತಿಯಲ್ಲಿ ವಿಷ್ಣುವು ತನ್ನ ದೇಹದಿಂದಲೇ ಪುತ್ರೋತ್ಪಾದಕನಾಗಿ ಹೇಳಲ್ಪಟ್ಟಿರುವುದರಿಂದ ಪ್ರಕೃತಿ-ಸ್ತ್ರೀ ಮುಂತಾದ ಶಬ್ದಗಳಿಂದ ಅವನು ವಾಚ್ಯನಾಗಿದ್ದಾನೆ.

(ಹಿ=ಯಸ್ಮಾತ್ ಯೋನಿಶ್ಚ =ಸ್ವದೇಹಾದುತ್ಪಾದಕಂ ಬ್ರಹ್ಮ ಗೀಯತೇ 'ಯದ್ಭೂತಯೋನಿಂ ಪರಿಪಶ್ಯಂತಿ' ಇತಿ ಶ್ರುತೌ ಅತಃ ಪ್ರಕೃತ್ಯಾದಿ ಶಬ್ದಂ ಬ್ರಹ್ಮೇತ್ಯರ್ಥಃ। 'ಸೂತಿರವ್ಯವಧಾನೇನ' ಇತಿ ಸ್ಮೃತೇಃ ಅವ್ಯವಧಾನೇನ ಸ್ವದೇಹಾದೇವ ಉತ್ಪಾದಕತ್ವರೂಪ ಯೋನಿಶಬ್ದತಃ ಸ್ತ್ರೀತ್ವ ಸಂಭವಾದಿತಿ ಭಾವಃ।)

## ಶಾಂಕರಭಾಷ್ಯದಲ್ಲಿ ಸೂತ್ರಗಳ ಅರ್ಥ

ದ್ವಿತೀಯ ಸೂತ್ರದಲ್ಲಿ ಬ್ರಹ್ಮನಿಗೆ ಹೇಳುವ ಜಗತ್ಕಾರಣತ್ವ ಯಾವ ವಿಧವಾದುದು? ಎಂದು ಇಲ್ಲಿ ವಿಚಾರ ಮಾಡಲಾಗಿದೆ. ಕಾರ್ಯಕ್ಕೆ ಎರಡು ರೀತಿಯ ಕಾರಣವಿರುತ್ತದೆ. ಉಪಾದಾನ ಕಾರಣ, ನಿಮಿತ್ತ ಕಾರಣ. ವಿಕಾರಹೊಂದಿ ಕಾರ್ಯರೂಪವನ್ನು ಪಡೆಯುವ ಕಾರಣ ಉಪಾದಾನ ಕಾರಣ. ಉದಾಹರಣೆಗೆ, ಬಂಗಾರವು ಬಳೆಯ ರೂಪವನ್ನು ತಾಳುವುದು. ಅದು ಆ ರೂಪನ್ನು ಪಡೆಯುವಂತೆ ಮಾಡುವ ಅಕ್ಕಸಾಲಿಗ ನಿಮಿತ್ತಕಾರಣ. ಪ್ರಕೃತ ಬ್ರಹ್ಮ ಜಗತ್ತಿಗೆ ಅಕ್ಕಸಾಲಿಗನಂತೆ ನಿಮಿತ್ತಕಾರಣ ಮಾತ್ರ. ಏಕೆಂದರೆ, ಅವನು 'ಸೋಽಕಾಮಯತ' ಎಂದು ಇಚ್ಛೆ ಮಾಡಿ ಪ್ರಯತ್ನಪೂರ್ವಕವಾಗಿ ಈ ಜಗತ್ತನ್ನು ನಿರ್ಮಿಸಿದ್ದಾನೆ. ಉಪಾದಾನ ಕಾರಣವಾದುದು ಎಂದೂ ತಾನು ಬಯಸಿ ರೂಪಾಂತರವನ್ನು ತಾಳುವುದಿಲ್ಲ. ಆದ್ದರಿಂದ ಬ್ರಹ್ಮ ಜಗತ್ತಿಗೆ ನಿಮಿತ್ತ ಮಾತ್ರ, ಎಂದು ಪೂರ್ವಪಕ್ಷ. ಅದಕ್ಕೆ

## ದ್ವೈತದರ್ಶನದಲ್ಲಿ ಸೂತ್ರಗಳ ಅರ್ಥ

**1. ಓಂ ॥ ಪ್ರಕೃತಿಶ್ಚ ಪ್ರತಿಜ್ಞಾದೃಷ್ಟಾಂತಾನುಪರೋಧಾತ್ ॥ ಓಂ**

'ಎಲ್ಲ ನಾಮಗಳೂ ವಿಷ್ಣುವಿಗೆ ಇವೆ' ಎಂಬ ಪ್ರತಿಜ್ಞೆ, ನದಿಗಳು ಸಮುದ್ರ ಸೇರುವ ದೃಷ್ಟಾಂತ. ಇವೆರಡರಿಂದ ಬ್ರಹ್ಮನು ಪುಂಲಿಂಗ ಶಬ್ದದಂತೆ ಪ್ರಕೃತಿ ಮೊದಲಾದ ಸ್ತ್ರೀಲಿಂಗ ಶಬ್ದಗಳಿಂದಲೂ, ಸ್ತ್ರೀಶಬ್ದದಿಂದಲೂ ವಾಚ್ಯನಾಗಿದ್ದಾನೆ. (ಚ ಶಬ್ದವು ಸಕಲ ಸ್ತ್ರೀಲಿಂಗ ಶಬ್ದಗಳಿಗೆ ಸಮುಚ್ಚಾಯಕವೆಂದು ತತ್ತ್ವಪ್ರದೀಪದಲ್ಲಿದೆ.)

(ಅತ್ರ ಸ್ತ್ರೀಲಿಂಗ ಶಬ್ದಾಃ ಸಮನ್ವೀಯಂತೇ । ಶ್ರೀವಾಚಿತಯಾ ಪ್ರಾಧಾನ್ಯಾತ್ ಪ್ರಕೃತಿಪದಸ್ಯ ಅನ್ಯೋಪಲಕ್ಷಣತ್ವಾತ್ । ತತ್ತು ಇತಿ ಅಸ್ತಿ । 'ಸೈಷಾ ಪ್ರಕೃತಿಃ' ಇತ್ಯಾದ್ಯುಕ್ತ ಪ್ರಕೃತ್ಯಾದಿ ಮುಖ್ಯತೋ ಬ್ರಹ್ಮೈವ । ನ ತು ಶ್ರೀತತ್ವಾದಿ । ಕುತಃ ? 'ಹಂತ ಏತಮೇವ ಪುರುಷಂ ಸರ್ವಾಣಿ ನಾಮಾನಿ ಅಭಿವದಂತಿ' ಇತಿ ಪ್ರತಿಜ್ಞಾ, 'ಯಥಾ ನದ್ಯಃ ಸ್ಯಂದಮಾನಾಃ ಸಮುದ್ರಾಯಣಾಃ ಸಮುದ್ರಮಭಿ ವಿಶಂತಿ ಏವಮೇವೈತಾನಿ ನಾಮಾನಿ' ಇತಿ ದೃಷ್ಟಾಂತಃ । ತಯೋಃ ಅನುಪರೋಧಾತ್ - ಅನುಸಾರಾದಿತ್ಯರ್ಥಃ । ಅನ್ಯಥಾ ತದುಪರೋಧಃ ಸ್ಯಾದಿತಿ ಭಾವಃ ।)

**2. ಓಂ ॥ ಅಭಿಧ್ಯೋಪದೇಶಾಚ್ಚ ॥ ಓಂ**

ಪ್ರಕೃತಿತ್ವೇನ=ಪ್ರಕೃತಿಶಬ್ದವಾಚ್ಯವನ್ನಾಗಿ ಅಭಿಧ್ಯೋಪದೇಶಾತ್, ಅಭಿಧ್ಯಾಯಾಃ= ಇಚ್ಛೆಗೆ ಉಪದೇಶಾತ್='ಪ್ರಕೃತಿಃ ವಾಸನೇತ್ಯೇವಂ ತವೇಚ್ಛಾನಂತ ಕಥ್ಯತೇ' ಎಂದು ಸ್ಮೃತಿಯಲ್ಲಿ ಪ್ರಕೃತಿ ಎಂದು ಕರೆದಿರುವುದರಿಂದ ಹಾಗೂ ಬ್ರಹ್ಮನನ್ನು ಅಭಿಧ್ಯೋಪದೇಶಾತ್- ಅಭಿಧ್ಯಾತ್ವೇನ=ಇಚ್ಛಾ ಸ್ವರೂಪನನ್ನಾಗಿ ಉಪದೇಶಾತ್='ಸೋಽಭಿಧ್ಯಾ ಸ ಜೂತಿಃ' ಎಂದು ಶ್ರುತಿಯಲ್ಲಿ ಹೇಳಿರುವುದರಿಂದಲೂ ಪ್ರಕೃತಿ ಶಬ್ದದಿಂದ ವಿಷ್ಣುವೇ ವಾಚ್ಯ.

(ಪ್ರಕೃತಿಃ ಇತಿ ಅನುವರ್ತಮಾನಂ ಆವರ್ತತೇ । ದ್ವಿತೀಯಂ ಭಾವಪ್ರಧಾನಂ । ಯೋಗ್ಯತಯಾ ಅಭಿಧ್ಯೇತ್ಯನೇನ ಅನ್ವೇತಿ । ಅಭಿಧ್ಯಾ ಇತ್ಯಪಿ ಆವರ್ತತೇ । ದ್ವಿತೀಯಂ ಭಾವಪ್ರಧಾನಂ ।

ಪ್ರಕೃತಿಃ ಬ್ರಹ್ಮೈವ । ಕುತಃ ? ಪ್ರಕೃತಿತ್ವೇನ=ಪ್ರಕೃತಿ ಶಬ್ದ ವಾಚ್ಯತ್ವೇನ ಅಭಿಧ್ಯಾಯಾಃ= ಇಚ್ಛಾಯಾಃ ಉಪದೇಶಾತ್ । ತಥಾ ಬ್ರಹ್ಮಣೋ ಅಭಿಧ್ಯಾತ್ವೋಪದೇಶಾತ್ । ಪ್ರಕೃತಿಶಬ್ದವಾಚ್ಯ-ಇಚ್ಛಾತ್ಮಕತ್ವಾಚ್ಚ ಪ್ರಕೃತಿಶಬ್ದಂ ಬ್ರಹ್ಮೇತ್ಯರ್ಥಃ ।)

**3. ಓಂ ॥ ಸಾಕ್ಷಾಚ್ಚ ಉಭಯಾಮ್ನಾನಾತ್ ॥ ಓಂ**

ವಿಷ್ಣುವನ್ನು, ಇಚ್ಛೆಯ ವ್ಯವಧಾನ ಇಲ್ಲದೆ, ಸಾಕ್ಷಾತ್ತಾಗಿ 'ನಾಮಾನಿ ಸರ್ವಾಣಿ' ಎಂದು ಸಾಮಾನ್ಯವಾಗಿಯೂ ಅಲ್ಲದೆ, ವಿಶಿಷ್ಯ ಪ್ರಕೃತಿ ಪುರುಷ ಶಬ್ದಗಳಿಂದ ಶ್ರುತಿಯು ಹೇಳುತ್ತಿರುವುದರಿಂದಲೂ ಅವನು ಪ್ರಕೃತಿ, ಸ್ತ್ರೀ ಮುಂತಾದ ಶಬ್ದಗಳಿಂದ ವಾಚ್ಯನಾಗಿದ್ದಾನೆ.

(ಚ ಏವ । ಪ್ರಕೃತ್ಯಾದಿಃ ಬ್ರಹ್ಮೈವ । ಸಾಕ್ಷಾದೇವ=ಸಾಮಾನ್ಯ ಪಾರಂಪರ್ಯೇಣ ವಿನಾ ಪ್ರಕೃತ್ಯಾದಿ ಶಬ್ದತ್ವಸ್ಯ ಪುರುಷತ್ವಸ್ಯ ಚ ಆಮ್ನಾನಾತ್ 'ಏಷ ಸ್ತ್ರೀ ಏಷ ಪುರುಷಃ' ಇತಿ ಶ್ರುತೌ ಇತ್ಯರ್ಥಃ।)

**4. ಓಂ ॥ ಆತ್ಮಕೃತೇಃ ಪರಿಣಾಮಾತ್ ॥ ಓಂ**

ಪ್ರಕೃತಿಯಲ್ಲಿ ಮಹದಾದಿರೂಪದಿಂದ ಪರಿಣಾಮವನ್ನು ಉಂಟುಮಾಡಿ ಅವುಗಳನ್ನು ನಿಯಂತ್ರಿಸಲು ಆತ್ಮಕೃತೇಃ=ತನ್ನನ್ನು ಅನೇಕ ರೂಪನನ್ನಾಗಿ ಮಾಡುವುದರಿಂದಲೂ ಪ್ರಕೃತಿಶಬ್ದದಿಂದ ವಿಷ್ಣು ವಾಚ್ಯನಾಗಿದ್ದಾನೆ.

(ಯೋಗ್ಯತಯಾ ಪ್ರಕೃತೇರಿತ್ಯಸ್ವೇತಿ । ಪರಿಣಾಮಾತ್ ಇತಿ ಲ್ಯಬ್‌ಲೋಪೇ ಪಂಚಮೀ । ಪ್ರಕೃತೇಃ ಪರಿಣಾಮಂ ವಿಧಾಯ ತತ್ ಪ್ರೇರಣಾಯ ಆತ್ಮನಃ ಕೃತೇಃ=ಬಹುಧಾಕರಣಾತ್ ಪ್ರಕೃತಿಃ ಬ್ರಹ್ಮೇತ್ಯರ್ಥಃ । ಪ್ರಕೃಷ್ಟಾ ಕೃತಿರ್ಯಸ್ಯ ಇತಿ ಯೋಗಸಂಭವಾತ್ ।)

**5. ಓಂ ॥ ಯೋನಿಶ್ಚ ಹಿ ಗೀಯತೇ ॥ ಓಂ**

'ಯದ್ಭೂತಯೋನಿಂ' ಎಂಬ ಶ್ರುತಿಯಲ್ಲಿ ವಿಷ್ಣುವು ತನ್ನ ದೇಹದಿಂದಲೇ ಪುತ್ರೋತ್ಪಾದಕನಾಗಿ ಹೇಳಲ್ಪಟ್ಟಿರುವುದರಿಂದ ಪ್ರಕೃತಿ-ಸ್ತ್ರೀ ಮುಂತಾದ ಶಬ್ದಗಳಿಂದ ಅವನು ವಾಚ್ಯನಾಗಿದ್ದಾನೆ.

(ಹಿ=ಯಸ್ಮಾತ್ ಯೋನಿಶ್ಚ =ಸ್ವದೇಹಾದುತ್ಪಾದಕಂ ಬ್ರಹ್ಮ ಗೀಯತೇ 'ಯದ್ಭೂತಯೋನಿಂ ಪರಿಪಶ್ಯಂತಿ' ಇತಿ ಶ್ರುತೌ ಅತಃ ಪ್ರಕೃತ್ಯಾದಿ ಶಬ್ದಂ ಬ್ರಹ್ಮೇತ್ಯರ್ಥಃ। 'ಸೂತಿರವ್ಯವಧಾನೇನ' ಇತಿ ಸ್ಮೃತೇಃ ಅವ್ಯವಧಾನೇನ ಸ್ವದೇಹಾದೇವ ಉತ್ಪಾದಕತ್ವರೂಪ ಯೋನಿಶಬ್ದತಃ ಸ್ತ್ರೀತ್ವ ಸಂಭವಾದಿತಿ ಭಾವಃ।)

## ಶಾಂಕರಭಾಷ್ಯದಲ್ಲಿ ಸೂತ್ರಗಳ ಅರ್ಥ

ದ್ವಿತೀಯ ಸೂತ್ರದಲ್ಲಿ ಬ್ರಹ್ಮನಿಗೆ ಹೇಳುವ ಜಗತ್ಕಾರಣತ್ವ ಯಾವ ವಿಧವಾದುದು? ಎಂದು ಇಲ್ಲಿ ವಿಚಾರ ಮಾಡಲಾಗಿದೆ. ಕಾರ್ಯಕ್ಕೆ ಎರಡು ರೀತಿಯ ಕಾರಣವಿರುತ್ತದೆ. ಉಪಾದಾನ ಕಾರಣ, ನಿಮಿತ್ತ ಕಾರಣ. ವಿಕಾರಹೊಂದಿ ಕಾರ್ಯರೂಪವನ್ನು ಪಡೆಯುವ ಕಾರಣ ಉಪಾದಾನ ಕಾರಣ. ಉದಾಹರಣೆಗೆ, ಬಂಗಾರವು ಬಳೆಯ ರೂಪವನ್ನು ತಾಳುವುದು. ಅದು ಆ ರೂಪನ್ನು ಪಡೆಯುವಂತೆ ಮಾಡುವ ಅಕ್ಕಸಾಲಿಗ ನಿಮಿತ್ತಕಾರಣ. ಪ್ರಕೃತ ಬ್ರಹ್ಮ ಜಗತ್ತಿಗೆ ಅಕ್ಕಸಾಲಿಗನಂತೆ ನಿಮಿತ್ತಕಾರಣ ಮಾತ್ರ. ಏಕೆಂದರೆ, ಅವನು 'ಸೋऽಕಾಮಯತ' ಎಂದು ಇಚ್ಛೆ ಮಾಡಿ ಪ್ರಯತ್ನಪೂರ್ವಕವಾಗಿ ಈ ಜಗತ್ತನ್ನು ನಿರ್ಮಿಸಿದ್ದಾನೆ. ಉಪಾದಾನ ಕಾರಣವಾದುದು ಎಂದೂ ತಾನು ಬಯಸಿ ರೂಪಾಂತರವನ್ನು ತಾಳುವುದಿಲ್ಲ. ಆದ್ದರಿಂದ ಬ್ರಹ್ಮ ಜಗತ್ತಿಗೆ ನಿಮಿತ್ತ ಮಾತ್ರ, ಎಂದು ಪೂರ್ವಪಕ್ಷ. ಅದಕ್ಕೆ

ಉತ್ತರ- **'ಪ್ರಕೃತಿಶ್ಚ ಪ್ರತಿಜ್ಞಾ-ದೃಷ್ಟಾಂತಾನುಪರೋಧಾತ್''** ಎಂದು. ಬ್ರಹ್ಮನು ಪ್ರಕೃತಿ-ಉಪಾದಾನನೂ ಚ=ನಿಮಿತ್ತನೂ ಆಗಿದ್ದಾನೆ. ಈ ಜಗತ್ತಿಗೆ ಉಪಾದಾನ ಬೇರೆ, ನಿಮಿತ್ತ ಬೇರಲ್ಲ, ಎರಡೂ ಬ್ರಹ್ಮನೇ. ಅವನು ಅಭಿನ್ನ ನಿಮಿತ್ತೋಪಾದಾನ. ಅದಕ್ಕೆ ಆಧಾರ - ಪ್ರತಿಜ್ಞಾ-ಮತ್ತು ದೃಷ್ಟಾಂತಗಳು. ಛಾಂದೋಗ್ಯದಲ್ಲಿ 'ಯೇನಾಶ್ರುತಂ ಶ್ರುತಂ ಭವತಿ' ಬ್ರಹ್ಮನ ಜ್ಞಾನದಿಂದ ಈ ಜಗತ್ತಿನ ಜ್ಞಾನ ಬರುತ್ತದೆ' ಎಂದು ಉದ್ದಾಲಕರು ಪ್ರತಿಜ್ಞೆ ಮಾಡಿದಾಗ ಶ್ವೇತಕೇತು 'ಕಥಂ ನು ಭಗವಃ ಸ ಆದೇಶಃ ಭವತಿ - ಅದು ಹೇಗೆ?' ಎಂದು ಕೇಳಿದ. ಅದರ ಸಮರ್ಥನೆಗಾಗಿ ಉದ್ದಾಲಕರು

''ಯಥಾ ಸೋಮ್ಯ ಏಕೇನ ಮೃತ್ಪಿಂಡೇನ

ವಿಜ್ಞಾತೇನ ಸರ್ವಂ ಮೃನ್ಮಯಂ ವಿಜ್ಞಾತಂ ಸ್ಯಾತ್''

ಎಂದು ದೃಷ್ಟಾಂತವನ್ನು ಹೇಳಿದ್ದಾರೆ. ಮಣ್ಣಿನಿಂದ ಮಡಿಕೆ ಕುಡಿಕೆಗಳು ತಯಾರಾಗುತ್ತವೆ. ಅವು ಮಣ್ಣಿನ ಆಕಾರವಿಶೇಷಗಳು. ಹೀಗಾಗಿ ಅವೂ ಮಣ್ಣೆ. ಮಡಿಕೆ ಎಂದು ಹೆಸರು ಮಾತ್ರ. ಅದರಂತೆ ಈ ಜಗತ್ತೆಲ್ಲವೂ ಬ್ರಹ್ಮನೇ ಆಗಿರುವುದರಿಂದ ಬ್ರಹ್ಮಜ್ಞಾನದಿಂದ ಈ ಜಗತ್ತಿನ ಜ್ಞಾನ ಬರುತ್ತದೆ.

ಈ ವಿವರಣೆಯಿಂದ ಮಣ್ಣಿನಂತೆ ಬ್ರಹ್ಮನೂ ಈ ಜಗತ್ತಿಗೆ ಉಪಾದಾನನೆಂದು ತಿಳಿಯುತ್ತದೆ.

**2. ಅಭಿಧ್ಯೋಪದೇಶಾಚ್ಚ** - 'ಸೋಽಕಾಮಯತ ಬಹುಸ್ಯಾಂ ಪ್ರಜಾಯೇಯೇತಿ' ಹೀಗೆ ಇಚ್ಛೆ ಮಾಡಿ ಬ್ರಹ್ಮನು ಬಹುರೂಪವನ್ನು ತಾಳಿದನು ಎಂದಿರುವುದರಿಂದ ಅವನು ನಿಮಿತ್ತನೂ ಆಗಿದ್ದಾನೆ. ಕೇವಲ ಉಪಾದಾನವಾದುದು ಹೀಗೆ ತಾನೇ ಇಚ್ಛೆ ಮಾಡಿ ಬಹುರೂಪವಾಗುವುದಿಲ್ಲ.

**3. ಸಾಕ್ಷಾಚ್ಚ ಉಭಯಾಮ್ನಾನಾತ್-** ''ಸರ್ವಾಣಿ ಹ ವಾ ಇಮಾನಿ ಭೂತಾನಿ ಆಕಾಶಾದೇವ ಸಮುತ್ಪದ್ಯಂತೇ ಆಕಾಶಂ ಪ್ರತಿ ಅಸ್ತಂ ಯಾಂತಿ''

ಎಂದು ಛಾಂದೋಗ್ಯ ಶ್ರುತಿಯಲ್ಲಿ ಸಾಕ್ಷಾತ್ತಾಗಿ ಬ್ರಹ್ಮನಲ್ಲೇ ಈ ಪ್ರಪಂಚದ ಉತ್ಪತ್ತಿ ಲಯಗಳೆರಡನ್ನೂ ಹೇಳಲಾಗಿದೆ. ಭೂಮಿ ಸಸ್ಯಗಳ ಹುಟ್ಟಿಗೂ ಲಯಕ್ಕೂ ಅಧಿಷ್ಠಾನವಾದುದರಿಂದ ಸಸ್ಯಗಳಿಗೆ ಉಪಾದಾನವೆನಿಸುವಂತೆ ಬ್ರಹ್ಮನೂ ಪ್ರಪಂಚಕ್ಕೆ ಉಪಾದಾನ.

**4. ಆತ್ಮಕೃತೇಃ ಪರಿಣಾಮಾತ್** - 'ತದಾತ್ಮಾನಂ ಸ್ವಯಮಕುರುತ' ಎಂದು ಬ್ರಹ್ಮನು ಆತ್ಮ ವಿಷಯಕವಾದ ಆತ್ಮಕರ್ಮಕವಾದ ಕೃತಿ ಉಳ್ಳವನು ಎನ್ನಲಾಗಿದೆ. ಅರ್ಥಾತ್ ಬ್ರಹ್ಮನು ತನ್ನ ಪ್ರಯತ್ನದಿಂದ ತನ್ನನ್ನೇ ಅನೇಕ ರೂಪವನ್ನಾಗಿ ಮಾಡಿಕೊಂಡನು ಎಂದಿದೆ. ಅದು ಹೇಗೆ? ಪರಿಣಾಮಾತ್=ತನ್ನನ್ನು ಜಗತ್ತಿನ ರೂಪವಾಗಿ ತೋರಿಸಿಕೊಳ್ಳುವುದರಿಂದ. ಹಗ್ಗವು

ಹಾವಿನ ರೂಪದಿಂದ ತೋರುವಂತೆ ಬ್ರಹ್ಮನೂ ಜಗದಾಕಾರದಿಂದ ಕಾಣಿಸಿಕೊಂಡು ಬಹುರೂಪನಾದ. ಇಲ್ಲಿ ಪ್ರಯತ್ನವನ್ನು ಹೇಳಿರುವುದರಿಂದ ನಿಮಿತ್ತನೆಂದೂ ಪರಿಣಾಮವನ್ನು ಹೇಳಿರುವುದರಿಂದ ಉಪಾದಾನನೆಂದೂ ತಿಳಿಯುತ್ತದೆ.

ಅಥವಾ, ಪರಿಣಾಮಾತ್ ಎಂದು ಪ್ರತ್ಯೇಕ ಸೂತ್ರ- 'ಸಚ್ಚ-ತ್ಯಚ್ಚಾಭವತ್' ಎಂಬ ಶ್ರುತಿ ಬ್ರಹ್ಮನು ಸದಾದಿ ಪ್ರಪಂಚರೂಪನಾಗಿದ್ದಾನೆ ಎನ್ನುತ್ತದೆ. ಇದರಿಂದ ಅವನು ಉಪಾದಾನನೆಂದು ತಿಳಿಯುತ್ತದೆ.

5. **ಯೋನಿಶ್ಚ ಹಿ ಗೀಯತೇ** - 'ಯದ್ಭೂತಯೋನಿಂ' ಎಂದು ಉಪನಿಷತ್ತು ಬ್ರಹ್ಮನನ್ನು ಯೋನಿಶಬ್ದದಿಂದ ಕರೆದಿದೆ. ಯೋನಿ ಶಬ್ದಕ್ಕೆ ಶಾಸ್ತ್ರೀಯವಾದ ಅರ್ಥ ಉಪಾದಾನಕಾರಣ, ಎಂದು. ಇದರಿಂದಲೂ ಬ್ರಹ್ಮನು ಉಪಾದಾನನೆಂದು ತಿಳಿಯುತ್ತದೆ.

ಶಾಂಕರಭಾಷ್ಯದಲ್ಲಿ 'ಪರಿಣಾಮ' ಎಂಬ ಶಬ್ದವನ್ನು ಉಪಯೋಗಿಸಲಾಗಿದ್ದರೂ ಬ್ರಹ್ಮನು ಜಗತ್ತಿಗೆ ಪರಿಣಾಮಿಕಾರಣ ಎಂದು ಅವರ ವಾಸ್ತವ ಸಿದ್ಧಾಂತವಲ್ಲ. ಚೇತನನಾದ ಬ್ರಹ್ಮ ಅಚೇತನವಾಗಿ ಪರಿಣಾಮ ಹೊಂದಲಾರ. ಆದ್ದರಿಂದ ಬ್ರಹ್ಮನು ಜಗತ್ತಾಗಿ ಕಾಣಿಸಿಕೊಳ್ಳುತ್ತಾನೆ, ಎಂದೇ ಅವರ ಅಂತಿಮ ಸಿದ್ಧಾಂತ. ಇದಕ್ಕೆ ವಿವರ್ತೋಪಾದಾನ, ಎಂದು ಹೆಸರನ್ನು ನೀಡಲಾಗಿದೆ.

ರಾಮಾನುಜ ಭಾಷ್ಯದಲ್ಲಿಯೂ ಈ ಸೂತ್ರಗಳಿಗೆ ಇದೇ ಅರ್ಥವನ್ನು ಹೇಳಲಾಗಿದೆ. ಆದರೆ ಅದ್ವೈತವಾದದಂತೆ, ಅವರ ಸಿದ್ಧಾಂತದಲ್ಲಿ ಈ ಜಗತ್ತು ಮಿಥ್ಯಾ ಅಲ್ಲದ ಕಾರಣ ಬ್ರಹ್ಮ ವಿವರ್ತೋಪಾದಾನ ಎಂದು ಹೇಳಲಾಗದು. ಆದರೂ ಈ ಚಿದಚಿದಾತ್ಮಕವಾದ ಜಗತ್ತು ಬ್ರಹ್ಮನ ಶರೀರವಾಗಿದೆ. ಇದು ಪ್ರಲಯಕಾಲದಲ್ಲಿ ನಾಮರೂಪಗಳ ಭೇದವಿಲ್ಲದೆ ಸೂಕ್ಷ್ಮವಾಗಿತ್ತು. ಸೃಷ್ಟಿಕಾಲದಲ್ಲಿ ವಿವಿಧ ನಾಮರೂಪಗಳನ್ನು ಪಡೆಯುತ್ತದೆ. ಅವುಗಳ ಜೊತೆಯಲ್ಲೇ ಬ್ರಹ್ಮನೂ ಅನೇಕ ರೂಪಗಳನ್ನು ಪಡೆಯುತ್ತಾನೆ. ಹೀಗೆ ಅವನ ಶರೀರಗಳಾದ ಜಡಚೇತನಗಳು ರೂಪಾಂತರಗೊಳ್ಳುವುದರಿಂದ ಅವನನ್ನೂ ಉಪಾದಾನಕಾರಣ ಎನ್ನಲಾಗುತ್ತದೆ.

## ಚಂದ್ರಿಕಾದಲ್ಲಿ ಮಾಡಿರುವ ವಿಮರ್ಶೆ

1. ಇದು ಸಮನ್ವಯಾಧಿಕರಣವಾದುದರಿಂದ ಪ್ರಕೃತಿ ಶಬ್ದದ ಸಮನ್ವಯವನ್ನೇ ಮಾಡುವುದು ಉಚಿತ. 'ಆಕಾಶಃ ತಲ್ಲಿಂಗಾತ್' ಎಂಬ ಸೂತ್ರಕ್ಕೆ 'ಆಕಾಶಶಬ್ದವಾಚ್ಯ ಬ್ರಹ್ಮ' ಎಂದು ಅರ್ಥ ಮಾಡುವಂತೆ 'ಪ್ರಕೃತಿಶ್ಚ ಪ್ರತಿಜ್ಞಾ-ದೃಷ್ಟಾಂತಾನುಪರೋಧಾತ್' ಎಂಬ ಸೂತ್ರಕ್ಕೂ 'ಬ್ರಹ್ಮನು ಪ್ರಕೃತಿಶಬ್ದವಾಚ್ಯ' ಎಂಬ ಅರ್ಥವೇ ಸಹಜವಾಗಿ ತಿಳಿಯುತ್ತದೆ. ಅದನ್ನು ಬಿಟ್ಟು ಬ್ರಹ್ಮನಿಗೆ ಪ್ರಕೃತಿತ್ವ-ಉಪಾದಾನತ್ವವನ್ನು ಈ ಸೂತ್ರ ಹೇಳುವುದಾದರೆ ಹಿಂದಿನ ಸೂತ್ರವೂ ಬ್ರಹ್ಮನಿಗೆ ಆಕಾಶತ್ವವನ್ನು ಹೇಳುತ್ತದೆ, ಎನ್ನಬೇಕಾದೀತು.

2. ಮೊದಲ ಸೂತ್ರದಲ್ಲಿ ಹೇಳಿರುವ ಪ್ರತಿಜ್ಞಾ-ದೃಷ್ಟಾಂತಾನುಪರೋಧ ಎಂಬ ಕಾರಣ ಬ್ರಹ್ಮನಿಗೆ ಉಪಾದಾನತ್ವವನ್ನಷ್ಟೇ ಸಮರ್ಥನೆ ಮಾಡುತ್ತದೆ. ಚ ಶಬ್ದದಿಂದ ಹೇಳಲ್ಪಟ್ಟ ನಿಮಿತ್ತತ್ವವನ್ನು ಸಮರ್ಥನೆ ಮಾಡಲು ಅದು ಹೇತುವಲ್ಲ. ಎರಡನೆಯ ಸೂತ್ರ ಇಚ್ಛಾಪೂರ್ವಕ ಸೃಷ್ಟಿಯನ್ನು ಹೇಳುವ ಮೂಲಕ ನಿಮಿತ್ತತ್ವವನ್ನು ಸಮರ್ಥನೆ ಮಾಡುತ್ತದೆ. ಅಂದಮೇಲೆ ಎರಡೂ ಸೂತ್ರಗಳಲ್ಲಿ ಅಭಿನ್ನ ನಿಮಿತ್ತತ್ವವನ್ನು ಸಾಧಿಸುವ ಒಂದು ಹೇತು ಇಲ್ಲವಾದುದರಿಂದ ಎರಡನೆಯ ಸೂತ್ರದಲ್ಲಿ 'ಚ' ಎಂಬ ಶಬ್ದಕ್ಕೆ ಸ್ವಾರಸ್ಯವಿಲ್ಲ.

3. ಬ್ರಹ್ಮನು ಉಪಾದಾನ ಕಾರಣ ಎನ್ನಲು ಉಪನಿಷತ್ತುಗಳಲ್ಲಿ ಸ್ಪಷ್ಟವಾದ ಆಧಾರಗಳಿಲ್ಲ. ಇದಕ್ಕೆ ಶಾಂಕರಭಾಷ್ಯದಂತೆ ಸೂತ್ರದಲ್ಲಿ ಮೂರು ಕಾರಣಗಳನ್ನು ನೀಡಲಾಗಿದೆ.

**ಅ) ಪ್ರತಿಜ್ಞಾದೃಷ್ಟಾಂತಗಳು-** ಬ್ರಹ್ಮನ ಜ್ಞಾನದಿಂದ ಸರ್ವದ ಜ್ಞಾನ ಬರಬೇಕಾದರೆ ಬ್ರಹ್ಮನೇ ಸರ್ವಾತ್ಮಕನಾಗಬೇಕು. ಸರ್ವಾತ್ಮಕನಾಗುವುದೆಂದರೆ ಸರ್ವದ ರೂಪವನ್ನು ಪಡೆಯುವುದು. ಇದರಿಂದ ಅವನು ಉಪಾದಾನ ಕಾರಣ ಎನ್ನಬೇಕು. ಆದರೆ ಬ್ರಹ್ಮ ಸರ್ವಾತ್ಮಕನಾಗದಿದ್ದರೂ ಅವನು ಪ್ರಧಾನನಾದುದರಿಂದ ಅವನ ಜ್ಞಾನದಿಂದ ಅಪ್ರಧಾನವಾದ ಈ ಜಗತ್ತಿನ ಜ್ಞಾನ ಬರುತ್ತದೆ, ಎಂದು ಹೇಳಬಹುದು. ಜಗತ್ತು, ಯಜ್ಞಾದಿ ಕರ್ಮಗಳು ಇವುಗಳನ್ನು ತಿಳಿಯುವುದರಿಂದ ಬರುವ ಪ್ರಯೋಜನ-ಸುಖ ಬ್ರಹ್ಮನ ಜ್ಞಾನದಿಂದಲೇ ಸಿಗುತ್ತದೆ, ಎಂದು ಅರ್ಥ. ಆದ್ದರಿಂದ ಇದಕ್ಕಾಗಿ ಅವನು ಉಪಾದಾನ ಎಂದು ಹೇಳಬೇಕಾಗಿಲ್ಲ.

**ಆ. ಉತ್ಪತ್ತಿಲಯಾಧಿಷ್ಠಾನತ್ವ-** ಸಸ್ಯಗಳು ಮಣ್ಣಾಗುತ್ತವೆ, ಮತ್ತೆ ಮಳೆಗಾಲದಲ್ಲಿ ಚಿಗುರುತ್ತವೆ. ಹೀಗೆ ಸಸ್ಯಗಳ ಉತ್ಪತ್ತಿ-ಲಯಗಳಿಗೆ ಅಧಿಷ್ಠಾನವಾದ ಭೂಮಿಯು ಅವುಗಳಿಗೆ ಉಪಾದಾನವಾಗಿರುವಂತೆ ಬ್ರಹ್ಮನೂ ಉಪಾದಾನ ಎಂಬ ವಾದವೂ ಸರಿಯಲ್ಲ. ಪ್ರಲಯಕಾಲದಲ್ಲಿ ಈ ಜಗತ್ತು ಬ್ರಹ್ಮನ ಉದರವನ್ನು ಪ್ರವೇಶ ಮಾಡುತ್ತದೆ. ಸೃಷ್ಟಿಕಾಲದಲ್ಲಿ ಹೊರಬರುತ್ತದೆ. ಇದೇ ಉತ್ಪತ್ತಿ-ಲಯಾಧಿಷ್ಠಾನತ್ವ. ಉಪನಿಷತ್ತು ಇದಕ್ಕೆ ಜೇಡರ ಹುಳುವಿನ ನಿದರ್ಶನ ನೀಡುತ್ತದೆ. ಆ ಹುಳು ತಿಂದ ಆಹಾರ ಬಲೆಯಾಗುತ್ತದೆ, ತಾನೇ ಸೃಷ್ಟಿ ಮಾಡಿದ ಬಲೆಯನ್ನು ಹುಳು ನುಂಗುತ್ತದೆ. ಅದರಂತೆ ಈ ಜಗತ್ತು ಬ್ರಹ್ಮನಿಂದ ಹುಟ್ಟುತ್ತದೆ. ಅವನಲ್ಲಿ ಸೇರುತ್ತದೆ. ಇದರಿಂದಲೂ ಅವನು ಉಪಾದಾನ ಎನಿಸಬೇಕಿಲ್ಲ.

**ಇ. ಯೋನಿಶಬ್ದ -** ಯೋನಿ ಎಂಬ ಶಬ್ದಕ್ಕೆ ಉಪಾದಾನ ಎಂದೇ ಅರ್ಥ ಮಾಡಬೇಕೆಂಬ ನಿಯಮವಿಲ್ಲ. ಕಾರಣ ಎಂಬ ಅರ್ಥವೂ ಅದಕ್ಕಿದೆ. ಲಕ್ಷ್ಮೀದೇವಿ 'ಮಮ ಯೋನಿರಪ್ಸು ಅಂತಃ ಸಮುದ್ರೇ' ಎಂದು ತನಗೆ ಕಾರಣವಾದ ಬ್ರಹ್ಮನಿಗೆ ಯೋನಿ ಎಂಬ ಶಬ್ದವನ್ನು ಹೇಳಿದ್ದಾಳೆ. ಶಾಂಕರಭಾಷ್ಯದಲ್ಲಿ 'ಯೋನಿಷ್ಟ ಇಂದ್ರಸದನೇ' ಎಂಬ ಶ್ರುತಿಯನ್ನು ಉದಾಹರಿಸಿ ಯೋನಿಶಬ್ದಕ್ಕೆ ಸ್ಥಾನ ಎಂಬ ಅರ್ಥವೂ ಇದೆ, ಎಂದು ಹೇಳಲಾಗಿದೆ. ಆದ್ದರಿಂದ ಈ ಕಾರಣವೂ ಉಪಾದಾನತ್ವಕ್ಕೆ ಅನಿವಾರ್ಯವಾದುದಲ್ಲ.

ಹೀಗೆ ಬ್ರಹ್ಮನು ನೇಕಾರ, ಚಿನಿವಾರ ಮೊದಲಾದವರಂತೆ ನಿಮಿತ್ತನೆಂದಿಷ್ಟೇ ಹೇಳಲು ಬರುವಾಗ ಅವನಿಗೆ ಉಪಾದಾನತ್ವವನ್ನು ಹೇಳಿ ಸೂತ್ರಗಳನ್ನು ಪ್ರಯಾಸದಿಂದ ವ್ಯಾಖ್ಯಾನಿಸುವುದು ಅನಾವಶ್ಯಕ.

**ಇಲ್ಲಿಗೆ ಪ್ರಕೃತ್ಯಧಿಕರಣ ಮುಗಿಯಿತು.**

## ಏತೇನ ಸರ್ವೇ ವ್ಯಾಖ್ಯಾತಾಧಿಕರಣಮ್

**ಓಂ II ಏತೇನ ಸರ್ವೇ ವ್ಯಾಖ್ಯಾತಾ ವ್ಯಾಖ್ಯಾತಾಃ II ಓಂ**

ಏತೇನ ಸರ್ವೇ ಶೂನ್ಯಾದಿಶಬ್ದಾ ಅಪಿ ವ್ಯಾಖ್ಯಾತಾಃ ।

''ಏಷ ಹ್ಯೇವ ಶೂನ್ಯಃ ಏಷ ಹ್ಯೇವ ತುಚ್ಛಃ ಏಷ ಹ್ಯೇವ ಅಭಾವಃ ಏಷ ಹ್ಯೇವ ಅವ್ಯಕ್ತಃ ಅದೃಶ್ಯೋಽಚಿಂತ್ಯೋ ನಿರ್ಗುಣಶ್ಚ''

ಇತಿ ಮಹೋಪನಿಷದಿ ।

ಶಮೂನಂ ಕುರುತೇ ವಿಷ್ಣುಃ ಅದೃಶ್ಯಃ ಸನ್ ಪರಃ ಸ್ವಯಂ ।
ತಸ್ಮಾಚ್ಛೂನ್ಯ ಇತಿ ಪ್ರೋಕ್ತಃ, ತೋದನಾತ್ ತುಚ್ಛ ಉಚ್ಯತೇ ॥
ನೈಷ ಭಾವಯಿತುಂ ಯೋಗ್ಯಃ ಕೇನಚಿತ್ ಪುರುಷೋತ್ತಮಃ ।
ಅತೋಽಭಾವಂ ವದಂತ್ಯೇನಂ, ನಾಶ್ಯತ್ವಾನ್ನಾಶ ಇತ್ಯಪಿ ॥
ಸರ್ವಸ್ಯ ತದಧೀನತ್ವಾತ್ ತತ್ತಚ್ಛಬ್ದಾಭಿಧೇಯತಾ ।
ಅನ್ಯೇಷಾಂ ವ್ಯವಹಾರಾರ್ಥಂ ಇಷ್ಯೇತೇ ವ್ಯವಹರ್ತೃಭಿಃ ॥

ಇತಿ ಮಹಾಕೌರ್ಮೇ ।

ಏತೇನ=ತದಧೀನತ್ವಾದಿ-ಉಕ್ತಯುಕ್ತಿಸಮುದಾಯೇನ ।

ಅವಧಾರಣಾರ್ಥಂ ಸರ್ವಸ್ಯಾಪ್ಯುಕ್ತಸ್ಯಾಧ್ಯಾಯಮೂಲತಃ ।
ದ್ವಿರುಕ್ತಿಂ ಕುರುತೇ ಪ್ರಾಜ್ಞಃ ಅಧ್ಯಾಯಾಂತೇ ವಿನಿರ್ಣಯೇ ॥

ಇತಿ ವಾರಾಹ ಸಂಹಿತಾಯಾಂ ॥ 29 ॥

**॥ ಇತಿ ಏತೇನ ಸರ್ವೇ ವ್ಯಾಖ್ಯಾತಾಧಿಕರಣಮ್ ॥**

**ಇತಿ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯ ವಿರಚಿತೇ ಬ್ರಹ್ಮಸೂತ್ರಭಾಷ್ಯೇ ಪ್ರಥಮಾಧ್ಯಾಯಸ್ಯ ಚತುರ್ಥಃ ಪಾದಃ ॥**

**॥ ಪ್ರಥಮಾಧ್ಯಾಯಃ ಸಮಾಪ್ತಃ ॥**

ಇದರಿಂದಲೇ ಶೂನ್ಯ ಮೊದಲಾದ ನಿಷೇಧವಾಚಕ ಶಬ್ದಗಳನ್ನೂ ಬ್ರಹ್ಮನಲ್ಲಿ ಸಮನ್ವಯ ಮಾಡಿದಂತಾಗಿದೆ. ಮಹೋಪನಿಷತ್ತಿನಲ್ಲಿ 'ವಿಷ್ಣು ಶೂನ್ಯ, ಅವನೇ ತುಚ್ಛ, ಅವನು ಅಭಾವ, ಅವನೇ ಅವ್ಯಕ್ತ ಅದೃಶ್ಯ, ಅಚಿಂತ್ಯ, ನಿರ್ಗುಣ' ಎಂದಿದೆ.

ವಿಷ್ಣುವು ಸರ್ವೋತ್ತಮನಾದರೂ ಅನ್ಯರ ಸುಖವನ್ನು ತನ್ನ ಸುಖಕ್ಕಿಂತ ಕಡಿಮೆಯನ್ನಾಗಿ ಮಾಡುವುದರಿಂದ ಶೂನ್ಯನೆಂದು ಹೇಳಲ್ಪಡುತ್ತಾನೆ. ಅವನು ದುರ್ಜನರಿಗೆ ಅವ್ಯಕ್ತನಾಗಿದ್ದುಕೊಂಡು (ಛಃ= ಛನ್ನಃ) ದುಃಖನೀಡುತ್ತಿರುವುದರಿಂದ (ತೋದನಾತ್) ತುಚ್ಛ ಎನಿಸಿದ್ದಾನೆ. ಪುರುಷೋತ್ತಮನಾದ ವಿಷ್ಣುವು ಯಾರಿಂದಲೂ ಪೂರ್ಣವಾಗಿ ಯೋಚಿಸಲು ಅಶಕ್ಯನಾದುದರಿಂದ ಅಭಾವ ಎನಿಸಿದ್ದಾನೆ. ಅವನು ಅಭಕ್ಷ್ಯನಾದುದರಿಂದ 'ನ-ಅಶ'-ನಾಶ ಎನಿಸಿದ್ದಾನೆ. ಎಲ್ಲವೂ ಅವನ ಅಧೀನವಾದುದರಿಂದ ಆಯಾಯ ಶಬ್ದಗಳಿಂದ ಅವನು ವಾಚ್ಯನಾಗುತ್ತಾನೆ. ಆದರೂ ಇತರ ವಸ್ತುಗಳಲ್ಲಿ ವ್ಯವಹಾರಸಿದ್ಧಿಗಾಗಿ ವಿಷ್ಣುವಾಚಕ ಶಬ್ದಗಳನ್ನೇ ಲೋಕದಲ್ಲಿ ಬಳಸಲಾಗುವುದು, ಎಂದು ಮಹಾಕೌರ್ಮಪುರಾಣದಲ್ಲಿದೆ.

ಸೂತ್ರದಲ್ಲಿ ಏತೇನ=ತದಧೀನತ್ವ, ವಿದ್ವದ್ರೂಢಿ, ಮಹಾಯೋಗ ರೂಪವಾದ ಯುಕ್ತಿಗಳಿಂದ ಎಂದರ್ಥ.

''ಅಧ್ಯಾಯದ ಆರಂಭದಿಂದ ಹೇಳಿದ್ದೆಲ್ಲದರ ನಿರ್ಣಯಕ್ಕಾಗಿ ಅಧ್ಯಾಯದ ಕೊನೆಯಲ್ಲಿ ಪ್ರಾಜ್ಞರು ಒಂದೇ ಶಬ್ದವನ್ನು ಎರಡುಬಾರಿ ಪ್ರಯೋಗಿಸುತ್ತಾರೆ''.

**ವಿವರಣೆ** - ಇಲ್ಲಿ 'ಶೂನ್ಯ' 'ಅಸತ್' ಮುಂತಾದ ನಿಷೇಧಾತ್ಮಕ ಶಬ್ದಗಳನ್ನು ಸಮನ್ವಯ ಮಾಡಲಾಗಿದೆ. ಈ ಶಬ್ದಗಳ ಪ್ರವೃತ್ತಿನಿಮಿತ್ತ ವಿಷ್ಣುವಿನಲ್ಲಿ ಇಲ್ಲ. ಪ್ರವೃತ್ತಿ ನಿಮಿತ್ತವು ಅವನ ಅಧೀನ ಎಂದು ಹೇಳಿ ದುಃಖ ಶಬ್ದವನ್ನು ಸಮನ್ವಯ ಮಾಡಿದಂತೆಯೂ ಈ ಶಬ್ದವನ್ನು ಸಮನ್ವಯ ಮಾಡಲಾಗದು. ಏಕೆಂದರೆ, ಅವುಗಳಿಂದ ವಾಚ್ಯವಾದ 'ಶೂನ್ಯ' ಎಂಬ ಒಂದು ತತ್ತ್ವವೇ ಇಲ್ಲ. ಹೀಗೆ ಇವುಗಳನ್ನು ಸರ್ವಥಾ ಸಮನ್ವಯ ಮಾಡಲು ಸಾಧ್ಯವಿಲ್ಲವಾದುದರಿಂದ 'ತತ್ತುಸಮನ್ವಯಾತ್' ಎಂದು ಹೇಳಿರುವ ಸರ್ವಶಬ್ದ ಸಮನ್ವಯ ಸರಿಯಲ್ಲ, ಎಂದು ಪೂರ್ವಪಕ್ಷ.

ಶೂನ್ಯಾದಿ ಶಬ್ದಗಳಿಗೂ ಅವಯವಾರ್ಥವನ್ನು ಹೇಳಿ ಅವನ್ನು ವಿಷ್ಣುವಿನಲ್ಲಿ ಸಮನ್ವಯ ಮಾಡಬಹುದು. 'ಶೂನ್ಯ' ಶಬ್ದದಲ್ಲಿರುವ ಶಕಾರಕ್ಕೆ ಸುಖ ಎಂದರ್ಥ. ಊನ=ಕಡಿಮೆ. ವಿಷ್ಣುವು ಇತರರ ಸುಖವನ್ನು ತನಗಿಂತ ಕಡಿಮೆಯಾಗಿರುವಂತೆ ನೋಡಿಕೊಳ್ಳುತ್ತಾನೆ. ಆದ್ದರಿಂದ ಶೂನ್ಯ.

2. ತುಚ್ಛ- ತುತ್ ಚಾಸೌ ಛಶ್ಚ। ತುದವ್ಯಥನೇ। ತುದತಿ ಪರಾನ್ ವ್ಯಥಯತಿ ಇತಿ ತುತ್। ಛನ್ನತ್ವಾತ್ - ಅದೃಶ್ಯತ್ವಾತ್ ಛಃ।

3. ಅಭಾವಃ - ನ ಭಾವಯತೀತಿ ಅಭಾವಃ । ಭಾವಯಿತುಂ=ಉತ್ಪಾದಯಿತುಂ ಸಾಕಲ್ಯೇನ ಚಿಂತಯಿತುಂ ವಾ ನ ಶಕ್ಯಃ।

4. ನಾಶಃ - ಅಶ ಭೋಜನೇ-ಅಶ್ಯಃ । ನ ಅಶ್ಯಃ=ನಾಶ್ಯಃ । ಇದು ಮಹಾ ಕೌರ್ಮಪುರಾಣದಲ್ಲಿರುವ ನಾಶ್ಯತ್ವಾತ್ ಶಬ್ದದ ಅರ್ಥ. (ನ ಅಶಃ=ನಾಶಃ । ಅಥವಾ - ನಾಕಂ ಇತಿವತ್ ನಾಶಂ=ಪರಮಸುಖಂ ಯಾಪಯತೀತಿ ನಾಶಃ। ಸತ್ತರ್ಕದೀಪಾವಲಿಯಲ್ಲಿ ಹೀಗಿದೆ) ॥ ಸೂತ್ರ 29 ॥

## ದ್ವೈತದರ್ಶನದಲ್ಲಿ ಸೂತ್ರದ ಅರ್ಥ

**ಓಂ ॥ ಏತೇನ ಸರ್ವೇ ವ್ಯಾಖ್ಯಾತಾ ವ್ಯಾಖ್ಯಾತಾಃ ॥ ಓಂ**

ಏತೇನ=ತದಧೀನತ್ವವೇ ಮೊದಲಾದ ಕಾರಣಗಳಿಂದ ಸರ್ವೇ=ಶೂನ್ಯ ಅಸತ್ ಮುಂತಾದ ಶಬ್ದಗಳೂ ಮುಖ್ಯವೃತ್ತಿಯಿಂದ ತತ್ತು=ಬ್ರಹ್ಮನೆಂದೇ ವ್ಯಾಖ್ಯಾತಾಃ= ಪ್ರತಿಪಾದಿಸಲ್ಪಡುವವು.

(ಅತ್ರ ನಯೇ ನಿಷೇಧಾರ್ಥಕಾಃ ಶಬ್ದಾಃ ಸಮನ್ವೀಯಂತೇ । ಏತೇನ= ತದಧೀನತ್ವಾದಿ ಪ್ರಾಗುಕ್ತ ಹೇತುಜಾತೇನ ಸರ್ವೇ=ಶೂನ್ಯ-ಅಸದಾದಿ ಶಬ್ದಾಃ ತತ್ತು=ಮುಖ್ಯವೃತ್ತ್ಯಾ ಬ್ರಹ್ಮೈವ ಇತಿ ವ್ಯಾಖ್ಯಾತಾಃ=ಪ್ರತಿಪಾದಿತಾಃ।)

## ಶಾಂಕರಭಾಷ್ಯದಲ್ಲಿ ಹೇಳಿರುವ ಸೂತ್ರದ ಅರ್ಥ

**ಏತೇನ ಸರ್ವೇ ವ್ಯಾಖ್ಯಾತಾ ವ್ಯಾಖ್ಯಾತಾಃ** - ಹೀಗೆ ಪ್ರಧಾನವು ಜಗತ್ಕಾರಣ ಎಂದು ನಿರಾಸ ಮಾಡಿರುವುದರಿಂದ ಪರಮಾಣುಕಾರಣತಾವಾದಗಳೂ ಉಪನಿಷತ್ತುಗಳಲ್ಲಿ ಪ್ರತಿಪಾದ್ಯಗಳಲ್ಲ ಮತ್ತು ಅವುಗಳಿಗೆ ವಿರುದ್ಧವಾದುದರಿಂದ ವ್ಯಾಖ್ಯಾತಾಃ=ನಿರಾಕೃತವಾದವು ಎಂದು ತಿಳಿಯಬೇಕು.

## ರಾಮಾನುಜ ಭಾಷ್ಯದಲ್ಲಿ ಹೇಳಿರುವ ಸೂತ್ರದ ಅರ್ಥ

ಏತೇನ=ನಾಲ್ಕು ಪಾದಗಳಲ್ಲಿ ಹೇಳಿದ ನ್ಯಾಯದಿಂದ ಸರ್ವೇ=ಎಲ್ಲ ವೇದಾಂತವಾಕ್ಯಗಳೂ ವ್ಯಾಖ್ಯಾತಾಃ=ಚೇತನಾಚೇತನ ವಿಲಕ್ಷಣ ಬ್ರಹ್ಮಪರವಾಗಿವೆ ಎಂದು ತಿಳಿಸಿದಂತಾಗಿದೆ.

ಕೊನೆಯ ಪದದ ದ್ವಿರುಕ್ತಿ ಅಧ್ಯಾಯಪರಿಸಮಾಪ್ತಿ ಸೂಚಕ.

## ಚಂದ್ರಿಕಾದಲ್ಲಿ ಮಾಡಿರುವ ವಿಮರ್ಶೆ

1. 'ಏತೇನ' ಎಂಬುದು ಅಧ್ಯಾಯದ ಕೊನೆಯ ಸೂತ್ರವಾದುದರಿಂದ ಸಮಗ್ರ

ಅಧ್ಯಾಯದಲ್ಲಿ ಹೇಳಿದ ನ್ಯಾಯವನ್ನೇ ಪರಾಮರ್ಶಿಸಬೇಕು. ಹೊರತು, ಕೊನೆಯ ಪಾದದಲ್ಲಿ ಹೇಳಿದ ನ್ಯಾಯವನ್ನಷ್ಟೇ ಪರಾಮರ್ಶೆ ಮಾಡುವುದು ಸೂಕ್ತವಲ್ಲ.

2. ಇತರ ಮತಗಳ ನಿರಾಸವನ್ನು ಸಮಯಪಾದದಲ್ಲಿ ವಿಸ್ತಾರವಾಗಿ ಮಾಡಲಿರುವುದರಿಂದ ಅದರ ಪ್ರಸ್ತಾವ ಇಲ್ಲಿ ಅನಾವಶ್ಯಕ.

3. ಪ್ರತಿಪಾದದಲ್ಲಿ ಸಮನ್ವಯ ಮಾಡುವ ಪದಗಳು ವಿಭಿನ್ನಗಳಾದುದರಿಂದ ಪಾದದ ಮುಕ್ತಾಯ ತಿಳಿಯುವಂತೆ ಸಮನ್ವಯ ಸಮಾಪ್ತಿಯಿಂದಲೇ ಅಧ್ಯಾಯ ಸಮಾಪ್ತಿ ತಿಳಿಯುತ್ತಿರುವಾಗ ಅದಕ್ಕಾಗಿ ಮತ್ತೆ ದ್ವಿರುಕ್ತಿ ಯುಕ್ತವಲ್ಲ.

**ಇಲ್ಲಿಗೆ ಏತೇನ ಸರ್ವೇ ವ್ಯಾಖ್ಯಾತಾಧಿಕರಣ ಮುಗಿಯಿತು.**

**ಮೊದಲನೆಯ ಅಧ್ಯಾಯವೂ ಮುಗಿಯಿತು.**

# ಸರ್ವಮೂಲಗ್ರಂಥಗಳು

ಶ್ರೀ ಮಧ್ವಾಚಾರ್ಯರು ವಿರಚಿಸಿದ ಮೂವತ್ತೇಳು ಗ್ರಂಥಗಳು ಸರ್ವಮೂಲಗ್ರಂಥಗಳೆಂದು ಪ್ರಸಿದ್ಧವಾಗಿವೆ. ಇವುಗಳನ್ನು೧. ಗೀತಾಪ್ರಸ್ಥಾನ ೨. ಉಪನಿಷತ್ಪ್ರಸ್ಥಾನ ೩. ಸೂತ್ರಪ್ರಸ್ಥಾನ ೪. ಋಕ್‌ಪ್ರಸ್ಥಾನ ೫. ಇತಿಹಾಸ ಪುರಾಣಗಳು ೬. ದಶಪ್ರಕರಣಗಳು ೭. ತಂತ್ರಸಾರ ಮತ್ತು ಸ್ತೋತ್ರ ಪೂಜಾದಿಗಳು ಎಂದು ವಿಂಗಡಿಸಲಾಗುವುದು.

ತತ್ವಜ್ಞಾನ ಧರ್ಮ ಮತ್ತು ಭಾರತೀಯ ಸಂಸ್ಕೃತಿಯ ಸಮಗ್ರಸಾರವೇ ಇವುಗಳಲ್ಲಿ ಅಡಕವಾಗಿರುವುದು. ಈ ಸಾರವನ್ನು ಕನ್ನಡದಲ್ಲಿ ಒದಗಿಸಲು ಶ್ರೀ ಶ್ರೀ ಶ್ರೀ ಪೇಜಾವರ ಮಠಾಧೀಶ ಶ್ರೀ ವಿಶ್ವೇಶತೀರ್ಥ ಶ್ರೀಪಾದಂಗಳವರ ಮಾರ್ಗದರ್ಶನದಲ್ಲಿ ಸರ್ವಮೂಲಗ್ರಂಥಗಳ ಕನ್ನಡ ಅನುವಾದದ ಯೋಜನೆಯನ್ನು ಕೈಕೊಳ್ಳಲಾಗಿದೆ.